# ಶಿವಾನುಭವ.

( ದ್ವೈಮಾಸಿಕವು )




ಸಂಪಾದಕ

ರಾ|| ಸಾ|| ಫ. ಗು. ಹಳಕಟ್ಟಿ

ಬಿ. ಎ. ಎಲ್. ಎಲ್. ಬಿ.





ವಿಜಾಪುರ

ಸಂಪುಟ ೭ ಸಂಚಿಕೆ ೧

ಎಪ್ರೇಲ

೧೯೩೨

# ವಿಷಯಾನುಕ್ರಮಣಿಕೆ




ಇದನ್ನು ವಿಜಾಪುರದಲ್ಲಿ ಇದರ ಸಂಪಾದಕರಾದ ರಾ॥ ಸಾ॥ ಫ. ಹಳಕಟ್ಟಿ ಇವರು ತಮ್ಮ ಹಿತಚಿಂತಕ ಪ್ರಿಂಟಿಂಗ ಪ್ರೆಸ್ಸಿನಲ್ಲಿ ಮುದ್ರಿಸಿ[illegible] ಮತ್ತು ಅವರು ವಿಜಾಪುರದಲ್ಲಿ ಉಪಲೀಬುರುಜದ ಹತ್ತರ ತಮ್ಮ ೧[illegible] (೨) ಮನೆಯಲ್ಲಿ ಪ್ರಕಟಿಸಿದರು.

# ಶಿವಾನುಭವ.

ವರ್ಷ ೭] ಎಪ್ರೀಲ ೧೯೩೨ [ಸಂಚಿಕೆ ೧

## ಅರುವತ್ತು ಮೂವರು ಶೈವ ಪುರಾತನರನ್ನು ಬಸವಾದಿಗಳು ಏಕೆ ಪುರಸ್ಕರಿಸಿದರು?

(ಲೇಖಕಃ— ಜೀರಗೆ ಬಸವಲಿಂಗಪ್ಪ, ರಿಟೈರ್ಡ್ ಹೈಕೋರ್ಟ ಹೆಡ್ ಟ್ರಾನ್ಸ್‌ಲೇಟರ್, ಅರಳೇ ಪೇಟೆ, ಬೆಂಗಳೂರು ಸಿಟಿ.)

ಲಿಂಗ ರೂಪವಾದ ಶಿವನ ಆಕಾರವನ್ನು ಪೂಜಿಸುವ ಪದ್ಧತಿಯು ಯಾವಾಗ ಬಂದಿತೆಂಬುದು ಶೋಧಿಸತಕ್ಕ ವಿಷಯವಾಗಿದೆ. ಲಿಂಗ ರೂಪವಾದ ಶಿವನ ಪೂಜೆಯು ವೇದದಲ್ಲಿ ಹೇಳಿಲ್ಲವೆಂದು ಪಾಶ್ಚಾತ್ಯ ವಿದ್ವಾಂಸರು ಹೇಳುತ್ತಾರೆ. ವೇದಗಳ ಶಬ್ದಗಳನ್ನು ತೆಗೆದುಕೊಂಡು ಲಿಂಗಪರವಾಗಿ ಬಲಾತ್ಕರಿಸಿ ಬರೆದರೆ ಅದು ಚಾರಿತ್ರ ಸಿದ್ಧವಾಗುವದಿಲ್ಲ. *Professor H. H. Wilson* ಸಾಹೇಬರು ತಮ್ಮ *Hindu Religion* ಎಂಬ ಪುಸ್ತಕದಲ್ಲಿ ಹೀಗೆ ಬರೆಯುತ್ತಾರೆ.

"The worship of Siva, under type of Linga, * * is almost the only form in which that deity is reverenced. It is also perhaps most ancient object of homage adopted in India sudsequently to the ritual of the Vedas which was chiefly, if not wholly, addressed to the element, and particularly to Fire"

ಎಂದು ಬರೆಯುತ್ತಾರೆ. ಅಂದರೆ ಲಿಂಗ ಪೂಜೆಯು ವೇದಗಳಿಂದಿತ್ತತ ನಡೆದು ಬಂದುದಾಗಿದೆ ಎಂತಲೂ, ವೇದಗಳಲ್ಲಿ ಹೇಳಿರುವದೆಲ್ಲಾ ಪಂಚಭೂತ (*Elements*) ಗಳ ಪೂಜೆ ಎಂತಲೂ, ಮುಖ್ಯವಾಗಿ ಅಗ್ನಿ ಪೂಜೆ ಎಂತಲೂ ಹೇಳಿರುತ್ತಾರೆ. ಮತ್ತು ಹೇಳುವದೇನಂದರೆಃ—

"How far the worship of Linga is authorized by the Vedas, is doubtful, but it is the main purport of the Puranas"
ಅಂದರೆ ವೇದಗಳಲ್ಲಿ ಲಿಂಗ ಪೂಜೆಯು ವಿಚಾರ ಎಷ್ಟರ ಮಟ್ಟಿಗದೆ ಎಂಬುದು ಅನುಮಾನವಾಗಿದೆ ಎಂತಲೂ, ಪುರಾಣಗಳಲ್ಲಿ ಮಾತ್ರ ಅದು ಸೂಚಿಸಲ್ಪಡುತ್ತದೆಂತಲೂ ಬರೆದಿರುತ್ತಾರೆ. ಪುರಾಣಗಳೂ ಆಗಮಗಳೂ ಕ್ರಿಸ್ತಶಕದಿಂದೀಚೆಗೆ ಅಂದರೆ ಕ್ರಿ. ಶ. ೫೦೦ ಅಥವ ೬೦೦ ರಲ್ಲಿ ಆರಂಭವಾದಂತೆ ಇದೇ ವಿದ್ವಾಂಸರೇ ಅಭಿಪ್ರಾಯ ಪಡುತ್ತಾರೆ. ಇದರಂತೆ ಇತರ ಪಾಶ್ಚಾತ್ಯ ವಿದ್ವಾಂಸರೂ ಅಭಿಪ್ರಾಯ ಪಡುತ್ತಾರೆ. ಆದರೆ ಭಾರತ ರಾಮಾಯಣಗಳ ಕಾಲದಲ್ಲೂ ಶಿವ ಪೂಜೆಯು ಇದ್ದಂತೆ ತದ್ಗ್ರಂಥಗಳಿಂದ ಕಾಣ ಬರುವದರಿಂದ ಕ್ರಿಸ್ತ ಪೂರ್ವ ಬಹು ಕಾಲದಿಂದಲೂ ಲಿಂಗ ಪೂಜೆಯು ನಡೆದು ಬಂದಿರಬಹುದೆಂದು ಅನೇಕ ಪಾಶ್ಚಾತ್ಯ ಪಂಡಿತರು ಅಭಿಪ್ರಾಯ ಪಡುತ್ತಾರೆ. ಆದರೆ ಅದು ಕ್ರಿ. ಶ. ೫೦೦ ಅಥವ ೬೦೦ ಕ್ಕೆ ಪ್ರಬಲ ಸ್ಥಿತಿಗೆ ಬಂದಂತೆ ಆ ಶತಮಾನಗಳಲ್ಲಿ ಹುಟ್ಟಿರುವ ಗ್ರಂಥಗಳಿಂದಲೂ ಮತ್ತು ನೆಲೆಸಿದ್ದ ಲಿಂಗ ದೇವಸ್ಥಾನಗಳಿಂದಲೂ ಕಂಡು ಬರುವದಾಗಿ ಮೇಲ್ಕಂಡ *Prof H. H. Wilson* ಸಾಹೇಬರು ಹೇಳುತ್ತಾರೆ. ಅವರು ಹೀಗೆ ಬರೆಯುತ್ತಾರೆಃ—

"Most, if not all of them (Lingas set up in various places), also are named in works, of which the date cannot be much later than the eigth or ninth century and it is therefore to be inferred * * * that the worship of Siva under this type, prevailed through out India atleast as early as the fifth or sixth century of the Christian era"
ಎಂದು ಬರೆಯುತ್ತಾರೆ. ಹೀಗಾದ ಮೇಲೆ ಲಿಂಗವು ವೇದಗಳಲ್ಲಿ ಹೇಳಿಲ್ಲ, ವೇದಗಳಿಂದೀಚೆಗೆ ಬಹುಕಾಲದಿಂದಲೂ ಬಂದಿರುತ್ತದೆ ಎಂದು ಬರೆದ ಮೇಲೆ ಲಿಂಗಪೂಜೆಯು ಯಾವಾಗ ಬಂತೆಂಬುದು ದೊಡ್ಡ ಪ್ರಶ್ನೆಯಾಗಿರುತ್ತದೆ.

ವೇದಗಳಲ್ಲಿ ಹೇಳಿರುವದೆಲ್ಲಾ ಪ್ರಕೃತಿ ಪೂಜೆಯು. ಆದರಿಂದ ವಿಗ್ರಹರೂಪವಾದ ಲಿಂಗಪೂಜೆಯು ವಿಭಿನ್ನವಾದದ್ದಾಯಿತು. ವೇದಗಳ ಪ್ರಕಾರ ಆರ್ಯರು ವಿಗ್ರಹಗಳನ್ನು ಪೂಜಿಸುತ್ತಿರಲಿಲ್ಲ. ಮತ್ತು

ದೇವಸ್ಥಾನಗಳನ್ನು ಕಟ್ಟಿಸುತ್ತಿರಲಿಲ್ಲ. ಹೀಗಾದ ಮೇಲೆ ವಿಗ್ರಹವಾದ ಲಿಂಗಪೂಜೆಯೂ, ಅದರ ಸಂಬಂಧ ದೇವಸ್ಥಾನವೂ ಯಾವ ಬಗೆಯು ಜನಕ್ಕೆ ಸೇರಿದ್ದವೆಂಬ ವಿಚಾರವನ್ನು ವಿಮರ್ಶೆಮಾಡಬೇಕಾಗಿರುತ್ತದೆ. ಆರ್ಯರಿಗಿಂತಲೂ ಮೊದಲು ಇಂಡಿಯಾದಲ್ಲಿ ದ್ರಾವಿಡರು ಪುಷ್ಕಳವಾಗಿದ್ದರೆಂತಲೂ, ಅವರು ವೃಕ್ಷಗಳ ಪೂಜೆಯನ್ನೂ, ನಾಗರಪೂಜೆಯನ್ನೂ, ಅಮ್ಮನ ಪೂಜೆಯನ್ನೂ, ಮಾಡುತ್ತಿದ್ದರೆಂದೂ, ದೇವಸ್ಥಾನಗಳನ್ನು ಕಟ್ಟಿಸುತ್ತಿದ್ದರೆಂತಲೂ ಪಾಶ್ಚಾತ್ಯ ವಿದ್ವಾಂಸರು ಭಾಷಾಶಾಸ್ತ್ರದಿಂದಲೂ (*Philology*) ಮತ್ತು ಇತರ ಕಾರಣಗಳಿಂದಲೂ ಹೇಳುತ್ತಾರೆ. ಹಾಗಾದರೆ ಅವರು ಹೇಳುವ ವಿಗ್ರಹಪೂಜೆಯು ಲಿಂಗಪೂಜೆಯಾಗಿರಬಹುದೆ? ಈ ಲಿಂಗಪೂಜೆಯು ಆರ್ಯರು ಬರುವದಕ್ಕೆ ಮೊದಲು ದ್ರಾವಿಡರಲ್ಲಿತ್ತೆಂದು ಹೇಳಬಹುದೆ? ಇದಕ್ಕೆ ಬಹಳವಾದ ಶೋಧನೆ ಮಾಡಬೇಕಾಗಿರುತ್ತದೆ.

ಅಂತೂ ಒಂದು ಮಾತು ನಿಶ್ಚಯವಾಗಿರುತ್ತದೆ. ಕ್ರಿಸ್ತಶಕೆ ಐದು ಆರನೆ ಶತಮಾನಕ್ಕೆ ಲಿಂಗವನ್ನು ದೇವಸ್ಥಾನಗಳಲ್ಲಿ ಆರಾಧಿಸುವ ಕ್ರಮವು ಸರ್ವತ್ರ ನೆಲೆಗೊಂಡಿತ್ತು. ಈ ವಿಧವಾದ ಶೈವಧರ್ಮಕ್ಕೆ ಆದೇ ಕಾಲದಲ್ಲಿ ಪೋಲ್ಕಂಡ ಪಂಡಿತರು ಮೇಲೆ ಹೇಳಿದಂತೆ ಆಗಮಗಳೂ ಮತ್ತು ಪುರಾಣಗಳೂ ಹುಟ್ಟಿದವೆಂದೂ ಗೊತ್ತಾಯಿತು. ಕ್ರಿ. ಶ. ೧೧೩೩ ರಲ್ಲಿ ತಮಿಳಿನಲ್ಲಿ ಶೆಕ್ಕಿರಾರೆಂಬವರು ಬರೆದ ಅರುವತ್ತುಮೂವರು ಪುರಾತನರ ವಿಷಯದ ಪೆರಿಯಪುರಾಣದಿಂದ ಅರುವತ್ತುಮೂವರು ಶೈವ ಶರಣರು ಕ್ರಿ. ಶ. ೬೦೦ ರಿಂದ ೮೦೦ ವರೆಗೆ ನಡೆದರೆಂದು ಗೊತ್ತಾಗುತ್ತದೆ. ಅಂದರೆ ಕಲ್ಯಾಣದ ಬಸವೇಶನಿಂದ ಹಿಂದೆ ೧೦೦-೨೦೦ ವರ್ಷಗಳಲ್ಲೇ ನಡೆದಂತಾಯಿತು. ಈ ಅರುವತ್ತುಮೂರು ಶೈವ ಶರಣರಿಗೂ, ಬಸವಾದಿ ವೀರಶೈವ ಶರಣರಿಗೂ ಏನು ವ್ಯತ್ಯಾಸ? ಲಿಂಗಧಾರಣಯುಕ್ತವಾದ ಷಟ್ಸ್ಥಲಸಿದ್ಧಾಂತದ ಬಸವಾದಿ ಪ್ರಭೃತಿಗಳು, ಸ್ಥಾನಲಿಂಗ ಪೂಜಾಯುಕ್ತವಾದ ಪಶು, ಪತಿ, ಪಾಶವೆಂಬ ಶೈವಸಿದ್ಧಾಂತ ಧರ್ಮದ ಅರುವತ್ತುಮೂರು ಪುರಾತನ ಶೈವ ಶರಣರನ್ನು ಏಕೆ ದೃಷ್ಟಾಂತವಾಗಿ ತೆಗೆದುಕೊಂಡರು? ಮೇಲೆ ಹೇಳಿದಂತೆ ಲಿಂಗಪೂಜಾ ಶೈವವು ವೇದದಿಂದೀಚೆಗೆ ಬಹುಕಾಲದಿಂದ ಬಂದಿರಬಹುದೆಂದು ಕೆಲ ಪಾಶ್ಚಾತ್ಯ ಪಂಡಿತರು ಊಹಿಸುತ್ತಾರಷ್ಟೆ. ರಾಮಾಯಣ ಕಾಲದಲ್ಲೂ ಮಹಾಭಾರತದ ಕಾಲ

ದಲ್ಲೂ ಅಂದರೆ ರಾಮಾಯಣ ನಡೆದ ಕಾಲದಲ್ಲೂ, ಭಾರತ ನಡೆದ ಕಾಲದಲ್ಲೂ ಲಿಂಗಪೂಜಾ ಶೈವವು ಇತ್ತೆಂದು ಅವುಗಳಲ್ಲಿನ ಕೆಲ ಸಂಗತಿಗಳಿಂದ ಗೊತ್ತಾಗುತ್ತದೆ. ರಾಮನು ರಾಮೇಶ್ವರದಲ್ಲಿ ಲಿಂಗಪೂಜೆ ಮಾಡಿದ್ದು, ಅರ್ಜುನನು ಪಾಶುಪತಾಸ್ತ್ರವನ್ನು ಪಡೆಯುವದಕ್ಕೆ ಮರಳು ಲಿಂಗವನ್ನು ಪೂಜೆ ಮಾಡಿದ್ದು ಲಿಂಗ ಪೂಜಾ ಶೈವವು ಆ ಕಾಲದಲ್ಲಿತ್ತೆಂದು ಹೇಳುವದಕ್ಕೆ ಕಾರಣವಾಗಿ ಕಾಣಬಹುದು. ಆದರೆ ಮೆ|| ವಿನ್‌ಸೆಂಟ್‌ಸ್ಮಿತ್ ಸಾಹೇಬರು ಮೊದಲಾದ ಕೆಲ ಚರಿತ್ರ ಶೋಧಕರು ಭಾರತವೂ, ರಾಮಾಯಣವೂ ಮೊದಲು ಬಾಯಿ ಮಾತಿನ ಕಥೆಯಾಗಿದ್ದು ಕ್ರಿ. ಶ. ಪೂರ್ವ ಸುಮಾರು ೬೦೦ ನೆ ವರ್ಷದಲ್ಲಿ ವ್ಯಾಸರಿಂದಲೂ, ವಾಲ್ಮೀಕಿಯಿಂದಲೂ ಬರೆಯಲ್ಪಟ್ಟವೆಂದೂ, ಅವು ಮೊದಲು ಚಿಕ್ಕ ಗ್ರಂಥಗಳಾಗಿದ್ದು ಕ್ರಿಸ್ತನ ತರುವಾಯ ೨೦೦ ರ ವರೆಗೂ ಹೆಚ್ಚುವರಿ ಮಾಡಲ್ಪಟ್ಟವೆಂದೂ ಅಭಿಪ್ರಾಯಪಡುತ್ತಾರೆ. ಮೆ|| *Vincent Smith* ಸಾಹೇಬರು ತಮ್ಮ ಹಿಂದೂ ಚರಿತ್ರೆಯಲ್ಲಿ ಹೀಗೆ ಹೇಳುತ್ತಾರೆಃ—

"Probably the greater part of the existing text of the Maha-bharata was complete by A. D. 200, but the work as a whole cannot be said to belong to any one era. The original work of Valmiki, that is to say, Book II- VI of Ramayana is believed by Professor Macdonell to have been completed before the epic kernal of the Mahabharata had assumed definite shape"

ಎಂದು ಬರೆದಿರುತ್ತಾರೆ. ಹೀಗಿರುವದರಿಂದ ಅವುಗಳಲ್ಲಿ ಹೇಳಿರುವ ಶೈವ ವಿಚಾರವು ಎಷ್ಟರಮಟ್ಟಿಗೆ ಯಾವ ಕಾಲದಲ್ಲಿ ಸೇರಿಸಲ್ಪಟ್ಟವು ಅಥವ ಮೊದಲಿಂದಲೂ ಇದ್ದವೊ ಎಂಬ ವಿಚಾರವನ್ನು ನಿರ್ಣಯಿಸಿ ಹೇಳುವದಕ್ಕೆ ಬರುವದಿಲ್ಲ. ಹೇಗಾದರೂ ಆಗಲಿ — ಲಿಂಗ ಪೂಜಾರೂಪ ಶೈವವು ರಾಮಾಯಣ ಭಾರತ ಕಾಲದಿಂದಲೂ ಇತ್ತೆಂದು ತೆಗೆದುಕೊಳ್ಳೋಣ. ಆ ಕಾಲದಲ್ಲಿದ್ದಂತಹ ಶೈವಕ್ಕೂ ಅರುವತ್ತು ಮೂವರು ಪುರಾತನರ ಶೈವಕ್ಕೂ ಏನಾದರೂ ವ್ಯತ್ಯಾಸವಿದೆಯೇ? ರಾಮಾಯಣ ಮತ್ತು ಭಾರತ ಕಾಲದಲ್ಲಿ ನಡೆದ ಸಂಗತಿಗಳಿಂದ ಆ ಕಾಲದಲ್ಲಿ ಶೈವವು ಪ್ರಮುಖವಾಗಿ ಕಾಣಿಸುವದಿಲ್ಲ. ವರ್ಣಾಶ್ರಮವೂ ಬ್ರಾಹ್ಮಣ್ಯ ಪ್ರಾಶಸ್ತ್ಯವೂ ತುಂಬಿ

ತುಳುಕುತ್ತದೆ. ಭಾರತ ಕಾಲದಲ್ಲೂ, ರಾಮಾಯಣ ಕಾಲದಲ್ಲೂ ಬ್ರಾಹ್ಮಣ ಮತವು ಅತ್ಯಂತ ಪ್ರಚಾರದಲ್ಲಿತ್ತೆಂದೂ, ಶೈವವು ಸಾವಿರದಲ್ಲೊಂದಂಶವು ಮಿನುಗುತ್ತಿತ್ತೆಂದೂ ನಾವು ಹೇಳಬೇಕಾಗಿದೆ. ಈ ಕಾರಣದಿಂದ ರಾಮಾಯಣ ಮತ್ತು ಭಾರತ ಕಾಲದ ಮತವು ಬ್ರಾಹ್ಮಣ ಮತವೆಂದು ಉದಾರದಿಂದ ಹೇಳಬಹುದು. ಶೈವವು ಕಿಂಚಿತ್ತಿದ್ದರೂ ಅದನ್ನು ಲೆಕ್ಕಕ್ಕೆತ್ತುವ ಅವಶ್ಯಕವಿಲ್ಲ. ಅರವತ್ತು ಮೂವರು ಪುರಾತನರ ಶೈವವು ಅಂದರೆ ಕ್ರಿಸ್ತನಿಂದೀಚೆಗೆ ೬೦೦ ರಿಂದ ೮೦೦ ವರಿಗಿನ ಶೈವವು ಅಂದರೆ ಬಸವೇಶನಿಗಿಂತ ಮುಂಚೆ ಸುಮಾರು ೨೦೦ ವರ್ಷಗಳಲ್ಲಿನ ಶೈವವು ಆಗಮದಿಂದ ಬಂದದ್ದೂ ಮತ್ತು ವರ್ಣಾಶ್ರಮಕ್ಕಿಂತಲೂ ಶಿವಭಕ್ತ ಶ್ರೇಷ್ಠತ್ವಕ್ಕೆ ಅತ್ಯಂತ ಪ್ರಾಮುಖ್ಯತೆಯನ್ನು ಕೊಡತಕ್ಕದ್ದೂ ಆಗಿರತಕ್ಕಂತಹುದಾಗಿರುತ್ತದೆ.

ಭಾರತ ರಾಮಾಯಣಗಳ ಕಾಲದ ಮಿತಶೈವಕ್ಕಿಂತಲೂ ಅರವತ್ತು ಮೂವರು ಪುರಾತನ ಶೈವರ ಶಿವಭಕ್ತಿ ಶ್ರೇಷ್ಠತ್ವ ಯುಕ್ತವಾದ ಕೇವಲ ಶೈವವನ್ನು ಬಸವಾದಿ ಪ್ರಮಥರು ದೃಷ್ಟಾಂತವಾಗಿ ಅಂಗೀಕರಿಸಿರುತ್ತಾರೆ. ಬಸವೇಶನು ತನ್ನ ವಚನದಲ್ಲಿ ವರ್ಣಾಶ್ರಮಯುಕ್ತವಾದ ಭಾರತ ರಾಮಾಯಣ ಕಾಲದ ಮಹಾಪುರುಷರನ್ನು, ಅರವತ್ತು ಮೂವರು ಪುರಾತನರಲ್ಲಿ ಕೆಲವರಿಗೂ ತನ್ನ ಸಮೀಪ ಕಾಲದ ಕೆಲ ನೂತನ ಪುರಾತನರಿಗೂ ಹೋಲಿಸಿ ನೋಡಿ, ಭಾರತ ರಾಮಾಯಣ ಕಾಲದ ಮಹಾಪುರುಷರನ್ನು ನಿರಾಕರಿಸಿ ಪುರಾತನ ಶರಣರನ್ನು ಮಾರ್ಗದರ್ಶಕರನ್ನಾಗಿ ಅಂಗೀಕರಿಸಿರುತ್ತಾನೆ. ಬಸವೇಶನು ತನ್ನ ವಚನದಲ್ಲಿ ಹೀಗೆ ಬರೆಯುತ್ತಾನೆ,

—: "ನಾರಾಯಣ ವೃದ್ಧ ಬ್ರಾಹ್ಮಣನಾಗಿ ಬಂದು ಬಲಿಯ ಭೂಮಿಯ ದಾನವ ಬೇಡಿದ. ಕೊಟ್ಟ ಬಲಿ ಬಂಧನಕ್ಕೊಳಗಾದ. ಈಶ ಜಂಗಮವಾಗಿ ಬಂದು, ದಾಸನ ವಸ್ತ್ರವ ಬೇಡಿದ. ಕೊಟ್ಟ ದಾಸ ತವನಿಧಿಯ ಪಡೆದ ನಾರಾಯಣ ಹಾರುವನಾಗಿ ಬಂದು, ಕರ್ಣನ ಕವಚವ ಬೇಡಿದ. ಕೊಟ್ಟ ಕರ್ಣ ಕಾಳಗದಲ್ಲಿ ಮಡಿದ. ಕಾಮಾರಿ ಜಂಗಮವಾಗಿ ಬಂದು, ಸಿರಿಯಾಳನ ಮಗನ ಬೇಡಿದ. ಕೊಟ್ಟ ಸಿರಿಯಾಳ ಕಂಚಿಯ ಪುರವ ಕೈಲಾಸಕ್ಕೊಯ್ದ. ಅದು ಕಾರಣ ಇಲ್ಲಿಯೂ ಲೇಸು, ಅಲ್ಲಿಯೂ ಲೇಸು. ಕೊಡಿರೇ ನಮ್ಮ ಕೂಡಲ ಸಂಗನ ಶರಣರಿಗೆ" ಎಂದು ಬರೆದಿರುತ್ತಾನೆ. ಮತ್ತು ಹೇಳುತ್ತಾನೆ:—

"ಬ್ರಾಹ್ಮಣನೇ ದೈವವೆಂದು ನಂಬಿದ ಕಾರಣ ಗೌತಮುನಿಗೆ ಗೋವಧೆಯಾಯಿತ್ತು. ಬ್ರಾಹ್ಮಣನೇ ದೈವವೆಂದು ನಂಬಿದ ಕಾರಣ ಬಲಿಗೆ ಬಂಧನವಾಯಿತ್ತು. ಬ್ರಾಹ್ಮಣನೇ ದೈವವೆಂದು ನಂಬಿದ ಕಾರಣ ದಕ್ಷಂಗೆ ಕುರಿದಲೆಯಾಯಿತ್ತು. ಬ್ರಾಹ್ಮಣನೇ ದೈವವೆಂದು ನಂಬಿದ ಕಾರಣ ಪರಶುರಾಮ ಸಮುದ್ರಕ್ಕೆ ಗುರಿಯಾದ. ಬ್ರಾಹ್ಮಣನೇ ದೈವವೆಂದು ನಂಬಿದ ಕಾರಣ ನಾಗಾರ್ಜುನನ ತಲೆ ಹೋಯಿತ್ತು. ದೈವ ಭಕ್ತರೆಂದು ನಂಬಿದ ಕಾರಣ ನಮ್ಮ ಕೂಡಲಸಂಗನ ಶರಣರು ಕೈಲಾಸವಾಸಿಗಳಾದರು." ಎಂದು ಹೇಳಿರುತ್ತಾನೆ. ಇದೂ ಅಲ್ಲದೆ ರಾಮಾಯಣ ಭಾರತ ಗ್ರಂಥಗಳನ್ನೇ ನಿರಾಕರಿಸಿರುತ್ತಾನೆ. ಬಸವೇಶನು ಹೀಗೆ ಹೇಳುತ್ತಾನೆ:—

"ಆದಿ ಪುರಾಣ ಅಸುರರಿಗೆ ಮಾರಿ. ವೇದ ಪುರಾಣ ಹೋತಿಂಗೆ ಮಾರಿ. ರಾಮಪುರಾಣ ರಕ್ಕಸರಿಗೆ ಮಾರಿ. ಭಾರತ ಪುರಾಣ ಗೋತ್ರಕ್ಕೆ ಮಾರಿ. ಇವೆಲ್ಲ ಪುರಾಣವು ಕರ್ಮಕ್ಕೆ ಮೊದಲು. ನಿಮ್ಮ ಪುರಾಣಕ್ಕೆ ಪ್ರತಿಯಿಲ್ಲ ಕೂಡಲಸಂಗಮ ದೇವ." ಎಂದು ಹೇಳಿರುತ್ತಾನೆ. ಈ ರೀತಿಯಾಗಿ ಭಾರತ ರಾಮಾಯಣ ಕಾಲದ ವಿಚಾರಗಳು ಶಿವಭಕ್ತಿ ಪ್ರಾಶಸ್ತ್ಯವಿಲ್ಲದೆ ವರ್ಣಾಶ್ರಮ ಪ್ರಾಶಸ್ತ್ಯ ಯುಕ್ತವಾಗಿರುವವುಗಳಾದದರಿಂದ ಅವುಗಳನ್ನು ಸಂಪೂರ್ಣವಾಗಿ ನಿರಾಕರಿಸಿ, ವರ್ಣಾಶ್ರಮಗಳನ್ನು ಹಿಂದು ಮಾಡಿ ಶಿವಭಕ್ತಿ ಪ್ರಾಶಸ್ತ್ಯವನ್ನು ಮುಂದು ಮಾಡಿ ತಕ್ಕಮಟ್ಟಿಗೆ ಸರ್ವ ಜನನ ಮತಾಭಾವದ ಹತ್ತಿರಕ್ಕೆ ಬಂದಿದ್ದ ಅರುವತ್ತು ಮೂವರು ಪುರಾತನರನ್ನು ಬಸವೇಶನು ಮನಮುಟ್ಟಿ ಅಂಗೀಕರಿಸಿರುತ್ತಾನೆ. ಈ ಬಸವೇಶನ ಮಾರ್ಗವನ್ನೇ ಅವನ ತರುವಾಯದ ವೀರಶೈವರೆಲ್ಲರೂ ಕೊನೆಯವರಿವಿಗೂ ಅಂಗೀಕರಿಸಿರುತ್ತಾರೆ. ಇದಕ್ಕೆ ನಿದರ್ಶನವಾಗಿ ಹಂಪೆಯ ಹರೀಶ್ವರರ ಮತ್ತು ರಾಘವಾಂಕರ ನಿದರ್ಶನವನ್ನು ತೆಗೆದುಕೊಳ್ಳಬಹುದು. ಹರಿಶ್ಚಂದ್ರನು ಭಾರತ ಕಾಲದಂತವರಹ ಶೈವನಾದುದರಿಂದ ರಾಘವಾಂಕ ಕವಿಯು ಅವನ ವಿಷಯುಕವಾದ ಹರಿಶ್ಚಂದ್ರ ಕಾವ್ಯವನ್ನು ಬರೆಯಲು, ಹಂಪೆಯ ಹರೀಶ್ವರ ದೇವ ಕವಿಯು ಶಿಟ್ಟಿಗೆದ್ದು ರಾಘವಾಂಕನ ಕೆನ್ನೆಗೆ ಹೊಡೆಯಲು ರಾಘವಾಂಕನ ಹಲ್ಲುಗಳು ಉದುರಿ ಹೋದವು. ಆ ಮೇಲೆ ರಾಘವಾಂಕನು ದೋಷ ನಿವಾರಣೆಗಾಗಿ ವೀರೇಶ ಚರಿತ್ರ ಮೊದಲಾದ ಶೈವ ಕಾವ್ಯಗಳನ್ನು ಬರೆದು ಹಲ್ಲುಗಳನ್ನು ಪಡೆದನು.

ಈ ಕಾರಣಗಳಿಂದ ಭಾರತ ರಾಮಾಯಣ ಕಾಲದಲ್ಲಿ ಇದ್ದಿರ ಬಹುದಾದ ಧರ್ಮವು ಎಂತಹುದಾದರೂ ಆಗಿರಲಿ, ಅದರಲ್ಲಿ ಶಿವಭಕ್ತಿ ಪ್ರಾಶಸ್ತ್ಯವು ಅತ್ಯಂತ ಅಗೋಚರವಾಗಿದ್ದದ್ದರಿಂದ ಅದನ್ನು ಬಸವೇಶನು ನಿರಾಕರಿಸಿ, ಶಿವಭಕ್ತಿ ಪ್ರಾಶಸ್ತ್ಯಪೂರ್ವಕ ಸರ್ವಸಮತಾಭಾವವು ವಿಶೇಷವಾಗಿ ತಲೆದೋರಿದ ಅರುವತ್ತುಮೂವರು ಪುರಾತನ ಶರಣರ ಶೈವಕ್ಕೆ ಮನ್ನಣೆಯನ್ನು ಕೊಟ್ಟಿರುತ್ತಾನೆ. ಇದೂ ಅಲ್ಲದೆ ಅರುವತ್ತುಮೂವರು ಪುರಾತನರ ಶೈವವು ಆಗಮಸಂಭೂತ ಶೈವವಾಗಿರುತ್ತದೆ. ಅರುವತ್ತು ಮೂವರು ಪುರಾತನರಲ್ಲಿ ಜಾತಿಶ್ರೇಷ್ಠತ್ವಕ್ಕಿಂತಲೂ ಶಿವಭಕ್ತಿ ಶ್ರೇಷ್ಠತ್ವವು ಕೇವಲ ಮುಂದುವರಿದಿರುತ್ತದೆ. ಶೈವ ವೈಷ್ಣವ ಮಿಶ್ರವಾದ ಇತರರಲ್ಲಿ ಜಾತಿ ಶ್ರೇಷ್ಠತ್ವವೇ ಅತ್ಯಂತ ಪ್ರಬಲವಾಗಿದ್ದಿತು. ಅರುವತ್ತು ಮೂವರಲ್ಲಿ ಜಾತಿಗಳಿದ್ದರೂ ಜಾತಿ ಶ್ರೇಷ್ಠತ್ವವು ತಗ್ಗಿ ಹೋಗಿತ್ತು. ಶಿವಭಕ್ತಿ ಪ್ರಾಶಸ್ತ್ಯವು ಬಹಳವಾಗಿ ಮುಂದುವರಿದಿತ್ತು. ಜಾತಿಭೇದಗಳಿದ್ದರೂ ಶಿವಭಕ್ತಿಯುಳ್ಳವರೆಲ್ಲರೂ ಭಾವದಲ್ಲಾದರೂ ಸಮಾನರೆಂದು ಕಾಣುತ್ತಿದ್ದರು. ಅರವತ್ತು ಮೂವರು ಪುರಾತನರಲ್ಲಿ ನಂದಭಕ್ತರು ಅಥವ ತಿರುನಾಳ್ಪೋವಾರ್ ನಾಯನಾರ್ ಎಂಬವರೊಬ್ಬರಿದ್ದರು. ಇವರು ಜಾತಿಯಲ್ಲಿ ಚಂಡಾಲರು. ಇವರು ಕೇವಲ ಶಿವಭಕ್ತಿಯುಳಪಟ್ಟವರಾಗಿದ್ದರು. ಇವರು ಚಿದಂಬರದಲ್ಲಿ ಈಶ್ವರನನ್ನು ದ್ವಾರದಲ್ಲಿಯೇ ನಿಂತು ದರ್ಶಿಸುತ್ತಿದ್ದರು. ಬ್ರಾಹ್ಮಣ ದೀಕ್ಷಿತರು ಇವನನ್ನು ಒಳಕ್ಕೆ ಬಿಡುತ್ತಿರಲಿಲ್ಲ. ಒಂದು ದಿನ ಶಿವನು ದೀಕ್ಷಿತರ ಸ್ವಪ್ನದಲ್ಲಿ ಬಂದು ತಿರುನಾಳ್ಪೋವಾರ್ ನಾಯನಾರನೆಂಬ ಶಿವಭಕ್ತನಿರುವನಾಗಿಯೂ, ಅವನಿಗೆ ಅಗ್ನಿಕುಂಡವನ್ನು ವಿರಚಿಸಿ ಅದರೊಳಗೆ ಹೊಗಿಸಿ ಅವನನ್ನು ಒಳಕ್ಕೆ ಬಿಡಬೇಕೆಂದು ಹೇಳಿ ತಿರುನಾಳ್ಪೋವರನ ಸ್ವಪ್ನದಲ್ಲಿಯೂ ಅದೇ ಮಾತನ್ನು ಹೇಳಿದನು. ಬೆಳಗ್ಗೆ ಆದ ಮೇಲೆ ದೀಕ್ಷಿತರು ನೋಡುವಾಗ್ಗೆ ತಿರುನಾಳ್ಪೋವರನು ಕಾಣಿಸಲು ಅವನಿಗೆ ಅಗ್ನಿ ಕೊಂಡವನ್ನು ವಿರಚಿಸಿ ಅದರೊಳಗೆ ಹೊಗಿಸಿ ಚಿದಂಬರೇಶ್ವರನ ಸನ್ನಿಧಿಗೆ ಬಿಟ್ಟರು. ಇವರಿಂದ ಅರುವತ್ತು ಮೂವರು ಪುರಾತನರಲ್ಲಿ ಶಿವಭಕ್ತಿಯು ಜಾತಿಗಳನ್ನು ಸಮ ಮಾಡುತ್ತಿದ್ದರೂ ಇನ್ನೂ ತಕ್ಕಮಟ್ಟಿಗೆ ಅದರ ಅಂಟು ಬಿಟ್ಟಿದ್ದಿಲ್ಲವೆಂದು ಸ್ಪಷ್ಟವಾಗುತ್ತದೆ. ಕೆಲ ಶರಣರು ಶಿವಭಕ್ತರಲ್ಲಿ ಕುಲ ಭೇದಗಳಿಲ್ಲವೆಂದು ಆಚರಿಸಿಯೂ ಇದ್ದಾರೆ. ನಮಿನಂದಿಯಡಿಗಳ್ ನಾಯನಾರ್ ಎಂಬ ಶಿವಭಕ್ತರೊಬ್ಬರಿದ್ದರು. ಇವರು ಜಾತಿಯಲ್ಲಿ ಬ್ರಾಹ್ಮಣರಾಗಿದ್ದರು. ಇವರು ಶಿವಭಕ್ತರಲ್ಲಿ ಜಾತಿ ಭೇದ

ವನ್ನೆಣಿಸಿದ್ದರಿಂದ ಶಿವನು ಸ್ವಪ್ನದಲ್ಲಿ ಬಂದು ತಿರುವಾಲೂರಿನಲ್ಲಿರುವ ಶಿವ ಭಕ್ತರೆಲ್ಲರೂ ಶಿವಗಣಂಗಳೆಂದು ಹೇಳಲು ಶಿವಭಕ್ತರಲ್ಲಿ ಜಾತಿ ಭೇದ ವನ್ನು ಎಣಿಸಕೂಡದೆಂದು ತಿಳಿದರು. ಕುಲಚ್ಚೆರೈನಾಯನಾರ್ ಎಂಬ ಶಿವಭಕ್ತರೊಬ್ಬರಿದ್ದರು. ಇವರು ಶಿವಭಕ್ತರಾಗಿದ್ದು ವಿಭೂತಿ ರುದ್ರಾಕ್ಷ ಗಳನ್ನು ಧರಿಸಿದವರಾದರೆ ಅಂತವರ ಕುಲಗೋತ್ರಗಳನ್ನು ವಿಚಾರಿಸದೆ ಅತಿ ವಿನಯದಿಂದ ಅವರನ್ನು ಸೇವಿಸುತ್ತಿದ್ದರು. ಏನಾದಿ ನಾಯನಾರ್ ಎಂಬ ಶಿವಭಕ್ತರೊಬ್ಬರಿದ್ದರು. ಇವರು ಜಾತಿಯಲ್ಲಿ ಈಡಿಗರವರು. ಇವರು ಆದಿಶೂರನೆಂಬವನೊಡನೆ ಯುದ್ಧ ಮಾಡಿದರು ಆಗ ಆದಿ ಶೂರನು ಸೋತು ಹೋಗುವನು. ಅನಂತರ ಆದಿಶೂರನು ಹಣೆಯಲ್ಲಿ ವಿಭೂತಿಯನ್ನು ಧರಿಸಿಕೊಂಡು ಬರಲು ಈ ಏನಾದಿನಾಥರು ಅವನನ್ನು ಶಿವಭಕ್ತನೆಂದು ತಿಳಿದು ಅವನಿಗೆ ಸಾಷ್ಟಾಂಗ ನಮುಸ್ಕಾರ ಮಾಡಿದನು. ಮತ್ತೆ ಕೆಲವು ಶಿವಭಕ್ತರು ಊಟ ಉಪಚಾರಕ್ಕೆ ಮಾತ್ರ ಜಾತಿಗಳನ್ನಿ ಟ್ಟುಕೊಂಡು ಬಾಹ್ಯ ಕ್ರಿಯಗಳಲೆಲ್ಲಾ ಜಾತಿಗಳ ಶ್ರೇಷ್ಠತ್ವ ನಿಕೃಷ್ಟತ್ವ ವನ್ನು ಬಿಟ್ಟಿದ್ದರೆಂದು ತಿಳಿದು ಬರುತ್ತದೆ. ಅಮರ್ನೀತಿನಾಯನಾರ್ ಎಂಬ ಒಬ್ಬ ಶಿವಭಕ್ತರಿದ್ದರು. ಇವರು ಜಾತಿಯಲ್ಲಿ ವೈಶ್ಯರಾಗಿದ್ದರು. ಇವರು ತಿರುನಲ್ಲೂರೆಂಬ ಶಿವ ಕ್ಷೇತ್ರದಲ್ಲಿ ಮಹೋತ್ಸವ ದರ್ಶನಕ್ಕೆ ಬರುವ ಶಿವ ಭಕ್ತರ ಸೇವೆ ಮಾಡುವದಕ್ಕೆ ಒಂದು ಮಠವನ್ನು ಕಟ್ಟಿಸಿ ಅದರಲ್ಲಿ ಸಕಲ ವರ್ಣಾಶ್ರಮಸ್ಥರಿಗೂ ಅಡಿಗೆ ಏರ್ಪಾಟು ಮಾಡಿ ಬಂದಂತ ಶಿವಭಕ್ತರಿಗೆ ಆಯಾಯ ವರ್ಣದ ಪ್ರಕಾರ ಭೋಜನ ಮಾಡಿಸಿ ತೃಪ್ತಿ ಪಡಿಸುತ್ತಿದ್ದರು. ಇದರಿಂದ ಒಟ್ಟು ಅಭಿಪ್ರಾಯವಾಗುವದೇನೆಂದರೆ ಕೆಲರು ಶಿವಭಕ್ತರಲ್ಲಿ ಜಾತಿಭೇದಗಳನ್ನು ಬಿಟ್ಟಿದ್ದರೆಂದೂ, ಕೆಲರು ಊಟ ಉಪಚಾರದಲ್ಲಿ ಜಾತಿ ಭೇದಗಳನ್ನು ಇಟ್ಟುಕೊಂಡು ಬಾಹ್ಯ ಕ್ರಿಯೆಯಲ್ಲಿ ಜಾತಿಭೇದವನ್ನು ಬಿಟ್ಟಿದ್ದರೆಂದೂ ಗೊತ್ತಾಗುತ್ತದೆ.

ಅರುವತ್ತು ಮೂವರು ಪುರಾತನರಲ್ಲಿ ಎಲ್ಲರೂ ಬ್ರಾಹ್ಮಣರಿಗೆ ದಾನಗಳನ್ನು ಮಾಡಿದರೆಂದು ಹೇಳದೆ ಶಿವಭಕ್ತರಿಗೆ ದಾನಮಾಡಿದರೆಂದು ಹೇಳುವದರಿಂದ ಇದು ಬಸವಾದಿ ಪ್ರಮಥರ ಸದಾಚಾರಕ್ಕೆ ಸಂಬಂಧ ಪಡುತ್ತದೆ. ಐಡಂಗಳಿ ನಾಯನಾರ್ ಎಂಬ ಶಿವಭಕ್ತರು ಶಿವಭಕ್ತರಿಗೆ ವಿಶೇಷವಾಗಿ ಧಾನ್ಯವನ್ನು ಕೊಡುತ್ತಿದ್ದರು. ಕಾರಿನಾಯನಾರ್ ಎಂಬ ವರು ಶಿವಭಕ್ತರಿಗೆ ಧನವನ್ನು ಕೊಡುತ್ತಿದ್ದರು. ನರಸಿಂಗಮುನೈನಾಯ

ನಾರ್ ಎಂಬವರು ಆರ್ದ್ರಾ ನಕ್ಷತ್ರದಲ್ಲಿ ಶಿವಭಕ್ತರಿಗೆ ಮೊಹರಿಗಳನ್ನು ಕೊಡುತ್ತಿದ್ದರು. ಒಂದು ಆರ್ದ್ರಾನಕ್ಷತ್ರದಲ್ಲಿ ಒಬ್ಬ ಧೂರ್ತನು ವಿಭೂತಿ ಧಾರಣೆ ಮಾಡಿಕೊಂಡು ಶಿವಭಕ್ತನಾಗಿ ಬರಲು ಅವನಿಗೂ ಮೋಹರಿಯನ್ನು ಕೊಟ್ಟರು. ಕಾರಿಕ್ಕಾಲಮ್ಮೈ ಎಂಬ ಶಿವಭಕ್ತೆಯು ಶಿವಭಕ್ತನಿಗೆ ಮಾವಿನ ಹಣ್ಣನ್ನು ಕೊಟ್ಟಳು. ತಿರುಕ್ಕುರಿಪ್ಪುಕೊಂಡ ನಾಯನಾರ್ ಎಂಬವರು ಶಿವಭಕ್ತರಿಗೆ ಬಟ್ಟೆಯನ್ನು ಒಗೆದುಕೊಡುತ್ತಿದ್ದರು. ಇಳೆಯಾನ್ ಗುಡಿಮಾರನಾಯನಾರ್ ಎಂಬವರು ಧಾನ್ಯಗಳಿಂದ ಅಡಿಗೆ ಮಾಡಿ ಶಿವಭಕ್ತರಿಗೆ ತೃಪ್ತಿಪಡಿಸುತ್ತಿದ್ದರು. ಇಯರ್ಪಗೈನಾಯನಾರ್ ಎಂಬವರು ಶಿವನು ಶಿವಭಕ್ತ ವೇಷದಿಂದ ಬಂದು ಹೆಂಡತಿಯನ್ನು ಬೇಡಲು ಅವನಿಗೆ ತಮ್ಮ ಹೆಂಡತಿಯನ್ನು ಕೊಟ್ಟರು. ಮೂರ್ಖ ನಾಯನಾರ್ ಎಂಬವರು ಜೂಜಿನಿಂದ ಬಂದ ಧನವನ್ನು ಶಿವಭಕ್ತರಿಗೆ ಕೊಡುತ್ತಿದ್ದರು. ಮುನ್ನೈಯಡುವಾರ ನಾಯನಾರ್ ಎಂಬವರು ಯುದ್ಧ ಮಾಡಿ ಅದರಿಂದ ಬಂದ ಧನವನ್ನು ಶಿವಭಕ್ತರಿಗೆ ಕೊಡುತ್ತಿದ್ದರು. ನೇಶನಾಯನಾರ್ ಎಂಬವರು ಶಿವಭಕ್ತರಿಗೆ ವಸ್ತ್ರಗಳನ್ನು ನೇದು ಕೊಡುತ್ತಿದ್ದರು.

ಅರವತ್ತು ಮೂವರು ಪುರಾತನರಲ್ಲಿ ಕೆಲರು ಶಿವನಿಂದೆ, ಶಿವಭಕ್ತನಿಂದೆ ಮಾಡಿದವರನ್ನು ಸಂಹಾರ ಮಾಡಿರುತ್ತಾರೆ. ಇದು ಬಸವಾದಿ ಪ್ರಮಥರ ಗಣಾಚಾರಕ್ಕೆ ಸಂಬಂಧಪಡುತ್ತದೆ. ಶಕ್ತಿನಾಯನಾರ್ ಎಂಬವರು ಶಿವನನ್ನು, ಶಿವಭಕ್ತರನ್ನು ದೂಷಿಸಿದವರ ನಾಲಗೆಯನ್ನು ಕತ್ತರಿಸುತ್ತಿದ್ದರು. ಇರಿಭಕ್ತನಾಯನಾರ್ ಎಂಬವರು ಧರ್ಮಕೇತನರಾಯನ ಆನೆಯು ಹೂವಿನ ಪುಟ್ಟಿಯನ್ನು ಕಿತ್ತುಹಾಕಲು ಅದನ್ನು ಕೊಂದರು.

ಕೆಲ ಶಿವಭಕ್ತರು ಶಿವಭಕ್ತರಿಗೆ ಭೃತ್ಯತ್ವದಿಂದ ನಡೆದುಕೊಳ್ಳುತ್ತಿದ್ದರು. ಇದು ಬಸವಾದಿ ಪ್ರಮಥರ ಭೃತ್ಯಾಚಾರಕ್ಕೆ ಸಂಬಂಧಪಡುತ್ತದೆ. ಶಿರುಪ್ಪುಲಿ ನಾಯನಾರ್ ಎಂಬ ಶಿವಭಕ್ತರಿದ್ದರು. ಇವರು ಶಿವಭಕ್ತರಿಗೆ ಭೃತ್ಯತ್ವದಿಂದ ನಡೆದುಕೊಳ್ಳುತ್ತಿದ್ದರು. ವಿರಸ್ ಮಿಂದ ನಾಯನಾರ್ ಎಂಬವರು ಶಿವಸ್ಥಲಂಗಳಿಗೆ ಹೋಗುವದಕ್ಕೆ ಮುಂಚೆ ಶಿವಭಕ್ತರಿಗೆ ನಮಸ್ಕಾರಮಾಡಿ ಹೋಗುತ್ತಿದ್ದರು.

ಅರುವತ್ತುಮೂವರು ಪುರಾತನರಲ್ಲಿ ಎಲ್ಲರೂ ಸ್ಥಾವರಲಿಂಗದಲ್ಲಿ ಮಿತಿಮೀರಿದ ಭಕ್ತಿಯುಳ್ಳವರಾಗಿದ್ದರು. ಇದು ಬಸವಾದಿ ಪ್ರಮಥರ

ಲಿಂಗಾಚಾರಕ್ಕೆ ಸಂಬಂಧಪಡುತ್ತದೆ. ಕಂಗುಲಿಯಕ್ಕಲನಾಯನಾರ್ ಎಂಬ ಶಿವಭಕ್ತರಿದ್ದರು. ಇವರು ಶಿವಲಿಂಗಕ್ಕೆ ಗುಗ್ಗುಲಧೂಪವನ್ನು ಅರ್ಪಿಸುವ ನಿಯಮದಿಂದಿದ್ದರು. ಅರಿವಟ್ಟಾಯ ನಾಯನಾರ್ ಎಂಬವರು ಶಿವಲಿಂಗಕ್ಕೆ ವ್ರೀಹಿಯ ಅಕ್ಕಿಯನ್ನು ಚಕ್ರವರ್ತಿ ಸೊಪ್ಪನ್ನು ಅರ್ಪಿಸುವ ನಿಯಮದಿಂದಿದ್ದರು. ಮುಕ್ತಿನಾಯನಾರ್ ಎಂಬವರು ಶಿವಲಿಂಗಕ್ಕೆ ಚಂದನವನ್ನು ತೇದು ಧರಿಸುವ ನೇಮದಿಂದಿದ್ದರು. ಶಾಕ್ಯನಾಯನಾರ್ ಎಂಬವರು ಶಿವಲಿಂಗಕ್ಕೆ ಕಲ್ಲೆಸೆದು ತಮ್ಮ ಪ್ರೀತಿಯನ್ನು ತೋರಿಸುತ್ತಿದ್ದರು. ಅತಿಭಕ್ತನಾಯನಾರ್ ಎಂಬವರು ನಿತ್ಯವೂ ಮೀನು ಹಿಡಿಯುತ್ತ ಮೊದಲು ಹಿಡಿದ ಮೀನನ್ನು ಶಿವಲಿಂಗಕ್ಕೆ ಅರ್ಪಿಸುತ್ತಿದ್ದರು

ಅರುವತ್ತುಮೂವರು ಪುರಾತನರಲ್ಲಿ ಅನೇಕರು ಶಿವನಲ್ಲಿ ಅತ್ಯುತ್ಕಟ ಭಕ್ತಿಯನ್ನು ತೋರಿಸುತ್ತಿದ್ದರು. ಇದು ಬಸವಾದಿ ಪ್ರಮಥರ ಶಿವಾಚಾರಕ್ಕೆ ಸಂಬಂಧಪಡುತ್ತದೆ. ತಿರುನೀಲನಕ್ಕನಾಯನಾರ್ ಎಂಬವರು ಶಿವನಲ್ಲಿ ಅತಿ ಪ್ರೇಮವುಳ್ಳವರಾಗಿರುತ್ತ ಶಿವಲಿಂಗದ ಮೇಲೆ ಒಂದು ಜೇಡರ ಹುಳು ಕುಳಿತುಕೊಳ್ಳಲು ತಮ್ಮ ಹೆಂಡತಿಯು ಅದನ್ನು ಬಾಯಿಂದ ಊದಿ ಹೊರಡಿಸಲು ಹೆಂಡತಿಯನ್ನು ಆಕ್ಷೇಪಮಾಡಿ ಹೊರಡಿಸಿದರು. ಕೂತ್ತವನಾಯನಾರ್ ಎಂಬವರು ಶಿವಲಿಂಗವನ್ನು ಧ್ಯಾನಿಸಿ ಶಿವಪದಗಳನ್ನು ಕಿರೀಟವನ್ನಾಗಿ ಧರಿಸಿಕೊಂಡರು.

ಅರುವತ್ತುಮೂವರು ಪುರಾತನರು ಅವರವರ ಪ್ರತ್ಯೇಕಾಚರಣೆಯ ಪ್ರಕಾರ ಮೂರು ಭಾಗ ಮಾಡಲ್ಪಟ್ಟಿರುತ್ತಾರೆ. ಹೇಗೆಂದರೆ ಶಿವಭಕ್ತರ ಅನುಗ್ರಹದಿಂದ ಮುಕ್ತಿ ಪಡೆದವರು ತಿರುನೀಲಕಂಠನಾಯನಾರ್ ಮೊದಲಾದ ಹತ್ತೊಂಬತ್ತು (೧೯) ಜನ ಪುರಾತನರು. ಗುರುಗಳ ಅನುಗ್ರಹದಿಂದ ಮುಕ್ತಿಪಡೆದವರು ಸುಂದರನಾಯನಾರ್ ಮೊದಲಾದ ಹನ್ನೆರಡು (೧೨) ಜನ ಪುರಾತನರು. ಶಿವಲಿಂಗದಿಂದ ಮುಕ್ತಿಯನ್ನು ಪಡೆದವರು ಎರಿಭಕ್ತನಾಯನಾರ್ ಮೊದಲಾದ ಮೂವತ್ತೆರಡು (೩೨) ಜನ ಪುರಾತನರು. ಇವರೆಲ್ಲರೂ ಸೇರಿ ಅರುವತ್ತುಮೂವರು ಪುರಾತನರಾಗುತ್ತಾರೆ. ಇದರಲ್ಲಿ ಶಿವಭಕ್ತರಿಂದ ಮುಕ್ತಿಪಡೆದವರೆಂದರೆ ಜಂಗಮದ ಪ್ರಾಶಸ್ತ್ಯ ಹೇಳಿದಂತಾಯಿತೆಂದು ನಾವು ತಿಳಿದುಕೊಳ್ಳಬೇಕು. ಗುರುಗಳಿಂದ ಮುಕ್ತಿ ಪಡೆದವರೆಂದರೆ ಬಸವಾದಿ ಪ್ರಮಥರ ಅಷ್ಟಾವರಣದಲ್ಲೊಂದಾದ ಗುರುವೆಂದು ತಿಳಿದುಕೊಳ್ಳಬೇಕು. ಲಿಂಗದಿಂದ ಮುಕ್ತಿಪಡೆದವರೆಂದರೆ

ಬಸವಾದಿ ಪ್ರಮಥರ ಅಷ್ಟಾವರಣದಲ್ಲೊಂದಾದ ಲಿಂಗವೆಂದು ತಿಳಿದುಕೊಳ್ಳಬೇಕು. ಇನ್ನುಳಿದ ಬಸವಾದಿ ಪ್ರಮಥರ ಅಷ್ಟಾವರಣಗಳು ಅಂದರೆ ವಿಭೂತಿ, ರುದ್ರಾಕ್ಷಿ, ಪಾದೋದಕ, ಪ್ರಸಾದ, ಪಂಚಾಕ್ಷರಿ ಎಂಬವುಗಳಿಗೆ ಅರುವತ್ತುಮೂವರು ಪುರಾತನರಲ್ಲಿ ಕೆಲರು ಒಂದೊಂದನ್ನು ಆಚರಿಸಿರುವದು ತಿಳಿದುಬರುತ್ತದೆ. ಏಣಾದಿನಾಥನಾಯನಾರರು ಯುದ್ಧ ಮಾಡುವ ಶತ್ರುವು ವಿಭೂತಿಯನ್ನು ಧರಿಸಿಕೊಂಡು ಬರಲು ಅವನಿಗೆ ನಮಸ್ಕಾರ ಮಾಡಿದರೆಂಬ ಸಂಗತಿಯನ್ನು ಮೇಲೆಯೇ ಬರೆದಿರುತ್ತೇನೆ. ಜ್ಞಾನಸಂಬಂಧರು, ವಾಗೀಶರು, ಸುಂದರರು ಮೊದಲಾದವರು ವಿಭೂತಿಯ ಜತೆಗೆ ರುದ್ರಾಕ್ಷವನ್ನು ಅತ್ಯಾದರದಿಂದ ಧರಿಸುತ್ತಿದ್ದರು. ಕಲಿಕ್ಕಂಬನಾಯನಾರ್ ಎಂಬ ಶಿವಭಕ್ತರು ಶಿವಭಕ್ತರ ಪಾದಗಳನ್ನು ನಿತ್ಯವೂ ತೊಳೆಯುತ್ತಿದ್ದರು. ಒಂದುದಿನ ಹೆಂಡತಿಯು ಪಾದಗಳನ್ನು ತೊಳೆಯುವಾಗ್ಯೆ ನೀರು ಹೊಯ್ಯುವದಕ್ಕೆ ಸಂಕೋಚಪಡಲು ಅವಳನ್ನು ಕತ್ತರಿಸಿಬಿಟ್ಟರು. ಮೂರ್ಖನಾಯನಾರ್ ಎಂಬ ಶಿವಭಕ್ತರು ನಿತ್ಯವೂ ಜೂಜಿನಿಂದ ಬಂದ ಹಣದಿಂದ ಶಿವಭಕ್ತರನ್ನು ಆರಾಧಿಸಿ ಅವರ ಶೇಷವನ್ನು ಸೇವಿಸುತ್ತಿದ್ದರು. ರುದ್ರಪಶುಪತಿ ನಾಯನಾರ್ ಎಂಬವರು ಸದಾಕಾಲವೂ ರುದ್ರಸೂಕ್ತವನ್ನು ಪಠಿಸುತ್ತಿದ್ದರು. ಮುರುಘನಾಯನಾರ್ ಎಂಬವರು ನಿರಂತರವೂ ಪಂಚಾಕ್ಷರೀ ಜಪಪರಾಯಣರಾಗಿದ್ದರು. ಆ ನಾಯನಾರ್ ಎಂಬ ಶಿವಭಕ್ತರು ವೇಣವಾದ್ಯದಿಂದ ಪಂಚಾಕ್ಷರಿಯನ್ನು ಹೇಳುತ್ತಿದ್ದರು.

ಅರುವತ್ತುಮೂವರು ಪುರಾತನರಲ್ಲಿ ಭಕ್ತಮಾಹೇಶ್ವರ ಎಂಬ ಶಬ್ದ ಪ್ರಯೋಗಗಳಿದ್ದಂತೆ ಕಾಣುತ್ತದೆ. ಭಕ್ತ ಭಕ್ತನನ್ನು ಸೇವೆಮಾಡುವಾಗ್ಯೆ ಸೇವೆಮಾಡತಕ್ಕ ಭಕ್ತನೇ ಭಕ್ತನಾಗಿ ಕರೆಯಲ್ಪಡುತ್ತಾನೆ. ಸೇವೆಮಾಡಿಸಿಕೊಳ್ಳಲ್ಪಡತಕ್ಕ ಭಕ್ತನೇ ಮಾಹೇಶ್ವರನೆಂದು ಕರೆಯಲ್ಪಡುತ್ತಾನೆ. ಜಂಗಮವೆಂಬ ಶಬ್ದವು ತಮ್ಮಿಳಿನ ಪೆರಿಯಪುರಾಣದಲ್ಲಿದ್ದಂತೆ ಕಾಣುವದಿಲ್ಲ. ಈ ಶಬ್ದವು ತಮ್ಮಿಳಿನ ಪೆರಿಯಪುರಾಣದಲ್ಲಿ ಇದೆಯೋ ಇಲ್ಲವೆಂಬುದನ್ನು ಚೆನ್ನಾಗಿ ಶೋಧನೆಮಾಡಬೇಕಾದ ಕೆಲಸವು ಬಹಳ ಮಹತ್ವದ್ದಿರುತ್ತದೆ. ಇದರಿಂದ ಚಾರಿತ್ರ ಸಂಬಂಧವಾದ ರಹಸ್ಯ ವಿಷಯಗಳು ಹೊರಪಡುತ್ತವೆ. ಮೇಲೆ ಹೇಳಿದ ಮೂರ್ಖನಾಯನಾರ್ ಎಂಬ ಶಿವಭಕ್ತನ ಸಂಗತಿಯಲ್ಲಿ ಪ್ರಸಾದಿತ್ವವು ದ್ಯೋತಕವಾಗುತ್ತದೆ. ವಾಯಿ

ಲಾರ್ ನಾಯನಾರ್ ಎಂಬವರು ಪರಮೇಶ್ವರನನ್ನು ಹೃದಯಕಮಲದಲ್ಲಿ ಧ್ಯಾನಿಸುತ್ತ ಜ್ಞಾನಪೂಜೆಯನ್ನು ಮಾಡುತ್ತಿದ್ದರೆಂದು ಹೇಳಲ್ಪಟ್ಟಿರುವದರಲ್ಲಿಯೂ, ಪೆರುಮಳಲೈಕುರುಂಬನಾಯನಾರ್ ಎಂಬವರು ಯೋಗಸಿದ್ಧಿಯಿಂದ ಬ್ರಹ್ಮರಂಧ್ರವನ್ನು ಭೇದಿಸಿ ಶಿವಪಾದಗಳನ್ನು ಸೇರಿದರೆಂದು ಹೇಳಿರುವದರಲ್ಲಿಯೂ ಪ್ರಾಣಲಿಂಗಿಸ್ಥಲವೂ, ಶರಣಸ್ಥಲವೂ, ಐಕ್ಯಸ್ಥಲವೂ ದ್ಯೋತಕವಾಗುತ್ತದೆಂದು ಹೇಳಬಹುದು. ಇದರಿಂದ ಭಕ್ತಮಾಹೇಶ್ವರಾದಿ ಆರುಸ್ಥಲಗಳ ಒಂದು ಮಬ್ಬಿನ ಚಿತ್ರವು ಕಾಣಬರುತ್ತದೆ. ಇದರಿಂದ ಅರುವತ್ತುಮೂವರು ಪುರಾತನರಲ್ಲಿ ವೀರಶೈವರ ಅಂದರೆ ಬಸವಾದಿ ಪ್ರಮಥರ ಅಷ್ಟಾವರಣ, ಪಂಚಾಚಾರ, ಷಟ್ಸ್ಥಲಗಳು ಕ್ರಮವಾಗಿ ಅಥವ ಸಿದ್ಧಾಂತರೂಪವಾಗಿ ಇತ್ತೆಂದು ತಿಳಿಯಕೂಡದು. ಎಲ್ಲರೂ ಎಲ್ಲ ಆಚರಣೆಗಳನ್ನು ನಡಿಸಲಿಲ್ಲ. ಒಬ್ಬೊಬ್ಬರು ಒಂದೊಂದನ್ನು ನಡಿಸಿರುತ್ತಾರೆ. ಅಲ್ಲದೆ ಆ ಆಚರಣೆಗಳಿಗೆ ನಿಯಮಿತ ನಾಮಗಳಿರಲಿಲ್ಲ.

ಅರುವತ್ತುಮೂವರು ಪುರಾತನ ಶೈವರ ಸಿದ್ಧಾಂತವು ಪಶುಪಾಶಪತಿ ಎಂಬ ಶೈವಸಿದ್ಧಾಂತವೆನಿಸುತ್ತದೆ ಬಸವಾದಿ ಪ್ರಮಥರ ಸಿದ್ಧಾಂತವು ಷಟ್ಸ್ಥಲಸಿದ್ಧಾಂತವೆನಿಸುತ್ತದೆ. ಬಸವಾದಿ ಪ್ರಮಥರು ಶೈವಸಿದ್ಧಾಂತವನ್ನು ಶಿವನ ಉತ್ಕೃಷ್ಟತೆಯನ್ನು ಹೇಳುವ ಮಟ್ಟಿಗೆ ನಿರಾಕರಿಸಿರುವದಿಲ್ಲ.

ಅರುವತ್ತುಮೂವರು ಪುರಾತನರ ಶೈವದಲ್ಲಿ ವರ್ಣಾಶ್ರಮಭೇದಗಳು ಕ್ರಿಯತಃ ಸಂಪೂರ್ಣವಾಗಿ ನಿರಾಕರಿಸಲ್ಪಟ್ಟಿಲ್ಲ. ಬಾಹ್ಯಾಚಾರಣೆಯಷ್ಟರಮಟ್ಟಿಗೆ ನಿರಾಕರಿಸಲ್ಪಟ್ಟಿವೆ. ಈ ಸಂಗತಿಯನ್ನು ಮೇಲೆಯೇ ಬರೆದಿರುತ್ತೇನೆ. ಬಸವಾದಿ ಪ್ರಮಥರ ವೀರಶೈವದಲ್ಲಿ ವರ್ಣಾಶ್ರಮಗಳು ಸಂಪೂರ್ಣವಾಗಿ ನಿರಾಕರಿಸಲ್ಪಟ್ಟಿವೆ. ಅರುವತ್ತುಮೂವರು ಪುರಾತನರಲ್ಲಿ ಕೆಲರು ವೀರಶೈವರೆಂದು ಚನ್ನಬಸವಪುರಾಣದಲ್ಲಿ ಬರೆದಿರುತ್ತದೆ. ಪೆರಿಯಪುರಾಣದಿಂದ ಅರುವತ್ತುಮೂವರು ಪುರಾತನರಲ್ಲಿ ಯಾರಿಗೂ ಲಿಂಗಧಾರಣೆ ಇದ್ದಂತೆ ಕಂಡುಬರುವದಿಲ್ಲ. ಇದನ್ನು ಶೋಧನೆ ಮಾಡಬೇಕು. ಕೆಲರಿಗೆ ಲಿಂಗಧಾರಣೆ ಇತ್ತೋ ಹೇಗೆ ಕಂಡುಹಿಡಿಯಬೇಕು. ಅರುವತ್ತುಮೂರು ಪುರಾತನರಲ್ಲಿ ವರ್ಣಾಶ್ರಮಗಳ ಸ್ವಲ್ಪ ಮಟ್ಟಿನ ಹಿಡಿತದಿಂದ ಶೈವರೆಲ್ಲರೂ ಒಂದು ಜನಾಂಗವಾದಂತೆ ಕಾಣುವದಿಲ್ಲ. ಈಗಲೂ ತಮಿಳುದೇಶದಲ್ಲಿ ಶಿವಭಕ್ತಿಭಾವನೆಯಿಂದ ಶಿವಮತಾಭಿಮಾನವು ಭಾವದ

ಪೂರ್ತಿ ಇರುವದಾದರೂ ಒಂದು ಪಂಗಡದವರಿಂದ ಮತ್ತೊಂದು ಪಂಗಡದವರು ಬಹಳ ದೂರವಾಗಿರುತ್ತಾರೆ. ಮೊದಲಿಯಾರರು, ಪಿಳ್ಳೆಗಳು ಐಕ್ಯಯ್ಯರುಗಳು ಒಬ್ಬರಿಗೊಬ್ಬರು ಬಹಳ ದೂರವಾಗಿರುತ್ತಾರೆ ಶೈವರು ಎಂಬ ಒಂದು ಜನಾಂಗವಾಗಿರುವದಿಲ್ಲ. ಬಸವಾದಿ ಪ್ರಮಥರ ವೀರಶೈವದಲ್ಲಿ ವರ್ಣಾಶ್ರಮಗಳು ಸಂಪೂರ್ಣವಾಗಿ ಹೊಡೆದುಹಾಕಲ್ಪಟ್ಟಿರುವದರಿಂದಲೂ, ಭಕ್ತಮಾಹೇಶ್ವರರ ಐಕ್ಯತೆಯು ಹೇಳಲ್ಪಟ್ಟಿರುವದರಿಂದಲೂ, ಎಲ್ಲ ಉದ್ಯೋಗದವರಿಗೂ ಒಬ್ಬರಿಗೊಬ್ಬರಿಗೆ ವಿವಾಹ ಸಂಬಂಧವು ಹೇಳಲ್ಪಟ್ಟಿರುವದರಿಂದಲೂ, ಅದು ಬಸವೇಶ್ವರನಿಂದ ಆಚರಿಸಲ್ಪಟ್ಟಿರುವದರಿಂದಲೂ, ವೀರಶೈವವೆಲ್ಲವೂ ಒಂದು ಗಟ್ಟಿಯಾದ ದೊಡ್ಡ ಜನಾಂಗವಾಗಿರುತ್ತದೆ. ಶಿವಲಿಂಗಧಾರಿಗಳಾದವರೆಲ್ಲರೂ ವೀರಶೈವರೆಂದು ಹೇಳಲ್ಪಟ್ಟಿರುತ್ತಾರೆ. ಶಿವಲಿಂಗವಿಲ್ಲದವರು ಭವಿಗಳೆಂದು ಹೇಳಲ್ಪಡುತ್ತಾರೆ. ಅರುವತ್ತುಮೂವರು ಪುರಾತನ ಶೈವರಲ್ಲಿ ಭವಿ, ಭಕ್ತ ಎಂಬ ಶಬ್ದಗಳು ಕಂಡುಬರುವದಿಲ್ಲ

ಈ ರೀತಿಯಾಗಿ ಬಸವಾದಿ ಪ್ರಮಥರ ವೀರಶೈವ ತತ್ವದ ಪ್ರಕಾರ ಶಿವಭಕ್ತಿ ಪ್ರಾಶಸ್ತ್ಯ ಪೂರ್ವಕ ಸರ್ವ ಸಮತಾಭಾವವು ವರ್ಣಾಶ್ರಮ ನಿರಾಕರಣೆಯು ಮೂಲಕ ಅರುವತ್ತು ಮೂವರು ಪುರಾತನ ಶೈವರಲ್ಲಿ ಸಂಪೂರ್ತಿಯಾಗಿ ನೆಲೆಗೊಂಡಿರುವದಿಲ್ಲವಾದಾಗ್ಯೂ, ಬಹು ಭಾಗವು ಆ ಮಾರ್ಗಕ್ಕೆ ಬಂದಿತ್ತೆಂದು ಮೇಲ್ಕಂಡ ಪುರಾತನರ ಆಚರಣೆಯಿಂದ ತಿಳಿದು ಬರುವದರಿಂದ ಬಸವಾದಿ ಪ್ರಮಥರು ತಮ್ಮ ಷಟ್ಸ್ಥಲ ರೂಪ ವೀರಶೈವವನ್ನು ಸ್ಥಾಪಿಸುವ ಮಹಾ ಕಾರ್ಯದಲ್ಲಿ ಅರುವತ್ತು ಮೂವರ ಆಚರಣೆಗಳ ಕೆಲ ದೃಷ್ಟಾಂತಗಳನ್ನು ವಿಶ್ವಾಸದಿಂದ ತೆಗೆದುಕೊಂಡಿರುತ್ತಾರೆ. ಬಸವಾದಿ ಪ್ರಮಥರು ಮೊದಲ್ಗೊಂಡು ಅವರ ಪರಂಪರೆಯುವರೆಲ್ಲರೂ ಅರುವತ್ತು ಮೂವರು ಪುರಾತನರನ್ನು ಸಹಸ್ರ ಗಣನಾಮದಲ್ಲಿ ಸೇರಿಸಿರುತ್ತಾರೆ. ಮತ್ತು ಆಗಿಂದಾಗ್ಯೆ ಅರುವತ್ತು ಮೂವರು ಪುರಾತನರ ಪೂಜೆಯನ್ನು ಮಾಡುತ್ತಿರುತ್ತಾರೆ.

ಬಸವಾದಿ ಪ್ರಮಥರ ವೀರಶೈವ ತತ್ವದಲ್ಲಿ ಎಲ್ಲ ಉದ್ಯೋಗಗಳಿಗೂ ಪ್ರಾಶಸ್ತ್ಯಕೊಡಲ್ಪಟ್ಟಿರುತ್ತದೆ. ಅರುವತ್ತು ಮೂವರು ಪುರಾತನರಲ್ಲಿಯೂ ಎಲ್ಲ ಉದ್ಯೋಗಗಳಿಗೂ ಪ್ರಾಶಸ್ತ್ಯಕೊಡಲ್ಪಟ್ಟಿದೆ. ಬಸವಾದಿ ಪ್ರಮಥರ ವೀರಶೈವ ತತ್ವದಲ್ಲಿ ಶಿವಭಕ್ತಿ ಪ್ರಾಶಸ್ತ್ಯ ಮೂಲಕ ಸರ್ವ ಸಮತಾಭಾ

ವವು ನೆಲೆಗೊಳಿಸಲ್ಪಟ್ಟಿದೆ. ಅರುವತ್ತು ಮೂವರು ಪುರಾತನರ ಶೈವ ದಲ್ಲಿ ಬಾಹ್ಯಕ್ರಿಯೆಗಳ ಮಟ್ಟಿಗಾದರೂ ಶಿವಭಕ್ತಿ ಪ್ರಾಶಸ್ತ್ಯ ಮೂಲಕ ಸರ್ವ ಸಮತಾಭಾವವು ದ್ಯೋತಕವಾಗಿರುತ್ತದೆ.

ಶೈವ ವಿಚಾರದಲ್ಲಿ ಆದ್ಯಂತವನ್ನು ನಾವು ನೋಡುವಲ್ಲಿ ಎರಡೇ ಉಳಿಯುತ್ತವೆ. ವಿಚಾರ ಮಾಡಿದಲ್ಲಿ ಶೈವಗಳೆರಡೇ ಇರುತ್ತವೆ. ಶೈವ ವೆಂದೂ, ವೀರಶೈವವೆಂದೂ ಷಟ್ಸ್ಥಲವಿರಹಿತವಾದ ಲಿಂಗವಿಲ್ಲದ ಶೈವ ವೊಂದು ಉದಾರ ತತ್ವಯುಕ್ತವಾದ ಲಿಂಗಧಾರಣ ಯುಕ್ತವಾದ ವೀರಶೈ ವವೊಂದು. ಉಳಿದ ಶೈವಭೇದಗಳೆಲ್ಲವೂ ಕ್ರಮನಿರ್ಣಯಕ್ಕೋಸ್ಕರ ಬರೆ ಯಲ್ಪಟ್ಟವುಗಳಾಗಿರುತ್ತವೆ.

ಬೇರೆಬೇರೆ ಮತಗಳನ್ನು ಬೇರೆಬೇರೆ ಮಹಾಪುರುಷರು ಸ್ಥಾಪಿಸಿ ದಂತೆ ವೀರಶೈವವನ್ನು ಶ್ರೀ ಬಸವ ಮಹಾಪ್ರಭುವು ಸ್ಥಾಪಿಸಿರುತ್ತಾನೆ. ಕ್ರಿಸ್ತಮತವನ್ನು ಕ್ರಿಸ್ತನು ಸ್ಥಾಪಿಸಿದನು. ಮಹಮ್ಮದೀಮತವನ್ನು ಮಹ ಮ್ಮದನು ಸ್ಥಾಪಿಸಿದನು. ಜೈನ ಮತವನ್ನು ಮಹಾವೀರನು ಸ್ಥಾಪಿಸಿದನು ಬೌದ್ಧಮತವನ್ನು ಬುದ್ಧನು ಸ್ಥಾಪಿಸಿದನು. ಸಿಕ್‌ಮತವನ್ನು ನಾನಾ ಕ್‌ನು ಸ್ಥಾಪಿಸಿದನು- ಬ್ರಹ್ಮಸಮಾಜವನ್ನು ರಾಯಮೋಹನ್‌ರಾಯಿಯು ಸ್ಥಾಪಿಸಿದನು. ಸ್ಮಾರ್ತ ಮತವನ್ನು ಶ್ರೀ ಶಂಕರಾಚಾರ್ಯರು ಸ್ಥಾಪಿಸಿ ದರು. ಮಾಧ್ವ ಮತವನ್ನು ಮಧ್ವಾಚಾರ್ಯರು ಸ್ಥಾಪಿಸಿದರು. ಶ್ರೀ ವೈಷ್ಣವ ಮತವನ್ನು ರಾಮಾನುಜಾಚಾರ್ಯರು ಸ್ಥಾಪಿಸಿದರು. ಶೈವ ಸಿದ್ಧಾಂತ ಮತವನ್ನು ಜ್ಞಾನಸಂಬಂಧರು ಸ್ಥಾಪಿಸಿದಂತೆ ಅರುವತ್ತು ಮೂವರು ಪುರಾ ತನರ ಕಥೆಯಿಂದ ನನಗೆ ತಿಳಿಯುತ್ತದೆ. ಸ್ಥಾಪಕರಿಲ್ಲದ ಮತವು ರುಂಡ ವಿಲ್ಲದ ಮುಂಡದಂತೆ ಸೇನಾನಾಯಕನಿಲ್ಲದ ಸೈನ್ಯದಂತೆ. ಸ್ಥಾಪಕರಿಂದಲೇ ಆಯಾ ಸ್ಥಾಪಕರ ಅನುಯಾಯಿ ಜನ ವರ್ಗವು ಶಕ್ತಿಯುಕ್ತವಾಗುವದು.

ಬಸವೇಶನನ್ನು ವೀರಶೈವ ಮತಸ್ಥಾಪಕನೆಂದರೆ ಅವನಿಗಿಂತಲೂ ಮೊದಲು ವೀರಶೈವವಿರಲಿಲ್ಲವೇ ಎಂದು ಕೆಲವರು ಕೇಳುತ್ತಾರೆ. ಯಾವ ತತ್ವವೂ ಮೊದಲಿಂದಲೂ ಸಣ್ಣದಾಗಿ ಬೆಳೆದು ಕಡೆಗೆ ಪರಿಪಕ್ವವಾಗು ತ್ತದೆ. ಯಾರಿಂದ ಬೆಳೆದ ತತ್ವವು ಪರಿಪಕ್ವವಾಗುತ್ತದೋ ಅವನಿಗೆ ಮತಸ್ಥಾಪಕನೆಂದು ಹೆಸರುಬರುತ್ತದೆ. ಕ್ರಿಸ್ತಮತವು ಕ್ರಿಸ್ತನಿಂದ ಸ್ಥಾಪಿ ಸಲ್ಪಟ್ಟಿತೆಂದರೆ ಆ ಕ್ರಿಸ್ತನ ತತ್ವವು ಏಕಕಾಲದಲ್ಲಿ ಹುಟ್ಟಲಿಲ್ಲ. ಅವನ ಹಿಂದೆ ಕೆಲಕಾಲದಿಂದ ಆ ತತ್ವವು ಬೆಳೆದು ಬಂದಿರಬೇಕು. ಲಿಂಗ ಧಾರ

ಣವು ಬಸವೇಶನಗಿಂತ ಮೊದಲಿನಿಂದಲೂ ಬಂದಿರಲಿಲ್ಲವೆಂದು ನಾನು ಹೇಳುವದಿಲ್ಲ. ಶ್ರೀ ಶಂಕರಾಚಾರ್ಯರ ಕಾಲಕ್ಕೂ ಮತ್ತು ಅದಕ್ಕಿಂತ ಮೊದಲಿನಿಂದಲೂ ಲಿಂಗಧಾರಣವು ನಡೆದುಬಂದಿದೆ ಎಂಬುದಕ್ಕೆ ಶಂಕರ ದಿಗ್ವಿಜಯ ಪ್ರಮಾಣವೂ, ಅದಕ್ಕಿಂತಲೂ ಮೊದಲು ವಾಕಟಕದ ಶಿಲಾ ಶಾಸನದ ಪ್ರಮಾಣವೂ ಕಂಡುಬಂದಿರುತ್ತವೆ. ಇದಕ್ಕೆ ಇನ್ನೂ ಹೆಚ್ಚಿನ ಚಾರಿತ್ರ ಪ್ರಮಾಣಗಳನ್ನು ಶೋಧಕರು ಕಂಡುಹಿಡಿಯಬೇಕು. ಆದರೆ ಬಸವೇಶನಗಿಂತ ಮೊದಲು ಲಿಂಗಧಾರಣವು ಅತಿ ವಿರಳವಾಗಿದ್ದು ಪ್ರಪಂಚದ ಕಣ್ಣಿಗೆ ಒಂದು ಭಿನ್ನ ಸ್ವರೂಪವನ್ನು ಹೊಂದಿ ಕಾಣಿಸುತ್ತಿರಲಿಲ್ಲ. ಬಸವೇಶನಿಂದ ಅದು ಒಂದು ದೊಡ್ಡ ಸಮಯವಾಗಿ ರಚಿಸಲ್ಪಟ್ಟು ಒಂದು ದೊಡ್ಡ ಜನಾಂಗವೇ ನಿರ್ಮಾಣ ಮಾಡಲ್ಪಟ್ಟಿತು. ಈ ಕಾರಣದಿಂದ ಆಗಮವೂ ಮತ್ತು ಪೂರ್ವಪಂಡಿತರೂ ಬಸವೇಶನನ್ನು ವೀರಶೈವ ಮತಸ್ಥಾಪಕನೆಂದು ಕರೆದಿರುತ್ತಾರೆ.

ಕೆಲರು ರೇವಣಸಿದ್ದರು ಮೊದಲಾದವರು ಬಸವೇಶನಿಗಿಂತ ಮೊದಲು ವೀರಶೈವ ಮತವನ್ನು ಸ್ಥಾಪಿಸಿದರೆಂದು ತರ್ಕಿಸುತ್ತಾರೆ. ಇದು ಚಾರಿತ್ರಕ್ಕೆ ವಿರುದ್ಧವಾದ ಮಾತು. ರೇವಣಸಿದ್ಧರೂ, ಮರುಳಸಿದ್ಧರೂ, ಪಂಡಿತಾರಾಧ್ಯರೂ, ಏಕೋರಾಮರೂ ಶ್ರೀ ಬಸವೇಶನನ್ನು ಶಿವಾನುಭವ ಮಂಟಪದಲ್ಲಿ ಕಂಡು ಅವನಿಂದ ಜಂಗಮ ಸ್ಥಲವನ್ನು ಹೊಂದಿದರೆಂದು ಸಂಗನ ಬಸವೇಶ್ವರ ವಚನದಿಂದ ತಿಳಿದು ಬರುತ್ತದೆ. ರೇವಣಸಿದ್ಧರು ಸಿದ್ಧರಾಮೇಶ್ವರರ ಭಾವೀ ಜನನವನ್ನು ಹೇಳಿ ಅವರ ತಂದೆ ತಾಯಿಗಳಾದ ಮೊರಡಿಯ ಮುದ್ದುಗೌಡ ಸುಗ್ಗಾಯಿಗಳ ಹೊಟ್ಟೆಯನ್ನು ಪೂಜೆ ಮಾಡಿರುತ್ತಾರೆ. ಪಂಡಿತಾರಾಧ್ಯರು ಬಸವೇಶನು ಕಳುಹಿದ ವಿಭೂತಿಯಿಂದ ಕನ್ನಡ ಭಾಷೆಯನ್ನು ಕಲಿತು ಬಸವ ಮಾಹಾತ್ಮ್ಯಗೀತೆ ಎಂಬ ಗ್ರಂಥವನ್ನು ರಚಿಸಿರುತ್ತಾರೆ. ಏಕೋರಾಮರು ಮೊದಲು ಶೈವರಾಗಿದ್ದು ಆ ಮೇಲೆ ಮುದುನೂರು ರಾಮನಾಥ ಲಿಂಗದಿಂದ ಲಿಂಗಧಾರಣವನ್ನು ಹೊಂದಿ ವೀರಶೈವರಾಗಿ ಅನೇಕ ರಾಜಾಧಿರಾಜರಿಗೆ ಲಿಂಗಧಾರಣೆ ಮಾಡಿ ವೀರಶೈವ ಮತ ಪ್ರಸರಣವನ್ನು ಮಾಡಿರುತ್ತಾರೆ. ಈ ಕಾರಣಗಳಿಂದ ರೇವಣಸಿದ್ಧಾದಿಗಳು ಬಸವನ ಮಾರ್ಗಕ್ಕೆ ಸಹಾಯ ಮಾಡಿದವರಾಗಿರುತ್ತಾರೆಯೋ ಹೊರ್ತು ಮತಸ್ಥಾಪನೆ ಮಾಡಿರುವದಿಲ್ಲ.

ರೇವಣಸಿದ್ಧಾದಿಗಳು ನಾಲ್ಕು ಯುಗಗಳಲ್ಲೂ ಅವತರಿಸಿರುತ್ತಾರೆಂಬ ಮಾತಿನ ವಿಚಾರದಲ್ಲಿ, ಶ್ರೀಮದಲ್ಲಮ ಪ್ರಭುದೇವರೂ ನಾಲ್ಕು ಯುಗ

ಗಳಲ್ಲವತರಿಸಿದರೆಂದು ಆಗಮದಲ್ಲಿ ಬರೆದಿರುತ್ತದೆ. ಬಸವೇಶ್ವರನೂ ಬೇರೆ ಬೇರೆ ಕಾಲಗಳಲ್ಲಿ ಅವತರಿಸಿರುವನೆಂದು ವಚನದಲ್ಲೂ, ಸ್ವತಂತ್ರ ಗ್ರಂಥಗಳಲ್ಲೂ ಹೇಳಿರುತ್ತದೆ. ಹೀಗಾದ ಮೇಲೆ ಒಬ್ಬರು ಹಿಂದಕ್ಕೆ ತಳ್ಳಲ್ಪಟ್ಟರೆ ಎಲ್ಲರೂ ಹಿಂದಕ್ಕೆ ತಳ್ಳಲ್ಪಡಬೇಕಾಗುತ್ತದೆ. ಯುಗದ ಅವತಾರದ ಮಾತು ಪ್ರಾಶಸ್ತ್ಯಕ್ಕೆ ಹೇಳಿದ ಗ್ರಂಥೋಕ್ತಿಯೇ ಹೊರ್ತು, ಅದು ಚಾರಿತ್ರ ಪ್ರಮಾಣವೆನಿಸುವದಿಲ್ಲ. ಒಂದು ವೇಳೆ ಅದನ್ನೇ ಪ್ರಮಾಣವನ್ನಾಗಿ ಅಂಗೀಕರಿಸುವದಾದರೆ, ಆ ಪ್ರಕಾರವಾಗಿಯೂ ಕೂಡ ಬಸವೇಶ್ವರನೇ ವೀರಶೈವ ಮತದ ಅಧಿನಾಯಕನಾಗುತ್ತಾನೆ. ಯಾವ ವಿಧದಲ್ಲಿಯೂ ಬಸವೇಶ್ವರನ ಅಧಿನಾಯಕತ್ವವು ತಪ್ಪುವದಿಲ್ಲ.

ಇದು ಹೀಗಲ್ಲ ಬೇರೆ ವಿಧವೆಂದು ಯಾರಾದರೂ ಹೇಳುವದಾದರೆ, ಅದನ್ನು ಪ್ರಮಾಣ ಪೂರ್ವಕವಾಗಿ ಪೌರ್ವಾತ್ಯ ಪಾಶ್ಚಾತ್ಯ ವಿದ್ವಾಂಸರು ಒಪ್ಪುವಂತೆ ಸಿದ್ಧಗೊಳಿಸಿದರೆ ನಮಗೆ ಸಂತೋಷವೇ ಸರಿ. ನಮಗೆ ಬೇಕಾದದ್ದು ವೀರಶೈವದ ಮೂಲವನ್ನು ತಿಳಿಯಬೇಕಾದುದು.

# ನೀನಾರು.

ಶ್ರೀಯುತ ಈಶ್ವರ ಸಣಕಲ್ಲ ರಬಕವಿ.

ಕಟ್ಟಡವಿ! ನಟ್ಟಿರುಳು! ನಿಟ್ಟುಸಿರದಾರಿಯಲಿ
ಸುಟ್ಟಾಸೆಯಲೆಯುತಿರೆಯೋರ್ವ ವ್ಯೆದೋರಿದನು!
"ನೀನಾವನುಸಿರೆಂ"ದೆ! ಮೌನವೇಯುತ್ತರವು!
ಏನು, ಬಾಯಿಲ್ಲನಗಿಲ್ಲೆ? ಮತ್ತೊಮ್ಮೆ ಕೇಳಿದೆನು!
ಗೆಯ್ಮೆಯೋ ಬಾಯ್ದೆರೆಯುವೋಲುವನು ಬಾಯ್ದೆರೆದ!
ಮೆಯ್ಮರೆತು ಬೆರಗಿನೊಳು ಕಣ್ಬಿಟ್ಟು ನೋಡಿದೆನು!
ಪರಿಚಯದ ಅರೆಮರೆಯು ಹತ್ತಿದಂತಾಯ್ತೆನಗೆ!
ನಿರುಕಿಸಿದೆನವನ ಕಗ್ಗತ್ತಲೊಳು ಕಣ್ಣೊರಸಿ!
ಒರ್ಮೆ ತಾ ದೇವನೊಲು, ಮೇಣೋರ್ಮೆ ಕರ್ಮನೊಲು
ಸೇರ್ಮೆಯಲಿ ಕೂರ್ಮೆಯಲಿ ಹೊಳೆಯುತಲಿ ಕಾಣಿಸಿದ!
ಹೊಯ್ದಾಡದಿಹ ದಿಟ್ಟಿ ನೆಲದಗಲ ವಂಗಿಲುದ್ದ
ಬಾಯ್ದೆರೆದು ನಿಂತರೂ ಪೂರ್ಣಗುರುತದು ಸಿಗದು!
ಎಂದೆಂದೆ ಮತ್ತೊಮ್ಮೆ "ನೀನಾವನುಸಿರು ಗಡ?"
ಬಂದವನು ನುಡಿಯದಲೆ ಬಿಕ್ಕೆಗೋಸುಗ ಕ್ಕೆಯ
ಚಾಚಿದನು! 'ನಿನಗೀಯಲೆನ್ನಬಳಿಯೇನಿಹುದು?'
ನಾಚದಬೆ ನುಡಿದೆ ನಾ! 'ಇದ್ದುದನೆ ಕೊಡು' ಎಂದ!
ಅತ್ತಿತ್ತ ನೋಡಿದೆನು! ಬರಿ ತೆರಹು! ಬರಿ ಶೂನ್ಯ!
ಒತ್ತಿ ಬಹ ದುಃಖದಿಂ "ಇದ್ದುದೆಲ್ಲವ ನೀನೆ
ಕೊಂಡಿರಲು ಇನ್ನೇನು? ಈಗುಳಿದ ಕೌಪೀನ-
ವೊಂದನೂ ಕೊಡು, ಎಂದೊಡಾನದಕೆ ಸಿದ್ಧನೇ!"
ನುಡಿದೆ! ಅದಕು ಸಹ ಕೈನೀಡಿದನು! ನಗ್ನತೆಗೆ
ಮಿಡುಕದಲೆ ಎಸೆದೆ ನಾನದನು, ಕಾರ್ಗತ್ತಲೆಯ
ನುಡುತ! "ಇಂಥವತೆಯೊಳಗಾರೆನ್ನ ನೋಡುವರು?
ಒಡೆಯ, ಈ ಅಸುವನೂ ಕೊಳ್ಳೆನಗೆ ಬಾಳಿನೊಳು
ಬೇಸರವು! ನಟ್ಟಿರುಳ ಗಬ್ಬದಲಿ ಹಬ್ಬಿರುವ
ಹೇಸಿ ಬಾಳನು ನೋಳ್ಪರಾರು? ಹಾ!" ಎಂದತ್ತೆ!

“ಇದಕೇಕೆ ಚಿಂತೆ? ಅಳದಿರು ಕಂದ! ನಿದ್ದೆಯಾ
ಮದಿರೆಯನು ಕುಡಿದಿಳೆಯು ನಿನ್ನ ನಿರುಕಿಸದಿರಲು,
ನೋಡಗೋ ಮುಗಿಲಲ್ಲಿ ಸುರರ ಹಿಂಡೇ ಹಿಂಡು
ಓಡಿ ಬರುತಿದೆ ಬಿಟ್ಟ ಕಂಗಳಲಿ ನಿನಗಾಗಿ!
ಜಗವು ನೋಡದ ಜೀವಿಯನು ಮುಗಿಲು ನೋಡುವದು!
ಮಗುವೆ, ನೀ ತಿಳಿದಿದನು ಮುಂದೆ ಬಾ, ಮುಂದೆ ಬಾ!
ಈ ರಾತ್ರಿ ಸರಿಯುವದು! ನಸುನಗುವ ಹೊಸ ನಸುಕು
ದಾರಿ ನೋಡುತಲಿಹುದು ನಿನಗಾಗಿ! ಮುಂದೆ ಬಾ?”
ಎಂದ! “ಹಾದಿಯು ಸಿಗದು! ಮುಂದೆ ಸಾಗುವದೆಂತು?”
ಎಂದೆ! ಮೇಲ್ನೋಡೆಳೆಯು, ದಿವ್ಯವಾಗಿಹ ಬೆಳಕ!
ಅದ ನೋಡು! ಕಗ್ಗತ್ತಲೆಯು ಜಗವ ನೋಡದಲೆ
ಅದ ನೋಡು! ಅದರಿಂದೆ ಮುಂದೆ ಬಾ! ಬಾ” ಎಂದ
“ಇಸಿತೆಲ್ಲ ಪೇಳುವವ ನೀನಾರು” ಪೇಳೆಂದೆ!
ಮನಕ್ಕೊಮ್ಮೆ ದೇವನೊಲು ಮತ್ತೊಮ್ಮೆ ಕರ್ಮನೊಲು
ಕಾಣಿಸಿದ! “ಹಾನಿಯೇಂ ಗುರುತುಸಿರಿದೊಡೆ?” ಎಂದೆ!
ಕಾಣಿಕೆಯ ಮೀರಿದನು ನನ್ನ ನುಡಿಗವನೇಕೋ!
“ನೀನಾರು? ನೀನಾರು?” ಎನುತ ಬಗೆ ಕಣ್ಬಿಟ್ಟು
ಆ ನಿಶೆಯ ಮಧ್ಯದಲಿ ಸುತ್ತಲೂ ನಿರುಕಿಸಿತು!
ಇರುಳು ಸಹ ಆತನನು ಶೋಧಿಸಲು ಸಾವಿರಾ-
ರ್ತೆರೆಗಣ್ಗಳಿಂ ಸುತ್ತುಮುತ್ತಲೂ ನೋಡುವೊಲು,
ಎಣಿಕೆಯಿಲ್ಲದ ಚುಕ್ಕಿಗಳು ಆಗ ಮೆರೆಯುತಲಿ
ಎಣಿಕೆಯಲಿ ತೇಲುವೊಲು ಬಗೆಗಾಗ ತೋರಿದವು!
“ನೀನಾರು? ನೀನಾರು?” ಎಂಬ ಪ್ರಶ್ನೆಯು ಮಾತ್ರ
ಆ ನಿಶೆಯ ಅಡವಿಯಲಿ ಪಡಿನುಡಿಯುದಾಯ್ತು!

# ಪ್ರಸಾದಿಸ್ಥಲ.

(ಲೇಖಕ:— ಶ್ರೀಯುತ ಕಲ್ಯಾಣಪ್ಪ ಬ್ಯಾಳಿ ಬಿ. ಏ.)

ವಾ. ಷ॥ ಸುಪ್ರಸನ್ನತೆ ಸಾವಧಾನಂಗಳಿಂ ಮೆರೆವ
ಅಪ್ರತಿಮಸಾನಂದ ಚಿತ್ತನೀ ಧರೆಯಲ್ಲಿ
ಸುಪ್ರಸಾದಿಯೆನಿಪ್ಪ ಶಾಂತಮುದ್ರೆಯ ಕಣಿಯು ಸಿದ್ಧಗುಣಸಂಯುಕ್ತನು ।
ಸುಪ್ರಮಥಗಣನಾಥ ಶ್ರೀ ಚೆನ್ನಬಸವೇಶ
ಅಪ್ರಮೇಯ ಸುಶಾಂತಗುಣಧಾಮಯತಿವರ್ಯ
ಕ್ಷಿಪ್ರದಿಂಬಂದೆನ್ನ ಹೃತ್ಕುಮುದಮಂ ವಿಕಸಗೊಳಿಸೆಂದು ಬಿನ್ನೈಪೆನು ॥

ಸಾವಧಾನವುಳ್ಳಾತನೇ ಪ್ರಸಾದಿಯು. ಸಾವಧಾನವೇ ಸುಖವು. ಮನುಷ್ಯನಿಗೆ ಅಷ್ಟೈಶ್ವರ್ಯಗಳಿದ್ದರೂ ಮನಸ್ಸಿನಲ್ಲಿ ಸಾವಧಾನವೊಂದಿರ ದಿದ್ದರೆ ನಿಷ್ಫಲವು. ‘ಚಿಂತೆಯೇ ಮುಪ್ಪು ಸಂತೋಷವೇ ಯೌವ್ವನ’ ಎಂದು ಹೇಳಿದೆ. ಚಿಂತೆಯಿಲ್ಲದಿರುವುದೇ ಸಾವಧಾನವು. ಎಂಥ ವಿಘ್ನ ಕಷ್ಟಗಳು ಬಂದರೂ ಚಿಂತೆಮಾಡದೆ ಸಂತೋಷ ಚಿತ್ತದಿಂದಿರುವಾತನೆ ಪ್ರಸಾದಿಯು. ಈ ಜಗತ್ತಿನಲ್ಲಿ ತಮಗೆ ಸುಖವಾದರೆ ಹಿಗ್ಗುವರು ಬಹಳ ಮಂದಿ. ಆದರೆ ತಮಗೆ ದುಃಖವೊದಗಿದರೆ ಸಂತೋಷದಿಂದಿರುವವರು ಬಹು ವಿರಳ. ದುಃಖವನ್ನು ಸಹ ಸಂತೋಷವುಳ್ಳದ್ದನ್ನಾಗಿ ಮಾಡಿಕೊಳ್ಳುವ ಜಾಣ್ಮೆಯು ಪ್ರಸಾದಿಗಿರುತ್ತದೆ. ವಿಘ್ನಾದಿಗಳು ಅನುಗ್ರಹಗಳೆಂದೇ ಆತನು ಭಾವಿಸುವನು. (*Adversity is a blessing*) ಸಮಾಧಾನವು ಸಂಪತ್ತಿನಲ್ಲಿಲ್ಲ. ಧನಕನಕಗಳಲ್ಲಿಲ್ಲ. ವಸ್ತ್ರಒಡವೆಗಳಲ್ಲಿಲ್ಲ. ಮೃಷ್ಟಾನ್ನ ಭೋಜನಗಳಲ್ಲಿಲ್ಲ. ಹೆಂಡರು ಮಕ್ಕಳುಗಳಲ್ಲಿಲ್ಲ. ಆದರೆ ಅದು ಮನಸ್ಸಿನಲ್ಲಿದೆ. ಮನಸ್ಸು ಸಾವಧಾನದ ಸ್ಥಿತಿಗೆ ಬರಬೇಕಾದರೆ ಆದಕ್ಕೆ ಬಹು ದಿವಸದ ಅಭ್ಯಾಸ ಬೇಕಾಗುತ್ತದೆ. ಭಕ್ತಸ್ಥಲದಲ್ಲಿದ್ದವನ ಮನಸ್ಸು ಚಿಂತಾ ವ್ಯಾಕುಲತೆಗಳಿಂದ ಜರ್ಜರಿತವಾಗಿರುತ್ತದೆ. ಮಹೇಶಸ್ಥಲದಲ್ಲಿ ದುರಳರ ದುಷ್ಟತನದ ಮೂಲಕ ಅದು ಪ್ರಕ್ಷುಬ್ಧವಾಗಿರುತ್ತದೆ. ಆದರೆ ಪ್ರಸಾದಿ ಸ್ಥಲದಲ್ಲಿ ಶಾಂತಕಳೆಯಿಂದ ವಿರಾಜಿಸುತ್ತದೆ. ಮಳೆಯಾದ ಮೇಲೆಯೇ ಭೂಮಿಯು ಪ್ರಸನ್ನತೆಯಿಂದೊಪ್ಪುವದಿಲ್ಲವೇ? ಮಳೆಯಾಗುವ ಮೊದಲು ಅದು ಬಿಸಲಿನ ತಾಪವನ್ನು ಸಿಡಿಲು ಮಿಂಚುಗಳ ಕಡಾಟವನ್ನು ಸಹಿಸ ಬೇಕಾಗುವದು. ಅದರಂತೆಯೇ ಪ್ರಸಾದಿಯು ಮೊದಲು ತನ್ನ ಪ್ರಪಂಚದ

ಚಿಂತಾತುರತೆಗಳನ್ನೂ ಲೋಕದ ನಿಂದಾಪವಾದಗಳನ್ನೂ ಸಹಿಸಿದ ಮೇಲೆ ಆತನಲ್ಲಿ ಸಂತೋಷವು ನೆಲೆಗೊಳ್ಳುತ್ತದೆ. ಮನುಷ್ಯನು ಏಕಕಾಲಕ್ಕೆ ಪ್ರಸಾದಿಯಾಗುವದು ಶಕ್ಯವಿಲ್ಲ. ಆತನಿಗೆ ಪ್ರಪಂಚದ ಎಲ್ಲ ಅನುಭವಗಳು ತಲೆಗೆ ಬಡಿದ ಬಳಿಕ ನಿಜವಾದ ಸಂತೋಷವೆಲ್ಲಿರುವದೆಂಬದನ್ನು ಆತನು ಕಂಡು ಹಿಡಿಯುವನು. ಆಗ ಆತನಿಗೆ ಯಾವದಕ್ಕೂ ಚಿಂತೆಮಾಡದೆ ಸಾವಧಾನಿಯಾಗಿರುವದೇ ಪರಮಸುಖವೆಂಬ ಭಾವನೆ ಉಂಟಾಗುವದು.

ಸಾವಧಾನವು ಉತ್ಕ್ರಾಂತಿಯ ಚಿಹ್ನವಾಗಿದೆ. ಅದೇನೂ ನೈಸರ್ಗಿಕ ಗುಣವಲ್ಲ. ಮನುಷ್ಯನು ತನ್ನ ಅನುಭವ ಅಭ್ಯಾಸಗಳಿಂದ ಅದನ್ನು ಸಹಜ ಸ್ವಭಾವವನ್ನಾಗಿ ಮಾಡಿಕೊಳ್ಳುವನು. ಪಶುಪಕ್ಷಿಗಳು ತಮ್ಮ ಸಹಜ ಸ್ವಭಾವದಿಂದ ನಡೆಯುವದರಿಂದಲೇ ಅವು ಕೀಳಾದವುಗಳೆಂದು ನಾವು ತಿಳಿಯುತ್ತೇವೆ. ಆದರೆ ಮನುಷ್ಯನು ತನ್ನ ಸಹಜ ಸ್ಥಿತಿಗಿಂತಲೂ ಉದಾತ್ತ ಸ್ಥಿತಿಗೆ ಹೋಗುವ ಜ್ಞಾನವನ್ನು ಪಡೆದಿರುವ ಮೂಲಕ ಆತನು ಹೆಚ್ಚಿನವನೆಂದೆಣಿಸಲ್ಪಡುತ್ತಾನೆ. ಭೌತಿಕ ವಿಷಯದಲ್ಲಿ ಉತ್ಕ್ರಾಂತಿಹೊಂದಿದರೆ ಮನುಷ್ಯನಿಗೆ ನಿಜವಾದ ಸುಖವು ದೊರೆಯುವದಿಲ್ಲ. ಭೌತಿಕ ವಿಷಯವು ಮಹಾತ್ವಾಕಾಂಕ್ಷೆಯನ್ನು ಪ್ರೇರೇಪಿಸುತ್ತದೆ. ಮಹಾತ್ವಾಕಾಂಕ್ಷಿಯಾದ ಮನುಷ್ಯನು ಸಾವಧಾನಿಯಾಗಿರಲಾರನು. ಆತನು ಸಾಹಸಿಯಾಗಿ ಆಶೆಯೆಂಬ ವೇಶಿಯ ಬೆನ್ನು ಹತ್ತಿ ಗಾಸಿಯಾಗುವನು. ಮನುಷ್ಯರು ಯಾವದಾದರೊಂದು ಹೊಸ ಶೋಧವನ್ನು ಮಾಡಿದರೆ ಆ ಶೋಧದ ಪರ್ಯವಸಾನವು ಅಲ್ಲಿಗೇ ಆಯಿತೆಂದು ಹೇಳಲಿಕ್ಕೆ ಬರುವದಿಲ್ಲ. ಮಾನವ ಬುದ್ಧಿಗೋಚರವಾದ ಶೋಧಗಳು ಇನ್ನೂ ಉಳಿದೇ ಇರುವವು. ಮಹತ್ವಾಕಾಂಕ್ಷಿಯಾದ ಮನುಷ್ಯನು ತಾನು ಮಾಡಿದ ಭೌತಿಕ ಶೋಧದಿಂದ ತೃಪ್ತನಾಗದೆ ಮತ್ತು ಹೊಸ ಶೋಧಗಳ ಬೆನ್ನುಹತ್ತಿ ಧಾವಿಸುತ್ತಿರುವದರಿಂದ ಆತನಿಗೆ ನಿಜವಾದ ಸಾವಧಾನವಿರುವದಿಲ್ಲ. ಆದರೆ ಆಧ್ಯಾತ್ಮಿಕ ಸಾವಧಾನವು ಮಿಗಿಲಾದುದು. ಮನಸ್ಸನ್ನು ಆಧ್ಯಾತ್ಮಿಕಾಭ್ಯಾಸದಿಂದ ಸುಪ್ರಸನ್ನವಾಗಿಟ್ಟುಕೊಳ್ಳಲಿಕ್ಕೆ ಬರುತ್ತದೆ. ಭಕ್ತಸ್ಥಲದಲ್ಲಿ ಮನುಷ್ಯನು ತನ್ನೊಳಗೆ ವಿಶ್ವಾಸ ಅಥವಾ ಶ್ರದ್ಧೆಯನ್ನು ಹುಟ್ಟಿಸಿಕೊಳ್ಳುತ್ತಾನೆ. ಆ ಶ್ರದ್ಧೆಯ ಸಹಾಯದಿಂದ ಮಾಹೇಶಸ್ಥಲದಲ್ಲಿ ನಿಷ್ಠೆಯುಳ್ಳಾತನಾಗಿ ನೇಮವ್ರತಗಳನ್ನು ಕೈಕೊಂಡು ತನ್ನ ಮನಸ್ಸನ್ನು ಸತ್ವಪರೀಕ್ಷೆಗೆ ಗುರಿಮಾಡು

ತ್ತಾನೆ. ಆ ಸತ್ವ ಪರೀಕ್ಷೆಯಲ್ಲಿ ತೇರ್ಗಡೆಯಾದ ಬಳಿಕ ಪ್ರಸನ್ನ ಕಳೆಯಿಂದ ಪರಿಶೋಭಿಸುತ್ತಾನೆ.

ಪ್ರಸಾದಿಯು ತನ್ನ ರಸನೆ ವಾಣಿ ಚಿತ್ತಗಳನ್ನು ಪ್ರಸನ್ನಗೊಳಿಸಿ ಬಂದ ಕಷ್ಟಗಳನ್ನು ನೀಗಿ ಯಾವಾಗಲೂ ಸಮಾಧಾನ ವೃತ್ತಿಯಿಂದ ಜೀವಿಸುವನು. ನಾಲಿಗೆಯನ್ನು ಪ್ರಸನ್ನಗೊಳಿಸುವದೆಂದರೆ ಅಭಕ್ಷ್ಯಭಕ್ಷಣಗಳನ್ನು ಅಪಾನ ಪೇಯಗಳನ್ನು ಮಾಡದಿರುವದು. ವಾಣಿಯನ್ನು ಪ್ರಸನ್ನಗೊಳಿಸುವದೆಂದರೆ ಅವಾಚ್ಯ ಶಬ್ದಗಳನ್ನಾಡದಿರುವದು. ಮೃದು ಮಧುರವಾದ ವಾಣಿಯಿಂದ ಅನ್ಯರ ಮನಸ್ಸಿಗೆ ಆಲ್ಹಾದವನ್ನೀಯುವದು. ಚಿತ್ತವನ್ನು ಪ್ರಸನ್ನಗೊಳಿಸುವದೆಂದರೆ ಚಿಂತಾತುರತೆಗಳಿಂದಲೂ ದುಃಖ ವಿಘ್ನಾದಿಗಳಿಂದಲೂ ಮನಸ್ಸು ಹೊಯ್ದಾಡದಂತೆ ಶಾಂತವಾಗಿರಿಸುವದು. ೧. ನಾಲಿಗೆಯು ಅತಿ ಚಾಪಲ್ಯವುಳ್ಳದ್ದು. ಅದು ಕಂಡ ಕಂಡದ್ದನ್ನೆಲ್ಲ ತಿನ್ನಲಿಕ್ಕೆ ಬೇಡುತ್ತದೆ. ಪ್ರಸಾದಿಯು ನಾಲಿಗೆಯ ಈ ದುಷ್ಟ ಪ್ರವೃತ್ತಿಯನ್ನು ತಡೆದು ಸಾತ್ವಿಕವಾದ ಆಹಾರವನ್ನು ಮಿತಿಯಿಂದ ಸೇವಿಸುವನು. ಮಿತಿಯಿಂದ ಆಹಾರ ಸೇವಿಸುವದೇ ಪ್ರಸಾದಿಯ ಲಕ್ಷಣವು. ತಾನು ಊಟ ಮಾಡುವ ಆಹಾರವನ್ನು ಅನ್ನವೆಂದು ಭಾವಿಸದೆ ಪ್ರಸಾದವೆಂಬ ಪೂಜ್ಯ ಭಾವನೆಯಿಂದ ಸೇವಿಸುವನು. ಹಾಗೆ ಮಾಡಿದರೆ ಚಾಪಲ್ಯ ಗುಣಗಳಡಗುವವು. ಇಂದ್ರಿಯಗಳ ಪ್ರವೃತ್ತಿಯು ಸದ್ವಿಷಯಗಳ ಕಡೆಗೆ ಗಮನಿಸುವದು. ರಸನೇಂದ್ರಿಯಕ್ಕೂ ಜನನೇಂದ್ರಿಯಕ್ಕೂ ಹೆಚ್ಚು ಸಂಬಂಧವಿದೆ. ನಾಲಿಗೆಯನ್ನು ಕಂಡಕಂಡದ್ದನ್ನೆಲ್ಲ ತಿನ್ನ ಹಚ್ಚಿದರೆ ಜನನೇಂದ್ರಿಯದ ದಬ್ಬಾಳಿಕೆಯು ಹೆಚ್ಚುವದು. ಜನನೇಂದ್ರಿಯ ಕಾಟದಿಂದ ವಿಷಯ ವ್ಯಾಮೋಹಿತನಾದ ಮನುಷ್ಯನು ಸದಾಚಾರ ಸದ್ವಿಷಯಗಳ ಕಡೆಗೆ ಗಮನಿಸದೆ ಪತಿತನಾಗುತ್ತಾನೆ. ಆದುದರಿಂದ ಪ್ರಸಾದಿಯು ಪತಿತನಾಗದೆ ಪಾವನನಾಗಬೇಕೆಂಬ ಸದಿಚ್ಛೆಯಿಂದಲೇ ಇಂದ್ರಿಯದ ದಬ್ಬಾಳಿಕೆಯನ್ನು ನಿರೋಧಿಸಲಿಕ್ಕೆ ಅತ್ಯಲ್ಪ ಆಹಾರವನ್ನು ಊಟ ಮಾಡುವನು. ಯಾರು ಅಲ್ಪ ಆಹಾರ ಸೇವಿಸುವರೋ ಅವರಿಗೆ ಕಾಮವಾಸನೆ ಕಡಿಮೆ. ಕೂಳಬಕ್ಕರು ಬಹಳ ವಿಷಯ ವ್ಯಾಮೋಹಿಗಳಿರುತ್ತಾರೆ. ಇಂದ್ರಿಯದ ಬಲಾತ್ಕಾರಗಳನ್ನು ತಡೆಯಲಿಕ್ಕೆ ಮಿತಾಹಾರ, ಅಲ್ಪಾಹಾರ, ಉಪವಾಸಾದಿ ವ್ರತಗಳನ್ನು ಹಿರಿಯರು ಗೊತ್ತು ಪಡಿಸಿದ್ದಾರೆ. ಉಪವಾಸ ಮಾಡುವ ಮನುಷ್ಯನಿಗೆ ಇಂದ್ರಿಯದ ಚಾಪಲ್ಯವೇ ಉಂಟಾಗುವದಿಲ್ಲ.

ಆದರೆ ಮನುಷ್ಯನಿಗೆ ದಿನಾಲು ಉಪವಾಸ ಮಾಡುವದು ಶಕ್ಯವಿಲ್ಲ. ಆದುದರಿಂದ ಆತನು ಅಲ್ಪ ಆಹಾರ ಸೇವಿಸಬೇಕು. ನಾವು ಊಟ ಮಾಡುವದಕ್ಕಾಗಿ ಜೀವಿಸಿರುವದಿಲ್ಲ. ಆದರೆ ನಮ್ಮ ಜೀವವಿರಬೇಕೆಂದು ಊಟ ಮಾಡುತ್ತಿದ್ದೇವೆ. ಆದುದರಿಂದ ಜೀವ ಧಾರಣೆಗೂ ಸಾವಧಾನಕ್ಕೂ ಅನುಕೂಲವಾಗಬೇಕೆಂದು ಪ್ರಸಾದಿಯು ಅಲ್ಪಾಹಾರ ಸೇವಿಸುವನು. 'ಲಿಂಗ ಪ್ರಸಾದದ ನೆನಹಿನಿಂದ ಭೋಗಿಸುವದೇ ಅರ್ಪಿತ. ಅನರ್ಪಿತ ಬಿಡುವದು ನೋಡಾ ಅಪ್ರಮಾಣ ಕೂಡಲ ಸಂಗಮದೇವಾ' ಎಂಬುದಾಗಿ ಒಬ್ಬ ವಚನಕಾರರು ಹೇಳಿದ್ದಾರೆ. 'ಈಶ ಪ್ರಸಾದವನು ಸೋಸದಲೆ ತಾ ಕೊಳ್ಳೆ ಶಾಶ್ವತದ ಪದವಿ ತಾ ನಕ್ಕು ಜಗಕೆಲ್ಲ ಈಶ್ವರನೆ ಅಕ್ಕು ಸರ್ವಜ್ಞ ಎಂದು ಸರ್ವಜ್ಞ ಮೂರ್ತಿಯು ಹೇಳಿದ್ದಾನೆ. ತಾಬಂಡಿಯಲ್ಲಿ ಸ್ವಲ್ಪೂ ಆಹಾರವನ್ನು ಬಿಡಬಾರದೆಂದರೆ ತೀರ ಸ್ವಲ್ಪ ಆಹಾರವನ್ನುಣ್ಣಬೇಕೆಂಬರ್ಥ. ತೀರ ಸ್ವಲ್ಪ ಉಣ್ಣುವವನು ತಾಬಂಡಿಯಲ್ಲಿ ಉಳಿಸುವ ಬಗೆ ಹೇಗೆ? ಇದರ ಮರ್ಮವನ್ನರಿಯದೆ ಅನಾಢ್ಯರಾದ ಕೆಲವು ನಾಮಧಾರಿ ಪ್ರಸಾದಿಕರು ತಾಬಂಡಿಯಲ್ಲಿ ವಿಶೇಷ ನೀಡಿಸಿಕೊಂಡು ಹೆಚ್ಚಾಗಲು ಪ್ರಸಾದಿಯು ತಾಬಂಡಿಯ ಮೇಲೆ ಬಿದ್ದು ಸಾಯಬೇಕೆಂದು ಮತ್ತೂ ಊಟ ಮಾಡಲು ಹೋಗುವರು. ಇಂಥ ಕೂಳಬಕ್ಕರು ಪ್ರಸಾದಿಗಳಲ್ಲ. ಮೊದಲು ಹೆಚ್ಚು ನೀಡಿಸಿಕೊಳ್ಳುವದೇ ತಪ್ಪು. ಹೆಚ್ಚು ನೀಡಿಸಿಕೊಂಡು ಕಕ್ಕಸಬಡುವಂತೆ ಉಂಬುವದು ಎರಡನೆಯ ತಪ್ಪು. ಒಂದು ವೇಳೆ ಹೆಚ್ಚಾದರೆ ತೆಗೆದಿಡಬೇಕು. ತಾಬಂಡಿಯಲ್ಲಿ ನೀಡಿದ್ದನ್ನು ತೆಗೆಯಲಿಕ್ಕೆ ಬರುವದಿಲ್ಲವೆನ್ನುವದೂ ಅದನ್ನು ಇತರರಿಗೆ ಕೊಡಲಿಕ್ಕೆ ಬರುವದಿಲ್ಲವೆನ್ನುವದೂ ತಮ್ಮ ನಾಲಿಗೆಗೆ ಹೆಚ್ಚು ಚಾಪಲ್ಯಕೊಡಬೇಕೆಂಬ ದುರುದ್ದೇಶದ ನೇಮಕ್ಕೆ ಅನ್ವಯಿಸುತ್ತಾರೆ. ಇದು ದುರ್ಬಲರ ಅಜ್ಞಾನದ ಆಲಾಪವು. ಹೆಚ್ಚು ನೀಡಿದರೂ ಕೂಡ ಅಲ್ಪವನ್ನೇ ಸೇವಿಸುವವನೇ ಪ್ರಸಾದಿಯು. ಹೆಚ್ಚಿಗೆ ನೀಡಿಸಿಕೊಳ್ಳಬಾರದೆಂಬುವದಕ್ಕಾಗಿಯೇ ತಾಬಂಡಿಯಲ್ಲಿ ಬಿಡಬಾರದೆಂಬ ನೇಮವಿರುತ್ತದೆ. ಆದರೆ ಹೆಚ್ಚಿಗೆ ನೀಡಿಸಿಕೊಂಡು ಬಿಡಲಿಕ್ಕೆ ಬರುವದಿಲ್ಲವೆಂದು ಕುತ್ತಿಗೆಮಟ ಉಂಬುವದು ಪ್ರಸಾದಿಯ ಲಕ್ಷಣವಲ್ಲ. ಇದೇ ಮೇರೆಗೆ ಎಡೆಯಲ್ಲಿ ಅಭಕ್ಷ್ಯ ವಸ್ತುಗಳೇನಾದರೂ ಕಂಡರೆ ಅವುಗಳನ್ನು ಪ್ರಸಾದಿಯು ತೆಗೆದೊಗೆಯಬೇಕೇ ವಿನಾ ಸರ್ವಥಾ ಸೇವಿಸಲಾಗದು. 'ಪ್ರಸಾದಿಯಾದರೆ ಒಡಲಗುಣ ವಿರಹಿತನಾಗಿರಬೇಕು' ಎಂದು ಶ್ರೀ ಚೆನ್ನಬಸವೇಶ್ವರರು ಅಪ್ಪಣೆ ಕೊಡಿಸಿದ್ದಾರೆ.

ಮಿತದಿಂದ ಆಹಾರವನ್ನು ಸೇವಿಸುವಂತೆ ಪ್ರಸಾದಿಯು ಮಿತದಿಂದ ಮಾತು ಬಳಸಬೇಕು. 'ಮಹಾತ್ಮಾನಃ ಖಲು ಮಿತಭಾಷಿಣಃ' ಎಂದು ಹೇಳಿದೆ. ಮಹಾತ್ಮರು ಯಾವಾಗಲೂ ಸ್ವಲ್ಪ ಮಾತನಾಡುತ್ತಿರುತ್ತಾರೆ. ಬಹು ಭಾಷಿಯು ಬಹುಶಃ ವಂಚಕನಿರುತ್ತಾನೆ. ಪ್ರಸಾದಿಯು ಅಲ್ಲದ ಸಲ್ಲದ ಗೊಳ್ಳು ಮಾತುಗಳನ್ನೆಂದಿಗೂ ನಿರರ್ಥಕವಾಗಿ ಬೆಳೆಯಿಸಲಾರನು. ಮಾತುಗಳನ್ನು ಹರಿಬಿಡುವದಕ್ಕಿಂತಲೂ ತಡೆಯುವದರಿಂದ ಎಷ್ಟೋ ಪ್ರಸಂಗಗಳಲ್ಲಿ ವಿಹಿತವೇ ಆಗುತ್ತದೆ ಆದುದರಿಂದ 'ಮೌನಂ ಪರಂ ಭೂಷಣಂ' ಎಂದು ಹೇಳಿದ್ದಾರೆ. ಪ್ರಸಾದಿಗೆ ಮೌನವು ಪರಮ ಭೂಷಣವು. 'ಮಾತಿಂಗೆ ಮಾತು ಮಥಿಸಲ್ಕೆ ವಿಧಿಬಂದು ಆತುಕೊಂಡಿಹುದು ಸರ್ವಜ್ಞ'— ಎಂಬ ನೀತಿಯ ವಚನವಿದೆ. ನಾವು ಒಬ್ಬರಿಗೊಬ್ಬರು ವಿರೋಧದ ಮಾತುಗಳನ್ನು ಬೆಳೆಯಿಸಿದರೆ ಅದರ ಪರಿಣಾಮವು ಎಲ್ಲಿಗೆ ಹೋದೀತೆಂಬದರ ನಿಯಮವಿಲ್ಲ. ಒಂದು ನಾಲಿಗೆಯಿಂದ ಮಹದನರ್ಥಗಳು ಸಂಭವಿಸಿರುವವು. ನಾಲಿಗೆಯ ದುರುಪಯೋಗದಿಂದ ಒಮ್ಮೊಮ್ಮೆ ಜೀವ ಹೋದ ಉದಾಹರಣೆಗಳೆಷ್ಟೋ ಉಂಟು. ಆದುದರಿಂದಲೇ ಸರ್ವಜ್ಞ ಮೂರ್ತಿಯು "ಕಣ್ಣು ನಾಲಿಗೆ ಮನವು। ನನ್ನವೆಂದೆನಬೇಡ। ಅನ್ಯರು ಕೊಂದರೆನಬೇಡ ಇವು ಮೂರು। ನಿನ್ನನೇ ಕೊಲ್ಲುವವು ಸರ್ವಜ್ಞ" ಮೊದ ಮೊದಲು ಮನುಷ್ಯನಿಗೆ ಹೆಚ್ಚು ಮಾತು ಬೆಳೆಯಿಸಬೇಕೆಂಬ ಇಚ್ಛೆಯುಂಟಾಗುವದು. ನಂತರ ಮಾತಿನ ಪೇಚಿನಲ್ಲಿ ಸಿಲ್ಕಿ ಒದ್ದಾಡಿ ತಲೆ ಒಡಕೊಂಡ ಬಳಿಕ ಬಹಳ ಮಾತಿನಲ್ಲಿ ಅರ್ಥವಿಲ್ಲ. ಮಿತಿಯಿಂದ ಮಾತನಾಡಬೇಕೆಂದು ಆತನಿಗೆ ಹೊಳೆಯುವದುಂಟು. ಮುಂದೆ ಬರಬರುತ್ತ ಒಳ್ಳೆಯ ಮಾತುಗಳನ್ನಾಡಿದರೆ ನೆಟ್ಟಗೆನಿಸುವದು. ಕೊನೆಗೆ ಮಾತನಾಡದೆ ಸುಮ್ಮನೆ ಮೌನಿಯಾಗಿದ್ದು ತನ್ನ ಮನೋಗತವನ್ನು ವ್ಯಕ್ತಗೊಳಿಸುವದೊಳಿತೆಂಬ ಭಾವನೆಯಾಗುವದು. (*Silence is the golden eloquence*) ಮಹೇಶಸ್ಥಲದವನು ಮಾತಿನ ಸುರಿಮಳೆ ಸುರಿಸಿದರೂ ಪ್ರಸಾದಿಯು ಮಿತಭಾಷಿಯಾಗಿರುವನು; ಒಮ್ಮೊಮ್ಮೆ ಮೌನಿಯಾಗಿ ಪ್ರಸನ್ನ ಮುಖಮುದ್ರೆಯಿಂದ ಪರಿಶೋಭಿಸುವನು. ಇಂದ್ರಿಯಗಳ ಚಾಪಲ್ಯವನ್ನು ತಡೆಯುವದಕ್ಕೆ ಮಿತಾಹಾರವೆಷ್ಟು ಅವಶ್ಯಕವೋ ಅಷ್ಟೇ ಮನಸ್ಸಿನ ಉದ್ವೇಗವನ್ನು ನಿರೋಧಿಸುವದಕ್ಕೆ ಮಿತಭಾಷೆಯು ಅತ್ಯಾವಶ್ಯಕವಾಗಿರುವದು.

ಕೇವಲ ಮಿತಭಾಷಿಯಾಗಿದ್ದರೆ ಪ್ರಸಾದಿಯ ಕರ್ತವ್ಯವು ಪೂರೈಸಿದಂತಾಗಲಿಲ್ಲ. ಮಿತಭಾಷೆಯೊಂದಿಗೆ ಮೃದುಭಾಷೆಯೂ ಆತನ ನಾಲಿಗೆಯ ತುದಿಯ ಮೇಲೆ ನಲಿದಾಡುತ್ತಿರಬೇಕು. 'ಮೃದು ವಚನಂಗಳೇ ಸಕಲ ಜಪಂಗಳಯ್ಯಾ. ಮೃದುವಚನಂಗಳೇ ಸಕಲ ತಪಂಗಳಯ್ಯಾ, ಎಂಬುದಾಗಿಯೂ 'ಬನ್ನಿ ಬಂದಿರಿ, ಹದುಳವಿದ್ದಿರಿ ಎಂದರೆ ನಿಮ್ಮ ಮೈ ಸಿರಿ ಹಾರಿಹೋಹುದೇ? ಒಡನೆ ನುಡಿದರೆ ಸಿರಿಹೊಟ್ಟೆಯೊಡೆಯುವದೇ? ಎಂಬುದಾಗಿಯೂ ಶ್ರೀ ಬಸವಣ್ಣನವರು ಹೇಳಿದ್ದಾರೆ. ಮಧುರವಾದ ವೀಣಾನಾದದಿಂದ ಶ್ರೋತೃಗಳ ಮನಸ್ಸು ಆಲ್ಹಾದಬಡುವಂತೆ ಪ್ರಸಾದಿಯ ವೀಣಾವಾಣಿಯು ಶ್ರೋತೃವೃಂದಕ್ಕೆ ಆನಂದವನ್ನೀಯುವದು. ನಾವು ಅನ್ಯರಿಗೆ ಕಠೋರ ಶಬ್ದಗಳನ್ನಾಡಿದರೆ ಅನ್ಯರು ನಮಗೆ ತಿರುಗಿ ಕರ್ಕಶ ಶಬ್ದಗಳನ್ನಾಡುವರು. ಆದರೆ ನಾವು ಅನ್ಯರಿಗೆ ಬೆಲ್ಲದಂಥ ಮಾತುಗಳನ್ನಾಡಿದರೆ ಅವರು ಸಂತುಷ್ಟರಾಗಿ ನಮಗೆ ತಿರುಗಿ ಮೃದುನುಡಿಗಳನ್ನೇ ನುಡಿಯುವರು. ಅದನ್ನು ಕೇಳಿ ನಮ್ಮ ಮನಸ್ಸು ಹರ್ಷಗೊಳ್ಳುತ್ತದೆ. ಪ್ರಸಾದಿಯು ತನ್ನ ಮನಸ್ಸನ್ನು ಸಂತೋಷದಲ್ಲಿಟ್ಟುಕೊಳ್ಳಬೇಕಾಗಿರುವದರಿಂದ ಆತನು ಮಿತಭಾಷಿಯೂ ಮೃದುವಚನವುಳ್ಳಾತನೂ ಆಗಿರುವದು ಅವಶ್ಯಕ.

ನಾವು ನಾಲಿಗೆಯನ್ನು ಬಿಗಿಹಿಡಿದು ಅಭಕ್ಷ್ಯ ಹಾಗೂ ಭವಿಗಳ ವಸ್ತುಗಳನ್ನು ಸೇವಿಸದಂತೆಯೂ ಅವಾಚ್ಯ ಶಬ್ದಗಳನ್ನಾಡದಂತೆಯೂ ಅದನ್ನು ಶುದ್ಧವಾಗಿಟ್ಟುಕೊಳ್ಳಬಹುದು. ಆದರೆ ಮನಸ್ಸೆಂಬ ಮರ್ಕಟವು ಸಮಾಧಾನದಿಂದಿರುವ ಬಗೆ ಹೇಗೆ? ಮಹೇಶಸ್ಥಲದ ನೇಮವ್ರತಗಳ ಅಭ್ಯಾಸದಿಂದ ಮನಸ್ಸು ಬಹುಮಟ್ಟಿಗೆ ಪ್ರಶಾಂತವಾಗಿರುತ್ತದೆ. ಆದುದರಿಂದ ಮನವೆಂಬ ಸರೋವರವು ವಿಘ್ನಗಳೆಂಬ ತೆರೆಗಳಿಂದ ಅಲ್ಲೋಲ ಕಲ್ಲೋಲವಾಗದೆ ಶಾಂತತೆಯಿಂದಿರುವದು. ತನ್ನ ಸಂಪತ್ತು ಹಾಳಾಗಲಿ, ಹೆಂಡರುಮಕ್ಕಳು ಸಾಯಲಿ, ತನಗೆ ಆಧಿವ್ಯಾಧಿಗಳು ಪ್ರಾಪ್ತಿಸಲಿ, ಅವೆಲ್ಲವುಗಳನ್ನು ಪರಮಾತ್ಮನು ತನ್ನ ಪರೀಕ್ಷೆಗಾಗಿಯೇ ತಂದಿರುವನೆಂದು ಸಮಾಧಾನಚಿತ್ತದಿಂದಿರುವನು. ಚಿಂತೆಯಿಂದ ಮರುಗಲಾರನು. ಈಶಯತ್ನಕ್ಕೆ ಉಪಾಯವಿಲ್ಲ. ಈಶ ನಡೆಯಿಸಿದಂತೆ ನಾವು ನಡೆಯಬೇಕಲ್ಲವೆ? ಎಂದು ತನ್ನ ದುಃಖಸಂಕಟಗಳನ್ನೆಲ್ಲ ಈಶ್ವರನ ಮೇಲೆಯೇ ಆರೋಪಮಾಡಿ ತಾನು ಸಮಾಧಾನಪಡುವನು. ಮನುಷ್ಯನಿಗೆ ತಾನು ತನ್ನದು

ಎಂಬ ಅರಿವು ಇರುವತನಕ ಆ ವಸ್ತುವು ನಷ್ಟವಾದೊಡನೆ ವ್ಯಸನವಾಗುತ್ತದೆ. ನನ್ನದಲ್ಲ; ಪರಮಾತ್ಮನದೆಂಬ ವಿಚಾರವನ್ನು ಬಲಿಸುತ್ತ ನಡೆದ ಪ್ರಸಾದಿಗೆ ದುಃಖವೆಲ್ಲಿಯದು? ಒಬ್ಬ ಎಂಜಿನ ಡ್ರಾಯಿವ್ಹರನ ಕಾಲು ಯಂತ್ರದಲ್ಲಿ ಸಿಕ್ಕು ಮುರಿದಿತ್ತು. ಆಗ ಆತನು ಪರಮಾತ್ಮನು ದಯಾಳುವು. ನನಗೆ ೨ ಬೂಟು ಕೊಳ್ಳುವದಕ್ಕೆ ಹೆಚ್ಚು ವೆಚ್ಚ ಬೀಳುತ್ತದೆಂದು ನನ್ನದೊಂದು ಕಾಲು ಮುರಿಯುವಂತೆ ಮಾಡಿ ೧ ಬೂಟಿನ ವೆಚ್ಚವನ್ನು ಳಿಸಿದನು ಎಂದನು. ಇದೇ ಅಲ್ಲವೆ ಸಮಾಧಾನ? ಒಬ್ಬ ಗೃಹಸ್ಥನ ಮನೆಗೆ ಬೆಂಕಿಹತ್ತಿ ಅದು ಸುಟ್ಟು ಬೂದಿಯಾಯಿತು. ಆದರೆ ಆತನ ೩ ಮಂದಿ ಮಕ್ಕಳು ದೈವಯೋಗದಿಂದ ಪಾರಾದರು. ಆ ಗೃಹಸ್ಥನು ನನ್ನ ಮನೆಯು ಸುಟ್ಟುಹೋದರೂ ಚಿಂತೆಯಿಲ್ಲ. ನನ್ನ ದಿವ್ಯ ರತ್ನಗಳು (ಮಕ್ಕಳು) ಉಳಿದದ್ದಕ್ಕಾಗಿ ಪರಮಾತ್ಮನಿಗೆ ನಾನು ಬಹಳೇ ಕೃತಜ್ಞನಾಗಿದ್ದೇನೆ ಎಂದನು. ಪ್ರಸಾದಿಯಾದರೂ ಎಂಥ ಕಷ್ಟಗಳು ಬಂದರೂ ಪರಮಾತ್ಮನಿಗೇ ಮರೆಹೊಕ್ಕು ಸಮಾಧಾನಪಡೆಯುವನು.

ಪ್ರಸಾದಿಯ ಮೊಗವು ಹಾಳುಸುರಿಯುತ್ತಿರುವದಿಲ್ಲ. ಅದು ಕುಲುಕುಲು ನಗೆಯಿಂದ ಪ್ರಫುಲ್ಲಿತವಾಗಿರುತ್ತದೆ. ಚಿತ್ತದಲ್ಲಿ ಉಲ್ಲಾಸದ ಕಳೆಯು ತುಂಬಿ ತುಳುಕುತ್ತಿರುತ್ತದೆ. ಜೋಲುಮೋರೆಹಾಕಿಕೊಂಡು ಕೂಡ್ರುವದು ಪ್ರಸಾದಿಯ ಲಕ್ಷಣವಲ್ಲ. ಪ್ರಸಾದಿಯು ಸತ್ಯವಚನ ಸರಳಭಾವದಿಂದ ಕೂಡಿದ ಶಾಂತಮೂರ್ತಿಯಾಗಿರುವನು. ಇಂಥ ಪ್ರಸನ್ನ ಚಿತ್ತವುಳ್ಳವರ ಹತ್ತಿರ ಹೋದವರಿಗೂ ಸಂತೋಷವುಂಟಾಗುತ್ತದೆ. ಅಂತೆಯೇ ಪ್ರಸನ್ನಚಿತ್ತರ ದರ್ಶನ, ಸ್ಪರ್ಶನ, ಸಂಭಾಷಣಾದಿಗಳಿಂದ ಜನರು ತಮ್ಮ ಮನೋವ್ಯಾಕುಲತೆಯನ್ನು ಹೋಗಲಾಡಿಸಿಕೊಳ್ಳುವರು. ಶ್ರೀಭಗವದ್ಗೀತೆಯಲ್ಲಿ "ಪ್ರಸಾದೇ ಸರ್ವದುಃಖಾನಾಂ ಹಾನಿರಸ್ಯೋಪಜಾಯತೇ" ಅಂದರೆ ಪ್ರಸನ್ನತೆಯಿಂದ ಎಲ್ಲ ದುಃಖಗಳೂ ಹಿಂಗಿಹೋಗುವವೆಂದು ಹೇಳಿದೆ. ಈ ಮೇರೆಗೆ ಪ್ರಸನ್ನಜಿಹ್ವೆ, ಪ್ರಸನ್ನವಾಣಿ, ಪ್ರಸನ್ನ ಚಿತ್ತಗಳುಳ್ಳ ಸುಪ್ರಸಾದಿಯೇ ಜಗತ್ತಿನಲ್ಲಿ ಧನ್ಯನು.

ಪ್ರಸಾದಿಯು ತಾನು ಮಾಡುವಂಥ ಪ್ರತಿಯೊಂದು ಕೆಲಸವನ್ನು ಈಶ್ವರಾರ್ಪಣಬುದ್ಧಿಯಿಂದ ಮಾಡುವನು. ನಾನು ಮಾಡಿದೆ ನಾನು ಬಿಟ್ಟೆ ಎಂಬ ಅಹಂಭಾವವುಳ್ಳವನಾಗಿರುವದಿಲ್ಲ. 'ಯತ್ಕರೋಷಿ ಯದಶ್ನಾತಿ ಯಜ್ಜುಹೋಷಿ ದದಾಸಿ ಯತ್ ಯತ್ತಪಸ್ಯಸಿಕೌಂತೇಯ ತತ್ತ

ದೇವ ಮುದರ್ಪಣಂ ಎಂಬೀ ವಾಕ್ಯವಾದರೂ ಪ್ರಸಾದತತ್ವವನ್ನೇ ಪ್ರತಿಪಾದಿಸುತ್ತದೆ. ಅದರಂತೆಯೇ ಪತ್ರಂ ಪುಷ್ಪ ಫಲಂ ತೋಯಂ ಯೋಮೇ ಭಕ್ತ್ಯಾ ಪ್ರಯಚ್ಛತಿ" ಎಂಬ ಗೀತಾಧ್ಯಾಯವು ಕೂಡ ಪ್ರಸಾದಿಸ್ಥಲಕ್ಕೆ ಅನ್ವಯಿಸುತ್ತದೆ. ಪ್ರಸಾದಿಯು ತನ್ನ ಅಂಗಸುಖಕ್ಕಾಗಿ ಉಣ್ಣುವದು, ಉಡುವದು, ತೊಡುವದು ಈ ಮೊದಲಾದ ಕಾರ್ಯಗಳನ್ನು ಮಾಡುವದಿಲ್ಲ. ಆದರೆ ಅವೆಲ್ಲವನ್ನು ಲಿಂಗತೃಪ್ತಿಗಾಗಿ ಮಾಡುವನು. ತನಗಾಗಿ ಮಾಡುವವರು ಸಂಕಟಬಂದಾಗ ವ್ಯಥೆಮಾಡುತ್ತಾರೆ. ಪರಮಾತ್ಮನಿಗಾಗಿ ಮಾಡುವವರು ಸುಖಿಗಳಾಗುತ್ತಾರೆ. ಮಾಡುವವನೂ ಮಾಡಿಸುವಾತನೂ ಪರಮಾತ್ಮನೇ. ಆತನ ಪ್ರೇರಣೆಯಿಲ್ಲದೆ ಒಂದು ಹುಲ್ಲಕಡ್ಡಿಯು ಕೂಡ ಅಲ್ಲಾಡುವದಿಲ್ಲ. ಅಂದ ಮೇಲೆ ಆತನು ಸುಖಕೊಟ್ಟರೆ ಹಿರಿಹಿರಿ ಹಿಗ್ಗುವದೇಕೆ? ದುಃಖ ಕೊಟ್ಟರೆ ಕಳವಳಪಡುವದೇಕೆ? ಹೀಗೆಂದು ಪ್ರಸಾದಿಯು ತನ್ನ ಸರ್ವ ಕರ್ಮಗಳ ಫಲಾಫಲಗಳನ್ನು ಜಯಾಪಜಯಗಳನ್ನು ಆ ಪರವಸ್ತುವಿನಮೇಲೆಯೇ ಹಾಕಿ ನಿತ್ಯ ತೃಪ್ತಿಯಿಂದ ವಿರಾಜಿಸುವನು.

ತಾನು ಪ್ರಸಾದಿಯೆಂದು ಹೇಳಿ ಭಕ್ತಾದಿಗಳ ಮನೆಯಲ್ಲಿ ಸುಗ್ರಾಸಭೋಜನಗಳನ್ನು ಹೊಡೆಯುತ್ತ ಕುಳಿತುಕೊಳ್ಳುವವನಿಗೆ ಪ್ರಸಾದಿಯೆನಲಾಗದು. ನಾಲಿಗೆಯ ರುಚಿಗಾಗಿ ಪ್ರಸಾದಿಯೆಂಬ ಡಂಭದಿಂದ ಒಬ್ಬರ ಹಂಗಿನ ಅನ್ನವಸ್ತ್ರಗಳಿಗೆ ಬಾಯೊಡ್ಡುವ ಲಜ್ಜೆಗೇಡಿಯು ಪ್ರಸಾದಿಯಲ್ಲ. ತನ್ನ ದೇಹದ ಇಲ್ಲವೆ ಬುದ್ಧಿಯ ಪರಿಶ್ರಮದ ವಿನಾ ಅನ್ಯರು ಕೊಟ್ಟ ಒಡವೆಗಳನ್ನು ಪ್ರಸಾದಿಯು ಎಂದಿಗೂ ಸ್ವೀಕರಿಸಲಾರನು. ಹಂಗಿನರಮನೆಗಿಂತ ಇಂಗಡದ ಗುಡಿಲೇಸು। ಭಂಗಗೆಟ್ಟುಂಬ ಬಿಸಿಯನ್ನಕ್ಕಿಂತಲೂ ತಂಗುಳವೆ ಲೇಸು ಸರ್ವಜ್ಞ॥ ಎಂಬ ಮುತ್ತಿನಂಥ ಮಾತನ್ನು ಪ್ರಸಾದಿಯು ಸರ್ವಥಾ ಮರೆಯಲಾಗದು. ಲಿಂಗತೃಪ್ತಿಗಾಗಿ ಪ್ರಸಾದ ಸೇವಿಸುವವನು ರುಚಿ ದುರಾಶೆಗೆಳಿಸಲಾರನು. ಶ್ರೀ ಪ್ರಭುದೇವರು ಬಸವೇಶಮಂತ್ರಿಯ ಮನೆಯ ಮೃಷ್ಟಾನ್ನಕ್ಕಿಂತಲೂ ಮಾದಾರ ಚನ್ನಯ್ಯನ ಮನೆಯ ಅಂಬಲಿಯನ್ನು ಬಹು ಸಂತೋಷದಿಂದ ಭುಂಜಿಸಲಿಲ್ಲವೇ? ಶ್ರೀಕೃಷ್ಣನು ದುರ್ಯೋಧನನ ಅರಮನೆಯ ಸುಗ್ರಾಸಭೋಜನವನ್ನು ಧಿಕ್ಕರಿಸಿ ವಿದುರನ ಮನೆಯ ಅಂಬಲಿಯನ್ನು ಸುರಿಯಲಿಲ್ಲವೇ? ಭಕ್ತಿಯಿಂದ ಅಂಬಲಿ ನೀಡಿದರೂ ಅದು ಪ್ರಸಾದವೇ. ಭಕ್ತಿಯಿಲ್ಲದೆ ಕಾಟಕಳೆದುಕೊಳ್ಳುವದಕ್ಕಾಗಲಿ, ಕಾರ್ಯಸಾಧನೆಯಿಂದಾಗಲಿ ಅಹಂಕಾರ

ದಿಂದಾಗಲಿ ಪಂಚಪಕ್ವಾನ್ನ ನೀಡಿದರೂ ಅದು ಪ್ರಸಾದವಾಗಲಾರದು. ಶ್ರೀ ನಾಲತವಾಡದ ಶಿವಶರಣರು ಜೋಳದ ಕಾಳುಗಳನ್ನು ಆಯ್ದು ತಂದು ಪಾಕಮಾಡಿ ಸೇವಿಸುತ್ತಿದ್ದರು. ಒಬ್ಬ ಶಿವಶರಣರು ಹಣಜಿಯ ಕಸವನ್ನು ಹಿಂಡಿ ಅದನ್ನು ಕುಡಿದು ಜೀವಿಸುತ್ತಿದ್ದರು. ಈಗ್ಯೂ ಸಹ ಎಷ್ಟೋ ತಪಸ್ವಿಗಳು ಕಾಡಸೊಪ್ಪು ಬೇಯಿಸಿ ಅದನ್ನು ಸೇವಿಸಿ ಅನುಷ್ಠಾನದಲ್ಲಿ ನಿರತರಾಗಿರುವರು. ನಿಜವಾದ ಪ್ರಸಾದಿಗಳು ತಮಗೆ ಇಂಥ ಹದೇಬೇಕೆಂದು ಸಾಧಿಸಲಾರರು. ಹಾಗೆ ಮಾಡುವವರು ಕಾಮಿಗಳು. ಪ್ರಸಾದಿಗಳು ಉತ್ತಮೋತ್ತಮ ಪಕ್ವಾನ್ನಗಳನ್ನು ಸೇವಿಸಲೇಬಾರದೆಂತಲ್ಲ. ಆದರೆ ಪಂಚಪಕ್ವಾನ್ನಗಳನ್ನು ಸೇವಿಸುವಾಗ ಅವರೆಷ್ಟು ಆನಂದಪಡುವರೋ ಅಷ್ಟೇ ಆನಂದದಿಂದ ಒಣರೊಟ್ಟಿಯನ್ನು ಸಹ ಪ್ರಸಾದವೆಂದು ಸೇವಿಸುತ್ತಿರಬೇಕು.

ಈಗ ನಮ್ಮ ಸಮಾಜದಲ್ಲಿ ನಾಲಿಗೆಯ ರುಚಿಗೆ ಹಂಬಲಿಸುವ ಕುನ್ನಿಗಳೇ ಪ್ರಸಾದಿಗಳೆಂಬ ದೊಡ್ಡ ನಾಮಾಂಕಿತವನ್ನಿಟ್ಟುಕೊಂಡು ಮಡಿಹುಡಿಯೆಂಬ ಡಾಂಭಿಕ ವೃತ್ತಿಯಿಂದ ಪರಾನ್ನವನ್ನು ಭುಂಜಿಸುತ್ತಿರುವದು ಶೋಚನೀಯವೇ ಸರಿ. ಸೊಗಸಾಗಿ ಊಟಮಾಡುವದೇ ಪ್ರಸಾದಿಸ್ಥಲದ ಲಕ್ಷಣವಲ್ಲ. ಪ್ರಸನ್ನವಾಣಿ, ಪ್ರಸನ್ನಚಿತ್ತ, ಸಾವಧಾನ, ತಾಳ್ಮೆ, ಶಾಂತಿ ಮುಂತಾದ ಅಮೌಲ್ಯ ಗುಣಗಳುಳ್ಳಾತನೇ ಪ್ರಸಾದಿಯು. ಹಾಗಿಲ್ಲದಿದ್ದರೆ ಬರೇ ಕೂಳಬಕ್ಕನಿಗೇನೇ ಪ್ರಸಾದಿಸ್ಥಲವನ್ನು ಧಾರೆಯೆರೆದು ಬಿಡಬೇಕಾದೀತು. ಪ್ರಸಾದವನ್ನು ಮಿತಿಯಿಂದ ಸೇವಿಸುವದೂ, ಕ್ರಿಯಾದೀಕ್ಷೆಯನ್ನು ಹೊಂದುವದೂ, ಮಡಿಹುಡಿಮಾಡುವದೂ ನಮ್ಮ ಅಭೀಷ್ಟಿತವಾದ ಸಂತೋಷ ಸಾವಧಾನಗಳನ್ನು ದೊರಕಿಸುವದಕ್ಕೆ ಸಾಧನಗಳಾಗಿವೆ. ಆದರೆ ಡಾಂಭಿಕ ಪ್ರಸಾದಿಗಳು ಈ ಅಮೌಲ್ಯಗುಣಗಳಿಗೆ ಮಹತ್ವಕೊಡದೆ ಬರೆ ಒಣವಾದ ಮಡಿಹುಡಿಯೆಂಬ ಭ್ರಾಂತಿಯಲ್ಲಿ ಮುಳುಗಿ ಕಳವಳಪಡುತ್ತಿದ್ದಾರೆ. ವೀರಶೈವರಲ್ಲಿ ಪ್ರಸಾದತತ್ವವು ಅತ್ಯಂತ ಶ್ರೇಷ್ಠವಾದುದು. ಪ್ರಸಾದವನ್ನು ಭವಿಗಳ ಕಣ್ಣಿಗೆ ತೋರಗೊಡದೆ ಒಳಗಿಂದೊಳಗೆ ಸೇವಿಸಬೇಕೆಂದಲ್ಲ. ಭವಿಗಳ ವೃಷ್ಟಿದೋಷದಿಂದುಂಟಾಗುವ ದುರ್ಗುಣಾಂಶವನ್ನಳಿದು ಪರಿಶುದ್ಧ ಗುಣಗಳನ್ನಳವಡಿಸಿಕೊಂಬುವದಾಗಿರುತ್ತದೆ. ಜಗತ್ತಿನಲ್ಲಿ ಅಜ್ಞಜನಸಮಾಜವೇ ದೊಡ್ಡದಿರುವದರಿಂದ ಅವರಿಗೆ ಬಾಹ್ಯಾಡಂಬರವೇ ಆಕರ್ಷಕವಾಗಿರುತ್ತದೆ. ಆದುದರಿಂದ ಅದೇ

ಹೆಚ್ಚೆಂದು ಭಾವಿಸುತ್ತಾರೆ. ಆದರೆ ಅಂತರಂಗವು ಅವರ ಅಲ್ಪಮತಿಗೆ ಗೋಚರವಾಗದಿರುವದರಿಂದ ಅದಕ್ಕೆ ಅಷ್ಟು ಮಹತ್ವಕೊಡುವದಿಲ್ಲ. ಇಂಥ ದಡ್ಡರ ಹೆಡ್ಡತನವನ್ನು ಸಾಧಿಸಿ ಕೆಲವು ಪ್ರಸಾದಿಗಳು ಗೂಳಿಯಂತೆ ಮೇಯುತ್ತಿರುವರು. ನಮ್ಮ ಧರ್ಮದಲ್ಲಿ ಆಧ್ಯಾತ್ಮಿಕ ಕ್ರಾಂತಿಯಾಗದ ಹೊರತು ಬಹಿರಂಗಕ್ಕೆ ಮರುಳಾಗುವ ಭ್ರಮೆಯು ಪಂಡಿತ ಪಾಮರರನ್ನು ಸಹ ಬಿಟ್ಟಗಲುವದಿಲ್ಲ.

ಪ್ರಸಾದಿಯು ಅಶನಕ್ಕಾಗಿ ಹಸಿಯುವದಿಲ್ಲ. ಮಹಾತ್ಮರ ವಚನಾಮೃತ ಪಾನಕ್ಕಾಗಿ ಹಸಿಯುವನು. ಪ್ರಸಾದಿಯು ಉಂಡು ಉಪವಾಸಿಯಾಗಿರುವನು. ಅಂದರೆ ಹೊಟ್ಟೆತುಂಬ ತಿಂದು ಮತ್ತೂ ಬೇಕೆನ್ನುವವನೆಂತಲ್ಲ. ಮಹಾ ಶಿವಶರಣರ ವಚನಾಮೃತವನ್ನು ಸವಿದು ಸವಿದು ತೃಪ್ತನಾಗದೆ ಇನ್ನೂ ಸೇವಿಸಬೇಕೆಂಬ ಹಂಬಲವುಳ್ಳಾತನೇ ಪ್ರಸಾದಿಯು. ಪ್ರಸಾದಿಯು ಮಹಾತ್ಮರ ಪ್ರಸಾದ ವಾಣಿಯನ್ನು ಕೇಳಿ ತಾನೂ ಅದರಂತೆ ನುಡಿಯುವನು ಮತ್ತು ಅದರಂತೆ ನಡೆಯುವನು. ನುಡಿಯಂತೆ ನಡೆಯಿದ್ದ ಪ್ರಸಾದಿಯ ಮಾತು ಪ್ರಸಾದ ವಾಣಿಯೇ ಆಗಿರುತ್ತದೆ.

ಮಹೇಶನಿಗೂ ಪ್ರಸಾದಿಗೂ ಇರುವ ವ್ಯತ್ಯಾಸವೇನು? ಮಹೇಶಸ್ಥಲವು ಆಧ್ಯಾತ್ಮಿಕ ಬೆಳವಣಿಗೆಯ ಎರಡನೆಯ ಮೆಟ್ಲು. ಪ್ರಸಾದಿಸ್ಥಲವು ಮೂರನೆಯ ಮೆಟ್ಲು. ಮಹೇಶನು ನೇಮ ವ್ರತಾದಿಗಳಿಂದ ಇಷ್ಟಲಿಂಗದಲ್ಲಿ ನಿಷ್ಠೆಯನ್ನಿಟ್ಟು ನಡೆದುಕೊಳ್ಳುತ್ತಾನೆ. ಪ್ರಸಾದಿಯು ಸಾವಧಾನ ಸುಪ್ರಸನ್ನತೆಗಳಿಂದ ಪರಿಶೋಭಿಸುತ್ತಾನೆ. ಮಹೇಶನು ಸಿಂಹನಾದದಿಂದ ಮಾತನಾಡುತ್ತಾನೆ. ಪ್ರಸಾದಿಯು ಮೃದು ಮಧುರ ವಚನಗಳನ್ನಾಡುವನು. ಮಹೇಶನ ಮೋರೆಯ ಮೇಲೆ ವೀರಾವೇಶದ ಕಳೆಯಿರುತ್ತದೆ. ಪ್ರಸಾದಿಯ ಮುಖವು ಶಾಂತತಾ ಮುದ್ರೆಯಿಂದ ಶೋಭಿಸುತ್ತದೆ. ಪ್ರಸಾದಿಗೆ ಮಿತಾಹಾರ, ಮಿತಭಾಷೆಗಳು ಪ್ರಾಮುಖ್ಯವಾಗಿರುವಂತೆ ಮಹೇಶನಿಗೇನೂ ಇರುವದಿಲ್ಲ. ಮಹೇಶನು ಸ್ವಸ್ತ್ರೀಯಳಲ್ಲಿಯಾದರೂ ಮೋಹವಿಟ್ಟಿರಬಹುದು. ಆದರೆ ಪ್ರಸಾದಿಯು ಸ್ತ್ರೀ ವ್ಯಾಮೋಹವನ್ನೇ ಸಂಪೂರ್ಣ ನಾಶಮಾಡಿರುತ್ತಾನೆ. ಪ್ರಸಾದಿಯು ಜನನೇಂದ್ರಿಯದ ದಬ್ಬಾಳಿಕೆಯನ್ನೇ ತಗ್ಗಿಸಿ ಬಿಟ್ಟಿರುವದರಿಂದ ಹೆಣ್ಣಿನ ಮೇಲಿನ ಮೋಹವು ಆತನಿಗಿರುವದಿಲ್ಲ. ಅಂತೆಯೇ ಪ್ರಸಾದಿಯ ಮುಖವು ಪ್ರಫುಲ್ಲಿತವಾಗಿರುತ್ತದೆ. ವಿಘ್ನಾದಿಗಳು ಬಂದರೆ ಮಹೇಶನು ಧೈರ್ಯದಿಂದ ಎದೆಗೊಟ್ಟು

ನಿಲ್ಲುವನು. ಆದರೆ ಪ್ರಸಾದಿಯು ಅವುಗಳನ್ನು ತಾಳ್ಮೆಯಿಂದ ಸಹಿಸಿಕೊಳ್ಳುವನು. ತಾಳ್ಮೆಯು ಪ್ರಸಾದಿ ಸ್ಥಲದ ನೆಲೆಗಟ್ಟು. "ತಾಳಿದವ ಬಾಳಿಯಾನು" ಎಂಬ ಗಾದೆಯಿಲ್ಲವೇ? ಮಹೇಶನು ವೈರಿಗಳಿಗೆ ಪ್ರತೀಕಾರ ಮಾಡುವನು. ಪ್ರಸಾದಿಯು ವೈರಿಗಳ ನಿಂದಾಪಮಾನಗಳನ್ನು ತಡಕೊಳ್ಳುವನು. ಮಹೇಶನು ಸಮಾಜ ಕಾರ್ಯಕ್ಕಾಗಿ ಸಂಚಾರ ಮಾಡುವನು. ಪ್ರಸಾದಿಯು ಮಹಾ ತಪಸ್ವಿಗಳ ದರ್ಶನ ಸೇವೆಗಳಿಗಾಗಿ ಸಂಚರಿಸುವನು. ಭಕ್ತನು ದೇಶದ ಸಂಪದಭಿವೃದ್ಧಿಗೆ ಅನುಕೂಲವಾದ ಬೇಸಾಯ, ವ್ಯಾಪಾರ, ಕೈಗಾರಿಕೆ, ಕಲಾಕೌಶಲ್ಯ ಮುಂತಾದವುಗಳನ್ನು ಮಾಡುತ್ತ ಸ್ವಸ್ಥಾನದಲ್ಲಿಯೇ ಸ್ವಸ್ಥವಾಗಿರುವನು. ಮಹೇಶನು ಸ್ವಾರ್ಥದ ಆಶೆಯನ್ನು ಬಿಟ್ಟಿದ್ದರೂ ಸಮಾಜ ಕಾರ್ಯಕ್ಕಾಗಿ ಪರರ ದುಡ್ಡಿನ ಉಪಯೋಗಮಾಡಿಕೊಳ್ಳುವನು. ಆದರೆ ಪ್ರಸಾದಿಗೆ ಸ್ವಾರ್ಥದ ಬಗ್ಗೆಯೂ ಪರರ ದ್ರವ್ಯದ ಬಗ್ಗೆಯೂ ಲೋಭ ಹುಟ್ಟುವದಿಲ್ಲ. ಮಹೇಶನು ಇಷ್ಟಲಿಂಗವನ್ನು ತನ್ನ ತಂದೆಯೋಪಾದಿಯಲ್ಲಿ ಕಾಣುವನು. ಪ್ರಸಾದಿಯು ಲಿಂಗವನ್ನು ತಾಯಿಯು ತನ್ನ ಎಳೆ ಮಗುವನ್ನು ಕಾಣುವಂತೆ ಕಾಂಬುವನು. ಪ್ರಸಾದಿಯು ತನ್ನ ಸುತ್ತಲೆಲ್ಲ ಶಾಂತತಾ ವಾತಾವರಣವನ್ನು ಹರಡಿ ಮಹಾ ತಪಸ್ವಿಗಳೂ ಕ್ರೂರ ಪಶುಗಳನ್ನು ಸಹ ಸೌಮ್ಯವಾಗಿ ಮಾಡುವಂತೆ ತನ್ನಲ್ಲಿಯೂ ಅಂಥ ಸಾಮರ್ಥ್ಯವುಳ್ಳವನಾಗಿರುತ್ತಾನೆ.

# ಯತ್ನಿಸು.

(ಒಂದು ಇಂಗ್ಲಿಷ ಕವಿತೆಯ ಅನುವಾದ)

ಝಳದಿಂ ಕಾಯ್ದಿರೆ, ಕಬ್ಬಿಣವನು ನೀವ್
ಹೊಡೆಯಿರಿ ಬಲದಿಂದ!
ಮೊಳೆಯನು ನೆಟ್ಟಗೆ ಹಿಡಿಯುತ ಹೊಡೆಯಿರಿ,
ತಲೆಯಲಿ ಛಲದಿಂದ ॥೧॥
ಎಸಗುವ ಕಾರ್ಯವನೆಸಗುವದಾದೊಡೆ
ಮನದಿಂದೆಸಗುವದು!
ಎಸೆಯುವ ಸ್ಥಾನವ ತಲುಪುವದಾದೊಡೆ
ಮೊರಡಿಯು ಹತ್ತುವದು! ॥೨॥
ನೆಲದಲಿ ನಿಲ್ಲುತ ಮುಗಿಲನು ನೋಡಿದ-
ರೇನಾಯ್ತೆನ್ನಣ್ಣಾ!
ಒಲವಿನ ಯತ್ನವದಿಲ್ಲದೆ ಯಲ್ಲಿಗೆ
ಮುಟ್ಟುವದೆಂತಣ್ಣಾ? ॥೩॥
ಎಡವಿದರೇನಾಯ್ತಣ್ಣನೆ ಎಂದೆಂ-
ದೆದೆಗೆಡದಿರು ನೀನು!
ಬಿಡದಲೆ ಯತ್ನಿಸು, ಯತ್ನಿಸು, ಕೊನೆಯಲಿ
ಪಡೆಯುವೆ ಗೆಲುವನ್ನು ॥೪॥

**ಈಶ್ವರ ಸಣಕಲ್ಲ ರಬಕವಿ.**

# ಶೈವಾಗಮಗಳು.

(ಡಾ. ಎಸ್. ಸಿ. ನಂದೀಮಠ ಎಮ್. ಎ. ಪಿ. ಎಚ್. ಡಿ. ಇವರ ನಿಬಂಧದ ವಿಮರ್ಶಾತ್ಮಕ ನಿರೂಪಣೆ—ಸಂಪಾದಕ.)

ನಾವು ಹಿಂದೆ ವಿವರಿಸಿದ ಆಗಮಗಳಲ್ಲದೆ ಆಗಮಗಳ ಇನ್ನೊಂದು ವರ್ಗವಿದ್ದು ಇದರಲ್ಲಿ ನಾವು ವಾತುಲ, ಸೂಕ್ಷ್ಮ, ಕಾಲೋತ್ತರ, ಮತ್ತು ಪಾರಮೇಶ್ವರ ಇವುಗಳನ್ನು ಸಮಾವೇಶಮಾಡಬಹುದು. ಇವುಗಳಲ್ಲಿಯ ಮುಖ್ಯ ವಿಷಯಗಳಾವವೆಂದರೆ:—

೧. ಇವುಗಳಲ್ಲಿ ಶೈವ ಭೇದಗಳೂ ಅವುಗಳ ಮುಖ್ಯ ಲಕ್ಷಣಗಳೂ ಹೇಳಲ್ಪಟ್ಟಿರುತ್ತವೆ. ಹಾಗೆಯೇ ಶೈವ ಸಾಂಪ್ರದಾಯಗಳೂ ಇವುಗಳಲ್ಲಿ ವಿವರಿಸಲ್ಪಟ್ಟಿರುತ್ತವೆ. ವಾತುಳಾಗಮದ ಪ್ರಕಾರ ಸಾಮಾನ್ಯ, ಮಿಶ್ರ ಶುದ್ಧ ಮತ್ತು ವೀರ ಎಂಬ ನಾಲ್ಕು ಶೈವಭೇದಗಳಿವೆ. ಪಾರಮೇಶ್ವರದ ಪ್ರಕಾರ, ಯೋಗಶೈವ, ಜ್ಞಾನಶೈವ, ಮತ್ತು ವೀರಶೈವ ಎಂದು ಮೂರು ಭೇದಗಳಿವೆ. ಮತ್ತು ಅದೇ ಆಗಮದ ೧೭ ನೇ ಪಟಲದಲ್ಲಿ ಶುದ್ಧ, ಮಿಶ್ರ, ಮಾರ್ಗ, ವೀರ ಮತ್ತು ಅವಾಂತರವೆಂದು ೫ ಶೈವಭೇದಗಳು ಮಾಡಲ್ಪಟ್ಟಿವೆ.

ವೀರಶೈವರಲ್ಲಿ ಸಾಮಾನ್ಯ, ವಿಶೇಷ, ಮತ್ತು ನಿರಾಭಾರಿ ಎಂದು ಮೂರು ಭೇದಗಳಿದ್ದು ಇವು ಈ ಆಗಮಗಳಲ್ಲಿ ಉಲ್ಲೇಖಿಸಲ್ಪಟ್ಟಿವೆ. ಆದರೆ ಇವುಗಳ ಲಕ್ಷಣಗಳು ಮಾತ್ರ ಸ್ವಲ್ಪ ಭಿನ್ನವಾಗಿ ಆಯಾ ಆಗಮಗಳಲ್ಲಿ ಹೇಳಲ್ಪಟ್ಟಿರುತ್ತವೆ.

ಆದರೆ ಈ ಶೈವಾಗಮಗಳಲ್ಲಿ ವಚನಶಾಸ್ತ್ರದಲ್ಲಿ ಎಷ್ಟರಮಟ್ಟಿಗೆ ಜಾತಿ ಭೇದವು ನಿರಾಕರಿಸಲ್ಪಟ್ಟಿದೆಯೋ ಅಷ್ಟು ನಿರಾಕರಿಸಲ್ಪಟ್ಟಿರುವದಿಲ್ಲ. ಆದರೆ ಪಾರಮೇಶ್ವರಾಗಮದಲ್ಲಿ ಜಾತಿಭೇದವನ್ನೆಣಿಸದೆ ಎಲ್ಲರೂ ಶಿವನೆಂದು ಭಾವಿಸಬೇಕೆಂಬ ಉಲ್ಲೇಖವಿದೆ. ವಾತುಳದಲ್ಲಿ ಸಾಮಾನ್ಯರಕಿಂತಲೂ ವಿಶೇಷರು ಅಧಿಕರು, ವಿಶೇಷರಿಗಿಂತಲೂ ನಿರಾಭಾರಿಗಳು ಅಧಿಕರು ಎಂದು ಹೇಳಲ್ಪಟ್ಟಿದೆ. ಸಾಮಾನ್ಯರಿಗೆ ಸಾಮಾನ್ಯ ದೀಕ್ಷೆಯು, ನಿರಾಭಾರಿಗಳಿಗೆ ನಿರ್ವಾಣದೀಕ್ಷೆಯು ಹೇಳಲ್ಪಟ್ಟಿವೆ. ಸಾಮಾನ್ಯರು ಮತ್ತು ವಿಶೇಷರು ತಮ್ಮ ಲಿಂಗವನ್ನು ಕಳೆದುಕೊಂಡದ್ದಾದರೆ ಪುನರ್ದೀಕ್ಷೆಯನ್ನು

ಹೊಂದಿ ಮತ್ತೊಂದು ಲಿಂಗವನ್ನು ಧರಿಸಬಹುದು. ಆದರೆ ನಿರಾಭಾರಿಗಳು ಹೀಗೆ ಧರಿಸಲಾಗದು. ಅವರು ತಮ್ಮ ಪ್ರಾಣವನ್ನೇ ನೀಗತಕ್ಕದ್ದು. ವಚನಶಾಸ್ತ್ರದಲ್ಲಿ ಲಿಂಗಧಾರಿಗಳೆಲ್ಲರೂ ಸಮಾನರೆಂಬ ವಿಚಾರಗಳು ಅತಿ ಸ್ಪಷ್ಟವಾಗಿ ಬಂದಿವೆ.

೨ ದೀಕ್ಷೆಃ—ಶೈವಾಗಮಗಳಲ್ಲಿ ದೀಕ್ಷಾವಿಧಿಗಳು ಸಾಮಾನ್ಯವಾಗಿ ಒಂದೇ ಇರುತ್ತವೆ. ಆದರೆ ಪಾರಮೇಶ್ವರದ ೨೦ ನೇ ಅಧ್ಯಾಯದಲ್ಲಿ ಹೇಳಿದ ವೀರಶೈವ ದೀಕ್ಷೆಯು ಶೈವರ ಆಗಮದೀಕ್ಷೆಗಿಂತಲೂ ಭಿನ್ನತೆರನಾಗಿರುತ್ತದೆ.

೩ ಆಚಾರಗಳುಃ— ಕಾಮಿಕ ಮತ್ತು ಈ ವರ್ಗದ ಬೇರೆ ಆಗಮಗಳಲ್ಲಿಯ ಕ್ರಿಯಾ ಮತ್ತು ಚರ್ಯಾ ಪಾದಗಳಲ್ಲಿ ತೋರಿಬರುವಂತೆ ಮೇಲಿನ ಆಗಮಗಳಲ್ಲಿ ಆಚಾರ ವಿಶೇಷಗಳು ಕಂಡುಬರುವದಿಲ್ಲ. ಇವು ಗುರುವು ದಯಪಾಲಿಸಿದ ಲಿಂಗವನ್ನು ಪೂಜಿಸುವದಕ್ಕೆ ಹೆಚ್ಚಿಗೆ ಮಹತ್ವವನ್ನು ಕೊಟ್ಟಿವೆ. ಇವು ನಿರ್ಯಾಣಯಾಗಕ್ಕೆ ಮಹತ್ವ ಕೊಟ್ಟಿದ್ದು ತೋರಿಬರುತ್ತದೆ. ಇದು ಪಾರಮೇಶ್ವರದ ೧೮ ನೇ ಅಧ್ಯಾಯದಲ್ಲಿ ಬಂದಿದ್ದು ಇದರಲ್ಲಿ ವೀರಶೈವತ್ವದ ಗುರುತುಗಳು ವಿಶೇಷವಾಗಿ ಇವೆ. ಆದರೆ ಇವುಗಳಲ್ಲಿ ಪಿಂಡದಾನ, ಪಿತೃಯಜ್ಞ, ಅಥವಾ ಶ್ರಾದ್ಧದ ಉಲ್ಲೇಖಗಳಿರುವದಿಲ್ಲ.

೪ ಯೋಗಃ— ಈ ಆಗಮಗಳಲ್ಲಿ ಸಾಮಾನ್ಯವಾಗಿ ಯೋಗವೆಂದು ತಿಳಿಯಲ್ಪಡುವ ಸಾಧನೆಗೆ ಯೋಗವೆನ್ನದೆ, ಶಿವಪೂಜೆ ಅಥವಾ ಲಿಂಗಪೂಜೆಗೆ ಸಹಯೋಗವೆಂದು ಅಂದಿರುವವು. ಇವುಗಳಲ್ಲಿ ಶಿವಯೋಗದ ಉಲ್ಲೇಖವಿದೆ. ಇವು ಭಗವದ್ಗೀತೆಯಂತೆ ಜ್ಞಾನಯೋಗ, ಭಕ್ತಿಯೋಗ ಎಂಬ ಶಬ್ದಗಳನ್ನು ಉಪಯೋಗಿಸುವದುಂಟು. ಪಾರಮೇಶ್ವರದ ೧೦ ನೇ ಅಧ್ಯಾಯದಲ್ಲಿ ಯೋಗಶೈವರೆಂಬ ಮತದವರು ಉಲ್ಲೇಖಿಸಲ್ಪಟ್ಟಿರುವರು.

೫. ಸಿದ್ಧಾಂತವುಃ— ಈ ಶೈವಾಗಮಗಳು ಅದ್ವೈತಪರವಾಗಿರುತ್ತವೆ. ಅವು ೩೬ ತತ್ವಗಳನ್ನೂ, ಅಧ್ವಗಳನ್ನೂ, ಕಲೆಗಳನ್ನೂ ಉಲ್ಲೇಖಿಸುತ್ತವೆ. ಆದರೆ ಅವುಗಳಲ್ಲಿಯ ಸೃಷ್ಟಿಯ ವಿಚಾರಗಳು ಪೌಷ್ಕರ ಅಥವಾ ಮೃಗೇಂದ್ರಗಳಲ್ಲಿ ಹೇಳಿದವುಗಳಿಗಿಂತಲೂ ಭಿನ್ನ ತೆರನಾಗಿರುತ್ತವೆ.

ಈ ಆಗಮಗಳಿಂದ ಗೊತ್ತಾಗುವದೇನೆಂದರೆ:— ಪರಮಾತ್ಮನಿಗೆ, ಸಕಲ, ಸಕಲನಿಷ್ಕಲ, ಮತ್ತು ನಿಷ್ಕಲ ಎಂಬ ಮೂರು ರೂಪುಗಳು ಇರುತ್ತವೆ. ನಿಷ್ಕಲರೂಪು ಶಿವತತ್ವವು. ಶಿವನು ಏಕನು, ನಿತ್ಯನು, ಪರಾತ್ಪರನು ಸರ್ವವ್ಯಾಪಿಯು, ಸರ್ವಜ್ಞನು, ಸರ್ವಶಕ್ತನು, ಶುದ್ಧನು, ಅನುಪಮೇಯನು, ಕಾರಣ ಕಾರಣನು ಇದ್ದಾನೆ. ಶಿವನು ಸೃಷ್ಟಿಯ ಉದ್ಧಾರಕರ್ಕ್ಕೋಸ್ಕರ ತನ್ನ ಸ್ವೇಚ್ಛೆಯಿಂದ ಚಿಂತಿಸುವವನಾಗುವನು. ಆಗ ಅವನ ಸಹಸ್ರಾಂಶದಲ್ಲಿ ಶಕ್ತಿಯು ಹುಟ್ಟುವದು. ಆ ಮೇಲೆ ಪರಾಶಕ್ತಿ, ಆದಿಶಕ್ತಿ, ಇಚ್ಛಾಶಕ್ತಿ, ಜ್ಞಾನಶಕ್ತಿ, ಮತ್ತು ಕ್ರಿಯಾಶಕ್ತಿ ಇವುಗಳು ಹಿಂದಿನದರ ಒಂದೊಂದು ಸಹಸ್ರಾಂಶದಲ್ಲಿ ಕ್ರಮವಾಗಿ ಹುಟ್ಟುತ್ತ ಹೋಗುವವು. ಈ ಶಕ್ತಿಗಳೆಲ್ಲವೂ ನಿಷ್ಕಲವಾಗಿವೆ. ಇದು ಶಿವಸೃಷ್ಟಿ.

ಶಿವನು ಆ ಮೇಲೆ ಸಕಲ ನಿಷ್ಕಲ ರೂಪವನ್ನು ಧರಿಸುವನು. ಇದರಲ್ಲಿ ಯೋಗಿ, ಜ್ಞಾನಿ, ಯತಿ, ಮತ್ತು ಮಂತ್ರಜ್ಞರಿಗೆ ಅರ್ಚನೆಯು ಸುಲಭವಾಗಲು ಕಲೆಗಳು ಇರುತ್ತವೆ. ಇವೇ ಸಾದಾಖ್ಯಗಳು. ಇವು ಐದು ಇದ್ದು ಈ ಐದನ್ನು ಕೂಡಿಕೊಂಡ ಶಿವನಿಗೆ ಸದಾಶಿವನೆಂಬ ಹೆಸರು. ಈ ಸಾದಾಖ್ಯಗಳು ಯಾವವೆಂದರೆ:—

ಶಿವಸಾದಾಖ್ಯ:— ಪರಾಶಕ್ತಿಗೆ ಶಾಂತ್ಯಾತೀತವೆಂಬ ಎರಡನೇ ಹೆಸರು. ಇದರ ಸಹಸ್ರಾಂಶದಲ್ಲಿ ಶಿವಸಾದಾಖ್ಯವು ಉತ್ಪನ್ನವಾಗುತ್ತದೆ. ಇದು ಅತ್ಯಂತ ಸೂಕ್ಷ್ಮವಾಗಿದ್ದು ಜ್ಯೋತಿ ರೂಪವಾಗಿರುತ್ತದೆ. ಇದರಲ್ಲಿ ತತ್ವಗಳೆಲ್ಲ ಅಡಕವಾಗಿದ್ದು ಆಕಾಶದಲ್ಲಿಯ ವಿದ್ಯುಲ್ಲತೆಯನ್ನು ಹೋಲುತ್ತದೆ.

ಅಮೂರ್ತ ಸಾದಾಖ್ಯ:— ಆದಿಶಕ್ತಿಗೆ ಶಾಂತಿ ಎಂದು ಎರಡನೇ ಹೆಸರು ಇದ್ದು, ಅದರ ಸಹಸ್ರಾಂಶದಲ್ಲಿ ಅಮೂರ್ತವು ಉದ್ಭವಿಸುತ್ತದೆ. ಆದಿಶಕ್ತಿಗೆ ರೂಪು ಇಲ್ಲದ್ದರಿಂದ ಈ ಹೆಸರು ಇದಕ್ಕೆ ಬಿದ್ದಿರುತ್ತದೆ. ಇದು ಕಲಾರಹಿತವು. ಮೂಲಸ್ತಂಭವೆಂಬ ಹೆಸರಿನ ದಿವ್ಯಲಿಂಗವು ಇದಾಗಿದೆ. ಪೃಥ್ವಿ ಎಲ್ಲವೂ ಇದರಿಂದ ಹೊರಟು ಇದರಲ್ಲಿಯೇ ಲಯವಾಗುತ್ತದೆ.

ಮೂರ್ತ ಸಾದಾಖ್ಯ:— ಇಚ್ಛಾ ಶಕ್ತಿಗೆ ವಿದ್ಯಾ ಎಂಬ ಎರಡನೇ ಹೆಸರು ಇದೆ. ಅದರ ಸಹಸ್ರಾಂಶದಿಂದ ಮೂರ್ತ ಸಾದಾಖ್ಯವು ಉತ್ಪನ್ನವಾಗುತ್ತದೆ. ಇದು ತೇಜೋ ರೂಪವು. ಕಲಾಸಹಿತವಾದದ್ದು. ಉರಿಯುವ ಅಗ್ನಿಯಂತೆ ಹೊಳೆಯುವ ದಿವ್ಯಲಿಂಗವು ಇದಾಗಿದೆ. ಅದಕ್ಕೆ ೩ ಕಣ್ಣುಗಳು ಇತ್ಯಾದಿ ಇವೆ.

ಕರ್ತೃ ಸಾದಾಖ್ಯಃ— ಜ್ಞಾನಶಕ್ತಿಗೆ ಪ್ರತಿಷ್ಠಾ ಎಂಬ ಎರಡನೇ ಹೆಸರು ಇದ್ದು ಅದರ ಸಹಸ್ರಾಂಶದಲ್ಲಿ ಕರ್ತೃ ಸಾದಾಖ್ಯವು ಉಗಮಿಸುವದು. ಸ್ಪಟಿಕದಂತೆ ಹೊಳೆಯುವ ದಿವ್ಯಲಿಂಗವು ಇದಾಗಿದೆ. ಈ ಲಿಂಗಕ್ಕೆ ೫ ತಲೆಗಳು, ೪ ಮುಖಗಳು, ೧೨ ಕಣ್ಣುಗಳು, ೮ ಕೈಗಳು ಇರುತ್ತವೆ.

ಕರ್ಮಸಾದಾಖ್ಯಃ— ಕ್ರಿಯಾಶಕ್ತಿಗೆ ನಿವೃತ್ತಿ ಎಂಬ ಎರಡನೇ ಹೆಸರು ಇದ್ದು ಇದರ ಸಹಸ್ರಾಂಶದಲ್ಲಿ ಕರ್ಮ ಸಾದಾಖ್ಯವು ಉತ್ಪನ್ನವಾಗುತ್ತದೆ. ನಾದ ಮತ್ತು ಬಿಂದು ಕೂಡಿದಂಥ ಲಿಂಗವೇ ಇದಾಗಿರುತ್ತದೆ. ಈ ಎರಡೂ ಕೂಡಿದ್ದೇ ಜಗತ್ತನ್ನು ಸೃಷ್ಟಿಸುತ್ತದೆ. ಕರ್ಮಸಹಿತವಾದ ಈ ಲಿಂಗದಿಂದ ಸೃಷ್ಟಿಯು ಉದ್ಭವವಿರುತ್ತದೆ. ಮತ್ತು ಕರ್ಮವು ತೀರಿದ ಬಳಿಕ ಅದರಲ್ಲಿಯೇ ಲಯವಾಗುತ್ತದೆ.

ಕರ್ಮಸಾದಾಖ್ಯದಿಂದಲೇ ವಿಶ್ವವು ಉತ್ಪನ್ನವಾಗುತ್ತದೆ. ಈ ಐದು ಸಾದಾಖ್ಯಗಳುಳ್ಳ ಪರಮಾತ್ಮನ ಸ್ವರೂಪಕ್ಕೆ ಸದಾಶಿವ ಮೂರ್ತಿ ಎಂಬ ಹೆಸರು. ಇದು ಪರಮಾತ್ಮನ ಸಕಲ ನಿಷ್ಕಲ ಸ್ವರೂಪು ಆಗಿರುತ್ತದೆ. ಸದಾಶಿವನು ಲಿಂಗ, ಸ್ಥಂಡಿಲ ಕುಂಭ ಈ ರೂಪದಲ್ಲಿ ಪೂಜಿಸಲ್ಪಡುತ್ತಾನೆ, ಅಥವಾ ಪೂಜಕನ ಹೃದಯಕಮಲದಲ್ಲಿ ವಾಸಿಸುತ್ತಾನೆಂದು ಭಾವಿಸಿ ಅವನನ್ನು ಅಲ್ಲಿ ಪೂಜಿಸುವದುಂಟು. ಕರ್ಮೇಶನ ಸಹಸ್ರಾಂಶದಿಂದ ಮಹೇಶನು ಉತ್ಪನ್ನನಾಗುತ್ತಾನೆ. ಮತ್ತು ಈ ಮಹೇಶನೇ ಉತ್ಪತ್ತಿ, ಸ್ಥಿತಿ, ಲಯಗಳಿಗೆ ಕಾರಣವಾಗಿರುತ್ತಾನೆ. ಅವನಿಗೆ ೨೫ ಲೀಲೆಗಳು ಇವೆ. ಮಹೇಶ ಮತ್ತು ಶಕ್ತಿ ಇವುಗಳಿಂದ ವಿಷ್ಣುವೂ ಬೇರೆ ದೇವ ದೇವತೆಗಳೂ ಉತ್ಪನ್ನರಾಗುತ್ತಾರೆ.

ವಾತುಲ ಶುದ್ಧಾಖ್ಯ ತಂತ್ರದ ತತ್ವಭೇದ ಪಟಲದಲ್ಲಿ ಮೇಲಿನ ವಿವರಣೆಗಳು ಬಂದಿವೆ. ಇವುಗಳಿಗೂ ಚನ್ನಬಸವೇಶ್ವರನ ಕರಣ ಹಸುಗೆಯಲ್ಲಿ ವಿವರಿಸಿದ ವಿಷಯಗಳಿಗೂ ಬಹಳ ಸಾಮ್ಯತೆ ಇದೆ. ಆದರೆ ಕರಣ ಹಸುಗೆಯಲ್ಲಿ ಸಾದಾಖ್ಯಗಳು ಲಿಂಗಗಳೆಂದು ತಿಳಿದು ವಿವರಿಸಲ್ಪಟ್ಟಿವೆ. ತ್ರಿಕ ಮತ್ತು ವೀರಶೈವರಲ್ಲಿ ಹೇಳುವಂತೆ ನಿಷ್ಕಲ ಶಿವನಿಂದಲೇ ಈ ಎಲ್ಲ ಜಗತ್ತಿನ ಉತ್ಪತ್ತಿ ಎಂದು ಹೇಳಲ್ಪಟ್ಟದೆ. ಮತ್ತು ಜಗತ್ತಿನಲ್ಲಿಯ ಪದಾರ್ಥಗಳು ಕರ್ಮ ಸಾದಾಖ್ಯ ಸ್ವರೂಪವಾದ ಲಿಂಗದಿಂದಲೇ ಉದ್ಭವಿಸಿವೆ ಎಂವು ಹೇಳಿದೆ.

ಸೂಕ್ಷ್ಮತಂತ್ರ ೬ ನೇ ಅಧ್ಯಾಯ ೬೫—೬೯ ಇದರಲ್ಲಿ ವೀರಶೈವರ ಷಟ್‌ಸ್ಥಲಗಳು ಹೇಳಲ್ಪಟ್ಟಿವೆ. ಮತ್ತು ಪಾರಮೇಶ್ವರಾಗಮದ ೬ ನೇ ಅಧ್ಯಾಯದಲ್ಲಿಯೂ ಈ ಸ್ಥಲಗಳಾವರಣೆಗಳು ಬಂದಿವೆ.

ಶೈವಾಗಮಗಳ ಮೇಲ್ಕಂಡ ಗುಂಪಿನಲ್ಲಿ ಅದ್ವೈತದ ವಿಚಾರಗಳಿವೆ. ಈ ಪ್ರಕಾರ ಈ ಆಗಮಗಳು ಪೌಷ್ಕರ ಮತ್ತು ಮೃಗೇಂದ್ರ ಈ ಆಗಮಗಳಿಂದ ಭಿನ್ನವಾಗಿವೆ. ಹಾಗೆಯೇ ಈ ಆಗಮಗಳು ಚಕ್ರ, ವರ್ಣ, ಮಂತ್ರ ಇವುಗಳಿಗೂ ಬಹಳ ಮಹತ್ವದ ಸ್ಥಾನವನ್ನು ಕೊಟ್ಟಿವೆ.

ಪಾರಮೇಶ್ವರಾಗಮದ ೧೬ ನೇ ಅಧ್ಯಾಯದಲ್ಲಿ ಬೇರೆ ಬೇರೆ ವಿಧದ ಲಿಂಗಗಳನ್ನು ಹ್ಯಾಗೆ ಮಾಡಬೇಕು ಎಂಬದು ಹೇಳಲ್ಪಟ್ಟಿದೆ. ೧೩ ನೆಯ ಅಧ್ಯಾಯದಲ್ಲಿ ಲಿಂಗಪೂಜೆಯೂ ಹೇಳಲ್ಪಟ್ಟಿದೆ. ಈ ಪೂಜೆಯ ವಿಧವು ವೀರಶೈವರಲ್ಲಿ ಇರುವಂತೆಯೇ ಇದೆ.

ಈ ಶಿವಾಗಮಗಳಿಗೂ ಶಾಕ್ತತಂತ್ರಗಳಿಗೂ ಕೆಳಗೆ ಕಾಣಿಸಿದ ವಿಷಯಗಳಲ್ಲಿ ಸಾಮ್ಯತೆಯು ಕಂಡುಬರುತ್ತದೆ. ಅವು ಯಾವವೆಂದರೆಃ— (೧) ಮಂತ್ರ, ಚಕ್ರ, ಯಂತ್ರ, ಮುದ್ರಾ ಇವುಗಳಿಗೆ ಇವು ಮಹತ್ವವನ್ನು ಕೊಟ್ಟಿರುವವು. ಆದರೆ ಇತರ ಶೈವಾಗಮಗಳು ಈ ವಿಷಯಗಳಿಗೆ ಇಷ್ಟು ಮಹತ್ವವನ್ನು ಕೊಟ್ಟಿಲ್ಲ. (೨) ಇವುಗಳಲ್ಲಿಯೂ ಶಾಕ್ತತಂತ್ರಗಳಲ್ಲಿಯೂ ಬರುವ ಸಿದ್ಧಾಂತ ವಿಷಯಗಳಲ್ಲಿ ಏಕವಾಕ್ಯತೆಯು ಬಹಳ ಕಂಡುಬರುತ್ತದೆ. (೩) ಇವುಗಳ ಭಾಷೆ ಮತ್ತು ವರ್ಣನಾವಿಧಗಳಲ್ಲಿಯೂ ಬಹಳ ಸಾಮ್ಯತೆಯು ಇದೆ. ಹೀಗೆ ಇವುಗಳಲ್ಲಿ ಸಾಮ್ಯತೆಯು ತೋರಿಬಂದರೂ ಶಾಕ್ತಾಗಮಗಳಲ್ಲಿ ಹೇಳುವ ವಿಚಾರಗಳನ್ನು ಇವುಗಳು ಎಲ್ಲಿಯೂ ಸಮರ್ಥಿಸಿಲ್ಲ. ಪಾರಮೇಶ್ವರಾಗಮ ಅಧ್ಯಾಯ ೮ ಶ್ಲೋಕ ೪೦ ಇದರಲ್ಲಿ ಮದ್ಯಸೇವನೆ ಮತ್ತು ಅಭಕ್ಷ್ಯಭೋಜನವು ಸಂಪೂರ್ಣ ನಿರಾಕರಿಸಲ್ಪಟ್ಟಿದೆ. ಅದೇ ಗ್ರಂಥದ ಅಧ್ಯಾಯ ೯ ಮತ್ತು ೧೯ ಇವುಗಳಲ್ಲಿ ಶುದ್ಧ ಸಾತ್ವಿಕ ವರ್ತನೆಯಿಂದ ನಡೆಯಬೇಕೆಂದು ಹೇಳಿದೆ. ಅಹಿಂಸಾ ತತ್ವವು ಪ್ರತಿಪಾದಿಸಲ್ಪಟ್ಟಿದೆ. ಕಾಲೋತ್ತರಾಗಮ ೭೦—೭೨ ಇದರಲ್ಲಿ ಪ್ರಾಣಿಗಳನ್ನು ಹಿಂಸಿಸಬಾರದು, ಮತ್ತು ಗಿಡಗಳನ್ನು ಕೊಯ್ಯಬಾರದು ಎಂದು ಹೇಳಿದೆ. ಇಷ್ಟೇ ಅಲ್ಲ ದೇವರನ್ನು ಅರ್ಚಿಸುವದಕ್ಕೋಸ್ಕರ ಹೂವುಗಳನ್ನು ಸಹ ಕೊಯ್ಯಕೂಡದೆಂದು ಹೇಳಿದೆ. ಗಿಡಗಳಿಂದ ತಾವಾಗಿಯೇ ಬಿದ್ದವುಗಳನ್ನು ಮಾತ್ರ ಎತ್ತಿ ಉಪಯೋಗಿಸಬೇಕೆಂದು

ಹೇಳಿದೆ. ಮತ್ತು ಇದೇ ಆಗಮದ ೭೨—೭೩ ಇದರಲ್ಲಿ ಯಂತ್ರ ತಂತ್ರಗಳನ್ನು ಮಾಡಕೂಡದೆಂತಲೂ ಹೇಳಿದೆ.

ಹೀಗೆ ಶೈವಾಗಮಗಳ ಸಂಕ್ಷಿಪ್ತ ವೃತ್ತಾಂತವಿದೆ. ಇದರಿಂದ ಎಲ್ಲ ಆಗಮಗಳಲ್ಲಿ ಹೇಳುವ ಅಭಿಪ್ರಾಯಗಳು ಮತ್ತು ಮತಗಳು ಒಂದೇ ವಿಧವಾಗಿಲ್ಲೆಂದು ತೋರಿಬರುವದು. ಅವುಗಳಲ್ಲಿ ಧರ್ಮ, ಆಚಾರ, ಸಿದ್ಧಾಂತ ಮತ್ತು ದೈನಿಕಕ್ರಮ ಇವುಗಳಲ್ಲಿ ಅವಶ್ಯವಿರುವ ವಿಷಯಗಳು ನಿರೂಪಿಸಲ್ಪಟ್ಟಿರುತ್ತವೆ. ಶೈವಾಗಮಗಳ ಬಗ್ಗೆ ನಿಷ್ಠುರ ಸಂಜಯ್ಯನು ಕೆಳಗೆ ಹೇಳಿದಂತೆ ಬರೆದಿದ್ದು ಇದು ಸತ್ಯವಾಗಿದೆ. ಅವನು ಅನ್ನುದೇನೆಂದರೆಃ—

"ಕೆಲವು ಶೈವಾಗಮಗಳು ಪತಿ, ಪಶು, ಪದಾರ್ಥ ಎಂಬ ಮೂರು ಪದಾರ್ಥಗಳನ್ನು ವಿವೇಚಿಸುತ್ತವೆ. ಕೆಲವುಗಳು ಶಿವನ ಪರತತ್ವವನ್ನೂ, ಕೆಲವು ಬ್ರಹ್ಮ ಮತ್ತು ತ್ರಿಮೂರ್ತಿಗಳ ಅತ್ಯಂತ ಶ್ರೇಷ್ಠ ಧಾರ್ಮಿಕ ವಿಚಾರಗಳನ್ನೂ, ಕೆಲವು ೩೬ ತತ್ವಗಳನ್ನೂ, ಕೆಲವು ಷಡಧ್ವಗಳನ್ನೂ ಕೆಲವು ಭಸ್ಮಧಾರಣ, ರುದ್ರಾಕ್ಷಧಾರಣ, ಲಿಂಗಧಾರಣ, ಪಂಚಾಕ್ಷರ ಮಂತ್ರ ಜಪ, ಶಿವಪೂಜೆ ಮತ್ತು ಶಿವನಿಗುದ್ದೇಶಿಸಿ ಉತ್ಸವಗಳಲ್ಲಿ ಮಾಡತಕ್ಕ ಕಾರ್ಯಗಳು ಇಂಥ ವಿಷಯಗಳನ್ನೂ ವಿವರಿಸುತ್ತವೆ."

---

## ವೀರಶೈವ ವರ್ಣಭೇದವಿದಾರಿಕಾ.

ಲೇಖಾಂಕ ೧೦

(ಲೇಖಕಃ— ಶ್ರೀಯುತ ಸಿದ್ಧರಾಮಪ್ಪ ದುಂಡಪ್ಪ ಪಾವಟೆ ಬಿ. ಎ. ಎಲ್. ಎಲ್. ಬಿ)

ಇನ್ನು ಶ್ರೀಯುತ ಜಗದೀಶ ಶಾಸ್ತ್ರಿಗಳ ಲಿಂಗಪುರಾಣ ಪ್ರಮಾಣವು ಬಂದುದು. ಅದನ್ನು ವಿಚಾರಿಸುವಣ. "ಕಲಶಾನ್ವಿನ್ಯಸೇ ತ್ಪಂಚ ಪಂಚಭಿರ್ಬ್ರಾಹ್ಮಣೈಸ್ತತಃ। ಹೋಮಂಚ ಚರುಣಾ ಕುರ್ಯಾದ್ಯಥಾ ವಿಭವ ವಿಸ್ತರಂ॥ ಬ್ರಾಹ್ಮಣಸ್ಯ ಸಮಾಖ್ಯಾತಂ ಲಿಂಗಧಾರಣ ಮುತ್ತಮಂ॥ ಐವರು ಬ್ರಾಹ್ಮಣರಿಂದ ಐದು ಕಲಶಗಳನ್ನಿಡಿಸಬೇಕು ಆ ಬಳಿಕ ವಿಭವಾನುಗುಣವಾಗಿ ಚರುವಿನಿಂದ ಹೋಮವನ್ನು ಮಾಡಬೇಕು ಎಂಬೀ ಒಂದೂವರೆ ಶ್ಲೋಕವನ್ನು ಲಿಂಗಪುರಾಣದ ಉತ್ತರ ಭಾಗದ ೨೧ ನೆಯ ಅಧ್ಯಾಯದಿಂದೆಂದು ಉದಾಹರಿಸಿರುವರು.

ಲಿಂಗಪುರಾಣದ ಈ ಅಧ್ಯಾಯದಲ್ಲಿ ೮೩ ಶ್ಲೋಕಗಳುಂಟು. "ಕಲಶಾನ್" ಎಂಬುದು ೩೬ ನೆಯದು. "ಬ್ರಾಹ್ಮಣಸ್ಯ ಸಮಾಖ್ಯಾತಂ" ಎಂಬಿದು ಈ ಅಧ್ಯಾಯದಲ್ಲಿಲ್ಲ. ಶ್ರೀ ನಂದಿ ಆಚಾರ್ಯನು ಲಿಂಗಧಾರಣ ಚಂದ್ರಿಕೆಯಲ್ಲುದಾಹರಿಸಿದ 'ವೇದೇಷು ಶಾಸ್ತ್ರಸಂಘೇಷು ಪುರಾಣೇಷ್ವಾಗಮೇಷು ಚ। ಬ್ರಾಹ್ಮಣಸ್ಯ ಸಮಾಖ್ಯಾತಂ ಲಿಂಗಧಾರಣ ಮುತ್ತಮಂ॥ ಎಂಬ ಪ್ರಮಾಣದಿಂದ ಅರ್ಥವನ್ನೆತ್ತಿ ಶಾಸ್ತ್ರಿಗಳು 'ಕಲಶಾನ್ವಿನ್ಯಸೇತ್' ಎಂಬ ಶ್ಲೋಕದಲ್ಲಿ ಪೋಣಿಸಿರುವರು. ಇದವರ ಕರಲಾಘವಕ್ಕೆ ಹೊಸತಲ್ಲ.

ಲಿಂಗಧಾರಣ ಚಂದ್ರಿಕಾಕಾರರುದಾಹರಿಸಿದ ಪ್ರಮಾಣವನ್ನು ಮುಂದೆ ವಿಚಾರಿಸುವ ಅನ್ನಕ ಇಪ್ಪತ್ತೊಂದನೆಯ ಅಧ್ಯಾಯವನ್ನು ಪರೀಕ್ಷಿಸುವಣ. ಇದರಲ್ಲಿ ಲಿಂಗಧಾರಣವು ಬಂದಿಲ್ಲ. ಕರಧೃತ ಲಿಂಗ ಪೂಜೆಯು ಹೆಸರಿಗಿಲ್ಲ. ವೀರಶೈವ ಶಬ್ದವು ಸಿಗುವುದಿಲ್ಲ. ಸೂಕ್ಷ್ಮಾಗಮಗಳಲ್ಲಿ ವೀರಶೈವ ದೀಕ್ಷಾನಂತರದಲ್ಲಿ ಶಿಷ್ಯನಿಗೆ ಬೋಧಿಸಿದ ವೀರಶೈವಾಚಾರವು ಕಂಡುಬರುವುದಿಲ್ಲ.

ಈ ಅಧ್ಯಾಯದ ಕೊನೆಯಲ್ಲಿ ಏವಂ ಸಂಕ್ಷೇಪತಃ ಪ್ರೋಕ್ತೋಹ್ಯಧಿಕಾರವಿಧಿಕ್ರಮಃ। ಶಿವಾರ್ಚನಾರ್ಥಂ ಧರ್ಮಾರ್ಥ ಕಾಮಮೋಕ್ಷ ಫಲಪ್ರದಃ॥ ಈ ಬಗೆಯಾಗಿ ಶಿವಾರ್ಚನಕ್ಕಧಿಕಾರಿಯಾಗುವ ವಿಧಿಯು ಹೇಳಲ್ಪಡೆದುದು. ಅದರಿಂದ ಧರ್ಮಾರ್ಥ ಕಾಮಮೋಕ್ಷಗಳು ದೊರೆವುವು. ಎಂದು ಹೇಳಿಯದೆ. ಅಂದರೆ ಈ ಅಧ್ಯಾಯದಲ್ಲಿಯ ದೀಕ್ಷೆಯು ಲಿಂಗಧಾರಣ ದೀಕ್ಷೆಯಲ್ಲ. ಇಪ್ಪತ್ತೆರಡನೆಯ ಅಧ್ಯಾಯದಲ್ಲಿ ಸೌರಸ್ನಾನಾದಿ ವಿಧಿಯುಂಟು. ಇಪ್ಪತ್ತು ಮೂರನೆಯದರಲ್ಲಿ ಮಾನಸ ಶಿವಾರ್ಚನ ಕ್ರಮವು ಬರುವುದು. ಲಿಂಗಾಂಗಿಗಳಾದ ವೀರಶೈವರಿಗೆ ವಿಹಿತವಾದ ಭಾವಪ್ರಾಣೇಷ್ಟಲಿಂಗಂಚ ಪೂಜಯೇದೇಕ ಭಾವತಃ ಸೂ. ೬—೫೪ ಎಂಬ ತ್ರಿಲಿಂಗಗಳ ಏಕ ಪೂಜೆಯನ್ನು ಇಲ್ಲೆಲ್ಲಿಯು ಕಾಣಲಾರೆವು.

ಅಂದಬಳಿಕ ಸಪ್ತವಿಧ ಶೈವದಲ್ಲಿ ಈ ಅಧ್ಯಾಯದ ದೀಕ್ಷೆಯು ಆದಾವ ಶೈವಕ್ಕನ್ವಯಿಸುವುದು? ಆಲಿಸು. ಸೂಕ್ಷ್ಮಾಗಮದ ಏಳನೆಯ ಪಟಲದಲ್ಲಿ 'ಶೈವದೀಕ್ಷೋಕ್ತ ಮಾರ್ಗೇಣ ದೀಕ್ಷಿತಾ ಬ್ರಾಹ್ಮಣಾಃಶಿವೇ। ಮಹಾಶೈವಾಸ್ತು ತೇಜ್ಞೇಯಾ ಮಹಾಂತೋಲೋಕ ಪೂಜಿತಾಃ॥ ೧೩—೧೪॥ ಶೈವದೀಕ್ಷಾ ಕ್ರಮದಿಂದ ಸಂಸ್ಕಾರವನ್ನು ಹೊಂದಿದ ಬ್ರಾಹ್ಮಣರು ಮಹಾಶೈವರೆಂದು ತಿಳಿಯೌ ಪಾರ್ವತಿ! ಈ ಸಂಸ್ಕಾರದಿಂದವರು ಲೋಕ ಪೂಜ್ಯ

ರಾಗುವಂತಾಗಿ ಮಹಾ ಶೈವರೆನಿಸಿವರು ಎಂದು ಹೇಳಿಯದೆ. ಆ ಮಹಾ ಶೈವ ದೀಕ್ಷಾಪ್ರಕರಣವಿದು.

ಶ್ರೀ ಲಿಂಗಧಾರಣ ಚಂದ್ರಿಕಾಕಾರನುದಾಹರಿಸಿದ ಶ್ಲೋಕಗಳು ಲಿಂಗ ಮಹಾ ಪುರಾಣದಲ್ಲಿ ಉಪಲಭಿಸಲೊಲ್ಲವು. ಲಿಂಗಪುರಾಣಗಳು ಎರಡು ಇಹವು. ಒಂದು ಮಹಾಪುರಾಣವು. ಒಂದು ಉಪಪುರಾಣವು. ಉಪ ಪುರಾಣವು ವಾಸಿಷ್ಠಲೈಂಗವೆಂದೂ ಹೆಸರಾಗಿದೆ. "ತತೋವಾಸಿಷ್ಠಲೈಂಗಾಖ್ಯಂ ಪ್ರೋಕ್ತಂ ಮಾಹೇಶ್ವರಂ ಪರಂ ॥ ಸೂತಸಂಹಿತಾ ೧--೧೭ ಲಿಂಗ ಧಾರಣ ಚಂದ್ರಿಕೋದಾಹರಣವು ಉಪಪುರಾಣದಿಂದಿರಬೇಕು. ಇರಲಿ. ಉಪಾಸ್ಯತ ಸಂದರ್ಭವನ್ನು ವಿವರಿಸುವಣಃ--

ವೇದೇಷು ಶಾಸ್ತ್ರಸಂಘೇಷು ಪುರಾಣೇಷ್ವಾಗಮೇಷು ಚ। ಬ್ರಾಹಣಸ್ಯ ಸಮಾಖ್ಯಾತಂ ಲಿಂಗಧಾರಣ ಮುತ್ತಮಂ॥ ಯಜುರಪ್ಯಾಹ ಸರ್ವಂ ವೈಲಿಂಗಂ ಸ್ಥಾಪಯತೀತಿಚ। ತಸ್ಮಾದ್ಧಾರ್ಯಂ ಮಹಾಲಿಂಗಂ ಪಾಣಿ ಮಂತ್ರೇತಿ ಮಂತ್ರತಃ ॥ ಪಾಣೌಲಿಂಗಂ ವಿನಿಕ್ಷಿಪ್ಯ ದೀಕ್ಷಾಕಾಲೇ ಗುರುಃ ಶಿವಂ। ಯೇನಸ್ತುವತಿ ತನ್ಮಂತ್ರಂ ಪಾಣಿಮಂತ್ರಂ ವದಂತಿಹಿ॥ ಪವಿತ್ರತ್ವಾನ್ಮಹೇಶಸ್ಯ ಶಿವಸ್ಯ ಪ್ರತಿಪಾದನಾತ್। ಪವಿತ್ರಕರಣಾತ್ಪುಂಸಃ ಪವಿತ್ರಮಿತಿ ಕಥ್ಯತೇ॥ ಅತಃ ಸರ್ವೇಷು ಕಾಲೇಷು ಧಾರಯೇಲ್ಲಿಂಗ ಮುತ್ತಮಂ। ಗಚ್ಛಂಸ್ತಿಷ್ಠನ್ ಸ್ವಪಞ್‌ಜಾಗ್ರದುನ್ಮಿಷನ್ನಿ ಮಿಷನ್ನಪಿ। ಶುಚಿರ್ವಾಪ್ಯಶುಚಿರ್ವಾಪಿಲಿಂಗಂ ಸರ್ವತ್ರಧಾರಯೇತ್ ॥ ಲಿಂಗಧಾರೀ ಸದಾಶುದ್ಧೋ ನಿಜ ಲಿಂಗಂ ಮನೋಹರಂ। ಅರ್ಚಯನ್ ಗಂಧಪುಷ್ಪಾದ್ಯೈಃ ಕರಪೀಡೇ ಸಮಾಹಿತಃ॥ ನಿತ್ಯಾನಿಕರ್ಮ ವೃಂದಾನಿ ತಥಾನೈಮಿತ್ತಿಕಾನಿಚ। ಶಿವಾರ್ಪಣಧಿಯಾ ಕುರ್ಯಾತ್ ಸಮ್ಯಜ್ಞಾನಾಭಿವೃದ್ಧಯೇ.

ಇಲ್ಲಿ ಬ್ರಾಹ್ಮಣನಿಗೆ ಲಿಂಗಧಾರಣವು ವೇದಾದಿಗಳಿಂದ ವಿಹಿತವಾಗಿದೆನ್ನುವುದರಿಂದಲೂ ನಿತ್ಯ ನೈಮಿತ್ತಿಕಾದಿ ಕರ್ಮಗಳನ್ನು ನಿಜಲಿಂಗ ಶಿವಾರ್ಪಿತವಾಗಿ ಮಾಡಬೇಕೆನ್ನುವುದರಿಂದಲೂ, ವೀರಶೈವರಲ್ಲಿ ಬ್ರಾಹ್ಮಣವರ್ಣದವರ ಧರ್ಮವಿಧಿಯಿದು ಎನ್ನಬಹುದು ಆದರೆ ಹಾಗಲ್ಲ.

ಹಿಂದಿನ ಲೇಖದಲ್ಲಿ ಬರೆದಂತೆ ಶುದ್ಧ ವೀರಶೈವವು ಶಿವಾಗಮ ಸಂಪ್ರದಾಯದಲ್ಲಿ ಹೆಜ್ಜೆ ಹೆಜ್ಜೆಗಳಿಂದ ಮುಂದುವರಿದುದು. ಸ್ಮಾರ್ತ ಸಂಪ್ರದಾಯವನ್ನು ಹಿಂಬಾಲಿಸುವ ಪುರಾಣಗಳು ಈ ಶೈವಧರ್ಮವನ್ನು ಬರಬರುತ್ತ ಬಹಳ ಮಿತಿಯಿಂದ ಸ್ವೀಕರಿಸುತ್ತ ಬಂದುವು. ಶೈವಶ್ರುತಿ

ಗಳು "ಶಿವಏಕೋಧ್ಯೇಯಃ ಶಿವಂಕರಃ" ಅಥರ್ವಶಿಖೋಪ ನಿಷತ್ತು ಯದಾಚರ್ಮ ವದಾಕಾಶಂ ವೇಷ್ಟಯಿಷ್ಯಂತಿ ಮಾನವಾಃ ತದಾಶಿವ ಮವಿಜ್ಞಾಯ ದುಃಖಸ್ಯಾಂತೋ ಭವಿಷ್ಯತಿ" ಶ್ವೇತಾಶ್ವತರ ನಿಧನಪತ ಯೇನಮಃ— ಸರ್ವಲಿಂಗಂ ಸ್ಥಾಪಯತಿ ಪಾಣಿಮಂತ್ರ ಪವಿತ್ರಂ" ನಾರಾ ಯಣವೋಪನಿಷತ್ತು ಮುಂತಾಗಿ ಉಪನಿಷದ್ವಾಕ್ಯಗಳನ್ನು ಕಾಣಬಹುದು.

ವೇದ ವೇದಾಂತಗಳಲ್ಲಿರುವ ಶಿವಪರ ಶ್ರುತಿಗಳನ್ನು ಶಿವಾಗಮಗಳೂ ವಿಷ್ಣುಪರವಾಕ್ಯಗಳನ್ನು ವೈಷ್ಣವಾಗಮಗಳೂ, ಪ್ರಜಾಪತಿ ಪರವಾಕ್ಯಗ ಳನ್ನು ಪ್ರಜಾಪತಾಗಮಗಳೂ ಪ್ರಪಂಚಿಸುತ್ತ, (೧) ಭಸ್ಮ ರುದ್ರಾಕ್ಷಧಾ ರಣ ಲಿಂಗಧಾರಣ, ತಪ್ತಮುದ್ರಾಧಾರಣ (೨) ವರ್ತುಲಧಾರಣಾದಿ ಧರ್ಮಗಳನ್ನೂ ಆಯಾ ಸಂಸ್ಕಾರಗಳನ್ನೂ ವಿಧಿಸಿದುವು. ಈ ಆಗಮ ಗಳು ಸ್ಮೃತಿಗಳಂತೆ ಶ್ರುತ್ಯರ್ಥ ವಿಚಾರಕರ ನೆನಪಿನ ವಾಕ್ಯಗಳಾಗಿರದೆ ಸ್ವತಂತ್ರವಾಗಿ ಆಯಾ ದೇವತೆಗಳಿಂದ ಪ್ರವೃತ್ತವಾದುದರಿಂದ, ಕಲ್ಪ ಸೂತ್ರ ಗೃಹ್ಯಸೂತ್ರ ಧರ್ಮಸೂತ್ರ ಮೀಮಾಂಸಾಸೂತ್ರ ಎಂಬಿವು ಮೊದ ದವು ಗಳು ನಿರ್ವಚಿಸಿದಂತೆಯೆ ವೇದಮಾರ್ಗಗಾಮಿಗಳಾದವರು ಆಗಮ ಗಳನ್ನು ಅನುಸರಿಸಬಹುದೊ ಬಾರದೊ, ಅನುಸರಿಸಿದರೆ ಎಷ್ಟರಮಟ್ಟಿಗೆ ಅನುಸರಿಸಬಹುದು ಎನ್ನುವಲ್ಲಿ ಜಿಜ್ಞಾಸವೂ ಊಹಾಪೋಹವೂ ಉಂಟಾ ದುವು. ಇಷ್ಟರಲ್ಲಿ ಆಗಮಗಳ ದೀಕ್ಷಾಸಂಸ್ಕಾರವು ಸ್ವತಂತ್ರವಾಗಿದ್ದಿತು. ಕೇವಲ ಕರ್ಮಮಾರ್ಗದಲ್ಲಿ ನಿರೀಶ್ವರನಾದ ಜೈಮಿನಿಯ ವೈದಿಕ ಸಿದ್ಧಾಂ ತದಲ್ಲಿ ಈ ಪ್ರಕಾರದ ವಿಚಾರಕ್ಕೂ ತುಲನೆಗೂ ಆಸ್ಪದವಿಲ್ಲ. ಆದರೆ ಉಪನಿಷತ್ತುಗಳು ಮುಂದುವರೆದಂತೆ ಆಯಾ ಶ್ರುತಿಗಳ ಕೂಲಂಕಷ ವಿಚಾರವೂ, ಅವುಗಳ ಸಾರಸರ್ವಾಂಶವೂ ಮೀಮಾಂಸೆಗಾಸ್ಪದವಾದುವು. ಹಳೆಯ ಕರ್ಮಮಾರ್ಗವನ್ನು ಬಿಡದೆ ಮುಂಬರಿವ ವಿಚಾರಕರು ಶಿವಾದಿ ಶ್ರುತಿಗಳನ್ನೂ ಅವುಗಳ ಸಾರವನ್ನು ಅಷ್ಟು ದೂರದ ವರೆಗೆ ತಿಳಿಯ ದಾದರು. ಅವರು ಯಜ್ಞಾಂಗ ವಿಚಾರದಿಂದಲೆ ಆರಂಭಿಸುವ ಉಪನಿಷ ತ್ತುಗಳೆ ಮುಖ್ಯವೆಂದು ತದನುಗುಣವಾಗಿ ವಿಶೇಷ ವಾಚಕಗಳಾದ ಶಿವಾದಿ ಶ್ರುತಿಶಬ್ದಗಳನ್ನು ಹಚ್ಚಿದರು. ಹಾಗಲ್ಲದವರು ಶಿವಾದಿ ಶಬ್ದ ಗಳನ್ನು ಪರವಸ್ತುವಿನಲ್ಲಿರುವ ಸರ್ವಜ್ಞತ್ವಾದಿ ಷಡಂಗ ಗುಣಗಳನ್ನೂ, ಜ್ಞಾನವಿರಾಗಾದಿ ದಶಾವ್ಯಯ ಗುಣಗಳನ್ನೂ ಬೋಧಿಸುವಾಗಿ ವಿಶದೀ ಕರಿಸಿದರು, ಶ್ವೇತಾಶ್ವರಾದ್ಯುಪನಿಷತ್ತುಗಳಲ್ಲಿ ಕಾರಣ ವಿಚಾರ ವಾಕ್ಯಗ

ಳಲ್ಲಿ ಬರುವ ಕಲಾದಿ ಪದಾರ್ಥಗಳನ್ನು ಕೂಲಂಕಷವಾಗಿ ಶೋಧಿಸಿದರು. ಇಂತಹ ವಿಚಾರಕರ ಸಂಪ್ರದಾಯವು ಶಿವಾಗಮ ಸಂಪ್ರದಾಯವೆನಿಸಿತು. ವೇದಾಧ್ಯಯನಕ್ಕೆ ಉಪನಯನ ಸಂಸ್ಕಾರವು ಬೇಕಾಗಿದ್ದಿತು. ಉಪನಯನಂ ವಿದ್ಯಾರ್ಥಸ್ಯ ಶ್ರುತಿತಃ ಸಂಸ್ಕಾರಃ" ಆಪಸ್ತಂಬ ಧರ್ಮ ಸೂತ್ರಗಳು ಉಪನಯನ ಸಂಸ್ಕಾರವನ್ನು ಹೊಂದಿ ಆಚಾರ್ಯನಲ್ಲಿ ಓದುವವನು ಹಳೆಯ ಪದ್ಧತಿಯಂತೆ ಓದುತ್ತ ನಡೆವನು. ಆಗಮ ಸಂಪ್ರದಾಯವನ್ನು ಅಧ್ಯಯನ ಮಾಡನು. ಓದಿದರು ಅದರಲ್ಲಿ ಶ್ರದ್ಧೆಯನ್ನಿಡನು-ಆದುದರಿಂದ ಈ ಆಗಮ ಸಂಪ್ರದಾಯವು ತನ್ನದೊಂದು ದೀಕ್ಷಾಸಂಸ್ಕಾರವನ್ನು ಹಿಡಿದು ಅದಕ್ಕೆ ಮಹತ್ವವನ್ನು ಕೊಟ್ಟಿತು.

ಏಷಾಮಧ್ಯಯನಂ ಕಾರ್ಯಂ ಶಿವವಿಪ್ರೈರ್ಗುರು ಕ್ರಮಾತ್ ॥
ಅಧ್ಯಾಪನಂ ಚ ಕರ್ತವ್ಯಂ ನ ಕಾರ್ಯಮಿತರೈರ್ವರ್ಣೈಃ ॥
ದೀಕ್ಷಾವಿಹೀನ ವಿಪ್ರಾದ್ಯಾಸ್ತ್ರಿವರ್ಣಾಃ ಶೂದ್ರಜಾತಯಃ ।
ಸವರ್ಣಾದ್ಯಾನುಲೋಮಾಶ್ಚ ಶಿಲ್ಪಿನಃ ಕಾರುಕಾದಯಃ ॥
ಪಠಂತಿ ಶಿವ ಶಾಸ್ತ್ರಂ ಚೇತ್ ತತ್ಪಾನ್ನೃಪರಾಷ್ಟ್ರಯೋಃ ।
ಅಚಿರೇಣ ವಿನಾಶಃ ಸ್ಯಾತ್ತಸ್ಮಾದ್ರಾಜಾನಿವಾರಯೇತ್॥

ಕಾಮಿಕಾಗಮ. ತಂತ್ರಾವತಾರ ಪಟಲ ೧---೧೧೦---೧೧೨ ಶ್ಲೋಕಗಳು ಶಿವದೀಕ್ಷಾಯುಕ್ತರಿಗೆ ಇತರ ಶಾಸ್ತ್ರಗಳಲ್ಲಿ ಅಧ್ಯಯನಾದಿ ಅಧಿಕಾರವಿದೆ. ಅದಿಲ್ಲದವರಿಗೆ ಶಿವ ಶಾಸ್ತ್ರದಲ್ಲಿ ಅಧಿಕಾರವಿಲ್ಲೆಂದು ಆಗಮಗಳು ಪ್ರತಿಷ್ಠಾಪಿಸಿದುವು. ಮುಖ್ಯತ್ವಾದಿಹ ಶೈವಸ್ಯ ಮುಖ ಮಾಹಾತ್ಮ್ಯತೋಪಿಚ । ಅಧಿಕಾರೋಸ್ತಿ ಸರ್ವತ್ರ ನಾನ್ಯೇಷಾಂ ಶಿವದರ್ಶನೇ ॥ ಕಾ. ೧ ಪ- ೧೨೪—

ಶಿವದೀಕ್ಷಾಯುಕ್ತನಿಗೆ ಲಿಂಗಾರ್ಚನವು ಅತ್ಯಂತ ಪರಮಧರ್ಮವಾಯ್ತು. 'ಅಗ್ನಿ ಹೋತ್ರಾಶ್ಚವೇದಾಶ್ಚಯಜ್ಞಾಶ್ಚಬಹುದಕ್ಷಿಣಾಃ । ಶಿವಲಿಂಗಾರ್ಚನಸ್ಯೈತೆ ಕೋಟ್ಯಂಶೇನಾಪಿನೋ ಸಮಾಃ ॥ ಕಾ. ೨ ಶಿವಾರ್ಚನ ಪಟಲ ೧೧

ಅಗ್ನಿ ಹೋತ್ರಾದಿಗಳು ಹಿಂದೆ ಬಿದ್ದು ಶಿವಾರ್ಚನವು ಮುಖ್ಯವಾದಂತೆ ಶಿವಾರ್ಚಕರು ಬ್ರಹ್ಮಸೃಷ್ಟಿಗಿಂತ ಮಿಗಿಲಾದ ಶಿವಸೃಷ್ಟಿಜರೆಂದೂ ಬ್ರಹ್ಮಸೃಷ್ಟಿಜರ ಪೈತಾಮಹಧರ್ಮವೆಂಬ ಸ್ಮೃತಿಗಳಿಗೆ ಅಧಿಕಾರಿಗಳೆಂದೂ

ಶಿವಾಗಮ ಸಂಪ್ರದಾಯವು ನಂಬಹತ್ತಿತು. ಆ ನಂಬುಗೆಯು ಬಲವಾಗುತ್ತ ಸಪ್ತವಿಧ ಶೈವದೀಕ್ಷೆಗಳಲ್ಲಿ ಪರಿಣಮಿಸಿತು. ಶಿವಸೃಷ್ಟಿಂ ವಿನಾಯೇತು ಜಾಯಂತೇ ಬ್ರಹ್ಮಣೋಮುಖಾತ್। ತೇ ಸಾಮಾನ್ಯಾಃ— ವಿಪ್ರಾಃ— ಕಾ. ೭. ಶೀವದೀಕ್ಷೆಯಿಂದ ಶಿವಸೃಷ್ಟಿಜರಾಗುವರೆಂಬ ಭಾವನೆಯು ಬಲಿ ಬಲಿದು ವೀರಶೈವದೀಕ್ಷೆಯು ಪ್ರಬಲವಾಗಿ ಉಪನಯನವೂ ಆದ್ವಾರದಿಂದಾದ ಜಾತಿ ಭೇದವೂ ಹಿಂದೆ ಬಿದ್ದು ನಿಜವಾದ ಭಕ್ತಿಮಾರ್ಗವು ಪ್ರಕಟವಾಯಿತು. ಹಿಂದೊಮ್ಮೆ ಈ ವಿದಾರಿಕೆಯಲ್ಲಿ ಈ ವಿಷಯವನ್ನು ವಿವರಿಸಿರುವೆನಾದರೂ ಲಿಂಗಧಾರಣ ಚಂದ್ರಿಕೆಯಲ್ಲುದಾಹರಿಸಿದ ಲಿಂಗ ಪುರಾಣವಾಕ್ಯ ವಿಮರ್ಶಕ್ಕಾಗಿ ಆಗ ಬರೆಯದಿದ್ದ ಕೆಲವಂಶಗಳನ್ನು ಬರೆದು ವಿಷಯ ಪ್ರತಿಪಾದನವನ್ನು ಮಾಡಿದುದಾಯಿತು.

ಆಗಮ ಸಂಪ್ರದಾಯದ ವಿಕಾಸದಲ್ಲಿ ಒಡೆದು ತೋರುವ ಉದಾತ್ತ ಭಾವವು ಬರಬರುತ್ತ ಸ್ಮಾರ್ತ ಸಂಪ್ರದಾಯದಲ್ಲಿ ಸೇರಲು ತೊಡಗಿತು. ಉದಾತ್ತ ವಿಚಾರಗಳ ಬಲವು ಅಂತಹದು. ಎಷ್ಟು ಗಟ್ಟಿಯಾಗಿ ನಾನೊಲ್ಲೆವೆಂದರು ಉರುಟರನ್ನು ವಶಗೊಳಿಸದೆ ಬಿಡವು. ಈ ಪ್ರಚಾರವು ಪುರಾಣಗಳಿಂದ ಸಾಗಿತು. ಶಿವಾಗಮಗಳಂತೆ ವೈಷ್ಣವಾಗಮಗಳ ಪ್ರಸಾರವೂ ಇದ್ದಿತು. ಪಾಂಚರಾತ್ರಾದಿವೈಷ್ಣವಾಗಮಗಳನ್ನು ವೈಷ್ಣವ ಪುರಾಣಗಳೂ ಕಾಮಿಕಾದಿಶೈವಾಗಮಗಳನ್ನು ಶೈವ ಪುರಾಣಗಳೂ ಬಳಕೆಯಲ್ಲಿ ತಂದುವು. ಮತ್ತೊಂದು ಬಗೆಯಿಂದ ನೋಡಿದರೆ ಆಗಮಿಕ ಧರ್ಮಗಳ ಉದಾರಭಾವದಿಂದ ಅವುಗಳ ಎದುರಿಗೆ ನಿಲ್ಲಲಾರದೆ ಸ್ಮಾರ್ತಧರ್ಮವು ಆಗಮಕ ತತ್ವಗಳನ್ನು ಕೆಲವು ಮಟ್ಟಿಗೆ ಬಳಕೆಯಲ್ಲಿ ತಂದು ಆಗಮ ಧರ್ಮವನ್ನು ಹಿಂದಟ್ಟಲಿಕ್ಕೆ ಪ್ರಯತ್ನವನ್ನು ಮಾಡಿತೆನ್ನಲು ಅಡ್ಡಿಯಿಲ್ಲ. ಬುದ್ಧ ಧರ್ಮದ ಅಹಿಂಸಾತತ್ವಗಳನ್ನು ಕೆಲವು ಮಟ್ಟಿಗೆ ಒಳಗೊಂಡು ಬುದ್ಧನನ್ನು ಅವತಾರವೆಂದು ಸ್ವೀಕರಿಸಿ ಅದನ್ನು ಹಿಮ್ಮೆಟ್ಟಿಸಿದುದು ಉದಾಹರಣವಾಗಿದೆ. ಹೇಗೂ ಇರಲಿ. ವೈಷ್ಣವ ಶೈವಪುರಾಣಗಳು ಆಗಮಿಕ ತತ್ವಗಳನ್ನು ಬಳಕೆಯಲ್ಲಿ ತಂದುವು. ಶೈವಾಗಮಗಳು ಆದರಣೀಯವೆನ್ನುವ ಶೈವಪುರಾಣಗಳನ್ನು ಎರಡು ವರ್ಗಗಳಲ್ಲಿ ಹಾಕಬಹುದು. ಕೆಲವು ಪುರಾಣಗಳು ವೈದಿಕ ಧರ್ಮದಿಂದ ಪತಿತರಾದವರ ಉದ್ಧಾರಕ್ಕಾಗಿ ಶಿವಾಗಮಗಳೆಂದುವು. ಇನ್ನು ಕೆಲವು ವೇದಾನುಕೂಲವಾದ ಆಗಮಗಳು ಅಲ್ಲಲ್ಲ ವೇದಸಾರವಾದ ಆಗಮಗಳು ಮತ್ತು ವೇದ ವಿರುದ್ಧವಾದ ಆಗಮ

ಗಳು ಎಂಬ ಎರಡು ವಿಭಾಗಗಳನ್ನು ಆ ಶಿವಾಗಮದಲ್ಲಿ ಮಾಡಿದುವು. ಉಭಯ ವಿಧದ ಆಗಮಗಳೂ ಸ್ವತಃ ಪ್ರಮಾಣವೆ ಆದರೆ ವೇದಮಯಾಗಮಗಳು ವೈದಿಕರಿಂದ ಗ್ರಾಹ್ಯವು. ಅವೈದಿಕ ಆಗಮಗಳು ಅಗ್ರಾಹ್ಯವು ಎಂದುವು- ಮೊದಲನೆಯ ವರ್ಗಕ್ಕೆ ಸೂತಸಂಹಿತೆಯೂ ಎರಡನೆಯದಕ್ಕೆ ವಾಯವೀಯ ಸಂಹಿತೆಯೂ ಉದಾಹರಣವಾಗಿವೆ. ಸೂತಗೀತಾ ಅ. ೮—೨೬ ವಾಯವೀಯ ಸಂಹಿತಾ ಪೂರ್ವಭಾಗ ಅಧ್ಯಾಯ ೨೮—೧೧ ನೋಡಿರಿ.

ಮಹಾಪುರಾಣಗಳಿಗಿಂತ ಉಪಪುರಾಣಗಳು ಶೈವಧರ್ಮಗಳನ್ನು ವಿಶೇಷಿಸಿದವು. ಪರಾಶರ ಪುರಾಣ ಸಾಂಬ ಪುರಾಣ- ಮಾನವ ಪುರಾಣ ಇತ್ಯಾದಿ ಪುರಾಣ ಉಪ ಪುರಾಣಗಳನ್ನು ಪದ್ಮರಾಜ ಪುರಾಣಾದಿ ವೀರ ಶೈವಗ್ರಂಥಗಳು ಈ ತತ್ವಗಳು ವೈದಿಕವೆನ್ನುವಲ್ಲಿ ಉದಾಹರಿಸುತ್ತಿರುವುದನ್ನು ನೋಡಿರಿ.

ಇರಲಿ. ಲಿಂಗಧಾರಣೋದಾಹೃತ ಲಿಂಗಪುರಾಣ ವಚನವು ಲಿಂಗ ಧಾರಣವೂ ಕರತಲಪೂಜೆಯೂ ವೈದಿಕವೆಂದು ಪ್ರತಿಪಾದಿಸುತ್ತ ಬ್ರಾಹ್ಮಣನು ಲಿಂಗಧಾರಣವನ್ನು ಪಡೆಯಬೇಕೆಂದು ಮಾತೃಸಂಮಿತವಾಗಿ ಬೋಧಿಸುತ್ತಿದೆ. ಅದರ ಕನ್ನಡವಿದು:— ವೇದಗಳಲ್ಲಿಯು ಶಾಸ್ತ್ರಗಳ ಮೊತ್ತದಲ್ಲಿಯು ಬ್ರಾಹ್ಮಣನಿಗೆ ಉತ್ತಮವಾದ ಲಿಂಗಧಾರಣವು ಚೆನ್ನಾಗಿ ಹೇಳಲ್ಪಟ್ಟಿದೆ. ಯಜುರ್ವೇದವಾದೊಡೆಯು ಸರ್ವಲಿಂಗಂ ಸ್ಥಾಪಯತಿ ಎಂದು ಹೇಳುತ್ತಲಿದೆ. ಆದುದರಿಂದ ಮಹಾಲಿಂಗವನ್ನು ಪಾಣಿಮಂತ್ರವೆಂಬ ಶಬ್ದಗಳುಳ್ಳ ಆ ಯಜುರ್ಮಂತ್ರದ ಬಲದಿಂದ ಧರಿಸತಕ್ಕದು. ದೀಕ್ಷಾ ಕಾಲದಲ್ಲಿ ಶಿಷ್ಯನ ಹಸ್ತದಲ್ಲಿ ಲಿಂಗವನ್ನಿಟ್ಟು ಗುರುವು ಆ ಶಿವರೂಪ ಲಿಂಗವನ್ನಾವ ಮಂತ್ರದಿಂದ ಸ್ತುತಿಸುವನೊ ಆ ಮಂತ್ರವು ಪಾಣಿಮಂತ್ರವೆನಿಸಿತು. ಮಹೇಶ್ವರನು ಪವಿತ್ರನು. ಅಂತಪ್ಪ ಶಿವನನ್ನು ಪ್ರತಿಪಾದಿಸುವುದರಿಂದಲು, ಮನುಜರನ್ನು ಪವಿತ್ರಗೊಳಿಸುವುದರಿಂದಲು, ಲಿಂಗವು ಪವಿತ್ರವೆನಿಸುವುದು. ಆದುದರಿಂದ ಉತ್ತಮವಾದ ಶಿವಲಿಂಗವನ್ನು ಎಲ್ಲ ಕಾಲಗಳಲ್ಲಿಯು ಧರಿಸತಕ್ಕದು. ಹೋಗುತ್ತಿರಲಿ, ನಿಂತಿರಲಿ, ನಿದ್ದೆಹೋಗಿರಲಿ, ಎಚ್ಚರಿರಲಿ, ಕಣ್ದೆರೆದಿರಲಿ, ಮುಚ್ಚಿರಲಿ, ಮಡಿಯಿರಲಿ, ಮೈಲಿಗೆಯಿರಲಿ, ಲಿಂಗವನ್ನು ಎಲ್ಲೆಡೆಯಲ್ಲಿಯು ಧರಿಸಬೇಕು. ಲಿಂಗ ಧಾರಿಯು ಸದಾಶುದ್ಧನು. ಮನೋಹರವಾದ ತನ್ನ ಇಷ್ಟಲಿಂಗವನ್ನು

ಕೆರಪೀಠದಲ್ಲಿ ಎಚ್ಚರದಿಂದ ಗಂಧ ಪುಷ್ಪಾದಿಗಳಿಂದ ಪೂಜಿಸುತ್ತ, ನಿತ್ಯ ನೈಮಿತ್ತಿಕ ಕರ್ಮಗಳನ್ನು ಶಿವಾರ್ಪಣಬುದ್ಧಿಯಿಂದ ನಿಜವಾದ ಜ್ಞಾನವು ಬೆಳೆಯಲಿಕ್ಕಾಗಿ ಎಸಗತಕ್ಕುದು.

"ಬ್ರಾಹ್ಮಣಸ್ಯ ಸಮಾಖ್ಯಾತಂ ಲಿಂಗಧಾರಣಮುತ್ತಮಂ" ಎಂಬೀ ವಚನವನ್ನು ಎರಡು ವಿಧವಾಗಿ ಹಚ್ಚಬಹುದು. ಬ್ರಾಹ್ಮಣನು ಲಿಂಗಧಾರಣವನ್ನು ಹೊಂದುವುದು ಉತ್ತಮವು. ಬ್ರಾಹ್ಮಣ ಧರ್ಮವು ಲಿಂಗಧಾರಣದಲ್ಲಿ ಪರ್ಯವಸಾನವನ್ನು ಹೊಂದಬೇಕು. ಹಾಗಾಗದಿದ್ದರೆ ಬ್ರಾಹ್ಮಣಿಕೆಯೂ ವ್ಯರ್ಥವು. ಎಂಬುದೊಂದು ಲಿಂಗಧಾರಣವನ್ನು ಹೊಂದುವುದು ಬ್ರಾಹ್ಮಣನ ಧರ್ಮದಲ್ಲಿ ಉತ್ತಮವಾದುದು. ಮೊದಲಿನ ಅರ್ಥದಿಂದಲೆ ಲಿಂಗಪುರಾಣವು ಈ ವಚನವನ್ನು ಆಡಿರುವುದೆಂಬುದನ್ನು ತೋರಿಸುವೆನು. ಅನ್ಯಕ ಆವುದೊಂದರ್ಥವನ್ನು ಹಿಡಿದರು ವೀರಶೈವರಲ್ಲಿ ಪರಸ್ಪರ ವರ್ಣಭೇದವು ಸಿದ್ಧಿಸದು. ಬ್ರಾಹ್ಮಣ ಧರ್ಮವು ಲಿಂಗಧಾರಣದಲ್ಲಿ ಪರ್ಯವಸಾನವನ್ನು ಹೊಂದಬೇಕೆಂಬ ಅರ್ಥದಲ್ಲಿ ಲಿಂಗಧಾರಣಾನಂತರದಲ್ಲಿ ವೀರಶೈವತ್ವವು ಬಂದ ಬಳಿಕ ಬ್ರಾಹ್ಮಣಿಕೆಯು ಉಳಿವುದೆಂಬುದಕ್ಕೆ ಪ್ರಮಾಣವಿಲ್ಲ. ಸೂಕ್ಷ್ಮಾಗಮಾದಿ ವಾಕ್ಯಗಳು ಜಾಗರೂಕವಾಗಿವೆ. ಎರಡನೆಯ ಅರ್ಥದಲ್ಲಿ ಬ್ರಾಹ್ಮಣನು ಲಿಂಗಧಾರಿಯಾಗಿ ಶುದ್ಧ ಶೈವನಾದರು ವೀರಶೈವರಲ್ಲಿ ಜಾತಿಭೇದವನ್ನು ಸಾಧಿಸಲಿಕ್ಕೆ ಉದಾಹರಣವಾಗನು.

ಇನ್ನು ನಿಜಾರ್ಥವನ್ನು ಕಾಣುವನು. ಶಿವಾಗಮಗಳನ್ನು ಪ್ರಮಾಣೀಕರಿಸಿ ಯೋಗಸೂತ್ರಗಳೂ, ಶಿವಪುರಾಣಗಳೂ ಬಂದಿವೆ. ತತ್ರ ನಿರತಿಶಯಂ ಸರ್ವಜ್ಞ ಬೀಜಂ ಎಂಬ ಯೋಗಸೂತ್ರದ ವ್ಯಾಸಭಾಷ್ಯಕ್ಕೆ ಟೀಕೆಯನ್ನು ಬರೆದ ತಂತ್ರಕೌಮುದೀಕಾರನ ವಚನವನ್ನು ಶಿವಾದ್ವೈತಮಂಜರಿಯಿಂದ ಇಲ್ಲಿ ಎತ್ತಿ ಹೇಳುವೆವು. ಸಂಜ್ಞಾವಿಶೇಷ ಪ್ರತಿಪತ್ತಿರಾಗಮತಃ ಪರ್ಯೇಷ್ಯತಿ"— ಶಿವ ರುದ್ರ ಮಹೇಶ್ವರಾದಿ ಸಂಜ್ಞೆಗಳ ಮತ್ತು ಷಡಂಗ, ದಶಾವ್ಯಯಾದಿ ಗುಣಗಳ ತಿಳಿವೆಯು ಆಗಮಗಳಿಂದ ಆಗುವುದು.

ಲಿಂಗಪುರಾಣದ ಈ ವಚನಗಳಿಗೆ ಸಿದ್ಧಾಗಮವು ಮೂಲವಾಗಿದೆ. ಸಿದ್ಧಾಗಮ ವಚನಗಳಿವು ಪ್ರಳಯಂ ನಿಧನಂ ಖ್ಯಾತಂ। ಸರ್ವಭೂತಲಯಾತ್ಮಕಂ। ತತ್ಪ್ರವರ್ತಕತ್ವಂ ಮಹೇಶಸ್ಯ ತಸ್ಮಾತ್ತತ್ಪತಿರೀಶ್ವರಃ॥ ಏತ

ತ್ಸೂರ್ಯಸ್ಯ ಮಿತ್ರಸ್ಯ ಮಂಡಲಾಂತರವರ್ತಿನಃ । ಸೋಮಸ್ಯ ಪಾರ್ವತೀಶಸ್ಯ ಲಿಂಗಂಭವ ಭಯಾಪಹಂ ॥ ಸರ್ವೇಷು ಭಕ್ತದೇಹೇಷು ಸ್ಥಾಪಯೇದ್ಗುರುಣಾಸದಾ ॥ ಪವಿತ್ರಾಣಾಂ ಪವಿತ್ರತ್ವಾತ್ಪವಿತ್ರಮಿತಿಕಥ್ಯತೇ । ತಸ್ಮಾದ್ಧಾರ್ಯಂ ಸದಾಲಿಂಗಂ ಪಾಣಿಮಂತ್ರೇತಿಮಂತ್ರತಃ । ಪಾಣೌ ಲಿಂಗಂ ಸಮಾಪಾದ್ಯ ದೀಕ್ಷಾಕಾಲೇಗುರುಃ ಶಿವಂ । ಯೇನ ತನ್ಮಂತ್ರಂ ಪಾಣಿಮಂತ್ರಂ ವದಂತಿಹಿ ॥ ಮನನಾತ್ಪೂಜನಾದ್ಭಕ್ತ್ಯಾತ್ರಾಯತೀತಿ ನಿರುಕ್ತಿತಃ । ಪಾಣಿಮಂತ್ರಮಿತಿಪ್ರೋಕ್ತಂ ತಲ್ಲಿಂಗಂ ಬ್ರಹ್ಮಶಾಶ್ವತಂ ॥ ನಾರಾಯಣೋಪನಿಷದ್ಭಾಷ್ಯದಲ್ಲಿ ಶ್ರೀ ಪಂಡಿತಾರಾಧ್ಯರುದಾಹರಿಸಿದುದು.

ನಿಧನವೆಂದರೆ ಸರ್ವಭೂತಲಯವಾದ ಪ್ರಳಯವು. ಮಹೇಶನು ಅದಕ್ಕೆ ಕರ್ತೃವು. ಅದರಿಂದ ನಿಧನಪತಿಯು ಶಿವನು. ಸೂರ್ಯಮಂಡಲಾಂತರ್ವರ್ತಿಯಾದ ಪಾರ್ವತೀಪತಿಯ ಈ ಲಿಂಗವು ಸಂಸಾರಭಯ ನಿವಾರಣವಾಗಿಹುದು. ಆ ಲಿಂಗವನ್ನು ಸರ್ವ ಭಕ್ತರ ದೇಹದಲ್ಲಿ ಗುರುವಿನಿಂದ ಸ್ಥಾಪಿಸಬೇಕು. ಪವಿತ್ರವಾದ ಗಂಗಾದಿಗಳಿಗಿಂತ ಪವಿತ್ರವಾದುದರಿಂದ ಲಿಂಗವು ಪವಿತ್ರವೆನಿಸಿತು. ಆದುದರಿಂದ ಪಾಣಿಮಂತ್ರವೆಂಬ ಮಂತ್ರ ಪ್ರಮಾಣದಿಂದ ಲಿಂಗವನ್ನು ಆವಾಗಲು ಧರಿಸತಕ್ಕುದು. ದೀಕ್ಷಾ ಕಾಲದಲ್ಲಿ ಲಿಂಗವನ್ನು ಹಸ್ತದಲ್ಲಿಟ್ಟು ಗುರುವು ಆ ಮಂತ್ರದಿಂದ ಶಿವನನ್ನು ನೆನೆವನೊ ಆ ಮಂತ್ರವು. ಪಾಣಿ ಮಂತ್ರವು ಮನನವೆಂದರೆ ಪೂಜೆಯು. 'ಪಾಣಿಗತವಾಗಿ, ಪೂಜೆಯಿಂದ ಭಕ್ತನನ್ನು ಕಾಪಾಡುವುದರಿಂದ ಬ್ರಹ್ಮರೂಪವಾದ ಲಿಂಗವು ಪಾಣಿಮಂತ್ರವೆನಿಸಿತು.

ಸಿದ್ಧಾಗಮವು ನಾರಾಯಣೋಪನಿಷತ್ತಿನ ಸರ್ವಲಿಂಗಂ ಎಂಬ ಶಬ್ದಗಳಿಗೆ ಸರ್ವೇಷು ಭಕ್ತದೇಹೇಷು ಎಲ್ಲ ಭಕ್ತರ ದೇಹಗಳಲ್ಲಿ ಎಂದೂ "ಸ್ಥಾಪಯತಿ" ಎನ್ನುವುದಕ್ಕೆ ಗುರುಣಾಸ್ಥಾಪಯೇತ್ ಗುರುವಿನಿಂದ ಸ್ಥಾಪಿಸಬೇಕು ಎಂದೂ ಪಾಣಿಮಂತ್ರಂ ಎನ್ನುವುದಕ್ಕೆ ಪಾ ಣೌಮನನಾತ್ ತ್ರಾಯತಿ ಎಂದೂ ವಿವರಿಸಿರುವುದರಿಂದ ಎಲ್ಲ ಭಕ್ತರಿಗೂ ಗುರುವು ಹಸ್ತದಲ್ಲಿ ಲಿಂಗವನ್ನು ಕರುಣಿಸಿ ಅನುಗ್ರಹಿಸುವ ದೀಕ್ಷೆಯು ಏಕವಿಧವಾಗುವದೆಂದು ಸಿದ್ಧವಾಗುತ್ತಿದೆ. ಸರ್ವೇಷು ಭಕ್ತದೇಹೇಷು ಎನ್ನುವುದರಿಂದ ವೀರಶೈವ ಲಿಂಗಾಯತ ದೀಕ್ಷೆಗೆ ಭಕ್ತಿಯೊಂದೆ ಪ್ರಮಾಣವಾಗಿದೆ. ನಿಸ್ಸೀಮವಾದ ಅವ್ಯಭಿಚಾರ ಭಕ್ತಿಯು ವೀರಶೈವ ದೀಕ್ಷೆಗೆ ಅಧಿಕಾರವನ್ನುಂಟು ಮಾಡುವುದು. ಸೂಕ್ಷ್ಮಾಗಮವು ಇದನ್ನೆ ಹೇಳುವುದು.

ಯೇಷು ಯೇಷು ಮಹಾದೇವಿ ಭಕ್ತಿರವ್ಯಭಿಚಾರಿಣೀ। ಯೋಗ್ಯಾಸ್ತ ಏವಮಂತ್ರಸ್ಯ। ಭಕ್ತಿರೇವಾತ್ರ ಕಾರಣಂ॥ ಸೂ. ೩-೨೪.

ಅಷ್ಟವರ್ಷಂ ಬ್ರಾಹ್ಮಣ ಮುಪನಯೀತ ತಮಧ್ಯಾಪಯೀತ" ಎಂಬ ಮೊದಲಾದ ಶ್ರುತಿಯು ಬ್ರಾಹ್ಮಣಾದಿಗಳಿಗೆ ಭಿನ್ನ ಭಿನ್ನವಾದ ಉಪನಯನದ ವಯೋಮಾನವನ್ನೂ ಭಿನ್ನ ಭಿನ್ನ ಋತುಗಳನ್ನೂ, ಭಿನ್ನ ಭಿನ್ನ ದಂಡಗಳನ್ನೂ ವಿಧಿಸುವುದು. "ವಸಂತೇ ಬ್ರಾಹ್ಮಣ ಮುಪನಯಿೂತ ಗ್ರೀಷ್ಮೇ ರಾಜನ್ಯಂ ಶರದಿವೈಶ್ಯಂ ಗರ್ಭಾಷ್ಟ ಮೇಷು ಬ್ರಾಹ್ಮಣಂ ಗರ್ಭೈಕಾದಶೇಷು ರಾಜನ್ಯಂ ಗರ್ಭದ್ವಾದಶೇಷು ವೈಶ್ಯಂ ಆಪಸ್ತಂಬಧರ್ಮ ಸೂತ್ರ ೧-೧-೧-೧೯ ಮೌಂಜೀಮೇಖಲಾ ಬ್ರಾಹ್ಮಣಸ್ಯ ೧-೧-೨-೩೩ ಜ್ಯಾ ರಾಜನ್ಯಸ್ಯ ೧-೧;೨-೩೪ ಆ ವೀಸೂತ್ರಂ ವೈಶ್ಯಸ್ಯ ೧-೧-೨-೩೬ ಪಾಲಾಶೋದಂಡೋಬ್ರಾಹ್ಮಣಸ್ಯ ನೈಯಗ್ರೋಧಸ್ಕಂಧ ಧ್ಗ್ರೋ ರಾಜನ್ಯಸ್ಯ ಬಾದರ ಔದುಂಬರೋವಾವೈಶ್ಯಸ್ಯ ೧೧-೨-೩೮ ಅದರಿಂದ ಈ ಮೂರು ವರ್ಣಗಳು ಸಂಸ್ಕಾರದಿಂದ ಭಿನ್ನವಾಗಿಹವು. ಅವುಗಳಲ್ಲಿ ಉಪನಯನವು ದ್ವಿಜತ್ವಕ್ಕೆ ಕಾರಣವಾದರೂ ಪ್ರಕೃತಿಭಾವವು ಅಳಿಯದು. ಅದರಿಂದ ಈ ಮೂರು ವರ್ಣಗಳು ಭಿನ್ನವೆನ್ನಲು ಕಾರಣವಿದೆ. ವೀರಶೈವ ದೀಕ್ಷೆಯಲ್ಲಿ ಆ ಕಾರಣಗಳಿಲ್ಲ.

ಸಿದ್ಧಾಗಮ ಪ್ರಮಾಣದಿಂದ ಪಾಣಿಮಂತ್ರವೆಂಬ ಯಜುಸ್ಸನ್ನು ಉಪಬೃಂಹಣಂ ಗೆಯ್ದುದರಿಂದ ಲಿಂಗಪುರಾಣದ ವಿವರವನ್ನು ಅದಕ್ಕೆ ಅನುಸರಿಸಿ ಮಾಡಬೇಕು. ಸಿದ್ಧಾಗಮವು "ಪಾಣಿಮಂತ್ರಮಿತಿಪ್ರೋಕ್ತಂ ತಲ್ಲಿಂಗಂ ಬ್ರಹ್ಮಶಾಶ್ವತಂ" ಲಿಂಗಕ್ಕೆ ಬ್ರಹ್ಮವೆನ್ನುವುದರಿಂದ ಬ್ರಹ್ಮರೂಪವಾದ ಲಿಂಗವನ್ನುಳ್ಳ ಗುರುಕರಜಾತನು ಬ್ರಾಹ್ಮಣನು. ತದಸ್ಯಾಸ್ಮಿನ್ನಿತಿ ಮತುಪ್ ೫-೨.೯೪ ಎಂಬ ಸೂತ್ರದಿಂದ ನಿತ್ಯವಾಗಿಬ್ರಹ್ಮ ಅಂದರೆ ಲಿಂಗವು ಆವನಲ್ಲಿ ಅಥವಾ ಆವನದು ನಿತ್ಯವಾಗಿ ಉಂಟೋ ಆತನು ಬ್ರಹ್ಮವಂತನು. ಭೂಮನಿಂದಾ ಪ್ರಶಂಸಾಸು ನಿತ್ಯಯೋಗೇತಿ ಶಾಯನೇ ಸಂಬಂಧೇಸ್ತಿ ವಿವಕ್ಷಾಯಾಂ ಭವಂತಿ ಮತುಬಿಂದಯಾ॥ ಎಂಬ ವಾರ್ತಿಕದಿಂದ ಲಿಂಗವು ಮಾಕದಾಚಿದ್ವಿಯೋಜಯ ತಸ್ಮಾದ್ಧಾರ್ಯಂ ಸದಾ ಲಿಂಗಂ, ಸಿದ್ಧಾಗಮ ಅತಃಸರ್ವೇಷು ಕಾಲೇಷು ಧಾರಯೇಲ್ಲಿಂಗ ಮುತ್ತಮಂ ಲಿಂಗಪುರಾಣ-ಈಗ ನಾವು ವಿವರಿಸುತ್ತಿರುವುದು ಎಂಬಿವೆ ಪ್ರಮಾಣಗಳಿಂದ ಲಿಂಗಕ್ಕೂ ಅಂಗಕ್ಕೂ ನಿತ್ಯಯೋಗವಿಹುದು. ಪ್ರಜ್ಞಾಶ್ರದ್ಧಾ

ಚಾರ್ಭ್ಯೋಣಃ" ೫-೨-೧೦೧ ಪ್ರಜಾಶ್ರದ್ಧಾ ಅರ್ಚಾ ಎಂಬೀ ಶಬ್ದಗಳಿಗೆ ಮತುಪ್ ಪ್ರತ್ಯಯಕ್ಕೆ ಣ ಪ್ರತ್ಯಯುವು ಬರುವುದುಂಟು. ಈ ಸೂತ್ರಕ್ಕೆ "ವೃತ್ತೇಶ್ಚ" ವಾರ್ತಿಕದಿಂದ ವೃತ್ತಿ ಶಬ್ದಕ್ಕೂ, ಚಕಾರದಿಂದ ಇನ್ನು ಕೆಲವುಗಳಿಗೂ ಈ ಣ ಪ್ರತ್ಯಯವು ಒದಗುವುದು. ಬ್ರಹ್ಮನ್×ಣಬ್ರಾಹ್ಮಣ.

ಲಿಂಗಪುರಾಣವು ಬ್ರಹ್ಮರೂಪವಾದ ಲಿಂಗವನ್ನುಳ್ಳ ವೀರಶೈವನು ಬ್ರಾಹ್ಮಣನಿಗಿಂತ ಪ್ರಶಸ್ತನಾದ ಬ್ರಾಹ್ಮಣನು ಎಂದು ಹೇಳಲಿಕ್ಕೆ ಯೌಗಿಕಾರ್ಥದಿಂದ ಪ್ರಯೋಗಿಸಿದ ಬ್ರಾಹ್ಮಣ ಶಬ್ದವುಳ್ಳ ಶ್ಲೋಕವನ್ನು ಸಂದರ್ಭದಿಂದ ಹರಿದು ವೀರಶೈವರಲ್ಲಿ ಅವಾಂತರ ಜಾತಿಭೇದಗಳನ್ನು ಕಲ್ಪಿಸಲಿಕ್ಕೆ ಅನುಕೂಲವಾಗುವಂತೆ ಭಿನ್ನವಾದುದೊಂದು ಶ್ಲೋಕಕ್ಕೆ ಜೋಡಿಸುವುದು ಚೆಲುವಲ್ಲ.

ಇನ್ನು ನಿತ್ಯ ನೈಮಿತ್ತಿಕಗಳೆಂದರೇನು ? — ನಿತ್ಯವು ಮಾಡುತ್ತಿರುವಲಿಂಗಪೂಜೆಯು ನಿತ್ಯವು- ಜಂಗವ ಮೂರ್ತಿಯು ಬಂದಾಗ ಮಾಡುತ್ತಿರುವ ಜಂಗಮ ಪೂಜೆಯು ನೈಮಿತ್ತಿಕವು- ಈ ನಿತ್ಯ ನೈಮಿತ್ಯಕಗಳನ್ನು ಶಿವಾರ್ಪಣ ಬದ್ಧಿಯಿಂದಲೆ ಮಾಡಬೇಕೆಂದು ಲಿಂಗ ಪುರಾಣದ ವಚನವು.

ವೀರಶೈವ ದೀಕ್ಷೆಯಿಂದ ಜಾತಿಸೂತಕವಳಿದು ಗೋತ್ರಂಚಶಿವಗೋತ್ರಂಚನಾಮಾಪಿ ಶಿವನಾಮಚ; ಆದ ವೀರಶೈವರಿಗೆ ಜಾತಿ ಭೇದವನ್ನು ಕಲ್ಪಿಸಬಾರದೆನ್ನುವುದಕ್ಕೆ ಲಿಂಗ ಪುರಾಣವು ತಡೆಯನ್ನು ಮಾಡಲಾರದು.

ಶ್ರೀ ಜಗದೀಶ ಶಾಸ್ತ್ರಿಗಳು ದಾಹರಿಸಿದ " ಧೃತಲಿಂಗಂಸದಾಚಾರನಿರತಂ ದ್ವಿಜಪುಂಗವಂ। ವೀರಮಾಹೇಶ್ವರಂ ಸಮ್ಯ ಕೂಜಯೇದ್ಭಕ್ತಿ ಮಾನ್ನರಃ। ಅ ೪೪—೬೭ । ಲಿಂಗಾಂಗ ಸಂಗಂ ಕುರ್ವಂತಂ ದೃಷ್ಟ್ವಾದ್ವಿಜವರಂ ರವಿಃ। ಸ್ಥಾನಾಚ್ಚಲತ್ಯಯಂ ಭಿತ್ವಾ ಮಂಡಲಂ ಮೋವ್ರಜೇಚ್ಛಿವಂ ॥ ಅಧ್ಯಾಯ ೪೭ ಶ್ಲೋಕ ೪೬ । ತಸ್ಮಾತ್ಸರ್ವಂ ಪರಿತ್ಯಜ್ಯ ಸರ್ವಭಾವೇನ ಸರ್ವದಾ । ಪೂಜಯೇದಾದರೇಣವೈವದ್ವಿಜಂ ಲಿಂಗಾಂಗ ಸಂಗಿನಂ ॥ ಅ ೪೭—೪೯

ಶ್ರೀ ಶಾಂಕರ ಸಂಹಿತೆಯು ವೀರಶೈವ ಧರ್ಮವನ್ನು ಸ್ಮಾರ್ತ ತತ್ವಗಳಿಗೆ ಮೇಳಿಸಿ ಆಚರಿಸುವ ಪ್ರಬಂಧವಲ್ಲದೆ ಅಷ್ಟಾವರಣ ಪಂಚಾಚಾರದ ಅಚ್ಚವೀರಶೈವ ಗ್ರಂಥವಲ್ಲ. ಇದನ್ನು ಶಾಸ್ತ್ರಿಗಳು ದಾಹರಿಸಿದ

ಶ್ಲೋಕಗಳಿಂದಲೇ ತಿಳಿಯಬಹುದು. ಶುದ್ಧ ವೀರಶೈವದಲ್ಲಿ ಅತ್ರೈವಸವಾವಲೀಯಂತೇ ಎಂಬ ನಿರ್ವಯಲ ಮುಕ್ತಿಯಲ್ಲದೆ ಸೂರ್ಯಮಂಡವನ್ನು ಭೇದಿಸುವ ಮಾರ್ಗಕ್ರಮಣದ ಮುಕ್ತಿಯಿಲ್ಲವು–– "ಅತ್ರೈವಲೀಯತೇ ಸವ್ಯಕ್ಸರ್ವಮಾತ್ಮತಯಾ ಸತ್ಯಘೃತ ಕಾಠಿನ್ಯವತ್ಸ್ವಸ್ನ ಪ್ರಪಂಚ-ಪ್ರತಿಭಾಸವತ್ ॥ ವಿಶೇಷಾರ್ಥ ಪ್ರಕಾಶಿಕಾ ಪಂಚಮಾಧಿಕರಣ ದೇಹಾವಸಾನವಿಧಿ ೯ ಶ್ಲೋಕ.

ಈ ಶಿವಪುರಾಣಗಳು ಶೈವ ಧರ್ಮವನ್ನು ತಮಗೆ ಆದಷ್ಟು ತಕ್ಕೊಳ್ಳುತ್ತ ಬರುವದರಿಂದ ಇವುಗಳ ಪ್ರಮಾಣ್ಯವು ಸ್ಮಾರ್ತರಿಗೂ ಶೈವಾಗಮಧರ್ಮವು ಮಾನ್ಯವು ವಿರೋಧಿಗಳಿಗೆ ಮಾನ್ಯವಾದುದು ಸರ್ವಥಾ ಪ್ರಮಾಣಿಕವೆಂದು ತೋರಿಸುವಷ್ಟಕ್ಕಲ್ಲದೆ ಹೆಚ್ಚಿಗಿರಬಾರದು ಆಗಮ ಧರ್ಮಗಳನ್ನು ಒಳಪಡಿಸಿಕೊಂಡು ಆಗಮದ ಅಚ್ಚ ಸಿದ್ಧಾಂತಗಳನ್ನು ಹೊರ ದೂಡಲಿಚ್ಛಿಸುವ ಈ ಪುರಾಣಗಳು ಸರ್ವಾತ್ಮನಾ ಪ್ರಮಾಣವೆನಿಸವು—

ಇದಕ್ಕೆ ಲಿಂಗ ಪುರಾಣವು ಪ್ರಮಾಣವಾಗಿದೆ. ಇದೀಗ ನನ್ನ ಕೈಗೆ ಲಿಂಗ ಪುರಾಣದ ತೆಲಗು ಲಿಪಿಯದೊಂದು ಪ್ರತಿಯು ಬಿದ್ದಿತು. ಅದನ್ನು ನೋಡಲು ಉತ್ತರಭಾಗದ ೨೧ ನೆಯ ಅಧ್ಯಾಯದಲ್ಲಿ ಲಿಂಗಧಾರಣ ಚಂದ್ರಿಕಾರನುದಾಹರಿಸಿದ ಶ್ಲೋಕಗಳುಂಟು. ಆದುರಿಂದ ಜಗದೀಶ ಶಾಸ್ತ್ರಿಗಳು ಲಿಂಗ ಪುರಾಣ ಶ್ಲೋಕವನ್ನು ಚಂದ್ರಿಕಾಕಾರರ ಉದಾಹರಣಕ್ಕೆ ಪೋಣಿಸಿರುವರೆಂದು ನಾನೆಂದುದಕ್ಕೆ ಅವರು ಪಾತ್ರವಿಲ್ಲವಾದರು ನಾನವರ ಕ್ಷಮೆಯನ್ನು ಕೇಳುವಂತಾಗಿಲ್ಲ. ಅದಕ್ಕೂ ದೊಡ್ಡ ಬುದ್ಧಿಪೂರ್ವಕವಾದ ದೋಷವು ಅವರ ಶಿರಗಿನಲ್ಲಿ ಬೀಳುತ್ತಿದೆ. ಎಂಬತ್ತನೆಯ ಶ್ಲೋಕದಲ್ಲಿ ಕುರ್ಯಾದ್ದೀಕ್ಷಾಂ ಮಹಾಶೈವೀಮವಿದ್ಯಾಪಾಶಕೃಂತನೀಂ। ಎಂದು ಈ ತೆಲಗು ಪುರಾಣವು ಮಹಾಶೈವದೀಕ್ಷೆ ಇದೆಂದು ಹೇಳುತ್ತಿರಲು ಅದನ್ನು ಬಚ್ಚಿಟ್ಟು ವೀರಶೈವದೀಕ್ಷಾಪ್ರಕರಣವಿದೆಂದು ಹೇಳುವುದು ಸೌಜನಿಕೆಯಲ್ಲ.

ಸೂಕ್ಷ್ಮಾಗಮದ ೭ ನೆಯ ಪಟಲದಲ್ಲಿ ಹಾಗು ಪಾರಮೇಶ್ವರಾಗಮದ ೭ ನೆಯ ಪಟಲದಲ್ಲಿ ಮಹಾಶೈವ ವಿಷಯವು ಬಂದಿದೆ ಮಹಾಶೈವನಿಗೆ ಲಿಂಗಧಾರಣವಿಲ್ಲೆಂಬುದು ಶೈವದೀಕ್ಷೋಕ್ತಮಾರ್ಗೇಣ ದೀಕ್ಷಿತಾ ಬ್ರಹ್ಮಣಾಃ ಶಿವೇ। ಮಹಾಶೈವಾಸ್ತುತೇಜ್ಞೇಯಾಮಹಾಂತೋ ಲೋಕಪೂಜಿತಾಃ ॥ ಎಂದು ಮುಂತಾಗಿ ಮಹಾಶೈವ, ಅನುಶೈವ, ಅವಾಂತರ

ಶೈವ, ಪ್ರವರಶೈವ, ಅಂತ್ಯಶೈವಗಳನ್ನು ಜಾತ್ಯನು ಕ್ರಮದಿಂದ ವಿವರಿಸಿ "ಏವಂ ಪ್ರೋಕ್ತಾಃ ಶೈವಭೇದಾ ಜ್ಯಾತ್ಯನು ಕ್ರಮಶೋಮಯಾ" ಆ ಮೇಲೆ ಸಾಮಾನ್ಯ, ಮಿಶ್ರ, ಶುದ್ಧ, ವೀರಶೈವಗಳನ್ನು ಆಚಾರಭೇದ ದಿಂದ ನಾಲ್ದೆರನಾದ ಶೈವವನ್ನು ವಿವರಿಸುತ್ತ, ಗುರುಣಾ ದತ್ತ ಲಿಂಗಂ ತು ಕರಪೀಠೇ ಪಿ ವಾ ಯಜೇತ್ । ಎಂದು ಶುದ್ಧ ಶೈವನಿಗೆ ಲಿಂಗಧಾ ರಣವನ್ನು ವಿವರಿಸುತ್ತ, ಆ ಬಳಿಕ ವೀರಶೈವವನ್ನು ಸವಿಸ್ತಾರವಾಗಿ ವಿಧಿಸುವಲ್ಲಿ ಇಷ್ಟ ಪ್ರಾಣ ಭಾವಲಿಂಗಗಳ ಧಾರಣ ದೀಕ್ಷೆಯನ್ನು ವಿಧಿಸಿ ಅವುಗಳ ಏಕಭಾವಪೂಜೆಯನ್ನು ಕರಸ್ಥಲದಲ್ಲಿಯೆ ಪ್ರತಿಪಾದಿಸಿ ವೀರ ಶೈವ ಸರ್ವಾಧಿಕ್ಯವನ್ನು ಸಾರುವುದರಿಂದ ಸಿದ್ಧವದೆ. ಪಾರಮೇಶ್ವರಾ ಗಮದ ಏಳನೆಯ ಪಟಲದಿಂದಲು ಇದೇ ವಿಷಯವು ತಿಳಿವುದು. ಆದು ದರಿಂದ ಮಹಾಶೈವದಲ್ಲಿ ಲಿಂಗಧಾರಣವಿಲ್ಲ.

ಮುಂಬಯಿಯಲ್ಲಿ ಅಚ್ಚಾದ ಲಿಂಗಪುರಾಣದಲ್ಲಿ ಲಿಂಗಧಾರಣದ ಶ್ಲೋಕಗಳಿಲ್ಲ. ಮದ್ರಾಸದ ತೆಲಗು ಪ್ರತಿಯಲ್ಲಿ ಅವು ಉಂಟು. ಮುಂಬ ಯಿಯ ಪ್ರತಿಯು ಪ್ರಾಮಾಣಿಕವು ಮದ್ರಾಸದ ಪ್ರತಿಯು ಹಿಂದು ಮುಂದಿನ ಅಧ್ಯಾಯಗಳೂ ಅವುಗಳ ವಿಷಯಗಳೂ ಮುಂಬಯಿಯ ಪ್ರತಿಯಂತೆಯೆ ಅವೆ. ಇಪ್ಪತ್ತೊಂದನೆಯ ಅಧ್ಯಾಯವಾದರು ಲಿಂಗ ಧಾರಣ ಶ್ಲೋಕಗಳನ್ನಷ್ಟು ಉಳಿದು ಎಲ್ಲ ಸಂದರ್ಭವು ಒಂದೆ ಆಗಿದೆ. ಅಧ್ಯಾಯ ಪರಿಸಮಾಪ್ತಿಯ ಶ್ಲೋಕವಾದರು ಒಂದೆ ಪರಿಯಾಗಿದೆ. ಆದುದರಿಂದ ತೆಲಗು ದೇಶಗಳಲ್ಲಿ ಮಹಾ ಶೈವರು ವೀರಶೈವದ ಕ್ರಮ ದೊಳಗಿನ ಲಿಂಗಧಾರಣವನ್ನು ಸೇರಿಸಿಕೊಂಡಿರುವರೆಂದು ಸಿದ್ಧವಾಗು ತ್ತಿದೆ. ಲಿಂಗಧಾರಣವು ಮದ್ರಾಸದ ಪ್ರತಿಯಲ್ಲಿ ಬಂಡಿದೆ ಯಾದರು ಆ ಅಧ್ಯಾಯದಲ್ಲಿಯ ಸಂದರ್ಭಕ್ಕೆ ಕೂಡುವುದಿಲ್ಲ. ವೀರಶೈವ ದೀಕ್ಷಾ ವಿಧಿಯಲ್ಲಿಲ್ಲದ ಮಂಡಲಪರಿಕಲ್ಪನಾದಿಗಳೂ, ಬ್ರಹ್ಮ, ವಿಷ್ಣು ದಿಕ್ಪಾಲ ಕರ ಭಾವನೆಯೂ, ಚರುಹೋಮಾದಿಗಳೂ ತುಂಬಿದ ಈ ಪ್ರಕರಣದಲ್ಲಿ ಲಿಂಗಧಾರಣವು ಸಂಗತವಾಗದು. ವೀರಶೈವ ದೀಕ್ಷೆಯಲ್ಲಿ ಹೇಳಿದ ಅಂಗ ಲಿಂಗ ಸಂಸ್ಕಾರಗಳು ಈ ಲಿಂಗಪುರಾಣದ ದೀಕ್ಷೆಯಲ್ಲಿ ಅದೇ ವಿಧದಿಂದ ಬಂದಿಲ್ಲ. ದೀಕ್ಷಿಸುವ ಶಿಷ್ಯನ ಕಣ್ಣು ಕಟ್ಟಿ ಕೆಲವು ಸಂಸ್ಕಾರಗಳನ್ನಾ ಚರಿಸಿದ ಬಳಿಕ ಕಣ್ಣು ಬಿಚ್ಚಿ ಮಂಡಲವನ್ನು ತೋರಿಸುವುದು (೪೦—೪೫ ಶ್ಲೋಕಗಳನ್ನು ನೋಡು.) ವೀರಶೈವ ದೀಕ್ಷೆಯಲ್ಲಿಲ್ಲ. ಇಂತಹ ಅನಂತ

ಭೇದಗಳನ್ನು ವಾಚಕರು ಕಾಣಬಹುದು. ಆದುದರಿಂದ ತೆಲಗು ಪ್ರತಿಯಲ್ಲಿಯು ಶ್ಲೋಕಗಳು ನಡುವೆ ಸೇರಿದುವಾಗಿವೆ. ಲಿಂಗಧಾರಣ ಚಂದ್ರಿಕಾಕಾರನ ಲಕ್ಷ್ಯವು ಲಿಂಗಧಾರಣವು ವೈದಿಕವೆಂಬುದಾದುದರಿಂದ ಲಿಂಗಪುರಾಣದಲ್ಲಿ ಆ ಶ್ಲೋಕಗಳು ಪ್ರಕ್ಷಿಪ್ತವೆನ್ನುವಲ್ಲಾಗಲಿ, ಮಹಾ ದೀಕ್ಷೆಗೆ ಅಸಂಗತವೆನ್ನುವಲ್ಲಾಗಲಿ ಪ್ರಯೋಜನವಿರಲಿಲ್ಲ.

ಇನ್ನು ಶಾಂಕರ ಸಂಹಿತೆಗೆ ಹೊರಳುವಣ. ವೀರಶೈವನಿಗೆ ಕರಪೂಜೆಯನ್ನೇ ವಿವರಿಸಿದೆಯಲ್ಲದೆ ಪೀಠ ಪೂಜೆಯನ್ನು ಹೇಳಿಲ್ಲ. ಶುದ್ಧಶೈವನಿಗೆ ಗುರುಣಾದತ್ತಲಿಂಗಂ ತುಕರಪೀಠೇಪಿವಾಯಜೇತ್" ಸೂ. ೭-೨೯ ಎಂಬ ಪ್ರಮಾಣದಿಂದ ಪೀಠ ಪೂಜೆಯೂ ಕರ ಪೂಜೆಯೂ ಯಥೇಷ್ಟವಾಗಿವೆ. ಆದುದರಿಂದ ವೀರಶೈವದಲ್ಲಿ ಶಾಂಕರ ಸಂಹಿತೆಯ ಮೂಲಾರಂಭದ ಸ್ಕಂದ ಪ್ರಶ್ನವು ಸಂಭವಿಸುವುದಿಲ್ಲ. ಶುದ್ಧ ಶೈವದಲ್ಲಿ ಐಚ್ಛಿಕವಾದ ಪೀಠ ಪೂಜಕರ ಪೂಜೆಗಳಲ್ಲಿ ಆವುದು ಮೇಲೆಂಬ ಊಹಾಪೋಹವು ಹೊರಡಬಲ್ಲುದು. ಆದುದರಿಂದ ಭಗವಚ್ಛ್ರೋತುಮಿಚ್ಛಾಮಿ ಸರ್ವಪ್ರಾಣಿಹಿತಂ ಪರಂ। ಕೇಚಿಲ್ಲಿಂಗಾರ್ಚನಂ ಪೀಠೇ ಪ್ರಶಸ್ತಂತು ಪ್ರಚಕ್ಷತೇ ॥ ಕೇಚಿಚ್ಛಿವಾಗಮಾಭಿಜ್ಞಾ । ಪ್ರಾಣಲಿಂಗಾರ್ಚನಾಪರಾಃ। ಲಿಂಗೇ ಪ್ರಾಣಂ ಸಮಾಧಾಯಕರ ಪೀಠೇ ಶಿವಾರ್ಚನಂ ॥ ಪ್ರಶಂಸಂತ್ಯುತ್ತಮಂ ದೇವ ಬ್ರೂಹಿಕಿಂ ಮುಖ್ಯಮೇತಯೋಃ ॥ ಎಂಬುವ ಸ್ಕಂದಪ್ರಶ್ನವು ಶುದ್ಧ ಶೈವಕ್ಕೆ ಸಂಬಂಧಿಸಿದುದು. ಶಾಂಕರಸಂಹಿತೆಯು ಶುದ್ಧಶೈವವಿಷಯುವಲ್ಲದೆ ವೀರಶೈವ ವಿಷಯುವಲ್ಲ. ಸ್ಕಂದನು ಲಿಂಗಾರ್ಚನದಲ್ಲಿ ಪೀಠದಲ್ಲಿ ಮಾಡುವುದುತ್ತಮವೊ ಕೆಲರು ಶಿವಾಗಮಾಭಿಜ್ಞರು ಹೇಳುವಂತೆ ಕರಸ್ಥಲದಲ್ಲಿ ಮಾಡುವದುತ್ತಮವೊ ಎಂದು ಕೇಳುವನು. ಶಿವನು ಕರಪೂಜೆಯನ್ನು ಮೇಲುಮಾಡಿ ಹೇಳುವಲ್ಲಿ ಕರಪೂಜೆಯು ಮುಖ್ಯವಾದ ವೀರಶೈವವನ್ನು ಅಲ್ಲಲ್ಲಿ ಪ್ರಶಂಸಿರುವನಾದರು ಬ್ರಾಹ್ಮಣಾದಿ ಸ್ಮಾರ್ತಧರ್ಮಾನುಗುಣವಾಗಿರುವ ಶುದ್ಧ ಶೈವ ಧರ್ಮವನ್ನು ಬೋಧಿಸಿರುವನು. ಎಂಬತ್ತೊಂದನೆಯ ಅಧ್ಯಾಯದಲ್ಲಿ ಪೀಠಸ್ಥೇ ಶಿವಲಿಂಗೇತು ಶಿಷ್ಯಪ್ರಾಣಾನ್ನಿಧಾಯಚ। ಲಿಂಗಂ ಸಂಸ್ಥಾಪ್ಯ ತತ್ಪ್ರಾಣೇ ಪ್ರಾಣಲಿಂಗಂಭವೇತ್ತತಃ॥೩೪॥ ಪೀಠಸ್ಥವಾದ ಶಿವಲಿಂಗದಲ್ಲಿ ಶಿಷ್ಯನ ಪ್ರಾಣಗಳನ್ನಿಟ್ಟು, ಆ ಬಳಿಕ ಲಿಂಗವನ್ನು ಅವನ ಪ್ರಾಣದಲ್ಲಿ ಸಂಸ್ಥಾಪಿಸಲು ಪ್ರಾಣಲಿಂಗವಾದುದು-ಎಂದು ದೀಕ್ಷಾ ವಿಧಾನವನ್ನು ಹೇಳಿರುವುದರಿಂದ, ಶಿಷ್ಯಾಂಗದ ಹೊರಗಣ ಪೀಠದಲ್ಲಿ ಲಿಂಗದ ಪ್ರಾಣ ಪ್ರತಿಷ್ಠೆಯಾಗುವುದು- ತದನಂತರದಲ್ಲಿ

ಶಿಷ್ಯನಿಗೆ ಆ ಲಿಂಗವನ್ನು ಆಚಾರ್ಯನು ಕರುಣಿಸುವನು. ದತ್ವಾಶಿಷ್ಯಾಯ ತಲ್ಲಿಂಗಂ ಶ್ರದ್ಧಾಭಕ್ತಿಯುತಾಯ ಸಃ । ಪೂಜಯ ಪ್ರಾಣಲಿಂಗಂ ತ್ವಂ ಯಾವಜ್ಜೀವ ಪ್ರತಿಜ್ಞಯಾ ॥ ಪುನರ್ಭವೋನತೇವತ್ಸ ವಿದ್ಯತೇ ಮಾತ್ಯ ಜಾನಿಶಂ ॥ ಇತ್ಯು ಕ್ತ್ವಾಭಿಮುಖಂ ಶಿಷ್ಯಮಾನೀಯ ಕೃಪಯಾ ಪುನಃ । ವೀರಮಾಹೇಶ್ವರಂ ಧರ್ಮಂ ಕ್ರಮಾದುಪದಿಶೇದ್ಗುರುಃ ॥ ವತ್ಸಲಿಂಗಾರ್ಚನಂ ನಿತ್ಯಂತ್ರಿಕಾಲಂಕುರುಭಕ್ತಿತಃ । ಪೂಜಾದ್ರವ್ಯಾಣಿ ಸಂಶೋಧ್ಯ ಶುಚಿಸ್ತದ್ಗತ ಮಾನಸಃ ॥ ಹಸ್ತ ಸಿಂಹಾಸನೇ ಲಿಂಗಮ ಪ್ರಮಾದೇನಧಾರಯ । ಪ್ರಮಾದಾತ್ಪತಿತೇಲಿಂಗೇಸಹ ಪ್ರಾಣಾನ್ ಪರೀತ್ಯ್ಜ ॥ ಇತ್ಯಾದಿ ೩೪—೩೮

ಲಿಂಗವನ್ನು ಕರುಣಿಸಿದ ಬಳಿಕ ಹೇಳುವ ಉಪದೇಶವು ವೀರಶೈವವು. ಆದರೆ ಇದನ್ನು ಶುದ್ಧ ಶೈವನಿಗೆ ಧರ್ಮಾತಿಶಯವಾಗಿ ಹೇಳಿದೆಯಲ್ಲದೆ ಬೇರಲ್ಲ. ೮೬ ನೆಯ ಅಧ್ಯಾಯದಲ್ಲಿ ಇದಕ್ಕೆ ಸಲ್ಲದ ಪ್ರಾಯಶ್ಚಿತ್ತವಿಧಿಯುಂಟು. ಪ್ರಮಾದಾತ್ಪತಿತೇಲಿಂಗೇ ಪ್ರಾಯಶ್ಚಿತಮಥಾಚರೇತ್ । ಆಗಮೋಕ್ತ ಪ್ರಕಾರೇಣತದ್ದೋಷ ವಿನಿವೃತ್ತಯೇ ॥೮೬॥ ಇದಲ್ಲದೆ ಸೂಕ್ಷ್ಮಾಗಮೋಕ್ತ ವೀರಶೈವ ದೀಕ್ಷೆಯಲ್ಲಿ ಒಬ್ಬ ಆಚಾರ್ಯನೂ ನಾಲ್ವರು ಋತ್ವಿಕ್ಕುಗಳೂ ಶಿಷ್ಯನನ್ನು ಅಭಿಷೇಕಿಸುವರು. ಶಾಂಕರ ಸಂಹಿತೆಯಲ್ಲಿ ಋತ್ವಿಕ್ಕುಗಳಿಲ್ಲ ಗುರುವು ಒಬ್ಬನುಂಟು. ಐದು ಕಲಶಗಳಲ್ಲಿ ಒಂದು ಕಲಶವು ವೀರಶೈವದೀಕ್ಷೆಯಲ್ಲಿ ಪೂರ್ವಮುಖವಾಗಿ ಗುರುವು ಪಶ್ಚಿಮ ಮುಖವಾಗಿ ಶಿಷ್ಯನು. ಶಾಂಕರ ಸಂಹಿತಾದೀಕ್ಷೆಯಲ್ಲಿ ಪೂರ್ವ ಮುಖವಾಗಿ ಗುರುವು ಉತ್ತರ ಮುಖವಾಗಿ ಶಿಷ್ಯನು. ಸೂಕ್ಷ್ಮಾಗಮ. ವಾತೂಲಾಗಮ ಪಾರಮೇಶ್ವರಾಗಮಗಳ. ಐದನೆಯ ಹತ್ತನೆಯ ಏಳನೆಯ ಪಟಲಗಳನ್ನು ಶಾಂಕರ ಸಂಹಿತೆಯ ೮೧ ನೆಯ ಅಧ್ಯಾಯದಲ್ಲಿಯ ದೀಕ್ಷಾವಿಧಿಯೊಡನೆ ಹೋಲಿಸಿರಿ.

ವೀರಶೈವದೀಕ್ಷೆಯಲ್ಲಿ ಗುರುವು ತನ್ನ ಹಸ್ತದಲ್ಲಿ ಲಿಂಗವನ್ನಿಟ್ಟು (ಪೀಠದಲ್ಲಿ ಅಲ್ಲ) ಅವರಲ್ಲಿ ಶಿಷ್ಯನ ಮಸ್ತಕಸ್ಥ ಶಿವಕಲೆಯನ್ನು ತುಂಬಿ ಲಿಂಗವನ್ನು ಶಿಷ್ಯನ ಪ್ರಾಣದಲ್ಲಿಯೂ ಪ್ರಾಣವನ್ನು ಲಿಂಗದಲ್ಲಿಯೂ ಏಕೀಕರಿಸಿ ಸ್ಥಾಪಿಸುವನು. ಶಿಷ್ಯಾಂಗವನ್ನು ಶಿವಾಂಗವೆಂದು ಸಂಸ್ಕರಿಸುವನು. ಸೂ. ೫ ನೆಯ ಪಟಲ ಇದಾವುದೂ ಶಾಂಕರ ಸಂಹಿತೆಯ ದೀಕ್ಷಾವಿಧಿಯಲ್ಲಿಲ್ಲ. ಪೀಠದಲ್ಲಿ ಪ್ರಾಣಪ್ರತಿಷ್ಠೆಯಾದ ಲಿಂಗವನ್ನು ಶುದ್ಧ

ಶೈವನು ಹೊಂದುವುದರಿಂದ ಲಿಂಗ ಪಾತದಲ್ಲಿ ಅವನು ಪ್ರಾಯಶ್ಚಿತ್ತದಿಂದ ಮತ್ತೊಂದು ಲಿಂಗವನ್ನು ಪಡೆವನು. ವೀರಶೈವನು ಅಂಗದ ಮೇಲೆಯೆ ಲಿಂಗ ಪ್ರತಿಷ್ಠೆಯನ್ನು ಹೊಂದಿರುವದರಿಂದ ಲಿಂಗಪಾತದಲ್ಲಿ ಪ್ರಾಯಶ್ಚಿತ್ತವನ್ನರಿಯನು.

ಹೀನವಾದ ಶುದ್ಧ ಶೈವವನ್ನು "ಬ್ರಹ್ಮದೃಷ್ಟಿರುತ್ಕರ್ಷಾತ್" ಬ್ರ. ಸೂ. ೪—೧—೫ ಎಂಬ ನ್ಯಾಯದಿಂದ ಹೆಚ್ಚಿನದಾದ ವೀರಮಹೇಶ್ವರವೆಂದು ಶಾಂಕರ ಸಂಹಿತೆಯು ಕರೆದು, ಅಲ್ಲಲ್ಲಿ ವೀರಶೈವ ವಿಷಯಕ ಗ್ರಂಥಗಳನ್ನು ಒಳಗೊಂಡಿರುವುದು. ಆದರೆ ಅದು ಶುದ್ಧ ಶೈವರು ಕ್ರಮೇಣ ವೀರಶೈವರಾಗಲೆಂದಲ್ಲದೆ ಶುದ್ಧ ಶೈವದ ಧರ್ಮಗಳನ್ನು ವೀರಶೈವದಲ್ಲಿ ಸೇರಿಸಲಿಕ್ಕೆ ಅಲ್ಲ.

ವತ್ಸ್ಯಂತೇಗಣನಾಯಕಾಃ ಕ್ಷಿತಿ ತಲಂಗತ್ವಾ ವಿಮುಕ್ತಾಮಯಾ। ಸಂಭೂತಾಃ ಸಕಲಾಸುಜಾತಿ ಪುನರ್ಲಿಂಗಾರ್ಚನಾತತ್ಪರಾಃ ॥ ಸಂಸ್ಥಾಪ್ಯೋತ್ತರ ವೀರಶೈವ ಪದವೀಂ ಲೋಕೇಹಿತಾರ್ಥಂ ನೃಣಾಂ ಮುದ್ರಾಃ ಪಂಚವಹಂತ ಏವ ವಿಚರಂತ್ಯಂತೇ ಸಮೇಷ್ಯಂತಿ ಮಾಂ ೮೧—೬೯ ಎಂಬ ಶ್ಲೋಕವು ವೀರಶೈವದಲ್ಲಿ ಸರ್ವಸಾಮ್ಯವನ್ನು ಬೋಧಿಸುತ್ತಿದೆ. ನಿಜವಾದ ವೀರಶೈವವು ಶುದ್ಧ ಶೈವರಲ್ಲಿ ಆಪಾದಿತವಾದ ವೀರಶೈವಕ್ಕೆ ಮಿಗಿಲಾದುದರಿಂದ ಅದನ್ನು ಶಾಂಕರ ಸಂಹಿತೆಯು ಈ ಶರಣರಿಗೆ ಉತ್ತರ ವೀರಶೈವ ಮಾರ್ಗ ಪ್ರತಿಷ್ಠಾಪಕರೆಂದುದು.

ತೆಲಗು ಲಿಂಗ ಪುರಾಣದ ಪ್ರತಿಯನ್ನು ನೋಡುವ ಮೊದಲು ಲಿಂಗ ಪುರಾಣದ ಶಾಸ್ತ್ರೋಷು ಮುಂತಾದ ಶ್ಲೋಕಗಳ ಬಗೆಯಲ್ಲಿ ಬರೆದ ವಿಚಾರವು ಸಿದ್ಧಾಗಮದಲ್ಲಿಯ ವ್ಯಾಖ್ಯಾನವನ್ನು ಲಿಂಗ ಪುರಾಣವು ಮಹಾಶೈವದೀಕ್ಷೆಯಲ್ಲಿ ಸೇರಿಸಿಕೊಂಡಿರುವುದರಿಂದ ಚೋರಾಪಹೃತ ಮುಕುಟದಂತೆ ಆ ಶ್ಲೋಕಗಳನ್ನು ವೀರಶೈವರು ಸ್ವಾಧೀನೀಕರಿಸಲು ಅರ್ಹರಿರುವುದರಿಂದ ಹೇಗಾದರೂ ಸಮಂಜಸವದೆ.



# ಕೈಬರಹದ ಗ್ರಂಥಗಳ ಶೋಧನೆಯು *

(ಲೇಖಕರು- ಡಾ|| ಎಸ್. ಸಿ. ನಂದೀಮಠ ಎಮ್. ಎ. ಪಿ. ಎಚ್. ಡಿ. ಬೆಳಗಾಂವ.)

ನಮ್ಮ ಪೂರ್ವಜನರ ಸಂಸ್ಕೃತಿಯನ್ನು ಕಂಡು ಹಿಡಿಯಲು ಪ್ರಾಚೀನ ಗ್ರಂಥಗಳು ಅತ್ಯುಪಯುಕ್ತವಾದವು. ಕೌಟಿಲ್ಯನ ಅರ್ಥಶಾಸ್ತ್ರವು ಬೈಲಿಗೆ ಬರುವದಕ್ಕಿಂತ ಮೊದಲು ಅನೇಕ ಪಾಶ್ಚಾತ್ಯ ಪಂಡಿತರಲ್ಲಿ ಭಾರತೀಯರ ಪ್ರಾಚೀನ ರಾಜ್ಯ ಪದ್ಧತಿಯ ಬಗ್ಗೆ ಅನೇಕ ವಿಪರೀತ ಕಲ್ಪನೆಗಳಿದ್ದವು. ಅದರಂತೆಯೇ ಈಗಲೂ ಕೂಡ ನಮ್ಮ ಪ್ರಾಚೀನ ಸಂಸ್ಕೃತಿಗಳ ಬಗ್ಗೆ ಧಾರ್ಮಿಕ ಸಾಮಾಜಿಕ ನೈತಿಕ ಆರ್ಥಿಕ ಸಂಸ್ಕೃತಿಗಳ ಬಗ್ಗೆ ನಮಗೇ ಸರಿಯಾದ ಕಲ್ಪನೆಗಳಿಲ್ಲ. ನಮ್ಮಲ್ಲಿ ಅನೇಕರಿಗೆ ನಮ್ಮ ಪ್ರಾಚೀನ ಸಂಸ್ಕೃತಿಗಳ ಬಗ್ಗೆ ಅನೇಕ ಪ್ರಕಾರದ ಕಲ್ಪನೆಗಳಿವೆ. ಅವುಗಳನ್ನು ಸರಿಪಡಿಸಿಕೊಳ್ಳಲು ನಮ್ಮ ಹಿರಿಯರು ಬರೆದ ಗ್ರಂಥಗಳು ಬಹಳೇ ಸಹಾಯಕಾರಿಗಳೆಂದು ಹೇಳುವ ಅಗತ್ಯವೇ ಇಲ್ಲ. ಅಂತೇ ಅವುಗಳಿಗೆ ಬಹಳ ಮಹತ್ವವಿವೆ. ಅಂಥವುಗಳನ್ನು ಬೈಲಿಗೆ ತರುವುದು ಅತ್ಯಗತ್ಯವು. ಇತ್ತಕಡೆಗೆ ಬಹು ಜನರ ಲಕ್ಷವು ಹೋಗಿಲ್ಲ. ಆದರೂ ಅಲ್ಲಲ್ಲಿ ಪ್ರಯತ್ನಗಳು ನಡೆದಿವೆಯೆಂಬುದೇನೊ ನಿಜ. ಆದರೆ ಅವುಬಲು ಅಲ್ಪ ಪ್ರಮಾಣದಿಂದ ಸಾಗಿವೆ. ಇದೇ ಪ್ರಕಾರ ಇನ್ನು ಕೆಲವು ವರ್ಷಗಳು ಗತಿಸಿದರೆ ನಮಗೆ ಈಗ ಸಾಧ್ಯವಿದ್ದಷ್ಟು ಸಾಧನಗಳೂ ಕೂಡ ಮುಂದೆ ದೊರೆಯಲಾರವು. ಏಕಂದರೆ ವರ ವರಷಕ್ಕೂ ಸಾಧನಗಳು ನಾಶವಾಗಹತ್ತಿವೆ. ಆದುದರಿಂದ ಆದಷ್ಟು ತೀವ್ರವಾಗಿ ಯತ್ನಿಸುವದು ಉತ್ತಮ. ಸಾಧನಗಳ ಅಭಾವದಿಂದ ಅನೇಕ ಸಂಶೋಧಕರಿಗೆ ಕೈಕಟ್ಟಿದಂತಾಗಿರುವದು. ಅಂಥವರ ಜ್ಞಾನ ತೃಷ್ಣೆಯೂ ಸತ್ಯಾನ್ವೇಷಣ ಬುದ್ಧಿಯೂ ಕುಂದಿದಂತಾಗಿರುವದು. ಈ ಕೊರತೆಯನ್ನು ದೂರ ಮಾಡಲು ಹಲಕೆಲವು ಪಂಡಿತರು ಹೆಣಗಾಡಿದರು. ಇಂಥ ಸಂಶೋಧಕರಿಗೆ ಪ್ರಾಚೀನ ಗ್ರಂಥಗಳನ್ನೊದಗಿಸುವದು ಸಾಧ್ಯವಿಲ್ಲದಿದ್ದರೂ, ಅವುಗಳ ಟಿಪ್ಪಣೆಗಳನ್ನಾದರೂ ಒದಗಿಸಿ ಕೊಡಲು ಹವಣಿಸಿದವರಲ್ಲಿ ಡಾ|| ಥಿಯೋಡೋರ, ಆಪ್ರಿಕ್ಟ, ಡಾ. ಹೂಲ್ಶ, ಡಾ. ಬ್ಯೂಹ್ಲರ

* ಧಾರವಾಡ, ಲಿಂಗಾಯತ ವಿದ್ಯಾವರ್ಧಕ ಸಂಘಕ್ಕೆ ಸಂಬಂಧಿಸಿದ ವಾಙ್ಮಯ ಸಂಘದ ಅಧಿಪತಿಗಳಿಗೆ ಕಳುಹಿಸಿದ ವರದಿಯ ಸಾರಾಂಶವು.

ಡಾ. ಭಂಡಾರಕರ, ಮಹಾಮಹೋಪಾಧ್ಯಾಯ ಹರ ಪ್ರಸಾದ ಶಾಸ್ತ್ರಿ ಮೊದಲಾದವರು ಮೊದಲನೆಯುವರೆಂದರೂ ಅಡ್ಡಿ ಇಲ್ಲ. ಈ ಮಹಾಶಯರುಗಳು ಗ್ರಥಿಸಿದ ಪುಸ್ತಕ ಟಿಪ್ಪಣಿಗಳು ಸಂಶೋಧಕರಿಗೆ ಅತ್ಯುಪಯುಕ್ತವಾದುವು. ಆದರೆ ಇವರು ಕೈಕೊಂಡ ಕೆಲಸವನ್ನು ಮುಂದೆ ಸಾಗಿಸದೆ ಅಷ್ಟಕ್ಕೇ ತಡೆದುದರಿಂದ ವಿದ್ವಾಂಸರಾದ ಸಂಶೋಧಕರ ಕಣ್ಣು ಮುಂದೆ ಗೋಡೆ ಕಟ್ಟಿದಂತಾಗಿರುವದು. ಮತ್ತೊಂದು ವೈಶಿಷ್ಟ್ಯವೇನಂದರೆ, ಕನ್ನಡ ನಾಡಿನ ಗ್ರಂಥಗಳ ಕಡೆಗೆ ಶ್ರೀ. ಆರ್. ನರಸಿಂಹಾಚಾರ್ಯರ ಹೊರತು ಅರ ದೃಷ್ಟಿಯೂ ಹೋಗಿಲ್ಲ. ಆದುದರಿಂದ ಕನ್ನಡಿಗರ ಉಜ್ವಲವಾದ ಸಂಸ್ಕೃತಿಯು ಪರನಾಡಿನವರಿಗೆ ಆದೇಕೆ ಅನೇಕ ಕನ್ನಡಿಗರಿಗೂ ಗೊತ್ತಿಲ್ಲ. ಕನ್ನಡನಾಡಿನಲ್ಲಿ ಅತ್ಯುತ್ತಮನಾದ ಮತ್ತು ವಿಪುಲವಾದ ಅನೇಕ ಗ್ರಂಥ ಸಂಗ್ರಹವು ಉಂಟೆಂಬದನ್ನು ಇಲ್ಲಿ ಬರೆಯುವ ಕಾರಣವಿಲ್ಲ. ಅದರಲ್ಲಿಯ ಬಹು ಭಾಗವು ಬೈಲಿಗೆ ಬಂದಿಲ್ಲ. ಅತ್ಯುತ್ತಮವಾದ ಅನೇಕ ಗ್ರಂಥಗಳು ಹುಳಗಳ ಬಾಯಿಗೆ ತುತ್ತಾಗಿ ಪ್ರತಿವರುಷ ನಾಶವಾಗಹತ್ತಿರುವವು. ಅಂಥ ಗ್ರಂಥಗಳನ್ನು ಸಂಗ್ರಹಿಸಲು ಸಾಧ್ಯವಿಲ್ಲದ ಪ್ರಸಂಗದಲ್ಲಿ ಅಂಥವುಗಳ ಹೆಸರುಗಳನ್ನಾದರೂ ಮೊದಲು ಕಂಡುಕೊಳ್ಳುವದೂ ಒಂದುವೇಳೆ ಸಾಧ್ಯವಾದರೆ ಅಂಥವುಗಳನ್ನು ಮುದ್ರಿಸಲು ಯತ್ನಿಸುವದೂ ಅಭಿಮಾನಿಗಳಾದ ಕನ್ನಡಿಗರ ಕರ್ತವ್ಯವೆಂದು ಹೇಳುವ ಕಾರಣವಿಲ್ಲ.

ಇಂಥ ಉಪಯುಕ್ತವಾದ ಆದರೂ ಬಹಳವಾಗಿ ದುರ್ಲಕ್ಷಿಸಲ್ಪಟ್ಟ ಕಾರ್ಯವನ್ನು ಅನ್ಯರು ಕೈಕೊಳ್ಳಬೇಕೆಂದು ದಾರೀ ನೋಡುತ್ತ ಕುಳಿತುಕೊಳ್ಳುವದರ ಬದಲು ಶಕ್ಯವಾದಷ್ಟು ತಾವೇ ಮಾಡಿ ತೋರಿಸಬೇಕೆಂಬ ಉದ್ದೇಶವು ಧಾರವಾಡ ಲಿಂಗಾಯತ ಎಜ್ಯುಕೇಶನ್ನ ಅಸೋಸಿಏಶನ್ನದ ವಾಙ್ಮಯ ಮಂಡಳದವರಲ್ಲಿ ಉದ್ಭವಿಸಿತು. ಆವದಾದರೊಂದು ಕಾರ್ಯವನ್ನು ಮಾಡಲು ೧ ದ್ರವ್ಯಾನುಕೂಲತೆಯೂ ೨ ಸರಿಯಾಗಿ ಕೆಲಸಮಾಡುವವರ ಗುಂಪೂ ಮತ್ತು ೩ ಹಿರಿಯರ ಪ್ರೋತ್ಸಾಹನವೂ ಬೇಕೇಬೇಕು. ಇವುಗಳಲ್ಲಿ ಆವುದರದಾದರೂ ಕೊರತೆ ಇದ್ದಲ್ಲಿ ಕಾರ್ಯವು ಚನ್ನಾಗಿ ಸಾಗದು. ವಾಙ್ಮಯಮಂಡಳದವರ ಈ ವಿಚಾರಕ್ಕೆ ಅನುಮೋದನವನ್ನಿತ್ತು ಹಣದ ಅನುಕೂಲತೆಯನ್ನು ಕೂಡ ಒದಗಿಸಿಕೊಡಲು ಧಾರವಾಡ ಉಳವೀ ಬಸವೇಶ್ವರ ಸಂಸ್ಥೆಯ ಚಾಲಕರು ಒಪ್ಪಿಕೊಂಡುದು ಅತಿ ಸಂತೋಷಕರವಾದುದು. ಈ ಕಾರ್ಯಾರಂಭದ ಶ್ರೇಯಸ್ಸಿಗೆ ಅವರೇ ಪಾತ್ರರು. ಈ ಪ್ರೋತ್ಸಾಹದಿಂದುಬ್ಬಿ ನಮ್ಮ ವಾಙ್ಮ

ಯಮಂಡಳದವರೂ ಮತ್ತು ಧಾರವಾಡ ಉಳವೀ ಬಸವೇಶ್ವರ ಸಂಸ್ಥೆಯವರೂ ಕೂಡಿ, ಗ್ರಂಥಗಳನ್ನು ಶೋಧಿಸಿ ಅವುಗಳ ಟಿಪ್ಪಣೆಯನ್ನು ತೆಗೆದುಕೊಳ್ಳಲು ಓರ್ವ ವ್ಯಕ್ತಿಯನ್ನು ವೇತನಕೊಟ್ಟು ನಿಯಮಿಸಿದರು. ಆತನಿಗೆ ಸರಿಯಾಗಿ ಮಾರ್ಗ ತೋರಿಸಿ, ಸರಿಯಾಗಿ ಟಿಪ್ಪಣೆಯನ್ನು ತೆಗೆದುಕೊಳ್ಳಲು ಕಲಿಸಿ, ಪದ್ಧತಿಯ ಪ್ರಕಾರ ಕೆಲಸ ತೆಗೆದುಕೊಳ್ಳುವ ಕೆಲಸವನ್ನು ವಾಙ್ಮಯಸಂಘದವರು ನನ್ನ ಕಡೆಗೆ ಒಪ್ಪಿಸಿದರು. ಆದೇ ಪ್ರಕಾರ ಗತಿಸಿದ ಮೂರು ತಿಂಗಳಲ್ಲಿ ಆದ ಕೆಲಸವನ್ನೂ ಅದರಿಂದ ಕಂಡುಬಂದ ಹಲಕೆಲವು ಮಹತ್ವದ ಸಂಗತಿಗಳನ್ನೂ ವಾಙ್ಮಯಮಂಡಳದವರ ಅಪ್ಪಣೆಯಿಂದ ಕನ್ನಡಿಗರ ಮುಂದಿಡಲು ಯತ್ನಿಸುವೆನು.

ಶೋಧಿಸಿದ ಗ್ರಂಥಗಳು:— ಈ ಅವಧಿಯಲ್ಲಿ ೮೨೬ ಹಸ್ತಪ್ರತಿಗಳ ಶೋಧನೆಯಾಗಿದೆ. ಅವುಗಳ ವಿವರ—ಗೋಕಾಕ ೧೮೯, ಅರಭಾವಿ ೧೬೩, ವಂಟಮುರಿ ೩೦, ಯಮಕನಮರಡಿ ೨೭, ಬನ್ನಟ್ಟಿ ೧೬, ರಬಕವಿ ೭, ಮಹಾಲಿಂಗಪೂರ ೨೫೮, ಯಾದವಾಡ ೧೪೦ †

ಒಟ್ಟು ತಾಡವೋಲೆಯವು ೪೯೨ ಮತ್ತು ಕಾಗದವು ೩೩೪ ×

ಈ ಎಲ್ಲ ಗ್ರಂಥಗಳನ್ನು ವಿಷಯಗಳ ಪ್ರಕಾರ ವಿಂಗಡಿಸಲು, ಆಗಮಗಳು (ತಂತ್ರಗಳು) ೪ ಆಚಾರ ಸಂಬಂಧ ಗ್ರಂಥಗಳು ೧೬, ಉಪನಿಷತ್ತುಗಳು ೯, ಕಥೆಗಳು ೧೨, ಕಂದಗಳು ೯, ಕಾವ್ಯಗಳು ೨೬, ಕೋಶ ಮತ್ತು ವ್ಯಾಕರಣ ಮೊದಲಾದವು ೬, ವೀರಶೈವರ ತತ್ವಜ್ಞಾನವನ್ನು ಬೋಧಿಸುವ ಗ್ರಂಥಗಳು ೪೫, ತ್ರಿಪದಿಗಳು ೯, ಪುರಾಣಗಳು ೧೬, ಮಹಾತ್ಮ್ಯಗಳು ೨, ರಗಳೆಗಳು ೧೧, ವಚನಗಳು ೨೮, ಶತಕಗಳು ೬, ಸ್ತೋತ್ರ ಗ್ರಂಥಗಳು ೨೨, ಹಾಡುಗಳು ೮, ಇತರ ಗ್ರಂಥ

---

† ೧೪೦ ಗ್ರಂಥಗಳನ್ನು ವಿಷಯಗಳ ಪ್ರಕಾರ ವಿಂಗಡಿಸಿಲ್ಲ. ಏಕೆಂದರೆ ಇವುಗಳ ಯಾದಿಯು ಹಿಂದಿನಿಂದ ನನ್ನ ಕೈಸೇರಿತು. ಕೆಳಗಿನ ವಿಷಯವಾರ ಕೋಷ್ಟಕದಲ್ಲಿ ಈ ಗ್ರಂಥಗಳ ಸಮಾವೇಶವಾಗಿಲ್ಲ.

× ಇವುಗಳಲ್ಲಿಯ ಬಹು ಭಾಗವು ವೀರಶೈವ ಧರ್ಮಕ್ಕೆ ಸಂಬಂಧಿಸಿರುವುದು. ವೀರಶೈವರ ಹಲವು ಮಠಾಧಿಪತಿಗಳ ಅಜ್ಞಾನದಿಂದ ಅನೇಕ ಗ್ರಂಥಗಳು ನಾಶವಾಗಹತ್ತಿವೆ. ಅಂಥವುಗಳ ರಕ್ಷಣೆಯನ್ನು ಮೊದಲು ಕೈಕೊಳ್ಳವದು ಅಗತ್ಯವೆಂದು ಮಂಡಲದವರಿಗೆ ಅನ್ನಿಸಿದುದರಿಂದ ವೀರಶೈವ ಗ್ರಂಥಗಳೇ ಇದರಲ್ಲಿ ವಿಶೇಷವಾಗಿವೆ.

ಗಳು ೬, ಅಂತೂ ೨೩೫ ಮೂಲ ಗ್ರಂಥಗಳು. ಉಳಿದವುಗಳು ಇವುಗಳ ಪ್ರತಿಗಳು.

ಆಗಮಗಳು:—೧ ಪಾರಮೇಶ್ವರ, ೨ ವಾತುಲತಂತ್ರ, ೩ ಯೋಗಜಾಗಮ, ೪ ಸುಪ್ರಭೇದಾಗಮ.

೧. ಪಾರಮೇಶ್ವರ ತಂತ್ರವೆಂಬ ಹೆಸರಿನ ಗ್ರಂಥಗಳು ಶೈವ ವೈಷ್ಣವ ಶಾಕ್ತರ ಆಗಮಗಳಲ್ಲಿ ಅವೆ. ಪಾರಮೇಶ್ವರ ತಂತ್ರವೆಂಬ ಹೆಸರಿನ ಗ್ರಂಥವನ್ನು ಶ್ರೀ ಮಲ್ಲಪ್ಪನವರು ವಾರದ ಮತ್ತು ಮೂರು ಸಾವಿರ ಮಠ ಹುಬ್ಬಳ್ಳಿ ಇವರು ಅಚ್ಚು ಹಾಕಿಸಿರುವರು. ಪಾರಮೇಶ್ವರಾಗಮವೆಂಬ ಹೆಸರಿನ ಒಂದು ಗ್ರಂಥವು ಕೆಂಬ್ರಿಜ ವಿಶ್ವವಿದ್ಯಾಲಯದಲ್ಲಿ ಲಾಯಬ್ರರಿಯಲ್ಲಿದೆ. ಅದರ ಹದಿಮೂರೇ ಪಾನುಗಳು ಉಪಲಬ್ಧವಿವೆ. ಪ್ರೊ. ಬೆಂಡಾಲರವರು ಅದರ ವರ್ಣನೆಯನ್ನು ಬರೆದಿದ್ದಾರೆ. ಅದು ಸ್ವಲ್ಪ ಬದಲಾಗಹತ್ತಿದ ಗುಪ್ತಾಕ್ಷರ (*Transitional Gupta characters*) ಗಳಲ್ಲಿ ಬರೆಯಲ್ಪಟ್ಟಿದೆ. ಸುದೈವದಿಂದ ಅದನ್ನು ಪ್ರತಿ ಮಾಡಿಕೊಂಡ ಕಾಲವನ್ನು ಬರೆದಿದ್ದಾರೆ. ಈಗ ಉಪಲಬ್ಧವಿದ್ದ ಪಾನುಗಳು ಕ್ರಿ. ಶ. ೮೫೯ ರಲ್ಲಿ ಪ್ರತಿ ಮಾಡಿಕೊಳ್ಳಲ್ಪಟ್ಟಿವೆ. ನೇಪಾಳ ದರ್ಬಾರ ಲಾಯಬ್ರರಿಯಲ್ಲಿ ಪಾರಮೇಶ್ವರಾಗಮದ ಪ್ರತಿಗಳಿವೆ. ಕೆಂಬ್ರಿಜದಲ್ಲಿಯ ಪಾರಮೇಶ್ವರಾಗಮಕ್ಕೂ ನೇಪಾಳದಲ್ಲಿಯ ಪಾರಮೇಶ್ವರಾಗಮಗಳಿಗೂ ನಮ್ಮಲ್ಲಿ ಪ್ರಚಾರದಲ್ಲಿದ್ದ ಮುದ್ರಿಸಿದ ಅಥವಾ ಮುದ್ರಿಸದೇ ಇದ್ದ ಪಾರಮೇಶ್ವರಾಗಮದ ಪ್ರತಿಗಳಿಗೂ ಏನೂ ಸಂಬಂಧವಿಲ್ಲ. ಇವೆಲ್ಲವನ್ನು ಮುಂದೆ ಇಟ್ಟುಕೊಂಡು ಶೋಧ ಮಾಡದ ಹೊರತು ಇವುಗಳಲ್ಲಿ ಆವದು ಪ್ರಾಚೀನವೆಂದು ಹೇಳಲು ಬರುವದಿಲ್ಲ.

೨ ವಾತೂಲ ತಂತ್ರ:— ಇದು ಆವ ವಾತುಲ ತಂತ್ರವೋ ತಿಳಿಯದು. ಗ್ರಂಥವೂ ಅಷ್ಟು ದೊಡ್ಡದಿದ್ದಂತೆ ತೋರುವದಿಲ್ಲ. ಇದರ ಕೆಲವು ಹಸ್ತಪ್ರತಿಗಳಿಗೆ ಕನ್ನಡ ವ್ಯಾಖ್ಯಾನವಿದೆ. ವಾತುಲ ಶುದ್ಧಾಖ್ಯವೆಂಬುದು ಶ್ರೀ ಮೂರು ಸಾವಿರ ಮಠ ಹುಬ್ಬಳ್ಳಿ ಇವರಿಂದಲೂ ತಮಿಳು ನಾಡಿನಲ್ಲಿ ಗ್ರಂಥಾಕ್ಷರದಲ್ಲಿಯೂ ಮುದ್ರಿಸಿ ಪ್ರಸಿದ್ಧಿಸಲ್ಪಟ್ಟಿದೆ. ಹುಬ್ಬಳ್ಳಿಯ ಪ್ರತಿಗೂ ಗ್ರಂಥಾಕ್ಷರದ ಪ್ರತಿಗೂ ವಿಶೇಷ ಭೇದವಿಲ್ಲ. ಮಗ್ಗೆಯ ಮಾಯಿದೇವರ ಅನುಭವ ಸಾರಕ್ಕೂ ವಾತುಲಾಗಮ ಅಥವಾ ವಾತುಲ ತಂತ್ರವೆಂದು ಅನ್ನುವ ಸಾಂಪ್ರದಾಯವುಂಟು.

೩ ಯೋಗಜಾಗಮಃ— ಇದು ಎಲ್ಲಿಯೂ ಮುದ್ರಿಸಲ್ಪಟ್ಟಿಲ್ಲ. ವಚನಕಾರರು ಆವಾಗ್ಗೆ ಇದರೊಳಗಿನ ಶ್ಲೋಕಗಳನ್ನು ಉಲ್ಲೇಖಿಸಿರುವರು.

೪ ಸುಪ್ರಭೇದಾಗಮಃ— ಸುಪ್ರಬೋಧಾಗಮವೆಂಬುದು ಸೊಲ್ಲಾಪುರದಲ್ಲಿಯೂ ಸುಪ್ರಭೇದಾಗಮವೆಂಬುದು ಮದ್ರಾಸದಲ್ಲಿಯೂ ಮುದ್ರಿಸಲ್ಪಟ್ಟಿರುವದು. ಇವೆರಡಕ್ಕೂ ಏನೂ ಸಂಬಂಧವಿಲ್ಲ.

೨ ಆಚಾರಸಂಬಂಧದ ಗ್ರಂಥಗಳು ೧೬. ಅವುಗಳ ವಿವರ ೧ ವಿಭೂತಿಪಟ್ಟ, ೨ ದೀಕ್ಷಾವಿಧಾನ, ೩ ಕ್ರಿಯಾದೀಕ್ಷೆ, ೪ ರುದ್ರ, ೫ ಅರವತ್ತುನಾಲ್ಕುಶೀಲ, ೬ ದಶವಿಧಪಾದೋದಕ, ೭ ಸಮಾಧಿಕ್ರಿಯಾ, ೮ ಕ್ರಿಯಾಮಹತ್ವ, ೯ ಪಾದಪೂಜಾವಿಧಿ, ೧೦ ಉದ್ಧರಣೆ, ೧೧ ಪಂಚಾಕ್ಷರಬೋಧೆ, ೧೨ ಅಷ್ಟಾವರಣದ ಗ್ರಂಥ, ೧೩ ಆಚರಣೆಯ ಷಟ್ಪದಿ, ೧೪ ಜ್ಯೋತಿರ್ಮಯ ಶಾಂಭವೀ ದೀಕ್ಷೆ, ೧೫ ಶಿವಪೂಜಾವಿಧಾನ, ೧೬ ಮೂವತ್ತರ ಉದ್ಧರಣೆ.

ಇವುಗಳಲ್ಲಿ ಬಹುತರವಾಗಿ ಎಲ್ಲವೂ ಮುದ್ರಣ ಮನೆಯನ್ನು ಕಂಡಿಲ್ಲವೆಂದು ಹೇಳಬಹುದು. ವೀರಶೈವರಲ್ಲಿ ಆಚಾರಗಳ ಬಗ್ಗೆ ಅನೇಕ ಭಿನ್ನ ಭಿನ್ನ ನಡೆವಳಿಕೆಗಳು ಸೇರಿಕೊಂಡಿವೆ. ವೀರಶೈವರಲ್ಲೆಲ್ಲ ಒಂದೇ ಪ್ರಕಾರದ ಆಚರಣೆಯನ್ನು ಪ್ರಚಾರದಲ್ಲಿ ತರುವದು ಅತ್ಯಗತ್ಯವಿದೆ. ಆದುದರಿಂದ ವೀರಶೈವರಲ್ಲಿಯ ಆಚಾರದ ಗ್ರಂಥಗಳನ್ನೆಲ್ಲ ಸಂಗ್ರಹಿಸಿ, ವಿಮರ್ಶಿಸಿ, ಒಂದೇ ಪದ್ಧತಿಯನ್ನು ವೀರಶೈವರಲ್ಲೆಲ್ಲ ಹಬ್ಬಿಸುವ ಆಚಾರ ಗ್ರಂಥವನ್ನು ನಿರ್ಮಿಸುವದು ಅಗತ್ಯವಿದೆ. ಈಗಿನ ಹಿಂದೂ ಧರ್ಮಶಾಸ್ತ್ರದಿಂದ ನ್ಯಾಯನಿರ್ಣಯವು ಸರಿಯಾಗಿ ಆಗುವದಿಲ್ಲ. ಏಕೆಂದರೆ ಹಿಂದೂ ಧರ್ಮಶಾಸ್ತ್ರವು ವರ್ಣಾಶ್ರಮ ಪರವಾಗಿರುವದು. ವರ್ಣಾಶ್ರಮಗಳು ಅಳಿದು ಹೋದ, ಮತ್ತು ವ್ಯಕ್ತಿಸ್ವಾತಂತ್ರ್ಯ, ಮತ್ತು ಸ್ವಾಭಿಮಾನದ ಈಗಿನ ಕಾಲದಲ್ಲಿ ಅದರಿಂದ ಹಿಂದುಗಳೆಂದು ಕರೆದುಕೊಳ್ಳುವವರಿಗೆ ಉಪಯೋಗವಿಲ್ಲ. ಮೇಲಾಗಿ ಆವ ವರ್ಣಕ್ಕೂ ಸೇರದ ಲಿಂಗವಂತರಿಗೆ ಹಿಂದುಧರ್ಮಶಾಸ್ತ್ರದಲ್ಲಿ ಸ್ಥಾನವಿಲ್ಲ. ಅಂತೇ ಲಿಂಗವಂತ ಧರ್ಮದ ಗುಟ್ಟನ್ನರಿಯದವರು ಅವರನ್ನು ಶೂದ್ರರ ಪಟ್ಟಿಯಲ್ಲಿ ಜೋಡಿಸಿರುವರು. ಹಕ್ಕಿನ ಪ್ರಶ್ನ ಹೊರಟಾಗ ಲಿಂಗವಂತರ ಅಭಿಮಾನಕ್ಕೆ ಕುಂದು ಬರುವ ಸಂಗತಿಗಳು ಈಗಿನ ನ್ಯಾಯಾಸನಗಳಲ್ಲಿ ಘಟಿಸಿರುವವು. ಎಲ್ಲ ಹಿಂದುಗಳು ಸಮಾನರೆಂದು ಭಾವಿಸಿ ಎಲ್ಲರಿಗೂ ಸರಿ ಬೀಳುವಂಥ ಒಂದು

ಹಿಂದೂ ಧರ್ಮಶಾಸ್ತ್ರವಾಗುವ ವರೆಗಾದರೂ ಲಿಂಗವಂತರು ತಮ್ಮ ಧರ್ಮಕ್ಕೂ ಮನ್ನಣೆಗೂ ಚ್ಯುತಿ ಬಾರದಂಥ ಮಾರ್ಗವನ್ನು ಹುಡುಕುವದು ಯೋಗ್ಯವು. ಲಿಂಗವಂತರು ಹಿಂದುಗಳಾದರೂ ಸಾಮಾನ್ಯ ಹಿಂದುಗಳಿಂದ ಭಿನ್ನವಾದ ಒಂದು ಧರ್ಮಶಾಸ್ತ್ರವನ್ನು ಅನಕಾ ಮಾಡಿಕೊಳ್ಳುವದು ಸರಿಯೆಂದು ತೋರುವದು. ಅದಕ್ಕೆ ಆದಿಯೆಂದರೆ ವೀರಶೈವರಲ್ಲಿಯ ಈಗಿನ ಭಿನ್ನವಾದ ಆಚಾರಗಳನ್ನು ಏಕೀಕರಿಸಿ ಒಂದೇ ಪದ್ಧತಿಯನ್ನು ಹಾಕುವದು. ನಂತರ ಧರ್ಮಶಾಸ್ತ್ರಮಾಡಿಕೊಳ್ಳಲು ಕಠಿಣವಾಗಲಿಕ್ಕಿಲ್ಲ. ವೀರಶೈವರಿಗೆ ಈ ವಿಷಯದ ಮಹತ್ವವನ್ನು ತೋರಿಸಿಕೊಡುವ ಕಾರಣವಿಲ್ಲ. ಇದು ಅವರ ಧರ್ಮದ ಮತ್ತು ಸ್ವಾಭಿಮಾನದ ಜೀವಾಳವೆಂದರೂ ಅಡ್ಡಿ ಇಲ್ಲ. ಇತ್ತ ಕಡೆಗೆ ವೀರಶೈವರು ಲಕ್ಷಗೊಡುವರೆಂದು ನಮ್ಮ ಬಲವಾದ ಆಸೆ.

ಉಪನಿಷತ್ತುಗಳುಃ—೯. ಅವು ಯಾವವೆಂದರೆ ೧ ಸಿದ್ಧಾಂತಶಿಖೋಪನಿಷತ್, ೨ ಯಜುರ್ವೇದೋಪನಿಷತ್, ೩ ಪೈಪ್ಪಲಾದೋಪನಿಷತ್, ೪ ಕೈವಲ್ಯೋಪನಿಷತ್, ೫ ಕಾಲಾಗ್ನಿ ರುದ್ರೋಪನಿಷತ್, ೬ ತೇಜೋಬಂದೂಪನಿಷತ್, ೭ ಧ್ಯಾನಬಂದೂಪನಿಷತ್, ೮ ವಜ್ರಸೂಚ್ಯೋಪನಿಷತ್, ಮತ್ತು ೯ ರುದ್ರೋಪನಿಷತ್,

ಇವುಗಳಲ್ಲಿ ಸಿದ್ಧಾಂತ ಶಿಖೋಪನಿಷತ್, ಯಜುರ್ವೇದೋಪನಿಷತ್ ಮತ್ತು ಪೈಪ್ಪಲಾದೋಪನಿಷತ್ ಇವು ಮೂರು ನಿರ್ಣಯಸಾಗರದ ೧೧೮, ಉಪನಿಷತ್ತುಗಳ ಸಂಗ್ರಹದಲ್ಲಿ ಇಲ್ಲ. ಬಹುತರ ಮುದ್ರಣಮನೆಯನ್ನು ಕಂಡಿರಲಿಕ್ಕಿಲ್ಲ. ಉಳಿದವು ಮುದ್ರಣವಾಗಿವೆ. ವಜ್ರಸೂಚಿಕೋಪನಿಷತ್ತೆಂಬದು ನಿರ್ಣಯಸಾಗರದ ೧೧೮ ಉಪನಿಷತ್ತುಗಳ ಸಂಗ್ರಹದ ಪುಸ್ತಕದಲ್ಲಿ ನಂಬರ ೩೮ ಪಾನ ೨೨೨ ರಲ್ಲಿ ಮುದ್ರಣವಾಗಿದೆ. ಇದೇ ವಜ್ರಸೂಚ್ಯುಪನಿಷತ್ತಿರಬಹುದು. ಇದರಲ್ಲಿ ರುದ್ರೋಪನಿಷತ್ತು ನಿರ್ಣಯಸಾಗರದ ಕಗರುದ್ರೋಪನಿಷತ್ತು ನಂ ೮೬ ಪಾನ ೪೭೩ ಅಥವಾ ರುದ್ರ ಹೃದಯೋಪನಿಷತ್ತು ನಂ. ೮೮ ಪಾನ ೪೭೮ ಇದ್ದಿರಬಹುದು. ಅಥವಾ ಇದೊಂದು ಬೇರೆ ಉಪನಿಷತ್ತಿರಬಹುದು. ಮೂಲವನ್ನಾಗಲಿ ಅಥವಾ ಮೂಲದ ಕೆಲವು ಅವತರಣಗಳನ್ನಾಗಲಿ ತಕ್ಕೊಳ್ಳದೆ ಬರೇ ಹೆಸರನ್ನಷ್ಟೇ ಟಿಪ್ಪಣೆ ಮಾಡಿಕೊಂಡು ಬಂದದರಿಂದ ಈ ಸಂಶಯಕ್ಕೆ ಆಸ್ಪದ.

ಕಥೆಗಳು ೧೨ಃ— ಅವು ೧ ಪಂಚತಂತ್ರ, ೨ ವೇತಾಳ ಪಂಚವಿಂಶತಿ, ೩ ಸತ್ಯೇಂದ್ರ ಚೋಳನ ಕಥೆ, ೪ ಶಿಬಿಚಕ್ರವರ್ತಿಯ ಚರಿತ್ರ, ೫ ಬಸ

ವೇಶ್ವರ ಪುರಾಣದ ಕಥೆಗಳು, ೬ ಶರಣರ ಚರಿತ್ರೆ, ೭ ಬಸವಶಿಖಾಮಣಿ, ೮ ಬಿಜ್ಜಮಹಾದೇವಿ ಕಥೆ, ೯ ಸಾನಂದ ಗಣೇಶ್ವರನ ಕಥೆ, ೧೦ ಮಡಿವಾಳಯ್ಯನ ಚರಿತ್ರೆ, ೧೧ ಬಸವೇಶ್ವರನ ಪವಾಡ, ೧೨ ಹರಳಯ್ಯನ ಚರಿತ್ರೆ.

ಸತ್ಯೇಂದ್ರ ಚೋಳನ ಕಥೆಯನ್ನು ಸಂಪಾದನೆಯ ಪರ್ವತ ಶಿವಯೋಗಿಗಳು ನಿರೂಪಿಸಿರುವರು. ಮಡಿವಾಳಯ್ಯನ ಚರಿತ್ರೆ, ಹರಳಯ್ಯನ ಚರಿತ್ರೆ, ಬಸವೇಶ್ವರನ ಪವಾಡ ಇವು ಶರಣರ ಬಗ್ಗೆ ನಮಗೆ ಗೊತ್ತಿದ್ದುದರಕಿಂತಲೂ ಹೆಚ್ಚಿನ ವಿಷಯವನ್ನು ಹೇಳುವವೋ ಹೇಗೆಂಬುದನ್ನು ನೋಡತಕ್ಕದ್ದು.

ಕಂದ ೯:— ಅವು ೧ ಶಂಕರದೇವರಕಂದ, ೨ ಕೇಶರಾಜನ ಕಂದ ೩ ಮರುಳದೇವರಕಂದ, ೪ ಪ್ರಭುಲಿಂಗದಕಂದ, ೫ ಮಂತ್ರಮಾಲೆಯ ಕಂದ, ೬ ಮಂತ್ರಮಹತ್ವದಕಂದ, ೭ ಮುರಗಿಸ್ವಾಮಿಗಳು ನಿರೂಪಿಸಿದ ಕಂದ, ೮ ಷಡಕ್ಷರಿಯ ಮಹಲ್ವಾದಕಂದ, ೯ ಬಸವಕಂದ.

ಬಹುತರವಾಗಿ ಇವೆಲ್ಲವುಗಳ ಬಹಳ ಪ್ರತಿಗಳು ಪ್ರತಿಯೊಂದು ವೀರಶೈವಮಠದಲ್ಲಿ ದೊರೆಯುವದರಿಂದ ಇವು ನಿತ್ಯ ಪಠಣದ ಪುಸ್ತಕಗಳಾಗಿರಬೇಕು. ಇವುಗಳೊಳಗಿನ ಕಂದ ಪದ್ಯಗಳು ಬಹು ಸರಳವೂ ಸರಸವೂ ಇವೆ.

ಕಾವ್ಯಗಳು ೨೬. ಅವು:— ೧ ಶತಕತ್ರಯ, ೨ ಪ್ರೌಢರಾಯನ ಕಾವ್ಯ, ೩ ಭೈರವೇಶ್ವರ ಕಾವ್ಯದ ಕಥಾಸೂತ್ರ ರತ್ನಾಕರ, ೪ ರಾಘವಾಂಕನ ಕಾವ್ಯ, ೫ ಭೈರವೇಶ್ವರ ಕಾವ್ಯ, ೬ ಶಬರ ಶಂಕರ ವಿಲಾಸ ೭ ಪ್ರಭುಲಿಂಗ ಲೀಲೆ, ೮ ಮಾಘ, ೯ ಹವಿಶ್ಮೀರನ ಕಾವ್ಯ, ೧೦ ದೀಪದಕಲಿಯರ ಕಾವ್ಯ, ೧೧ ಜೈಮಿನಿ, ೧೨ ಭಿಕ್ಷಾಟನ ಕಾವ್ಯ, ೧೩ ಉದ್ಭಟ ಕಾವ್ಯ, ೧೪ ಭಾವಚಿಂತಾರತ್ನ, ೧೫ ಗುರುಭಕ್ತಯ್ಯಗಳ ಕಾವ್ಯ, ೧೬ ಕುಮಾರ ಸಂಭವ, ೧೭ ರಾಜೇಂದ್ರ ವಿಜಯ, ೧೮ ಗಿರಿಜಾಕಲ್ಯಾಣ, ೧೯ ರಾಜಶೇಖರ, ೨೦ ಗುರುಬಸವನ ಆರುಕಾವ್ಯಗಳು, ೨೧ ಬಸವ ಪುರಾಣ, ೨೨ ಶಾಂತನಾಥಲಿಂಗ, ೨೩ ಸಿದ್ಧರಾಮನ ಕಾವ್ಯ, ೨೪ ಚನ್ನಬಸವ ಪುರಾಣ, ೨೫ ಹರಿಶ್ಚಂದ್ರ ಕಾವ್ಯ, ೨೬ ಮೋಹನ ತರಂಗಿಣಿ.

ಶತಕತ್ರಯದ ೯ ಪ್ರತಿಗಳು, ಭೈರವೇಶ್ವರನ ಕಾವ್ಯದ ೯ ಪ್ರತಿಗಳು, ಶಬರಶಂಕರ ವಿಳಾಸದ ೫ ಪ್ರತಿಗಳು, ಪ್ರಭುಲಿಂಗಲೀಲೆಯ ೭ ಪ್ರತಿಗಳು, ಭಿಕ್ಷಾಟನ ಕಾವ್ಯದ ೫ ಪ್ರತಿಗಳು, ಭಾವಚಿಂತಾರತ್ನದ ೫ ಪ್ರತಿ

ಗಳು, ಬಸವಪುರಾಣದ ೪ ಪ್ರತಿಗಳು, ಪ್ರೌಢರಾಯನ ಕಾವ್ಯದ ೪ ಪ್ರತಿಗಳು ದೊರೆತಿರುವದರಿಂದ ಈ ಗ್ರಂಥಗಳ ಪ್ರಾಶಸ್ತ್ಯವು ವೀರಶೈವರ ಮಠಗಳಲ್ಲಿ ಬಹಳವಾಗಿತ್ತೆಂದು ಊಹಿಸಬಹುದು. ಭೈರವೇಶ್ವರ ಕಾವ್ಯದ ಕಥಾಸೂತ್ರರತ್ನಾಕರವು ಅತಿ ಉಪಯುಕ್ತವಾದದ್ದು. ಶ್ರೀ. ಆರ್. ನರಸಿಂಹಾಚಾರ್ಯರು ಈ ಗ್ರಂಥದ ಆಧಾರದಿಂದಲೇ ವೀರಶೈವ ಕವಿಗಳ ಕಾಲವನ್ನು ಅನುಮಾನಿಸಿರುವರು. ಇದು ಇನ್ನೂ ಮುದ್ರಣದ ಮನೆಯನ್ನು ಕಂಡಿಲ್ಲ. ಇವೆಲ್ಲವು ಉತ್ತಮವಾದ ಪ್ರೌಢ ಕನ್ನಡಕಾವ್ಯಗಳು. ಬಹುತರ ಎಲ್ಲ ಕಾವ್ಯಗಳ ಸರಿಯಾದ (*Editions*) ಪ್ರತಿಗಳ (*Critical*) ಅಗತ್ಯವಿದೆ. ಭಿಕ್ಷಾಟನಕಾವ್ಯ, ಉದ್ಭಟಕಾವ್ಯ, ಭಾವಚಿಂತಾರತ್ನ, ಗಿರಿಜಾಕಲ್ಯಾಣ ಇವುಗಳನ್ನು ಮೊದಲು ಕೈಕೊಳ್ಳಬಹುದು.

ಕೋಶ ಮತ್ತು ವ್ಯಾಕರಣ ೬. ಅವು:— ೧ ಕರ್ನಾಟಕಧಾತು, ೨ ಅಮರಕೋಶ, ೩ ಧನಂಜಯನಿಘಂಟು, ೪ ನಾಮಲಿಂಗಾನುಶಾಸನ, ೫ ಕರ್ನಾಟಕಶಬ್ದಮಂಜರಿ, ೬ ಚತುರಾಸ್ಯನಿಘಂಟು. ಇವುಗಳಲ್ಲಿ ಕೆಲವು ಮುದ್ರಿಸಲ್ಪಟ್ಟಿವೆ.

ವೀರಶೈವರ ತತ್ವಜ್ಞಾನ. ೪೫. ಅವು: — ೧ ತತ್ವಜ್ಞಾನ ತಾರಾವಳಿ, ೨ ಲಿಂಗಾಂಗಸಂಯೋಗನಿರ್ಣಯ, ೩ ಮಿಶ್ರಾರ್ಪಣ, ೪ ಕರಣಹಸಿಗೆ, ೫ ಮಗ್ಗೆಯ ಮಾಯಿದೇವರ ಏಕೋತ್ತರಶತಸ್ಥಲದ ನಾಂದ್ಯ, ೬ ಸೂಕ್ಷ್ಮ ಷಟ್‌ಸ್ಥಲ, ೭ ಕೈವಲ್ಯಪದ್ಧತಿಟೀಕಾ, ೮ ಮಂತ್ರಗೋಪ್ಯ, ೯ ತತ್ವದಗ್ರಂಥ, ೧೦ ತಾತ್ಪರ್ಯ ಸಂಗ್ರಹ, ೧೧ ಅನುಭವಸಾರ, ೧೨ ವೈರಾಗ್ಯಷಟ್ಪದಿ, ೧೩ ವೀರಶೈವ ತತ್ವೋಪದೇಶ, ೧೪ ಅನಾದಿ ವೀರಶೈವಸಾರ ಸಂಗ್ರಹ, ೧೫ ಅನುಭವದ ಮುದ್ರೆ, ೧೬ ಅನುಭವ ಶಿಖಾಮಣಿ, ೧೭ ಪರಮಾನುಭವ ಬೋಧೆ, ೧೮ ಷಟ್‌ಸ್ಥಲ ತಿಲಕ, ೧೯ ಸಿದ್ಧಾಂತ ಶಿಖಾಮಣಿ, ೨೦ ಸಂಪಾದನೆಯ ಸಾರಾಮೃತ, ೨೧ ಲಿಂಗ ಷಟ್ಪದಿಯ ವ್ಯಾಖ್ಯಾನ, ೨೨ ಏಕೋತ್ತರ ಶತಸ್ಥಲ, ೨೩ ಲಿಂಗ ಲೀಲಾ ವಿಲಾಸಚಾರಿತ್ರ್ಯ, ೨೪ ಷಟ್‌ಸ್ಥಲ ಜ್ಞಾನ ಸಾರಾಮೃತ ವಚನ, ೨೫ ಪ್ರಭುದೇವರ ಮಂತ್ರ ಗೌಪ್ಯ, ೨೬ ವೀರಶೈವ ಚಿಂತಾಮಣಿ, ೨೭ ವೀರಶೈವ ಸಿದ್ಧಾಂತ, ೨೮ ಅನುಭವ ಶಿಖಾಮಣಿ, ೨೯ ಅರ್ಕಸೂತ್ರ, ೩೦ ಷಟ್‌ಸ್ಥಲ ಸೂತ್ರ, ೩೧ ಶಿವತತ್ವ ಚಿಂತಾಮಣಿ, ೩೨ ಪ್ರಸಾದ ಚಿಂತಾಮಣಿ, ೩೩ ಪರಮಾನುಭವ

ಬೋಧೆ, ೩೪ ವಿವೇಕ ಚಿಂತಾಮಣಿ, ೩೫ ಪರಮಾರ್ಥಗೀತೆ, ೩೬ ಸರ್ಪಭೂಷಣನ ಕೈವಲ್ಯ, ೩೭ ಸ್ವರ ಚಿಂತಾಮಣಿ, ೩೮ ಆತ್ಮಲಿಂಗ ಪ್ರಣವ ಸಂಯೋಗ ಸ್ಥಲ, ೩೯ ಪರತಿ ಸೋಮಯ್ಯಗಳು ನಿರೂಪಿಸಿದ ಪಂಚೀಕರಣ, ೪೦ ಪ್ರಾಣಲಿಂಗಜ್ಞಾನ ದರ್ಪಣ ಚರಿತ್ರೆ, ೪೧ ಶೂನ್ಯ ಸಂಪಾದನೆ, ೪೨ ಪರಮಾರ್ಥ ಪ್ರಕಾಶಿಕೆ, ೪೩ ಇನ್ನೂರು ಹದಿನಾರು ಸಕೀಲ, ೪೪ ಲಿಂಗಾಂಗ ಸಾಮರಸ್ಯ, ೪೫ ಊರ್ಧ್ವಕುಂಡಲಿ.

ಇವುಗಳಲ್ಲಿ ಅನೇಕ ಮುದ್ರಣವನ್ನು ಹೊಂದಿರುವವು. ಹಲ ಕೆಲವು ಇಲ್ಲ. ಇವುಗಳ ಮಹತ್ವವು ವೀರಶೈವರಿಗೆ ಅಷ್ಟಿಷ್ಟೆಂದು ಹೇಳಲು ಸಾಧ್ಯವಿಲ್ಲ. ಆವದಾದರೂ ಧರ್ಮದ ತಳಹದಿಯನ್ನು ಕಂಡುಕೊಳ್ಳಬೇಕಾದರೆ ಅದರ ಆಚಾರ ವಿಚಾರಗಳನ್ನು ಶೋಧಿಸುವದು ಅತ್ಯಗತ್ಯವು. ಅದರಂತೆಯೇ ನಮ್ಮ ಧರ್ಮದಲ್ಲೂ ಉಂಟು. ತತ್ವಜ್ಞಾನ (*Philosophy*) ದಲ್ಲಿಯ ಲಿಂಗಗಳಾದ *theology, ethics, metaphysics* ಮೊದಲಾದವುಗಳನ್ನು ವೀರಶೈವ ತತ್ವಜ್ಞಾನದಲ್ಲಿ ಕಂಡುಕೊಳ್ಳುವದು ಅಗತ್ಯವು. ಈಗ ನಮ್ಮಲ್ಲಿ ತತ್ವಜ್ಞಾನಗಳ ಬಗ್ಗೆ ಒಂದೇ ಅಭಿಪ್ರಾಯವಿಲ್ಲ. ನಮ್ಮ ಶರಣರೆಲ್ಲರು ಅದ್ವೈತಿಗಳಿರುವರು. ನೀಲಕಂಠ ಶಿವಾಚಾರ್ಯರಂಥವರು ಶಕ್ತಿ ವಿಶಿಷ್ಟಾದ್ವೈತವನ್ನು ಪ್ರತಿಪಾದಿಸುವರು. ದ್ವೈತಿಗಳಿಗೂ ಕೂಡ ನಮ್ಮಲ್ಲಿ ಕೊರತೆಯಿಲ್ಲ. ಆದುದರಿಂದ ನಮ್ಮ ಆಚಾರಗಳಲ್ಲಿ ವ್ಯತ್ಯಾಸವಿರುವಂತೆ ನಮ್ಮ ವಿಚಾರಗಳಲ್ಲಿಯೂ ವ್ಯತ್ಯಾಸಗಳಿವೆ. ಇವನೆಲ್ಲ ಏಕೀಕರಿಸಿ ನಮ್ಮಲ್ಲಿ ಒಂದೇ ವಿಚಾರವನ್ನೂ ಒಂದೇ ಆಚಾರವನ್ನೂ ಪ್ರಚಾರದಲ್ಲಿ ತರುವದರಿಂದ ವೀರಶೈವರ ಐಕ್ಯತ್ವಕ್ಕೆ ಒಂದು ಪ್ರಕಾರದ ಸ್ವರೂಪ ಬಂದೀತೆಂದು ನನ್ನ ಭಾವನೆ.

ತ್ರಿಪದಿಗಳು ೯. ಅವು:— ೧ ಬಸವಸ್ತೋತ್ರದ ತ್ರಿಪದಿ, ೨ ಮಿಶ್ರಸ್ತೋತ್ರದ ತ್ರಿಪದಿ, ೩ ಅಷ್ಟಾವರಣದ ತ್ರಿಪದಿ ೪ ಶೀಲವಂತಯ್ಯನ ತ್ರಿಪದಿ, ೫ ಏಕೋದೇವ ಪ್ರತಿಷ್ಠಾ ತ್ರಿವಿಡಿ, ೬ ಸರ್ವಜ್ಞ ಮೂರ್ತಿಯ ತ್ರಿವಿಡಿ, ೭ ಸೋಭಾನ ಮೂರ್ತಿಯ ತ್ರಿವಿಡಿ, ೮ ಬಸವ ತ್ರಿವಿಡಿ, ೯ ಅರವತ್ತು ಮೂವರು ಪುರಾತನರ ತ್ರಿವಿಡಿ

ಪುರಾಣಗಳು ೧೬ ಅವು:— ಮಹಾಲಿಂಗೇಶ್ವರ ಪುರಾಣ, ೨ ಕಾಶೀಖಂಡ, ೩ ಶಂಕರಸಂಹಿತಾ. ೪ ಭಕ್ತಿರಸದ ಸೋನೆ, ೫ ರುದ್ರ

ಭಾರತ ೬ ಸಿದ್ಧೇಶ್ವರ ಪುರಾಣ, ೭ ಸೌಂದರ ಪುರಾಣ, ೮ ಶಿವದಾಸಿ ಮಾರ್ಯರ ಪುರಾಣ, ೯ ಶರಣ ಲೀಲಾಮೃತ, ೧೦ ನೀಲಕಂಠ ಪುರಾಣ ೧೧ ಕುಮಾರೇಶ್ವರ ಪುರಾಣ, ೧೨ ಸ್ಕಂದ ಪುರಾಣ, ೧೩ ಬ್ರಹ್ಮೋತ್ತರ ಖಂಡ, ೧೪ ಚಂಪೂ ಭಾರತ, ೧೫ ವೀರಭದ್ರ ಪುರಾಣ, ೧೬ ಕೊಟ್ಟೂರ ಬಸವೇಶ್ವರ ಪುರಾಣ,

ಮಹಾತ್ಮ್ಯ. ೨. ಅವು:— ೧ ರಾಮತೀರ್ಥ ಮಹಾತ್ಮ್ಯ, ೨ ಮಹಾಕೂಟ ಮಹಾತ್ಮ್ಯ.

ರಗಳೆಗಳು. ೧೧ ಅವು:— ೧ ಗುರುರಗಳೆ, ೨ ಲಿಂಗರಗಳೆ, ೩ ಮಹಾದೇವರಗಳೆ, ೪ ಮನೋವಿಕಾರ ನಿರಸನರಗಳೆ, ೫ ಶರಣಬಸವರಗಳೆ, ೬ ಷಡಕ್ಷರರಗಳೆ, ೭ ಭಕ್ತಿಬಿನ್ನಹರಗಳೆ, ೮ ವೀರಶೈವರಗಳೆ, ೯ ಚನ್ನಬಸವರಗಳೆ, ೧೦ ಬಸವರಗಳೆ, ೧೧ ಲಿಂಗನಮಸ್ಕಾರರಗಳೆ.

ವಚನಗಳು. ೨೮ ಅವು:— ೧ ಗಣಭಾಷ್ಯರತ್ನಮಾಲೆ. ೨ ಎಲ್ಲ ಪುರಾತನರ ವಚನ, ೩ ವಚನಶಾಸ್ತ್ರ, ೪ ಸಿದ್ಧೇಶ್ವರವಚನ, ೫ ಲಿಂಗಕಳಾವಸ್ಥೆಯ ವಚನ, ೬ ಚನ್ನಬಸವೇಶ್ವರ ಷಟ್‌ಸ್ಥಲದ ವಚನ, ೭ ಸೋಮೇಶ್ವರ ವಚನ, ೮ ಪ್ರಭುದೇವರ ಟೀಕೆಯ ವಚನ, ೯ ಒಕ್ಕಲಿಗ ಮುದ್ದಯ್ಯನ ವಚನ, ೧೦ ಅಖಂಡೇಶ್ವರ ವಚನ, ೧೧ ಪ್ರಭುದೇವರ ಸೃಷ್ಟಿಯ ವಚನ, ೧೨ ಮುಪ್ಪಿನ ಷಡಕ್ಷರಿಯ ವಚನ, ೧೩ ಚನ್ನನಂಜೇದೇವರು ನಿರೂಪಿಸಿದ ಬಸವೇಶ್ವರ ವಚನ, ೧೪ ಕೋಲಶಾಂತಯ್ಯನ ವಚನ, ೧೫ ಪ್ರಭುದೇವರ ಶೂನ್ಯಸಂಪಾದನೆ, ೧೬ ಬಸವೇಶ್ವರ ವಚನ, ೧೭ ಎಲ್ಲ ಪುರಾತನರು ನಿರೂಪಿಸಿದ ಬೆಡಗಿನ ವಚನ, ೧೮ ಷಟ್‌ಸ್ಥಲ ಜ್ಞಾನ ಸಾರಾಮೃತ ವಚನ, ೧೯ ಆಚರಣೆಯ ಸಂಬಂಧವ ವಚನ, ೨೦ ಲಿಂಗಸ್ತೋತ್ರದ ವಚನ, ೨೧ ಅಖಂಡೇಶ್ವರ ವಚನ, ೨೨ ಅಷ್ಟಾವರಣದ ವಚನ, ೨೩ ಲಿಂಗಸೂತ್ರದ ವಚನಗಳು, ೨೪ ಚನ್ನಬಸವೇಶ್ವರ ಅನುಭವಸ್ಥಲದ ವಚನ, ೨೫ ಷಡಕ್ಷರಸ್ವರ ವಚನ, ೨೬ ಶಿವಲಿಂಗ ಮಹಾತ್ಮ್ಯದ ವಚನ, ೨೭ ಸ್ವತಂತ್ರ ಸಿದ್ಧಲಿಂಗೇಶ್ವರ ವಚನ, ೨೮ ಗಣದಾಸಿ ವೀರಣ್ಣಾವರ ವಚನ.

ಇವುಗಳಲ್ಲಿಯ ಬಹು ಭಾಗವು ಬೈಲಿಗೆ ಬಂದಿಲ್ಲ. ಇವುಗಳನ್ನು ಆದಷ್ಟು ತೀವ್ರ ಮುದ್ರಿಸುವದು ಅತ್ಯಗತ್ಯವಿದೆಯೆಂದು ಹೇಳುವ ಕಾರಣವಿಲ್ಲ. ಇವೆಲ್ಲವುಗಳಲ್ಲಿ ಆಧ್ಯಾತ್ಮಿಕ ದೃಷ್ಟಿಯಿಂದ ಮುಪ್ಪಿನ ಷಡಕ್ಷರದೇವರ ವಚನಗಳು ಬಲು ದೊಡ್ಡ ಯೋಗ್ಯತೆಯುಳ್ಳವು. ಅವು ಆತ್ಮಪವಿ

ತ್ರತೆಯು ಹೆಗ್ಗುರುತಾಗಿವೆ. ಚೆನ್ನ ನಂಜೇದೇವರು ನಿರೂಪಿಸಿದ ಬಸವೇಶ್ವರ ವಚನವೆಂಬುದೊಂದುಂಟು. ಅದಕ್ಕೂ ಈಗ ರೂಢಿಯಲ್ಲಿದ್ದ ಬಸವೇಶ್ವರ ವಚನಕ್ಕೂ ವ್ಯತ್ಯಾಸವಿದೆಯೋ ಹೇಗೆಂಬುದು ಶೋಧಿಸಲ್ತಕ್ಕದೆ.

ಶತಕಗಳು ೬. ಅವು:— ೧ ಗುರು ಶಂಕರೇಶ್ವರ ಶತಕ, ೨ ಶಿವ ಮಹಿಮಾಶತಕ, ೩ ವೃಷಭ ಶತಕ, ೪ ಅರ್ಧೇಂದು ಮೌಳಿಶತಕ, ೫ ಕದಂಬ ಶತಕ, ೬ ಶಿವಲಿಂಗಾರ್ಚನ ಪೂಜನ ಶತಕ.

ಸ್ತೋತ್ರ. ೨೨ ಅವು:— ೧ ಭುಜಂಗ ಸ್ತೋತ್ರ, ೨ ಶಿವಸಹಸ್ರನಾಮ ಸ್ತೋತ್ರ, ೩ ಪಂಚ ಸ್ತೋತ್ರ, ೪ ಮಲಯರಾಜ ಸ್ತೋತ್ರ, ೫ ಅನಾಮಯ ಸ್ತೋತ್ರ, ೬ ಹಲಾಯುಧ ಸ್ತೋತ್ರ, ೭ ಮಹಿಮನ್ ಸ್ತೋತ್ರ, ೮ ಅಪರಾಧ ಸ್ತೋತ್ರ, ೯ ಮಲುಹಣ ಸ್ತೋತ್ರ, ೧೦ ಭೃಂಗಿ ಸ್ತೋತ್ರ, ೧೧ ಮುರಿಗೇ ಗುರುಸಿದ್ಧಸ್ವಾಮಿಗಳ ಸ್ತೋತ್ರ, ೧೨ ಶಿವಕವಚ, ೧೩ ನೀಲಾಂಬಿಕಾ ಲಲಿತ ಸ್ತೋತ್ರ, ೧೪ ಶಂಕರ ಸಂಹಿತೆಲಿಂಗ ಸ್ತೋತ್ರ, ೧೫ ಶಿವಮಹಿಮಾ ಶತಕ, ೧೬ ಲಿಂಗಷಟ್ಪದಿ, ೧೭ ಬಸವ ಸ್ತೋತ್ರದ ಷಟ್ಪದಿ, ೧೮ ಮಿಶ್ರ ಸ್ತೋತ್ರದ ಷಟ್ಪದಿ, ೧೯ ಸ್ತೋತ್ರ ಷಟ್ಪದಿ, ೨೦ ರುದ್ರಾಕ್ಷಿ ಮಹಿಮೆ, ೨೧ ಲಿಂಗಸ್ತೋತ್ರ, ೨೨ ಗಂಗಾಲಹರಿ.

ಹಾಡುಗಳು. ೮ ಅವು:— ೧ ಗಿರಿಜಾಸಂವಾದ, ೨ ವೀರಸಂಗಯ್ಯನ ಸಾಂಗತ್ಯ ೩ ಲಂಕಾದಹನದ ಯಕ್ಷಗಾನ, ೪ ವೃಷಭಗೀತೆ, ೫ ಅವಧೂತ ಗೀತೆ, ೬ ಸಾನಂದ ಗಣೇಶ್ವರನ ಸಾಂಗತ್ಯ, ೭ ಗಂಗೆ ಗೌರಿ ಸಂವಾದ, ೮ ರೇವಣಸಿದ್ಧೇಶ್ವರನ ಸಾಂಗತ್ಯ.

ಇತರ ಗ್ರಂಥಗಳು. ೬ ಅವು:— ೧ ಗುರು ಬೋಧಾಮೃತ, ೨ ಇಷ್ಟಲಿಂಗ ಚರಿತ್ರ, ೩ ನವರತ್ನ ಚಿಂತಾಮಣಿ, ೪ ಕದಂಬ ಶಾಸ್ತ್ರ, ೫ ಚಿದಾನಂದರ ಹಠಯೋಗ, ೬ ಹಠಯೋಗ ಪ್ರದೀಪಿಕಾ.

ವೀರಶೈವರ ಪುಸ್ತಕಾಲಯಗಳಲ್ಲಿ ಎಂಥ ಪುಸ್ತಕಗಳ ಸಮಾವೇಶವಾಗಿತ್ತು ಮತ್ತು ಎಂಥ ಗ್ರಂಥಗಳನ್ನು ಮಠದೊಡೆಯರು ಓದುತ್ತಿದ್ದರೆಂಬ ಬಗ್ಗೆ ವಾಚಕರಲ್ಲಿ ಕಲ್ಪನೆಯನ್ನುಂಟು ಮಾಡಿಕೊಡಲು ಪುಸ್ತಕಗಳ ಹೆಸರುಗಳನ್ನು ವಿವರಿಸಲಾಗಿದೆ. ಸಂಶೋಧನಾ ಲಾಲಸರಾದ ಚಿಕಿತ್ಸಕರಿಗೆ ಇದರಿಂದ ಉಪಯೋಗವಾಗಬಹುದೆಂದು ನನ್ನ ಭಾವನೆ.

# ಗ್ರಂಥ ವಿಮರ್ಶೆ.



೧ ಶ್ರೀ ಪ್ರಭುಲಿಂಗ ಕಂದಃ— ಈ ಚಿಕ್ಕ ಗ್ರಂಥವು ಸುಮಾರು ೪೦ ಪುಟಗಳುಳ್ಳದ್ದಾಗಿದೆ. ಇದನ್ನು ಶ್ರೀ ಮುರಿಗೆಯ್ಯ ಮಠದ ಶಾಂತ ವೀರನೆಂಬ ಸ್ವಾಮಿಯು ಬರೆದಿರುವನು ಶಾಂತವೀರನು ೧೬ ನೆಯ ಶತ ಮಾನದಲ್ಲಿದ್ದನು. ಈತನು ಶ್ರೀ ತೋಂಟದ ಸಿದ್ಧಲಿಂಗನ (ಕ್ರಿ. ಶ. ೧೪೭೦) ಶಿಷ್ಯನಾದ ಬೋಳಬಸವನ ಅನುಗ್ರಹಕ್ಕೆ ಪಾತ್ರನಾಗಿದ್ದನು. ಈ ಕಾವ್ಯದಲ್ಲಿ ೫೩ ಕಂದಪದ್ಯಗಳಿದ್ದು ಕಡೆಯ ಪದ್ಯದಲ್ಲಿ ಫಲಶ್ರುತಿ ಯನ್ನು ಹೇಳಿದೆ. ಇದಕ್ಕೆ ಶ್ರೀ ಪರ್ವತಶಿವಯೋಗಿಯ ಟೀಕೆಯುಂಟು ಈತನು ೧೬೫೦ ರಲ್ಲಿ ಇದ್ದನು. ಶ್ರೀ ಪಾವಟೆ ವಕೀಲರು ಈ ಗ್ರಂಥಕ್ಕೆ ಪೀಠಿಕೆಯನ್ನು ಬರೆದಿರುವರು. ಶ್ರೀ ಬುದ್ದಯ್ಯ ಪುರಾಣಿಕ ತೇರದಾಳ ಇವರು ಈ ಗ್ರಂಥವನ್ನು ಶೋಧಿಸಿ ಪ್ರಕಟಗೊಳಿಸಿರುವರು. ಇದರಲ್ಲಿ ಇಷ್ಟಲಿಂಗದ ಪೂಜಾಕ್ರಮವು ವಿವರವಾಗಿದೆ.

೨ ಬಸವಗೀತಾಂಜಲಿ:— ಇದನ್ನು ಮೋಟಗಿಮಠದ ಶ್ರೀ ಬಸ ವಲಿಂಗಶಾಸ್ತ್ರಿ ಅಥಣಿ ಇವರು ಬರೆದಿರುವರು. ಇದರಲ್ಲಿ ಬಸವೇಶನ ಮಹಿಮೆಯನ್ನು ನಾನಾ ಧಾಟಿಯ ಪದಗಳಿಂದ ಗ್ರಂಥಕರ್ತರು ಕೊಂ ಡಾಡಿರುವರು. ಪದಗಳು ಸುಲಭವಾಗಿಯೂ ಮಧುರವಾಗಿಯೂ ಇರು ವವು. ಹೆಣ್ಣುಮಕ್ಕಳು ಸಹ ಪ್ರೇಮದಿಂದ ಹಾಡಲಿಕ್ಕೆ ಬರುವಂತಿವೆ. ಇದರಲ್ಲಿ ಸುಮಾರು ೩೦ ಪುಟಗಳಿದ್ದು ಬೆಲೆ ೩ ಆ. ಇರುತ್ತದೆ.

೩. ದಿ. ಲಾಯಿಫ್ ಆಫ್ ಲಾರ್ಡ ಬಸವಃ— ಇದೊಂದು ಚಿಕ್ಕ ಇಂಗ್ಲಿಷ್ ಗ್ರಂಥವು. ಇದನ್ನು ಕೊಲ್ಲಾಪುರ ರಾಜಾರಾಮ ಕಾಲೇಜದ ಮಿ॥ ಎಸ್. ಕೆ. ಸಂಗನಾಳಮಠ ಇವರು ಬರೆದಿರುವರು. ಕೊಲ್ಲಾ ಪುರ ಕರ್ನಾಟಕ ಸಂಘದವರು ಪ್ರಸಿದ್ಧಿಸಿರುವರು. ಇದರಲ್ಲಿ ಬಸವನ ಚರಿತ್ರೆಯು ನಾಟಕರೂಪದಲ್ಲಿ ಪ್ರತಿಪಾದಿತವಾಗಿದೆ. ಇದರಲ್ಲಿ ಸುಮಾರು ೨೦ ಪುಟಗಳಿವೆ.

೪. ಶ್ರೀ ನಾಲತವಾಡ ಶಿವಶರಣರ ಚರಿತ್ರೆಯುಃ— ಇದನ್ನು ಶ್ರೀ. ಈಶ್ವರ ಸಣಕಲ್ಲ ಇವರುಬರೆದಿದ್ದಾರೆ. ಅಥಣಿ ಮೋಟಗಿ ಮಠದ ಶಿ. ಬಸವಲಿಂಗಶಾಸ್ತ್ರಿಗಳು ಪ್ರಸಿದ್ಧಿಸಿದ್ದಾರೆ. ಇದರಲ್ಲಿ ೧೩೦ ಪುಟಗಳಿವೆ.

ಬೆಲೆ ೧ ರೂ. ಶ್ರೀ ಅವಟಿಶಂಭಪ್ಪನವರು ಬರೆದ ಮರಾಠಿ ಗ್ರಂಥವನ್ನೇ ಅನುಸರಿಸಿ ಇದು ಬರೆದುದಾಗಿದೆ. ಮಿ. ಗಂಗಪ್ಪಾ ಹುಲುಕುಂದ ಬಿ. ಎ. ಎಲ್. ಎಲ್. ಬಿ. ಇವರು ಇದಕ್ಕೆ ಮುನ್ನುಡಿಯನ್ನು ಬರೆದಿದ್ದಾರೆ. ಭಾಷೆಯು ಸರಳವಾಗಿದ್ದು ಕಥಾ ರಚನೆಯು ಸರಸವಾಗಿರುತ್ತದೆ.

೫. ವಿವಾಹವಿಧಿಃ— ಇದನ್ನು ಅಥಣಿ ಮೋಟಗಿ ಮಠದ ಶಿ. ಬ. ವಲಿಂಗಶಾಸ್ತ್ರಿಗಳು ಬರೆದಿದ್ದಾರೆ. ಇದರಲ್ಲಿ ಸುಮಾರು ೯೦ ಪುಟಗಳುಂಟು. ಬೆಲೆ ೧೦ ಆಣೆ. ಇದರಲ್ಲಿ ಕನ್ಯಾವರಗಳ ಅಂಗಸಾಮುದ್ರಿಕ ಲಕ್ಷಣ ಸಾಲಾವಳಿ, ಗಣ, ನಾಪಿ, ಲಗ್ನವಿಧಾನ ಮುಂತಾದ ಸರ್ವ ವಿಷಯಗಳೂ ವಿವರಿಸಲ್ಪಟ್ಟಿವೆ.

೬. ತತ್ವಬೋಧಾಭ್ಯಾಸಃ— ೭ ಇದು ಮಹಾತ್ಮಾ ಗಾಂಧಿಯವರ ತತ್ವಬೋಧಾಭ್ಯಾಸವೆಂಬ ಪುಣೆಯ ಕ್ರಿಸ್ತ ಸೇವಾ ಸಂಘದ ಅಧ್ಯಕ್ಷರಾದ ಎಲ್ವಿನ್ನ ಸಾಹೇಬರ ಶಿರೋಲೇಖದ ಅನುವಾದವಾಗಿದೆ. ಇದನ್ನು ಮೋಟೇಬೆನ್ನೂರಿನ ಶ್ರೀ ಪಾಟೀಲ ಕಲ್ಲನಗೌಡರು ಬಿ. ಎ. ಇವರು ಬರೆದಿರುವರು. ಬೆಲೆ ೪ ಆಣೆ. ಇದರಲ್ಲಿ ಮಹಾತ್ಮರ ಪ್ರೇಮ, ಸತ್ಯ, ಸ್ವಾರ್ಥತ್ಯಾಗ, ಧೈರ್ಯ, ಧರ್ಮ, ಪ್ರಾರ್ಥನೆ ಈ ಮೊದಲಾದ ವಿಷಯಗಳು ಪ್ರತಿಪಾದಿತವಾಗಿವೆ.

ಮಣ್ಣಿನದು ಅಲ್ಲವಷ್ಟೆ?" ಎಂಬದಾಗಿ ಕೋಟಿ ಅರಸುಗಳಿಗೆ ಕೇಳಿದಲ್ಲಿ, ಇದಕ್ಕೆ ಪ್ರತಿಜವಾಬು ಕೊಡುವದಕ್ಕೆ ಅವರಿಗೆ ಮಾತು ಸಿಕ್ಕದೆ ಸುಮ್ಮನೆ ಇದ್ದರು. ಆ ಬಳಿಕ ರಾಜರು ಹೇಳಿದ್ದು:—" ಬೈನಾಡಲ್ಲು ಬಿದ್ದು ಹೋದ ದೊರೆಮಕ್ಕಳ ತಲೆ ಎರಡರಲ್ಲಿ ಒಂದು ತಲೆ ನಿಮ್ಮ ಕಾರಣವರ ತಲೆಗೆ ಸಮವಾಯಿತು. ಮತ್ತೊಂದು ತಲೆಗೆ ನಿಮ್ಮ ತಲೆ ಕೊಡಿ"— ಎಂಬದಾಗಿ ಕೇಳಿದಲ್ಲಿ, ಆ ಮಾತಿಗೆ ಕೋಟಿ ಅರಸುಗಳು ಹೇಳಿದ ವಿವರ:— "ತಾವು ಹೇಳಿದ ಹಾಗೆ ನಮ್ಮ ಕಾರಣವರ ತಲೆ ಒಂದಕ್ಕೆ ನಿಮ್ಮ ಸಂಸ್ಥಾನದ ದೊರೆಮಗನ ತಲೆ ಒಂದಕ್ಕೆ ಸಮವಾಯಿತು. ಮತ್ತೊಂದು ದೊರೆಮಗನ ತಲೆಗೆ, ಬೈನಾಡು ಕಲ್ಪಾತಿ ಪರಿಯಂತರಕ್ಕೂ ನಮ್ಮದು ನಿಮ್ಮದು ಎಂಬದಾಗಿ ನಿಮಗೆ ನಮಗೆ ವಿವಾದ ಬಿದ್ದು ಇದಯಷ್ಟೆ? ಅದಕ್ಕೆ ನಾವು ಇನ್ನು ಮುಂದೆ ವಿವಾದ ಮಾಡುವದಿಲ್ಲ"— ಎಂಬದಾಗಿ ಹೇಳಿದರು. ಆ ಮಾತಿಗೆ ರಾಜರು ಹೇಳಿದ್ದು:— "ನೀವು ಬಾಯಿಂದ ಹೇಳಿದರೆ ಈ ಮಾತು ತೀರಲಿಕ್ಕಿಲ್ಲ. ಆ ಬಗ್ಗೆ ಬರೆದು ಕೊಡಿ"— ಎಂಬದಾಗಿ ಹೇಳಿದಲ್ಲಿ, ಅದಕ್ಕೆ ಒಡಂಬಟ್ಟು, ಕೋಟಿ ಅರಸುಗಳು ದೊರೆಗಳಿಗೆ ಬರೆದು ಕೊಟ್ಟ ಕಾಗದ(ದ) ಕ್ರಮವೆಂತೆಂದರೆ— "ಕೀಲಕ ಸಂವತ್ಸರದ ಮಾಘ ಶುದ್ಧ ೫ ಲ್ಲು ಶ್ರೀಮತು ಕೊಡಗಿನ ಸಂಸ್ಥಾನದ ಹಾಲೇರಿ ವೀರಪ್ಪ ಒಡೆಯರವರಿಗೆ, ಪಾಲೆ ವೀರವರ್ಮ ರಾಜರು ಬರೆಸಿಕೊಟ್ಟ ಕಾಗದ ಕ್ರಮವೆಂತೆಂದರೆ— ತಮ್ಮ ಸಂಸ್ಥಾನದ ದೊರೆಮಕ್ಕಳು ಇಬ್ಬರನ್ನು ಬೈನಾಡಲ್ಲಿ ಕೊಂದು ಹಾಕಿದ್ದಕ್ಕೆ ಈ ಎರಡು ತಲೆಯಲ್ಲಿ ಒಬ್ಬ ದೊರೆಮಗನ ತಲೆಗೂ ಪ್ರಾಕು ತೋಮರದಲ್ಲಿ ನಮ್ಮ ಕಾರಣವರ(ನ್ನು) ನಿಮ್ಮ ಕಾರಣರವರು ಹೊಡೆದ ತಲೆಗೂ ಒಂದಕ್ಕೊಂದು ಸಮವಾದ್ದು ಹೋಗಲಾಗಿ, ಬಾಕಿ ಮತ್ತೊಂದು ನಿಮ್ಮ ಸಂಸ್ಥಾನದ ದೊರೆಮಗನ ತಲೆಗೆ, ಬೈನಾಡು ಕಲ್ಪಾತಿ ಪರಿಯಂತರವೂ ನಿಮ್ಮದು ನಮ್ಮದು ಎಂಬದಾಗಿ ನಮಗೆ ವಿವಾದ ಬಿದ್ದು ಇದೆಯಷ್ಟೆ? ಅದಕ್ಕೆ ನಾವು ಇನ್ನು ಮುಂದೆ ವಿವಾದ ಮಾಡುವದಿಲ್ಲ. ಆ ಕಲ್ಪಾತಿ [ಗಡಿ] || ಪರಿಯಂತರಕ್ಕೂ ನಿಮ್ಮದೇ ಸರಿ. ನಮಗೆ ಸಂಬಂಧವಿಲ್ಲ. ನಾವು ಪಾಲೆಯಲ್ಲಿ ಬರೆಸಿ ನಿಮ್ಮ ಕಯ್ಯಲ್ಲು ಗುರುತು ಹಾಕಿಸಿ[ತೆಗೆದು] || ಕೊಂಡ ಕಾಗದಕ್ಕೆ ಇನ್ನು ಮುಂದೆ ಕಾರಣವಿಲ್ಲ. ಈ ದಿವಸ ನಮ್ಮ

---

|| ಈ ಶಬ್ದಗಳು ಅ. ಪ್ರತಿಯಲ್ಲಿ ಇಲ್ಲ.

ನಿಮ್ಮ ಉಭಯಸ್ಥರ [ಕುಡುಪಿ] * ತೀರಿತು. ಇನ್ನು ಮುಂದೆ ನಮಗೆ ನಿಮಗೆ ಅನ್ಯೋನ್ಯವೇ ಸರಿ"— ಎಂಬದಾಗಿ ಕೋಟೆ ಅರಸುಗಳು ಕಾಗದ ಬರೆದು, ತಮ್ಮ ಕೈ ಒಪ್ಪಿತ ಹಾಕಿ, ಆ ಕಾಗದವನ್ನು ಕೋಟೆ ಅರಸುಗಳು ಕೊಡಗಿನ ರಾಜರ ಕೈಲಿ ಕೊಟ್ಟರು. ಆ ಕಾಗದ ತೆಗೆದು ಕೊಂಡು ದೊರೆಗಳು ಬಿಡಾರಕ್ಕೆ ಹೋಗಿ ಇಳಿದುಕೊಂಡರು. ಆ ದಿವಸ ಸಮರಾತ್ರಿಯಲ್ಲು ಈ ಕೋಟೆ ಅರಸುಗಳು ರಾಜರವರಿಗೆ ತಿಳಿಯದಂತೆ ಅವರ ಕಡೆ ನಾಯಿಮೂರ ಜನವನ್ನು ಕರೆದುಕೊಂಡು, ಗಟ್ಟಿಯಿಳಿದು ಕೊಡಗಿನ ಸೀಮೆ ಸರಹದ್ದು ದಾಟಿ, ಅವರ ಸೀಮೆಗೆ ಓಡಿಹೋದರು.

ಆ ಬೆಳಿಗ್ಗೆ ಈ ಸಮಾಚಾರ ಮಹಾರಾಜರು ಕೇಳಿ, ನೂರು ಜನ ಪರಿಯಂತರ ಕೊಡಗರನ್ನು— "[ಅಲ್ಲಿ] † ಪರಿಯಂತರಕ್ಕೂ ಹೋಗಿ ನೋಡಿಕೊಂಡು ಬನ್ನಿ"— ಎಂಬದಾಗಿ ಅಪ್ಪಣೆ ಕೊಟ್ಟು ಕಳುಹಿಸಿದಲ್ಲಿ, ಇವರು ಹೋಗುವಾಗ್ಗೆ, ನಡುಮಾರ್ಗದಲ್ಲಿ ನಾಗಪ್ಪಯ್ಯನು ಸಿಕ್ಕಿದ್ದರಿಂದ, ಅವನಿಗೆ ಪಹರೆ ಹಾಕಿಕೊಂಡು, ಈ ಜನ ಹೋಗಿ ಕೊಡಗಿನ ಸೀಮೆ ಅರ್ದಿ ಪರಿಯಂತರಕ್ಕೂ ನೋಡಿದಲ್ಲಿ, ಕೋಟೆ ಅರಸುಗಳು ಕೊಡಗಿನ ಸೀಮೆ(ಯ) ಅರ್ದಿ ದಾಟಿ, ರಾತಾರಾತ್ರಿಯೇ ತಮ್ಮ ಸೀಮೆಗೆ ಹೋಗಿ ಇದ್ದದ್ದರಿಂದ, ಈ ಕೊಡಗು ಜನರು ಪುನಃ ಬಂದು, ಈ ವರ್ತಮಾನವನ್ನು ಶ್ರುತಗೊಳಿಸಿ, ಈ ನಾಗಪ್ಪಯ್ಯನನ್ನು ಒಪ್ಪಿಸಿದ್ದರಿಂದ, ರಾಜರು ಅವನನ್ನು ತೆಗೆದುಕೊಂಡು, ಮರೆನಾಡಿಂದ ಅರಮನೆ ಕುಟುಂಬಯಿದ್ದ ಕುರುಚಿ ಗ್ರಾಮ ಸಮೀಪವಾದ್ದರಿಂದ ಅಲ್ಲಿಗೆ ಹೋಗಿ, ಆ ಕೋಟೆ ಅರಸುಗಳು ಬರೆದು ಕೊಟ್ಟಂಥಾ ಕೈಕಾಗದವನ್ನು ಸಂದೂಕದ ಒಳಗೆ ಹಾಕಿ ಅಲ್ಲಿ ಇಟ್ಟು, ಐದು ದಿವಸ ಅಲ್ಲಿ ಇದ್ದು, ಆ ಬಳಿಕ ನಾಗಪ್ಪಯ್ಯನನ್ನು ತೆಗೆದುಕೊಂಡು ಬರಪೊಳೆಗೆ ಬಂದು, ಅಲ್ಲಿ ಇದ್ದ ತಮ್ಮ ಕುಟುಂಬವನ್ನೂ ಅವರ ಗರ್ಭದಲ್ಲಿ ಜನಿಸಿದ ತಮ್ಮ ಕುಮಾರತಿ ರಾಜಮ್ಮಾಜಿಯನ್ನು ಸಹ ಕರಕೊಂಡು, ಪಾಡಿನಾಲ್ಕುನಾಡು ವಳ್ಳಿತವಾದ ಯವರುಕಪಾಡಿ ಎಂಬ ಗ್ರಾಮುಕ್ಕೆ ಇದೇ ಸಂವತ್ಸರದ ಮಾಘ ಶುದ್ಧ ೧೩ ದಿವಸ ಬಂದು, ಕೇಟ್ಟುವಳಿ ಮನೆ ಬಿಡಾರ ಮಾಡಿಸಿ, ಕುಟುಂಬ ಸಮೇತ ಅಲ್ಲಿ ಇಳುಕೊಂಡು, ಆ ನಾಗಪ್ಪಯ್ಯ ಎಂಬ ನಿಮ್ಮಾ

* ಬ ಕುತುಪಿ

† ಬ ಅರ್ದಿ

ಕ್ ಹರಾಮನ ಕಾಲಿಗೆ ಸಂಕೋಲೆ ಹಾಕಿ ಅಲ್ಲಿ ಸೆರೆಮನೆ ಕೂಡಿಸಿ ಬಿಟ್ಟು, ಹತ್ತು ದಿವಸ ಅಲ್ಲಿ ಇದ್ದು, ವೀರರಾಜೇಂದ್ರ ಒಡೆಯರವರು ಕೂಡ ಇದ್ದ ಜನರ ಕರೆದುಕೊಂಡು ಹೋಗಿ ತಮ್ಮ ರಾಜ್ಯದಲ್ಲಿ ಟೀಪೂ ಸುಲ್ತಾನರ ಕಡೆಯಿಂದ ಉಂಬಳಿ ಪಡಕೊಂಡು ಇದ್ದಂತ ಸೇಕು ಸೈದ್ ಪೋಗಲ್ ಪಠಾಣ ಎಂಬ ಮುಸಲ್ಮಾನರಿಗೆ ತಂಬ ಪೊಂಚಾಯಿಸಿ, ಅವರನ್ನು ಪಲಾಯನ ಮಾಡಿಸಿ, ಆದವಾನಿ ಸೀಮೆ ಪ್ರಜೆಗಳನ್ನು ಸೆರೆ ಬಿಡಿಸಿ ಬಿಟ್ಟು, ಕಾಡು ಸೇರಿಕೊಂಡು ಇದ್ದಂತಾ ಕೊಡಗ ಜನರನ್ನು ಕರೆಸಿ, ಅವರವರ ಭೂಮಿ ಮನೆ ಅವರವರಿಗೆ ಕೊಡಿಸಿ, ಆ ಭೂಮಿಯಿಂದ ಮುಸಲ್ಮಾನರು ಬೆಳೆದು ಕೂಡಿಸಿ ಇದ್ದಂಥಾ ನವಧಾನ್ಯ ದನ ಕರ ಪಂಚಲೋಹ ಮುಂತಾಗಿ ಆಯಾಯಾ ಮನೆ ಯಲ್ಲು ಇದ್ದದ್ದನ್ನು ಆ ಭೂಮಿ ಮನೆ ಜಮ್ಮಗಾರರಿಗೆ ಕೊಡಿಸಿ, "ನಿರ್ಭ ಯದಿಂದ ನಿಮ್ಮ ನಿಮ್ಮ ಮನೆಯಲ್ಲಿ [ಒಕ್ಕಲಾಗಿ] × ಬಾಳುತ್ತ ಇರಿ"— ಎಂದು ಅಭಯವನ್ನು ಕೊಟ್ಟು, ಕೊಡಗು ಸೀಮೆ ಸರಹದ್ದು ಸಿದ್ಧೇ ಶ್ವರನಬೆಟ್ಟದ ಆಶ್ರಯದಲ್ಲಿ ವೀರರಾಜರು ಇದ್ದುಕೊಂಡು, ಮೈಸೂರು ಸೀಮೆ ಸರಹದ್ದು ಬಂದಹಾಗೆ ಬಿಸಲೆಗಟ್ಟದಿಂದ ಬೈನಾಡು ಸರಹದ್ದು ಪರಿಯಂತರ ಸಂಚಾರ ಮಾಡುತ್ತ, ದಿವದಲ್ಲಿ ದುಸುಮಾನರ ಕಡೆ ಮುಸಲ್ಮಾನರ ಸಂಗಡ ಲಡಾಯಿ ಮಾಡಿ ಅವರನ್ನು ತಮ್ಮ ಸೀಮೆ ಯಿಂದ ಹೊರಡಿಸುತ್ತ, ರಾತ್ರಿಕಾಲದಲ್ಲಿ ಮೈಸೂರು ಸೀಮೆಗೆ ಹೋಗಿ, ಅನಾಜು ವಗೈರೆ ಲೂಟಿಮಾಡಿಕೊಂಡು ಬಂದು, ತಮ್ಮ ಕಡೆ ಮಂದಿಗೆ ಊಟದ ಬಗ್ಗೆ ಕೊಡಿಸುತ್ತ, ಈ ಮೇರೆ ಕಾಲಕ್ಷೇಪ ಮಾಡುತ್ತ ಇರ ಲಾಗಿ, ಆ ಮುಸಲ್ಮಾನರು ಈ ವಿವರವನ್ನು ಟೀಪೂ ಸುಲ್ತಾನರಿಗೆ ಪಿರ್ಯಾದಿ [ಯಾಗಿ ಜಾಹೀರು] × ಮಾಡಿದ್ದರಿಂದ, ಈ ವರ್ತಮಾನ ಟೀಪುಸುಲ್ತಾನರು ಕೇಳಿ, ಕಂದಾಚಾರದ ಭಕ್ಷಿ ಸದೂರು ಗುಲಾಮಲ್ಲಿಗಾಜಿ [ಖಾದಲೆ ದಿಲ್ ಬಾ] ‖ ಯಿವರ ಸಂಗಡ ಭಾರಿ ಫೌಜು ಕುದುರೆ ಪಾಯಿದಳ ಸಹ ಕೊಡಗಿನ ಕಡೆಗೆ ರವಾನೆ ಮಾಡಿದ್ದರಿಂದ, ಆ ಗುಲಾಮಲ್ಲಿಯು ಸಿದ್ಧೇ ಶ್ವರನ ಗದ್ದಿಗೆ ಮಾರ್ಗವಾಗಿ ಕೊಡಗಿನ ಸೀಮೆ ಒಳನುಗ್ಗುವಲ್ಲಿ, ಕೊಡ ಗರಿಗೂ ಅವರಿಗೂ ಜಗಳವಾಗಿ, ಈ ಕಡೆ ಜನರ ಮದ್ದುಗುಂಡು ತೀರಿ

× ಈ ಮಾತುಗಳು ಅ. ಪ್ರತಿಯಲ್ಲಿ ಇಲ್ಲ.

‖ ಬ ಕಾದಲೇರದಿಲ್‌ಕಾ

ಹೋಗಿ ಜಗಳ ನಿಂತದ್ದರಿಂದ, ಗುಲಾಮಲ್ಲಿಭಕ್ಷಿಯು ಒಳನುಗ್ಗಿ ಬಂದು, ಈ ಸೀಮೆಯಲ್ಲಿ ಇದ್ದ ದವಸ ಧಾನ್ಯ ಯಾವತ್ತೂ ಸೂರೆಮಾಡುತ್ತ, ದನ ಕರು ಯಾವತ್ತೂ ಹಿಡಿದುಕೊಂಡು, ಕೊಡಗು ಜನರ ಕುಟುಂಬ ಮಕ್ಕಳ ಹಿಡಿಯಬೇಕೆಂಬದಾಗಿ ಮಾರ್ಗ ತೋರಿಸುವ ಬಗ್ಗೆ ಈ ಸೀಮೆ ಜೀತಗಾರ ಹೊಲೆಯರ(ನ್ನು) ಹಿಡಿದುಕೊಂಡು, ಅವರ ಕೂಡೆ ದಾರಿ ತೋರಿಸಿಕೊಳ್ಳುತ್ತ, ಮಲೆಪೊತ್ತಿನಲ್ಲಿ, ಇಕ್ಕಟ್ಟಿನ ಸ್ಥಳದಲ್ಲಿ, ಕೊಡಗು ಮಂದಿಯ ಕುಟುಂಬ ಮಕ್ಕಳು ಇದ್ದದ್ದು ಹಿಡಿಯುವ ಬಗ್ಗೆ ದಂಡನ್ನು ಒಂದೊಂದು ತುಕ್ಕಡಿ ಮಾಡಿ ಒಂದೊಂದು ಕಡೆಗೆ ಕಳುಹಿಸುತ್ತ ಇದ್ದನು. ಆಷ್ಟರಲ್ಲಿ ಇವರಿಗೆ ಕುಮ್ಮಕ್ಕಾಗಿ ಚರಕಲ್ಲು ರಾಜರು ಕೆಲವು ನಾಯಿಮಾರರನ್ನು ತಮ್ಮ ಕಡೆ ಕಾರೆಕಾರರ ಸಂಗಡ ಕೂಡಿಸಿ ಕಳುಹಿಸಿದಲ್ಲಿ, ಅವರು ಬಂದು ಗುಲಾಮಲ್ಲಿ ಸದೂರನ(ನ್ನು) ಕಂಡಲ್ಲಿ, "ನಮ್ಮ ಕಡೆಯಿಂದಲೂ ಕೆಲವು ಫೌಜನ್ನು ಕೊಡುತ್ತೇವೆ. ಅವರೂ ನೀವೂ ಕೂಡಿ ಕಾಡೊಳಗೆ ಸೇರಿಕೊಂಡು ಇರುವಂಥಾ ಕೊಡಗರ ಕುಟುಂಬ ಮಕ್ಕಳ ಹಿಡಿದು ತರಬೇಕೆ"ಂಬುದಾಗಿ ಹೇಳಿ, ಕೆಲವು ಪೌಜನ್ನು ಕೊಟ್ಟಲ್ಲಿ, ಈ ನಾಯಿಮಾರರು ಆ ಪೌಜು ಸಹ ಒಟ್ಟಾಗಿ ಪಾಡಿನಾಲ್ಕುನಾಡ ದೇವಸ್ಥಾನದ ಬಳಿಗೆ ಹೋದಲ್ಲಿ, ಅಲ್ಲಿ ಇದ್ದ ಕೊಡಗರು ಜಗಳ ಮಾಡಿದಲ್ಲಿ, ಆ ನಾಯಿಮಾರರು ಪೆಟ್ಟು ತಡೆಯಲಾರದೆ ಆ ದೇವಸ್ಥಾನಕ್ಕೆ ಬೆಂಕಿ ಹಾಕಿ ಸುಟ್ಟು, ಮಲೆಯಾಳಕ್ಕೆ ಓಡಿಹೋದರು. ಗುಲಾಮಲ್ಲಿ ಕಡೆಯ ಜನರು ಅವನ ಕಡೆಯ ದಂಡಿಗೆ ಕೂಡಿಕೊಂಡು ಕೊಡಗರ ಕುಟುಂಬ ಮಕ್ಕಳ ಹಿಡಿಯುವ ಬಗ್ಗೆ ಪ್ರಾರಂಭಿಸಿದಲ್ಲಿ, ಆ ಕುಟುಂಬ ಮಕ್ಕಳ ಬಳಿಯಿದ್ದ ಕೊಡಗರು ಯಾವತ್ತೂ ಅವರು ಬರುವಂತಾ ಇಕ್ಕಟ್ಟಿನ ಮಾರ್ಗವನ್ನು ಕಟ್ಟಿಕೊಂಡು, ಮದ್ದು ಗುಂಡು ತೀರುವ ಪರಿಯಂತರ [ಗುಂಡಿನಿಂದ] ± ಹೊಡೆದು, ತೀರಿದ ಕೂಡಲೆ ಕತ್ತಿ ತೆಗೆದುಕೊಂಡು ಮೇಲೆ ಬಿದ್ದು ಕಡಿಯುತ್ತ, ದಿನವೊಂದಕ್ಕೆ ಅವರ ಕಡೆ ೫೦—೬೦ ಜನದ ಮೇಲೆ ಜಾಯು [ಜಖಮು] ± ಮಾಡುತ್ತ ಇರಲಾಗಿ, ಈ ಕೊಲೆ ತಡೆಯಲಾರದೆ ಲಾಚಾರಿಯಿಂದ ಗುಲಾಮಲ್ಲಿ ಭಕ್ಷಿ ತನ್ನ ಕಡೆ ದಂಡಿನ ಜನ ಯಾವತ್ತು ಒಟ್ಟು ಮಾಡಿಕೊಂಡು, ಮಲೆಪತ್ತಿನ ಇಕ್ಕಟ್ಟಾದ ಗ್ರಾಮಗಳಿಗೆ ಬಾರದೆ, ನಡುಸೀಮೆಯಲ್ಲು ವೈದಾನ ಆಗಿ ಇರುವ ಜಾಗದಲ್ಲಿ ಇರುವ ರೈತರ

± ಈ ಮಾತುಗಳು ಅ. ಪ್ರತಿಯಲ್ಲಿ ಇಲ್ಲ

ಮನೆವಾರು ಊಟ ಮಾಡಿ, ಬೆಂಕಿ ಹಾಕುತ್ತ ಇದ್ದನು. ಅಷ್ಟರಲ್ಲು ಟೀಪೂಸುಲ್ತಾನರ ಕೈ ಒಳಗೆ ಇದ್ದಂತಾ ಮಲೆಯಾಳರು ಯಾವತ್ತೂ ಈ ಕೊಡಗಿನ ಸಮಾಚಾರ ಕೇಳಿ, ಪುಂಡಾಗಿ ಕಾಡು ಸೇರಿಕೊಂಡು ಶರಾರತ್ತು ಮಾಡುತ್ತ ಇದ್ದದ್ದರಿಂದ, ಟೀಪೂಸುಲ್ತಾನರು ತಿಳಿದು, ಗುಲಾಮಲ್ಲಿ ಸದೂರಗೆ ಬರೆಸಿ ಕಳಿಸಿದ್ದುಃ— "ನೀನು ಕೊಡಗಿನ ಸೀಮೆಯಿಂದ ಹೊರಟು ಮಲೆಯಾಳಕ್ಕೆ ಹೋಗಿ, ಅಲ್ಲಿ ಶರಾರತ್ತು ಮಾಡುವಂಥಾ ಜನಕ್ಕೆ ತಂಬಿ ಪೌಂಚಾಯಿಸಿ ಬಂದೋಬಸ್ತು ಮಾಡು" ಎಂಬುದಾಗಿ ಬರೆಸಿ ಕಳುಹಿಸಿದ್ದರಿಂದ, ಆ ಗುಲಾಮಲ್ಲಿ ಭಕ್ಷಿಯು ತನ್ನ ಪವುಜು ಸಮೇತ ಕೊಡಂತುರದ ಮಾರ್ಗವಾಗಿ ಹೋಗುತ್ತ ಇದ್ದಲ್ಲಿ, ಕೊಡಗರು ಹೋಗಿ ಮಧ್ಯಗಟ್ಟದಲ್ಲಿ ಲಡಾಯಿ ಮಾಡಿದಲ್ಲಿ, ಈ ಜನದ ಮದ್ದು ಗುಂಡು ತೀರಿ ಹೋಗಿ ಜಗಳ ಸ್ತಂಭನ ಆದ್ದರಿಂದ, ಆ ಗುಲಾಮಲ್ಲಿಯು ಅಲ್ಲಿಂದ ಹೋಗಿ, ಪೈಯ್ಯಾ ಊರಿನಲ್ಲು ಇಳಕೊಂಡು, [ಆ] * ದೇವಸ್ಥಾನಕ್ಕೆ ಬೆಂಕಿ ಹಾಕಿ, ಆ ಸೀಮೆ ರೈತರ ಮನೆವಾರು ಊಟ ಮಾಡುತ್ತ ಇದ್ದಲ್ಲಿ, ಪೈಚಿಯಲ್ಲು ಇದ್ದ ಪಾಲೇ ಅರಸುಗಳ ಅಣ್ಣನು— "ತಾನು ಟೀಪೂಸುಲ್ತಾನರ(ನ್ನು) ಕಂಡುಕೊಂಡು ಇದ್ದೇನೆ. ತನ್ನ ತಮ್ಮನಾದ ಪಾಲೆ ವೀರವರ್ಮ ಅರಸು ಟೀಪೂಸುಲ್ತಾನರ ಸಂಗಡ ತಿರುಗಿ ಬಿದ್ದು ಕಾಡು ಸೇರಿಕೊಂಡಿದ್ದಾನೆ. ಈಗ ಅವರ ಪವುಜ ಬಂದು ಇದೆ. [ಇದನ್ನು ಕಾಣುವದರಿಂದ] × ಇನ್ನು ಮೇಲೆ ಏನಾದೀತೋ!"— ಎಂಬದಾಗಿ ಭಯಸ್ಥನಾಗಿ, ತನ್ನ ಕುಟುಂಬ ಮಕ್ಕಳನ್ನು ತೆಗೆದುಕೊಂಡು ರಾತಾರಾತ್ರೆಯೇ ಅನಂತಶಯನದ ಕಡೆಗೆ ಓಡಿ ಹೋದರು. ಈ ವಿವರ ಗುಲಾಮಲ್ಲಿ ಸದೂರನು ಟೀಪೂಸುಲ್ತಾನರಿಗೆ ಬರೆದು ಕಳುಹಿಸಿದ್ದರಿಂದ, ಕುಮ್ಮಕ್ಕಿನ ಬಗ್ಗೆ ಮಹಮ್ಮದ್ ರಜಾ ಭಕ್ಷಿ, ಅಜಂ ಅಲ್ಲೀಖಾನ ಭಕ್ಷೀ, ಫಜಲ್‌ಖಾನ್, [ಪಾಸಮೂಸೆ,] || ಜರ್ಾ ಕಸ್ತೂರೀ, ಅವನ ಸಂಗಡ ೩ ಜನ ಕಪ್ತಾನರು, ಇವರ ಸಂಗಡ ಭಾರೀ ಪವುಜ ಸಹ ರವಾನೆ ಮಾಡಿದರು.

---

* ಬ. ಪೈಯ್ಯಾವೂರು

× ಈ ಶಬ್ದಗಳು ಬ. ಪ್ರತಿಯಲ್ಲಿ ಇಲ್ಲ

|| ಬ. ಪರಾಸಿಸ್ ಮೂಸೆ

ಆ ಸರದಾರರು, ದಂಡು ಸಮೇತ ಮಲೆಯಾಳಕ್ಕೆ ಹೋಗುವ ಬಗ್ಗೆ ಕೊಡಗು ಸೀಮೆ ಮಾರ್ಗವಾಗಿ ಬಂದು, ಹೆಗ್ಗಳದ ಗಟ್ಟದ ಮೇಲೆ ಇಳುಕೊಂಡಲ್ಲಿ, ಆ ದಿವಸವೇ ವೀರರಾಜರು ಮಂದಿ ತೆಗೆದುಕೊಂಡು ಹೋಗಿ, ಗಟ್ಟಯಿಳಿದು ಹೋಗುವ ಮಾರ್ಗಗಳ(ನ್ನು) ಕಟ್ಟಿ, [ಮುಸಲ್ಮಾನರ] * ಲಷ್ಕರಿನ ಸಂಗಡ ಲಡಾಯಿ ಮಾಡುವ ಬಗ್ಗೆ ದಾರಿ ನೋಡುತ್ತಾ ಇದ್ದಲ್ಲಿ, ಆ ಮಾರಣೆ ಬೆಳಿಗ್ಗೆ ಪಜಲ್‌ಕಾನನು ತಂದ ದಂಡು ತೆಗೆದುಕೊಂಡು ಅಗಾಡಿಯಾಗಿಕೊಂಡು, ಪಿಚಾಡಿಗೆ ಜಾನ್ ಕಸ್ತೂರಿ ಇಟ್ಟು, ಮಧ್ಯೆ ಗುನಗು ಬಿಟ್ಟುಕೊಂಡು, ಮಲೆಯಾಳದ ಕಡೆ ಹೋಗುತ್ತಾ ಇರುವಲ್ಲಿ, ಲಡಾಯಿವಾಗಿ, ಪೆಟ್ಟು ತಾಳಲಾರದೆ, ಅಗಾಡಿ ಇದ್ದ ಪಜಲ್‌ಕಾನ(ನು) ದಂಡು ಸಹ ಗಟ್ಟಯಿಳಿದು ಓಡಿ ಹೋದನು. ಜಾನ್‌ಕಸ್ತೂರಿಯು ಕೊಡಗು ಜನರ [ಬಳಸಿಗೆ] † ಸಿಕ್ಕಿ, ಜಗಳವಾಗಿ, ಬಹಳ ಜನಕ್ಕೆ ಜಾಯ [ಜಕ್ಕುಮ್ಮು] § ಯಾದ್ದರಿಂದ, ಲಾಚಾರಾಗಿ, ರಸ್ತು ಗುನಗು ಬಿಟ್ಟು, ಅಗಾಡಿಯಿದ್ದ ಪವುಜಿಗೆ ಕೂಡತಕ್ಕ ಬಗ್ಗೆ ಧೈರ್ಯಗುಂದಿ ಹೋಗುತ್ತಿರುವಲ್ಲಿ, ಕೊಡಗು ಮಂದಿಯು ಕಾದು ನಿಂತು ಇದ್ದ ಬಳಿಯಿಂದ ಅವನ ದಂಡಿನ ಮೇಲೆ ಬಿದ್ದು, ಎಂಟುನೂರು ಜನದ ತಲೆ ಹೊಡೆದರು. ನಾನೂರು ಜನಕ್ಕೆ ಗಾಯವಾಯಿತು. ಜಾನ್ ಕಸ್ತೂರಿ, ಅವನ ಸಂಗಡ ಇದ್ದ [ಪರಸ] = ಸರದಾರರನ್ನು ತಲೆ ಹೊಡೆದರು. ಅಷ್ಟರಲ್ಲಿ ಕೊಡಗು ಜನರು ಸಾಮಾನು ಸರಂಜಾಮು ಸೂರೆಮಾಡುವುದಕ್ಕೆ ಪ್ರಾರಂಭಿಸಿದಲ್ಲಿ, ಕೆಲವು ಜಕಂ ಆದಂತ ಜನ ಮುಂತಾಗಿ ಕಾಡುಬಿದ್ದು ಓಡಿಹೋಗಿ, ಪಜಲ್‌ಕಾನನ ದಂಡಿಗೆ ಕೂಡಿದರು. ಆ ಬಳಿಕ ದಂಡಿನಲ್ಲಿ ಸಿಕ್ಕಿದಂತಾ ಸಾಮಾನು ಸರಂಜಾಮು ಯಾವತ್ತು ದಂಡಿನಲ್ಲಿ ಕೈಸೆರೆ ಸಿಕ್ಕಿದಂತಾ ಜನರ ಕೂಡೆ ಹೊರಿಸಿಕೊಂಡು ಹೆಗ್ಗಳಕ್ಕೆ ತಂದು ಮಡಗಿ, ಆ ಬಳಿಕ ಆ ಜನರನ್ನು ಸೆರೆಯಿಂದ ಬಿಟ್ಟು, ಬಾಳೆಲೆ ಮಾರ್ಗವಾಗಿ ಕಳುಹಿಸಿ, ಆ ಮಾರಣೇ ದಿನ ಸಿಕ್ಕಿದಂತದರಲ್ಲಿ ಕತ್ತಿ, ಕೋವಿ, ಮದ್ದು, ಗುಂಡು, ಅರಮನೆಗೆ ಸೇರ

---

* ಬ. ದುಷ್ಟಾತ್ಮನನ

† ಬ ಬಳವಿಗೆ

§ ಬ ಜಖಮಿ

= ಬ ಫರಾಸೀಸ

ತಕ್ಕಂತದಾದ್ದರಿಂದ ಅದನ್ನು ತೆಗೆದುಕೊಂಡು, ಉಳಿಕೆ ಸರಂಜಾಮು ಕೊಡಗರಿಗೆಲ್ಲಾ ಹಂಚಿಕೊಡಿಸಿದರು.

ಆ ಬಾಳಿಲೆ ಮಾರ್ಗವಾಗಿ ಹೋದ ಜನ [ಅ] × ಲಕ್ಕಾಡಿ ಕೋಟೆಗೆ ಹೋಗಿ, [ಯಾವತ್ತೂ] ‖ ಅಲ್ಲಿ ಠಾಣ್ಯಯಿದ್ದ ಸರದಾರ [ತಡಮಾರಿ] ± ಮಲ್ಲಪ್ಪನಾಯಕ ಎಂಬವನಿಗೆ [ಹಿಡಿ) † ದಲ್ಲಿ, ಆ ಠಾಣ್ಯದವನು ಈ ವರ್ತಮಾನ ಕೇಳಿ ಹೆದರಿ, ಮದ್ದು ಗುಂಡು ಮುಂತಾದ ಸಾಮಾನು ಅಲ್ಲೇ ಬಿಟ್ಟು, ರಾತಾರಾತ್ರಿಯೇ ತನ್ನ ಮಂದಿಯನ್ನು ತೆಗೆದುಕೊಂಡು ಪಿರಿಯಾಪಟ್ಟಣಕ್ಕೆ ಓಡಿಹೋದನು.

ಆ ಬಳಿಕ ಈ ಸಮಾಚಾರವನ್ನು ಟೀಪೂಸುಲ್ತಾನರು ಕೇಳಿ, ಮಹಾ ಕೋಪದಿಂದ ತಮ್ಮ ಭಾವಮೈದನಾದ ಬುರಾನ ದಿನರ್ ಎಂಬವನಿಗೆ ಮಡಿಕೇರಿ ಕೋಟೆ, ಕುಸಲ್‌ನಗರದ ಕೋಟೆ, ಬೆಪ್ಪುನಾಡು ಲಕ್ಕಡಿಕೋಟೆ, ಭಾಗಮಂಡಲದ ಲಕ್ಕಡಿಕೋಟೆ ಸಹ ಈ ನಾಲ್ಕು ಕೋಟೆ (ಗೆ) ರಸ್ತು ತಲಪಿಸುವ ಬಗ್ಗೆ ಭಾರೀ ಪವುಜು ಕೊಟ್ಟು ಕಳುಹಿಸಿದಲ್ಲಿ, ಆ ಬುರಾನ ದೀನರು ಪವುಜು ಸಮೇತ ಕುಸಲ್‌ನಗರ ಎಂಬುವ ಮುಳುಸೋಗೆ ಹತ್ತಿರ ಇಳಿದುಕೊಂಡು, ಆ ಕೋಟೆಗೆ ಬೇಕಾದ ರಸ್ತು ತುಂಬಿ, ಉಳಿಕೆ ಮೂರು ಕೋಟೆಗೆ ಇದ್ದ ರಸ್ತು ತೆಗೆದುಕೊಂಡು ದಂಡು ಸಮೇತ ಮಡಿಕೇರಿಗೆ ಬರುತ್ತಾ ಇದ್ದಲ್ಲಿ, ಮಧ್ಯೆ ಮಾರ್ಗಕ್ಕೆ ಮಹಾರಾಜರು ತಮ್ಮ ಮಂದಿ ತೆಗೆದುಕೊಂಡು ಹೋಗಿ ಲಡಾಯಮಾಡಿದಲ್ಲಿ, [ಅವರ] * ದಂಡಿಗೆ ಬಹಳ ಪೆಟ್ಟಾಗಿ, ಮೂರು ಕೋಟೆಗೆ ಇದ್ದ ರಸ್ತಿನಲ್ಲಿ ಅರೆವಾಸಿ ಅಲ್ಲಿ ಬಿಟ್ಟು, ಅರೆವಾಸಿ ಸಾಗಿಸಿಕೊಂಡು ಹೋಗಿ ಮಡಿಕೇರಿ ಕೋಟೆಗೆ ಹಾಕಿದರು. ಉಳಿಕೆ ಎರಡು ಲಕ್ಕಡಿ ಕೋಟೆಗೆ ಇದ್ದ ರಸ್ತು ಕೊಡಗರಿಗೆ ಸಿಕ್ಕದ್ದರಿಂದ, ಬುರಾನ್ ದಿನರು ದಂಡು ಸಮೇತ ಪುನಃ ಪಟ್ಟಣಕ್ಕೆ ಹೋಗಿ, ಕೊಡಗಿನಲ್ಲಿ ಆದ ವೃತ್ತಾಂತ ಟೀಪೂ ಸುಲ್ತಾನರಿಗೆ ಹೇಳಿದಲ್ಲಿ, ಅವರು ಬುರಾನ್‌ದೀನರ

---

× ಬ ಬಾಳಿಲೆ

‖ ಬ ಈ ವಿವರ ಯಾವತ್ತು

± ಬ ತಾಡಮರಿ

† ಬ ಹೇಳಿ

* ಬ ಆ ಬುರಾನ್ ದೀನರ

ಸಂಗಡ ಹುಕ್ಕುಂ ಕೊಟ್ಟದ್ದು—"ಈಗ ಕೋಟೆ ಅರಸುಗಳು ರಾಮ ರಾಜರ ಸೀಮೆ ಕಡೆಗೆ ಓಡಿಹೋಗಿ ಇದ್ದಾರೆ. ಮಲೆಯಾಳ ಸೀಮೆ ಯಾವತ್ತು ಫುಂಡಾಗಿ ಇದೆ. ಅದನ್ನು ಸಿಲ್ಲಿಸಿ ಬಂದೋಬಸ್ತು ಮಾಡ ತಕ್ಕ ಬಗ್ಗೆ ನಾವು ಅರೆವಾಸಿ ಪವುಜು ತೆಗೆದುಕೊಂಡು ಗೆಜ್ಜಲ(ಹ)ಟ್ಟಿ ಮಾರ್ಗವಾಗಿ ಬೇಂಗಾಟು ಅಂಗಡಿಗೆ ಬರುತ್ತ ಇದ್ದೇವೆ. ಅರೆವಾಸಿ ಪವುಜನ್ನು ನಿಮ್ಮ ತಾಬೆಗೆ ಕೊಡುತ್ತೇವೆ. ಆ ದಂಡು ಮೂರು ತುಕ್ಕಡಿ ಮಾಡಿ, ಮೂರು ಮಾರ್ಗದಿಂದ ಕೊಡಗಿನ ಸೀಮೆ ಒಳಗೆ ನುಗ್ಗಿ ಕೊಡ ಗರಿಗೆ ಯಾವತ್ತು ಹೊಡೆದು, ಆ ನಾಲ್ಕು ಕೋಟೆಗೆ ಮಳೆಗಾಲ [ನಾಲ್ಕು] ± ತಿಂಗಳಿಗೆ ಬೇಕಾದ ರಸ್ತು ಹಾಕಿ, ಹೆಗ್ಗಳದ ಗಟ್ಟದ ಮಾರ್ಗವಾಗಿ ನಾವು ಇರುವಲ್ಲಿಗೆ ಬಾ"— ಎಂದು ಹುಕ್ಕುಂ ಕೊಟ್ಟು, ಟೀಪೂಸುಲ್ತಾನರು [ಅರೆವಾಸಿ] § ಪವುಜನ್ನು ಸೈದ್ ಹಮೀದ ಸಿಪಾ ದಾರ, ಶೇಕು ಅನ್ಸರ್ ಶಿಪಾದಾರ(ರ) ರಸ್ತು ಸಾಮಾನು ಸರಂಜಾ ಮು ಮುಂತಾಗಿ ಬುರಾನ್‌ದಿನ್ ಶಿಪಾ [ದಾರನ] * ತಾಬೆ ಮಾಡಿ, ಬಾಕಿ ಅರೆವಾಸಿ ಪವುಜನ್ನು ತಮ್ಮ ಸಂಗಡ [ಕಲಿ] = ಸಂದ ೪೮೯೧ನೇ ಸೌಮ್ಯ ಸಂವತ್ಸರ [ದಲ್ಲಿ] × ಪಟ್ಟಣದಿಂದ ಹೊರಟು, ಗಜ್ಜಲ (ಹ) ಟ್ಟಿ ಗಟ್ಟಯಿಳಿದು ಕೋಟೆ ಅರಸುಗಳ ಸೀಮೆ ಮಾರ್ಗವಾಗಿ ಬೇಂಗಾಟ್ಟು ಅಂಗಡಿಯಲ್ಲು ಇಳಿದುಕೊಂಡು, "ಮಲೆಯಾಳದ ರಾಜರು ತುಂಟರು ಇದ್ದಾರೆ. ಇವರನ್ನೆಲ್ಲಾ ಹಿಡಿಯಬೇಕೆ" ಎಂಬುದಾಗಿ ವಿಚಾರಿಸಿದಲ್ಲಿ, ಈ ಸೂಕ್ಷ್ಮವನ್ನು ಚರಕಲ್ಲ ರಾಜರು ತಿಳಿದು, "ಕೋಟೆ ಅರಸುಗಳು ದಗಾ ಮಾಡಿ ಓಡಿಹೋದ್ದರಿಂದ ಟೀಪೂಸುಲ್ತಾನರಿಗೆ ಮಲೆಯಾಳದ ರಾಜರ ನಂಬಿಗೆಯಿಲ್ಲದೆ ಹೋಯಿತು. ಆದ್ದರಿಂದ ನಮ್ಮ ಅರ್ಥ ಪ್ರಾಣ ಯಾವ ಮೇರೆ ಉಳಿದೀತೆ" ಎಂಬುದಾಗಿ ಗ್ರಹಿಸಿ, ತಮ್ಮ ಕುಟುಂಬ ಮಕ್ಕಳನ್ನು ನಂಬಿಗಸ್ತರ ಸಂಗಡ ಕೂಡಿಸಿ, ರಾತಾರಾತ್ರಿಯೆ ತಲಚೇರಿಗೆ ಸಾಗಿಸಿ, "ಈ ವರ್ತಮಾನ ರಾತ್ರಿಯೇ ಬಂದು ಹೇಳಿದರೆ ನಾವು ಈ ರಾತ್ರೆ ಮೂರು ಜಾವದಲ್ಲಿ ಹೊರಟು ತಲಚೇರಿಗೆ ಬರುತ್ತೇವೆ." ಎಂಬದಾಗಿ

---

± ಬ ಆರು

§ ಬ ಅದೇ ಮೇರೆ ಅರೆವಾಸಿ

* ಬ ಸಾಲಾರರ

= ಬ ತೆಗೆದುಕೊಂಡು, ಕಲಿ

× ಬ ದ ವೈಶಾಖಮಾಸದಲ್ಲಿ

ಮಹೇಶ್ವರನ ಜಂಗಮಲಿಂಗಸ್ಥಲ. ಇಂತೀ ಶಿವಲಿಂಗ ನಿಷ್ಠೆಯೊಳಿಪ್ಪ ಮಹೇಶ್ವರನ ಜಂಗಮಲಿಂಗಸ್ಥಲ. ಆ ಸ್ಥಲದನುಭಾವದ ವಚನ.

## ಮಹೇಶ್ವರನ ಜಂಗಮಲಿಂಗಸ್ಥಲ

೧. ಕೃತಯುಗ ಚೌತೀಸ ಲಕ್ಷ ಐವತ್ತಾರುಸಾವಿರ ವರುಷದಲ್ಲಿ ಕೇತಾರೇಶ್ವರ ದೇವರು ಪೃಥ್ವಿಗೆ ಮೂಲಸ್ಥಾನ. ತ್ರೇತಾಯುಗ ಹದಿನೇಳುಲಕ್ಷ ಇಪ್ಪತ್ತೆಂಟು ಸಾವಿರ ವರುಷದಲ್ಲಿ ಸ್ವೇತುಬಂಧರಾಮೇಶ್ವರದೇವರು ಪೃಥ್ವಿಗೆ ಮೂಲಸ್ಥಾನ. ದ್ವಾಪರಯುಗ ಎಂಟುಲಕ್ಷ ಅರವತ್ತು ನಾಲ್ಕು ಸಾವಿರ ವರುಷದಲ್ಲಿ ಸೌರಾಷ್ಟ್ರ ಸೋಮೇಶ್ವರ ಪೃಥ್ವಿಗೆ ಮೂಲಸ್ಥಾನ. ಕಲಿಯುಗ ನಾಲ್ಕುಲಕ್ಷ ಮೂವತ್ತೆರಡು ಸಾವಿರ ವರುಷದಲ್ಲಿ ಶ್ರೀಗಿರಿ ಚನ್ನಮಲ್ಲಿಕಾರ್ಜುನ ದೇವರು ಪೃಥ್ವಿಗೆ ಮೂಲಸ್ಥಾನ. ಇದು ಕಾರಣ ಕೂಡಲಚನ್ನಸಂಗಮದೇವಾ ನಿಮ್ಮ ಭಕ್ತರಿಗೆ ಜಂಗಮವೆ ಮೂಲಸ್ಥಾನ ಅಂದು ಮೊದಲು ಇಂದು ಕಡೆಯಾಗಿ.

೨. ಎಂಟು ಲಕ್ಷ ಒಂದು ಸಾವಿರದ ಇನ್ನೂರು ದೇವರಿಗೆ ಮಾಡಿದ ಬೋನವು ಒಬ್ಬ ಜಂಗಮ ಆರೋಗಣೆಯ ಮಾಡುವ. ಒಂದು ಲಕ್ಷ ಅರುವತ್ತು ಸಾವಿರದ ಇನ್ನೂರು ದೇವರು ಕೂಡಿ ಒಬ್ಬ ಜಂಗಮಕ್ಕೆ ಮಾಡಿದ ಬೋನವನಾರೋಗಿಸಲರಿಯವು. ಅದು ಕಾರಣವಾಗಿ ಅಂತಪ್ಪ ದೇವರಿಗಿಂತಲು ಜಂಗಮವೆ ಘನವು ನೋಡಿರೆ. ಕೃತಯುಗದಲ್ಲಿ ಸುವರ್ಣದ ಲಿಂಗವಾದಲ್ಲಿ ನಿನ್ನ ಹೆಸರೇನು? ತ್ರೇತಾಯುಗದಲ್ಲಿ ಬೆಳ್ಳಿಯ ಲಿಂಗವಾದಲ್ಲಿ ನಿನ್ನ ಹೆಸರೇನು? ದ್ವಾಪರ ಯುಗದಲ್ಲಿ ತಾಮ್ರದ ಲಿಂಗವಾದಲ್ಲಿ ನಿನ್ನ ಹೆಸರೇನು? ಹದಿನೆಂಟು ಜಾತಿ ನೂರಾ ಒಂದು ಕುಲದ ಕೈಯ್ಯಲ್ಲಿ ಕಿಲುಬು ಹೋಯಿತ್ತು. ಕಲಿಯುಗದಲ್ಲಿ ಕಲ್ಲು ಲಿಂಗವಾದಲ್ಲಿ ಇಕ್ಕಿದ ಬೋನವನುಣ್ಣದೇಕೊ? ಹಿಂದೆ ನಾಲ್ಕು ಯುಗದಲ್ಲಿ ಅಳಿದು ಹೋದುದನರಿಯಿರೆ. ಇನ್ನೇಕೆ ದೇವರೆಂದು ಆಚರಿಸುವಿರೊ? ಸಾಕ್ಷಿ॥ ಸ್ಥಾವರಂ ಜಂಗಮಶ್ಚೈವ । ದ್ವಿವಿಧಂಲಿಂಗಮುಚ್ಯತೆ ಜಂಗಮಶ್ಚೈವ ಮಾನೇನ ಸ್ಥಾವರಂ ನಿಷ್ಫಲಂ ಭವೇತ್ । ಸ್ಥಾವರಾರ್ಪಿತ ನೈವೇದ್ಯಂ ನ ತೃಪ್ತಿಲಿಂಗಮೇವ ಚ । ಜಂಗಮಾರ್ಪಿತ ನೈವೇದ್ಯಂ । ಮಮತೃಪ್ತಿಂ ತು ಪಾರ್ವತಿ ॥ ಇದು ಕಾರಣವಾಗಿ, ಕೂಡಲಚನ್ನಸಂಗಮದೇವಯ್ಯ

ತಪ್ಪದೆ ನಾಲ್ಕು ಯುಗದಲ್ಲಿ ಜಂಗಮವೆ ಪ್ರಾಣಲಿಂಗವಾದ ಕಾರಣ, ಸ್ಥಾವರವು ಜಂಗಮ ಪ್ರಸಾದಕ್ಕೆ ಯೋಗ್ಯವಾಯಿತ್ತು.

೩. ತನು ಮನ ಧನ ತ್ರಿಸ್ಥಾನ ಸಂಗವಾಯಿತ್ತು. ಆಗಿ ಭಕ್ತಿಯು ಮದವೇರಿತ್ತು. ಸದ್ಭಕ್ತಿ ಸಂಭಾಷಣೆ ಕ್ರಿಯೆ ಕ್ರಿಯೆಯುರತು ತೂರ್ಯಾ ತೂರ್ಯಗೊಂಡಿತ್ತಾಗಿ, ಲಿಂಗದಲ್ಲಿ ಅರಿವು ಜಂಗಮದಲ್ಲಿ ಮರವು ಕೂಡಲ ಚನ್ನಸಂಗ ತಾನು ತಾನಾಗಿ.

೪. ಪೂರ್ವಿಕ ಪೂಜಕ ಅಪೂರ್ವಿಕ ಭಕ್ತ ಕರ್ಮ ಪೂಜಕ ಲಿಂಗಪೂಜಕ ಜಂಗಮ ಭಕ್ತನ ಪೂರ್ವ ಸೂತಕ ವಿರಹಿತ ನಮ್ಮ ಕೂಡಲ ಚನ್ನಸಂಗಮದೇವರಲ್ಲಿ ಅಚ್ಚ ಶರಣ.

೫. ಸುಖ ಶೀಲ ಲಿಂಗಧ್ಯಾನ ಸಮಶೀಲ ಜಂಗಮ ಪ್ರೇಮಿ. ಮಹಾಶೀಲ ಅವರಂದಂತೆ ಎಂಬುವುದು. ಈ ತ್ರಿವಿಧವ ಸರಿದೊಡೆ ಆತನೆ ನಮ್ಮ ಕೂಡಲ ಚನ್ನಸಂಗಮದೇವನೆಂಬೆ.

೬. ಎನ್ನ ತನುವೆಂಬವಂಗೆ ಬ್ರಹ್ಮನಿಕ್ಕಿದ ಕೋಳವಾಯಿತ್ತಯ್ಯಾ. ಎನ್ನ ಸ್ತ್ರೀ ಎಂಬುವಂಗೆ ವಿಷ್ಣುವಿಕ್ಕಿದ ಸಂಕೊಲೆಯಾಯಿತ್ತಯ್ಯಾ. ಎನ್ನ ಧನವೆಂಬುವಂಗೆ ರುದ್ರನಿಕ್ಕಿದ ಆಶೆ ರೋಷವೆಂಬ ಜಂಜುರಿ ಬೀಗಿತ್ತಯ್ಯಾ. ಎನ್ನ ಕುಲವೆಂಬುವಂಗೆ ರುದ್ರನಿಕ್ಕಿದ ಸೆರೆ ಸಂಕೊಲೆಯ ಬಂದಿಖಾನೆ ಯೊಳು ಬಿದ್ದನು ನೋಡಾ. ಇಂತೀ ಕೊರಳುದ್ದಕ್ಕೆ ಹೂಳಿಸಿಕೊಂಡು, ಮುಗಿಲುದ್ದಕ್ಕೆ ಹಾರೆನೆಂಬುವರು ನಾನು ಭಕ್ತ ನಾನು ಮಹೇಶ್ವರನೆಂಬ ನುಡಿಗೆ ನಾಚರು ನೋಡಾ. ಆ ಭಕ್ತನ ಮಠಕ್ಕೆ ಜಂಗಮ ನಿರಂತರ ಬರುತ್ತಿರಲು ಬ್ರಹ್ಮನಿಕ್ಕಿದ ಕೋಳ ಕಡಿಯಿತ್ತು. ಆ ಭಕ್ತನ ಸ್ತ್ರೀಯಳು ನಿರಂತರ ಜಂಗಮದಾಸೋಹವ ಮಾಡುತ್ತಿರಲು, ರುದ್ರ ವಿಷ್ಣುವಿಕ್ಕಿದ ಸಂಕೊಲೆಯು ಕಡಿಯಿತ್ತಯ್ಯಾ. ಆ ಭಕ್ತನ ಧನವು ನಿರಂತರ ಜಂಗಮಕ್ಕೆ ಸವಿಸುತ್ತಿರಲು ರುದ್ರನಿಕ್ಕಿದ ಆಶೆ ರೋಷದ ಜಂಜುರಿ ಬಿಟ್ಟಿತ್ತಯ್ಯ. ಆ ಭಕ್ತನು ತನ್ನ ಜಾತಿಸೂತಕವ ಕಳೆದು ಶಿವಭಕ್ತರ ಕುಲವ ವಿಚಾರಿಸದೆ ಜಾತಿ ಶಿವಜಾತಿ ಕುಲ ಶಿವಕುಲವೆಂದರಿದು ನಿರಂತರ ಬೆರಸಿಕೊಂಡಿರುತ್ತಿರಲು ಈಶ್ವರನಿಕ್ಕಿದ ಸೆರೆ ಸಂಕೊಲೆಯ ಬಂದೀಖಾನೆ ಯಿಂದ ಹೊರಹೊರಟ ನೋಡಯ್ಯ. ಇಂತು ಇದಲ್ಲದೆ ಸಹಜರಾದ ಸದ್ಭಕ್ತರ ಶ್ರೀಪಾದವನೆನಗೆ ತೋರಿಸಿ ಬದುಕಿಸಯ್ಯಾ ಕೂಡಲ ಚನ್ನಸಂಗಮದೇವಾ.

---

ಮಹೇಶ್ವರನ ಪ್ರಸಾದಲಿಂಗಸ್ಥಲ. ಇಂತು ಜಂಗಮಲಿಂಗದಲ್ಲಿ ಸೃಷ್ಟಿಯಾಗಿರ್ಪ ಮಹೇಶ್ವರನ ಪ್ರಸಾದಲಿಂಗಸ್ಥಲ. ಆ ಸ್ಥಲದನುಭಾವದ ವಚನ.

## ಮಹೇಶ್ವರನ ಪ್ರಸಾದಲಿಂಗಸ್ಥಲ.

೧. ಗುರುದ್ರೋಹಿಯಾದವನ ಮುಖವ ನೋಡಲಾಗದು. ಮತ್ತೆ ನೋಡಬಹುದು. ಅದೆಂತೆಂದೊಡೆ ಮುಂದೆ ಲಿಂಗ ಉಂಟಾದ ಕಾರಣ. ಲಿಂಗದ್ರೋಹವ ಮಾಡಿದವನ ಮುಖವ ನೋಡಲಾಗದು. ಮತ್ತೆ ನೋಡಬಹುದು. ಅದೇನು ಕಾರಣವೆಂದೊಡೆ, ಮುಂದೆ ಜಂಗಮ ಉಂಟಾದ ಕಾರಣ. ಜಂಗಮ ದ್ರೋಹವ ಮಾಡಿದವನ ಮುಖವ ನೋಡಲಾಗದು. ಮತ್ತೆ ನೋಡಬಹುದು. ಅದೇನು ಕಾರಣವೆಂದಡೆ, ಮುಂದೆ ಪಾದತೀರ್ಥ ಇಹುದಾಗಿ. ಪಾದತೀರ್ಥ ದ್ರೋಹಿಯಾದವನ ಮುಖವ ನೋಡಲಾಗದು. ಮತ್ತೆ ನೋಡಬಹುದು. ಅದೆಂತೆಂದಡೆ, ಮುಂದೆ ಪ್ರಸಾದವಿಹುದಾಗಿ. ಪ್ರಸಾದ ದ್ರೋಹವ ಮಾಡಿದವನ ಮುಖವ ನೋಡಲಾಗದು. ಮತ್ತೆ ನೋಡಬಹುದು. ಅದೇನು ಕಾರಣವೆಂದೊಡೆ, ನಮ್ಮ ಕೂಡಲ ಚನ್ನಸಂಗಯ್ಯನ ಪ್ರಸಾದ ವಿರಹಿತವಾದೊಡೆ ಮುಂದೆ, ಪ್ರಸಾದ ಬಿಟ್ಟು ಪರವಿಲ್ಲವಾದ ಕಾರಣ.

೨. ಕೃತಯುಗ, ತ್ರೇತಾಯುಗ, ದ್ವಾಪರಯುಗ, ಕಲಿಯುಗವೆಂಬ ನಾಲ್ಕು ಯುಗಂಗಳಿಗೆ ಸತ್ಯಲೋಕ, ತಪೋಲೋಕ, ಜನಲೋಕ, ಸ್ವರ್ಗಲೋಕಕ್ಕೆ ಅತಿಶಯುವೆನಿಪ ಕಲ್ಯಾಣವಂ ಮಾಡಿ, ಮಹವಪ್ಪ ಭಕ್ತಿಯಂ ಪುಟ್ಟಿಸಿ, ಬಸವರಾಜದೇವರು ಮೊದಲಾದ, ಮಹಾಗಣಂಗಳ ದಿವ್ಯ ಶ್ರೀಪಾದ ಪದ್ಮಾರಾಧಕನಾಗಿ, ಆನು ಬಲ್ಲೆನು, ಬಲ್ಲೆನು ಎಂಬ ಗರ್ವವಿಲ್ಲದೆ, ನೀವು ಕೊಟ್ಟನುಗ್ರಹದ ಬಿನ್ನಪವನವಧರಿಪುದು. ಭಕ್ತಿ ಸೂಕ್ಷ್ಮ ಭಕ್ತಿ ಕ್ರಮ ಶರಣ ಸತಿ ಲಿಂಗಪತಿಯಾದ ಸಂಬಂಧ ಪಾದೋದಕ ಪ್ರಸಾದ ನಿರ್ಣಯ. ಇಂತೀ ಕ್ರಿಯಾಜ್ಞಾನದ ಅದ್ವೈತವಂ ಆನು ಬಲ್ಲಷ್ಟು ಬಾಲ ತೊದಲ್ನುಡಿಯಿಂದೆ, ವಿಸ್ತರಿಸಿ ಪೇಳ್ವೆನು. ಮಹಾ ಮಹಿಮರು ಕೇಳಿರಯ್ಯಾ. ಶೈವ ಶೈವರಿಗಾದ ಪಾಶುಪತ ಮತವನರಿಯ. ಕಾಳಾಮುಖ ಕಂಗೆಟ್ಟ. ಮಹಾ ವ್ರತಿ ಮದವೇರಿದ. ಸನ್ಯಾಸಿ ಪಾಷಂಡಿಯಾದ. ಜೋಗಿ ಧೀರ ತಿರುಗುತಿರ್ದ. ಈ ಆರು ಭಕ್ತಿಯ ಪಥಕ್ಕೆ ಸಲ್ಲವು ಕೇಳಿರಣ್ಣಾ. ಏಳೇಳು ಜನ್ಮಾಂ

ತರದಲ್ಲಿ ಭವಿಯಾಗಿ, ಶ್ರೀಗುರು ಕಾಂಕ್ಷೆ ಪಾಂಕ್ಷೆ ನಿಷ್ಠೆಯಿಂದವೆ ಪ್ರಾಣದ ಮೇಲೆ ಇಷ್ಟವ ಪ್ರತಿಷ್ಠೆಯಂ ಮಾಡಿಕೊಂಡು, ಅದರಿಂದ ಮೀರಿದ ಸ್ಥಲವಿಟ್ಟು ನಡೆದು, ವೀರ ಮಹೇಶ್ವರತ್ವಮಂ ಪಡೆದು, ಮರಳಿ ತನ್ನ ಕುಲವೆಂದು ಬೆರಸಿದೊಡೆ, ಒಡೆದ ಮಡಿಕೆ ಬಿಡದಂತಿಹನು ಕೇಳಿರಣ್ಣಾ. ತನ್ನ ಕುಲವೆಂದು ಪ್ರಾಣ ಸ್ನೇಹನನು ಮಾಯಾಮೋಹವನು ಕಿಂಚಿತ್ ಬೆರಸಿದನಾದೊಡೆ ಅವನು ಪಂಚಮಹಾಪಾತಕನು. ಅವನು ಭಕ್ತನೆಂದು ನೋಡಿದೊಡೆ, ನುಡಿದೊಡೆ, ಅವನ ಸಮವಾಗಿ ಕುಳಿತು ಸಂಭಾಷಣೆಯ ಮಾಡಿದೊಡೆ, ಅವನ ಕೈಯೊಡ್ಡಿ ಬೇಡಿದೊಡೆ, ಅವಂಗೆ ಕುಂಭೀಪಾತಕ ನಾಯಕ ನರಕ ತಪ್ಪದು ಕಾಣಿರಣ್ಣಾ. ಶುದ್ಧ ಸಿದ್ಧ ಪ್ರಸಿದ್ಧದ ಮರ್ಯಾದ ಭೇದವ ಸೂಕ್ಷ್ಮಾತಿ ಸೂಕ್ಷ್ಮನಾಗಿ ಪೇಳುವೆನು. ಆ ಪರಮ ಸದ್ಭಕ್ತನು ಲಿಂಗಪೂಜೆಯ ಮಾಡಿ, ಆ ಲಿಂಗಾರ್ಚನೆಯಾದ ಮೇಲೆ, ಲಿಂಗಾರ್ಪಿತವ ಮಾಡುತ್ತಿರಲು, ಆ ಸದ್ಭಕ್ತನಲ್ಲಿ ಪದಾರ್ಥ ಹೆಚ್ಚಿರಲು, ಅಲ್ಲಿ ಸಹಜ ಮುಗಿವುತ್ತಿರಲು, ಆ ಸಮಯದಲ್ಲಿ ನೀಡಿ ಮಾಡುವರಿಲ್ಲದಿರಲು, ಅಲ್ಲಿ ಪದಾರ್ಥವೆ ಇಲ್ಲದಿರಲು, ಆ ಸಮಯದಲ್ಲಿ ಒಡೆಯರು ಬಿಜಯಂಗೈಯ್ಯಲು, ಆ ಭಕ್ತನು ಆ ವಿವರವನರಿದು, ತಾ ಕೊಂಡುದೆ ಪ್ರಸಾದ, ನಿಂದುದೆ ಪದಾರ್ಥವಾಗಿ ನೀಡಬಹುದಯ್ಯ. ಇದಲ್ಲದೆ ತನಗೆ ಘನವಾಗಿದರ್ೊಡೆಯು ಫಲಗ್ರಾಹಕದಿಂದ ಮುಗಿಯಲಾಗದು. ಲಿಂಗದೇಹಿಗಳಿಗುಣಿಸಿ, ದ್ರವವಾರಿಸಿಕೊಂಬುವುದು. ಇದಲ್ಲದೆ ಸಹಜವಾದಡೆಯು ಆಗಲಿ. ಹೀಗಿಪ್ಪ ಪ್ರಕಾರದ ಯೋಚನೆಯನುಂಟು ಮಾಡಿಕೊಂಡು, ಮುಂದೆ ಒಡೆಯರ ತೃಪ್ತಿಂಗಿಂತೆಂದು, ಆಲೋಚನೆಯ ಚಿಂತಿಸಿ ನೀಡಬಹುದು. ನೀಡಬಹುದೋ ನೀಡಬಾರದೋ ಎಂದು ಸಂದೇಹವ ತಾಳಲಾಗದು. ಈರ್ವರಿಂದ ಸಂದೇಹವ ತಾಳಿದೊಡೆ, ಲಿಂಗಕ್ಕೆ ದೂರ, ಜಂಗಮಕ್ಕೆ ದೂರ, ಪ್ರಸಾದಕ್ಕೆ ಸಲ್ಲರು. ಅವ ಸದ್ಭಕ್ತನಲ್ಲ. ಅವ ದೇವರಲ್ಲ. ಶುದ್ಧ ಸಿದ್ಧ ಪ್ರಸಿದ್ಧವನೊಡಗೂಡಿ, ಭಕ್ತಿ ಪದಾರ್ಥವಾಗಿ, ಸುಶಬ್ದ ಮುಖದಿಂದೆ ಬಂದು, ಪ್ರಸಿದ್ಧ ಮುಖಕ್ಕೆ ನೀಡಬಹುದಯ್ಯಾ. ಸಂದೇಹ ತಾಳಲಾಗದು. ಇದು ಭಕ್ತ ಮಹೇಶ್ವರರಿಗೊಂವೆ ನಿರ್ಣಯವು. ಅದೆಂತೆಂದೊಡೆ ಭಕ್ತಿರೂಪೆ ಗುರು ರೂಪು, ಗುರುರೂಪೆ ಭಕ್ತರೂಪೆಂಬುದಾಗಿ ಆ ಭಕ್ತಂಗೆ ಭವಿ ನೇಮಸ್ತರು ಸಲ್ಲರಯ್ಯಾ. ಭವಿ ಸ್ವಪ್ನಸ್ವದೃಷ್ಟ ಸಮಗಾರ ಇವರಿಬ್ಬರು ಸತಿ ಸುತ ಮಿತ್ರರೆಂದು ಮತಮಂ ಕೊಗಿಸಿಕೊಂಡೊಡೆ, ಅನ್ನಪಾನಾದಿಗಳಂ ನೀಡಿದೊಡೆ, ಸುರೆಯ ಮಡಿ

ಕೆಯಂ ತೊಳೆದು, ಕ್ಷೀರ ಘೃತವುಂ ತುಂಬಿ, ಶ್ವಾನನ ಕರೆದು ತಿನಿಸಿ, ಮಿಕ್ಕುದ ತಾ ತಿಂದಂತೆ ಕಾಣಾ! ಭಕ್ತ ಲಿಂಗಾರ್ಪಿತವ ಮಾಡಿದ ಪತ್ರ ಭಾಜನಪುಂ ಶ್ವಾನ ಸೂಕರ ಗಾರ್ದಭ ಕುಕ್ಕುಟ ಮಾರ್ಜಾಲಂಗಳು ಮುಟ್ಟಿದೊಡೆ, ಅವರ ಕೂಡೆ ಸಹಭೋಜನವ ಮಾಡಿದಂತೆ ಕಾಣಿರಣ್ಣಾ! ಮತ್ತೆ ಆ ಗುರುಲಿಂಗಜಂಗಮದಲ್ಲಿ ನಿರ್ಣಯವ ಕೇಳಿರಣ್ಣಾ! ಮಾರ್ಗಕ್ರಿಯೆಯಲ್ಲಿ ನಯ ನುಡಿ ನಮಸ್ಕಾರ ಭಯ ಭಕ್ತಿ ಕರುಣ ಕಿಂಕುರ್ವಾಣವು ಕರ್ತೃ ಭೃತ್ಯತ್ವದ ಅನುಭಾವವನರಿಯಿರೆ. ಆ ಜಂಗಮವು ಅರ್ಪಿತವ ಮಾಡಿದ ಬಳಿಕ ಒಕ್ಕು ಮಿಕ್ಕ ಪ್ರಸಾದವ ಭೋಗಿಸುವಲ್ಲಿ, ಪದಾರ್ಥವೆಂದು ಭಾವಿಸಿದೊಡೆ, ಪ್ರಸಾದ ದ್ರೋಹವಯ್ಯಾ. ಆ ಜಂಗಮದಲ್ಲಿ ಅಸ್ಥಿರ ಬುದ್ಧಿ, ಅನೃತ ವಾಕ್ಯ, ಪಂತಿ ಭೇದ, ಉದಾಸೀನ, ನಿರ್ದಯ, ಈ ಐದು ಜಂಗಮ ದ್ರೋಹವಯ್ಯಾ! ಲಿಂಗದಲ್ಲಿ ಪ್ರೀತಿ ಪ್ರೇಮ ಸ್ನೇಹ ಮೋಹ ವಿಶ್ವಾಸವಿಲ್ಲದಿರ್ದೊಡೆ, ಪ್ರೇತ ಲಿಂಗ ಸಂಸ್ಕಾರಿ ಭೂತ ಪ್ರಾಣಿ ಎನಿಸುವುದು. ಈ ಐದು ಲಿಂಗದ್ರೋಹವಯ್ಯಾ! ಗುರುವಿನಲ್ಲಿ ಅಹಂಕಾರ, ಭಯವಿಲ್ಲದಿಹ, ಸಮಪಙ್ತಿಯಲ್ಲಿ ಕುಳ್ಳಿರುವ, ಸಂಭಾಷಣೆಯ ಮಾಡುವ, ಕೈಯೊಡ್ಡಿ ಬೇಡುವ ಈ ಐದು ಗುರುದ್ರೋಹವಯ್ಯ! ಇದು ಕಾರಣ ಗುರು ಲಿಂಗ ಜಂಗಮಕ್ಕೆ ಸಕಲ ಪದಾರ್ಥವ ಸಲ್ಲಿಸಿ ಪ್ರಸಾದವೆಂದು ಕೊಂಡು ಎಂಜಲೆಂದು ಕೈದೊಳೆದೊಡೆ, ಅಘೋರ ನರಕವಯ್ಯಾ ಕೂಡಲ ಚನ್ನಸಂಗಮದೇವಾ.

೩. ಅವಸರದಾರೋಗಣೆಯು ಆಪ್ಯಾಯನವಾದಲ್ಲಿ ಈ ತ್ರಿವಿಧ ಮುಖದಲ್ಲಿ ಅರ್ಪಿತವಾದೊಡೆ, ಆತ ಪ್ರಸಾದಿ ಎಂಬೆನು. ॥ಸಾಕ್ಷಿ॥ ಲಿಂಗಸ್ಯಾವಸರೆ ಯಸ್ತು ಅರ್ಚಂತಿ ಧ್ಯಾತು ಸಂಭವೆ। ಎಂದುದಾಗಿ, ಇದು ಕಾರಣ ಕೂಡಲ ಚನ್ನಸಂಗಯ್ಯ ನಿಮ್ಮ ಅವಸರವರಿತು ಅರ್ಪಿಸುವ ಅರ್ಪಣ ಸದ್ಭಾವಿಗಲ್ಲದೆ ದುಶ್ಚೇಷ್ಟೆಯ ದುರ್ಭಾವಿಗೆ ಸಲ್ಲದಯ್ಯಾ.

೪. ಭೃತ್ಯಾಚಾರಿಗಲ್ಲದೆ ಭಕ್ತ್ಯಾಚಾರವಳವಡದು. ವೇದಶಾಸ್ತ್ರ ಪುರಾಣಾಗಮವನರಿದ ಸಂಬಂಧಿಗಲ್ಲದೆ ಆಚಾರವಳವಡದು. ಅದೇನು ಕಾರಣವೆಂದೊಡೆ, ಅರಿದರಿದು ಭವಿಪಾಕವೆಂದು ಕಳೆದ ಬಳಿಕ ಜಂಗಮಕ್ಕೆ ನೀಡಿದಡೆ, ಅದೆ ಪಾತಕವಯ್ಯಾ. ಅದೆಂತೆಂದೊಡೆ, ತನ್ನ ಲಿಂಗಕ್ಕೆ ಸಲ್ಲದಾಗಿ, ಜಂಗಮಕ್ಕೆ ಸಲ್ಲದು. ॥ಸಾಕ್ಷಿ॥ ಲಿಂಗಭೋಗಸ್ಯ ಭೋಗಿನಾಂ। ಭೋಗಂ ಜಂಗಮ ವರ್ಜಿತಂ। ಅಂಗಹೀನಂ ಚ ಭುಕ್ತಾನಾಂ। ಶ್ವಾನ

ಯೋನಿಷು ಜಾಯತೆ। ಎಂದುದಾಗಿ ಇದುಕಾರಣ ಕೂಡಲ ಚೆನ್ನ ಸಂಗಯ್ಯಾ ಇಂತಪ್ಪ ದುರಾಚಾರಿಯ ಮುಖವನೆನಗೆ ತೋರದಿರಯ್ಯಾ.

೫. ತನ್ನ ಲಿಂಗಕ್ಕೆ ಬಾರದ ರುಚಿಯ ಜಂಗಮಕ್ಕೆ ಸಲ್ಲಿಸಿ ಕೈಯ್ಯೊಡ್ಡಿ ಪ್ರಸಾದವನಿಕ್ಕು ಎಂಬುವಂಗೆ ಅದು ಪ್ರಸಾದವಲ್ಲ. ಸಿಂಗಿ ಕಾಳ ಕೂಟ ವಿಷ ಕಾಣಿರಣ್ಣಾ. ಆ ಪ್ರಸಾದಕ್ಕೆ ವ್ರತಿಗಳೆಂಬುವರು ಅದು ವ್ರತವಲ್ಲ. ಬಿಡದ ಕರ್ಮ. ಅದು ಪ್ರಸಾದವಲ್ಲ. ಕಿಲ್ಬಿಷವಯ್ಯಾ ಕೂಡಲ ಚನ್ನಸಂಗಮದೇವಾ.

೬. ತನ್ನ ಲಿಂಗಕ್ಕೆ ಕೊಡಬಾರದ ಠಾವಿನಲ್ಲಿ, ಪ್ರಸಾದವ ಕೊಂಡು, ತುಡುಗುಣಿ ನಾಯಂತೆ ತಿಂಬುವರನೇನೆಂಬೆನಯ್ಯ? ಅದು ತನ್ನ ಒಡಲ ಹೊರೆವುದಲ್ಲದೆ, ಹಿಡಿದ ಕುಳಕ್ಕೆ ಸಲ್ಲದು ॥ಸಾಕ್ಷಿ॥ ದ್ರವ್ಯಂ ಧಾತು ಶುಭಂ ಭವೇತ್ ಎಂದುದಾಗಿ, ಇದು ಕಾರಣ ಕೂಡಲಚನ್ನ ಸಂಗಯ್ಯನಲ್ಲಿ ಅದು ತಾ ಬೀಸರವಾದ ವ್ರತಗೇಡಿ ಮೂಳರನೆನಗೆ ತೋರ ದಿರಯ್ಯ.

೭. ತನ್ನ ಲಿಂಗದಲ್ಲಿ ಪದಾರ್ಥದ ಪೂರ್ವಾಶ್ರಯವ ಹೋಗ ದೆಂದು ಅನುಸರಿಸಿ ಜಂಗಮ ಒಕ್ಕುದ ಕೊಂಬೆನೆಂಬುವನೊಬ್ಬ ಟಕ್ಕ ಭವಿ. ಆ ಜಂಗಮವು ಹೋದ ಬಳಿಕ ತನ್ನ ಲಿಂಗಕ್ಕೆಯು ಅಷ್ಟವಿಧಾ ರ್ಚನೆ ಷೋಡಶೋಪಚಾರವ ಮಾಡಿ, ಲಿಂಗ ಪ್ರಸಾದವಲ್ಲದೆ ಒಲೆ ನೆಂಬವನೊಬ್ಬ ಟಕ್ಕಭವಿ. ತನಗೆ ಲಿಂಗವಿಲ್ಲ, ಲಿಂಗಕ್ಕೆ ತಾನಿಲ್ಲ. ಅವ ನಾಚಾರ ಭ್ರಷ್ಟ ಅಂತಪ್ಪ ಆಚಾರವನವಗ್ರಹಿಸಿ ಹಿಡಿದೊಡೆ, ಆ ಆಚಾ ರವೇ ಅಂಗ, ಅರಿವೇ ಪ್ರಾಣ. ಆ ಪ್ರಾಣವೆ ಇಷ್ಟವೆಂದರಿದು ಅಷ್ಟಾ ವರಣವೇ ಭೂಷಣವಾಗಿ ಇಷ್ಟಬ್ರಹ್ಮವೇ ಮುಖವಾಗಿರ್ದ ವೀರಶೈವಾ ಚಾರ ಸಂಪನ್ನರಾಗಿರ್ದ ಸದ್ಭಕ್ತ ವೀರ ಮಾಹೇಶ್ವರರ ಮೇಲೆ ಪ್ರೀತಿ ಪ್ರೇಮದ ರತಿ ಇಲ್ಲದೆ ವಿಶ್ವಾಸವೆಂಬ ಅಂತಃಕರಣ ಬಳಸವೇ ಇಲ್ಲ. ತನ್ನ ತಾ ತಿಳಿಯದಿರ್ದೊಡೆ ಮಾಣಲಿ. ಗುರುಮಾರ್ಗಾಚಾರವೆಂಬ ವಚ ನಾನುಭಾವದಿಂದ ಹೇಳಿದೊಡೆಯು ತಿಳಿಯದೇ? ಆ ಆಚಾರಕ್ಕೆ ವಿಘ್ನ ವಾಗಿ ಅಹಂ ನಾನು ನನ್ನವೆಂದು ನನ್ನ ಮನೆ ನನ್ನ ಧನ ನನ್ನ ಕುಲ ನನಗಾರ ಹಂಗೆಂದು ಅಜ್ಞಾನದಿಂದೆ ಆಚಾರಕ್ಕೆ ಇದಿರ ಬಿದ್ದು ಮಲವ ಆ ಆಚಾರವ ಭಂಡ ಮಾಡಿ, ಬಯಲಿಗಿಕ್ಕುವವ ಆಚಾರ ದ್ರೋಹಿ. ಆ ಆಚಾರ ದ್ರೋಹವ ಹೊತ್ತಲ್ಲಿ ಪಂಚ ದ್ರೋಹಂಗಳು ಬಂದು ಹೊಂದು

ಪದೆಂಪರಿಯದೆ ತರ್ಕಿಸಿ ಹೋರಿ ಕಟಕಟನೆ ಕಾದಿ ಛಿದ್ರಿಸಿ ಚಿಸಿಖಂಡವ ಮಾಡಿ ಆಯಿದು ತಿನ್ನುತಿಹ ಕ್ರೂರ ಕರ್ಮಿಯನಿರಿದಿರಿದು ತರಿತರಿದು ಕೊರೆಕೊರೆದು ಹೋಳಿಹೋಳಿ ಹೊತ್ತಿಸಿ ನೊಂದಿಸಿ ಸುಡುವನಲ್ಲದೆ, ಜರಿದು ಮರೆದು ಬಿಡುವನಲ್ಲವಯ್ಯಾ ನಮ್ಮ ಕೂಡಲ ಚೆನ್ನಸಂಗಮದೇವಾ.

೮. ಉಭಯಲಿಂಗ ಉಭಯ ಪ್ರಸಾದ. ಈ ಉಭಯ ದುರ್ಭಯುವ ಲಿಂಗಪ್ರಸಾದಿಗಳೆ ಬಲ್ಲರಲ್ಲದೆ, ನಾನೆತ್ತ ಬಲ್ಲೆನಯ್ಯಾ! ಕ್ರಿಯೆಯ ಮಿೂರಿದ ಸಂಬಂಧವ ನಾನೆತ್ತ ಬಲ್ಲೆನಯ್ಯಾ! ವಿಧಿ ನಿಷೇಧವಾದ, ಕ್ರಿಯೆ ಹೊರಗಾದುದ ನಾನೆತ್ತ ಬಲ್ಲೆನಯ್ಯಾ! ಶ್ರುತಿ ಸ್ಮೃತಿ ಪ್ರಾಮಾಣೆನೊಳಗಲ್ಲವಯ್ಯಾ ಕೂಡಲಚನ್ನಸಂಗಮದೇವಾ.

---

ಇಂತೀ ಮಹೇಶ್ವರನ ಪ್ರಸಾದಲಿಂಗಸ್ಥಲ. ಇಂತಪ್ಪ ಪ್ರಸಾದದಲ್ಲಿ ನೈಷ್ಠಿಕನಾದ ಮಾಹೇಶ್ವರನ ಮಹಾಲಿಂಗಸ್ಥಲ. ಆ ಸ್ಥಲದನುಭಾವದ ವಚನ.

## ಮಹೇಶ್ವರನ ಮಹಾಲಿಂಗಸ್ಥಲ.

೧. ಜಗದಕರ್ತನು ಈ ಜಗದ ಸ್ಥಿತಿಗತಿಯ ನಡಿಸುವ ಪರಿಯನು ಆತನ ಲೀಲೆಯನರಿಯಬಾರದು. ಅಕಟಕಟ, ದೇವ ದಾನವ ಮಾನವರರಿಯದೆ, ಅಹಮ್ಮೆಂದು ಅಹಂಕರಿಸಿ, ಕೆಟ್ಟರು ನೋಡಿರೆ. ಆ ಮಹಾಕರ್ತನು ತನ್ನ ಶಕ್ತಿಯ ವಿನೋದಕ್ಕೆ ರಚಿಸಿದ ರಚನೆಯ ನೋಡಿರೆ. ಮೂವರು ಪ್ರಧಾನರು ಒಂಭತ್ತು ಪ್ರಜೆ ಪಸಾಯಿತರು ಹದಿನಾಲ್ಕು ನಿಯೋಗಿಗಳು ಇಪ್ಪತ್ತೇಳು ಅನುಚರರು ತನ್ನಸ್ವತನುವಿನಿಂದಾವ ಜಗದ ಸ್ಥಿತಿಗತಿಯನಡಿಸುವನು. ಆ ಕರ್ತ ಕಟ್ಟಿದ ಕಟ್ಟಳೆಯನು ಆಯುಷ್ಯ ಭವಿಷ್ಯವನು ನಿಮಿಷ ನಿಮಿಷಾರ್ಧವ ಹೆಚ್ಚಿಸಬಾರದು. ಅಣುವಣುವರ್ಧವ ಕುಂದಿಸಬಾರದು ನೋಡಿರೇ. ಇದಾರಿಗೆಯು ಅರಿಯಬಾರದು. ಇದ ಬಲ್ಲರೆ ಬಲ್ಲರು. ನಮ್ಮ ಶರಣ ಕೂಡಲ ಚನ್ನಸಂಗಮದೇವಾ ನೀವು ಬಲ್ಲಿರಿ.

೨. ಭವಿ ಮಾಡಲಿಕ್ಕೆ ಪೃಥ್ವಿಯಾಯಿತ್ತು. ಭವಿ ಮಾಡಲಿಕ್ಕೆ ಅಪ್ಪುವಾಯಿತ್ತು. ಭವಿ ಮಾಡಲಿಕ್ಕೆ ಅಗ್ನಿಯಾಯಿತ್ತು. ಭವಿ ಮಾಡಲಿಕ್ಕೆ ವಾಯುವಾಯಿತ್ತು. ಭವಿ ಮಾಡಲಿಕ್ಕೆ ಆಕಾಶವಾಯಿತ್ತು. ಭವಿ

ಮಾಡಲಿಕ್ಕೆ ಸೂರ್ಯ ಚಂದ್ರರಾದರು. ಭವಿ ಮಾಡಲಿಕ್ಕೆ ಬ್ರಹ್ಮವಿಷ್ಣು ಗಳಾದರು. ಭವಿ ಮಾಡಲಿಕ್ಕೆ ರುದ್ರನಾದನು. ॥ಸಾಕ್ಷಿ॥ ಭವಿ ಬೀಜಂ ತಥಾ ಶಕ್ತಿ ಭಕ್ತ ಬೀಜಂ ತಥಾ ಶಿವಃ। ಶಿವಬೀಜಂ ತಥಾ ಜ್ಞಾನಂ। ಜ್ಞಾನಂ ತ್ರೈಲೋಕ ದುರ್ಲಭಂ। ಇದು ಕಾರಣ ಕೂಡಲ ಚನ್ನಸಂಗ ಮದೇವಾ, ಭವಿ ಮಾಡಲಾಯಿತ್ತು.

೩. ಸಕಲ ಜಗತ್ತಿನ ಸಚರಾಚರವೆಲ್ಲ ಭವಿಯುಳಿಸಿ ಅಳಿವುದು. ಲೋಕವನು ಹೊದ್ದ. ಲೌಕಿಕವನು ಹೊದ್ದ. ಬೆರಸಿ ಬೆರಸಿ ಏಕಗ್ರಾ ಹಿಯಾದ ಶರಣ ಲಿಂಗವ ಪೂಜಿಸಿ ಅನ್ಯವನರಿಯ. ಅಚ್ಚ ಲಿಂಗೈಕ್ಯನಯ್ಯಾ ಕೂಡಲ ಚನ್ನಸಂಗ ನಿಮ್ಮ ಶರಣ.

೪. ಅಂಗದಿಂದೆ ಲಿಂಗಸುಖ ಲಿಂಗದಿಂದೆ ಅಂಗ ಸುಖ. ಆ ಅಂಗ ಲಿಂಗ ಸಂಗ ಸುಖದಿಂದೆ ಪರಮ ಸುಖ ದೊರೆಕೊಂಬುವುದು ನೋಡಾ. ಆ ಅಂಗ ಲಿಂಗ ಸಂಗ ಸಮರಸೈಕ್ಯವನು ಕೂಡಲ ಚನ್ನ ಸಂಗ ನಿಮ್ಮ ಶರಣನಾದ ಮಹಾಲಿಂಗೈಕ್ಯ ಬಲ್ಲನಲ್ಲದೆ ಉಳಿದವರೆತ್ತ ಬಲ್ಲರಯ್ಯಾ?

೫. ಲಿಂಗಮುಖವನರಿದವಂಗೆ ಅಂಗನೆಂಬುದಿಲ್ಲ. ಜಂಗಮ ಮುಖ ವನರಿದವಂಗೆ ಸಂಸಾರವೆಂಬುದಿಲ್ಲ. ಪ್ರಸಾದ ಮುಖವನರಿದವಂಗೆ ಇಹ ಪರವೆಂಬುದಿಲ್ಲ. ಈ ತ್ರಿವಿಧವು ಒಂದಾದವಂಗೆ ಮುಂದೇನು ಇಲ್ಲವಯ್ಯಾ. ಈ ತ್ರಿವಿಧದ ನೆಲೆಯ ಶೃತಿ ಸ್ಮೃತಿ ಪುರಾಣಾಗಮ ಇತಿಹಾಸಂಗಳ ರಿಯವಯ್ಯಾ ಎಲೆಲೆ ಕೂಡಲ ಚನ್ನಸಂಗಯ್ಯ ನಿಮ್ಮ ಶರಣರೆ ಬಲ್ಲರಯ್ಯಾ.

ಇಂತಿದು ಮಹೇಶ್ವರಸ್ಥಲ. ಈ ಮಹೇಶ್ವರಸ್ಥಲ ಒಂದರಲ್ಲಿ ಷಡ್ವಿ ಧಲಿಂಗವು ಸಮರಸವನೆಯ್ದಿದಲ್ಲಿ ಮುಂದೆ ಪ್ರಸಾದಿ ಸ್ಥಲವಾದುದು. ಇಂತೀ ಮಹೇಶ್ವರಸ್ಥಲವೆರಡಕ್ಕಂ ಸೇರಿದ ವಚನ ೧೦೨ ಕ್ಕಂ ಗ್ರಂಥ ೧೪ ಕ್ಕಂ ಮಂಗಳ ಮಹಾಶ್ರೀ ಶ್ರೀ.

---

# ಪ್ರಸಾದಿಸ್ಥಲ

ಪ್ರಸಾದಿಯಸ್ಥಲ ಆ ಪ್ರಸಾದಿಯ ತಾಮಸನಿರಸನಸ್ಥಲ, ಆ ಸ್ಥಲದನುಭಾವದ ವಚನ.

## ಪ್ರಸಾದಿಯ ತಾಮಸನಿರಸನಸ್ಥಲ

೧. ಅಡಿಗಡಿಗೆ ಸಿರಿವಂತರೆಂದು ನೋಡಿಕೊಂಬುವುದು ಉಪಜೀವಿತ ಪ್ರಸಾದ. ಬಡವರೆಂದು ಓರೆ ಮುಗ್ಗಲಾಗಿ ಕೊಂಬುವುದು ತುಡುಗುಣಿ ಪ್ರಸಾದ. ನಚ್ಚು ಮಚ್ಚಿನಿಂದೆ ಎಳೆದು ಸೆಳೆದುಕೊಂಬುವುದು ದಳಾದುಳಿ ಪ್ರಸಾದ. ಇಕ್ಕದವರನಂಜಿಸಿಕೊಂಡು ಕೊಂಬುವುದು ಪೀಡೆಕಾರ ಕರ್ಮಪ್ರಸಾದ. ಇಕ್ಕುವಾತ ಮನದಲ್ಲಿ ಗುಡಿಗಟ್ಟಿಕೊಂಬುವುದು ಸಮಯಪ್ರಸಾದ. ವೇಷಧಾರಿ ಹುಸಿಹುಂಡರಲ್ಲಿ ಕೊಂಬುವುದು ಹುಸಿ ನುಸುಳು ದೆಸೆಗೇಡಿ ಪ್ರಸಾದ. ಅರಿವು ಆಚಾರ ಹೀನರಾದ ಸಂಕಲ್ಪರಲ್ಲಿ ಕೊಂಬುವುದು ಸಂದೇಹ ಕಂದಿನ ಪ್ರಸಾದ. ಇದು ಕಾರಣ ಕೂಡಲಚನ್ನಸಂಗಮದೇವಾ ನಿಮ್ಮ ಪ್ರಸಾದಿಗಳಪೂರ್ವವಯ್ಯಾ

೨. ಪ್ರಸಾದ ಪ್ರಸಾದವೆಂದು, ಹೆಸರಿಟ್ಟುಕೊಂಡು ನುಡಿವಿರಿ. ಪ್ರಸಾದವೆಲ್ಲರಿಗೆಲ್ಲಿಹದೊ ? ತನುಮುಟ್ಟಿಕೊಂಬುವುದು ಪ್ರಸಾದವಲ್ಲ. ಮನಮುಟ್ಟಿಕೊಂಬುವುದು ಪ್ರಸಾದವಲ್ಲ. ಧನಮುಟ್ಟಿಕೊಂಬುವುದು ಪ್ರಸಾದವಲ್ಲ. ಈ ತ್ರಿವಿಧಸಾಹಿತ್ಯವ ಕೊಂಬುವುದು ಪ್ರಸಾದವಲ್ಲ. ಕೈಯೊಡ್ಡಿ ಕೊಂಬುವಾತ ಗುರುದ್ರೋಹಿ. ಕೈ ನೀಡಿಕ್ಕುವಾತ ಶಿವದ್ರೋಹಿ. ಇದು ಕಾರಣವಾಗಿ, ನಮ್ಮ ಕೂಡಲಚನ್ನಸಂಗನ ಪ್ರಸಾದದ ಮಹಿಮೆಯನೇನೆಂಬೆನಯ್ಯಾ?

೩. ಭಕ್ತರಾದೆವೆಂದು, ಭವಿಪಾಕವನೊಲ್ಲೆನೆಂಬಿರಿ. ಭವಿಪಾಕವೆಂಬುದೆಂತುಂಟೆಂದೊಡೆ ಕೇಳಿರೇ. ಅಂಗತ್ರಯದಿಂದೆ ನೋಡಿದಡದು ಭವಿಪಾಕ. ಲಿಂಗತ್ರಯ ನೋಟಕ್ಕದು ಸಲ್ಲದು. ಗುರುಕಾರುಣ್ಯಮುಂಟು ನಾವು ಸದ್ಭಕ್ತರೆಂಬುವರು ಅವರಿಗೆ ಅಂಗತ್ರಯದ ನೋಟವುಳ್ಳನ್ನಕ್ಕರ ಲಿಂಗತ್ರಯದ ನೋಟವಿನ್ನೆಲ್ಲಿಹದೊ? ಪಂಚಭೂತದ ಕಾಯವ ತಂದು ಸದ್ಭಕ್ತನೆಂದೊಡೆ ಪ್ರಸಾದ ನಾಸ್ತಿ ಎಂದುದು ನಮ್ಮ ಕೂಡಲಚನ್ನಸಂಗಮದೇವರ ವಚನ.

---

ಪ್ರಸಾದಿಯ ತಾಮಸ ನಿರಸನಸ್ಥಲ. ಇಂತೀ ತಾಮಸ ನಿರಸನವ ಮಾಡಿದ ಅವಧಾನಿಯಾದ ಪ್ರಸಾದಿಯ ಸ್ಥಲದ ನಿರ್ದೇಶ. ಆ ಸ್ಥಲದನುಭಾವದ ವಚನ.

## ಪ್ರಸಾದಿಸ್ಥಲ.

೧. ಬಯಸಿ ಬಂದುದು ಅಂಗಭೋಗ. ಬಯಸದೆ ಬಂದುದು ಲಿಂಗಭೋಗ. ಲಿಂಗಭೋಗವನರ್ಪಿತ. ಲಿಂಗಭೋಗ ಪ್ರಸಾದವಯ್ಯಾ· ಬೇಕೆಂಬುವುದು ಕಾಯದ ಗುಣ. ಬೇಡೆಂಬುವುದು ವೈರಾಗ್ಯ. ಬೇಕೆಂಬುವನಲ್ಲ. ಬೇಡೆಂಬುವನಲ್ಲ. ಈ ಉಭಯವನತಿಗಳೆದು ಭೋಗಿಸಬಲ್ಲಡೆ, ಕೂಡಲ ಚನ್ನಸಂಗ ನಿಮ್ಮ ಶರಣನೆಂಬೆನು.

೨. ಕ್ರಿಯೆಯಿಲ್ಲದ ನಿಃಕ್ರಿಯೆಯನೆಂತು ನಡೆಯಬಹುದಯ್ಯಾ? ಸೀಮೆ ಇಲ್ಲದೆ ನಿಸ್ಸೀಮನಾಗೆಂತಿರಬಹುದಯ್ಯಾ? ಮೊದಲಿಲ್ಲದ ಲಾಭವನೆಂತೆನಬಹುದಯ್ಯಾ? ಹರಿವ ಮನವ ಸಿಲ್ಲೆಂದು ನಿಲಿಸಿ ಜಿಹ್ವೆ ಜುಂಜುಕತ್ವವ ಕಳೆದು ಲಿಂಗ ಭೋಗೋಪಭೋಗಿಯಾದಲ್ಲದೆ ಮೆಚ್ಚುವರೆ, ನಿಮ್ಮ ಶರಣ ಕೂಡಲ ಚನ್ನಸಂಗಮದೇವಾ?

೩. ಶ್ರೀಗುರು ಕಾರುಣ್ಯವಂ ಪಡೆದು ಪೂರ್ವಜನ್ಮವ ಕಳೆದು ಪುನರ್ಜಾತನ ಮಾಡಿದ ಬಳಿಕ ಆ ಶ್ರೀಗುರು ಪರಮಾರ್ಥವನರುಹಿ ತ್ರಿವಿಧವನೇಕೀಭವಿಸಿ ಲಿಂಗ ಪ್ರವೇಶಿಯ ಮಾಡಿ ಪ್ರಾಣಲಿಂಗ ಬಿಜಯಂಗೈಸಿಕೊಟ್ಟ ಬಳಿಕ, ಈ ಲಿಂಗವೇ ಪ್ರಾಣ ಪ್ರಾಣವೇ ಲಿಂಗವೆಂದರಿದು ಅಂಗಲಿಂಗ ಸಂಗ ಸಮರಸವಾದುದೆ ಭಕ್ತಕಾಯ. ಆ ಭಕ್ತ ಕಾಯವೇ ಮಮಕಾಯವೆಂದುದಾಗಿ ಅಂತಪ್ಪ ಅಂಗದ ಮೇಲೆ ಸ್ಥಾಪ್ಯವಾದ ಮಹಾಲಿಂಗಕ್ಕೆ ಅಷ್ಟವಿಧಾರ್ಚನೆ ಷೋಡಶೋಪಚಾರವಂ ಮಾಡಿ ಆ ಶ್ರೀಗುರುವಿನ ಅನುಜ್ಞೆಯನು ಮಹಾಪ್ರಸಾದವೆಂದು ಕೈಕೊಂಡು ಕ್ರಿಯಾ ಮಾರ್ಗದಲ್ಲಿ ವರ್ತಿಸಿ, ಸಕಲ ದ್ರವ್ಯಂಗಳನು ಜಿಹ್ವೆಯಲ್ಲಿ ರುಚಿಸಿ, ಪರಿಣಾಮಿಸಿ, ಷಡುವರ್ಣದಿ ಬಹು ವರ್ಣಂಗಳನು ಕಂಗಳಲಿ ನೋಡಿ, ಪರಿಣಾಮಿಸಿ ರುಚಿ, ಅರುಚಿ, ರೂಪು ಸ್ವರೂಪುಗಳ ಲಿಂಗಕ್ಕರ್ಪಿಸುವಾಗ ಸ್ವಯಭಾಜನವೋ, ಲಿಂಗಭಾಜನವೋ? ಆ ಕಾಲದಲ್ಲಿ ಸೂತಕವಿಲ್ಲ, ದೋಷವಿಲ್ಲ. ಹೀಗೆ, ರೂಪು ರುಚಿ ಲಿಂಗಾರ್ಪಿತವಾಯಿತ್ತು. ನಾದ

ಶಿನಾದ ಮಂತ್ರ, ಆ ಮಂತ್ರಂಗಳ ಕೇಳಿ, ಕುಶಬ್ದಂಗಳಂ ಕಳಿದು, ಸುಶಬ್ದಂಗಳಂ ಶ್ರೋತ್ರಮುಖದಲ್ಲಿ ಲಿಂಗಾರ್ಪಿತವಾಯಿತ್ತು. ಗಂಧ ದುರ್ಗಂಧಂಗಳು ತಟ್ಟಿವಲ್ಲಿ ದುರ್ಗಂಧಂಗಳಂ ಕಳಿದು, ಸುಗಂಧಂಗಳಂ ಘ್ರಾಣದ ಮುಖದಲ್ಲಿ ಲಿಂಗಾರ್ಪಿತವಾಗಲು, ಸ್ವಯಭಾಜನವೋ, ಲಿಂಗಭಾಜನವೋ? ಆ ಕಾಲದಲ್ಲಿ ಸೂತಕವಿಲ್ಲ ದೋಷವಿಲ್ಲ. ಈ ಹೀಗೆ ಲಿಂಗಾರ್ಪಿತವಾಯಿತ್ತು. ಮೃದುಕಠಿಣ ಶೀತೋಷ್ಣಾದಿಸ್ಪರ್ಶನಂಗಳ ಗುಣವನರಿದು, ಲಿಂಗಕ್ಕರ್ಪಿಸುವಲ್ಲಿ ಸ್ವಯಭಾಜನವೊ, ಲಿಂಗಭಾಜನವೋ? ಆ ಕಾಲದಲ್ಲಿ ಸೂತಕವಿಲ್ಲ ದೋಷವಿಲ್ಲ. ಈ ಪರಿಯಲ್ಲಿ ಸ್ಪರ್ಶನದ್ರವ್ಯಂಗಳ ಮೃದುಕಠಿಣ ಶೀತೋಷ್ಣಂಗಳ ಸಕೀಲವನರಿದು ತ್ವಕ್ಕಿನ ಕೊನೆಯಲ್ಲಿ ಲಿಂಗಾರ್ಪಿತವಾಯಿತ್ತು. ಷಡುರಸಾದಿ ರಸ ದ್ರವ್ಯಂಗಳೆಲ್ಲವನು ಮಧುರ, ಆಮ್ಲ, ಕಟು, ತಿಕ್ತ, ಕಷಾಯ, ಲವಣ, ಮೊದಲಾದ ದ್ರವ್ಯವನು ಜಿಹ್ವೆಯಿಂದರಿದು ಲಿಂಗಕ್ಕರ್ಪಿಸುವಲ್ಲಿ ಸ್ವಯಭಾಜನವೊ', ಲಿಂಗಭಾಜನವೋ? ಆ ಕಾಲದಲ್ಲಿ ಸೂತಕವಿಲ್ಲ ದೋಷವಿಲ್ಲ. ಈ ಪರಿಯಲ್ಲಿ ಜಿಹ್ವೆ ಎಂಬ ಮುಖದಲ್ಲಿ ಷಡುರಸ ಮೊದಲಾದ ರಸದ್ರವ್ಯಾರ್ಪಿತವಾಯಿತ್ತು. ಇಂತಿವೆಲ್ಲ ದ್ರವ್ಯಂಗಳನು ಆಯಾಯ ಮುಖವನರಿದರ್ಪಿಸುವದು. ಅದೆಂತೆನೆ, ಶಬ್ದ, ಸ್ಪರ್ಶ, ರೂಪು, ರಸ, ಗಂಧಂಗಳನು, ಶ್ರೋತ್ರ, ನೇತ್ರ, ಘ್ರಾಣ, ಜಿಹ್ವೆ, ತ್ವಕ್ಕುಗಳೆಂಬ ಮುಖದಿಂದೆ ಲಿಂಗಾರ್ಪಿತವಾಯಿತ್ತು. ಇನ್ನು ರೂಪು ದ್ರವ್ಯಂಗಳ ಕಂಗಳಿಂದರ್ಪಿಸುವಂತೆ, ಶ್ರೋತ್ರ, ನೇತ್ರ, ಘ್ರಾಣ, ಜಿಹ್ವೆ, ತ್ವಕ್ಕುಗಳೆಂಬ ನಾಲ್ಕು ಇಂದ್ರಿಯಂಗಳಲ್ಲಿ ಅರ್ಪಿಸಬಾರದು. ನಾನಾವರ್ಣವಾದ ರೂಪು ಸ್ವರೂಪವನು ಕಂಗಳ ಕೊನೆಯಲ್ಲಿಯೇ ಅರ್ಪಿಸಬೇಕು. ಶಬ್ದವನು ಶ್ರೋತ್ರದಿಂದರ್ಪಿಸುವಂತೆ, ನೇತ್ರ ಘ್ರಾಣ, ಜಿಹ್ವೆ, ತ್ವಕ್ಕೆಂಬ ನಾಲ್ಕು ಇಂದ್ರಿಯಂಗಳಲ್ಲಿ ಅರ್ಪಿಸಬಾರದು. ನಾನಾ ಶಬ್ದದೊಳಗಣ ಸುಶಬ್ದವನು ಶ್ರೋತ್ರದ ಕೊನೆಯಿಂದವೇ ಅರ್ಪಿಸಬೇಕು. ಸುಗಂಧವನು ಘ್ರಾಣದಿಂದರ್ಪಿಸುವಂತೆ, ಶ್ರೋತ್ರ, ನೇತ್ರ ಜಿಹ್ವೆ, ತ್ವಕ್ಕುಗಳೆಂಬ ನಾಲ್ಕು ಇಂದ್ರಿಯಂಗಳಲ್ಲಿ ಅರ್ಪಿಸಬಾರದು. ಆ ಸುಗಂಧವನು ಘ್ರಾಣದ ಕೊನೆಯಲ್ಲಿ ಅರ್ಪಿಸಬೇಕು. ಸ್ಪರ್ಶನವನು ತ್ವಕ್ಕಿನ ಕೊನೆಯಲ್ಲಿಯೇ ಅರ್ಪಿಸಬೇಕು. ರಸವನು ಜಿಹ್ವೆಯಿಂದರ್ಪಿಸುವಂತೆ, ಶ್ರೋತ್ರ, ನೇತ್ರ, ಘ್ರಾಣ, ತ್ವಕ್ಕು ಮೊದಲಾದ ನಾಲ್ಕು ಇಂದ್ರಿಯಂಗಳಲ್ಲಿ ಅರ್ಪಿಸಬಾರದು ಆ ಷಡುರಸ ಮೊದಲಾದ ಎಲ್ಲ

ರಸಂಗಳನು ಜಿಹ್ವೆಯು ಕೊನೆಯಿಂದರ್ಪಿಸಬೇಕು ಕೇಳಿರಣ್ಣಾ! ಈ ಕ್ರಮ ವನರಿದು ಅರ್ಪಿಸಿದ ಬಳಿಕ, ಆಗ ಸ್ವಯ ಭಾಜನವೋ ಲಿಂಗಭಾಜನವೋ? ಆ ಕಾಲದಲ್ಲಿ ಸೂತಕವಿಲ್ಲ ದೋಷವಿಲ್ಲ. ಈ ತೆರನನರಿಯದೆ ಸ್ವಯ ಭಾಜನವಾಗದೆಂದು, ಭಿನ್ನ ಭಾಜನವಾಗಬೇಕೆಂದು, ದೇವರಾರೋಗಣೆಯ ಮಾಡಿದ ಮೇಲೆ, ಮುಂದಿರ್ದ ಪರಿಯಾಣವಂ ತೆಗೆದು ಇನ್ನೊಂದು ಪರಿಯಾಣವಂ ತನ್ನಿ ಎಂಬ ಕಷ್ಟವ ನೋಡಾ! ಆ ಆಗಲನಾರಡಿಗೊಂಬ ಪಾಪಿಯ ನೋಡಾ! ಅಕಟಕಟಾ, ಈ ಪರಿಯ ಲಿಂಗಾರ್ಚನೆಯ ಮಾಡಿ, ಈ ಪರಿಯ ಲಿಂಗಾರ್ಪಿತವ ಮಾಡಿ ಪ್ರಸಾದವ ಪಡೆವುದೀ ಪರಿಯ? ಜ್ಞಾನವೀ ಪರಿಯೇ? ಇಂತಲ್ಲ ಕೇಳಿರಣ್ಣಾ! ಕರ್ತೃಭೃತ್ಯತ್ವದ ವಿವರವ ನೋಡಿರೆ. ದೇವರವರ ಪರಿಯಾಣದಲ್ಲಿ ದೇವರಿಗೆ ಬಂದ ಸಕಲ ದ್ರವ್ಯರಸಂಗಳನು ರೂಪು, ರುಚಿ. ತೃಪ್ತಿಯನು ಭಕ್ತ ದೇಹಿಕ ದೇವನಾದ ಕಾರಣ, ಆ ಮಹಾದೇವಂಗೆ ಸಕಲ ಪದಾರ್ಥವ ಸಮರ್ಪಿಸಬೇಕು. ॥ಸಾಕ್ಷಿ॥ ರೂಪು ಸಮಾಗತಿಂ ಶುದ್ಧಂ ರುಚಿನಾಸಿದ್ಧ ಸಂಜ್ಞಿಕಂ ತನು ಮಿಶ್ರಾರ್ಪಣಂ ಭೋಗಂ। ಪ್ರಸಿದ್ಧಂ ತು ಪ್ರಸಾದಕಂ। ದರ್ಪಣಂಧೂಪದೀಪಂಚ। ನಾನಾ ರುಚಿ ಸುಖಂ ಬಹುಃ। ಪ್ರಸಾದಮೇವ ಭೋಕ್ತವ್ಯಂ। ಅನ್ಯದ್ಗೋಮಾಂಸ ತತ್ಸಮಂ॥ ರೂಪಂ ಸಮಾಗತಂ ದ್ರವ್ಯಂ। ರುಚಿನಾ ಸುಖಸಮರ್ಪಿತಂ। ಉಭಯಾರ್ಪಣ ವಿಹೀನೋಪಿ ಪ್ರಸಾದಂ ನಿಷ್ಫಲಂ ಭವೇತ್॥ ಘ್ರಾಣೇನಾಚಾರಲಿಂಗಸ್ಯ। ಗಂಧಪ್ರಷ್ಣಾತಿಯೋತ್ಸದಾ। ಜಿಹ್ವಾಂ ಗುರುಲಿಂಗಂ ಚ। ರಸಂ ಘೃಷ್ಣಾತಿ ಯೋತ್ಸದಾ॥ ಚಕ್ಷುಶ್ಚ ಶಿವಲಿಂಗಂಚ। ರೂಪಂ ಘೃಷ್ಣಾತಿ ಯೋತ್ಸದಾ। ತ್ವಕ್ ಜಂಗಮಲಿಂಗಸ್ಯ ಸ್ಪರ್ಶನ ಮಾದಾಯ ಸಾದರಂ ಶ್ರೋತ್ರೇಣಂ ಶಬ್ದ ಘೃಷ್ಣಾತಿ। ಪ್ರಸಾದಂ ಲಿಂಗಮೇವ ಚ। ಅನ್ಯೇಂದ್ರಿಯೋಪಭೋಕ್ತವ್ಯಂ। ಮನರ್ನಂಚ ಭೂಷಶ್ಚತಿ॥ ಇಂದ್ರಿಯಮುಖಾದಿಯಂ। ತದಿಂದ್ರಿಯ ಮುಖೇನಚ॥ ಅನ್ಯೇಂದ್ರಿಯೋಪಭೋಕ್ತವ್ಯಂ ಮನಸಾ ಭೂಷಣಾದಿವತ್॥ ಇಂದ್ರಿಯಾದಾಗತಂ ಕಿಂಚಿತ್। ಯತ್ಸುಖಂ ತತ್ಶಿವಾರ್ಪಣಂ। ತತ್ಪ್ರಸಾದಭೋಕ್ತವ್ಯಂ। ತದಿಂದ್ರಿಯ ಮುಖೇನ ಚ॥ ಅನ್ಯೇಂದ್ರಿಯೋಪಭುಕ್ತಂ ಚ। ಪ್ರಸಾದಂ ನಿಷ್ಫಲಂಭವೇತ್। ಶಬ್ದ ಸ್ಪರ್ಶ ರೂಪಂ ಚ। ರಸ ಗಂಧ ಮಹಾ ರುಚಿಃ॥ ಅರ್ಪಿತಾನರ್ಪಿತಂ ಸ್ಥಾನಂ। ಇಂದ್ರಿಯಾದಿಂದ್ರಿಯಾ ಯಥಾ। ಇಂದ್ರಿಯ ಶ್ವಾಸ

ತತ್ವಮಾರ್ಗಂ। ಸಮರ್ಪಿತ ಕ್ರಿಯಾರ್ಪಣಂ॥ ಉಭಯಾರ್ಪಣ ವಿಹೀನಸ್ಯ। ತತ್ಪ್ರಸಾದಂ ನಿಷ್ಫಲಂ ಭವೇತ್। ಗರ್ಭಿಣೀಯೋಗ ಸರ್ವೇಶಂ। ಶಿಸು ಜಾತಸ್ಯ ತೃಪ್ತಿನಾಂ॥ ಲಿಂಗಭೋಗಸ್ಯ ಲಿಂಗಿನಾಂ। ಪ್ರಸಾದಂ ತಸ್ಯ ಸಂಭವೇತ್। ಯಥಾ ಗರ್ಭಿಣೀಯೋಗಂ ಚ। ಶಿಸುನಾ ತೃಪ್ತಿ ಸಂಭವೇತ್॥ ತದಾ ಲಿಂಗಸ್ಯ ಭೋಗಂ ಚ। ಲಿಂಗತೃಪ್ತಿಮಾಪ್ನುಯೋತ್। ಗರ್ಭೀಕೃತಂ ಚ ಪ್ರಾಣಸ್ಯ॥ ಗರ್ಭಿಣೀಭೋಗಮೇತ್ಕೃತಂ॥ ಲಿಂಗಭಕ್ತ ಕೃತಂ ಲಿಂಗೀ। ಸರ್ವಭೋಗಂ ಚ ಮೇ ತಥಾ। ಭಕ್ತಕಾಯ ಮಹಾದೇವಂ। ಭಕ್ತ್ಯಾತ್ಮಕ ಸದಾಶಿವಂ॥ ಸರ್ವಭೋಗೋಪ ಭೋಗಂಚ। ಸಹಾ ಭೋಗಂ ವಿಧೀಯತೆ। ಲಿಂಗದೇಹೀ ಶಿವಾತ್ಮೀ ಚ। ಲಿಂಗಾಚಾರೇಣ ಲೌಕಿಕಂ॥ ಸರ್ವಲಿಂಗಮಯಂ ರೂಪಂ। ಲಿಂಗಸ್ಯ ಸಹವರ್ತತೆ। ದೃಶ್ಯಾದೃಶ್ಯ ಕೃತಂ ಕೃತಃ। ಘ್ರಾಣಂ ಘ್ರಾಣಸ್ಯ ಮೇವಚ॥ ಸ್ಪರ್ಶಂ ಸ್ಪರ್ಶರವಿಂದಾದು। ದ್ಗೃಹಂದ್ಗೃಹಸ್ಯಮೇವ ಚ। . ಭಕ್ತ ತದ್ಭಕ್ತ ಮುಖ್ಯಾತಂ। ತೃಪ್ತಾತೃಪ್ತಸ್ಯಮೇವಚ॥ ಏಕೈಕಂ ಪ್ರಣಮ ಖ್ಯಾತಂ। ಇತ್ಯೇತೆ ಸಹವರ್ತಿನಾಂ। ಲಿಂಗದೃಷ್ಟಿ ನಿರೀಕ್ಷಸ್ಯ ಲಿಂಗಹಸ್ತೋಪಿ ಸ್ಪರ್ಶಚ॥ ಲಿಂಗಶ್ರೋತ್ರಂ ಚ ಶ್ರೋತ್ರನಾಂ। ಲಿಂಗ ಜಿಹ್ವೆ ರಸಂನವಾತ್; ಲಿಂಗ ಪ್ರಾಣಂ ತು ಘ್ರಾಣಿನಾಂ। ಲಿಂಗಸ್ಯ ವದತೆ॥ ಲಿಂಗ ಮನೋಗಮೋನಾಪಿ। ಏತ್ಯೈತೆ ಸಹಭಾಜನಂ। ಲೋಕಾಚಾರ ನಿಶ್ಯಬ್ದಾನಾಂ। ಲೋಕ ಲೋಕ ವಿವರ್ಜಿತಃ॥ ಲೋಕಾಚಾರ ಪರಿತ್ಯಾಜ್ಯಂ। ಪ್ರಾಣಲಿಂಗಂತು ಸಂಸ್ಮೃತಃ। ನ ಕಾಲಂ ಪ್ರಾಣಲಿಂಗಿನಾಂ। ನ ಕರ್ಮೋ ಲಿಂಗ ಪ್ರಾಣಿನಾಂ॥ ಕಲ್ಪಿತಂಚ ದ್ವಯೋ ನಾಸ್ತಿ। ಶರಣಸ್ಯ ಪ್ರಸಾದತಾ॥ ಎಂದುದಾಗಿ ಲಿಂಗಾರ್ಚನೆಯ ಮಾಡುವ ಪರಿ. ಇದು ಕಾರಣ ಶ್ರೀಗುರು ವಿನಾಜ್ಞೆಯ ಮೀರಿದವನು ಜ್ಞಾನಿಯಲ್ಲ ಭಕ್ತನಲ್ಲ ಕೇಳಿರೋ. ಆವನಾನೊಬ್ಬ ಲಿಂಗ ಭೋಗೋಪಭೋಗಿಯಾದಾತನು ರಾಜಾಧಿರಾಜ ಮಹಾರಾಜ ದೇವರ ದೇವ ಮಹಾದೇವಂಗೆ ಆರೋಗಣೆಯ ಮಾಡಿಸದೆ, ಪರಿಯಾಣವ ತೆಗೆಯಲು ಮಹಾ ದ್ರೋಹವಯ್ಯಾ! ಇದನರಿದು ಶ್ರೀಗುರು ವಿನಾಜ್ಞೆಯ ತಪ್ಪದೆ ಲಿಂಗಾರ್ಚನೆಯ ಮಾಡುವ ಕ್ರಿಯೆ ಕಟ್ಟಳೆಯು ತಪ್ಪದೆ ದೇವರ ಪರಿಯಾಣದಲ್ಲಿ ಷಡುರಸ ದ್ರವ್ಯ ಮೊದಲಾದ ಸಕಲ ಪದಾರ್ಥಂಗಳ ನೀಡಿ, ಆ ಶುದ್ಧ, ಸಿದ್ಧ ಪ್ರಸಿದ್ಧವಾಗಿ ಬಂದು ಅರ್ಪಿತವ ಮಾಡುವುದು. ಪಂಚೇಂದ್ರಿಯಂಗಳೆಂಬ ಪಂಚಸ್ಥಾನದ ಮುಖವನರಿದು

ಶಬ್ದ ಸ್ಪರ್ಶ ರೂಪು ರಸ ಗಂಧಂಗಳನು, ಮನೋ ವಾಚಕ ಕಾಯಕ್ಕೆ ಸೊಗಸುವ ಭೋಗಂಗಳನೆಲ್ಲವನು ಪ್ರಸಾದವುಂ ಪಡೆದುಕೊಂಡು ತನ್ನ ಲಿಂಗಕ್ಕರ್ಪಿಸುವಾತನೆ ಸದ್ಭಕ್ತನು. ಆತನೆ ಸದ್ಯೋನ್ಮುಕ್ತನೆನಿಸುವನು. ಇಂತಿದರನುವನರಿದು ಆತ ಮಹಾ ಪ್ರಸಾದಿಯಾದುದರಿಂದೆ ತಾನು ಪ್ರಸಾದಿಯಪ್ಪುದು ತಪ್ಪದಯ್ಯಾ ಪರಮ ನಿರಂಜನ ಪ್ರಭುವೆ ಗುರುವೆ ಕೂಡಲ ಚನ್ನಸಂಗಮದೇವಾ.

---

ಇದು ಪ್ರಸಾದಿಯ ಆಚಾರಲಿಂಗಸ್ಥಲ. ಇಂತಪ್ಪ ಪ್ರಸಾದಿಯು ಆಚಾರಲಿಂಗಸ್ಥಲವನಂಗಂಗೊಂಡಿರ್ಪ ಅವಧಾನಿಯ ಷಡ್ವಿಧ ಲಿಂಗ ಸಂಗವಾದ ವಿವರ. ಮುಂದೆ ಪ್ರಸಾದಿಯ ಆಚಾರಲಿಂಗಸ್ಥಲ. ಆ ಸ್ಥಲದನುಭಾವದ ವಚನ.

## ಪ್ರಸಾದಿಯ ಆಚಾರಲಿಂಗಸ್ಥಲ.

೧. ಶೀಲ ಶೀಲವೆಂದು ಗರ್ವಿಸಿ ನುಡಿವುತಿಪ್ಪಿರಿ. ಶೀಲವಾವುದೆಂದರಿಯಿರಿ ಕೇಳಿರಣ್ಣಾ! ಇದ್ದುದ ವಂಚನೆ ಮಾಡದಿರ್ಪುದೇ ಶೀಲ. ಇಲ್ಲದುದಕ್ಕೆ ಕಡನ ಮಾಡದಿರ್ಪುದೇ ಶೀಲ. ಪರಧನ ಪರಸ್ತ್ರೀಯರ ಮುಟ್ಟದಿರ್ಪುದೇ ಶೀಲ. ಪರದೈವ ಪರಸಮಯಕ್ಕೆ ಅಳುಪದಿರ್ಪುದೆ ಶೀಲ. ಗುರುನಿಂದೆ, ಹರನಿಂದೆ, ಚರನಿಂದೆಯುವ ಕೇಳದಿರ್ಪುದೆ ಶೀಲ. ನಮ್ಮ ಕೂಡಲ ಚನ್ನಸಂಗನ ಶರಣರ ಬರವಿಂಗೆ ಮೈಯ್ಯಾಂತುದೆ ಅಚ್ಚ ಶೀಲ.

೨. ಶೀಲ ಶೀಲ ಎಂದೊಡೇನೊ? ಮಾಡಿದ ಮನೆ, ಹೂಡಿದ ಒಲೆ ಅಟ್ಟುಂಬ ಮಡಕೆ, ಕಟ್ಟಿದ ಕೆರೆ, ಬಿತ್ತಿದ ಬೆಳೆ, ಇಂತಿವಕ್ಕೆ ಶೀಲವೆಲ್ಲಿಹದೋ? ತನ್ನ ಮನಕ್ಕೆ ಶೀಲವಲ್ಲದೆ, ಶೀಲವಂತರೆಂತಾದಿರೊ? ಶೀಲವಂತರೆಂತೆಂದೊಡೆ, ಕೇಳಿರೋ. ಲಿಂಗವು ಬಂದು ಮನವನಿಂಬುಗೊಂಡುದೆ ಶೀಲ. ಜಂಗಮವು ಬಂದು ಧನವನಿಂಬುಗೊಂಡುದೆ ಶೀಲ. ಪ್ರಸಾದವು ಬಂದು, ತನುವನಿಂಬುಗೊಂಡುದೆ ಶೀಲ. ಇಂತಪ್ಪ ಶೀಲಕ್ಕೆ ನಮೋ ನಮೋ ಎಂಬೆನಯ್ಯಾ. ಇಂತಿದನರಿಯದೆ ಉಳಿದ ದುಃಶ್ಶೀಲವನೆನಗೊಮ್ಮೆ ತೋರದಿರಯ್ಯಾ ಕೂಡಲಚನ್ನಸಂಗಮದೇವಾ.

೩. ಅನ್ಯದೈವವುಳ್ಳ ಭಕ್ತನ ಮನೆಯಾರೋಗಣೆಯು ಅನ್ಯಹಾರವಯ್ಯಾ! ನಂಬಿಗೆ ಇಲ್ಲದ ಭಕ್ತನ ಮನೆಯಾರೋಗಣೆ ಸಂದೇಹದ ಕೂಳು. ಕೊಟ್ಟು ಕೊಂಡು ನೀಡಿ ಮಾಡಿ ಹಮ್ಮು ನುಡಿವ ಭಕ್ತನ ಮನೆಯಾರೋಗಣೆ ಕಾರಿದ ಕೂಳು. ನಿಮ್ಮ ನಂಬಿದ ಸದ್ಭಕ್ತರ ಮನೆಯಾರೋಗಣೆ ಲಿಂಗಾರ್ಪಿತವಯ್ಯಾ. ಅದೆಂತೆಂದೊಡೆ, ಸದಾಚಾರ, ಶಿವಾಚಾರ, ಲಿಂಗಾಚಾರ, ಗಣಾಚಾರ, ಭೃತ್ಯಾಚಾರ, ಸತ್ಕ್ರಿಯಕದಿಂದೆ ಬಂದುದಾಗಿ, ಭಕ್ತಿ ಪದಾರ್ಥವಯ್ಯಾ ಕೂಡಲಚನ್ನಸಂಗಮದೇವಾ.

---

ಇದು ಪ್ರಸಾದಿಯ ಗುರುಲಿಂಗಸ್ಥಲ. ಇಂತೀ ಆಚಾರಲಿಂಗದಲ್ಲಿ ಅವಧಾನಿಯಾದ ಪ್ರಸಾದಿಯ ಗುರುಲಿಂಗಸ್ಥಲ. ಆ ಸ್ಥಲದನುಭಾವದ ವಚನ.

## ಪ್ರಸಾದಿಯ ಗುರುಲಿಂಗಸ್ಥಲ.

೧. ತನ್ನ 'ಮನೆಯ ಹೊಗದ' ಗುರುವಿನರಸಿಕೊಂಡು ಹೋಗುವವ ಶಿಷ್ಯನಲ್ಲವಯ್ಯಾ. ತಾ ಹೋಗದ ಮನೆಗೆ ಉಪದೇಶವ ಮಾಡುವಾತ ಗುರುವಲ್ಲವಯ್ಯಾ. ಅಂಗವ ಮಾರಿಕೊಂಡುಂಬ ಶಿಷ್ಯ ಗುರುದ್ರೋಹಿ. ಲಿಂಗವ ಮಾರಿಕೊಂಡುಂಬ ಗುರು ಶಿವದ್ರೋಹಿ. ॥ಸಾಕ್ಷಿ॥ ನಾಮಧಾರಕ ಶಿಷ್ಯಾಣಾಂ। ನಾಮಧಾರಕ ಗುರುಸ್ತಥಾ। ಅಂಧಕಂಧಕರಂ ಚೈವ ದ್ವಿವಿಧಂ ಪಾತಕಂ ಭವೇತ್॥ ಎಂದುದಾಗಿ ಈ ಗುರುಶಿಷ್ಯರಿಬ್ಬರಿಗೆಯು ದೇವ ಭಕ್ತರೆಂದೊಡೆ ನಾಯಕ ನರಕವಯ್ಯಾ ಕೂಡಲಚನ್ನಸಂಗಮದೇವಾ.

೨. ಕುಲ ಹೀನ ಶಿಷ್ಯಂಗೆ ಅನುಗ್ರಹವ ಮಾಡಿ ತನ್ನ ಪ್ರಾಣಲಿಂಗವ ಕೊಟ್ಟು ಕರ್ಣದಲ್ಲಿ ಮಂತ್ರವ ನಿಕ್ಷೇಪಿಸಿ ಬಳಿಕ ಅವ ಬಂದು ಶಿಷ್ಯನ ಮನೆಯ ಹೊಗಲೊಲ್ಲದೆ ಅಕ್ಕಿ ಪಡಿಯ ತರಿಸಿಕೊಂಡು ಹೊಸ ಬಳಿಕೆ ಎಂದು ಮಾಡಿಸಿಕೊಂಡುಂಬವಂಗೇನೆಂಬೆನಯ್ಯಾ? ಅವನ ಧನಕ್ಕೆ ತಂದೆಯಾದನಲ್ಲದೆ ಅವನಿಗೆ ತಂದೆಯಾದುದಿಲ್ಲ. ಇದು ಕಾರಣವಾಗಿ ಕೂಡಲ ಚನ್ನಸಂಗಯ್ಯ ಲಿಂಗವ ಮಾರಿಕೊಂಡುಂಬ ಭಂಗಗಾರರ ಕಂಡು ನಾಚಿ ಬೆರಗಾದೆನಯ್ಯಾ.

೩. ಭೂತ ಪ್ರಾಣಿಯು ಕಳೆದು ಲಿಂಗಪ್ರಾಣಿಯು ಮಾಡಿದ ಬಳಿಕ ಅವನ ಶ್ರೋತ್ರದಲ್ಲಿ ಸಕಲ ಮೂರ್ತಿಯು ನಿಕ್ಷೇಪಿಸಿದ ಮೇಲೆ ,ಆ ಶಿಷ್ಯೋತ್ತಮನೆ ಜಂಗಮವಾಗಿ ಆ ಗುರುವಿನ ಮಠಕ್ಕೆ ನಡೆದು ಬಂದರೆ ತಾನು ಗುರುವೆಂಬ ಹಮ್ಮಿಲ್ಲದೆ ಪರಮ ಗುರುವೆಂದು ಭಾವಿಸಿ ಪಾದಾರ್ಚನೆಯ ಮಾಡುವುದೆ ಆಚಾರವಯ್ಯ. ನಾ ಗುರುವೆಂಬ ಹಮ್ಮಿನಿಂದೆ ಮಾಡದಿರ್ದೊಡೆ ನಾಯಕ ನರಕವಯ್ಯಾ. ಆ ಜಂಗಮ ಈತ ನನ್ನ ಗುರುವೆಂಬ ನಾಚಿಕೆಯನಳಿದು ಪಾದಾರ್ಚನೆಯ ಮಾಡಿಸಿಕೊಂಬುವುದೆ ಕರ್ತವ್ಯವಯ್ಯಾ. ಶಂಕೆಗೊಂಡೊಡೆ ಪಂಚ ಮಹಾಪಾತಕವಯ್ಯಾ. ಈ ಹೀಂಗೆ ನಿಯತಾಚಾರದ ನಿರ್ಣಯವಲ್ಲದೆ ನಾ ಗುರುವೆಂಬ ಹಮ್ಮಿನ ಬಿಮ್ಮಿನ ಬೀಗ ಉಳ್ಳನ್ನಕ್ಕರ ನಾ ಶಿಷ್ಯನೆಂಬ ಶಂಕೆಯಿಂದ ಡುಣಿಗಾಡುವನ್ನಕ್ಕರ ಅವರಿಬ್ಬರನು ರೌರವ ನರಕದಲ್ಲಿಕ್ಕುವ ನಮ್ಮ ಕೂಡಲಚನ್ನಸಂಗಮದೇವಾ.

೪. ಗುರುವೆಂಬಾತನು ಸಕಲಾಗಮದ ಹೃದಯವನರಿದು, ಕ್ರಿಯಾ ಜ್ಞಾನಯುಕ್ತನಾಗಿ ತನ್ನ ತಾನರಿದು, ಸರ್ವಾಚಾರ ಸಂಪನ್ನತೆ ನೆಲೆಗೊಂಡು, ನಿರ್ಣಯದ ಗೊತ್ತನರಿದು ಉಪದೇಶವಮಾಡಬಹುದು. ಉಪದೇಶವ ಮಾಡುವ ಪರಿ ಎಂತೆಂದೊಡೆ, ॥ಸಾಕ್ಷಿ॥ ಬ್ರಾಹ್ಮಣೋ ತ್ರಿಣಿಯಾಬ್ದಾನಾಂ । ಕ್ಷತ್ರಿಯೋ ಷಟ್ಕಮಾಬ್ದಯೋ । ವೈಶ್ಯರ ನವ ಅಬ್ದಾನಾಂ । ದ್ವಾದಶಾಬ್ದಸ್ಯ ಶೂದ್ರಯೋ॥ ಎಂದುದಾಗಿ, ಬ್ರಾಹ್ಮಣನ ಮೂರು ವರುಷ ನೋಡಬೇಕು. ಕ್ಷತ್ರಿಯನ ಆರು ವರುಷ ನೋಡಬೇಕು. ವೈಶ್ಯನ ಒಂಬತ್ತು ವರುಷ ನೋಡಬೇಕು. ಶೂದ್ರನ ಹನ್ನೆರಡು ವರುಷ ನೋಡಬೇಕು. ಈ ಹಿಂಗೆ ನೋಡಿದಲ್ಲದೆ, ದೀಕ್ಷೆಯ ಕೊಡಲಾಗದು. ಈ ಕ್ರಮವನರಿಯದೆ, ಉಪಾಧಿವಿಡಿದು, ಉಪದೇಶವ ಕೊಂಬಾತ ಶಿಷ್ಯನಲ್ಲ. ಇವರಿಬ್ಬರ ನಿಲವು ಒಂದೆ. ಟಕ್ಕನ ಮನೆಗೆ ಟಕ್ಕ ಬಂದಂತೆ, ಈ ಗುರುಶಿಷ್ಯರಿಬ್ಬರನು ರೌರವ ನರಕದಲ್ಲಿಕ್ಕುವ ನಮ್ಮ ಕೂಡಲಚನ್ನಸಂಗಮದೇವಾ.

೫. ಭವಿತನಕ್ಕೆ ಹೇಸಿ ಭಕ್ತನಾದೆನೆಂದೊಡೆ, ಆತನ ಪೂರ್ವಾಶ್ರಯವ ಕಳೆದು, ಭಕ್ತನ ಮಾಡುವ ಪರಿ ಎಂತೆಂದೊಡೆ, ಅವನ ಕಾಯವ ಶುದ್ಧವ ಮಾಡುವುದು, ಜೀವವ ಶುದ್ಧವ ಮಾಡುವುದು. ಆತ್ಮ ಗೂಡಿ ವಾಕ್ಕು ಪಾಣಿ ಪಾದ ಪಾಯು ಗುಹ್ಯವೆಂಬ ಕರ್ಮೇಂದ್ರಿಯಂಗಳ ಶುದ್ಧವ ಮಾಡುವುದು. ಆತನ ಶ್ರೋತ್ರ ನೇತ್ರ ಘ್ರಾಣ ಜಿಹ್ವೆ ತ್ವಕ್ಕೆಂಬ

ಜ್ಞಾನೇಂದ್ರಿಯಂಗಳ ಶುದ್ಧವ ಮಾಡುವುದು. ಆತನ ಒಳಹೊರಗೆ ಸುತ್ತಿರ್ದ ಮಾಯಾ ಪಾಶದ ಪ್ರಪಂಚಮಂ ಬಿಡಿಸಿ, ಹಿಂದಣ ಭೂತ ಭಾವದಿಂದ ಜೀವೋ ಶಿವನೆಂಬ ಪರಿಯಾಯಮಂ ಕೆಡಿಸಿ, ಆ ಪರಶಿವನೆ ಇಷ್ಟಬ್ರಹ್ಮ, ಆ ಇಷ್ಟವೆ ನಿನ್ನ ಪ್ರಾಣ, ಆ ಪ್ರಾಣವೆ ಇಷ್ಟವೆಂದರುಹಿ, ಜೀವ ಶಿವನಲ್ಲಿ, ಆ ಶಿವನೆ ನಿನ್ನ ಜೀವವೆಂಬ ಪರಿಯಾಯಮಂ ತೋರಿಸಿ, ಆತನ ಜೀವ ಭಾವವಮಂ ಕಳೆದು, ಶಿವಭಾವಿ ಎಂದೆನಿಸಿ, ಆತಂಗೆ ಪಂಚಭೂತಾದಿ ಅಧಿದೇವತೆಗಳ ತೋರಿಸಿ ಪಂಚವಕ್ತ್ರಂಗಳ ನೆಲೆಗೊಳಿಸಿ, ಪಂಚವರ್ಣಂಗಳನರುಹಿ, ಇದಕ್ಕೆ ಸಾಕ್ಷಿ, ಜೀವಾತ್ಮಂ ಪರಮಾತ್ಮಂ ಚ ; ಎಂಬ ಶೃತಿಯಿಂದೆ ಆತನ ಆತ್ಮ ಶುದ್ಧತೆಯಿಂ ಆತನ ಸರ್ವಾಂಗವ ಶುದ್ಧವ ಮಾಡಿ, ಆತನ ತಂದು ಗಣಪಙ್ತಿಯಲ್ಲಿ ಕುಳ್ಳಿರಿಸಿ, ಆ ದೀಕ್ಷಿತನ ಜಿಹ್ವೆಯಲ್ಲಿ, ಶೃತಿಯ ನೋದಿಸಿ, ॥ಸಾಕ್ಷಿ॥ ಓಂ ಕರ್ಮಣಾಂ । ಮನಸಾ ವಾಚಾ ಗುರೂಣಾಂ । ಭಕ್ತಿವತ್ಸಲಃ । ಶರೀರಾರ್ಥಂ ಪ್ರಾಣಂಚ । ಸದ್ಗುರುಭ್ಯೋ ನಿವೇದಯೇತ್ ॥ ಎಂದು ಮಾನಸೋಚ್ಚರಣೆಯಂ ಮಾಡಿಸಿ, ಆ ತಚ್ಛಿಷ್ಯನ ಭವವಂ ಛೇದಿಸಿ, ಆ ಮೇಲೆ ಅವನ ಎಬ್ಬಿಸಿ ಚೌಕ ಮಧ್ಯದಲ್ಲಿ ಕುಳ್ಳಿರಿಸಿ ॥ಶೃತಿ॥ ಓಂ ಮೇನಕಾ ಮೇನಕಾ ಎಂಬ ಮಂತ್ರದಿಂದೆ । ಅರ್ಘ್ಯೋದಕಮಂ ವಾಮ ಪ್ರದಕ್ಷಣಮಾಗಿ ತಳಿದು, ಭಾಳದಲ್ಲಿ ವಿಭೂತಿಯ ಪಟ್ಟವಂ ಕಟ್ಟಿ, ಆತನ ಮಸ್ತಕದ ಮೇಲೆ ಹಸ್ತವನಿರಿಸಿ, ಶತಪತ್ರ ಕಮಲದೊಳಗಿರ್ದ ವಸ್ತುವನು ಮಾನಸೋಚ್ಚರಣೆಯಿಂದೆ ಪ್ರಾಣಲಿಂಗವೆಂದರುಹಿ, ಜ್ಞಾನದೃಷ್ಟಿಗೆ ತಂದು, ಆದೆ ವಸ್ತುವನೆ ಬಹಿಸ್ಫುರಿಸಿ ತಂದು, ಕುಮಾರ ಮೂರ್ತಿಯೊಳಗೆ ಪುದುಗಿಸಿ, ಅಷ್ಟುವೆಲ್ಲ ಒಂದು ಗೂಡಿದ ಮುದ್ದಿಯೇ ಇಷ್ಟಲಿಂಗವೆಂದು ತೋರಿಸಿ, ಕರಮನಭಾವದಲ್ಲಿ ನಿರ್ಧರಿಸೆಂದು ಹೇಳಿ, ಆತ್ಮವೆ ಲಿಂಗವೆಂಬುದು ಮಾಣಿಸಿ, ಶೈವ ಕರ್ಮದಿಂದೆ ಮಾಡುವ ಸ್ಥಾವರ ಲಿಂಗದ ಪೂಜೆಯ ಮಾಣಿಸಿ, ಕರಕೆ ಕಂಕಣವ ಕಟ್ಟಿ, ನಿರ್ಧರದ ತಾಳಿಯಂ ಕಂಠದಲ್ಲಿ ಕಟ್ಟಿ, ಕಲಿಯಾಗು ಎಂದು ಎನ್ನ ಕೃತಾರ್ಥನ ಮಾಡಿದ ಶ್ರೀ ಗುರುವೆ, ಕೂಡಲ ಚನ್ನಸಂಗ ನಿಮ್ಮ ಶರಣ ಸಂಗನಬಸವಣ್ಣನ ಶ್ರೀಪಾದಕ್ಕೆ ನಮೋ ನಮೋ ಎಂಬೆನು.

---

ಮುಂದೆ ಪ್ರಸಾದಿಯ ಶಿವಲಿಂಗಸ್ಥಲ. ಇಂತಪ್ಪ ಗುರುಲಿಂಗದಲ್ಲಿ ಅವಧಾನಿಯಾಗಿರ್ಪ್ಪ ಪ್ರಸಾದಿಯ ಶಿವಲಿಂಗಸ್ಥಲ. ಆ ಸ್ಥಲದನುಭಾವದ ವಚನ.

## ಪ್ರಸಾದಿಯ ಶಿವಲಿಂಗಸ್ಥಲ.

೧. ಪರುಷದ ಲಿಂಗವಿದ್ದು ಕಾಣಲರಿಯದೆ ಇಷ್ಟಲಿಂಗವಿದ್ದಿತ್ತೆಂದು ಅಂಗಕ್ಕೆ ಶಸ್ತ್ರವನಿಕ್ಕಿಕೊಂಡು ಸಾವರು. ಅರಿದರಿದು ಗುರುಶಿಷ್ಯ ಸಂಬಂಧವು ಅರುಹುಳ್ಳವರಿಗಲ್ಲದೆ ಮತ್ತಾರಿಗೆಯು ಆಗದಾಗಿ ಕುರುಹು ಘನವೋ ಅರುಹುಳ್ಳವರು ನೀವು ಹೇಳಿರೊ. ಮರಹು ಕವಿದಿತೆಂದು ಶ್ರೀಗುರುವು ಕುರುಹ ತೋರಿ ಕೊಟ್ಟನಲ್ಲದೆ ಅರುಹು ಮರೆದೊಡೆ ನಮ್ಮ ಕೂಡಲ ಚನ್ನಸಂಗಯ್ಯಂಗೆ ಅವರಂದೆ ದೂರ.

೨. ಪ್ರತಿ ಇಲ್ಲದ ಲಿಂಗವು ಭಿನ್ನವಾಯಿತ್ತೆಂದು ತನುವಿನ ಮೇಲೆ ಶಸ್ತ್ರನಸಿಕ್ಕಿಕೊಂಡು ಆತ್ಮಘಾತಕವ ಮಾಡಿಕೊಂಬ ದ್ರೋಹಿಯ ಮುಖವ ನೋಡಲಾಗದು. ಅದೇಂತೆಂದೊಡೆ ಮಂತ್ರ ಭಿನ್ನವಿಲ್ಲವಾಗಿ ಪೂಜೆ ಭಿನ್ನವಿಲ್ಲ. ಮಹಾ ಬಯಲೊಳಗಣ ಪ್ರಸಾದ ಸಂಚವನರಿಯದೆ, ಆತ್ಮಘಾತಕವ ಮಾಡುವ ನರಕಿಗಳ ನೇನೆಂಬೆನೆಯ್ಯಾ ಕೂಡಲ ಚನ್ನಸಂಗಮದೇವಾ?

೩. ಗುರುಕಾರುಣ್ಯವುಳ್ಳ ಸದ್ಭಕ್ತನ ಲಿಂಗ ಓಸರಿಸಿದೊಡೆ ವ್ರತಗೇಡಿ ಎಂದು ಕಳೆಯಬಾರದು ಕೊಲ್ಲಬಾರದು. ಮುಂದೆ ಗುರುಕಾರುಣ್ಯಮುಂಟಾಗಿ ॥ಸಾಕ್ಷಿ॥ ಶುಭ್ರಂಸುಲಭಂ ಶುದ್ಧಂ। ಸಹಸ್ರಜನ್ಮಪ್ರಾಪ್ತವನೆ। ಎಂದುದಾಗಿ ಮತ್ತೆ ॥ಸಾಕ್ಷಿ॥ ಅಲಿಂಗಿ ಲಿಂಗ ರೂಪೇಣ। ಯೋಲಿಂಗಿ ಉಪಜೀವಿತಃ। ನ ಪಶ್ಯತಿ ಮಹಾ ಘೋರೆ ನರಕೆ ಕಾಲಮಕ್ಷಯಂ ಎಂದುದಾಗಿ, ಶಸ್ತ್ರ ಸಮಾಧಿ, ಜಲ, ತಾಡನ, ದಿಗ್ಬಲಿ, ದಹನ, ಈ ಆರರಲ್ಲಿ ಸತ್ತಡೆ ಅಘೋರ ನರಕದಲ್ಲಿಕ್ಕುವ ನಮ್ಮ ಕೂಡಲಚನ್ನಸಂಗಮದೇವಾ.

೪. ಭಾಷೆಗಿರಿಸಿ ತನುವಿಂಗಲಗುಕೊಂಡಡೆ, ಲಿಂಗ ಓಸರಿಸಿತ್ತಯ್ಯಾ! ಆತನು ವೀರನೆನಿಸುವನು. ಲಿಂಗಕ್ಕೆ ದೂರ, ಜಂಗಮಕ್ಕೆ ದೂರ, ಪ್ರಸಾದಕ್ಕೆ ದೂರವಾಗಿ, ವ್ರತಗೇಡಿಯಹನು ಕಾಣಿರಣ್ಣ, ಇದು ಕಾರಣ ನಮ್ಮ ಕೂಡಲ ಚನ್ನಸಂಗಯ್ಯ ಬ್ರಹ್ಮೇತಿಕಾರನೆನಿಪನು.

# ಶಿವಾನುಭವ.

(ದ್ವೈಮಾಸಿಕವು)



ಸಂಪಾದಕ

ರಾ|| ಸಾ|| ಫ. ಗು. ಹಳಕಟ್ಟಿ

ಬಿ. ಏ. ಎಲ್. ಎಲ್. ಬಿ.



ವಿಜಾಪುರ

ಸಂಪುಟ ೭ ಸಂಚಿಕೆ ೩

ಜೂನ

೧೯೩೨

# ವಿಷಯಾನುಕ್ರಮಣಿಕೆ.




ಇದನ್ನು ವಿಜಾಪುರದಲ್ಲಿ ಇದರ ಸಂಪಾದಕರಾದ ರಾ|| ಸಾ|| ಫ. ಗು. ಹಳಕಟ್ಟಿ ಇವರು ತಮ್ಮ ಹಿತಚಿಂತಕ ಪ್ರಿಂಟಿಂಗ ಪ್ರೆಸ್ಸಿನಲ್ಲಿ ಮುದ್ರಿಸಿದರು. ಮತ್ತು ಅವರು ವಿಜಾಪುರದಲ್ಲಿ ಉಪಲೀಬುರುಜದ ಹತ್ತರ ತಮ್ಮ ೧೬೨೦

ಳಿದು ಪ್ರೀತಿಸುವನು. ಸಾಮಾನ್ಯ ಸ್ಥಿತಿಯ
ನ್ನು ತಾನೆಷ್ಟು ಪ್ರೀತಿಸುತ್ತಿದ್ದನೋ ಅಷ್ಟೇ



# ಪ್ರಾಣಲಿಂಗಿಸ್ಥಲ.

(ಲೇಖಕಃ— ಶ್ರೀಯುತ ಕಲ್ಯಾಣಪ್ಪ ಬ್ಯಾಳಿ ಬಿ. ಏ.)

ವಾ. ಷ. ಜಗಜೀವಿಕೋಟಿಗಳ ತನ್ನ ಜೀವದ ತೆರದಿ
ಬಗೆವೊಡಾತನೆ ಪ್ರಾಣಲಿಂಗಿ ತಾನೆನಿಸಿರ್ಪ
ಬಗೆಬಗೆಯೊಳುಪಕೃತಿಯ ಗೆಯ್ವೊಡಾತನು ನಿರುತ ಸಾನುಕಂಪಿತಹೃದಯದಿಂ।

ಜಗವಂದ್ಯ ಶ್ರೀ ಚನ್ನಬಸವೇಶಕರುಣಾಳು
ಸೊಗಸಿನಿಂ ಬಂದೆನ್ನ ಪ್ರಾಣಜ್ಯೋತಿಯ ಜವದಿ
ಮಿಗಿಲಾದ ಕಾರುಣ್ಯರಸ ತೈಲದಿಂ ನೀನು ಜಾಜ್ವಲ್ಯಮಂ ಗೆಯ್ಯಲೊ॥

ಸ್ವಾನುಭವವುಳ್ಳಾತನೇ ಪ್ರಾಣಲಿಂಗಿಯು. ಸ್ವಾನುಭವವೆಂದರೆ ಸಕಲ ಚರಾಚರ ವಸ್ತುಗಳನ್ನು ತನ್ನಂತೆ ಬಗೆಯುವದು. 'ತನ್ನಂತೆ ಪರರ ಬಗೆದೊಡೆ ಕೈಲಾಸಬಿನ್ನಣವಕ್ಕು ಸರ್ವಜ್ಞ।' ಎಂಬ ನೀತಿವಾಕ್ಯವಿರುವದು. "ಆತ್ಮವತ್ ಸರ್ವಭೂತಾನಿಯಃ ಪಶ್ಯತಿ ಸ ಪಂಡಿತಃ" ಎಂದು ಸಂಸ್ಕೃತದಲ್ಲಿ ಹೇಳಿದೆ. ಪ್ರಾಣಲಿಂಗಿಯು ತನ್ನ ಜೀವವನ್ನು ಪ್ರೀತಿಸುವಂತೆ ಅನ್ಯ ಜೀವಿಗಳನ್ನು ಪ್ರೀತಿಸುವನು. ಮನುಷ್ಯನಿಗೆ ತನ್ನ ಜೀವವು ಅತ್ಯಂತ ಪ್ರಿಯವಾದುದು. ತನ್ನ ಜೀವವುಳಿಯುತ್ತಿದ್ದರೆ ಮನುಷ್ಯನು ಸಂಪತ್ತನ್ನೂ ಸತಿಸುತರನ್ನೂ ಕಳೆದುಕೊಳ್ಳಲಿಕ್ಕೆ ಸಹ ಹಿಂದು ಮುಂದು ನೋಡುವದಿಲ್ಲ. ಅಕಬರಬಾದಶಹನು ಬೀರಬಲ್ಲನಿಗೆ ಮನುಷ್ಯನಿಗೆ ಅತ್ಯಂತ ಅಮೌಲ್ಯವಾದ ವಸ್ತುವಾವುದೆಂದು ಪ್ರಶ್ನೆ ಕೇಳಿದಾಗ ಆತನು ಜೀವವೆಂದು ಉತ್ತರಕೊಟ್ಟನು. ಇದನ್ನು ಪ್ರತ್ಯಕ್ಷ ಪ್ರಮಾಣಿ

ಸಿಕೊಡಲಿಕ್ಕೆ ಒಂದು ಮಂಗನನ್ನು ಅದರ ಮರಿ ಸಹಿತವಾಗಿ ಹಿಡಿತರಿಸಿ ಒಂದು ಹಾದಿನಲ್ಲಿ ಹಾಕಿ ನೀರು ಬಿಡಹತ್ತಲು ಆ ಮಂಗವು ತಾನು ಎಲ್ಲಿಯುವರ [redacted] ಕೂಸಿನ ಜೀವರಕ್ಷಣ[redacted]ಸಂಗಬಂದ ಕೂಡಲೆ [redacted] ಉಳಿಸಿ ಕೊಳ್ಳಲೆತ್ನಿಸಿತು. ಇವರಿ[redacted]ುಷ್ಯನಿಗೆ ತನ್ನ ಜೀವವೇ ಅತ್ಯಂತ ಪ್ರಿಯವಾದುದೆಂಬದು ಸ್ಪ[redacted]ವದಿಲ್ಲವೇ? 'ತನಗಿಂತ ಪ್ರಿಯವಾದ ವಸ್ತುವಿನ್ನುಂಟೇ?' ಎಂಬದಾಗಿ ನಿಜಗುಣಾರ್ಯರು ಹಾಡಿಕೊಂಡಿರುವರು. ಮನುಷ್ಯನಿಗೆ ಶರೀರಕ್ಕೆ ಹೊಡತಗಳು ಬೀಳುತ್ತಿರುವಾಗ ತನ್ನ ಜೀವವುಳಿಯಬೇಕೆಂದು ಕೈಗಳನ್ನೂ ಮುಂದೆ ಮಾಡುವನು. ತನ್ನ ಎಲ್ಲ ಅವಯವಗಳು ಹೋದರೂ ಚಿಂತೆಯಿಲ್ಲ ಜೀವವೊಂದುಳಿದರೆ ಸಾಕೆನ್ನುವನು. ನೋಡಿರಿ ಜೀವದ ಮೇಲೆ ಆತನ ಪಕ್ಷಪಾತವೆಷ್ಟು? ಸರ್ವಸಾಧಾರಣವಾಗಿ ಮನುಷ್ಯನಿಗೆ ಅನ್ಯರಮೇಲೆ ತೀರ ಕಡಿಮೆ ಪ್ರೇಮವಿರುತ್ತದೆ. ಅನ್ಯರಿಗಿಂತಲೂ ತನ್ನ ಬಂಧುಬಾಂಧವರಮೇಲೆ ಪ್ರೇಮವು ಹೆಚ್ಚು. ಬಂಧುಗಳಿಗಿಂತಲೂ ತನ್ನ ಮನೆಯವರಲ್ಲಿ ವಿಶೇಷತಃ ಹೆಂಡಿರುಮಕ್ಕಳಲ್ಲಿ ಹೆಚ್ಚು ಮಮತೆ. ಇವರೆಲ್ಲರಿಗಿಂತಲೂ ತನ್ನ ಜೀವದ ಮೇಲೆ ಮೋಹವು ಅತ್ಯಧಿಕವಾಗಿರುತ್ತದೆ. ಆದರೆ ಪ್ರಾಣಲಿಂಗಿಯು ತನ್ನ ಜೀವದಮೇಲಿದ್ದಂತೆಯೇ ಅನ್ಯ ಜೀವಿಗಳ ಮೇಲೆ ಪ್ರೀತಿಮಾಡುವದರಿಂದ ಆತನು ಎಂಥ ಹೆಚ್ಚಿನ ಸ್ಥಿತಿಗೇರಿರಬಹುದೆಂಬದನ್ನು ನೀವೇ ವಿಚಾರಿಸಿರಿ.

ತೀರ ಕೀಳು ಜಂತುಗಳನ್ನು ಹಿಡಿದು ತನ್ನ ವರೆಗೆ ಪರೀಕ್ಷಿಸಿದರೆ ತನ್ನದು ಎಂಬ ವಿಷಯದಲ್ಲಿಯೇ ಎಲ್ಲರಿಗೆ ಪ್ರೇಮ ಹೆಚ್ಚು. ಅನ್ಯರದು ಎಂಬ ವಿಷಯದಲ್ಲಿ ಪ್ರೇಮ ಕಡಿಮೆ. ಮನುಷ್ಯನಿಗೆ ತನ್ನಮೇಲೆ ಅತ್ಯಂತ ಪ್ರೇಮ, ಅದಕ್ಕೂ ಕಡಿಮೆ ತನ್ನ ಮನೆಯವರಮೇಲೆ, ಅನಂತರ ಸಮಾಜ, ದೇಶ, ಜಗತ್ತು ಈ ವಿಷಯಗಳಲ್ಲಿ ಕ್ರಮೇಣ ಆತನ ಪ್ರೇಮವು ಕಡಿಮೆಯಾಗುತ್ತ ಹೋಗುತ್ತದೆ. ಆದರೆ ಪ್ರಾಣಲಿಂಗಿಗೆ 'ವಸುಧೈವ ಕುಟುಂಬಕಂ' ಅಂದರೆ ಆತನು ವಿಶ್ವಕುಟುಂಬಿಯು. ಇಷ್ಟೇ ಏಕೆ? ವಿಶ್ವದೊಳಗಿನ ಎಲ್ಲ ಜೀವಿಗಳನ್ನು ಆತನು ತನ್ನಂತೆ ಬಗೆಯುವನು. ಸರ್ವಸಾಧಾರಣವಾದ ಮನುಷ್ಯನು ಕೊನೆಗೆ ತನ್ನೊಳಗೇ ಪ್ರೇಮದ ಪರಮಾವಧಿಯನ್ನು ಪರ್ಯವಸಾನಗೊಳಿಸುತ್ತಾನೆ. ಆದರೆ ಪ್ರಾಣಲಿಂಗಿಯು

ತನ್ನೊಳಗಿನ ಪ್ರೇಮವನ್ನು ವಿಕಾಸಗೊಳಿಸುತ್ತ ಇಡೀ ವಿಶ್ವವೇ ತನ್ನಂತೆಯೆಂದು ತಿಳಿದು ಪ್ರೀತಿಸುವನು. ಸಾಮಾನ್ಯ ಸ್ಥಿತಿಯಲ್ಲಿದ್ದಾಗ ಮನುಷ್ಯನು ತನ್ನನ್ನು ತಾನೆಷ್ಟು ಪ್ರೀತಿಸುತ್ತಿದ್ದನೋ ಅಷ್ಟೇ ಪ್ರಾಣಲಿಂಗಿಯ ಸ್ಥಿತಿಯಲ್ಲಿದ್ದಾಗ ಅನ್ಯಜೀವಿಗಳನ್ನು ಪ್ರೀತಿಸುವನು. ಅದೇ ಮೇರೆಗೆ ಸಾಮಾನ್ಯ ಸ್ಥಿತಿಯಲ್ಲಿದ್ದಾಗ ಮನುಷ್ಯನು ಕ್ಷುದ್ರಜೀವಿಗಳನ್ನೆಷ್ಟು ಕಡಿಮೆಯಾಗಿ ಭಾವಿಸುತ್ತಿದ್ದನೋ ಅಷ್ಟೇ ಪ್ರಾಣಲಿಂಗಿಯ ಸ್ಥಿತಿಯಲ್ಲಿದ್ದಾಗ ತನ್ನನ್ನು ತೀರ ಕಡಿಮೆಯಾಗಿ ಕಾಣುವನು. ಅರ್ಥಾತ್ ತನ್ನ ಜೀವದ ಮೇಲಿನ ಮೋಹವನ್ನು ಸಂಪೂರ್ಣವಾಗಿ ತೊರೆಯುವನು.

ಪ್ರಾಣಲಿಂಗಿಯು ತನ್ನ ಜೀವಿತದ ಮೇಲಿನ ಮೋಹವನ್ನು ಸಂಪೂರ್ಣವಾಗಿ ತೊರೆದು ಸರ್ವ ಪ್ರಾಣಿಗಳನ್ನು ತನ್ನ ಇಷ್ಟಲಿಂಗದೋಪಾದಿಯಲ್ಲಿ ಅರ್ಥಾತ್ ಪರವಸ್ತುವಿನೋಪಾದಿಯಲ್ಲಿ ಕಾಣುತ್ತಿರುವದರಿಂದ ಆತನಿಗೆ ಪ್ರಾಣಲಿಂಗಿ ಎಂಬ ಹೆಸರು ಬಂದಿದೆ. ' ಯೋ ಮಾಂ ಪಶ್ಯತಿ ಸರ್ವತ್ರ ಸರ್ವಂ ಚ ಮಯಿ ಪಶ್ಯತಿ ತಸ್ಯಾಹಂ ನ ಪ್ರಣಶ್ಯಾಮಿ ಸಚ ಮೇ ನ ಪ್ರಣಶ್ಯತಿ ॥ " ಎಂದು ಭಗವದ್ಗೀತೆಯಲ್ಲಿ ಹೇಳಿದೆ. ಅಂದರೆ ಯಾವನು ನನ್ನನ್ನು ಎಲ್ಲಕಡೆಯಲ್ಲಿಯೂ ಎಲ್ಲವನ್ನೂ ನನ್ನಲ್ಲಿಯೂ ನೋಡುವನೋ ಅವನಿಂದ ನಾನು ದೂರವಾಗಿರುವದಿಲ್ಲ. ಪ್ರಾಣಲಿಂಗಿಯ ತತ್ವವಾದರೂ ಇದೇ ಇರುತ್ತದೆ.

ಪ್ರಾಣಲಿಂಗಿಗೆ ಪರೋಪಕಾರ ಭೂತದಯಗಳೆರಡು ಮಹತ್ವದ ಗುಣಗಳಿರುತ್ತವೆ. "ಪರೋಪಕಾರಾಯ ವಹಂತಿ ನದ್ಯಃ। ಪರೋಪಕಾರಾಯ ಫಲಂತಿ ವೃಕ್ಷಾಃ। ಪರೋಪಕಾರಾಯ ದುಹಂತಿ ಗಾವಃ। ಪರೋಪಕಾರಾಯ ಇದಂ ಶರೀರಂ" ಎಂಬ ನೀತಿವಾಕ್ಯವಿರುವದು. ಅರ್ಥಃ— ನದಿಗಳು ಪರೋಪಕಾರಕ್ಕಾಗಿಯೇ ಹರಿಯುವವು. ಪರೋಪಕಾರಕ್ಕಾಗಿಯೇ ಆಕಳುಗಳು ಹಾಲು ಕೊಡುವವು. ಪರೋಪಕಾರದ ದೆಶೆಯಿಂದಲೇ ವೃಕ್ಷಗಳು ಮಧುರತರ ಫಲವನ್ನೀಯುವವು. ಅದರಂತೆಯೇ ಪ್ರಾಣಲಿಂಗಿಯು ಪರೋಪಕಾರವನ್ನೇ ತನ್ನ ಪ್ರಾಮುಖ್ಯವಾದ ಅಂಗವಾಗಿಟ್ಟುಕೊಂಡಿರುವನು. ಪರರಿಗುಪಕಾರವನು ನೆರೆಮಾಳ್ಪ ಮಾನವನು ಪರಶಿವನು ಕಳುಹಲವಬಂದು। ಧರೆಯಲ್ಲಿ ವರವೀವನವನು ಸರ್ವಜ್ಞ। ಎಂಬ ಸರ್ವಜ್ಞನ ವಚನವಿರುವದು. ಈ ಜಗತ್ತಿನಲ್ಲಿ ಕೆಲವರು ತಮ್ಮ ಹಿತದ ಕಡೆಗೆ ಸ್ವಲ್ಪೂ ಲಕ್ಷಗೊಡದೆ ಲೋಕಹಿತವೇ ತಮ್ಮ ಹಿತವೆಂದು

ಲೋಕಸಂಗ್ರಹ ಕಾರ್ಯವನ್ನೆಸಗುವರು. ಇವರು ಉತ್ತಮರು. ಕೆಲವರು ಸ್ವಾರ್ಥ ಪರಾರ್ಥಗಳೆರಡನ್ನೂ ಸಾಧಿಸುವರು. ಇವರು ಮಧ್ಯಮರು. ಕೆಲವರು ತಮ್ಮ ಹಿತವನ್ನಷ್ಟೇ ನೋಡಿಕೊಳ್ಳುವರು. ಇವರು ಅಧಮರು. ಕೆಲವರು ತಮಗೂ ಹಿತವಾಗದೆ ಅನ್ಯರಿಗೂ ನಷ್ಟವಾಗುವಂಥ ಕಾರ್ಯವನ್ನು ಮಾಡುವರು ಇಂಥವರು ಅಧಮಾಧಮರು. ಪರೋಪಕಾರವೇ ಮಹಾ ಪುಣ್ಯವೆಂತಲೂ ಪರಪೀಡೆಯೇ ಮಹಾ ಪಾಪವೆಂತಲೂ (ಪರೋಪಕಾರಃ ಪುಣ್ಯಾಯ ಪಾಪಾಯ ಪರಪೀಡನಂ) ಎಂಬುದಾಗಿ ಮಹಾಭಾರತದಲ್ಲಿ ಹೇಳಿದೆ. ಪ್ರಾಣಲಿಂಗಿಯಲ್ಲಿ ಸಾಧುವರ್ಯ ಕ್ರೈಸ್ತನಂಥ ಸೇವಾಬುದ್ಧಿಯೂ ಭಗವಾನ್ ಬುದ್ಧನಂಥ ಭೂತದಯಾಗುಣವೂ ವಿರಾಜಿಸುತ್ತಿರುತ್ತವೆ. ಅಂತಃಕರುಣ ಅಥವಾ ಭೂತದಯೆಯಿಲ್ಲದ ಪರೋಪಕಾರವು ನಿಸ್ಸಾರವಾದುದು. ಅಂತಃಕರಣಪೂರಿತವಾದ ಪರೋಪಕಾರವು ರಸವತ್ತಾದುದು. ಸಜ್ಜನರಿಗೆ ಅಂತಃಕರಣಪೂರ್ವಕವಾಗಿ ಪರೋಪಕಾರ ಮಾಡುವದು ಹುಟ್ಟುಗುಣವಾಗಿರುವದು. ತರುಕುಲಂ ಫಲಕಾಲದೊಳ್ ಬಾಗಿರುವಾಗಸಬಿಟ್ಟು ಧರಣಿಗೆ ಬರುವವು ಘನಂಗಳು ನವಾಂಬುಕಣಂ ಸಮೃದ್ಧಿಸಲು । ಕರುಣಿಪರು ಸಂಪತ್ತು ಬರೆ ಸತ್ । ಪುರುಷರೆಂಬುವರಿನ್ನು ದಯದಿಂ । ಪರರಿಗುಪಕೃತಿ ಗೆಯ್ವುದವರೊಳ್ ಜನ್ಮಗುಣವಿಹುದೈ ॥ ಪ್ರಾಣಲಿಂಗಿಯು ಸತ್ಪುರುಷನು. ವೃಕ್ಷ-ಮೇಘಗಳಂತೆ ದಯಾಗುಣದಿಂದ ಪರೋಪಕಾರ ಮಾಡುವದು ಆತನಿಗೆ ಸಹಜ ಸ್ವಭಾವವಾಗಿರುವದು.

ಪ್ರಾಣಲಿಂಗಿಯು ಅಹಿಂಸಾವ್ರತವನ್ನು ತ್ರಿಕರಣಪೂರ್ವಕವಾಗಿ ಆಚರಿಸುವನು. ಮನಸ್ಸಿನಿಂದಾಗಲಿ, ಮಾತಿನಿಂದಾಗಲಿ, ಕೃತಿಯಿಂದಾಗಲಿ ಯಾವ ಪ್ರಾಣಿಗೂ ಆತನು ನೋವು ಮಾಡುವದಿಲ್ಲ. ಪ್ರಾಣಲಿಂಗಿಯು ತನ್ನ ದಯಾರ್ದ್ರಹೃದಯದಿಂದ ಅತ್ಯಂತ ದುಷ್ಟ ಪ್ರಾಣಿಗಳನ್ನೂ ಕಾಡುವೈರಿಗಳನ್ನೂ ಸಹ ತನ್ನ ಪ್ರೇಮಪಾಶದಿಂದ ಬಾಧಿಸಿಬಿಡುವನು. ಅನ್ಯರು ತನಗೆ ಕೇಡುಬಗೆದರೆ ಮರಳಿ ಅವರಿಗೆ ಕೇಡು ಬಯಸದೆ ಪ್ರತ್ಯುಪಕಾರವನ್ನೇ ಮಾಡುವನು. 'ದಯವಿಲ್ಲದ ಧರ್ಮವದಾವುದಯ್ಯಾ, ದಯವೇ ಬೇಕು ಸಕಲ ಪ್ರಾಣಿಗಳಲ್ಲಿ । ದಯವೇ ಧರ್ಮದ ಮೂಲವಯ್ಯಾ । ಕೂಡಲ ಸಂಗಮದೇವನಂತಲ್ಲದೊಲ್ಲನಯ್ಯಾ ॥ ಎಂಬ ಬಸವಣ್ಣನವರ ಸ್ವಾನುಭವದ ನುಡಿಯು ಪ್ರಾಣಲಿಂಗಿಯ ತತ್ವವನ್ನೇ ಪ್ರತಿಪಾದಿಸುತ್ತದೆ.

'ಯಾರಾದರು ನಿನ್ನ ಬಲಕೆನ್ನೆಯ ಮೇಲೆ ಹೊಡೆದರೆ ಅವರಿಗೆ ಎಡ ಕಪಾಲವನ್ನು ಕೊಡು.' ಎಂಬುದಾಗಿಯೂ 'ನಿನ್ನ ಕೋಟು ಕಸೆದು ಕೊಳ್ಳುವವರಿಗೆ ನಿನ್ನ ಶರ್ಟನ್ನೂ ಸಹ ಕೊಡು.' ಎಂಬುದಾಗಿಯೂ ಸಾಧುವರ್ಯ ಕ್ರೈಸ್ತನು ಹೇಳಿರುವದಿಲ್ಲವೇ? ಪರೋಪಕಾರಕ್ಕಾಗಿ ಪ್ರಾಣಲಿಂಗಿಯು ತನ್ನ ಅಸುವನ್ನಾದರೂ ತೊರೆವನಲ್ಲದೆ ಅನ್ಯರಿಗೆ ಸರ್ವಥಾ ಹಿಂಸೆಪಡಿಸಲಾರನು. ಪರೋಪಕಾರದ ದೆಶೆಯಿಂದ ಬಲಿಚಕ್ರವರ್ತಿಯು ಸಾಳ್ವನೆಂಬ ಬೇಡನಿಗೆ ತನ್ನ ತೊಡೆಯ ಮಾಂಸವನ್ನು ಕೊಯ್ದು ಕೊಟ್ಟು ಕಪೋತದ ಜೀವ ಉಳಿಸಿದನು. ದಧೀಚಿ ಋಷಿಯು ತನ್ನ ಮೂಳೆಯನ್ನು ದೇವೇಂದ್ರನಿಗೆ ಕೊಟ್ಟು ಪ್ರಾಣಬಿಟ್ಟನು. ಕ್ರೈಸ್ತನು ತನ್ನ ವಿಶ್ವಬಂಧುಗಳ ಮೇಲಿನ ಪ್ರೇಮಕ್ಕಾಗಿಯೇ ತನ್ನ ಜೀವವನ್ನು ಧಾರೆಯೆರೆದನು. ಪ್ರಾಣಲಿಂಗಿಯು ಪರೋಪಕಾರ ಮಾಡುವಾಗ ಒದಗುವ ಸಂಕಟಗಳನ್ನೆಲ್ಲವನ್ನು ಆನಂದದಿಂದಲೇ ಸಹಿಸುವನು. ಮರಣ ಬಂದರೆ ಆನಂದದಿಂದ ಆತ್ಮಾರ್ಪಣ ಮಾಡುವನು. ತಮ್ಮ ಸಲುವಾಗಿಯೂ ತಮ್ಮ ಹೆಂಡಿರು ಮಕ್ಕಳ ಸಲುವಾಗಿಯೂ, ಬಂಧುಬಾಂಧವರ ಸಲುವಾಗಿಯೂ, ದೇಶಕೋಶಗಳ ಸಲುವಾಗಿಯೂ ಪ್ರಾಣವನ್ನೀಡಾಡಿದ ಮಹನೀಯರ ಉದಾಹರಣೆಗಳೆಷ್ಟೋ ಉಂಟು ಯಾಕಂದರೆ ತನ್ನದೆಂಬ ಭಾವನೆಯಿಂದ ಮನುಷ್ಯನಲ್ಲಿ ಅಂಥ ಆವೇಶವು ಹುಟ್ಟುತ್ತದೆ. ಆದರೆ ಪರರಿಗಾಗಿಯೂ ಪರಮಾತ್ಮನಿಗಾಗಿಯೂ ಪ್ರಾಣವನ್ನರ್ಪಿಸಿದವರು ಬಹು ವಿರಳ. 'ಆಶೆಗಾಗಿ ಸತ್ತವರು ಕೋಟಿ, ಆಮಿಷಕ್ಕಾಗಿ ಸತ್ತವರು ಕೋಟಿ, ಹೊನ್ನು ಹೆಣ್ಣು ಮಣ್ಣಿಗಾಗಿ ಸತ್ತವರು ಕೋಟಿ, ನಿನಗಾಗಿ ಸತ್ತವರನೊಬ್ಬರೂ ಕಾಣೆ ಗುಹೇಶ್ವರಾ॥' ಎಂದು ಪ್ರಭುದೇವರು ಅಪ್ಪಣೆ ಕೊಡಿಸಿದ್ದಾರೆ.

ಕೊಲ್ಲುವವನೇ ಕಟಕನು. ಕಟುಕರಿಗೆ ಕರುಣವಿಲ್ಲ. ಇಂದು ಕೀಳ ಪ್ರಾಣಿಗಳನ್ನು ಕೊಲ್ಲಲಿಕ್ಕೆ ಹೇಸದ ಮನುಷ್ಯನು ನಾಳೆ ತನ್ನ ಹೊಟ್ಟೆಯ ಮಕ್ಕಳನ್ನು ಸಹ ಕೊಲ್ಲಲಿಕ್ಕೆ ಹೇಸಲಾರನೆಂಬದು ಸ್ಪಷ್ಟವು. ಯಾರ ಹೃದಯದಲ್ಲಿ ಇರುವೆ ಮೊದಲು ಆನೆ ಕಡೆಗೆ ಹೀಗೆ ಒಟ್ಟು ಲಳ ಲಕ್ಷ ಜೀವರಾಶಿಗಳ ಬಗ್ಗೆ ಅಂತಃಕರಣವು ಪ್ರವಹಿಸುತ್ತಿರುವದೋ ಅಂಥ ಪ್ರಾಣಲಿಂಗಿಯು ಒಂದು ಕ್ಷುದ್ರ ಜೀವಿಗಾದರೂ ಅಪಾಯ ಮಾಡಿಯಾನೆಂಬದು ಕನಸುಮನಸಿನಲ್ಲಿಯೂ ಕೂಡ ಕಲ್ಪಿಸುವ ಸಂಭವವಿಲ್ಲ. ಮಹಾತ್ಮಾ ಗಾಂಧಿಯವರಿಗೆ ಯಾರೋ ದುಷ್ಟರು ಮಾಂಸ ತಿನಿಸಿದ್ದ

ರಿಂದ ಅವರಿಗೆ ಆದಿನ ರಾತ್ರಿಯಲ್ಲೆಲ್ಲ ಅವರ ಹೊಟ್ಟೆಯಲ್ಲಿ ಕುರಿಯು ಇದ್ದಂತೆಯೂ ಅದು ದೀನ ಸ್ವರದಿಂದ ಅಳುತ್ತಿದ್ದಂತೆಯೂ, ಅದನ್ನು ಕೇಳಿ ಅವರ ಹೃದಯವು ಬಹು ಕಳವಳ ಪಟ್ಟಂತೆಯೂ ಭಾಸವಾಗುತ್ತಿದ್ದಿತೆಂದು ಅವರು ತಮ್ಮ ಆತ್ಮ ಚರಿತ್ರೆಯಲ್ಲಿ ಹೇಳಿದ್ದಾರೆ. ಇದೇ ಅಲ್ಲವೇ ನಿಜವಾದ ಪ್ರಾಣಲಿಂಗಿಯ ಲಕ್ಷಣವು? ಶಕುಂತಲೆಯು ಪತಿಗೃಹಕ್ಕೆ ತೆರಳುವಾಗ ತಾನು ಜೋಪಾನ ಮಾಡಿದ ಪುಷ್ಪಲತೆಯನ್ನೂ ಚಿಗರಿಯ ಮರಿಯನ್ನೂ ನೋಡಿ ಅಂತಃಕರಣವುಕ್ಕಿಬಂದು ಆಕೆಯು ಅಳಲಿಲ್ಲವೇ? ಶ್ರೀ ಅಕ್ಕಮಹಾದೇವಿಗೆ ಪ್ರಾಣಿಗಳ ಸಂಬಂಧವಾಗಿ ಎಂಥ ಅಮೂಲ್ಯವಾದ ಕಳವಳವಿದ್ದಿತು? ನಿಜವಾದ ಪ್ರಾಣಲಿಂಗಿಯಲ್ಲಿ ಇಂಥ ಕಳವಳವು ನಿರಂತರವಾಗಿ ನೆಲಿಸಿರುತ್ತದೆ. ಜೈನ ಧರ್ಮ ಗುರುಗಳು ಅಹಿಂಸಾ ವ್ರತವನ್ನೆಷ್ಟು ಜಾಗರೂಕತೆಯಿಂದ ಪರಿಪಾಲಿಸುತ್ತಿರುವರೋ ಅಷ್ಟೇ ಜಾಗ್ರತೆಯಿಂದ ಪ್ರಾಣಲಿಂಗಿಯು ಪರಿಪಾಲಿಸುವನು. ಜೀವರುಗಳನ್ನು ನಾಶಪಡಿಸುವದಿಷ್ಟೇ ಹಿಂಸೆಯೆಂದೆಣಿಸಲ್ಪಡುವದಿಲ್ಲ. ದೇಹಕ್ಕೆ ನೋವು ಕೊಡುವದೂ ಮನಸ್ಸಿಗೆ ವ್ಯಥೆಪಡಿಸುವದೂ ಹಿಂಸೆಯೆಂದೇ ತಿಳಿಯಲ್ಪಡುತ್ತವೆ. ಪ್ರಾಣಲಿಂಗಿಯು ಇಂಥ ಯಾವ ಹಿಂಸೆಯ ಕೆಲಸವನ್ನೂ ಮಾಡಲಾರನು.

ಈ ಜಗತ್ತಿನಲ್ಲಿ ಹಿಂಸೆಯಿಂದಲೇ ಅಹಿಂಸೆಯನ್ನು ನಾಶಪಡಿಸಿದ ಉದಾಹರಣೆಗಳೆಷ್ಟೋ ಉಂಟು. 'ಶಠಂಪ್ರತಿ ಶಾಠ್ಯಂ' ಮತ್ತು 'ಕಂಟಕೇನೈವ ಕಂಟಕಂ' ಎಂಬೀ ನೀತಿವಾಕ್ಯಗಳು ಹಿಂಸೆಯಿಂದಲೇ ಹಿಂಸೆಯನ್ನಳಿಯಬೇಕೆಂಬುದನ್ನೇ ಪ್ರತಿಪಾದಿಸುತ್ತವೆ. ವಿಷ್ಣುವಿನ ದಶಾವತಾರಗಳು ಸಜ್ಜನರ ರಕ್ಷಣೆಗಾಗಿಯೂ ದುರ್ಜನರ ನಾಶಕ್ಕಾಗಿಯೂ ಆಗಿರುವವೆಂಬದಕ್ಕೆ ಆ ಭಗವಂತನ ಈ ಗೀತಾವಾಣಿಯೇ ಸಾಕ್ಷಿಯಾಗಿದೆ. ಪರಿತ್ರಾಣಾಯ ಸಾಧೂನಾಂ ವಿನಾಶಾಯ ಚ ದುಷ್ಕೃತಾಂ । ಇದರ ಮೇಲಿಂದ ದುಷ್ಟಜೀವಿಗಳನ್ನು ನಾಶಪಡಿಸಬೇಕೆಂಬುದೇ ಗೀತೆಯ ಮಥಿತಾರ್ಥವಾದಂತಾಯಿತು. "ಆದಿ ಪುರಾಣ ಅಸುರರಿಗೆ ಮಾರಿ, ವೇದಪುರಾಣ ಹೋತಿಂಗೆ ಮಾರಿ, ರಾಮಪುರಾಣ ರಕ್ಕಸರಿಗೆ ಮಾರಿ, ಭಾರತ ಪುರಾಣ ನರರಿಂಗೆ ಮಾರಿ, ನಿಮ್ಮ ಪುರಾಣಕ್ಕೆ ಪ್ರತಿಯಿಲ್ಲ ಕೂಡಲ ಸಂಗಮದೇವಾ." ಎಲ್ಲ ಪುರಾಣಗಳು ಹಿಂಸೆಯನ್ನೇ ಮುಂದೆ ಮಾಡಿರುತ್ತವೆ. ಆದರೆ ಪ್ರಾಣಲಿಂಗಿಯ ಸ್ಥಳದಲ್ಲಿ ಹಿಂಸೆಗೆ ಎಳ್ಳಷ್ಟು ಸಹ

ಅವಕಾಶವಿಲ್ಲ. ಈಗ ಮಹಾತ್ಮಾ ಗಾಂಧಿಯವರು ಅಹಿಂಸಾಮಾರ್ಗ ದಿಂದಲೇ ಹಿಂಸೆಯನ್ನು ನಿರ್ಮೂಲಮಾಡಬೇಕೆಂದಿರುವ ತತ್ವವು ಅತ್ಯಂತ ಶ್ರೇಷ್ಠತರವಾದ ಉಪಾಯವೆಂದು ಜಗತ್ತಿನೊಳಗಿನ ಮಹಾ ಮಹಾ ತತ್ವವೇತ್ತರು ಅಭಿಪ್ರಾಯಪಟ್ಟಿದ್ದಾರೆ. ಈ ಅಮೌಲ್ಯವಾದ ತತ್ವದ ಪ್ರಕಾಶಕರು ಮಹಾತ್ಮಾಗಾಂಧಿಯವರಾಗಿದ್ದರೂ ಕ್ರಿಸ್ತಿ, ಜೈನ ಧರ್ಮ ಗಳಲ್ಲಿ ಈ ತತ್ವವು ಅಡಕವಾಗಿಯೇ ಇದೆ. ವೀರಶೈವ ಧರ್ಮದಲ್ಲಿ ಪ್ರಾಣ ಲಿಂಗಿಯ ಸ್ಥಳವಾದರೂ ಅಹಿಂಸೆಯಿಂದಲೇ ಹಿಂಸೆಯನ್ನು ಹೊಡೆದೋ ಡಿಸಬೇಕೆಂಬುವದನ್ನೇ ಹೇಳುತ್ತದೆ. ನಿಜವಾಗಿ ನೋಡಿದರೆ ಹಿಂಸೆ ಯಿಂದ ಹಿಂಸೆಯು ಬೆಳೆಯುವದಲ್ಲದೆ ಶಾಂತವಾಗಲರಿಯದು. ಯುದ್ಧ ಮಾಡಿದ ಬಳಿಕವೇ ಶಾಂತತೆಯುಂಟಾಗುವದೆಂದು ಪಾಶ್ಚಾತ್ಯರ ಮತ. ಆದರೆ ಇಂಥ ಶಾಂತತೆಯಾದರೂ ಮುಂದಿನ ಯುದ್ಧಕ್ಕೆ ಕಾರಣವೆಂ ಬದನ್ನು ಮರೆಯಲಾಗದು. ಆದುದರಿಂದ ಹಿಂಸೆಯಿಂದುಂಟಾದ ಶಾಂತ ತೆಯು ಶಾಶ್ವತವಾದುದಲ್ಲ. ಅಹಿಂಸೆಯಿಂದುದ್ಭವಿಸಿದ ಶಾಂತತೆಯೇ ಸುಸ್ಥಿರವಾದುದು. ಇದೇ ನಿಜವಾದ ಪ್ರಾಣಲಿಂಗಿಯ ತತ್ವವು.

ಪ್ರಾಣವೇ ಲಿಂಗ ಲಿಂಗವೇ ಪ್ರಾಣವಾಗಿರುವಾತನೇ ಪ್ರಾಣಲಿಂ ಗಿಯು. ಅಂದರೆ ತನ್ನ ಇಷ್ಟಲಿಂಗವನ್ನು ತನ್ನ ಪ್ರಾಣದೋಪಾದಿಯಲ್ಲಿ ತಿಳಿದವನು. ಅರ್ಥಾತ್ ಇಷ್ಟಲಿಂಗದಮೇಲೆ ಜೀವ ಪ್ರಾಣಮಾಡುವಾ ತನು. ಯುರೋಪದಲ್ಲಿ ವಿವಾಹಕ್ಕಿಂತ ಪೂರ್ವದಲ್ಲಿ ವರನು ವಧುವಿನ ಪ್ರೇಮಕ್ಕಾಗಿ ಬಹು ದಿವಸಗಳಿಂದ ಹಂಬಲಿಸಿ ಪ್ರೇಮವು ಪರಿಪಕ್ವಸ್ಥಿತಿಗೆ ಬಂದಾಗ ಆಕೆಯ ದಯೆಗೆ ಪಾತ್ರನಾಗುತ್ತಾನೆ. ಆದರೆ ಇದಕ್ಕೆ ವಿಪ ರೀತವಾಗಿ ಪ್ರಾಣಲಿಂಗಿಯು ಮುಂದೆ ಶರಣಸ್ಥಲದಲ್ಲಿ ಲಿಂಗಕ್ಕೆ ಸತಿ ಯಾಗಬೇಕಾಗುವದರಿಂದ ಪ್ರಾಣಲಿಂಗಿಯು ತನ್ನ ಭಾವೀ ಪತಿಯಾದ ಲಿಂಗಮೂರ್ತಿಯನ್ನು ತನ್ನ ನಿರತಿಶಯವಾದ ಪ್ರೇಮಪಾಶದಿಂದ ಬಿಗಿದು ಕಟ್ಟುವನು. ಪ್ರಾಣಲಿಂಗಿಯು ವಧುವಾಗಿ ವರನಾದ ಲಿಂಗಮೂರ್ತಿ ಯನ್ನು ಒಲಿಸಿಕೊಂಡು ವಿವಾಹವಾಗುವನು. ಭಕ್ತನು ಲಿಂಗದ ಕೃಪೆ ಯಾಗಬೇಕೆಂದು ದೈನ್ಯದಿಂದ ಹಲಬುತ್ತಿದ್ದನು. ಮಹೇಶನು ಅನ್ಯದೈ ವಂಗಳನ್ನು ಬದಿಗೊತ್ತಿ ಲಿಂಗದಲ್ಲಿಯೇ ವ್ರತನಿಷ್ಠನಾಗಿ ನಡೆದುಕೊಂ ಡನು. ಪ್ರಸಾದಿಯು ಸಮ್ಮುಖದಿಂದಲೂ ಶಾಂತಸ್ವಭಾವದಿಂದಲೂ ಲಿಂಗದ ಪ್ರೀತಿಯನ್ನು ಸಂಪಾದಿಸಿದನು. ಆದರೆ ಪ್ರಾಣಲಿಂಗಿಯು ಲಿಂಗವನ್ನು

ಸಾಕ್ಷಾತ್ ತನ್ನ ಪ್ರಾಣದ ಸ್ವರೂಪವಾಗಿ ಮಾಡಿಕೊಂಡನು. ಪ್ರಾಣವೂ ಲಿಂಗವೂ ಒಂದೇ ಸ್ವರೂಪವಾಗಿರುವದರಿಂದ ಅಕಸ್ಮಾತ್ ಲಿಂಗಹೋದರೆ ಆವನ ಪ್ರಾಣವೂ ಆಗಳೇ ಹೋಗಿಬಿಟ್ಟಿರುತ್ತದೆ. "ಪ್ರಾಣವೇ ಲಿಂಗವಾಗಿ ಲಿಂಗವೇ ಪ್ರಾಣವಾಗಿ ಸುಖದುಃಖ ಉಭಯವು ತನಗಿಲ್ಲದಿಹುದೀಗ ಪ್ರಾಣಲಿಂಗಿಯ ಸ್ಥಲ ನೋಡಾ ಅಪ್ರಮಾಣ ಕೂಡಲಸಂಗಮದೇವಾ" ಎಂದು ಶ್ರೀ ಬಸವಣ್ಣನವರು ಹೇಳಿದ್ದಾರೆ. ಪ್ರಾಣಲಿಂಗಿಗೆ ತನ್ನ ದೇಹದ ಸುಖದುಃಖದ ಕಲ್ಪನೆಯೇ ಇರುವದಿಲ್ಲ. ಆತನಿಗೆ ಬಳಲುವಂಥ ಜೀವಿಗಳ ಕಷ್ಟವನ್ನು ಪರಿಹಾರಮಾಡುವದಿಷ್ಟೇ ಗೊತ್ತು. ಸರ್ ಫಿಲಿಪ್ ಸಿಡ್ನೆ ಎಂಬಾತನು ಗಾಯಹೊಂದಿ ರಣಭೂಮಿಯಲ್ಲಿ ಬಿದ್ದಿರುವಾಗ ಆತನಿಗೆ ನೀರಡಿಕೆಯಿಂದ ಬಾಯಾರಿಹೋಗಲು ಒಬ್ಬ ಸೈನಿಕನು ನೀರುತಂದು ಕೊಟ್ಟಿರಲು ಆತನು ಅದನ್ನು ಸ್ವೀಕರಿಸದೆ ತನ್ನ ಬಳಿಯಲ್ಲಿ ನೀರಡಿಸಿ ಬಿದ್ದ ಬೇರೊಬ್ಬ ಶಿಪಾಯಿಗೆ ಆ ನೀರು ಕೊಟ್ಟು ತಾನು ಹಾಗೆಯೇ ಮರಣಹೊಂದಿದನು. ಇದೇ ಅಲ್ಲವೇ ನಿಜವಾದ ಭೂತದಯೆಯು? ಪ್ರಾಣಲಿಂಗಿಗೆ ಇಂತಹ ಭೂತದಯೆಯೇ ಅಳವಟ್ಟಿರುತ್ತದೆ.

ಪ್ರಸಾದಿಗೂ ಪ್ರಾಣಲಿಂಗಿಗೂ ಅಭ್ಯಂತರವೇನು? ಪ್ರಸಾದಿ ಸ್ಥಲವು ಆಧ್ಯಾತ್ಮಿಕೋನ್ನತಿಯ ಮೂರನೆಯ ಸೋಪಾನವು. ಪ್ರಾಣಲಿಂಗಿ ಸ್ಥಳವು ೪ ನೆಯ ಸೋಪಾನವು. ಪ್ರಸಾದಿಗೆ ಶಾಂತತೆ ಸಾವಧಾನಗಳು ಮುಖ್ಯವಾದವುಗಳು. ಪ್ರಾಣಲಿಂಗಿಗೆ ಪರೋಪಕಾರ, ಭೂತದಯೆಗಳು ಪ್ರಾಮುಖ್ಯವಾದವುಗಳು. ಪ್ರಸಾದಿಯು ಆಧ್ಯಾತ್ಮಿಕೋನ್ನತಿಗಾಗಿ ಸಾಧಕರೂಪದಿಂದ ಪ್ರಯತ್ನಿಸುತ್ತಾನೆ. ಪ್ರಾಣಲಿಂಗಿಯು ಸಿದ್ಧನಾಗಿ ಆಧ್ಯಾತ್ಮಿಕೋನ್ನತಿಯನ್ನು ಪಡೆಯುವನು. ಪ್ರಸಾದಿಗೆ ವಿಘ್ನಾದಿಗಳು ಬಂದರೆ ಸಹಿಸಿಕೊಂಬುವನು. ಪ್ರಾಣಲಿಂಗಿಯು ಪ್ರೇಮದಿಂದ ಹಿಗ್ಗುವನು. ಮೊಲೆಗೂಸು ತಾಯಿಯನ್ನು ಸಿಟ್ಟಿನಿಂದ ಹೊಡೆದರೆ ಆಕೆಗೆ ಆನಂದವಲ್ಲದೆ ಕೋಪಿಸಲಾರಳು ನೋಡಾ. ಅದರಂತೆಯೇ ಪ್ರಾಣಲಿಂಗಿಯು ಲೋಕದ ಮಾನವರು ತನಗೆ ಮಾಡುವ ಅಪಮಾನ ವ್ಯಥೆಗಳಿಗೆ ಹಿಗ್ಗುವನಲ್ಲದೆ ಕುಗ್ಗಲಾರನು.

ಅನ್ಯರು ಕೇಡು ಬಗೆದರೆ ಪ್ರಸಾದಿಯು ಸಮಾಧಾನ ತಾಳುವನು. ಪ್ರಾಣಲಿಂಗಿಯು ಅವರನ್ನು ಹಾಡಿಹರಿಸುವನು. 'ಎನ್ನ ಬೈದೊಡವರಿ

ಗೆಲ್ಲ, ಎನ್ನ ಕಾಡಿದವರಿಗೆಲ್ಲ, ಎನ್ನ ಕೊಂದಡವರಿಗೆಲ್ಲ, ಎನ್ನ ಪೂಜೆಫಲಗಳನ್ನೆಲ್ಲ, ಉನ್ನತದೊಳು ಅವರಿಗಾಗಿ ಸುಖದಿ ಬಾಳಲೈ' ಎಂಬೀ ಮುಪ್ಪಿನ ಷಡಕ್ಷರಿಸ್ವಾಮಿಗಳ ನಿರ್ಮಲಾಂತಃಕರಣದ ವಾಣಿಯು ಪ್ರಾಣಲಿಂಗಿಯ ಮುಖದಿಂದ ಹೊರಬೀಳುವದು. ಪ್ರಸಾದಿಗೆ ಚಿತ್ತಪ್ರಸನ್ನತೆಯಿಂದ ಆನಂದವಾಗಿದ್ದರೆ ಆ ಆನಂದವೇ ಪ್ರಾಣಲಿಂಗಿಯಲ್ಲಿ ಕರುಣಾರಸವಾಗಿ ಹೊರಸೂಸುವದು. ಪ್ರಸಾದಿಯು ತನ್ನ ಮನಸಿಗೆ ಸುಖಸಮಾಧಾನ ಹೇಗಾದೀತೆಂಬದನ್ನೇ ಚಿಂತಿಸುತ್ತಿರುತ್ತಾನೆ. ಪ್ರಾಣಲಿಂಗಿ ಜಗಜೀವಿಗಳು ಹೇಗೆ ಸುಖದಿಂದಿದ್ದಾವು ಇದನ್ನೇ ಹಗಲಿರಳು ಚಿಂತಿಸುವನು. ಪ್ರಸಾದಿಯು ತನ್ನ ಇಷ್ಟಲಿಂಗವನ್ನು ಮಗುವಿನೋಪಾದಿಯಲ್ಲಿ ಕಾಣುವನು. ಪ್ರಾಣಲಿಂಗಿಯು ತನ್ನ ಪ್ರಾಣವೆಂದೇ ಭಾವಿಸುವನು. ಪ್ರಸಾದಿಸ್ಥಲಕ್ಕೆ ಬಾಹ್ಯಕ್ರಿಯಾಚಾರಗಳೆಲ್ಲವೂ ಮುಗಿದವು. ಪ್ರಾಣಲಿಂಗಿಗೆ ಬಾಹ್ಯವೆಂಬುವದಿಲ್ಲ. "ಪ್ರಾಣಲಿಂಗಿಯಾದರೆ ಬಾಹ್ಯವಿಚಾರವಿಲ್ಲದಿರಬೇಕು." ಎಂದು ಶ್ರೀ ಚೆನ್ನಬಸವಣ್ಣನವರು ಹೇಳಿದ್ದಾರೆ. ಅಂತರಂಗ ವಿಕಾಸವೇ ಪ್ರಾಣಲಿಂಗಿಸ್ಥಳದ ಮುಖ್ಯ ಧ್ಯೇಯವು. ಪ್ರಸಾದಿಗಳು ಹೆಚ್ಚು ಜನಗಳು ದೊರೆಯಬಹುದು; ಆದರೆ ಪ್ರಾಣಲಿಂಗಿಗಳು ಅಪರೂಪ. ಪ್ರಾಣಲಿಂಗಿಗೆ ಭಕ್ತ ಮಹೇಶ ಪ್ರಸಾದಿಸ್ಥಲಗಳ ಕ್ರಿಯೆಗಳು ಲೋಪವಾಗುತ್ತವೆಂತಲ್ಲ. ಅವುಗಳನ್ನೊಳಕೊಂಡೇ ಪ್ರಾಣಲಿಂಗಿಯು ಮುಂದುವರಿದಿರುತ್ತಾನೆ. ಯಾವ ಸ್ಥಲದವರೇ ಆಗಲಿ ತಾವು ಮುಂದುವರಿದರೆ ಹಿಂದಿನದಕ್ಕೆ ತಿಲಾಂಜಲಿ ಬಿಡಬೇಕಂತಲ್ಲ.

---

# ಬಸವನಿಗೆ ಬ್ರಾಹ್ಮಣ್ಯವೇಕೆ ವಿರಸವಾಯಿತು?

(ಲೇಖಕ:— ವಿ. ಬ. ಬಿಳಿಅಂಗಡಿ ಬಿ. ಎ. ಎಲ್. ಎಲ್. ಬಿ. ಹುಬ್ಬಳ್ಳಿ.)

ಬಸವನು ಶಿವಭಕ್ತಿಯನ್ನುದ್ಧರಿಸಲು ಭೂಮಿಗವತರಿಸಿದನು. ಬಸವನ ಪೂರ್ವದಲ್ಲಿ ಶಿವಭಕ್ತಿಯು ಕರ್ಮಮಾರ್ಗದೊಡನೆ ಕೂಡಿ ಮಲಿನವಾಗಿ ಕಾಣದಹಾಗಾಗಿತ್ತು. ಇದರ ಅದ್ವಿತೀಯ ಮತ್ತು ಮೋಕ್ಷೈಕಸಾಧನವಾದ ಮಹಿಮೆಯನ್ನು ಜಗತ್ತಿಗೆ ತೋರ್ಪಡಿಸುವದಕ್ಕಾಗಿ ಬಸವನು ನಿಮಿತ್ತಮಾತ್ರದಿಂದ ಆರಾಧ್ಯ ಬ್ರಾಹ್ಮಣರ ಕುಲದಲ್ಲಿ ಜನ್ಮವೆತ್ತಿದನು. ಇವನ ಜನ್ಮದ ತಂದೆತಾಯಿಗಳಾದ ಮಾದರಸ ಮಾದಲಾಂ

ಬಿಕೆಯುರು ಶೈವ ಬ್ರಾಹ್ಮಣರಿದ್ದರು. ಇವರು ಪ್ರಾಕೃತಧರ್ಮಾವಲಂಬಿಗಳಾಗಿ ಪ್ರಾಕೃತಾಚಾರದಲ್ಲಿ ನಿರತರಾಗಿ ಅಂದರೆ ಕರ್ಮವನ್ನೂ ಶಿವಭಕ್ತಿಯನ್ನೂ ಕೂಡೇ ಆಚರಿಸುವವರಾಗಿದ್ದರು. ಈ ಕರ್ಮಮಾರ್ಗದಿಂದ ಭಕ್ತಿಮಾರ್ಗವನ್ನು ಬೇರೆಮಾಡಿದವನೇ ಬಸವೇಶ್ವರನು. ಮೊದಲಿಗಿದ್ದ ಶಿವಭಕ್ತಿಯನ್ನು ಶುದ್ಧಮಾಡಿದನು. ಕರ್ಮಮಾರ್ಗಕ್ಕೆ ಎಲ್ಲರೂ ಅಧಿಕಾರಿಗಳಿದ್ದಿಲ್ಲ. ಅದು ಯಜ್ಞಯಾಗಾದಿಗಳೆಂಬ ಹಿಂಸಾರೂಪ ಕ್ರಿಯೆಯುಳ್ಳದ್ದಾಗಿತ್ತು.

ಭೂರಿಯಜ್ಞವಮಾಡಿ ಮೀರಿಸ್ವರ್ಗವಸೇರಿ ।
ಧಾರುಣಿಗೆ ತಿರುಗುವದು ಬ್ರಾಹ್ಮಣರದೀಕ್ಷೆ॥
(ಶಿವಶರಣರ ಲೀಲಾಮೃತ)

ಮತ್ತು ಅಹಂಕಾರ ಮಮಕಾರ ಮುಂತಾದ ಗುಣಗಳನ್ನು ಬಲಪಡಿಸಿ ಭವಚಕ್ರದಲ್ಲಿ ತಿರುಗಿಸುವದಾಗಿತ್ತು. ಆದರೆ ಶಿವಭಕ್ತಿಯು ಹಾಗಲ್ಲ. ಸರ್ವ ಜಾತಿಯವರಿಗೂ ಸ್ತ್ರೀಪುರುಷರಿಗೂ ಅದು ಸಾಧ್ಯವು. ಶಿವಭಕ್ತಿಯಲ್ಲಿ ಶಿವನ ಮೇಲೆ ಹೆಚ್ಚು ನಂಬಿ ಕೆಲಸಮಾಡಬೇಕಾದ್ದರಿಂದ ಅಹಂಕಾರ ಮಮಕಾರಗಳ ಲೇಪವಿಲ್ಲ. ಶಿವಭಕ್ತಿಯಲ್ಲಿ ಹಿಂಸೆಯ ಗಂಧವೇ ಇಲ್ಲ. ಲಿಂಗಾಂಗಸಾಮರಸ್ಯ ಮುಕ್ತಿಯೇ ಅದರ ಅಂತಿಮ ಧ್ಯೇಯವಾದ್ದರಿಂದ ಕರ್ಮಮಾರ್ಗದಂತೆ ಪುನಃ ಪುನಃ ಹುಟ್ಟುವ ಸಾಯುವ ತೊಂದರೆ ಇಲ್ಲ. ಆದ್ದರಿಂದ ಅನೇಕಮುಖವಾಗಿ ಚರಿಸುತ್ತಿದ್ದ ಶಿವಭಕ್ತಿಯನ್ನು ಏಕಮುಖವಾಗಿ ಮಾಡಿ ಅದರ ಮಹತ್ವವನ್ನು ಬಸವನು ಹೆಚ್ಚು ಪ್ರಕಾಶಗೊಳಿಸಿದನು.

ಒಂದು ನಿಮಿತ್ತಮಾತ್ರದಿಂದ ಬಸವನು ಬ್ರಾಹ್ಮಣಕುಲದಲ್ಲಿ ಜನಿಸಿದರೂ ಆತನು ಯಾವಾಗಲು ವೀರಶೈವನೇ ಇದ್ದನು. ಇದು ಬಸವನ ವಚನದಿಂದಲೇ ಸಿದ್ಧವಾಗುವದು.

ಅಯ್ಯಾ, ಏಳೇಳು ಜನ್ಮದಲ್ಲಿ ಶಿವಭಕ್ತನಾಗಿ ನಿಮ್ಮ ಪ್ರಮಥರಾಣೆ. ಬಾರದಿದ್ದರೆ ನಿಮ್ಮಾಣೆ. ಇದು ಕಾರಣ ಕೂಡಲಸಂಗಮದೇವಾ, ನೀವು ಬರಿಸಿದ ಭವಾಂತರಗಳಲ್ಲಿ ನಾನು ಬರುತಿರ್ದೆನಯ್ಯಾ. (ಪಿ. ಜ್ಞಾ. ೩)

ಈ ಜನ್ಮದಲ್ಲಿಯಾದರೂ ಒಂದು ಅರೆಕ್ಷಣ ಆತನು ಭವಿಯಾಗಿರಲಿಲ್ಲ. ಯಾಕೆಂದರೆ, ಜನಿಸಿದಾಗಳೆ ಸಂಗಮೇಶ್ವರನೆನಗೆ ಸದ್ಗುರುವಾಗಿ ಬೋಧಿಸಿ ವಿನುತಶೈವಾಚಾರ ಮಾರ್ಗದೊಳಿರಿಸಿ ಸಲಹಿದನು.

ಎಂಬ ಭೀಮಕವಿಯ ಉಕ್ತಿಯಂತೆ ಬಸವನಿಗೆ ಅರ್ಧೋದಯದಲ್ಲಿ ಸಂಗಮೇಶ್ವರ ಗುರುವು ಜಂಗಮವಾಗಿ ಬಂದು ವೀರಶೈವ ದೀಕ್ಷೆಯನ್ನು ಕೊಟ್ಟದ್ದರಿಂದ ಬಸವನಿಗೆ ಬ್ರಾಹ್ಮಣ್ಯವೆಂದೂ ಅಂಟಲಿಲ್ಲ. ಈ ಮಾತು ಬಸವನು ೮ ವರ್ಷದವನಾದಾಗ ಅವನ ತಂದೆಯು ಬ್ರಾಹ್ಮಣರ ಪದ್ಧತಿಯ ಪ್ರಕಾರ ಮೌಂಜೀ ಬಂಧನ ಸಮಾರಂಭವನ್ನು ಹೂಡಿದ್ದು ನೋಡಿ, ತನ್ನ ತಂದೆಯೆನಿಸಿದ ಮಾದರಸಗೆ ಆಡಿದ ನುಡಿಯಿಂದ ಸ್ಪಷ್ಟವಾಗುತ್ತದೆ. ಭೀಮಕವಿಯು ಬಸವಪುರಾಣದಲ್ಲಿ

> ಸಾರಸಂಸಾರ ದ್ವಿಜತ್ವವ । ಪಾರಪತಿತವಲಾಸದಮಳಾ ।
> ಚಾರಸದ್ಗುರುವಿನ ಕರಾಬ್ಜದಿ ಜನ್ಮನಾದಂಗೆ ॥
> ಧಾರುಣೀ ಸುರಜನ್ಮಕರ್ಮಂ । ಕ್ರೂರಕರ್ಮವಲಾಸುಗುರುಭಜ ।
> ನಾರತಂಗಗ್ನಿಗೆ ಹವಿಯನಿಕ್ಕಿದೊಡೆ ದೋಷವಲ ॥ (೩-೪೫)

ಅಂದರೆ ನಿರ್ಮಲವಾದ ವೀರಶೈವ ಸದ್ಗುರುವಿನ ಕರಕಮಲದಲ್ಲಿ ಜನಿಸಿದವರಿಗೆ, ಕೇವಲ ಸಂಸಾರಮಗ್ನವಾದ ಬ್ರಾಹ್ಮಣ್ಯವು ಪಾಪಮಯವಾದುದಲ್ಲವೇ? ಬ್ರಾಹ್ಮಣರು ಮಾಡತಕ್ಕ ಯಜ್ಞಯಾಗಾದಿ ಕರ್ಮಗಳು ಹಿಂಸಾಮಯವಾದ್ದರಿಂದ ಕ್ರೂರಕರ್ಮಗಳಲ್ಲವೇ? ಸದ್ಗುರು ಭಜನೆಯಲ್ಲಿ ಆಸಕ್ತನಾದ ಗುರುಲಿಂಗಜಂಗಮಾರ್ಚನೆಯಲ್ಲಿ ರತನಾದ ವೀರಶೈವನು ಅಗ್ನಿಯಲ್ಲಿ ಹವಿಸ್ಸನ್ನು ಹಾಕುವದು ದೋಷವಲ್ಲವೇ?

ಮತ್ತಲ್ಲದೆ, ಲಿಂಗಧಾರಣ ದೀಕ್ಷೆಯಿಂದ ಪೂರ್ವಜನ್ಮವಳಿವ ವೀರಶೈವನು ತನ್ನ ಪರಮಗುರುವಿನ ಪಾದವನ್ನು ನಂಬಿದವನಾಗಿ ದುಷ್ಟರಾದ ನರರಿಗೆರಗುವದು ನರಕವಲ್ಲವೇ? "ಪರಮಗುರುಪದಮಂಪಿಡಿದು ನರಕವಲ್ಲೈ ಪೂರ್ವಭವಸಂಸ್ಕಾರ ರಹಿತಂಗೆ ॥ (೩—೪೬)" ಒಮ್ಮೆ ಕರ್ಮಪಾಶವನ್ನು ಸಂಪೂರ್ಣವಾಗಿ ಹರಿದೊಗೆದವನು ಪುನಃ ಯಜ್ಞೋಪವೀತವೆಂಬ ದುಷ್ಕರ್ಮರೂಪವಾದ ರಜ್ಜುವನ್ನು ಧರಿಸುವದು ಅತ್ಯಂತ ಕರ್ಮದ್ಯೋತಕವಲ್ಲವೇ? ಶಿವಧರ್ಮ ಮರ್ಮಜ್ಞರು ಇಂತಹ ಚರ್ಮಮುದ್ರೆಗಳನೆಂದೂ ಧರಿಸರು. ಅವರು ಯಾವಾಗಲು ನಿರ್ಮಲವಾದ ಭಸ್ಮ ರುದ್ರಾಕ್ಷೆ ಮೊದಲಾದವುಗಳನ್ನೇ ಧರಿಸುವರು. (ಕರ್ಮಪಾಶವನುರೆ ಪರಿದು ಅಧರ್ಮಜಾತವಲ ॥ (೮೪—೩) )

ಮತ್ತಲ್ಲದೆ, ಜಾತಿಗೋತ್ರಕ್ಕೆ ಮೀರಿದ ಗುರುವಿನಿಂದ ಹುಟ್ಟಿದ ವೀರಶೈವನು ಅನೇಕ ಜಾತಿಗೋತ್ರದಿಂದ ಕೂಡಿದ ದುಷ್ಕ್ರಿಯಗಳಿಗೆ ಆಶ್ರ

ಯನು ಹೇಗಾದನು? (ಜಾತಿಗೋತ್ರಾತೀತ ನೀನೆಂತು ಮಾಡಿದಪೆ ॥೫೦॥) ಕುಲಗೋತ್ರಗಳಿಲ್ಲದ ಶಿವನ ಭಕ್ತರಿಗೆ ಆ ಯಾವ ಕುಲವನ್ನು ಹೇಳಲಿಕ್ಕಾಗ್ತಿದೀತು? ಜಾತಿ ಬ್ರಾಹ್ಮಣ್ಯಕ್ಕೆ ಅವರನ್ನು ಹೇಗೆ ಹೊಂದಿಸುವಿ? (ಅಕುಲಭವನ ಭಕ್ತತತಿಗೆ ೫೧) ಆದ್ದರಿಂದ ಹೀನವಾದ ಬ್ರಾಹ್ಮಣ ದರ್ಶನವು (ಮತವು) ಬೇರೆ, ಶಿವಭಕ್ತಿಯ ಮಾರ್ಗವು ಬೇರೆ. ಇವೆರಡನ್ನೂ (ಲಿಂಗೀಬ್ರಾಹ್ಮಣ-ವೀರಶೈವ ಬ್ರಾಹ್ಮಣವೆಂಬುದಾಗಿ) ನೀನು ಕೂಡಿ ಉಚ್ಚರಿಸಬೇಡ. ಬ್ರಾಹ್ಮಣರ ದೈವವು ಬೇರೆ, ಮಂತ್ರವು ಬೇರೆ, ಗುರುವು ಬೇರೆ, ವೇಷ ಬೇರೆ, ಧ್ಯಾನಕ್ರಿಯಾಚಾರಗಳೂ ಬೇರೆಯಾಗಿವೆ. (ತೋರ ಪಟ್ಟಾ ಬ್ರಾಹ್ಮ್ಯ ವೆಂಬುದು ಬೇರೆ ೬೨) ಆದ್ದರಿಂದ ವೀರಶೈವ ಭಕ್ತಿ ಮಾರ್ಗಕ್ಕೆ ಬ್ರಾಹ್ಮಣ್ಯವನ್ನು ತೊಡಕಿಸಬೇಡ. (ತೊಳಸದಿರು ಬ್ರಾಹ್ಮ್ಯವನು ೬೧)

ವಿಚಾರ ಮಾಡಿದರೆ ಬ್ರಾಹ್ಮಣನಾದವನು ಹದಿನಾಲ್ಕು ಲೋಕಕ್ಕೊಡೆಯನಾದ ಶಿವನೊಬ್ಬನನ್ನೇ ಆರಾಧಿಸುವದಂ ಬಿಟ್ಟು ವಿಷ್ಣು ಬ್ರಹ್ಮ ಚಂದ್ರ ಸೂರ್ಯ ಅಗ್ನಿ ಮುಂತಾದ ಕಡಿಮೆ ತರಗತಿಯ ದೈವಗಳನ್ನು ಭಜಿಸಿ ಭವಕ್ಕೀಡಾಗುವನು. ಅದರಂತೆ ನೀನೂ ಆದೆ. ನಿನ್ನ ಮನೆ ದೇವರು ಚಂದ್ರಶೇಖರ ಸ್ವಾಮಿ ಇದ್ದು ಅನ್ಯದೇವರ ಸೇವೆಯನ್ನು ಮಾಡುವದು ಶಾಸ್ತ್ರ ಸಮ್ಮತವೇ? (ತಂದೆ ಮನೆದೈವಂ ನಿಮಗೆ ಇಂದುಶೇಖರನಿರೆ ೬೬) ಇಷ್ಟು ಹೇಳಿದಾಗ್ಯೂ ಕೂಡ ನಿನ್ನ ಸಂಶಯವು ತೊಲಗದಿದ್ದರೆ, ಕೇಳು ಹೇಳುತ್ತೇನೆ.— ವ್ರತಸ್ಥರಿಂದ ಶಿವಾಚಾರ ಶೀಲಸಂಪನ್ನರಾದ ಗೌತುಮ ಭೃಗುದಧೀಚಿವ್ಯಾಸ ಮೊದಲಾದ ಮುನಿಗಳ ಶಾಪಾಗ್ನಿಯಿಂದ ಸುಡಲ್ಪಟ್ಟ ನೀಚರಾದ ಭೂಸುರರಿಗೆ ಶಿವಭಕ್ತಿಯು ಎಂದಾದರೂ ಸಲುವಳಿಯಾಗುವದೇ? (ಕೇಳು ನೀನಂತಾಗಿ ನಿತುಮರಿ ೬೭) ನಾನು ಮೇಲೆ ಹೇಳಿದ್ದೆಲ್ಲ ಪ್ರಮಾಣವಿಲ್ಲದೆ ಆವೇಶದಿಂದ ಆಡಿದ್ದೇನೆಂತ ನೀನು ತಿಳಿಯಬೇಡ. ದುಷ್ಕರ್ಮಗಳಿಗಿಂಬಾದ ಬ್ರಾಹ್ಮಣ್ಯವು ಶಿವಭಕ್ತಿ ನಿಷ್ಠೆಯಲ್ಲಿ ಎಂದೂ ಪರಿಸಮಾಪ್ತಿಯನ್ನೈದದು. ನಾನು ಹೇಳಿದ್ದು ವೇದಾಗಮಂಗಳ ಆಧಾರದಿಂದ ಹೇಳಿದ್ದೇನೆ. ಅದು ವ್ಯರ್ಥ ವಾದವಲ್ಲ. (ವೇದಾಗಮಂಗಳ ಮೂಲವಲ್ಲದಿದು । ಪದಕವಾದವೆಂದು ಸುರದಿರಿ. ೬೮)

ದ್ವಿಜೋಪಿಶಂಕರ ದ್ವೇಷೀ ದಕ್ಷಬ್ರಹ್ಮೇವ ನಶ್ಯತೆ ।
ದುಷ್ಕುಲೋಪಿ ಶಿವೆ ಭಕ್ತೋ ಮುಚ್ಯತೆ ಕನ್ನಪಾಖ್ಯವತ್ ॥೨೭॥

ಧಾರ್ಯೋಸೂತ್ರಮಮೇವ ಭಸ್ಮ ಮಹತೀ ರುದ್ರಾಕ್ಷ ಮಾಲಾವಳೀ ।
ಜಾಪ್ಯೇಸ್ಪತ್ಯಧಿಕ ಷಡಕ್ಷರ ಮಹಾಮಂತ್ರಸ್ಸ ಮರ್ಚೇಸ್ವಪಿ ॥
ಶ್ರೇಷ್ಠಂ ಲಿಂಗಮಹರ್ನಿಶಂ ಪರಮಿದಂ ಪೇಯೋಪು ಪಾದೋದಕಂ ।
ಶಂಭೋಸ್ಸರ್ವ ಮತೊಗ್ರಹೀತ ಮಮಲೈರ್ಭಕ್ತೈರ್ವಿನೋಜ ದ್ವಿಷಃ॥೩೩॥

(ಹೀಗೆ ಷಡಕ್ಷರಿ ದೇವನು ಅಷ್ಟಾವರಣ ಮಹತ್ವವನ್ನೂ ದ್ವಿಜರಿಗೆ ಶಿವ ಭಕ್ತಿಯು ಎಂದೂ ಪ್ರಾಪ್ತವಾಗದೆಂಬ ಮಾತನ್ನೂ ಸ್ಪಷ್ಟವಾಗಿ ತನ್ನ ಭಕ್ತಾಧಿಕ್ಯದಲ್ಲಿ ಹೇಳಿರುವನು. ಈ ಪದಗಳ ಸಮರ್ಥನೆಗಾಗಿ ಅನೇಕ ಸಂಸ್ಕೃತ ಗ್ರಂಥಗಳ ಯುಕ್ತಿಯನ್ನು ಉಜ್ಜಯನೀ ಸಿಂಹಾಸನದ ಚರ ಪಟ್ಟಾಧ್ಯಕ್ಷರು ತಮ್ಮ ಟೀಕೆಯಲ್ಲಿ ಉದಾಹರಿಸಿರುವರು. ಬೇಕಾದವರು ನೋಡಬಹುದು.) ಆದ್ದರಿಂದ ಇನ್ನು ಮೇಲೆ ನೀನು ನನಗೆ ತಂದೆ ಯಲ್ಲ. ಕಕ್ಕಯ್ಯ ಚನ್ನಯ್ಯ ಚಿಕ್ಕಯ್ಯ ನಿಂಬಿಯಕ್ಕ ಮೊದಲಾದ ಶಿವ ಶರಣರೇ ನನಗೆ ತಂದೆತಾಯಿಗಳು ಬಂಧುಬಳಗದವರು. (ತಂದೆ ಕೇಳೀ ರೇಳು ಲೋಕದ ತಂದೆಯುಂ ೮೧—೮೨) ಇನ್ನು ಮೇಲೆ ಅನೇಕ ದೈವ ಗಳ ಪೂಜೆಯಿಂದೊಡಗೂಡಿದ ಜಾತಿಬ್ರಾಹ್ಮಣ್ಯಕ್ಕೆ ಆತುರಪಡದೆ, ಗುರು ಲಿಂಗಜಂಗಮ ಪೂಜೆಗಾಗಿ, ವೀರಶೈವೋತ್ಕರ್ಷಕ್ಕಾಗಿ, ಶಿವಶರಣರ ಪ್ರಸಾದಕ್ಕೂ ಅವರ ಶಿವಾನುಭವಕ್ಕೂ ಮತ್ತು ವೀರಶೈವ ಭಕ್ತಿಗಾಗಿ ಹಾರುವೆನಲ್ಲದೆ ಹಾರುವ ಕುಲಕ್ಕೆ ಹಾರುವನಲ್ಲವೆಂದು ಖಂಡಿತವಾಗಿ ನುಡಿದು ತಂದೆತಾಯಿಗಳ ಮನೆ ಬಿಟ್ಟು ತನ್ನ ಗುರುವಿನಾಶ್ರಮಕ್ಕೆ ಬಸ ವನು ಹೋಗುತ್ತಾನೆ.

"ಗುರು ಪದಾರ್ಚನೆಗೊಲಿದು ಹಾರುವ। ಪರಮ ಶೈವೋನ್ನತಿಗೆ ಹಾರುವ। ಶರಣ ಸಾನುಭವಕ್ಕೆ ಹಾರುವ ತತ್ಪ್ರಸಾದಕ್ಕೆ॥ ಹರಿದುಹಾರು ವವೀರಭಕ್ತಿಗೆ। ಪಿರಿದುಹಾರುವ ನಾನದೆಂದುಂ। ಬೆರಸಿಹಾರುವ ಕುಲಕ್ಕೆ ಹಾರುವನಲ್ಲ ನುಡಿಯದಿರು" (೩. ೮೦)

"ಸೆಟ್ಟಿ ಎಂಬೆನೆ ಸಿರಿಯಾಳನ? ಮಡಿವಾಳನೆಂಬೆನೆ ಮಾಚಯ್ಯನ? ಡೋಹರನೆಂಬೆನೆ ಕಕ್ಕಯ್ಯನ? ಮಾದರನೆಂಬೆನೆ ಚನ್ನಯ್ಯನ? ಆನು ಹಾರುವನೆಂದರೆ ಕೂಡಲ ಸಂಗಯ್ಯ ನಗುವನಯ್ಯ" (ಬ. ವ. ಭ. ಸ್ಥಲ ೯೫)

ಅಂದರೆ ಸಿರಿಯಾಳನು ವ್ಯವಹಾರ ಮಾಡುತ್ತಿದ್ದರಿಂದ ಅವನಿಗೆ ನಾನು ವೀರಶೈವ ವೈಶ್ಯನೆಂದೆನ್ನೆನು. ಮಾಚಿದೇವನಿಗೆ ಮಡಿವಾಳ

ಕಾಯಕದಿಂದ ವೀರಶೈವ ಅಗಸನೆನ್ನೆನು. ಡೋಹರ ಕಾಯಕದಿಂದ ಕಕ್ಕಯ್ಯಗೆ ವೀರಶೈವ ಡೋರನೆನ್ನೆನು. ಅದರಂತೆ ವೀರಶೈವ ಮಾದರ ಚನ್ನಯ್ಯನೆಂಡನ್ನೆ. ನಾನು ವೀರಶೈವ ಹಾರುವನೆಂದೆನ್ನೆ. ಇವರೆಲ್ಲರನ್ನೂ ಕೇವಲ ವೀರಶೈವರೆಂದೇ ಹೇಳುವೆನು. ಶರಣರಲ್ಲಿ ತಾರತಮ್ಯವನ್ನು ಮಾಡೆನು. ಅವರ ಕಾಯಕದಿಂದ ಜಾತಿಯನ್ನು ಕಟ್ಟೆನು.

"ದೇವ ಸಹಿತ ಭಕ್ತ ಮನೆಗೆ ಬಂದರೆ, ಕಾಯಕವಾವುದೆಂದು ಬೆಸಗೊಂಡೆನಾದರೆ, ನಿಮ್ಮಾಣೆ ನಿಮ್ಮ ಪುರಾತರಾಣೆ. ತಲೆ ದಂಡ ತಲೆ ದಂಡ. ಕೂಡಲ ಸಂಗಮದೇವಾ ಭಕ್ತರಲ್ಲಿ ಕುಲವನರಿಸಿದರೆ, ನಿಮ್ಮ ರಾಣೀವಾಸದಾಣೆ." (ಭ. ಮ. ೨೩)

"ದೇವ ದೇವ ಬಿನ್ನಪವ ಅವಧಾರು. ವಿಪ್ರವೊದಲು ಅಂತ್ಯಜ ಕಡೆಯಾಗಿ ಶಿವಭಕ್ತರಾದವನೆಲ್ಲರನೊಂದೇ ಎಂಬೆ. ಹಾರುವ ವೊದಲು ಶ್ವಪಚ ಕಡೆಯಾಗಿ ಭವಿಯಾದವರ ನೊಂದೇ ಎಂಬೆ. ಈ ನುಡಿದ ನುಡಿಯೊಳಗೆಳ್ಳ ಮೊನೆಯಷ್ಟು ಸಂದೇಹವುಳ್ಳರೆ, ಹಲ್ಲು ದೋರ ಮೂಗು ಕೊಯ್ಯ ಕೂಡಲ ಸಂಗಮದೇವಾ." (ಮ. ಭ. ೭)

"ಕಾಸಿ ಕಮ್ಮಾರನಾದ, ಬೀಸಿಮಡಿವಾಳನಾದ, ಹಾಸನಿಕ್ಕಿ ಸಾಲಿಗನಾದ, ವೇದವನೋದಿ ಹಾರುವನಾದ, ವರ್ಣದಲಿ ಜನಿಸಿದರುಂಟೇ ಜಗದೊಳಗೆ." (ಮ. ಜ್ಞಾ. ೬೩)

ಆದ್ದರಿಂದ ಕಾಯಕಗಳು ಅಂದರೆ ಜೀವನವೃತ್ತಿಗಳು ಜಾತಿಗಳಲ್ಲಿ ಬೇಕಾದವರು ಬೇಕಾದ ಕಾಯಕ ಮಾಡಿ ಜೀವಿಸಬಹುದು. ಹುಟ್ಟಿವಾಗ ಯಾರೂ ವರ್ಣದಲ್ಲಿ ಹುಟ್ಟುವದಿಲ್ಲ. ಅವರವರ ಗುಣಕರ್ಮ ವಿಭಾಗದಿಂದ ಪ್ರಪಂಚದಲ್ಲಿ ಜಾತಿಗಳನ್ನು ಲೌಕಿಕರು ಕಲ್ಪಿಸಿರುತ್ತಾರೆ. ಇವು ನಿತ್ಯವಾದವಲ್ಲ. ನೀಚವೃತ್ತಿಯುಳ್ಳವನು ತನ್ನ ನೀಚವೃತ್ತಿಯಂ ಬಿಟ್ಟು ಉತ್ತಮ ವೃತ್ತಿಯನ್ನು (ಉದಾ- ವೇದಾಧ್ಯಯನವನ್ನು) ಕೈಕೊಂಡಲ್ಲಿ ಅವನಿಗೆ ಉತ್ತಮ ಕುಲದವನೆನ್ನಬೇಕು. ಯಾವನೊಬ್ಬನ ಮನೋವಿಕಾಸಕ್ಕೆ ತಡೆಯೊಡ್ಡಬೇಕೆಂದು ಈಶ್ವರಸಂಕಲ್ಪವಿಲ್ಲ.

ಹೀಗೆ ಬಸವನ ಧೀರೋದಾರ ಭಾವನೆಗಳು ಆತನನ್ನು ಮಹಿಮಾ ಪುರುಷನಾಗಿ ಮಾಡಿದನು. ಬ್ರಾಹ್ಮಣ ಧರ್ಮಕ್ಕಿಂತಲೂ ವೀರಶೈವ ಮಾರ್ಗವು ಮಿಗಿಲಾದದ್ದೆಂದು ಜಗತ್ತಿನ ನಿದರ್ಶನಕ್ಕೆ ತರುವ

ಉದ್ದೇಶದಿಂದ ಬಸವನನ್ನು ಬ್ರಾಹ್ಮಣ ವಂಶದಲ್ಲಿ ಹುಟ್ಟಿಸಿ ಆತನ ಮಹಿಮೆಯನ್ನು ಶಿವನು ಬಾಲ್ಯದಲ್ಲಿಯೇ ಪ್ರಕಾಶಕ್ಕೆ ತಂದನು.

ವೇದ ಶಾಸ್ತ್ರ ಪುರಾಣ ಮೊದಲಾದವುಗಳಲ್ಲಿ ಶಿವನೊಬ್ಬನೇ ದೈವವೆಂದೂ, ಬಸವೇಶ್ವರನು ತನ್ನ ವಚನದಲ್ಲಿ ಉಪನಿಷದ್ವಾಕ್ಯಗಳನ್ನುದಾಹರಿಸಿ ಸಿದ್ಧಪಡಿಸಿರುವನು. ಈ ಮಾತಿನ ಸತ್ಯಕ್ಕಾಗಿ ಬಸವೇಶ್ವರ ವಚನದ ಮಹೇಶ್ವರ ಜ್ಞಾನಿಷ್ಠಲದ ೧೮ರಿಂದ ೧೦ ವಚನಗಳನ್ನು ನೋಡು. ಹೀಗೆ ಪರಶಿವನೊಬ್ಬನೇ ದೈವವೆಂದು ಸಿದ್ಧಾಂತಗೊಳಿಸಿ ವಿಷ್ಣು ಬ್ರಹ್ಮಾದಿಗಳು ಜೀವಕೋಟಿಯಲ್ಲಿ ಬರುವರಾದ್ದರಿಂದ ಮತ್ತು ಅವರು ಪರಶಿವನನ್ನು ಅರಿಯಲಾರದೆ ಹೋದ್ದರಿಂದ ಅನೇಕ ಕಷ್ಟನಷ್ಟಗಳಿಗೆ ಗುರಿಯಾಗಿ ಶಿವನಿಂದ ಭಂಗಬಟ್ಟು ಅವನ ಅನುಗ್ರಹಕ್ಕೆ ಪಾತ್ರರಾದರು. ಆದ್ದರಿಂದ ವಿಷ್ಣು ಬ್ರಹ್ಮಾದಿಗಳು ಶಿವಭಕ್ತರ ಉಪಾಸನೆಗೆ ಯೋಗ್ಯರಲ್ಲವೆಂದು ಬಸವನು ತನ್ನ ವಚನದ ಮಹೇಶ್ವರಜ್ಞಾನಿಷ್ಠಲದಲ್ಲಿ ೧೧ ರಿಂದ ೨೭ರಲ್ಲಿ ಸವಿಸ್ತಾರವಾಗಿ ಹೇಳಿರುವನು. ಆ ಮೇಲೆ ಮಣ್ಣು ದೈವ ಮರದೈವ ಜಲದೈವ ಯಲ್ಲವ್ವ ಕಾಳವ್ವ, ಕರೆವ್ವ, ಮಾಯವ್ವ ಅಂತರ ಬೆಂತರ ಮುಂತಾದ ನೀಚ ವಸ್ತುಗಳು ದೇವರೆಂದು ಕರೆಯುವದು ವೀರ ಶೈವನಿಗೆ ಅಧರ್ಮವಾಗಿದ್ದು ಅವನ್ನು ಸಂಪೂರ್ಣವಾಗಿ ತ್ಯಜಿಸಿ ಶಿವನೊಬ್ಬನಲ್ಲಿಯೇ ಸಂಪೂರ್ಣ ನಂಬಿಗೆ ಇಡಬೇಕೆಂದು ಒತ್ತಿ ಹೇಳಿದ್ದಾನೆ.

" ಹುಟ್ಟಿಸುವಾತ ಬ್ರಹ್ಮನೆಂಬರು ರಕ್ಷಿಸುವಾತ ವಿಷ್ಣುವೆಂಬರು ನೋಡಾ. ಬ್ರಹ್ಮ ತನ್ನ ಶಿರವನ್ನೇಕೆ ಹುಟ್ಟಿಸಲಾರ? ವಿಷ್ಣು ತನ್ನ ಮಗನನ್ನೇಕೆ (ಕಾಮನನ್ನು) ರಕ್ಷಿಸಲಾರ? ದುಷ್ಟನಿಗ್ರಹ ಶಿಷ್ಟಪರಿಪಾಲಕ ನಮ್ಮ ಕೂಡಲಸಂಗಮದೇವ. " (ಮ. ಜ್ಞಾ. ೨೧)

" ನದೈವಂ ಕೇಶವಾತ್ಪರಂ ಎಂದು ವೇದವ್ಯಾಸನು ಕಾಶೀ ವಿಶ್ವೇಶ್ವರನ ಸಮ್ಮುಖದಲ್ಲಿ ಕೈಯೆತ್ತಿ ನುಡಿಯಲು, ಆತನ ವಾಕ್‌ಸ್ತಂಭನ ಭುಜಸ್ತಂಭನವನ್ನು ನಂದಿಕೇಶ್ವರನು ಮಾಡಿದ್ದರಿಂದ, ಇದರ ಪರಿಹಾರಕ್ಕಾಗಿ ವೇದವ್ಯಾಸನು ವಿಷ್ಣುವನ್ನು ಮೊರೆಹೊಗಲು, ಆತನು ಬಂದು 'ಅಹೋ ವ್ಯಾಸಮತಿಭ್ರಷ್ಟ ಕಿಂದೋಷಂ ಮಮದೀಯತೆ। ಅಹಂತು ಜಗತ್ಕರ್ತಾ ಮಮಕರ್ತಾ ಮಹೇಶ್ವರಃ' ಎಂದರೆ ಎಲೈ ಮತಿಭ್ರಷ್ಟನಾದ ವ್ಯಾಸನೆ, ಸುಮ್ಮನೆ ನನಗೇಕೆ ದೋಷವನ್ನು ಕೊಡುತ್ತೀ? ನಾನು

ಸಮಸ್ತ ಜಗಕ್ಕೆ ಒಡೆಯನಾದರೂ ನನಗೆ ಒಡೆಯನು ಮಹೇಶ್ವರನು, ಎಂದು ಬುದ್ಧಿಯ ಮಾತು ಹೇಳಿದುದನ್ನು ಬ್ರಾಹ್ಮಣರು ಮರೆತು ಪುನಃ ಶಿವೇತರ ದೇವತೆಗಳನ್ನು ಭಜಿಸುವದರಿಂದ 'ಬಡ ಹಾರುವನೇಸು ಭಕ್ತನಾದರೆಯು ನೇಣಿನ ಹಂಗ ಬಿಡ' ನೆಂದು ಬಸವನು ಕನಿಕರದಿಂದ ನುಡಿದಿರುವನು. (೨೨)

"ಅಮೃತವ ಕಡೆವಲ್ಲಿ ವಿಷ ಹುಟ್ಟಿ ಸುಡುವಲ್ಲಿ, ದೇವರೆಂಬುವರೆತ್ತ ಹೋದಿರೋ ಏನೆಂಬಿರೋ? ಅಂದೊಮ್ಮೆ ಓಡಿಹೋಗಿ ಆ ಶಿವನ ಮೊರೆಯ ಹೊಗುವಂದು, ದೇವರೆಂಬುವರೆತ್ತ ಹೋದಿರೋ ಏನೆಂಬೆರೋ? ಕೂಡಲಸಂಗಯ್ಯ ದೇವರಿಗೆ ದೇವನು, ನೀವೆಲ್ಲ ಆಳೆಂಬುದನರಿಯಿರೊ?(೨೪)

"ವಿಷ್ಣು ಬಲ್ಲಿದನೆಂಬೆನೆ? ದಶಾವತಾರದಲ್ಲಿ ಭಂಗಬಟ್ಟುದಕ್ಕೆ ಕಡೆ ಇಲ್ಲ. ಬ್ರಹ್ಮ ಬಲ್ಲಿದನೆಂಬೆನೆ? ಶಿರ ಹೋಗಿ ನಾನಾ ವಿಧಿಗೊಳಗಾದ. ವೇದ ಬಲ್ಲಿತ್ತೆಂಬೆನೆ? ಶ್ರೀರುದ್ರರೂಪದಿಂದ ನಾನಾಮುಖದಲ್ಲಿ ಸ್ತುತಿಯಿಸಿತಲ್ಲದೆ ಲಿಂಗದ ನಿಲುಕಡೆಯ ಕಾಣದು" (೨೫)

ಆದ್ದರಿಂದ "ಮರೆಯಲಾಗದು ಹರಿಯ. ಮರೆಯಲಾಗದು ಬ್ರಹ್ಮನ. ಮರೆಯಲಾಗದು ತೆತ್ತೀಸ ಕೋಟಿ ದೇವರ್ಕಳ. ನಮ್ಮ ಕೂಡಲ ಸಂಗಮದೇವನ ಮರೆಯಬಹುದು. (೨೬)

ಅಂದರೆ ದಕ್ಷಯಾಗದಲ್ಲಿ ವೀರಭದ್ರನು ವಿಷ್ಣು, ಬ್ರಹ್ಮ, ಇಂದ್ರ, ಲಕ್ಷ್ಮೀ, ಸರಸ್ವತಿ ಮೊದಲಾದವರನ್ನು ಬಡಿವಲ್ಲಿ ವಿಷ ಹುಟ್ಟಿ ಸುಡುವಾಗ ದೇವಾ ನೀನೆ ರಕ್ಷಿಸೆಂದು ಮೊರೆ ಇಟ್ಟವರನ್ನು ನಾರಾಯಣನಾನಾಗಲಿ ಬ್ರಹ್ಮನಾಗಲಿ ಯಾರೂ ರಕ್ಷಿಸಲಾಗಲಿಲ್ಲ. ಆದ್ದರಿಂದ ನಾರಾಯಣ ಗಿರಾಯಣ ಬೊಮ್ಮ ಗಿಮ್ಮರನ್ನು ತ್ಯಜಿಸಿ ಕೇವಲ ದಯಾಘನನಾದ ಭಕ್ತವತ್ಸಲನಾದ ಕೂಡಲ ಸಂಗಮದೇವನೊಬ್ಬನನ್ನೇ ಮರೆಹೋಗಬೇಕೆಂದೂ ಲಿಂಗವಲ್ಲದೆ ಅನ್ಯದೈವಕ್ಕೆರಗಿದರೆ ಹೊಟ್ಟೆಕುಟ್ಟಿ ಕೈ ಹೊಟ್ಟಾದಂತಾಯಿತ್ತೆಂದೂ ಮಾನವರ ಮೇಲೆ ಅತ್ಯಂತ ಕರುಣಾರಸಪೂರಿತನಾಗಿ ಬುದ್ಧಿಯನ್ನು ಹೇಳಿರುವನು. (೨೭—೨೯)

ಮತ್ತೆ "ಮರನ ಗೋಟಿಗೆ ಬಪ್ಪಕಿರುಕುಳದೈವಕ್ಕೆ ಕುರಿಯನಿಕ್ಕಿ ಹೆನೆಂದು ನಲಿನಲಿದಾಡುವರು. ಕುರಿ ಸತ್ತು ಕಾವುದೆ ಹರ ಮುಳಿದವರ?

ಕುರಿಬೇಡ ಮರಿಬೇಡ. ಬರಿಯ ಪತ್ರೆಯ ತಂದು ಮರೆಯದೆ ಪೂಜಿಸು ನಮ್ಮ ಕೂಡಲ ಸಂಗಮದೇವನ. (೩೪)

ಇಂತಹ ಸಾವಿರ ಕಿರುಕುಳ ದೈವಕ್ಕೆ ನಡಕೊಳ್ಳುವದಕ್ಕಿಂತಲು ಶಿವನೊಬ್ಬಗೆ ಶಿರಣೆಂದರೆ ನೂರುಗಡಿಗೆಗಳನ್ನು ಒಡೆಯಲಿಕ್ಕೆ ಒಂದು ಬಡಿಗೆಯು ಸಾಕಾಗುವಂತೆ ಪಂಚಾಕ್ಷರೀ ಮಂತ್ರದಿಂದ ಸರ್ವಪೀಡೆಗಳೂ ಕಷ್ಟಗಳೂ ದೂರಾಗುವವು. ಮತ್ತೆ ಕೆಲವರು 'ಹರಿಹರರೊಂದೇ ಶಿವ ಮಯಂ ವಿಷ್ಣು ರ್ವಿಷ್ಣು ಮಯಂಶಿವಃ' ಎಂದು ಕೊರಚಾಡುವದು ಸಹ ಪಾಪಪ್ರದವಾಗಿದೆ ಎಂದು ಬಸವನು ಒತ್ತಿಹೇಳುತ್ತಾನೆ." (೪೦)

" ವಿಷ್ಣುವ ಪೂಜಿಸಿದ ಮುಡುಹ ಸುಡಿಸಿಕೊಂಬುದಕಂಡೆ. ಜಿನ್ನನ ಪೂಜಿಸಿ ಬತ್ತಲೆ ಇಪ್ಪುದುಕಂಡೆ. ಮೈಲಾರನ ಪೂಜಿಸಿ ನಾಯಾಗಿ ಬೊಗಳುವದ ಕಂಡೆ. ನಮ್ಮ ಕೂಡಲ ಸಂಗನ ಶರಣರ ಪೂಜಿಸಿ ದೇವ ಭಕ್ತರೆನಿಸಿಕೊಂಬುದ ಕಂಡೆ." (೪೧)

ಅಂದರೆ ನಾಯಾಗಿ ಬೊಗಳೆಂದೂ ಬತ್ತಲೆಯಾಗಿರೆಂದೂ ಭುಜ ಮೊದಲಾದ ಸ್ಥಾನವನ್ನು ಸುಡಿಸಿಕೊಳ್ಳಿರಿ ಅಂದರೆ ತಪ್ತಮುದ್ರೆಗಳನ್ನು ಧರಿಸಿರಿ ಎಂದು ತನ್ನ ಭಕ್ತರಿಗೆ ಹೇಳುವ ದೈವವು ದೇವರಾಗಬಲ್ಲುದೇ? ಆದರೆ ವೀರಶೈವ ಶರಣರನ್ನು ಪೂಜಿಸಿ ದೇವಭಕ್ತರೆಂಬ ಉಚ್ಚಪದವಿಯು ಭಕ್ತರಿಗೆ ಪ್ರಾಪ್ತವಾಯಿತೆಂದು ಬಸವನು ನುಡಿದಿರುವನು.

ಶಿವನೊಬ್ಬನೇ ದೇವನು. ಆತನೇ ಜಗತ್ತಿನ ಉತ್ಪತ್ತಿ ಸ್ಥಿತಿ ಲಯಂಗಳಿಗೆ ಕಾರಣನು. ಆತನೊಬ್ಬನೇ ಮೋಕ್ಷಕ್ಕೆ ಅಧಿಪತಿಯೆಂದು ವೇದಾಗಮಾದಿಗಳು ಹೇಳುತ್ತಿದ್ದರೂ ಅವುಗಳ ರಹಸ್ಯವು ತಿಳಿಯದೆ ಅನ್ಯ ದೇವತೆಗಳನ್ನು ಆರಾಧಿಸುವರಿಗೆ ಶಿವದ್ರೋಹವೆಂಬ ಪಾತಕವು ತಟ್ಟುವದು. ಅಂಥವರು ಅತ್ಯಂತ ಕೃತಘ್ನರೆನ್ನಲಿಕ್ಕೆ ಅಡ್ಡಿಯಿಲ್ಲೆಂದು ಬಸವನು ಕೆಳಗಿನ ವಚನವನ್ನು ನುಡಿದಿರುವನು.

" ಗುಡಿಯೊಳಗಿರ್ದು ಗುಡಿಯ (ಡೇರೇದ) ನೇಣ (ಹಗ್ಗ) ಕೊಯ್ವರೆ ಗುಡಿಯ ದಡಿ (ಕಲ್ಲು) ಬಿದ್ದು ಹಲ್ಲು ಹೋಹುದು ನೋಡಾ. ಪಿಂಡ ವಿಗೀಶ್ವರನ ಗರ್ಭವಾಸದೊಳಗಿರ್ದು ನುಡಿವರು ಮತ್ತೊಂದು ದೈವವುಂಟೆಂದು! ತುಡುಗುಣಿ ನಾಯ ಪಿಡಿತಂದು ಸಾಕಿದರೆ, ತನ್ನೊಡೆಯಂಗೆ ಬೊಗಳುವಂತೆ ಕಾಣಾ, ಕೂಡಲ ಸಂಗಮದೇವಾ." (೩೮)

"ಅಸಮಾಕ್ಷಲಿಂಗಕ್ಕೆ ಅನ್ಯದೈವ ಸರಿ ಎಂಬವನ ಬಾಯಲ್ಲಿ ಮಸೆದ ಕೂರಲಗ ನಿಕ್ಕದೆ ಮಾಣ್ಬನೇ? ಹುಸಿಯಾಗಿ ನುಡಿವವನ ನಾಯಾಗಿ ಬೊಗಳಿಸನೆ? ಗುರು ಲಘುವೆನ್ನುವವನ (ಹಿರಿಯನನ್ನು ಕಿರಿಯನಾಗಿ ತಿಳಿಯುವವನ) ಬಾಯಲ್ಲಿ ಮೆಟ್ಟಿ ಹುಡಿಯ ಹೊಯ್ಯದೇ ಮಾಬನೇ" (೩೯)

## ಬ್ರಾಹ್ಮಣನ ದೇವರಾರು?

ದೇವತೆಗಳಲ್ಲಿ ಶಿವನೇ ಮಹಾ ಬ್ರಾಹ್ಮಣನು ವಿಷ್ಣುವು ಕ್ಷತ್ರಿಯನು ಬ್ರಹ್ಮನು ವೈಶ್ಯನು ಇಂದ್ರಾದಿಗಳೆಲ್ಲ ಶೂದ್ರರು ಎಂದು ಶಾಸ್ತ್ರವಚನವುಂಟು. ನಾಲ್ಕು ವರ್ಣದವರಲ್ಲಿ ಅಗ್ರಜರೆನಿಸಿಕೊಳ್ಳುವ ಬ್ರಾಹ್ಮಣರು ದೇವತೆಗಳಲ್ಲಿ ಮಹಾಬ್ರಾಹ್ಮಣನೆನಿಸುವ ಈಶಾನಮೂರ್ತಿಯನ್ನು (ಶಿವನೊಬ್ಬನನ್ನೇ) ಮಾತ್ರ ಆರಾಧಿಸತಕ್ಕದ್ದು ವಿಹಿತವು. ಆದರೆ ಜಾತಿಬ್ರಾಹ್ಮಣರು ಕ್ಷತ್ರಿಯನಾದ ವಿಷ್ಣುವನ್ನು ಶೂದ್ರನಾದ ಇಂದ್ರ ಮತ್ತು ವಾಯು (ಹಣಮಂತ) ಇವರನ್ನು ಭಕ್ತಿಯಿಂದ ಪೂಜಿಸುತ್ತಾರೆ. ಮತ್ತು ವೇದಾಗಮಾದಿಗಳೆಲ್ಲ ಇವರನ್ನೇ ಕುರಿತು ಹೊಗಳುತ್ತಿವೆಂದೂ ಬಡಬಡಿಸುತ್ತಾರೆ. ಇದರಿಂದ ವಿಪ್ರರಿಗೆ ಶಾಸ್ತ್ರಗಳು ಚನ್ನಾಗಿ ಹರಿಯಲಿಲ್ಲೆಂದು ಹೇಳಬೇಕಾಗುತ್ತದೆ.

"ಏನಯ್ಯಾ ವಿಪ್ರರು ನುಡಿದಂತೆ ನಡೆಯರು. ಇದೆಂತಯ್ಯಾ? ತಮಗೊಂದು ಬಟ್ಟೆ ಶಾಸ್ತ್ರಕ್ಕೊಂದು ಬಟ್ಟೆ" ಮ. ಜ್ಞಾ. ೪೮ ವೇದ ಶಾಸ್ತ್ರಾಗಮಂಗಳಲ್ಲಿ ಹೇಳಿದ್ದು ಬೇರೆ ಮಾರ್ಗ. ಬ್ರಾಹ್ಮಣರು ತಿಳಕೊಂಡದ್ದು ಬೇರೆ ಮಾರ್ಗ. ವೇದಂಗಳೆಲ್ಲ ಭಸ್ಮ ರುದ್ರಾಕ್ಷ ಧಾರಣವನ್ನೂ ಪಂಚಾಕ್ಷರೀ ಷಡಕ್ಷರೀ ಮಂತ್ರಜಪವನ್ನೂ ಹೇಳುತ್ತಿದ್ದು ಇವುಗಳಿಂದ ಶಿವಾಧಿಕ್ಯವಿಡಿದಾಚರಿಸಿ ಶಿವನ ಕೃಪೆಯನ್ನು ಪಡೆಯಿರೆಂದು ಹೇಳುವವು. ಅದನ್ನು ಬಿಟ್ಟು ಬ್ರಾಹ್ಮಣರು ಭ್ರಮಿತರಾಗಿ ಬತ್ತುವ ಜಲ ಒಣಗುವ ಮರ ಸತ್ತುಹುಟ್ಟುವ ನಾರಾಯಣನೇ ದೇವರೆಂದು ತಿಳುಕೊಂಡು ಆಚರಿಸುವರು.

"ವೇದಾಃ ಸಮಸ್ತಾ ಅಪಿ ಮುಖ್ಯ ವೃತ್ತ್ಯಾಭವಂತಮೇವ (ಶಿವನನ್ನೇ) ಪ್ರತಿಪಾದಯಂತಿ। ಕರ್ತಾರಮೇಕಂ ಜಗತಾಂ ತಥಾಪಿ ಮಾಯಾವೃತಾಸ್ತ್ವಾಂನಹಿ ಜಾನತೇನರಃ॥

ಮಂತ್ರಾರ್ಥವಾದವಿಧಿಭಿರ್ಬಹುಧಾ ವಿಭಕ್ತೋಯಶ್ಶಬ್ದರಾಶಿರನಪೇಕ್ಷತಯಾಪ್ರಮಾಣಮ್ । ಸೋಯಂ ವಿಮತ್ಸರವಿಮೃಷ್ಟ ಪದಾರ್ಥ ತತ್ತ್ವೋವೇದಃಪ್ರಕಾಶಯತಿ ಕೇವಲಮೀಶ್ವರಂತ್ವಾಮ್ ॥೩॥

ದೇವತ್ವದೇಕ ವಿಷಯಾಣಿ ನಮಾಂಸಿ ಪುಂಸಾಂ ಯಸ್ಮೈನಮಃ ಶ್ರುತಿಬಲಾದ ವಧಾರಯಾಮಃ । ದೇವಾಂತರೇಷು ವಿಹಿತಾನ್ಯಪಿತಾನ್ಯಮೂನಿ ಸ್ರೋತಾಂಸಿ ಸಾಗರ ಇವತ್ವಯಿ ಸಂಪತಂತಿ ॥೧೦॥

(ಹರದತ್ತಾಚಾರ್ಯಕೃತ ಚತುರ್ವೇದ ತಾತ್ಪರ್ಯಸಂಗ್ರಹೆ)

ಹೊಲೆಯೊಳಗೆ ಹುಟ್ಟಿ ಕುಲವನರಸುವೆ (ಸೂಕ್ಷ್ಮಾಗಮ ೧೦-೨೬) ಎಲವೋ ಮಾತಂಗಿಯ ಮಗ ನೀನು. ಸತ್ತುದನೆಳೆವನೆತ್ತಣ ಹೊಲೆಯ? ಹೋತ ತಂದು ನೀವು ಕೊಲು ವಿರಿ ಶಾಸ್ತ್ರವೆಂಬುದು ಹೋತಿಂಗೆ ಮಾರಿ ವೇದವೆಂಬುದು ನಿಮಗೆ ತಿಳಿಯದು (೪೯)

ವಿಪ್ರರಿಗೆ ಶಾಸ್ತ್ರಗಳ ಇಂಗಿತವು ಚನ್ನಾಗಿ ಹೊಳೆಯುದ್ದರಿಂದ ಅವರು ಬಾಹ್ಯಾರ್ಥವನ್ನೇ ನಿಜವೆಂದು ಗ್ರಹಿಸಿ ಅವುಗಳ ತಾತ್ಪರ್ಯವನ್ನು ತಿಳಕೊಳ್ಳಲು ಯತ್ನ ಮಾಡಲಿಲ್ಲ ಪರಮೇಶ್ವರನು ಸತ್ಯಸಂಕಲ್ಪನೂ, ದಯಾಘನನೂ ವಿಶ್ವಾಧಿಪತಿಯೂ, ಭಕ್ತವತ್ಸಲನೂ ಇದ್ದು ಆತನೆಂದಾದರೂ ಹೋತನ್ನು ಕೊಂದು ತನಗರ್ಪಿಸೆಂದು ತನ್ನ ಭಕ್ತರಿಗೆ ಉಪದೇಶ ಮಾಡಬಹುದೇ? ವಿಶ್ವಾತ್ಮನಾದ ದೇವನು ಹೀಗೆಂದೂ ಉಪದೇಶ ಮಾಡನು. ಹಾಗಾದರೆ ವಿಪ್ರರು ವೇದಾರ್ಥವನ್ನು ವಿಪರೀತವಾಗಿ ತಿಳುಕೊಂಡರೆಂದು ಬಸವನು ತನ್ನ ವಚನದಲ್ಲಿ ಆಡಿದ್ದು ಯಥಾರ್ಥವೆಂದೆನ್ನಬಹುದು.

ಬ್ರಾಹ್ಮಣರಿಗೆ ಶಾಸ್ತ್ರಾರ್ಥವು ನಿಜವಾಗಿ ಹೊಳೆಯಲಿಲ್ಲೆಂಬದನ್ನು ಇನ್ನೊಂದು ದೃಷ್ಟಾಂತದಿಂದ ಪುಷ್ಟೀಕರಿಸುವೆನು. ಗಾಯತ್ರೀ ಮಂತ್ರವು ಶಿವಪರತ್ವ ನಿರೂಪಣೆಯುಳ್ಳದ್ದೆಂದು ಶಾಸ್ತ್ರಗಳು ಹೇಳುತ್ತಿರಲು ವಿಪ್ರರು ಸೂರ್ಯಪರವಾಗಿದೆ ಎಂದು ತಿಳಿದು ತಮ್ಮ ಸಂಧ್ಯಾದಿ ಕರ್ಮವನ್ನು ಮಾಡಹತ್ತಿದರು. ಆದರೆ ಗಾಯತ್ರೀ ಮಂತ್ರವು ಸೂರ್ಯಮಂಡಲಾಂತರವರ್ತಿಯಾದ ಶಿವನನ್ನು ಬೋಧಿಸುತ್ತದೆಂದು ಅಪ್ಪಯ್ಯದೀಕ್ಷಿತರು ತಮ್ಮ ಅದ್ವೈತ ಮಂಜರಿಯ ೫೫ನೆಯ ಪದದಲ್ಲಿ ವಿಶದೀಕರಿಸಿದ್ದಾರೆ.

"ದ್ವಿಜಾನಾಂ ಗಾಯತ್ರಿ ಖಿಮಿ ಪರಮುಪಾಸ್ಯಾನಿಯಮಿತಾ ಪ್ರಸಿದ್ಧಾ ತಸ್ಯಾಶ್ಚತ್ವಮಸಿ ಪರಮಂ ದೈವತಮಿತಿ। ಅಕುರ್ವಾಣಸ್ಯಾತಸ್ತವ ಚರಣಾ ಸೇವಾಂ ದ್ವಿಜಪಶೋಃ ಅವಸ್ತ್ರೋಽಲಂಕಾರಸ್ಸಕಲಮಪಿ ಸತ್ಕರ್ಮ ಚರಿತವಮ್ ॥೫೫॥

ಆದಿತ್ಯಪುರಾಣದಲ್ಲಿ ರವಿಯು ಹೇಳಿದ್ದನ್ನು ತಮ್ಮ ಟಿಪ್ಪಣಿಯಲ್ಲಿ ಹೀಗೆ ಕೊಟ್ಟಿದ್ದಾರೆ "ಗಾಯತ್ರ್ಯಾಶ್ಶಿವಮಂತ್ರತ್ವ ಮಿತ್ಥಂ ನ್ಯಾಯೋಪ ಬೃಂಹಿತಮ್ । ತತೋದರ್ಭಾಸನೆ ಸ್ಥಿತ್ವಾ ಗಾಯತ್ರೀಂ ಪ್ರಜಪೇತ್ ದ್ವಿಜಃ। ಗಾಯತ್ರ್ಯಾಃ ಪರಮಂ ತತ್ವಂ ದೇವದೇವೋ ಮಹೇಶ್ವರಃ। ಇತಿ ಜ್ಞಾತ್ವಾ ಜಪೇತ್ ವಿದ್ವಾನ್ ಗಾಯತ್ರ್ಯಾಃ ಫಲಮಶ್ನುತೆ॥ ಯೊ ಅನ್ಯಥಾಹಿಮನುತೆ ಗಾಯತ್ರೀಂ ಶಿವರೂಪಿಣೀಮ್ । ಸಪಚ್ಯತೆ ಮಹಾ ಘೋರೆ ನರಕೆ ಕಲ್ಪಸಂಘಯಾ॥ (ಪಾನು ೧೨೬)

ಅಪ್ಪಯ್ಯ ದೀಕ್ಷಿತರ ಪೂರ್ವದಲ್ಲಿಯೇ ಬಸವೇಶ್ವರನು ವಿಪ್ರರು ಶಾಸ್ತ್ರವಚನಕ್ಕೆ ಅಂದರೆ ಸದ್ಯಕ್ಕೆ ಗಾಯತ್ರೀ ಮಂತ್ರಕ್ಕೆ ಮಾಡಿದ ಅಪಾರ್ಥವನ್ನು ಮನಗಂಡು ಹೀಗೆ ನಡಿದಿರುವನು.

"ವೇದವನೋದಿದ ವಿಪ್ರರು ಹೊನಲಲ್ಲಿ ಹೋದ ಕೇಡನೋಡಿರೇ" ಭರ್ಗೋದೇವಸ್ಯ ಧೀಮಹಿ ಎಂಬರು. ಒಬ್ಬರಿಗಾಗಿ ವಿಚಾರವಿಲ್ಲ ನೋಡಿರೇ ಕೂಡಲಸಂಗಮದೇವಾ (ಮ. ಜ್ಞಾ. ೫೯)

"ಪ್ರಣಮವನುಚ್ಚರಿಸುವ ಅಪ್ರಮಾಣಿಕರೆಲ್ಲರು ಪ್ರಣವ ಮಂತ್ರಾರ್ಥವನೋದಿ ಮಂತ್ರಾರ್ಥವನರಿಯರು. (೭೧)

ಮತ್ತಲ್ಲದೆ "ಗುರುರಗ್ನಿರ್ದ್ವಿಜಾತೀನಾಮ್" ಈ ವಚನವು ಜಾತಿ ಬ್ರಾಹ್ಮಣರು ಪ್ರತಿಪಾದಿಸುವಂತೆ ಕೇವಲ ಅಗ್ನಿಯನ್ನೇ ಕುರಿತು ಹೇಳುವದಿಲ್ಲ. ಅಗ್ನ್ಯಂತರ್ಯಾಮಿಯಾದ ಶಿವನನ್ನು ಕುರಿತು ಬೋಧಿಸುತ್ತಿದೆ. ವಿಶೇಷಾತ್ ಬ್ರಾಹ್ಮಣೈರಗ್ನ್ಯಂತರ್ಯಾಮೀ ಶಿವಸ್ಸಮಾರಾಧನೀಯ ಇತಿ ಭಾವಃ ಅತಏವ ಸ್ಮೃತಿಃ "ತಸ್ಮಾದಗ್ನಿಮುಖೆಯುಸ್ತುದತ್ತಂಸ್ಯಾ ದ್ಯೇನ ಕೇನಚಿತ್। ತತ್ಸರ್ವಂ ರುದ್ರಮುದ್ದಿಶ್ಯಸ್ಯಾನ್ನಾತ್ರಸಂಶಯಃ" ಹೀಗೆ ನಿಜಸ್ಥಿತಿ ಇದ್ದು ಅಪ್ಪಯ್ಯ ದೀಕ್ಷಿತರು ದ್ವಿಜನಿಗೆ ಶಿವಭಜನೆಯೇ ಆವಶ್ಯಕವೆಂದು ಕೆಳಗಿನ ಪದಗಳಲ್ಲಿ ಪ್ರಸ್ಥಾಪಿಸಿದ್ದಾರೆ.

ಯದಗ್ನೌ ವಿಪ್ರಾಣಾಮುಪದಿ ಶತಿದೇವಂ ಯದಪಿತೆ ತದಂತರ್ಯಾ ಮಿತ್ವಂ ತರುಣಶಶಿಭೂಷ ಪ್ರಥಯತಿ । ಶೃತಿಸ್ಮೃತ್ಯಾವ್ನಾತಂ ವಚನನಿಕುರುಂಬಂ ದ್ವಿವಿಧಮುಪ್ಯದಸ್ಸಂಭೂಯತ್ವಾಂ ವವತಿ ಕುಲದೈವಂ ಗಿರಿಶನಃ॥೫೬॥

ಗತಿಸ್ತ್ವಂ ಪ್ರಪ್ತಾನಾಂ ಪುರಹರಜನಿಂ ಬ್ರಾಹ್ಮಣ ಕುಲೆ ವಿಶೇಷಾ ದೇತಸ್ಮಿನ್ ಯುಗ ಇತಿ ಪುರಾಣೇಷು ವಿದಿತಂ । ಅತಸ್ತ್ಯಕ್ತ್ವೇವತ್ವಂ ಜಡಮತಿ ರುಪಾಸ್ತೆಯುಮುಪರಂಸ ವಿಪ್ರಃ ಪಾಪೀಯಾನ್ ಭವತಮುಪಿದೇವಂ ನಲಭತೆ ॥೫೭॥

ಅಂದರೆ ಬ್ರಾಹ್ಮಣರಿಗೆ ಶಿವನೇ ಕುಲದೈವ ಮನೆದೈವವಾಗಿರಲು ಅವನನ್ನು ತ್ಯಜಿಸಿ ಅನ್ಯ ದೇವತಾರಾಧನೆಯಲ್ಲಿ ಮಗ್ನರಾದವರಿಗೆ ಪಾಪ ಫಲಪ್ರಾಪ್ತಿಯೆಂದು ಹೇಳಿದೆ. 'ವಿಶೇಷಾತ್ ಬ್ರಾಹ್ಮಣೊ ರುದ್ರಮೀಶಾನಂ ಶರಣಂ ವ್ರಜೇತ್' ಅಂದರೆ ಮುಖ್ಯವಾಗಿ ಬ್ರಾಹ್ಮಣರು ಈಶಾನ ರುದ್ರ ನಾಮಕ ಶಿವನನ್ನು ಆಶ್ರಯಿಸಬೇಕು. ಹೀಗೆ ತ್ರಿದಶವಂದಿತನಾದ ಶಿವನನ್ನು ಬಿಟ್ಟು ಅನ್ಯದೇವತೆಗಳನ್ನು ಆರಾಧಿಸುವ ಬ್ರಾಹ್ಮಣನ ದಾನ ಜಪತಪ ಜೀವಿತವೆಲ್ಲ ವ್ಯರ್ಥವೆಂದು ಶಾಸ್ತ್ರವಚನವುಂಟು. "ನಾರ್ಚಯಂತೀಹ ಯೆ ರುದ್ರಂ ಶಿವಂ ತ್ರಿದಶವಂದಿತಮ್ । ತೇಷಾಂ ದಾನಂ ತಪೊಯಜ್ಞೊ ವೃಥಾ ಜೀವಿತಮೇವಚ ॥ "

ಅಂದ ಮೇಲೆ ಬ್ರಾಹ್ಮಣರಾದವರು ತಮ್ಮ ಆರಾಧ್ಯ ದೇವತೆಯಾದ ಶಿವನನ್ನು ಬಿಟ್ಟು ಅನ್ಯಕಡಿಮೆತರಗತಿಯ ದೈವಂಗಳನ್ನು ಪೂಜಿಸತಕ್ಕವರು ಬ್ರಾಹ್ಮಣರು ಹೇಗಾದರು? ಇಂತಹ ಜಡಮತಿಗಳು ಅಪ್ಪಯ್ಯ ದೀಕ್ಷಿತರ ೫೭ ನೆಯ ಪದದಲ್ಲಿ ಉಕ್ತವಾದಂತೆ ಪಾಪಿಗಳೆಂದು ಹೇಳಬೇಕಾಗುವದು.

" ತಂದೇವೇಷು ಬ್ರಾಹ್ಮಣೋಽಸ್ಯಹಂ ಮನುಷ್ಯೇಷು ಬ್ರಾಹ್ಮಣೊವ್ವೈ ಬ್ರಾಹ್ಮಣ ಮುಪಧಾವತ್ಯು ಪತ್ವಾಂಧಾವಮಿತಿ " ಹೀಗೆ ಛಾಂದೋಗ್ಯೋಪನಿಷತ್ತು ಹೇಳುತ್ತದೆಂದು ದೀಕ್ಷಿತರು ಉದಾಹರಿಸಿದ್ದಾರೆ. ಮನುಷ್ಯರಲ್ಲಿ ಬ್ರಾಹ್ಮಣನಾದವನು ದೇವರಲ್ಲಿ ಬ್ರಾಹ್ಮಣನಾದ ಶಿವನನ್ನೇ ಶರಣು ಹೋಗಬೇಕೆಂದು ಶ್ರುತಿಗಳು ಸಾರುತ್ತಿರಲು, ಅದನ್ನಲ್ಲಗಳೆದು ನೀಚ ದೈವಗಳಿಗೆರಗುವ ಬ್ರಾಹ್ಮಣರಿಗೆ ಶಾಸ್ತ್ರಗಳ ಬಟ್ಟೆಗಿಂತ ತಮ್ಮ ಹಾದಿಯು ಅತಿ ವಿರುದ್ಧವೆಂದು ತೋರುತ್ತಿದ್ದರೂ ಅದನ್ನು ಬಿಡದಾದರು.

ಕಬ್ಬಿನ ತೋಟದಲ್ಲಿ ಹೊಕ್ಕ ಕುರಿಹಿಂಡು ಕಬ್ಬಿನ ಹೊರಗಣ ಎಲೆಯನ್ನೆ ಮೇಲೆದು ಆನೆಯಂತೆ ಕಬ್ಬಿನ ತನಿರಸವ ಸೇವಿಸದೆ ಹೋದ ಹಾಗೆ, ವಿಪ್ರರು ವೇದಾಗಮ ಶಾಸ್ತ್ರ ಪುರಾಣಗಳನ್ನು ಓದಿ ಬಾಹ್ಯ ಶಬ್ದಾರ್ಥದಲ್ಲಿಯೇ ತೃಪ್ತಿಹೊಂದಿ, ಒಳಗಣ ತನಿರಸ ರೂಪಾದ ಜ್ಞಾನಿರ್ಥವು ಅವರಿಗೆ ಹೊಳೆಯದ್ದರಿಂದ ಕೇವಲ ಪುಸ್ತಕ ಹೊರುವ ಭಾರವಾಹಕರೆಂದು ಅವರಿಗೆ ಶಾಸ್ತ್ರಗಳು ಕರೆಯುಹತ್ತಿದವು. (೭೦)

"ಎನಿಸ ನೋದಿದರೇನು ಎನಿಸಿಕೇಳಿದರೇನು ಲಿಂಗಾರ್ಚನೆ ಹೀನವಾದರೆ, ಶಿವ ಶಿವಾ ಬ್ರಾಹ್ಮಣನೆಂಬೆನೆ? ಎನ್ನಲಾಗದು." (೬೦)

ಇಷ್ಟೊತ್ತು ಜಾತಿ ಬ್ರಾಹ್ಮಣರ ವಿರೋಧ ವರ್ತನೆಯನ್ನು ಹೇಳಿ ಆ ಮೇಲೆ ಬಸವನು ಬ್ರಾಹ್ಮಣರನ್ನು ದೇವರೆಂದು ನಂಬಿದವರಿಗೆ ಏನೇನು ಕೇಡು ಸಂಭವಿಸಿತೆಂದು ಕೆಳಗಿನ ವಚನದಿಂದ ಹೇಳುತ್ತಾನೆ.

"ಬ್ರಾಹ್ಮಣನೇ ದೈವವೆಂದು ನಂಬಿದ ಕಾರಣ ಗೌತಮನಿಗೆ ಗೋವಧೆಯಾಯಿತ್ತು. ಬ್ರಾಹ್ಮಣನೇ ದೈವನೆಂದು ನಂಬಿದ ಕಾರಣ ಬಲಿಗೆ ಬಂಧನವಾಯಿತ್ತು. ಬ್ರಾಹ್ಮಣನೇ ದೈವವೆಂದು ನಂಬಿದ ಕಾರಣ ಕರ್ಣನ ಕವಚ ಹೋಯಿತ್ತು. ಬ್ರಾಹ್ಮಣನೇ ದೈವವೆಂದು ನಂಬಿದ ಕಾರಣ ದಕ್ಷಂಗೆ ಕುರಿದಲೆಯಾಯಿತ್ತು. ಬ್ರಾಹ್ಮಣನೇ ದೈವವೆಂದು ನಂಬಿದ ಕಾರಣ ಪರಶುರಾಮ ಸಮುದ್ರಕ್ಕೆ ಗುರಿಯಾದ. ಬ್ರಾಹ್ಮಣನೇ ದೈವವೆಂದು ನಂಬಿದ ಕಾರಣ ನಾಗಾರ್ಜುನನ ತಲೆ ಹೋಯಿತ್ತು. ದೇವಭಕ್ತರೆಂದು ನಂಬಿದ ಕಾರಣ ನಮ್ಮ ಕೂಡಲ ಸಂಗನ ಶರಣರು ಕೈಲಾಸವಾಸಿಗಳಾದರು." (೪೩)

"ದ್ವಿಜರಿಗೆ ಕೊಟ್ಟು ಹಲಬರು ಕೆಟ್ಟರು. ಉದ್ಧರಿಸುವನೊಬ್ಬ ಶಿವಶರಣ ಸಾಲದೆ? ಈಶ ಜಂಗಮವಾಗಿ ಬಂದು ದಾಸನ ವಸ್ತ್ರವ ಬೇಡಿದ. ಕೊಟ್ಟದಾಸ. ತವನಿಧಿಯ ಪಡೆದ. ಕಾಮಾರಿ ಜಂಗಮವಾಗಿ ಬಂದು ಸಿರಿಯಾಳನ ಮಗನ ಬೇಡಿದ. ಕೊಟ್ಟ ಸಿರಿಯಾಳಸೆಟ್ಟಿ. ಕಂಚಿಯ ಪುರವ ಕೈಲಾಸಕೊಯ್ದ. ಶಿವನು ಜಂಗಮವಾಗಿ ಬಂದು ಸಿಂಧುಬಲ್ಲಾಳನ ವಧುವ ಬೇಡಿದ. ಕೊಟ್ಟ ಸಿಂಧುಬಲ್ಲಾಳ. ಸ್ವಯಂಲಿಂಗವಾದ. ಇದು ಕಾರಣ ಇಲ್ಲಿಯೂ ಲೇಸು. ಅಲ್ಲಿಯೂ ಲೇಸು. ಕೊಡಿರೇ ನಮ್ಮ ಕೂಡಲ ಸಂಗನ ಶರಣರಿಗೆ." (೯೫)

ಬ್ರಾಹ್ಮಣ ಭಟ್ಟರ ಇನ್ನೊಂದು ವಿಪರೀತ ನಡಾವಳಿಯನ್ನು ಬಸವನು ಕೆಳಗಣ ವಚನದಲ್ಲಿ ಹೇಳಿರುವನು.

"ಕುಲದಲ್ಲಿ ಹಾರುವನು ಬ್ರಹ್ಮೇತಿಗೆ ಸಾರುವನು. ಆರೋ ಮಾಡಿದ ಪಾಪಕ್ಕೆ ತಾನೇ ಕೈಯ್ಯಾನುವನು. ಸರಿಯೋ ದೇವಾ ಭಕ್ತಂಗಿವನು? ಬಡಗಿ ಮಾಚಲದೇವಿಯ ಕುಲಜೆಯ ಮಾಡಿಹೆವೆಂದು ಹೊನ್ನ ಕಪಿಲೆಯ ತಂದು ಉಚ್ಚಿಷ್ಟದ ಹಾಲಿನಿಂದ ಕೂಳ ನಟ್ಟು ರಾವಣ ಶಾಖೆಯ ಮೇಲುಂಬು ವರನೇನೆಂಬೆ ಕೂಡಲ ಸಂಗಮದೇವಾ." (೫೭)

ಅರ್ಥ:— ಜಾತಿಯಲ್ಲಿ ಬ್ರಾಹ್ಮಣನಾದರೂ ಬ್ರಾಹ್ಮಣನ ಕೊಂದ ಪಾಪಕ್ಕೆ ಗುರಿಯಾಗುವನು. ಹೇಗೆಂದರೆ— ಯಾರಾದರೂ ಬ್ರಹ್ಮಹತ್ಯಾ ದೋಷವುಳ್ಳವರಿದ್ದರೆ ಆವರೆಡೆಗೆ ಹೋಗಿ ನೂರಾರು ವರಹಗಳನ್ನು ಕೊಟ್ಟರೆ ನಿಮ್ಮ ಪಾಪವನ್ನು ನಾನು ತಕ್ಕೊಂಡು ನಿಮ್ಮನ್ನು ಪರಿಶುದ್ಧವಾಗಿ ಮಾಡುವೆನೆಂದು ಹೇಳಿ ಕೈಯ್ಯೊಡ್ಡಿ ನಿಲ್ಲುವನು. ಬಡಿಗೇರ ಕುಲದಲ್ಲಿ ಹುಟ್ಟಿದ ಮಾಚಲದೇವಿಯನ್ನು ನಳಚಕ್ರಾಧಿಪತಿಗೆ ಶುದ್ಧ ಕ್ಷತ್ರಿಯಳಾಗಿ ಮಾಡಿಕೊಡುತ್ತೇವೆಂದು ಮೂರು ಲಕ್ಷ ದ್ರವ್ಯವನ್ನು ತೆಗೆದುಕೊಂಡು ಬಂದು ಒಂದು ಬಂಗಾರದ ಆಕಳವನ್ನು ಮಾಡಿ ಅದರ ಹೊಟ್ಟೆಯಲ್ಲಿ ಪಂಚಾಮೃತವನ್ನು ತುಂಬಿಸಿ ಒಂದು ಚಿನ್ನದ ಕೊಪ್ಪರಿಗೆ ಒಂದು ಬೆಳ್ಳಿಯ ಕೊಪ್ಪರಿಗೆ ಒಂದು ಕಬ್ಬಿಣದ ಕೊಪ್ಪರಿಗೆ ಹೀಗೆ ಮೂರು ಕೊಪ್ಪರಿಗೆಗಳನ್ನು ಮಾಡಿಸಿ ಚಿನ್ನದ ಕೊಪ್ಪರಿಗೆಯಲ್ಲಿ ಹಾಲು ತುಂಬಿ ಬೆಳ್ಳಿಯ ಕೊಪ್ಪರಿಗೆಯಲ್ಲಿ ಮೊಸರು ತುಂಬಿ ಕಬ್ಬಿಣ ಕೊಪ್ಪರಿಗೆಯಲ್ಲಿ ಶೀನೀರ ತುಂಬಿ ಬಂಗಾರದ ಆಕಳ ಬಾಯಿಯಿಂದ ಆ ಸ್ತ್ರೀಯನ್ನು ಹೊಗಿಸಿ ಅದರ ಬಾಲದಲ್ಲಿಂದ ತೆಗೆಸಿ ಚಿನ್ನದ ಕೊಪ್ಪರಿಗೆಯಲ್ಲಿಟ್ಟ ಹಾಲಿನಿಂದ ಅವಳಿಗೆ ಸ್ನಾನ ಮಾಡಿಸಿ ಒಂದನೇ ಜನ್ಮವಾಯಿತೆಂದೂ, ಮತ್ತೆ ಆ ಬಂಗಾರದ ಆಕಳ ಬಾಯಿಂದ ಅವಳನ್ನು ಹೊಗಿಸಿ ಬಾಲದ ಕಡೆಯಿಂದ ಎಳೆದು ಬೆಳ್ಳಿಯ ಕೊಪ್ಪರಿಗೆಯಲ್ಲಿದ್ದ ಮಸರಿನಿಂದ ಅವಳನ್ನು ಸ್ನಾನ ಮಾಡಿಸಿ ಎರಡನೇ ಜನ್ಮವಾಯಿತೆಂದು ಹೇಳಿ ಆ ಮೇಲೆ ಅವಳನ್ನು ಪುನಃ ಆಕಳ ಬಾಯಿಯಲ್ಲಿ ಹೊಗಿಸಿ ಬಾಲದ ಕಡೆಯಿಂದ ತೆಗಸಿ, ಕಬ್ಬಿಣ ಕೊಪ್ಪರಿಗೆಯಲ್ಲಿದ್ದ ನೀರಿನಿಂದ ಸ್ನಾನ ಮಾಡಿಸಿ ಮೂರನೇ ಜನ್ಮವಾಯಿತೆಂದು ಹೇಳಿ, ಆ ಸ್ತ್ರೀಯಳಿಗೆ ಸ್ನಾನ ಮಾಡಿಸಿದ ಹಾಲಿನಲ್ಲಿ ಮೊನೆಮುರಿಯದ ಅಕ್ಕಿಯನ್ನು ಹಾಕಿ ಹಾಲುಪಾಯಸ ಮಾಡಿ

ಉಣ್ಣಲಿಕ್ಕೆ ಪತ್ರಾವಳಿ ಇಲ್ಲದ್ದರಿಂದ ಅಲ್ಲಿ ಎಡಬಲವಲ್ಲಿದ್ದ ಔಡಲ ಎಲೆಯನ್ನು ತಂದು ಅದರಲ್ಲಿ ಪಾಯಸವನ್ನು ಹಾಕಿ, ಎಂಜಲದ ಕಲ್ಪನೆಯಿಲ್ಲದೆ ಸುಖವಾಗಿ ಊಟಮಾಡುವ ಈ ಹಾರುವರನ್ನು ಏನೆಂದು ಕರೆಯಲಿ ದೇವಾ ?

" ನಾನುಕೊಲ್ಲೆನು ನೇಣುಕೊಂದಿತ್ತೆಂಬ ಸೂನೆಗಾರರ (ಕಟುಕರ) ನೇನೆಂಬೆನಯ್ಯಾ ಕೂಡಲ ಸಂಗಮದೇವಾ. " (ವು. ಜ್ಞಾ. ೪೫)

ಅಂದರೆ ಯಜ್ಞಕ್ಕಾಗಿ ಹೋತು ಆಡು ತಂದು ಉಸರಾಡಗೊಡದ ಹಾಗೆ ಅದನ್ನು ಜನ್ನಿವಾರದಿಂದ ಬಂಧಿಸಿ ಕೇಶವಾ ಗುದ್ದು ಮಾಧವಾ ಗುದ್ದು ಎಂದು ಹೇಳಿ ಅದನ್ನು ಕೊಂದು ತಿಂದು ಕೇಳಿದರೆ ಜನ್ನಿವಾರ ಕೊಂದಿತೆಂದು ಹೇಳುವ ಕಟುಕರ ಮಾತಿಗೇನೆಂಬೆ? ಇದನ್ನೆ ರಾಮ ಕೃಷ್ಣ ಪರಮಹಂಸರು ತಮ್ಮ ವಚನದಲ್ಲಿ ಹೀಯಾಳಿಸಿ ನುಡಿದಿರುವರು.

ಇನ್ನು ಬ್ರಾಹ್ಮಣರು ತಾವು ಶ್ರೇಷ್ಠ ವರ್ಣದವರು ತಮ್ಮ ಕುಲ ಹೆಚ್ಚು ಉಳಿದವರು ಕಡಿಮೆಯವರೆಂದು ಹೆಮ್ಮೆಯಿಂದ ಉಳಿದವರನ್ನು ಜರೆಯುತ್ತಾರೆ. ಬ್ರಾಹ್ಮಣ್ಯವು ಜಾತಿ ಗರ್ವದ ಹೆಮ್ಮೆಯ ಚಿನ್ಹವು. ತಾನು ಹೆಚ್ಚಿನ ವರ್ಣದವನೆಂದು ಹಮ್ಮು ಬಿಮ್ಮು ಇವುಗಳಿಂದ ಕೂಡಿದವನಾಗಿ, ಅನ್ಯವರ್ಣದವರನ್ನು ಅವರೆಷ್ಟು ಸುಶೀಲರಿದ್ದರೂ ಜಾಣರಿದ್ದರೂ ಹೊರದೂಡಿ ತನ್ನ ಶ್ರೇಷ್ಠತೆಯನ್ನೇ ಮುಂದು ಮಾಡುವದು. ಅನ್ಯರ ಉತ್ಕರ್ಷವನ್ನು ಸಹಿಸಲಾರದ್ದು ಮತ್ತು ಸಾಮಾಜಿಕ ಹಿಂಸೆಯಲ್ಲಿ (*Social tyrany*) ಮತ್ತು ಅವರ ಧಡ್ಡತನದ ಲಾಭ ಮಾಡಿಕೊಳ್ಳುವದರಲ್ಲಿ (*Exploitation*) ಸದಾ ಹವಣಿಸುತ್ತಿರುವದು. ಉದಾ:— ಸ್ಮೃತಿಕಾರರು ಶೂದ್ರ ವರ್ಣದವನು ಎಷ್ಟು ಭಕ್ತಿ ಸದಾಚಾರವುಳ್ಳವನಿದ್ದರೂ, ವೇದಾಗಮಗಳನ್ನು ಓದಬಾರದಂತೆ. ಬ್ರಾಹ್ಮಣರು ಅವರ ಕಿವಿಗೆ ಮುಟ್ಟುವಂತೆ ಇವನ್ನು ತಾವಾದರೂ ಓದಕೂಡದಂತೆ. ಆತನು ಪುರಾಣ ಇತಿಹಾಸಗಳನ್ನು ಬ್ರಾಹ್ಮಣರಿಂದ ಕೇಳಬಹುದಂತೆ. ಇವನ್ನಾದರು ಶೂದ್ರನು ತಾನೇ ಓದಬಾರದಂತೆ. ಇನ್ನು ಶೂದ್ರನು ಯಾವ ಸೊತ್ತನ್ನೂ ಕೂಡಿಸಬಾರದಂತೆ. ಆತನು ಕೂಡಿಸಿದ ದ್ರವ್ಯದ ಮೇಲೆ ಮತ್ತು ಅವನ ಹೆಂಡಿರು ಮಕ್ಕಳ ಮೇಲೆ ಬ್ರಾಹ್ಮಣರದೇ ಒಡೆತನವಂತೆ. ಇವನ್ನು ಶೂದ್ರನಿಂದ ಬೇಕಾದಾಗ ಅವನು ಅಪಹರಿಸಬಹುದು.

ಇದು ಅಪರಾಧವೆನಿಸುವದಿಲ್ಲ. ಆವನೊಂದು ಮಣ್ಣು ಮಡಿಕೆಗೆ ಸಮಾನ (*He is Like a chattel*) ಇನ್ನು ವಿವಾಹ ಪ್ರಸಕ್ತಿಯಲ್ಲಿ ಮೇಲಿನ ವರ್ಣದವರು ಕೆಳಗಿನ ವರ್ಣದವರ ಕನ್ಯೆಯನ್ನು ವರಿಸಬಹುದಂತೆ. ಆದರೆ ಕೆಳಗಿನ ವರ್ಣದವರು ಮೇಲಿನ ವರ್ಣದ ಕನ್ಯೆಯನ್ನು ವರಿಸ ಲಿಕ್ಕೆ ಸ್ಮೃತಿಯು ಮನಾಯಿ. (*Smritic prohibition*) ಕ್ಷತ್ರಿಯರಿಗೂ ವೈಶ್ಯರಿಗೂ ವೇದಾಧಿಕಾರವಿದ್ದರೂ ಆ ವೇದ ವಿದ್ಯೆಯನ್ನು ಬೇರೆಯವರಿಗೆ ಅಧ್ಯಾಪನ ಮಾಡಿಸಬಾರದಂತೆ. ತಾವೇ ವೇದಾಭ್ಯಾಸ ಅನ್ಯರಿಗೆ ಮಾಡಿ ಸುವ ಗುತ್ತಿಗೆಗಾರರಂತೆ. ಇವೆಲ್ಲ ಬ್ರಾಹ್ಮಣ್ಯದ ಸಾಮಾಜಿಕ ಮತ್ತು ಧಾರ್ಮಿಕ ಜುಲುಮೆ-ಹಿಂಸೆ-ತ್ರಾಸದ ಉದಾಹರಣೆಗಳು. (*Instances of Social tyranny*)

"Brahmanism is the symbol of aristocratic pride and social exclusiveness, where it is found. All social tyranny and exploitation is Brahmanism. All political oppression and exploitation is Brahmanism We have the Indian Brahmin whose shadow a Pariah may not cross. We have the Europian Brahmin whose shadow must not be crossed by an Indian. The former is brown and the latter white in coleur" (Brahmanes by Fransinsko Lins Goen, a novel in Portuguese translated. Free Press journal 24-4-32.

ಜಾತಿಬ್ರಾಹ್ಮಣ್ಯವು ಹೊರಗೆ ಮಡಿ ಮತ್ತು ಕೆಲವು ನಿತ್ಯನೈಮಿ ತ್ತಿಕ ಕರ್ಮಗಳಿಂದ ಕೂಡಿಕೊಂಡಿದೆ. ಇದರಲ್ಲಿ ತನುಶುದ್ಧಿ ಮನಶುದ್ಧಿ ಧನಶುದ್ಧಿಯ ವಿಚಾರವಿಲ್ಲ. ಉಕ್ತ ಬಾಹ್ಯ ಕರ್ಮಗಳನ್ನು ಆಯಾ ಕಾಲದಲ್ಲಿ ಮಾಡಿದರಾಯಿತು. ಆತ್ಮಶುದ್ಧಿಯು ಗೊಡವೆಯೇ ಬೇಡ. ತೀರ್ಥಯಾತ್ರೆಗಳಿಂದ ಆತ್ಮಶುದ್ಧಿಯಾಗುವದಿಲ್ಲ. ಮತ್ತು ಈ ತೀರ್ಥ ಯಾತ್ರೆಗಳಲ್ಲಿ ಮನೆಮಾಡಿಕೊಂಡಿದ್ದ ಪುರೋಹಿತರು ಭಟ್ಟರು ಮಾಡಿದ ಕರ್ಮಫಲವನ್ನು ಅವರಿಗೆ ದಕ್ಷಿಣೆ ಕೊಟ್ಟುಕೊಳ್ಳುವರು. ಇದರಿಂದ ಸಹ ವಿಷಯಗಳಲ್ಲಿ ವೈರಾಗ್ಯವು ಪ್ರಾಪ್ತವಾಗದು. ತನಗೂ ದೇವರಿಗೂ ಇರುವ ಸಂಬಂಧವು ತಿಳಿಯಬೇಕಾದರೆ, ತಾನೇ ಸ್ವತಃ ಅದನ್ನು ಮಾಡಬೇಕು. ಅನ್ಯರು ಮಾಡಿದ ಪೂಜೆಯಿಂದ ಆತ್ಮನು ಪರಿಶುದ್ಧನಾಗಲಾರನು. ಇದನ್ನು

ಬಸವನು ತನ್ನ ವಚನದಲ್ಲಿ ಬಹು ಮಾರ್ಮಿಕವಾಗಿ ಹೇಳಿರುವನು. ತಾನುಂಬ ಊಟವನ್ನು ತನ್ನ ಸತಿಯು ರತಿ ಸುಖವನ್ನು ಅನ್ಯರ ಕೈಯಿಂದ ಮಾಡಿಸುವದು ಲೋಕವಿರುದ್ಧವಾದಂತೆ ದೇವರಿಗೆ ತಾನು ಮಾಡತಕ್ಕ ಪೂಜೆಯನ್ನು ತಾನೇ ಮಾಡಿ ಸಂತೋಷವನ್ನು ಹೊಂದಬೇಕಲ್ಲದೆ ಅನ್ಯರ ಕಯ್ಯಿಂದ ಮಾಡಿಸಿದರೆ ಫಲವಿಲ್ಲ.

"ತನ್ನಾಶ್ರಯದ ರತಿಸುಖವನು ತಾನುಂಬ ಊಟವನು ಬೇರೆ ಮತ್ತೊಬ್ಬರ ಕೈಯ್ಯಲು ಮಾಡಿಸಬಹುದೆ? ತನ್ನ ಲಿಂಗಕ್ಕೆ ಮಾಡುವ ನಿತ್ಯನೇಮವ ತಾ ಮಾಡಬೇಕಲ್ಲದೆ, ಬೇರೆ ಮತ್ತೊಬ್ಬರ ಕೈಯ್ಯಲು ಮಾಡಿಸಬಹುದೆ? ಕೆಮ್ಮನೆ ಉಪಚಾರಕ್ಕೆ ಮಾಡುವರಲ್ಲದೆ ನಿಮ್ಮ ನೆತ್ತಬಲ್ಲರು ಕೂಡಲ ಸಂಗಮದೇವಾ." (ಭ. ಜ್ಞಾ. ೭೦)

ಇದನ್ನರಿತೇ ವೀರಶೈವನು ಗುರುಕಾರುಣ್ಯದಿಂದ ಅಂಗದ ಮೇಲೆ ಇಷ್ಟಲಿಂಗಧಾರಿಯಾಗಿ ತಾನೇ ಶಿವಸ್ವರೂಪನೆಂದು ತಿಳಿದ ಶಿವನನಲ್ಲಿ ಇಷ್ಟ ಲಿಂಗದಲ್ಲಿ ಆರಾಧಿಸುವನು. ಇವನಿಗೆ ತೀರ್ಥಯಾತ್ರೆಗಳ ಅವಶ್ಯಕತೆಯಿಲ್ಲ. ಇಷ್ಟ ಲಿಂಗದಲ್ಲಿ ಸರ್ವತೀರ್ಥಗಳು ಅಡಕವಾಗಿವೆ. ಗುರುಲಿಂಗಜಂಗಮ ಪೂಜೆಯು ಅಶ್ವಮೇಧಯಾಗಕ್ಕಿಂತಲೂ ಕ್ಷೇತ್ರಗಳಲ್ಲಿ ಬ್ರಾಹ್ಮಣರಿಗೆ ಕೊಡುವ ಭೂರಿ ದಕ್ಷಿಣೆಗಿಂತಲೂ ಮಿಗಿಲಾದ ಫಲವನ್ನು ಕೊಡತಕ್ಕಂಥಾದ್ದು. ಹೀಗೆ ವೀರಶೈವರ ಆಚರಣೆ ಇದ್ದರೂ ಜಾತಿಬ್ರಾಹ್ಮಣರು ತಾವು ಕುಲಜರು ಹೆಚ್ಚಿನವರೆಂದು ಆಡುತ್ತಿರುವ ಬಿಂಕದ ನುಡಿಯನ್ನು ಅವರ ಗುರುಗೋತ್ರದವರ ನೀಚಯೋನಿತ್ವವನ್ನು ತನ್ನ ಕೆಳಗಿನ ವಚನಗಳಿಂದ ಬಸವನು ಸಯುಕ್ತಿಕವಾಗಿ ಖಂಡಿಸಿದ್ದಾನೆ.

"ಹೊಲೆಯೊಳಗೆ ಹುಟ್ಟಿ ಕುಲವನರಸುವೆ ಎಲವೊ ಮಾತಂಗಿಯ ಮಗನೀನು." (೪೯)

"ವ್ಯಾಸ ಬೋಯಿತಿಯ (ಅಂಬಿಗರವಳ) ಮಗ. ಮಾರ್ಕಂಡೇಯ ಮಾತಂಗಿಯ (ಹೊಲೆಯಳ) ಮಗ. ಮಂಡೋದರಿ ಕಪ್ಪೆಯ ಮಗಳು. ಕುಲವನರಸದಿರಿ ಭೋ. ಕುಲದಿಂದ ಮುನ್ನೇನಾದಿರಿಂ ಭೋ ಸಾಕ್ಷಾತ್ ಅಗಸ್ತ್ಯ ಕಬ್ಬಿಲ. ದೂರ್ವಾಸ ಮಚ್ಚಿಗ. ಕಶ್ಯಪ ಕಮ್ಮಾರ. ಕೌಂಡಿನ್ಯನೆಂಬ ಋಷಿ ಮೂರು ಭುವನವರಿಯೆ ನಾಯಿದ (ನಾವಲಿಗ) ಕಾಣಿರೋ. ನಮ್ಮ ಕೂಡಲ ಸಂಗಮದೇವರ ವಚನವಿಂತೆಂದುದು — ಶ್ವಪಚೋಪಿಯಾದರೇನು? ಶಿವಭಕ್ತನೇ ಕುಲಜನು." (೭೨)

"ಹೊಲೆಗಂಡಲ್ಲದೆ ಪಿಂಡದ ನೆಲೆಗಾಶ್ರಯವಿಲ್ಲ. ಜಲಬಿಂದು ವಿನ ವ್ಯವಹಾರ ಒಂದೇ. ಆಶೆಯಾಮಿಷ ಹರುಷವಿಷಯಾದಿಗಳೆಲ್ಲ ಒಂದೇ. ಏನನೋದಿ ಏನಕೇಳಿ ಏನುಫಲ? ಕುಲಜನೆಂಬುದಕ್ಕೆ ಆವುದು ದೃಷ್ಟ." ಸಪ್ತಧಾತುಸಮಂಪಿಂಡಂ । ಸಮಯೋನಿಸಮುದ್ಭವಂ ॥ ಆತ್ಮ ಜೀವಸಮುತ್ಪನ್ನಂ ವರ್ಣಾನಾಂ ಕಿಂಪ್ರಯೋಜನಂ" ಕಾಸಿ ಕಂಮಾರ ನಾದ. ಬೀಸಿಮುಡಿವಾಳನಾದ. ಹಾಸನಿಕ್ಕಿ ಸಾಲಿಗನಾದ. ವೇದವನೋದಿ ಹಾರುವನಾದ. ವರ್ಣದಲಿ ಜನಿಸಿದರುಂಟೇ ಜಗದೊಳಗೆ? ಇದು ಕಾರಣ ಕೂಡಲ ಸಂಗಮದೇವ ಲಿಂಗಸ್ಥಲವನರಿದವನೇ ಕುಲಜನು" (೬೩)

"ನೆಲನೊಂದೇ ಹೊಲಗೇರಿ ಶಿವಾಲಯಕ್ಕೆ. ಜಲವೊಂದೇ ಶೌಚಾಚಮನಕ್ಕೆ. ಕುಲವೊಂದೇ ತನ್ನತಾನರಿದಂಗೆ. ಫಲವೊಂದೇ ಷಡುದರ್ಶನ ಮುಕ್ತಿಗೆ. ನಿಲವು ಒಂದೇ, ಕೂಡಲ ಸಂಗಮದೇವಾ, ನಿಮ್ಮ ನರಿದಂಗೆ." (ಶ. ಶ. ೭)

ಅಂದರೆ ಗರ್ಭಾಶಯದ ಹೊಲೆಯೊಳಗಿಂದ ಹುಟ್ಟಿ ಹೊರಗೆ ಬಂದು ಕುಲವನ್ನು ಹುಡುಕುವಂಥ ಹೊಲೆಯುಳ ಮಗನಾದ ಆತ್ಮನೇ ಸೂತಕದಲ್ಲಿ ಜನಿಸಿ ಕುಲವನರಿಸಬೇಡ.

"ಉತ್ಪತ್ತಿ ಶುಕ್ಲಶೋಣಿತದಿಂದಾದ ಲಜ್ಜೆ ಸಾಲದೆ? ಮತ್ತೆದುರಿತಂಗಳ ಹೊರುವ ಎಗ್ಗತನವೇಕಯ್ಯ." (ಭ. ಜ್ಞಾ. ೪೬)

ಸೂತಕವಾದಲ್ಲದೆ ಪಿಂಡ ಹುಟ್ಟುವದಕ್ಕೆ ಆಧಾರವಿಲ್ಲ. ಶುಕ್ರಶೋಣಿತಮಯವಾದ ದೇಹ ವ್ಯಾಪಾರವು ಉತ್ತಮ ಜಾತಿಯವರಿಗೂ ಕೀಳು ಜಾತಿಯವರಿಗೂ ಒಂದೇಯಾಗಿರುವದು. ಹೆಣ್ಣು ಮಣ್ಣು ಹೊನ್ನು ಇವುಗಳ ಅಪೇಕ್ಷೆಯೂ, ಮತು ಇವು ಹೆಚ್ಚಾಗಬೇಕೆಂಬ ಅತಿಕಾಂಕ್ಷೆಯೂ, ಆನಂದ ವಿಷಯಾಭಿಲಾಷೆ ಮುಂತಾದವೂ ಉತ್ತಮ ಜಾತಿಯವರಲ್ಲಿ ಕನಿಷ್ಟ ಜಾತಿಯವರಲ್ಲಿ ಸಮಾನವಾಗಿರುವವು. ಸಪ್ತಧಾತು ಸಂಮಿಶ್ರವಾಗಿ ಜನಿಸುವದು ಉತ್ತಮ ಜಾತಿಯವರಿಗೂ ಕೀಳು ಜಾತಿಯವರಿಗೂ ಏಕಪ್ರಕಾರವಾಗಿರುವುದು. ಉತ್ತಮನು ಊರ್ಧ್ವಯೋನಿಯಲ್ಲಿ ಕನಿಷ್ಟನು ಅಧೋಯೋನಿಯಲ್ಲಿ ಹುಟ್ಟುವದಿಲ್ಲ. ಆದ್ದರಿಂದ 'ಜನ್ಮನಾಜಾಯತೆ ಶೂದ್ರಃ ಕರ್ಮಣಾದ್ವಿಜ ಉಚ್ಯತೆ.' ಹುಟ್ಟುವಾಗ ಎಲ್ಲರೂ ಶೂದ್ರರೇ. ಕರ್ಮದಿಂದ ಎಲ್ಲರೂ ಬ್ರಾಹ್ಮಣರಾಗಬಹುದು. ಯಾವನೂ ವರ್ಣದಲ್ಲಿ ಜನಿಸುವದಿಲ್ಲ. ಆದ್ದ

ರಿಂದ ಅಂಗದಲ್ಲಿ ಇಷ್ಟಲಿಂಗ ಸಂಬಂಧ ಮಾಡಿಕೊಂಡು ಸಮರಸ ಭಾವ ದಿಂದ ಪೂಜಿಸುವವನೇ ಶ್ರೇಷ್ಠನು. ವಿಪ್ರ ಶತಕೋಟಿಗಳಿದ್ದು ಫಲವಿಲ್ಲ. ಭಕ್ತಶಿಖಾಮಣಿ ಎಂದುದು ವಚನ. ಅಂದರೆ 'ಮಮಭಕ್ತೋಮಮಾಧಿಕಃ। ನನ್ನ ಭಕ್ತನು ನನಗಿಂತ ಶ್ರೇಷ್ಠನೆಂದು ಶಿವನ ವಾಕ್ಯವಿರುವದು. ತನ್ನ ತಾನರಿದ ಒಬ್ಬ ಶಿವಭಕ್ತನಿದ್ದರೆ ಅವನೇ ಎಲ್ಲರಿಗಿಂತ ಮಿಗಿಲು. ಆತನ ನುಡಿಗಡಣಲೇಸು. ಆತನ ಅಂಗಳವೇ ಕೈಲಾಸ. ಪಾಪಿಯಾದವನು ಅವನಿದ್ದಲ್ಲಿಗೆ ಹೋಗಿ ಒಂದು ಬೊಗಸೆ ನೀರನ್ನು ಕುಡಿದರೆ ಅವನ ಪಾಪಗಳೆಲ್ಲ ಅಳಿದು ಹೋಗುವವು. ಆದ್ದರಿಂದ ವರ್ಣಾನಾಂ ಬ್ರಾಹ್ಮಣೋ ಗುರು ಎಂಬುದು ಹುಸಿ. ವರ್ಣಾನಾಂ ಗುರು ನಮ್ಮ ಕೂಡಲ ಸಂಗನ ಶರಣರು. (೭೩)

"ದೇವ ನಿಮ್ಮ ಪೂಜಿಸಿ ಚನ್ನನ ಕುಲ ಚೆನ್ನಾಯಿತು ದೇವ ನಿಮ್ಮ ಪೂಜಿಸಿದಾಸನ ಕುಲ ದೆಶಿವಡೆಯಿತು. ದೇವ ನಿಮ್ಮಡಿಗೆರಗಿ ಮಡಿವಾಳ ಮಾಚಯ್ಯ ಇಮ್ಮಡಿಯಾದ. ನೀನೊಲಿದ ಕುಲಕ್ಕೆ ನೀನೊಲಿದ ಹೊಲೆಗೆ ಮೇರೆಯುಂಟೇ ದೇವಾ. ಶ್ವಪಚೋಪಿ ಮುನಿಶ್ರೇಷ್ಠಃ ಯಸ್ತುಲಿಂಗಾರ್ಚನಾರತಃ। ಲಿಂಗಾರ್ಚನ ವಿಹೀನೋ ಬ್ರಾಹ್ಮಣೋಶ್ವಪಚಾಧಮಃ॥ ಜಾತಿವಿಜಾತಿಯಾದರೇನು? ಅಜಾತಂಗೆ ಶರಣೆನ್ನದವನೇ ಹೊಲೆಯ ಕೂಡಲ ಸಂಗಮದೇವಾ" (೭೩).

ಹಿಂಸಾಕೃತ್ಯದಿಂದ ತಂದ ಚಿಗರೀ ಚರ್ಮವನ್ನು ಜನ್ನಿವಾರಕ್ಕೆ ಕಟ್ಟುವ ಸ್ಮೃತಿಯಲ್ಲಿ ಪಂಚ ಪಂಚನಖಾಭಕ್ಷ್ಯಾಃ ಎಂದು ಬ್ರಾಹ್ಮಣರಿಗೆ ಮಾಂಸ ಸೇವನೆಯು ವಿಧಿಸಲ್ಪಟ್ಟು, ಅದರಂತೆ ಅವರು ಮಾಂಸ ಭಕ್ಷಣ ಮಾಡುತ್ತಿರುವರಾದ್ದರಿಂದ, ಯಜ್ಞದಲ್ಲಿ ಕುರಿಯನ್ನು ಕೊಂದು ಅದರ ಮಾಂಸ ಭಕ್ಷಣ ಮಾಡುತ್ತಾರಾದ್ದರಿಂದ ಮತ್ತು ಮಹಾ ಶೂದ್ರಿಯರಾದ ಗೋಪಸ್ತ್ರೀಯರ ವ್ಯೆ ಕೊಳೆಯನ್ನು ಹಣೆಯಲ್ಲಿ ಹಚ್ಚಿಕೊಳ್ಳುತ್ತಾರಾದ್ದರಿಂದ, ಪಂಚಸೂತಕಗಳ ಬಂಧನದಲ್ಲಿ ಸರ್ವದಾ ಕಟ್ಟಲ್ಪಟ್ಟವರಾದ್ದರಿಂದ, ಬ್ರಾಹ್ಮಣನಿಗೆ ಶಿವನೇ ಮಹಾ ಬ್ರಾಹ್ಮಣನಿದ್ದು ಆತನನು ಪೂಜಿಸದೆ ಕ್ಷತ್ರಿಯನಾದ ಮತ್ತು ಮಾಯಾಮೋಹಿತನಾದ ವಿಷ್ಣುವನ್ನೂ ಕಾಮುಕನಾಗಿ ಸ್ತ್ರೀಸಂಗಕ್ಕೆಳಸಿ ಅವಳಿಂದ ಶಪಿಸಲ್ಪಟ್ಟು ಸರ್ವಾಂಗ ಯೋನಿಯಾದ ಶೂದ್ರ ವರ್ಣದ ಇಂದ್ರನನ್ನು ಪೂಜಿಸಿ ಸ್ವರ್ಗಪದವಿಯನ್ನು ಪಡೆದು ಅಲ್ಲಿ ರಂಭಾ ಊರ್ವಶೀ ಮೊದಲಾದ ದೇವ ವೇಶ್ಯಾ ಸ್ತ್ರೀಯ

ರೊಡನೆ ಭೋಗವಿಲಾಸದಲ್ಲಿ ಬಿದ್ದು ಆ ಭೋಗವು ತೀರಿದೊಡನೆ ಪುನಃ ಮರ್ತ್ಯಕ್ಕೆ ಹುಟ್ಟಿಬರುವ ಬ್ರಾಹ್ಮಣ್ಯವು ಬಸವನಿಗೆ ಅಸಹ್ಯವೆನಿಸಿತು. ಬ್ರಾಹ್ಮಣ್ಯದ್ಯೋತಕವಾದ ಮತ್ತು ಕರ್ಮಜಾಲದಲ್ಲಿ ಕಟ್ಟುವ ಮೌಂಜೀ ಬಂಧನವು ಬಸವನಿಗೆ ವಿರಸವಾಯಿತು. ಯಥಾರ್ಥವಾಗಿ ವಿಚಾರ ಮಾಡಲು ಬಸವನ ಮತದಲ್ಲಿ ಬ್ರಾಹ್ಮಣರು ಕೇವಲ ಶಿವೋಪಾಸನೆ ಯನ್ನು ತ್ಯಜಿಸಿ ಅನ್ಯ ದೈವಕ್ಕೆರಗುವದರಿಂದ ಅನ್ಯ ದೈವದ ಭಜನೆ ಯೆಂಬುದು ಹಾದರ ಕಾಣಿರೋ ಎಂಬ ಮಾತು ಅವರನ್ನು ಅವೈದಿಕ ರಾಗಿ ಮಾಡುತ್ತದೆ.

“ವೇದಾಂತೇಷು ವಿಧೀಯತೆ ದ್ವಿಜನೃಣಾಂ ಭಸ್ಮತ್ರಿಪುಂಡ್ರಾಂಕನಂ ।
ರುದ್ರಾಕ್ಷಾಭರಣಂ ಶಿವಾಂಘ್ರಿಪಯಸಾಂ ಪಾನಂಪ್ರಸಾದಾದನಂ ॥
ಧ್ಯಾನಂತಸ್ಯ ತದನ್ಯದಿವಿಷತ್ಯಾಗೇನ ಮೋಹಾದಿದಂ ।
ಸರ್ವಂತ್ಯಜ್ಯ ಕಲಾಪಮಾರ್ಗನಿರತಾ ವಿಪ್ರಾಕಥಂ ವೈದಿಕಾಃ ॥೨೦॥

ಹೀಗೆ ಶ್ರೀ ಷಡಕ್ಷರಿ ಕವಿಯು ತನ್ನ ಸಂಸ್ಕೃತ ಭಕ್ತ್ಯಾಧಿಕ್ಯದಲ್ಲಿ ನಿರ್ಭೀತಿಯಿಂದ ಸಾರಿರುವನು. ಇದೇ ಸಂದರ್ಭದಲ್ಲಿ ಅದೇ ಕವಿಯ ಕೆಳಗಿನ ಶ್ಲೋಕಗಳನ್ನು ಪರಾಮರ್ಶಿಸಬೇಕು.

“ತ್ವಂದೇವೇಷ್ವಿತಿ ಮಂತ್ರತಃ ಪಶುಪತಿಸ್ಸ್ಯಾದ್ಬ್ರಾಹ್ಮಣಾನಾಂ ಪತಿ।
ರ್ಯದ್ಬ್ರಾಹ್ಮಣ್ಯ ಯುತಸ್ಸುರೇಷುವಿದಿತಸ್ತ್ಯಕ್ತ್ವಾವ್ರತಮೇನಂ ದ್ವಿಜಾಃ॥
ವಿಷ್ಣುಂ ಕ್ಷತ್ರಿಯ ಮಬ್ಜಜಾತಮ ನಿಶಂ ವೈಶ್ಯಂ ಚ ಶೂದ್ರಂ ಹರಿಂ ।
ಸೇವಂತೇಽಧಮವರ್ಣದೈವಭಜನಾದ್ಬ್ರಾಹ್ಮಣ್ಯ ಮೇಷಾಂಕುತಃ॥೨೩॥
“ಯೇಷಾಂ ಪಾಶುಪತವ್ರತಂನಹಿ ಮಹಾವೇದಾಧಿ ಕಾರೋಽಸತಾಂ ।
ತೇಷಾಂ ನೇತಿಯಥಾಹ ಮುಂಡಕವಚಶ್ಶ್ರುತ್ವಾ ಪಿತಸ್ಮಿನ್ವ್ರತೆ ॥
ಶ್ರದ್ಧಾಹೀನ ದುರಾತ್ಮಕಾ ಸ್ವನಿಟಿಲೆ ಗೋಪೀಮಲೇನಾಂಕಿತಾಃ।
ವೇದಾದಿಷ್ವಧಿಕಾರಣಃ ಕಥಮಿಮೆ ಬ್ರಾಹ್ಮಣ್ಯಮೇಷಾಂಕುತಃ ॥೨೪॥

ಹೀಗೆ ಪಾಶುಪತವ್ರತದಲ್ಲಿ ಅಂದರೆ ಅಷ್ಟಾವರಣ ಪಂಚಾಚಾರ ದಲ್ಲಿ ಶ್ರದ್ಧಾಹೀನರಾದ ಬ್ರಾಹ್ಮಣರಿಗೆ ಬ್ರಾಹ್ಮಣ್ಯತ್ವಮುಂಟಾಗದು. ಹೀಗೆಂದು ಶ್ರೀಷಡಕ್ಷರಿ ಕವಿಯು ಶಾಸ್ತ್ರೀಯ ರೀತ್ಯಾ ಜಾತಿ ಬ್ರಾಹ್ಮ ಣರಿಗೆ ಆವ್ಹಾನರೂಪವಾಗಿ ಪ್ರಶ್ನಮಾಡುತ್ತಾನೆ.

ಮತ್ತಲ್ಲದೆ, ದ್ವಿಜರು ಯಾವ ಪಾಪಕೃತ್ಯಗಳನ್ನು ಮಾಡಿದರೂ, ಅಂದರೆ ಅಭಕ್ಷ್ಯ ಭಕ್ಷಣ ಅಪೇಯಪಾನ, ಪರದಾರಾಗಮನ, ಅನ್ಯವಿತ್ತಾ

ಪಹರಣ (ಲಂಚ ತಕ್ಕೊಳ್ಳುವದು.) ಮೊದಲಾದವುಗಳನ್ನು ಮಾಡಿದರೆ ಸ್ಮೃತಿಕಾರರು ಅವಕ್ಕೆ ತಕ್ಕ ಪ್ರಾಯಶ್ಚಿತ್ತವನ್ನು ಹೇಳಿದ್ದಾರೆ. ಆಯಾ ಪ್ರಾಯಶ್ಚಿತ್ತವನ್ನು ಅಪರಾಧಿಯು ಮಾಡಿದರೆ, ಅಂತಹ ಪಾಪದಿಂದ ಆತನು ಬಿಡುಗಡೆಯನ್ನು ಹೊಂದುತ್ತಾನೆಂದು ಅವೇ ಸ್ಮೃತಿಗಳು ಪ್ರಾಯಶ್ಚಿತ್ತ ಶಾಸ್ತ್ರದಲ್ಲಿ ಹೇಳುತ್ತವೆ. ಅಂದಮೇಲೆ ಈ ಪ್ರಾಯಶ್ಚಿತ್ತ ವಿಧಿಯಿಂದ ಜೀವನು ನೈತಿಕ ಮಾರ್ಗವನ್ನು ಅವಲಂಬಿಸುವದು ಅವಶ್ಯವಾಗಲಿಲ್ಲ. ಕಳ್ಳನಿಗೆ ದಂಡ ಶಿಕ್ಷೆಯನ್ನು ಮಾಡಿದರೆ ದಂಡಕೊಟ್ಟು ಹೆಚ್ಚಿನ ಕಳವು— ಅಂದರೆ ದರೋಡೆ ಮುಂತಾದ್ದು ಮಾಡಿ ದಂಡದ ಹಣವನ್ನು ಈ ರೀತಿ ಉಗಾಯಿಸಿಕೊಳ್ಳುವಂತೆ ಬ್ರಾಹ್ಮಣನು ಪ್ರಾಯಶ್ಚಿತ್ತ ವಿಧಿಯನ್ನು ಕೈಕೊಂಡು ಪುನಃ ಅದೇ ದುಷ್ಕೃತಿಯನ್ನು ಮಾಡಲೆಳಸುವದು ಇದು ನಿಜವಾಗಿ ತನು ಮನ ಧನ ಶುದ್ಧಿಯ ಮಾರ್ಗವಲ್ಲ. ಅಂತೆಯೇ ಬಸವನು ದೀನವಾಣಿಯಿಂದ ಮನುಷ್ಯ ಮಾತ್ರದವರಿಗೆ ಕೈಜೋಡಿಸಿ ಹೀಗೆ ಬೇಡಿಕೊಂಡಿದ್ದಾನೆ.

"ಎಲವೋ ಎಲವೋ ಪಾಪಕರ್ಮವ ಮಾಡಿದವನೇ, ಎಲವೋ ಎಲವೋ ಬ್ರಹ್ಮಹತ್ಯವ ಮಾಡಿದವನೇ, ಒಮ್ಮೆ ಶರಣೆನ್ನೆಲವೋ. ಒಮ್ಮೆ ಶರಣೆಂದಡೆ ಪಾಪ ಕರ್ಮ ಓಡುವವು. ಸರ್ವ ಪ್ರಾಯಶ್ಚಿತಕ್ಕೆ ಹೊನ್ನ ಪರ್ವತಂಗಳೈದವು. ಓರ್ವಂಗೆ ಶರಣೆನ್ನು ನಮ್ಮ ಕೂಡಲ ಸಂಗಮ ದೇವಂಗೆ" [೯೩]

"ಹಲವು ಕೊಂಬೆಗೆ ಹಾಯಲುಬೇಡ——— ಅಂಜದಿರು ಅಳುಕದಿರು ಪರದೈವಕ್ಕೆರಗದಿರು. ಕೂಡಲ ಸಂಗನ ಕೈಯಲು ಇರಿಸುವುದು ನಿನ್ನ ಭಾರ," [೯೪]

ಅಂದರೆ ಪಾಪಕರ್ಮದಲ್ಲಿ ಆಸಕ್ತನಾದವನು ಶಿವನಲ್ಲಿ ಅನನ್ಯ ಭಾವದಿಂದ ಭಕ್ತಿಯಂ ಮಾಡಿ ಆತನಿಗೆ ಶರಣು ಹೋದರೆ ಅವನು ನಿನಗಿದ್ದ ಚಿಂತಾಭಾರವನ್ನು ಇಳಿಸುವನು. ಪ್ರಾಯಶ್ಚಿತ್ತಕ್ಕಾಗಿ ದುಡ್ಡು ಖರ್ಚು ಮಾಡುತ್ತ ಹೋದರೆ ಪರ್ವತದಷ್ಟು ದುಡ್ಡು ಸಾಲದು. ಆದ್ದರಿಂದ ಹೊನ್ನು ಹೆಣ್ಣು ಮಣ್ಣೆಂಬ ಕರ್ಮದ ಬಲೆಯಲ್ಲಿ ಸಿಕ್ಕು ವೃಥಾ ಕೆಡಬೇಡ. ಬ್ರಾಹ್ಮಣ್ಯವು ಈ ಅಶುದ್ಧ ಕರ್ಮಗಳಿಗೆ ವಿಷಯಗಳಿಗೆ ಇಂಬುಗೊಡುವದು. ಆದರೆ ವೀರಶೈವ ಧರ್ಮದಲ್ಲಿ ಪ್ರಾಯಶ್ಚಿತ್ತಕ್ಕೆ ಅವಕಾಶವಿಲ್ಲ.

"ಹೊನ್ನು ಹೆಣ್ಣು ಮಣ್ಣೆಂಬ ಕರ್ಮದ ಬಲೆಯಲ್ಲಿ ಸಿಲುಕಿ ವೃಥಾ ಬರುದೊರೆ ಹೋಹ ಕೆಡುಕ ಹಾರುವ ನಾನಲ್ಲ. ಕೂಡಲ ಸಂಗಮದೇವನು ವಿಪ್ರಕರ್ಮವ ಬಿಡಿಸಿ ಅಶುದ್ಧನ ಶುದ್ಧನ ಮಾಡಿದನಾಗಿ"

[ಮ. ಭ. ೧೨]

ಇನ್ನು ವೀರಶೈವರ ಶುದ್ಧಾಚರಣೆಯನ್ನು ಹೇಳುತ್ತಾನೆ.

"ಬಾರದು ಬಾರದು ಭಕ್ತಂಗೆ ಪರಧನ, ಪರಸತಿ. ಬಾರದು ಬಾರದು ವಿಷಯಿಗೆ ಪಶುಪತಿ ವ್ರತವು. ಬಾರದು ಬಾರದು ಭವಭಾರಿಗೆ ಒಕ್ಕುದ ಕೊಳ್ಳುವದು. [ಪ್ರ. ಜ್ಞಾ. ೫]

"ಕಿವಿಯ ಸೂತಕ ಹೋಯಿತ್ತು ಸದ್ಗುರುವಿನ ವಚನದಿಂದ. ಕಂಗಳ ಸೂತಕ ಹೋಯಿತ್ತು ಸದ್ಭಕ್ತರ ಕಂಡೆನಾಗಿ. ಕೈಯ ಸೂತಕ ಹೋಯಿತ್ತು ನಿಮ್ಮ ಚರಣವ ಮುಟ್ಟಿದೆನಾಗಿ. ಬಾಯ ಸೂತಕ ಹೋಯಿತ್ತು ನಿಮ್ಮ ಒಕ್ಕುದಕೊಂಡೆನಾಗಿ. ನಾನಾಸೂತಕ ಹೋಯಿತ್ತು ನಿಮ್ಮ ಶರಣರಿಗೆ ಶರಣೆಂದು. ಕೂಡಲಸಂಗಮದೇವಾ ಕೇಳಯ್ಯಾ ಎನ್ನ ಮನದ ಸೂತಕ ಹೋಯಿತ್ತು ನೀವಲ್ಲದಲ್ಲೆಂದರಿದೆನಾಗಿ" [ಪ್ರ. ಭ. ೨]

"ಕೊಲ್ಲೆನಯ್ಯಾ ಪ್ರಾಣಿಗಳ. ಮೆಲ್ಲೆನಯ್ಯಾ ಬಾಯಿಚ್ಚೆಗೆ. ಒಲ್ಲೆನಯ್ಯಾ ಪರಸತಿಯರ ಸಂಗವ [ಮ. ಪ್ರಾ. ೧]

ಆವ ಕುಲವಾದರೇನು? ಶಿವಲಿಂಗವಿದ್ದವನೇ ಕುಲಜನು. ಕುಲವನರಸುವರೆ ಶರಣರಲ್ಲಿ [ಮ. ಭ. ೧೪]

ತನು ನಿಮ್ಮದೆಂದ ಬಳಿಕ ಎನಗೆ ಬೇರೆ ತನುವಿಲ್ಲ. ಮನ ನಿಮ್ಮದೆಂದ ಬಳಿಕ ಎನಗೆ ಬೇರೆ ಮನವಿಲ್ಲ. ಧನ ನಿಮ್ಮದೆಂದ ಬಳಿಕ ಎನಗೆ ಬೇರೆ ಧನವಿಲ್ಲ. ಇಂತೀ ತ್ರಿವಿಧವು ನಿಮ್ಮದೆಂದ ಬಳಿಕ ಎನಗೆ ಬೇರೆ ವಿಚಾರವುಂಟೇ? ಕೂಡಲಸಂಗಮದೇವಾ, ಏಕೋಭಾವ"

(ಪ್ರಾ. ಭ. ೮)

ಹೀಗೆ ಶುದ್ಧಾಚಾರವುಳ್ಳ ವೀರಶೈವರು ಸಕಲ ಜೀವಾತ್ಮರಿಗೆ ಲೇಸನ್ನೇ ಬಯಸುವರಾದ್ದರಿಂದ ಅವರೇ ಕುಲಜರು. ಅವರೇ ವರ್ಣಬ್ರಾಹ್ಮಣರಿಗಿಂತ ಶ್ರೇಷ್ಠರು. "ಮಮಕರ್ತ ಕೂಡಲಸಂಗನ ಶರಣರು ಅಕ್ಷಯರಧಿಕರು ವಿಪ್ರರು ಕೀಳು ಜಗವೆಲ್ಲವರಿಯಲು" (ಮ. ಜ್ಞಾ. ೫೫) ಆದರೆ ಮುನಿಶಾಪಾನಲದಗ್ಧರಾದ ಕಲಿಯುಗದ ಜಾತಿಬ್ರಾಹ್ಮಣರು ಶೂದ್ರರೆಂದು ಕರೆದಾಕ್ಷಣವೇ ಅವರು ಶೂದ್ರರಾಗಬಲ್ಲರೇ? ದೇವತೆಗಳಲ್ಲಿ ಮಹಾ

ಬ್ರಾಹ್ಮಣನೆನಿಸುವ ಶಿವನೋರ್ವನನ್ನೇ ವೀರಶೈವರು ಭಜಿಸುವ ಮೂಲಕ ಇವರೇ ನಿಜವಾದ ಬ್ರಾಹ್ಮಣರು. ಇವರಲ್ಲಿ ಕ್ಷತ್ರಿಯ, ವೈಶ್ಯ, ಶೂದ್ರರೆಂಬ ಭೇದವಿಲ್ಲ. ಆದರೆ ದಕ್ಷಯಾಗದಲ್ಲಿ ಶಿವನ ಶ್ರೇಷ್ಠತ್ವವನ್ನು ಸೆಳೆದು ಶಿವಸುಖವನ್ನು ಅನುಭವಿಸಿ ಬಂದ ವಿಷ್ಣು, ಬ್ರಹ್ಮ, ಇಂದ್ರ, ರವಿ, ಲಕ್ಷ್ಮಿ, ಸರಸ್ವತಿ ಮೊದಲಾದವರು ಪ್ರಮಥ ಗಣಪುಂಗವನಾದ ವೀರಭದ್ರನ ತಾಡನಕ್ಕೊಳಗಾಗಿ ಶಿರವನ್ನು ಹೋಗಾಡಿದ ಬ್ರಹ್ಮನ ವಂಶಜರಾದ ಚಾತುರ್ವರ್ಣ್ಯದವರಿಗೆ ಮಿಗಿಲಾಗಿ ಪ್ರಮಥವಂಶೋದ್ಭವರು ವೀರಶೈವರಾದ್ದರಿಂದ (ಜಾತಿಯೊಳು ಬ್ರಹ್ಮನ ಶಿರವನರಿದಾತ ಸತ್ಪ್ರಮಥೇಂದ್ರವಂಶಜ। ನೀತಕೆನ್ನಂ ಬ್ರಹ್ಮವಂಶಜನೆಂದು ಭಾವಿಸುವೆ] ಆ ಬ್ರಾಹ್ಮಣ್ಯಕ್ಕೂ ಮತ್ತು ಶಿವಭಕ್ತಿಗೂ ಪರಸ್ಪರ ವೈಷಮ್ಯವಿರುವ ಕಾರಣ ಆ ಜಾತಿಬ್ರಾಹ್ಮಣ್ಯವನ್ನು ಬಸವಾದಿ ಪ್ರಮಥರು ಉಪ್ಪೆಂದು ತೂರಿಕೊಟ್ಟರು. ಅದನ್ನು ನಾವು ಪುನಃ ಬಳಕೆಯಲ್ಲಿ ತರುವದು ಪ್ರಮಥದ್ರೋಹ ಶಿವದ್ರೋಹದ ಕಾರ್ಯವಾಗಿದೆ. ಬ್ರಾಹ್ಮಣರು (ನಿಜವಾಗಿ ಮೇಲೆ ಹೇಳಿದಂತೆ ತಾವೇ ಬ್ರಾಹ್ಮಣರಾಗದೆ) ವೀರಶೈವರಿಗೆ ಕೀಳುಜಾತಿಯ ದೋಷಾರೋಪಣೆ ಮಾಡಿದರೆ ಅದು ಸತ್ಯವೆನ್ನಬಹುದೇ? ಭ್ರಾಂತಿಷ್ಟರ ನುಡಿಗೆ ಸಮಾನವಾದ ಅವರ ನುಡಿಯನ್ನು ವಿಚಾರವಂತರು ಲೆಕ್ಕಿಸಬಹುದೇ? ಇದನ್ನೇ ಬಸವನು ತನ್ನ ವಚನದಿಂದ ಸ್ಪಷ್ಟೀಕರಿಸಿರುವನು. "ಇಟ್ಟಿಯ ಹಣ್ಣ ನರಿ ತಿಂದು ಸೃಷ್ಟಿ ತಿರಿಗಿತೆಂಬಂತೆ ಮುಟ್ಟಿಯುನಿಟ್ಟ ದ್ವಿಜರ ಮಾತದೇಕೆ? ಹಗಲು ಕಾಣದ ಗೂಗೆ ಇರುಳಾಯಿತ್ತೆಂದರೆ ಜಗಕ್ಕೆ ಇರುಳಪ್ಪುದೇ ಮರುಳೆ? ಹೋಮದ ನೆವದಿಂದ ಹೋತನ ಕೊಂದು ತಿಂಬ ಅನಾಮಿಕರೊಡನಾಡಿ ಗೆಲುವುದೇನು ಕೂಡಲಸಂಗಮದೇವಾ"

(ಮ. ಜ್ಞಾ. ೫೦)

ಅಂದರೆ ಹೆಂಮುಷ್ಟಿಯ ಪಕ್ವವಾದ ಹಂಣನ್ನು ನರಿಯು ತಿಂದು ಆಮಲೇರಿ ಕಂಣು ಭುಜ ತಿರುಗುತ್ತಿದ್ದುದನ್ನು ಕಂಡು ಜಗತ್ತೆಲ್ಲ ತಿರುಗುತ್ತದೆ. ಪ್ರಳಯ ಕಾಲ ಬಂತೆಂದು ಹೇಳುವ ನರಿಯ ಮಾತಿನಂತೆ ಮುಂಣುಮುಟ್ಟಿಯ ನಾಮವನ್ನು ಹಣೆಗೆ ಹಚ್ಚಿದ ಹಾರುವರ ಕೂಡ ಏನು ಪ್ರಸಂಗ? ಯಾವ ಮಾತೂ ಬೇಡ. ಹಗಲು ಕಂಣು ಕಾಣಿಸದ ಗೂಗೆಯು ಹಗಲಿಗೆ ರಾತ್ರಿಯೆಂದರೆ ಯಾರೂ ನಂಬದಿರುವಂತೆ ವೇದ ಮೊದಲಾದದ್ದರಲ್ಲಿ ಶಿವಾಧಿಕ್ಯವೂ ಶಿವಭಕ್ತಾಧಿಕ್ಯವೂ ಭಸ್ಮರು

ದ್ರಾಕ್ಷೆ ಪಂಚಾಕ್ಷರೀ ಮಂತ್ರವೂ ಹೇಳುತ್ತಿದ್ದರೂ ಅದು ಹೇಳಿಲ್ಲ. ವಿಷ್ಣು ಸರ್ವೋತ್ತಮನೆಂದು ಹೇಳಿದೆ. ಬ್ರಾಹ್ಮಣನೇ ಅಗ್ರಜನೆಂದು ಹೇಳಿದೆ. ತಪ್ತಮುದ್ರೆಗಳನ್ನು ಹಾಕಿಸಿಕೊಳ್ಳಬೇಕೆಂದು ಹೇಳಿದೆಯೆಂದರೆ ಶಾಸ್ತ್ರದ ಇಂಗಿತವನ್ನು ತಿಳಿದವರು ಒಡಂಬಡುವರೇ? ಆದ್ದರಿಂದ ಸರ್ವಸೂತಕಾಂಗರಪ್ಪ ಹಾರುವರ ಸಂಸರ್ಗ ಮಾಡಿ ಅವರ ಕೂಡ ವಾದವ ಮಾಡಬಾರದು. ಕಾರಣ ಬ್ರಾಹ್ಮಣರ ವೃಥಾ ರೋಷಕ್ಕೆ ಅಂಜಿ ವೀರಶೈವರು ತಮ್ಮ ಸದಾಚಾರವನ್ನು ಬಿಡಕೂಡದು.

ಹೀಗೆ ಬಸವನು ಜಾತಿ ಬ್ರಾಹ್ಮಣ್ಯ ವಿಷಯದಲ್ಲಿ ಜುಗುಪ್ಸೆಯನ್ನು ತಾಳಿ ತನ್ನ ತಂದೆತಾಯಿಗಳು ಅನುಸರಿಸಿದ ಪ್ರಾಕೃತ ಧರ್ಮವನ್ನು ನಿರಾಕರಿಸಿ ಲೋಕೋದ್ಧಾರಕ್ಕಾಗಿ ವೀರಶೈವ ಮಾರ್ಗವನ್ನು ಪ್ರಸ್ಥಾಪಿಸಿದನು. ಅದ್ವೈತ ಮತಸ್ಥಾಪನಾಚಾರ್ಯರಾದ ಶಂಕರಾಚಾರ್ಯರು ಕೂಡ ಜಾತಿಯ ಅಭಿಮಾನವನ್ನು ಬಿಟ್ಟಿರಲಿಲ್ಲ. ಈ ಅಭಿಮಾನಕ್ಕನುಗುಣವಾಗಿ ಇವರು ಬ್ರಾಹ್ಮಣರಿಗೆ ಮಾತ್ರ ಸನ್ಯಾಸ ಧರ್ಮವು ಸ್ವೀಕರಿಸಲ್ಪಡತಕ್ಕದ್ದೆಂದು ತಮ್ಮ ಗ್ರಂಥಗಳಲ್ಲಿ ಬರೆದು ತಮ್ಮ ಅದ್ವೈತ ಮತಕ್ಕೆ ನೀರೆರೆದರು. ಶುದ್ಧ ಜೀವರ ಆತ್ಮವಿಕಾಸಕ್ಕೆ ತಡೆಯನ್ನಿಕ್ಕಿದರು. ಶಬ್ದಪಾಂಡಿತ್ಯದಲ್ಲಿಯೇ ಇವರ ವಿಚಾರವು ಪರಿಣಮಿಸಿತು. ನಡೆಯಲ್ಲಿ ಅದು ಇಳಿಯಲಿಲ್ಲ. ಆದರೆ ಬಸವೇಶ್ವರನು ತನ್ನ ನುಡಿನಡೆಗಳಲ್ಲಿ ಏಕಪ್ರಕಾರವಾಗಿದ್ದನು. ಶಿವಭಕ್ತರಲ್ಲಿ ಬಸವನು ಯಾವ ತರದ ಭೇದವನ್ನೆಣಿಸಲಿಲ್ಲ.

"ಕಳ್ಳ, ಬಂದಿಕಾರ, ಹಾವಡಿಗ, ಹಾದರಿಗ, ಬಂಟನೋಲೆಯಕಾರ ನೆಂದೆನಾದರೆ ನೀ ಮುಂತಾಗಿ ಬಂದ ಭಕ್ತರ ನೀನೆನ್ನದಿರ್ದರೆ, ಅದೇ ಶಿವದ್ರೋಹ. ನಡೆನುಡಿ ಹುಸಿಯುಂಟಾದರೆ ಕೂಡಲ ಸಂಗನ ತೋರಿದ ಚನ್ನಬಸವಣ್ಣನಾಣೆ." (ಮ. ಭ. ೧೫)

"ಹೊಲೆವುಂಟೆ ಲಿಂಗವಿದ್ದೆಡೆಯಲ್ಲಿ? ಕುಲವುಂಟೆ ಜಂಗಮವಿದ್ದೆಡೆಯಲ್ಲಿ? ಎಂಜಲುಂಟೆ ಪ್ರಸಾದವಿದ್ದೆಡೆಯಲ್ಲಿ? ಅಪವಿತ್ರದ ನುಡಿಯ ನುಡಿವ ಸೂತಕವೆ ಪಾತಕ. ನಿಷ್ಕಳಂಕ ನಿಜೈಕ್ಯ ತ್ರಿವಿಧ ನಿರ್ಣಯ ಕೂಡಲಸಂಗಮದೇವಾ ನಿಮ್ಮ ಶರಣರಿಗಲ್ಲದಿಲ್ಲ." (ಪ್ರ. ಜ್ಞಾ. ೪)

"ಜೀವಜೀವಾತ್ಮವ ಸರಿ ಎಂದು ಕಂಡರೆ ಸಮುವೇದಿಸದಿಪ್ಪನೇ ಶಿವನು? ತನ್ನ ಮನದಲ್ಲಿ ಯತ್ರ ಜೀವಸ್ತತ್ರ ಶಿವನೆಂದು ಸರ್ವ ಜೀವ

ದಯಾಪಾರಿಯಾದರೆ ಕೂಡಲ ಸಂಗಮದೇವ ಕೈಲಾಸದಿಂದ ಬಂದು ಎತ್ತಿಕೊಳ್ಳದಿಪ್ಪನೇ? (ಪ್ರಾ. ೯.)

ಹೀಗೆ ಬಸವಣ್ಣನ ಸಮತಾಭಾವವು ಹರಡಿದ್ದರೂ ವೇಷಕ್ಕೆ ತಕ್ಕ ಆಚಾರವಿಲ್ಲದಿದ್ದರೆ ಅವರನ್ನು ನಿಷ್ಠುರತನದಿಂದ ಕಾಣುತ್ತಿದ್ದನು. ಜಗದೇವನ ಆಮಂತ್ರಣವನ್ನು ಮೊದಲಿಗೆ ನಿರಾಕರಿಸಿದ್ದೆ ಇದಕ್ಕೆ ತಕ್ಕ ದೃಷ್ಟಾಂತವು.

"ಅಪ್ಯಾಯನಕ್ಕೆ ನೀಡುವೆ ಲಾಂಛನಕ್ಕೆ ಶರಣೆಂಬೆ. ಲಾಂಛನಕ್ಕೆ ತಕ್ಕ ಆಚಾರವಿಲ್ಲದಿದ್ದರೆ ಕೂಡಲಸಂಗಮದೇವಾ ನೀ ಸಾಕ್ಷಿಯಾಗಿ ಛೀ ಎಂಬೆ." (ಮ ಶ. ೨೮) ಅಂದರೆ ಹಸಿವೆಯಿಂದ ಬಳಲಿ ಬಂದ ಜಂಗಮಕ್ಕೆ ಅನ್ನ, ನೀರಡಿಸಿ ಬಂದ ಜಂಗಮಕ್ಕೆ ನೀರು, ತಂಡಿಯಿಂದ ನಡಗುವ ಜಂಗಮಕ್ಕೆ ವಸ್ತ್ರಗಳನ್ನು ಹೊದ್ದಲಿಕ್ಕೆ ಕೊಟ್ಟು ಭಕ್ತಿಯು ಮಾಡುವೆ. ಶಿವಲಾಂಛನಸ್ವರೂಪಿಗಳಾದ ಜಂಗಮರಿಗೆ ನಮಸ್ಕರಿಸುವೆನು. ಶಿವಲಾಂಛನಕ್ಕೆ ಯೋಗ್ಯವಾದ ನಡಾವಳಿಯು ಅವರಲ್ಲಿ ಇಲ್ಲದೆ ಹೋದರೆ ಪರಶಿವ ಲಿಂಗದ ಸಾಕ್ಷಿಯಾಗಿ ಇದು ಜ್ಞಾನಜಂಗಮದ ಆಚರಣೆಯಲ್ಲವೆಂದು ಜರಿದು ಧಿಃಕಾರ ಮಾಡಿಬಿಡುವೆನು.

ಹೀಗೆ ದಯಾದಾಕ್ಷಿಣ್ಯವನ್ನು ಅನಾಚಾರಕ್ಕೆ ತೋರಿಸದ ನ್ಯಾಯ ನಿಷ್ಠುರನಾದ ಬಸವನು ಬ್ರಾಹ್ಮಣಾದಿ ಪ್ರಾಕೃತ ಜೀವಿಗಳಂತೆ ಲೌಕಿಕಾಚಾರವನ್ನು ಅನುಸರಿಸದೆ ಆರ್ಯಸಮಾಜ ಪ್ರವರ್ತಕನಾದ ಸ್ವಾಮಿ ದಯಾನಂದ ಸರಸ್ವತಿ ಮತ್ತು ಭಗವಾನ ಗೌತುಮಬುದ್ಧ ಇವರಿಗೂ ನಡೆಯಲಸಾಧ್ಯವಾದ ಜಾತಿಧರ್ಮವನ್ನು ಅಲ್ಲಗಳೆದು ಚಾಂಡಾಲನಾದರೂ ಶಿವಭಕ್ತಿಯುಳ್ಳ ಶಿವನಾಗಮಯ್ಯ ಹರಳಯ್ಯ ಇವರಿಗೆ ಶರಣು ಹೋದ ಮತ್ತು ಹೀಗೆ ನಡೆದು ಸಾಮವೇದ ವಾಕ್ಯವನ್ನು ಅಕ್ಷರಶಃ ಬಳಕೆಯಲ್ಲಿ ತಂದ (ಅಪಿವಾಯುಶ್ಚಾಂಡಾಲ ಶ್ಶಿವೇತಿವಾಚಂ ವದೇತ್ ತೇನ ಸಹ ವಿಶೇತತೇನವ ಸಹ ವಸೇತ ತೇನ ಸಹ ಭುಂಜೀತ ಎಂಬದನ್ನು) ಅಂದರೆ ಲೋಕದ ಜನರು ಬೆರಗುಗೊಳ್ಳುವಂತೆ ಆಚರಿಸಿದ ಬಸವನು ಸಮಾಜ ಸುಧಾರಕರಲ್ಲಿ ಅಗ್ರಗಣ್ಯನು.

ಸಮಾಜವನ್ನು ಧರ್ಮದ ಕಟ್ಟಳೆಯಲ್ಲಿ ಕಟ್ಟಿ ರಾಷ್ಟ್ರೈಕಕ್ಕೆ ಕಾರಣೀಭೂತನಾದ ಬಸವನ ಪ್ರಾಶಸ್ತ್ಯವನ್ನು ಎಷ್ಟು ಕೊಂಡಾಡಿದರೂ ಕಡಿಮೆಯೆ. ಆದರೆ ವೀರಶೈವ ಸಮಾಜದ ದುರ್ದೈವದಿಂದ ಆತನು ಲೋ

ಕಕ್ಕೆ ಮಾಡಿದುಪಕಾರವನ್ನರಿಯದೆ ಅಥವಾ ಅರಿತಾದರೂ ಲೌಕಿಕರಂತೆ ದುರಭಿಮಾನಪೂರಿತರಾದ ನಮ್ಮಲ್ಲಿ ಕೆಲವರು ಆತನನ್ನೂ ಆತನು ಮಾಡಿದ ಸುಧಾರಣೆಯನ್ನೂ ಜರಿದು ನುಡಿಯುತ್ತಿರುವರು. ವರ್ಣಭೇದವಿಲ್ಲದ ಮತದಲ್ಲಿ ವರ್ಣಭೇದವನ್ನು ಕಲ್ಪಿಸುವರು. ಭಕ್ತನದೊಂದು ಜಾತಿ ಜಂಗಮನದೊಂದು ಜಾತಿ ಎಂದು ಅಜ್ಞಾನಿಗಳಂತೆ ಬೊಗಳುತ್ತಿದ್ದರೂ ಇವರಿಗೆ ಸಮಾಜದಲ್ಲಿ ಮಾನಮನ್ನಣೆಯೆಂದರೆ ವೀರಶೈವ ಸಮಾಜದಲ್ಲಿ ನ್ಯಾಯನಿಷ್ಠುರಪರರಾದ ನಾಯಕರಿಲ್ಲವೆಂದು ಹೇಳಬೇಕಾಗುತ್ತದೆ.

ನಾನು ಸಪ್ರಮಾಣವಾಗಿ ಮೇಲೆ ತೋರಿಸಿದ್ದರ ಮೇಲಿಂದ ಪ್ರತಿಯೊಬ್ಬ ವಿವೇಕಿಗೆ ವೀರಶೈವ ಮಾರ್ಗವು ಜಾತಿಬ್ರಾಹ್ಮಣ್ಯಕ್ಕಿಂತ ಬಲು ಮಿಗಿಲಾದದ್ದೆಂದು ಹೊಳೆಯದಿರದು. ಆದರೆ ಈಗ ಗುರುವರ್ಗದವರಲ್ಲಿ ಕೆಲವೊಂದು ಪಂಗಡದವರು ನಿಜಸ್ಥಿತಿಯನ್ನು ತಿಳಿದುಕೊಳ್ಳಲು ಇಚ್ಛಿಸದೆ ವೀರಶೈವಕ್ಕೆ ಬ್ರಾಹ್ಮಣ್ಯವನ್ನು ಹೊಂದಿಸತೊಡಗಿರುವರು. ಇದು ಪಾಪದಾಯಕ ಕಾರ್ಯವೆಂದು ಅವರಿಗೆ ಬುದ್ಧಿವಾದ ಹೇಳಿದರೂ ಕೇಳದೆ, ತಮ್ಮ ಪ್ರತಿಗಾಮಿ ಮಾರ್ಗದಲ್ಲಿಯೇ ಆನಂದಪಡಹತ್ತಿದ್ದಾರೆ. ಇದರಿಂದ ಈ ಗುರುವರ್ಗದವರ ಅಭಿಪ್ರಾಯಗಳಲ್ಲಿ ಎಳ್ಳಷ್ಟಾದರೂ ನಿಜಾಂಶವು ಇಲ್ಲವೆಂದು ನಿಸ್ಸಂದೇಹವಾಗಿ ಹೇಳಬಹುದು.

"ಆದಿಯಲ್ಲಿ ಶಿವ ಬೀಜವಲ್ಲದವರಿಗೆ ವೇದ್ಯವಾಗದು ಶಿವಜ್ಞಾನ ಶಿವಭಕ್ತಿ. ಲಿಂಗಸ್ಥಲವಳವಡದು. ಜಂಗಮಸ್ಥಲವಳವಡದು. ಪಾದೋದಕ ಪ್ರಸಾದಸ್ಥಲವಳವಡದು. ನರಕದಲ್ಲಿ ಬೀಳುವ ಕರ್ಮಿಗಳಿಗೆ ಕೂಡಲ ಸಂಗನ ಶರಣರನುಭಾವ ನೆಲೆಗೊಳ್ಳದು." (ಶ. ಜ್ಞಾ. ೫)

"ಕೂಡಲ ಸಂಗಯ್ಯನನರಿಯದ ದ್ವಿಜರೆಲ್ಲ ಭ್ರಮಿತರು. ಮಹಾದಾನಿ ಕೂಡಲ ಸಂಗಯ್ಯ ನೊಲಿದು ಮಾದಾರ ಚನ್ನಯ್ಯನ ಮನೆಯಲುಂಡ. ವೇದವನೋದಿದವರು ಲಿಂಗವ ನೊಲಿಸಿದುದ ತೋರಿರೋ?" ಎಂದು ಬಸವನು ತನ್ನ ವಚನದಲ್ಲಿ ವೈದಿಕರನೆಲ್ಲ ಆಹ್ವಾನಿಸಿದ್ದಾನೆ. 'ಮಮ ಕಾಯೊಭಕ್ತಕಾಯಶ್ಚ' ಎಂಬ ಶಿವನ ವಾಕ್ಯವಿದ್ದು ಶಿವಭಕ್ತಿಗೆ ಮೆಚ್ಚಿ ಶಿವನು ಬಾಣನ ಬಾಗಿಲ ಕಾಯ್ದನು. ಸೌಂದರ ನಂಬಿಗೆ ಕುಂಟಣಿಯಾದನು. ಪಿಟ್ಟವ್ವೆ ಎಂಬ ಭಕ್ತಳ ಬಿಟ್ಟಿಯ ಕೆಲಸ ಮಾಡಿದನು. ಹೀಗೆ ಅನೇಕ ಶಿವಭಕ್ತರಿಗೆ

ಶಿವನು ಪ್ರತ್ಯಕ್ಷನಾಗಿ ಅವರ ಊಳಿಗವ ಮಾಡಿದನು. ಆದರೆ ವೇದಾಗಮಂಗಳಲ್ಲಿ ನಿಷ್ಣಾತರಾದ ಸಕಲ ಶಾಸ್ತ್ರ ಪುರಾಣ ಕೋವಿದರಾದ ವಿದ್ವತ್ಪೂರ್ಣ ಬಾಷ್ಯೆಗಳನ್ನು ಬರೆದ ವಿಪ್ರರೆ ಯಾವ ಆಚಾರ್ಯರಿಗೆ ಶಿವನು ಒಲಿದನು? ಕಾಶೀರಾಮೇಶ್ವರ ದರ್ಶನ ಮಾಡಿ ಗಂಗಾ ಯಮುನೆಯಲ್ಲಿ ಮಿಂದು ಶುಚಿರ್ಭೂತರಾದೆವೆನ್ನುವ ಯಾವ ವಿಪ್ರರಿಗೆ ಈಶನು ಊಳಿಗವ ಮಾಡಿದನು? ಲಗ್ನ ತಿಥಿ ವಾರ ನಕ್ಷತ್ರ ಮೊದಲಾದ ಜ್ಯೋತಿಷದಲ್ಲಿ ಅಪ್ರತಿಮರಾದ ಯಾರು ಅಶುಭವನ್ನು ಕಾಣದೆ ಹೋದರು? ವೇದಶಾಸ್ತ್ರಾಗಮ ಪುರಾಣಗಳನ್ನೋದದೆ ಯಾವ ತೀರ್ಥಯಾತ್ರೆ ಮಾಡದೆ ಶಿವನಲ್ಲಿ ಅನನ್ಯ ಭಕ್ತಿಯುಳ್ಳ ಮಾದರ ಚನ್ನಯ್ಯ ಡೋಹರ ಕಕ್ಕಯ್ಯ ಇವರ ಮನೆಯ ಅಂಬಲಿಯನ್ನು ಶಿವನು ಪ್ರೀತಿಯಿಂದ ಉಂಡನು. ಇಂತಹ ಶಿವಶರಣರೇ ಅಪ್ರತಿಮರು. ಇವರ ಮತವೇ ಶ್ರೇಷ್ಠ. ಇವರ ಪಂಥವೇ ಅನುಸರಿಸಲು ಯೋಗ್ಯವಾದುದು. ಇದನ್ನು ವಾಚಕರು ಪರಾಮರಿಸಲಿ.

ಈ ಗುರುವರ್ಗದವರಿಗೆ ನಾನು ನಮ್ರಭಾವದಿಂದ ಬೇಡಿಕೊಳ್ಳುವದೇನಂದರೆ— ಯಾವದಾದರೊಂದು ಮಾತಿನ ಸತ್ಯತೆಯನ್ನು ಕಂಡುಹಿಡಿಯಬೇಕಾದರೆ, ಆತ್ಮಲಾಭದ ಚಿಂತೆಯನ್ನು ಕಿತ್ತೊಗೆಯಬೇಕು. ಯಾವ ಪಕ್ಷದಲ್ಲಿಯೂ ಆಸಕ್ತಿಯನ್ನು ತೋರಿಸದೆ, ನಿರಭಿಮಾನದಿಂದ ನಿರ್ಭಿಡೆಯಿಂದ ಅದನ್ನು ಕಿಕ್ಕಿನೋಡಬೇಕು. ಅಂದರೆ ಮಾತ್ರ ನಮಗೆ ಸತ್ಯವು ಗೋಚರವಾಗುವದು. ಮತ್ತು ಸಮಾಜದ ಗೌರವವೇ ನಮ್ಮ ಗೌರವ, ಅದರ ಅಗೌರವವೇ ನಮ್ಮ ಅಗೌರವ, ಎಂಬ ಭಾವದಿಂದ ಕೂಡಿರಬೇಕು. ಮನುಷ್ಯನು ತಪ್ಪು ವಿಚಾರಗಳಲ್ಲಿ ನಿಮಗ್ನನಾದರೆ, ಅವನ ಮುಂದಿನ ಪ್ರಗತಿಯು ಕುಂಠಿತವಾಗುವದು. ಕೊಳಚ ನೀರು ಅನಾರೋಗ್ಯಕ್ಕೆ ಕಾರಣವಾಗುವಂತೆ ಭ್ರಮಾತ್ಮಕ ವಿಚಾರಗಳೂ ತಪ್ಪು ನಡಾವಳಿಯೂ ಮನುಷ್ಯನ ಅಧೋಗತಿಗೆ ಕಾರಣವಾಗುತ್ತವೆ. ಆದ್ದರಿಂದ ಬಸವನು ಬ್ರಾಹ್ಮಣರಿಗೆ ಸದುಪದೇಶ ಮಾಡಿದಂತೆ ನಾನು ಅತಿ ವಿನಯದಿಂದ ಈ ಪಂಗಡದವರಿಗೆ ಅರಿಕೆ ಮಾಡಿಕೊಳ್ಳುತ್ತೇನೆ.

"ಹಾರುವರೆಲ್ಲರೂ ನೆರೆದು ಶೂದ್ರನ ಹಾರುವನ ಮಾಡುವಲ್ಲಿ, ನಂದಿಮುಖವಲ್ಲದೆ ಮಾಡಲಾಗದು. ವಿಭೂತಿ ಇಲ್ಲದೆ ಮತ್ತೇನೂ ಧರಿಸಲಾಗದು. 'ಭರ್ಗೋದೇವಸ್ಯ' ಮಂತ್ರವಲ್ಲದೆ ಮತ್ತೇನೂ ಜಪಿಸಲಾ

ಗದು. ನಿಮ್ಮಿಂದ ಕುಲಜರಾಗಿ ಮತ್ತನ್ಯ ದೈವಕ್ಕೆರಗುವ ಜಗದನ್ಯಾಯಿಗಳನೇನೆಂಬೆ ಕೂಡಲ ಸಂಗಮದೇವಾ." (ಮ. ಜ್ಞಾ. ೮೬)

ಅಂದರೆ ತಂದೆ ಬ್ರಾಹ್ಮಣ ತಾಯಿ ಶೂದ್ರಳು ಇಂತಹ ತಾಯಿ ತಂದೆಗಳಿಂದ ಹುಟ್ಟಿದ ಕೂಸು ಶೂದ್ರನು. ಇವನನ್ನು ಎಂಟು ವರ್ಷವಾದಬಳಿಕ ಬ್ರಾಹ್ಮಣನನ್ನು ಮೌಂಜೀ ಬಂಧನದಿಂದ ಮಾಡುವಾಗ ನಾಂದೀ ಪೂಜೆಯನ್ನು ಮೊದಲು ಮಾಡುವರು. ಹನುಮಂತ ಅಥವಾ ಗರುಡನ ಮೂರ್ತಿಯನ್ನು ಅಲ್ಲಿ ತರುವದಿಲ್ಲ. ಮತ್ತು ಚಿದ್ವಿಭೂತಿಯನ್ನು ಧರಿಸುವದಲ್ಲದೆ, ಮಟ್ಟಿ ಮಂಣು ನಾಮುವನ್ನು ಧರಿಸರು. ಮತ್ತು ಪರಶಿವಲಿಂಗ ಪ್ರಾಶಸ್ತಿಯನ್ನು ವರ್ಣಿಸುವ "ಭರ್ಗೋದೇವಸ್ಯ" ಎಂಬ ಗಾಯತ್ರೀ ಮಂತ್ರವನ್ನು ಉಪಯೋಗಿಸುವರು. ಮತ್ತಾವ ಮಂತ್ರವನ್ನೂ ಅಲ್ಲಿ ಒದಲಾಗದು. ಹೀಗೆ ನೀವು ಮಾಡಿದ ವಿಧಿಯಿಂದ ಕುಲಶ್ರೇಷ್ಠರಾಗಿ ಬ್ರಾಹ್ಮಣರಾಗಿ, ಪುನಃ ನೀಚ ದೈವಂಗಳಿಗೆ ನಮಸ್ಕಾರ ಮಾಡುತ್ತಿರುವದರಿಂದ, ಇಂತಹ ಪರಸ್ಪರ ವಿರುದ್ಧ ವರ್ತನೆಯಿಂದ ಕೂಡಿದವರಿಗೆ ನಾನೇನುಹೇಳಲಿ?" ಅದರಂತೆ ಬ್ರಾಹ್ಮಣ್ಯವು ಭವಚಕ್ರದಲ್ಲಿ ತಿರುಗಿಸುವದು. ಶಿವಭಕ್ತಿಯು ಭವಬಂಧನವನ್ನು ಛೇದಿಸುವದು. ಬ್ರಾಹ್ಮಣ್ಯವು ಅಹಂಕಾರ ಮಮಕಾರಕ್ಕೆ ತವರುಮನೆಯು. ಶಿವಭಕ್ತಿಯು ನಿರಹಂಕಾರದ ಮೂಲವು. ಬ್ರಾಹ್ಮಣ್ಯವು ಜೀವ ಹಿಂಸೆಗೆ ಕಾರಣವು. ಶಿವಭಕ್ತಿಯು ಜೀವನ್ಮುಕ್ತಿಗೆ ಬೀಜವು. ಇಂತಹ ಪರಸ್ಪರ ವಿರುದ್ಧವಾದ ವೀರಶೈವ ಬ್ರಾಹ್ಮಣ ಸಮ್ಮೇಳದಿಂದ ದುರ್ಗತಿಯಲ್ಲದೆ ಸದ್ಗತಿಯಾಗದು. ಇದನ್ನೇ ನಮ್ಮ ಶರ್ಮರು ಚನ್ನಾಗಿ ವಿಚಾರ ಮಾಡಲಿ. ಶೋಧಿಸಿ ನೋಡಲಿ. ಸತ್ಯಕ್ಕೆ ಸಾವಿಲ್ಲ, ಅಸತ್ಯಕ್ಕೆ ನೆಲೆಯಿಲ್ಲ.

ಭಾರತದ ಸದ್ಯದ ಪರಿಸ್ಥಿತಿಯನ್ನು ಕಣ್ದೆರೆದು ನೋಡುವ ಪ್ರತಿಯೊಬ್ಬ ವಿವೇಕಿ ಮನುಷ್ಯನಿಗೆ ರಾಷ್ಟ್ರದಲ್ಲಿ ಪರಸ್ಪರ ಸಂಘಟನೆ ಸಮಾ[illegible]ಕ್ಯ ಸಾರ್ವತ್ರಿಕ ಒಕ್ಕಟ್ಟು ಹುಟ್ಟದೆ, ಸ್ವಾತಂತ್ರ್ಯ ಸುಖವು ಲಭಿಸುವದಿಲ್ಲ, ಇಷ್ಟೇ ಅಲ್ಲ, ಆದರೆ ಆ ಸಮಾಜದ ಇರುವಿಕೆಗೇನೆ ಭಂಗವುಂಟಾಗುವದೆಂಬ ಭೀತಿ ಹುಟ್ಟಿದೆ. ನಮ್ಮೊಳಗಿನ ಪರಸ್ಪರ ಕಲಹವೇ ಪರಕೀಯರ ಆಳಿಕೆಗೆ ಒತ್ತಾಸರೆ ಸಿಕ್ಕುತ್ತಲಿದೆ. ದೇಶೀಯರು ದಾಸ್ಯಶೃಂಖಲೆಯಿಂದ ನಾನಾತರದ ಕಷ್ಟನಷ್ಟಗಳಿಗೆ ಗುರಿಯಾಗುತ್ತಿದ್ದಾರೆ. ಇದನ್ನರಿತೇ ಮುಂದಾಲೋಚನೆಯುಳ್ಳ ಅನೇಕ ದೇಶ ಹಿತಚಿಂತಕ ಮಹಾನುಭಾ

ವರು ನರಜಾತಿಯ ಬೇರನ್ನು ಕಿತ್ತೊಗೆಯಹತ್ತಿರುವರು. ಕುಲೀನ ಬ್ರಾಹ್ಮಣರಲ್ಲಿ ಜನಿಸಿ ಸದಾಚಾರ ನಿಷ್ಠರಾದ ಮತ್ತು ದೇಶಭಕ್ತರಾದ ಪಂಡಿತ ಮದನಮೋಹನ ಮಾಲವೀಯರಂಥ ಕಟ್ಟಾ ವೈದಿಕರು ಕೂಡ, ಶೂದ್ರನು ವೇದಮಂತ್ರವನ್ನು ಕೇಳಿದಲ್ಲಿ ಆತನ ಕಿವಿಯಲ್ಲಿ ಕಾದ ಸೀಸ ರಸವನ್ನು ಹೊಯ್ಯಬೇಕೆಂದು ಹೇಳುವ ಶಾಸ್ತ್ರವಿಧಿಯನ್ನು ಮೀರಿ, ಮೊನ್ನೆ ಮೊನ್ನೆ ಶಿವನ ಪ್ರೀತಿಯ ಸ್ಥಾನವಾದ ಕಾಶೀ ನಗರದಲ್ಲಿ ಅಸ್ಪೃಶ್ಯ ವರ್ಗ ದವರಿಗೆ ವೈದಿಕ ಮಂತ್ರದಿಂದ ದೀಕ್ಷೆ ಕೊಡಿಸಿ ೩೦೦ ಜನರನ್ನು ಪಾವನಾತ್ಮಕರನ್ನಾಗಿ ಮಾಡಿದ ಬಿಸಿ ಬಿಸಿ ಉದಾಹರಣೆಯನ್ನು ನಮ್ಮ ಶರ್ಮರು ಕೇಳದಿರಲಾರರು.

ರಾಷ್ಟ್ರದ ಅಥವಾ ತಾನು ಜನಿಸಿದ ಸಮಾಜದ ಘನತೆಯನ್ನು ಹೆಚ್ಚಿಸುವದಕ್ಕೆ ತನ್ನಿಂದಾದಷ್ಟು ಎತ್ತುಗಡೆ ಮಾಡುವುದು ಯೋಗ್ಯವೋ? ಅಥವಾ ಅದನ್ನು ರಸಾ ತಳಕ್ಕಿಳಿಸಿ ತನ್ನ ಸ್ವಂತ ಮೇಲ್ಮೆಯನ್ನು ಸಾಧಿ ಸುವುದು ವಿಹಿತವೋ? ಇದನ್ನು ನಮ್ಮ ಶರ್ಮರು ತೂಗಿ ನೋಡಲಿ. ನಮ್ಮ ಭಗವಾನ್ ಬಸವದೇವನು ಮಾಡಿದಷ್ಟು ಸಾಹಸ ಕಾರ್ಯವನ್ನು ಇವರಿನ್ನೂ ಯಾರೂ ಮಾಡಿಲ್ಲ. ಬಸವೇಶ್ವರನು ಸಮಾಜ ಸುಧಾರಣೆ ಯ ಮತ್ತು ರಾಷ್ಟ್ರದ ಸಂಘಟನೆಯ ಕೆಲಸದಲ್ಲಿ ತೋರಿಸಿದ ನೈತಿಕ ಧೈರ್ಯಸ್ಥೈರ್ಯಾದಿ ಲೋಕೋತ್ತರ ಗುಣವನ್ನು ಈವರೆಗೆ ಯಾರೂ ತೋರಿಸಿಲ್ಲ. ಇದು ನಮ್ಮ ಶರ್ಮರಿಗೆ ಪೂರ್ಣ ಮನವರಿಕೆಯಾಗಿದ್ದರೂ ತಮ್ಮ ಭ್ರಮಾತ್ಮಕ ಬುದ್ಧಿಯಿಂದ ಇಂತಹ ಮಹಾತ್ಮನನ್ನು ಕೊಂಡಾ ಡದೆ ಅವನನ್ನು ಮನಸೋಕ್ತನಿಂದಿಸುತ್ತಾ ನಡೆದಿರುವದನ್ನು ನೋಡಿದರೆ ಶರ್ಮರ ಅವಸಾನ ಕಾಲವು ತೀರ ಸಮೀಪಿಸಿದೆ ಎನ್ನಬೇಕಾಗುವದು. ಆದ್ದರಿಂದ ನಾಳೆ ನಾಡದೆನ್ನದೆ ಶರ್ಮರು ತಪ್ಪು ಹಾದಿಯನ್ನು ಬಿಟ್ಟು ಬಸವನು ತೋರಿಸಿದ ಸನ್ಮಾರ್ಗದಲ್ಲಿ ಚರಿಸಿ ಇಹಪರದಲ್ಲಿ ಕೀರ್ತಿಭಾಜ ನರಾಗಲೆಂದೂ ಇವರಿಗೆ ಸದ್ಬುದ್ಧಿಯನ್ನು ದಯಪಾಲಿಸಲೆಂದೂ ಆ ಕರುಣಾ ಮೂರ್ತಿಯಾದ ಬಸವನನ್ನು ಅನನ್ಯಭಾವದಿಂದ ಬೇಡಿಕೊಳ್ಳುತ್ತೇನೆ.

ಬಸವನು ವೃಷಭನ ಅವತಾರನೆಂದೂ ನಮ್ಮ ತಿಳುವಳಿಕೆ. ವೃಷ ಭನು ಧರ್ಮಸ್ವರೂಪನು. ನಾನು ಮೇಲೆ ಹೇಳಿದಂತೆ ಆತನು ಶೈವ ಬ್ರಾಹ್ಮಣರ ಕುಲದಲ್ಲಿ ಜನಿಸಿದಾಗ್ಯೂ, ಪರಮ ಶಿವಧರ್ಮ ಸ್ವರೂ ಪನೇ. ಈತನು ಹಿಂದುಗಳು ಇತರರು ಕ್ರಿಸ್ತಿಮತದಲ್ಲಿ ಪ್ರವಿಷ್ಟರಾದಂತೆ,

ವೀರಶೈವ ಮತದಲ್ಲಿ ಮತಾಂತರವನ್ನು ಹೊಂದಿಬರಲಿಲ್ಲ. ಯಾಕೆಂದರೆ ಅವನು ನಿತ್ಯವಾಗಿ ವೀರಶೈವನೇ ಆಗಿರುವನು. ಕೆಲವು ಶಾಸ್ತ್ರಿಗಳು ತಪ್ಪು ಗ್ರಹಿಸುವಂತೆ, ಆತನು ತನ್ನ ಬ್ರಾಹ್ಮಣ ಕುಲದಲ್ಲಿಯೇ ಉಳಿದು ಬ್ರಾಹ್ಮಣನಾದ ಬಲದೇವ ಮಂತ್ರಿಯ ಮಗಳಾದ ಗಂಗಾಂಬಿಕೆಯನ್ನು ಲಗ್ನವಾಗಲಿಲ್ಲ. ಬಸವನ ಭಕ್ತಿಪ್ರಭಾವದಿಂದ ಬಲದೇವನು ವೀರಶೈವನಾದ್ದರಿಂದಲೇ ಭವಿಗೆ ತನ್ನ ಮಗಳನ್ನು ಕೊಡದೆ ವೀರಶೈವ ಸ್ವರೂಪನಾದ ಬಸವನಿಗೆ ಕೊಟ್ಟು ವಿವಾಹ ಬೆಳಿಸಿದನು.

ಈ ಲೇಖವನ್ನು ನಾನು ಕೇವಲ ನನ್ನ ಮತಬಾಂಧವರ ಅವಗಾಹನೆಗಾಗಿ ಬರೆದಿರುವೆನಲ್ಲದೆ, ಬ್ರಾಹ್ಮಣರನ್ನೂ ಅವರ ಧರ್ಮವನ್ನೂ ಟೀಕಿಸುವದಕ್ಕಾಗಿಯಲ್ಲ. ನನ್ನ ದೇಶಬಾಂಧವರಾದ ಬ್ರಾಹ್ಮಣ ಮಿತ್ರರಿಗೆ ಇದರಿಂದ ನೋವಾದಲ್ಲಿ ಅವರ ಕ್ಷಮಾಪಣೆಯನ್ನು ನಾನು ಬೇಡುತ್ತೇನೆ. ಈ ಲೇಖದಿಂದ ಶರ್ಮ ವರ್ಗಕ್ಕೆ ತಾಪವಾಗಿದ್ದರೆ ಅದನ್ನು ಕೆಳಗಿನ ಬಸವನ ವಚನಾಮೃತ ಪಾನದಿಂದ ಶಾಂತಗೊಳಿಸಬೇಕು.

“ತಂದೆ ಮಕ್ಕಳಿಗೆ ಬುದ್ಧಿ ಹೇಳುವಲ್ಲಿ ತಪ್ಪಿಂಗೆ ಮುನಿವರಲ್ಲದೆ ಪ್ರಾಣಕ್ಕೆ ಮುನಿಯರು. ಲಿಂಗವಂತನು ಲಿಂಗವಂತರಿಗೆ ಬುದ್ಧಿಯ ಹೇಳುವಲ್ಲಿ, ಅವರವರ ಗುಣಕ್ಕೆ ಮುನಿವನಲ್ಲದೆ ಲಾಂಛನಕ್ಕೆ ಮುನಿಯನು. ಲಿಂಗಭಕ್ತನು ಲಿಂಗಪಥವ ಹೇಳಿದರೆ ಮಚ್ಚರಿಸುವ (ಮತ್ಸರ ಮಾಡುವರ) ಮೆಚ್ಚ ನಮ್ಮ ಕೂಡಲ ಸಂಗಮದೇವ.” (ಮ ಜ್ಞಾ. ೧೨೬)



# ಪುರಾಣಪ್ರಸಿದ್ಧರಾದ ರೇಣುಕಾಚಾರ್ಯರ,

ಅಥವಾ

## ರೇವಣಸಿದ್ಧರ ಕಾಲನಿರ್ಣಯ.

(ಲೇಖಕ:— ಜೀರಗೆ ಬಸವಲಿಂಗಪ್ಪ ರಿಟೈರ್ಡ ಹೈಕೋರ್ಟ ಹೆಡ್‌ಟ್ರಾನ್
ಸ್ಲೇಟರ ಅರಳೇಪೇಟೆ ಬೆಂಗಳೂರಸಿಟಿ)

ವೀರಶೈವ ಮತದಲ್ಲಿ ಬಸವೇಶನಂತೆ ಮಹತ್ಕಾರ್ಯಗಳನ್ನು ಮಾಡಿ ಗುರುಸ್ಥಾನವನ್ನು ಹೊಂದಿ ವೀರಶೈವ ಪ್ರಸರಣವನ್ನು ಮಾಡಿದ ಪಂಚಾಚಾರ್ಯರಲ್ಲಿ ಒಬ್ಬರಾದ ರೇಣುಕಾಚಾರ್ಯ ಅಥವಾ ರೇವಣಸಿದ್ಧ ಎಂಬ ನಾಮವುಳ್ಳ ಮಹಾಪುರುಷರ ಚಾರಿತ್ರವಿಷಯದಲ್ಲಿ ಈ ವರೆಗೂ ಕೆಲಕೆಲವು ಭಿನ್ನಾಭಿಪ್ರಾಯಗಳಿದ್ದವು. ಈಗ ನಾನು ಈ ಕೆಳಗೆ ಬರೆಯುವ ಈಚೆಗೆ ಪರಿಶೋಧಿಸಿ ಕಂಡುಹಿಡಿದ ಸತ್ಯವಾದ ಸಂಗತಿಗಳಿಂದ ರೇಣುಕಾಚಾರ್ಯ ಅಥವಾ ರೇವಣಸಿದ್ಧ ಎಂಬ ಹೆಸರುಳ್ಳ ಮಹಾತ್ಮರ ಕಾಲವು ನೆಲೆಯಾಗಿ ಗೊತ್ತಾದಂತೆ ನಾನು ಅಭಿಪ್ರಾಯಪಡುತ್ತೇನೆ. ಈ ಸಂಗತಿಯನ್ನು ನಾನು ತಿಳಿಯುವದಕ್ಕೆ ಮ|| ರಾ|| ಡಾ|| ನಂದೀಮಠರವರ ಕೆಲವು ಶಿಲಾಶಾಸನಗಳ ಶೋಧನವೇ ಮೂಲವಾಗಿರುತ್ತದೆ. ಮ|| ರಾ|| ಡಾ. ನಂದೀಮಠರವರು ಚಾರಿತ್ರದ ಸತ್ಯತೆಯಮೇಲೆ ದೃಷ್ಟಿ ಇಟ್ಟು ಶೋಧನಕಾರ್ಯವನ್ನು ಮಾಡತೊಡಗಿರುವದು ವೀರಶೈವದ ಭಾಗ್ಯೋದಯವೇ ಸರಿ.

ಸ್ವಯಂಭುವಾಗಮದಲ್ಲಿ ಪಂಚಾಚಾರ್ಯರು ನಾಲ್ಕು ಯುಗಗಳಲ್ಲಿ ಅವತರಿಸಿದರೆಂತಲೂ ಅಂದರೆ ಕೃತಯುಗದಲ್ಲಿ ರೇಣುಕ, ದಾರುಕ, ಘಂಟಾಕರ್ಣ, ಗಜಕರ್ಣ, ವಿಶ್ವಕರ್ಣ ಎಂಬ ನಾಮದಿಂದಲೂ, ತ್ರೇತಾಯುಗದಲ್ಲಿ ಏಕಾಕ್ಷರ, ದ್ವ್ಯಕ್ಷರ, ತ್ರ್ಯಕ್ಷರ, ಚತುರಕ್ಷರ, ಪಂಚಾಕ್ಷರ ಎಂಬ ನಾಮದಿಂದಲೂ, ದ್ವಾಪರಯುಗದಲ್ಲಿ ಏಕಮುಖ, ದ್ವಿಮುಖ, ತ್ರಿಮುಖ, ಚತುರ್ಮುಖ, ಪಂಚಮುಖ ಎಂಬ ನಾಮದಿಂದಲೂ, ಕಲಿಯುಗದಲ್ಲಿ ರೇವಣಸಿದ್ಧ, ಮರುಳಸಿದ್ಧ, ಪಂಡಿತಾರಾಧ್ಯ, ಏಕೋರಾಮ ವಿಶ್ವಾರಾಧ್ಯ ಎಂಬ ನಾಮದಿಂದಲೂ ಅವತರಿಸಿದರೆಂದು ಬರೆದಿರುತ್ತದೆ. ಅದೇ ಸ್ವಯಂಭುವಾಗಮದಲ್ಲಿ ಶ್ರೀಮದಲ್ಲಮಪ್ರಭುದೇವರೂ ನಾಲ್ಕು

ಯುಗಗಳಲ್ಲಿ ಅವತರಿಸಿದರೆಂತಲೂ ಅಂದರೆ ಕೃತಯುಗದಲ್ಲಿ ನಿರಂಜನ ದೇವರೆಂಬ ನಾಮದಿಂಬಲೂ, ತ್ರೇತಾಯುಗದಲ್ಲಿ ನಿರ್ಮಾಯದೇವರೆಂಬ ನಾಮದಿಂದಲೂ, ದ್ವಾಪರಯುಗದಲ್ಲಿ ನಿಷ್ಕಲ ದೇವರೆಂಬ ನಾಮದಿಂದಲೂ, ಕಲಿಯುಗದಲ್ಲ ಪ್ರಭುದೇವರೆಂಬ ನಾಮದಿಂದಲೂ ಅವತರಿಸಿದರೆಂದು ಬರೆದಿದೆ. ಪಂಚಾಚಾರ್ಯರ ನಾಲ್ಕುಯುಗದುತ್ಪತ್ತಿಯು ವೀರ ಲೈಂಗ್ಯೋಪನಿಷತ್ತೆಂಬ ಒಂದು ಉಪನಿಷತ್ತಿನಲ್ಲಿಯೂ ಬರೆದಿರುತ್ತದೆ. ಈ ವಿಚಾರಗಳೆಲ್ಲವೂ ಚಾರಿತ್ರಸಿದ್ಧಗಳೆಂದು ಹೇಳುವದಕ್ಕಾಗುವದಿಲ್ಲ. ಪೂರ್ವದಲ್ಲಿ ಮತಪ್ರಾಶಸ್ತ್ಯಕ್ಕೋಸ್ಕರ ಎಲ್ಲ ಮತದವರಿಂದಲೂ ಬರೆಯುವ ಪದ್ಧತಿಯು ಪ್ರಕಾರ ಬರೆದುದಾಗಿರುತ್ತದೆ. ಕ್ರಿಯೆಯಿಂದ ವಿಧಿಗಳು ಹುಟ್ಟುತ್ತವೆಯೋ ಹೊರತು, ವಿಧಿಗಳಿಂದ ಕ್ರಿಯೆಗಳು ಹುಟ್ಟುತ್ತವೆಯೆ? ಬಸವಸ್ವಾಮಿಯೂ, ಪಂಚಗುರುಗಳೂ ಕೆಲವಾಚರಣೆಗಳನ್ನು ನಡಿಸಿದ ಮೇಲೆ ಕೆಲವು ಆಗಮಗಳು ಹುಟ್ಟಿರುತ್ತವೆ ಎಂದು ನನ್ನ ಅಭಿಪ್ರಾಯ. ಕೆಲವಾಗಮಗಳು ಬಸವಸ್ವಾಮಿಗೆ ಮೊದಲಿರಬಹುದು. ಕೆಲವಾಗಮಗಳು ಬಸವಸ್ವಾಮಿಯಿಂದೀಚೆಗೂ ಇರಬಹುದು.

ಬಸವೇಶ್ವರನಿಗಿಂತ ಮುಂಚೆ ಬೇರೆ ಬೇರೆ ಯುಗಗಳಲ್ಲಿ ಪಂಚಾಚಾರ್ಯರವತರಿಸಿದ್ಧರೆಂಬುದಕ್ಕೆ ಯಾವ ಚಾರಿತ್ರ ಪ್ರಮಾಣಗಳೂ ಇರುವದಿಲ್ಲ. ಬಸವನಿಗಿಂತ ಮುಂಚೆ ವೀರಶೈವ ಸಂಬಂಧದ ಯಾವ ಸ್ವತಂತ್ರ ಗ್ರಂಥಗಳೂ ಇರುವದಿಲ್ಲ. ಬಸವನಿಗಿಂತ ಮುಂಚೆ ವೀರಶೈವ ಅಥವಾ ಲಿಂಗವಂತ ಎಂಬ ಶಬ್ದಗಳುಳ್ಳ ಯಾವ ಶಾಸನಗಳೂ ದೊರೆಯುವದಿಲ್ಲವೆಂದು ಮ॥ ರಾ॥ ನಂದೀಮಠರವರು ಬರೆದಿರುತ್ತಾರೆ. ಇದೂ ಅಲ್ಲದೆ ಬಸವಾದಿ ಶಿವಶರಣರೊಳಗೆ ಮೊದಲು ಶೈವರಾಗಿದ್ದು ಆ ಮೇಲೆ ಲಿಂಗ ಸಂಪಾದಕರಾಗಿರುವದಾಗಿ ಬಸವಾದಿ ಶರಣರ ಕಥೆಗಳಿಂದ ಗೊತ್ತಾಗುತ್ತದೆ. ಬಸವೇಶನ ತಾಯಿತಂದೆಗಳು ಶೈವ ಬ್ರಾಹ್ಮಣರಾಗಿದ್ದರು. ಬಸವನ ಸಮೀಪ ಕಾಲದ ಹಂಪೆಯ ಹರೀಶ್ವರ ದೇವರು ತಮ್ಮ ಬಸವರಾಜರಗಳೆಯಲ್ಲಿ ಬರೆದಿರುವ ಪ್ರಕಾರ ಬಸವನ ಇಷ್ಟ ದೇವರಾದ ಸಂಗಮ ಲಿಂಗವು ಬಸವನ ಸ್ವಪ್ನದಲ್ಲಿ ಹೇಳಿದ ಪ್ರಕಾರ ಬಸವನು ಬೆಳಗ್ಗೆ ಎದ್ದ ಮೇಲೆ ಸಂಗಮೇಶ ದೇವಾಲಯದಲ್ಲಿ ಲಿಂಗದ ಮುಂದುಗಡೆ ಇರುವ ನಂದಿವಿಗ್ರಹದ ಬಾಯಿಂದ ಹೊರಟು ಬಂದ ಲಿಂಗವನ್ನು ಬಸವನು ಸ್ವೀಕರಿಸಿ ಧರಿಸಿದನೆಂದು ಗೊತ್ತಾಗುತ್ತದೆ. ಇದೇ ರೀತಿಯಲ್ಲೆ ಶಂಕರದಾಸಿಮಯ್ಯನೆಂಬ ಶರಣನೂ ಕೂಡ ತನ್ನ ಇಷ್ಟ

ದೇವರಾದ ಜಡೆಯ ಶಂಕರ ಲಿಂಗದಿಂದ ಲಿಂಗ ಸಂಪಾದಿಸಿ ಮಾಡಿದವನಾಗಿರುತ್ತಾನೆ. ಇದೇ ಬಗೆಯಲ್ಲಿ ಏಕೋ ರಾಮರೂ ಕೂಡ ಮೊದಲು ಶೈವರಾಗಿದ್ದು ಆ ಮೇಲೆ ತಮ್ಮ ಇಷ್ಟದೇವರಾದ ಮುದುನೂರು ರಾಮನಾಥಲಿಂಗದಿಂದ ಲಿಂಗ ಸಂಪಾದನೆ ಮಾಡಿದವರಾಗಿರುತ್ತಾರೆ. ಕೆಲರು ದೂರ ದೇಶದಿಂದ ಕಲ್ಯಾಣ ಪಟ್ಟಣಕ್ಕೆ ಬಸವನ ವಾರ್ತೆಯನ್ನು ಕೇಳಿ ಬಂದು ಮೊದಲು ಶೈವರಾಗಿದ್ದವರು. ಆ ಮೇಲೆ ಬಸವನ ಉದಾತ್ತ ಮಾರ್ಗವನ್ನು ತಿಳಿದು ಪಾವನಮತಿಯುಳ್ಳವರಾಗಿ ವೀರಶೈವವನ್ನು ಅಂಗೀಕರಿಸಿದವರಾಗಿರುತ್ತಾರೆ. ಕಾಸ್ಮೀರದಿಂದ ಕಾಸ್ಮೀರರಾಜನು ಶೈವನಾಗಿದ್ದು ಬಸವವಾರ್ತೆಯನ್ನು ಕೇಳಿ ಕಲ್ಯಾಣಕ್ಕೆ ಬಂದು ಲಿಂಗಮತವನ್ನಂಗೀಕರಿಸಿ ಮೋಳಿಗೆಯಮಾರಯ್ಯನೆಂಬ ಹೆಸರಿನಿಂದ ಕೆಲಸ ಮಾಡಿದನು. ಗುಜರಾತಿನಿಂದ ಆದಿಶೆಟ್ಟಿ ಎಂಬಾತನು ಕಲ್ಯಾಣಕ್ಕೆ ಬಂದು ವೀರಶೈವನಾಗಿ ಕೆಲಸ ಮಾಡಿದನು. ಅದೇ ರೀತಿ ದಕ್ಷಿಣದ ಕಡೆಯಿಂದ ಸಕಳೇಶ ಮಾದರಸರೆಂಬುವರು ಕಲ್ಯಾಣಕ್ಕೆ ಬಂದು ವೀರಶೈವರಾಗಿ ಕೆಲಸ ಮಾಡಿದರು. ಕಾಳಿಂಗದೇಶದಿಂದ ಮರುಳ ಶಂಕರದೇವರೆಂಬವರು ಕಲ್ಯಾಣಕ್ಕೆ ಬಂದು ವೀರಶೈವರಾಗಿ ಕೆಲಸ ಮಾಡಿದರು. ಕುಂತಳದೇಶದಿಂದ ಏಕಾಂತ ರಾಮಯ್ಯನವರು ಕಲ್ಯಾಣಕ್ಕೆ ಬಂದು ವೀರಶೈವರಾಗಿ ಕೆಲಸ ಮಾಡಿದರು. ಅದೇ ರೀತಿಯಾಗಿ ಮಹಾದೇವಿಯಕ್ಕ, ಸತ್ಯಕ್ಕ, ಮುಕ್ತಾಯಕ್ಕಗಳೆಂಬವರು ಕಲ್ಯಾಣಕ್ಕೆ ಬಂದು ವೀರಶೈವರಾಗಿ ಕೆಲಸ ಮಾಡಿದರು. ಅದೇ ರೀತಿಯಾಗಿ ಕಾಶಿಯಿಂದ ಮಂಚಣ್ಣ ಪಂಡಿತರೆಂಬವರು ಕಲ್ಯಾಣಕ್ಕೆ ಬಂದು ವೀರಶೈವರಾಗಿ ಕೆಲಸ ಮಾಡಿದರು. ಇವರುಗಳೆಲ್ಲ ಮೊದಲು ಕೇವಲ ಶೈವರಾಗಿದ್ದವರು ವೀರಶೈವರಾದರೇ ಹೊರ್ತು ಶಿವಭಕ್ತರಲ್ಲದವರಾಗಿದ್ದು ವೀರಶೈವರಾದವರಲ್ಲ.

ಬಸವನಿಗಿಂತ ನೊದಲು ಒಂದು ವಿಧವಾದ ಕೇವಲ ಶೈವವು ಭಾರತ ದೇಶದಲ್ಲಿ ಅಲ್ಲಲ್ಲಿ ಹರಡಿತ್ತೆಂದು ನಾನು ಅಭಿಪ್ರಾಯಪಡುತ್ತೇನೆ. ಕಾಶ್ಮೀರದಲ್ಲಿಯೂ, ಅರವತ್ತು ಮೂವರು ಪುರಾತನರನ್ನೊಳಗೊಂಡಿರುವ ತಮಿಳು ದೇಶದಲ್ಲಿಯೂ, ಕರ್ನಾಟಕದಲ್ಲಿಯೂ ಕಾಳಾಮುಖರು, ಲಕುಲೀಶರು, ಪಾಶುಪತರು ಮೊದಲಾದ ವಿಶಿಷ್ಟ ಶೈವರು ಅತ್ಯಂತ ಶೈವಾಭಿಮಾನವುಳ್ಳವರಾಗಿ ನೆಲೆಗೊಂಡಿದ್ದರೆಂದು ಶಾಸನಗಳಿಂದಲೂ, ಗ್ರಂಥಗಳಿಂದಲೂ, ಗೊತ್ತಾಗುತ್ತದೆ. ಇವರಲ್ಲಿ ವೀರಗಣಂಗಳೆಂಬ ಹೆಸರೂ

ಮಾಹೇಶ್ವರರೆಂಬ ಹೆಸರೂ, ಶರಣರೆಂಬ ಹೆಸರೂ, ವೀರಬಣಂಜಿಗರೆಂಬ ಹೆಸರೂ ಇದ್ದಂತೆಯೂ, ಪಂಚಮಠ, ಹಿರೇಮಠ, ಮೊದಲಾದ ಹೆಸರೂ ಇದ್ದಂತೆಯೂ, ಶಿವಯೋಗಿ ಎಂಬ ಹೆಸರೂ ಇದ್ದಂತೆಯೂ ಬಸವನ ಹಿಂದಿನ ಕಾಳಾಮುಖರ ಶಾಸನದಲ್ಲಿ ಕಂಡು ಬರುತ್ತದೆ. ಕಾಶ್ಮೀರ ದೇಶದ ಶೈವರಲ್ಲಿಯೂ, ತಮಿಳ ದೇಶದ ಶೈವರಲ್ಲಿಯೂ ಶಿವಗಣಂಗಳು, ಶಿವಭಕ್ತರು, ಮಾಹೇಶ್ವರರು, ಪುರೆಗಳು ಎಂಬ ಹೆಸರೂ ಇದ್ದಂತೆ ತತ್ತತ್ಸಂಬಂಧ ಗ್ರಂಥಗಳಲ್ಲಿ ಕಂಡು ಬರುತ್ತದೆ. ಅರುವತ್ತು ಮೂವರು ಪುರಾತನರಲ್ಲಿ ಭಾರತ, ರಾಮಾಯಣ ರಾಜರ ಕಾಲದಂತಲ್ಲದೆ, ವರ್ಣಾಶ್ರಮವು ಹಿಂದಾಗಿ, ಶಿವಭಕ್ತಿಯು ಮುಂದಾಗಿ ಆಚರಿಸಲ್ಪಡುತ್ತ ವೀರಶೈವಕ್ಕೆ ಸಮೀಪವರ್ತಿಯಾಗುತ್ತಿದ್ದ ಶೈವವು ಪ್ರಚಲಿತವಾಗಿತ್ತೆಂಬುದನ್ನೂ, ತತ್ಸಂಬಂಧ ಶರಣರನ್ನು ಬಸವನು ತನ್ನವರನ್ನಾಗಿ ಅಂಗೀಕರಿಸಿದನೆಂಬುದನ್ನೂ ಶಿವಾನುಭವ ಮಾಸಪತ್ರಿಕೆಯಲ್ಲಿ ಅರುವತ್ತು ಮೂವರು ಪುರಾತನ ಸಂಬಂಧವಾದ ಲೇಖನದಲ್ಲಿ ನಾನು ಬರೆದಿರುವದು ಎಲ್ಲರಿಗೂ ಗೊತ್ತಿರಬಹುದು. ಈ ಕಾರಣದಿಂದ ಮೊದಲೇ ಕೇವಲ ಶೈವರಾಗಿ ಪರಿಪಕ್ವ ಸ್ಥಿತಿಗೆ ಬಂದಿದ್ದ ಆದಿಶೆಟ್ಟಿ, ಸಿದ್ಧರಾಮ, ಮಂಚಣ ಪಂಡಿತರಂತಹವರು ಬಹು ಜಾಗ್ರತೆಯಾಗಿ ಬಸವನ ಸರ್ವೋತ್ಕೃಷ್ಟಲಿಂಗಧಾರಣಯುತ ಸರ್ವಸಮತಾಭಾವದ, ಶಿವಭಕ್ತಿ ವೈಶೇಷ್ಯದ ಮಾರ್ಗವನ್ನು ಕಲ್ಯಾಣಕ್ಕೆ ಬಂದ ಕೂಡಲೆ ಸ್ವೀಕರಿಸಿ ಆನಂದಿಸಿದರು. ಈ ಭಾವವನ್ನು ಆಯಾ ಶರಣರ ವಚನಗಳನ್ನು ಓದಿದರೆ ವಿದ್ಯುಚ್ಛಕ್ತಿಯ ಬೆಳಕಿನಂತೆ ಮನಸ್ಸಿಗೆ ಹೊಳೆಯದಿರಲಾರದು.

ವೀರಶೈವ ಮತವನ್ನು ಪುರಾತನವನ್ನಾಗಿಯಾಗಲಿ, ನೂತನವನ್ನಾಗಿಯಾಗಲಿ ಮಾಡಬೇಕೆಂಬುದು ಯಾರ ಉದ್ದಿಶ್ಯವಾಗಿಯೂ ಇರಕೂಡದು. ಚಾರಿತ್ರದ ಸತ್ಯ ವಿಚಾರವನ್ನು ಕಂಡು ಹಿಡಿಯಬೇಕೆಂಬ ಆಶೆಯು ಚಾರಿತ್ರ ಶೋಧಕರ ಆಶೆಯಾಗಿರುತ್ತದೆ. ಸುಳ್ಳುಗಳನ್ನು ಬರೆದು ತತಾಕಲಕ್ಕೆ ಶೋಭಿಸುವಂತೆ ಮಾಡಿದರೆ ಅದು ನಾಲ್ಕು ದಿನದ ಸೊಗಸಾಗಿರುತ್ತದೆಯೇ ಹೊರತು, ಬಹುದಿನ ನಿಲ್ಲಲಾರದು. ಒಂದು ಗಿಡವನ್ನು ಕಡಿದು ತಂದು ಒಂದು ಸ್ಥಳದಲ್ಲಿ ನಟ್ಟು ಅದು ನಿಜವಾದ ಗಿಡವೆಂದು ಹೇಳುವದಕ್ಕಿಂತ, ಬೀಜ ಹಾಕಲ್ಪಟ್ಟು ಬೆಳದ ಗಿಡವನ್ನು ತೋರಿಸಿ ಅದು ಗಿಡವೆಂದು ಹೇಳುವದು ಲೋಕೋಪಕಾರವಾದ ಮಾರ್ಗವು. ಯಾವ

ಮತವೇ ಆಗಲಿ ಪುರಾತನವಾದರೇನು, ನೂತನವಾದರೇನು, ಸ್ಥಾಪಿಸಲ್ಪಟ್ಟ ಕಾಲಕ್ಕೆ ನೂತನವಾಗಿರುತ್ತದೆ. ಬರುತ ಬರುತ ಪುರಾತನವಾಗುತ್ತದೆ. ಯಾವ ಮತವೇ ಆಗಲಿ, ಅದರದರ ತತ್ವದಿಂದ ಶ್ರೇಷ್ಠವೆನಿಸುತ್ತದೆಯೇ ಹೊರತು, ಕಾಲದಿಂದಲ್ಲ. ವಯಸ್ಸಾದ ಒಬ್ಬ ಮನುಷ್ಯನು ದಡ್ಡನಾಗಿರುತ್ತಾನೆ. ತರುಣ ವಯಸ್ಸಿನವನೊಬ್ಬನು ಬುದ್ಧಿವಂತನಾಗಿರುತ್ತಾನೆ. ವಯಸ್ಸಾದ ಮಾತ್ರಕ್ಕೆ ವಯಸ್ಕನನ್ನು ತರುಣನಿಗಿಂತ ಶ್ರೇಷ್ಠನೆನ್ನಬಹುದೆ? ಅಲ್ಪ ವಯಸ್ಕನಾದ ಮಾತ್ರಕ್ಕೆ ತರುಣನನ್ನು ನಿಕೃಷ್ಟನೆನ್ನಬಹುದೆ?

ಪ್ರಕೃತದಲ್ಲಿ ವೀರಶೈವ ಮತವು ಯಾವಾಗಿನಿಂದಾದರೂ ಬರಲಿ, ಪಂಚಾಚಾರ್ಯರೆಂಬವರು ಚಾರಿತ್ರ ಪುರುಷರಾಗಿರುತ್ತಾರೆ. ಬಸವಾದಿ ಪ್ರಮಥರು ಹೇಗೆ ಕೆಲಸ ಮಾಡಿರುತ್ತಾರೋ, ಹಾಗೆಯೇ ಪಂಚ ಗುರುಗಳು ಕೆಲಸ ಮಾಡಿರುತ್ತಾರೆ. ಆದರೆ ನಾಲ್ಕು ಯುಗಗಳಲ್ಲಿದ್ದರೆಂಬುದು ಚಾರಿತ್ರ ವಿಚಾರವಲ್ಲ. ಅದು ಪ್ರಾಶಸ್ತ್ಯಕ್ಕೋಸ್ಕರ ಬರೆಯಲ್ಪಟ್ಟ ಸಂಗತಿ ಎಂದು ನಾವು ತಿಳಿಯಬೇಕು. ಬಸವನ ವಿಚಾರದಲ್ಲೂ ಅಲ್ಲಮನ ವಿಚಾರದಲ್ಲೂ ಹಾಗೆಯೇ ನಾಲ್ಕು ಯುಗದ ಮಾತನ್ನು ಬರೆದಿರುತ್ತಾರೆ. ಯಾವ ಮತದ ತತ್ವವನ್ನೇ ಆಗಲಿ ಅನಾದಿ ಸಂಸಿದ್ಧವೆಂದು ಹೇಳಬಹುದು. ವಿದ್ಯುಚ್ಛಕ್ತಿಯು ಇರವನ್ನೂ, ಅದರಿಂದಾಗುವ ಪ್ರಯೋಜನವನ್ನೂ ಒಬ್ಬ ವಿಜ್ಞಾನ ಶಾಸ್ತ್ರ ಪಂಡಿತನು ಕಂಡು ಹಿಡಿದನು. ಕಂಡು ಹಿಡಿದ ವಿಜ್ಞಾನ ಶಾಸ್ತ್ರ ಪಂಡಿತನು, ನೂತನನಾದಾಗ್ಯೂ, ಕಂಡು ಹಿಡಿಯಲ್ಪಟ್ಟ ವಿದ್ಯುಚ್ಛಕ್ತಿಯು ನೂತನವಲ್ಲ. ಅದು ಜಗತ್ತಿನಲ್ಲಿ ಅನಾದಿ ಸಂಸಿದ್ಧವಾಗಿರುತ್ತದೆ. ಅದರಂತೆ ಬಸವೇಶನು ಕೆಲ ತತ್ವಗಳನ್ನು ಕಂಡು ಹಿಡಿದು ವೀರಶೈವ ಮತಸ್ಥಾಪಕನೆಂದೆನಿಸಿದಾಗ್ಯು, ಕಂಡು ಹಿಡಿಯಲ್ಪಟ್ಟ ತತ್ವವು ಜಗದಾದಿಯಿಂದಲೂ ಇರುವದಾಗಿರುತ್ತದೆ. ಈ ವಿಧದಲ್ಲಿ ವೀರಶೈವವು ಅನಾದಿ ಸಂಸಿದ್ಧವಾಗಿರುತ್ತದೆ.

ನಾಲ್ಕು ಯುಗದ ಅವತಾರದ ಮಾತನ್ನು ಮ॥ *E. P. Rice* ಸಾಹೇಬರು, ತಮ್ಮ *Kanaresc Literature* ಎಂಬ ಪುಸ್ತಕದಲ್ಲಿ, ವರ್ಜಿತ ಮಾಡಬೇಕಾದ ಕಥೆ ಎಂದು ಬರೆದಿರುತ್ತಾರೆ. ಹೇಗೆಂದರೆ—

"Revanasiddha, Marulasiddha, Panditaradhya as well as Ekorama must have been contemporaries of Basava .................. The previous incarnations of these

Acharyas, referred to in the Basavapurana, may be dismissed as fabulous"
ಎಂದು ಬರೆದಿರುತ್ತಾರೆ.

ಆದರ ಮಾತು ಹೇಗಾದರೂ ಇರಲಿ. ಇನ್ನು ಮುಂದೆ ಚಾರಿತ್ರ ಪಂಡಿತರು ಹೆಚ್ಚು ಶೋಧನೆಮಾಡಿ ನಿಷ್ಪಕ್ಷಪಾತಮತಿಯಿಂದ ಕಂಡುಹಿಡಿದದ್ದನ್ನು ಲಿಂಗವಂತ ಸಮಯೋಪಯೋಗಾರ್ಥವಾಗಿಯೂ, ಲೋಕೋಪಯೋಗಾರ್ಥವಾಗಿಯೂ ಬರೆಯಲಿ. ಅದನ್ನು ಸರ್ವರೂ ಆನಂದದಿಂದ ಅಂಗೀಕರಿಸೋಣ.

ರೇಣುಕಾಚಾರ್ಯ ಅಥವಾ ರೇವಣಸಿದ್ದರ ವಿಚಾರದಲ್ಲಿ ಮ|| ಡಾ. ನಂದಿಮಠರವರು ನಾನು ಮೇಲೆ ಹೇಳಿದಂತೆ ಶೋಧಿಸಿ ಶಿವಾನುಭವ ಮಾಸಪತ್ರಿಕೆಯಲ್ಲಿ (೧೯೨೯ ನೇ ಮೇ ತಿಂಗಳ ಪತ್ರಿಕೆಯಲ್ಲಿ) ಕೊಟ್ಟಿರುವ ರೇವಣಸಿದ್ಧರ ವಿಷಯಕವಾದ ಒಂದು ಶಾಸನದಲ್ಲಿ ಈಗ ರೂಢಿಯಲ್ಲಿರುವ ಕ್ರಿ. ಶ. ೧೧೬೫ ರಲ್ಲಿ ಅಂದರೆ ಬಸವೇಶನ ಸಮೀಪ ಕಾಲಕ್ಕೆ ರಾಘವಾಂಕ ಪ್ರಸಿದ್ಧ ಕವಿಗಳಿಂದ ಬರೆಯಲ್ಪಟ್ಟ ಸಿದ್ಧರಾಮ ಪುರಾಣದಲ್ಲಿ ರೇವಣಸಿದ್ಧರ ವಿಷಯವಾಗಿ ಬರೆಯಲ್ಪಟ್ಟ ಸಂಗತಿಗಳಿಗೂ, ಕ್ರಿ. ಶ. ೧೫೦೦ ರಲ್ಲಿ ಅಂದರೆ ಬಸವೇಶನಿಂದೀಚೆಗೆ ೪೦೦ ವರ್ಷಗಳಲ್ಲಿ ಬೊಮ್ಮರಸ ಕವಿಯಿಂದ ಬರೆಯಲ್ಪಟ್ಟ ರೇವಣಸಿದ್ಧ ಪುರಾಣದಲ್ಲಿ ರೇವಣಸಿದ್ಧರ ವಿಷಯವಾಗಿ ಬರೆಯಲ್ಪಟ್ಟ ಸಂಗತಿಗಳಿಗೂ ಸಂಪೂರ್ಣವಾಗಿ ಸರಿಹೋಲತಕ್ಕ ರೇಣುಕಾಚಾರ್ಯ ಪ್ರಶಂಸಾಬೋಧಕ ಆರು ಪದ್ಯಗಳಿರುತ್ತವೆ. ಆ ಶಾಸನವಾವುದೆಂದರೆ, ಮೊಗಲಾಯಿ ಇಲಾಖಾ ಶಿರಿವಾಳದ ಸಿದ್ಧಲಿಂಗೇಶ್ವರ ಗುಡಿಯಲ್ಲಿಯ ಶಾಸನವು. ಅದರಲ್ಲಿ ಈ ಕೆಳಗೆ ಕಂಡ ಪ್ರಕಾರ ವರ್ಣನೆ ಇರುತ್ತದೆ. ಅದನ್ನು ಸಂಪೂರ್ಣವಾಗಿ ಇಲ್ಲಿ ಎತ್ತಿ ಬರೆಯುತ್ತೇನೆ. ಹೇಗೆಂದರೆ—

"ಶ್ರೀಮದ್ಯಣಿಮಾದ್ಯಷ್ಟ ಗುಣಸಂಪನ್ನರೂ, ಷಟ್ಕ್ರಿಯಾನ್ವಿ
ತರುಂ, ಸಾರಸೌರಭ್ಯ ಸರ್ವ ನಿಸ್ಸಂಗರುಮಪ್ಪ ಶಿವ
ಯೋಗಿ ಶಾಂತಿಮಯ್ಯಗಳ ಪುತ್ರ ರೇಣುಕಾಚಾರ್ಯರ
ಪ್ರಸಿದ್ಧಿ ಎಂತೆಂದೊಡೆ"

"ಬರ್ಬುಲತಂಡುಲದಿಂದೆ। ದೋರ್ಬಿಗಶಂ ರಾಯಕಟಕವುಂತಣಿಪಿದನಾ॥ ಸರ್ವಜ್ಞಮೂರ್ತಿ ಜಗದೊಳು। ಗೊರ್ವನೇ ಸಿವಸಿದ್ಧಚಕ್ರಿ ರೇವಣದೇವಾ॥ ತೊರೆತುಂಬಿಬಂದಡರೆ ತಾ। ಹರುಗೋಲಂತನ್ನವೆನ್ನ

ವಾ ಜ್ಞಾನಬಲದಿಂ ॥ ತೊರೆಯುಂದಾಂಟುವನಿಂತಿರೆ । ರುರುಪಿನ ತತು ಕಾರನೀತರೇವಣದೇವಂ ॥ ಅಂದೊಮ್ಮೆ ಸಿದ್ಧನೆಂದೊಡೆ । ನಿಂದಿಸಿ ದರು ಮನುಜರೆಲ್ಲ ಧರೆ ಭೂರ್ಭುಗಿಲೆನೆ ॥ ಬಂದದಿ ಸತ್ವರಜಂತಮ ವಂದಿನಸಿದ್ಧಂ ಪ್ರಸಿದ್ಧರೇವಣದೇವಂ ॥ ಮುನ್ನೊಮ್ಮೆ ಸಿದ್ಧನಾಗಿಯು । ವನ್ನದತವನಿಧಿಯ ತೋರೆ ಲೋಕದಳೊಮ್ಮೆ ॥ ತ್ರಿನ್ನೊಮ್ಮೆ ತೋರ್ಪನೆಂ ದುಂ । ತನ್ನತಾನರಿದುನೆಗಳ್ದ ರೇವಣದೇವಂ ॥ ತಾರದ ಮಂತ್ರದ ಮಧು ರವ । ಸಾರಾಯುದ ಸಪ್ತಸ್ವರದಿಂದಾನರೇಶ್ವರನಂ ॥ ಭೋರೆನೆಕೇಳಿಸು ತಿರ್ಪಂ । ಧಾರಿಣಿತಳದೊಳಗೆ ನೆಗಳ್ದ ರೇವಣದೇವಂ ॥ ನೃತ್ಯಕೆನಿಂದೊಡೆ ಬಳಿಕಾ । ಅತ್ಯದ್ಭುತ ಮರುಳತಾಂ ರೌದ್ರಮಿದೆನಲುಂ ॥ ಪ್ರತ್ಯಕ್ಷಲಿಂಗಬೆ ಮರಲು । ಸತ್ಯವಲತ್ಯಂತ ಸಿದ್ಧರೇವಣದೇವಂ ॥"

"ಆ ಮೂಲಕ ಸಿದ್ಧ ಪ್ರಸಿದ್ಧರಪ್ಪ ಸಿದ್ಧರೇವಣಯ್ಯಂಗಳಪಾದ ಪ್ರಕ್ಷಾಲನಮಂ ಮಾಡಿ ಸಿರಿವೊಳಲ್ ಸರ್ವಸಮಸ್ಯವಾಗಿ ಧಾರಾಪೂರ್ವ ಕದಿಂ ಮಾಡಿಕೊಟ್ಟರು ॥ ಮಂಗಳಮಹಾ ಶ್ರೀ ಶ್ರೀ ॥"

ಎಂದು ಬರೆದಿರುತ್ತದೆ. ಮೇಲ್ಕಂಡ ಶಾಸನದ ಆರು ಕಂದಪದ್ಯಗಳಲ್ಲಿ ರಾಘವಾಂಕನ ಸಿದ್ಧರಾಮ ಪುರಾಣದಲ್ಲಿ ಹೇಳಿರುವ ವಿಷಯಗಳೂ, ಬೊಮ್ಮರಸನ ರೇವಣಸಿದ್ಧ ಪುರಾಣದಲ್ಲಿ ಹೇಳಿರುವ ವಿಷಯಗಳೂ ಶಬ್ದಪ್ರಯೋಗಗಳಿಂದ ಸಂಪೂರ್ಣವಾಗಿ ಕಂಡುಬರುತ್ತದೆ. ಅಂದರೆ ವಿಷ ಯಕರ್ತೃಗಳ ಹೆಸರು ಹೇಳಲ್ಪಡದೆ ಇದ್ದಾಗ್ಯೂ, ವಿಷಯಗಳು ಸ್ಪಷ್ಟ ವಾಗಿ ಹೇಳಲ್ಪಟ್ಟಿದೆ. ಶಾಸನದಲ್ಲಿ ವಿಸ್ತಾರವಾಗಿ ಬರೆಯುವದಕ್ಕವಕಾ ಶವಿಲ್ಲದೆ, ಸಂಕ್ಷಿಪ್ತವಾಗಿ ಬರೆಯಬೇಕಾದ ಅವಶ್ಯಕತೆಯಿಂದ ಒಂದೊಂ ದು ಪದ್ಯದಲ್ಲಿ ಒಂದೊಂದು ವಿಷಯವನ್ನು ಕರ್ತೃಗಳ ಹೆಸರಿಲ್ಲದೆ ಬರೆ ಯಲ್ಪಟ್ಟಿದೆ. ವಿಷಯಗಳ ತಾಳಿಯು ಆಶ್ಚರ್ಯಕರವಾಗಿರುತ್ತದೆ. ಈ ಕಂದಪದ್ಯಗಳನ್ನು ರೇವಣಸಿದ್ಧರ ಸಂಕ್ಷಿಪ್ತ ವಿಷಯಸಾರವೆಂದು ಹೇಳ ಬಹುದು. ಒಂದೊಂದು ಪದ್ಯವನ್ನು ತೆಗೆದು ವಿಮರ್ಶೆಮಾಡುತ್ತೇನೆ.

ಮೊದಲು ಒಂದನೇಪದ್ಯವನ್ನು ತೆಗೆದುಕೊಳ್ಳುತ್ತೇನೆ. ಅದರ ಅರ್ಥ ವೇನೆಂದರೆ— "ಬರ್ಬುಲವೆಂಬ ಅಕ್ಕಿಯಿಂದರಾಯನ ಪಟ್ಟಣವನ್ನೆಲ್ಲಾ ತಣಿಸಿದನು ಎಂದು"

ಇದು ವೀರಬಿಜ್ಜಳನನ್ನು ರೇವಣಸಿದ್ಧರು ಭಿಕ್ಷಬೇಡಲು, ಉಕ್ಕುವ ಪಾಯಸವನ್ನು ಕೊಡಲು, ರೇವಣಸಿದ್ಧರು ಅದನ್ನು ಕಂಬಕ್ಕೆ ತಿಕ್ಕಲು, ಅರ ಮನೆಯಲ್ಲ ಸುಟ್ಟುಹೋಗಲು, ವೀರಬಿಜ್ಜಳನು ಹೆದರಿ ಬೇಡಿಕೊಳ್ಳಲು

ಪಾಯಸಾನ್ನವನ್ನು ರೇವಣಸಿದ್ಧರು ಕೈಕೊಂಡು ಪಟ್ಟಣಕ್ಕೆಲ್ಲಾ ಉಣಿಸಿದರು ಎಂಬ ಕಥೆಯಾಗಿರುತ್ತದೆ. ಈ ವಿಚಾರಕ್ಕೆ ರಾಘವಾಂಕನ ಸಿದ್ಧರಾಮ ಪುರಾಣದಲ್ಲಿ ಪದ್ಯ ಹೀಗಿದೆಃ— (೧ ನೇ ಸಂಧಿ)

"ಒಂದು ಭಿಕ್ಷೆಯಿಂ। ಧರಣಿಪತಿ ಕಟಕವೆಲ್ಲವನುಣಿಸಿದ ಪ್ರತಿಮ। ಎಂದು ಇದೆ.

ಬೊಮ್ಮರಸನ ರೇವಣಸಿದ್ಧಪುರಾಣದಲ್ಲಿ ಪದ್ಯ ಹೀಗಿದೆ.

(೬ ನೆ ಸಂಧಿ)

"ಈ ಮಹಾಕಟಕಸಹಿತಲ್ಲದಾರೋಗಿಸುವುದಿಲ್ಲವಾವೆಂದು ಬೆಸಸೆ। ಸವ್ಯದಿವ್ಯಾನ್ನದಿಂ ತಣಿದುದಾ ಕಟಕಮೆಲ್ಲಂ॥"

ಎಂದಿದೆ.

ಎರಡನೇ ಪದ್ಯವನ್ನು ತೆಗೆದುಕೊಳ್ಳುತ್ತೇನೆ. ಅದರ ಅರ್ಥವೇನಂದರೆಃ—

"ತೊರೆ ತುಂಬಿಬಂದರೆ, ಹರಗೋಲನ್ನು ತನ್ನದಾಗಿ ಉಪಯೋಗಿಸದೆ, ತನ್ನ ಆಜ್ಞಾ ಬಲದಿಂದಲೇ ತೊರೆಯನ್ನು ದಾಟಿದನೆಂದರ್ಥ"— ಇದು ಮಂಗಳವಾಡದಲ್ಲಿ ವೀರಬಿಜ್ಜಳನು ಖರ್ಪರ ಜೋಗಿ ಎಂಬವನ ಮಾತಿನಂತೆ ನದಿಯಲ್ಲಿಯ ಸುರಗಿಯನ್ನು ತೆಗೆಯಲು ಬಲಿ ಅರ್ಪಿಸುವದಕ್ಕೆ ಅನೇಕ ಮಂದಿ ರನ್ನೆಯರನ್ನು ಶೆರೆಯಲ್ಲಿಟ್ಟು ಇನ್ನೊಬ್ಬರನ್ನೇ ಸಾಲದಿರಲು, ಸೂಳೆ ಮಾಯಿದೇವಿಯ ಮಗಳನ್ನು ಬೇಕೆನ್ನುತ್ತಿರಲು, ಆಕೆಯು ರೇವಣಸಿದ್ಧರನ್ನು ನೆನೆಯಲು, ಆತನು ಕಾಶಿಯಿಂದ ಬಂದು ಖರ್ಪರನನ್ನು ಓಡಿಸಿ ನದಿಯನ್ನು ದಾಟುವದಕ್ಕೆ ವೀರಬಿಜ್ಜಳನನ್ನು ಹರುಗೋಲಿನಲ್ಲಿ ಕುಳ್ಳಿರಿಸಿ ತಾನು ನೀರಿನ ಮೇಲೆ ನಡೆದುಕೊಂಡು ಹೋಗಿ ಸುರಗಿಯನ್ನು ತೆಗೆದುಕೊಟ್ಟನೆಂಬ ಕಥೆಯಾಗಿರುತ್ತದೆ. ಈ ವಿಚಾರಕ್ಕೆ ರಾಘವಾಂಕನ ಸಿದ್ಧರಾಮ ಪುರಾಣದ ಪದ್ಯ ಹೀಗಿದೆ.

( ೧ನೆ ಸಂಧಿ )

"ಹರಿತಂದ ನದಿಯ ನಡುವಣ ಸುರಿಗೆ ವಿಡಿದು ತೆಗೆದಾ ಮಾಚನೂರ ನೆರದಾ॥ ತರುಣಿಯರ ಹರಣಮಂ ಕಾಯ್ದು"

ಎಂದಿದೆ.

ಬೊಮ್ಮರಸನ ರೇವಣಸಿದ್ಧ ಪುರಾಣದಲ್ಲಿ ಪದ್ಯ ಹೀಗಿದೆ.

( ೮ ನೆ ಸಂಧಿ )

"ಮಡುವಿನೊಳು ನೀರವೋಲಡಿಯಿಟ್ಟು ಗುರುರಾಯನಡೆದೆಯ್ದಿ ಹರುಗೋಲ ಮೇಲೆ ನೃಪತಿಯು ಸಿರಿಸಿ ಘುಡುಘುಡಿಸದಿವ್ಯಾಯುಧದ ಪೊರೆಗೆ ಬಂದು"

ಎಂದಿದೆ.

ಇಲ್ಲಿ ಶಾಸನಲ್ಲಿರುವ " ಹರುಗೋಲ ತನ್ನವೆನ್ನದೆ" "ಆಜ್ಞಾ ಬಲ ದಿಂದಾಂಟಿ" ಎಂಬ ಮಾತುಗಳಿಗೂ, ಮೇಲಿನ ಪದ್ಯದಲ್ಲಿರುವ "ನೀರ ಮೇಲಡಿಯಿಟ್ಟು ಗುರುರಾಯ ನಡೆದೆಯ್ದಿ ಹರುಗೋಲ ಮೇಲೆ ನೃಪತಿ ಯುನಿರಿಸಿ"— ಎಂಬ ಮಾತುಗಳಿಗೂ ತಾಳೆಯುನ್ನು ನೋಡಬೇಕು.

ಮೂರನೆ ಪದ್ಯವನ್ನು ತೆಗೆದುಕೊಳ್ಳುತ್ತೇನೆ. ಅದರ ಅರ್ಥವೇನಂದರೆ:—

"ಒಂದು ಸಾರಿ ತಾನು ಸಿದ್ಧನೆನ್ನಲು, ಕೆಲರು ನಿಂದಿಸಿದರು. ಅದಕ್ಕೆ ಧರೆ ಭೂರ್ಭುಗಿಲೆನ್ನುವ ಹಾಗೆ ಮಾಡಿದನು ಎಂದರ್ಥ"

ಈ ಪದ್ಯವು ಬರೆಯುವದರಿಂದ ಸರಿಯಾಗಿ ಬರೆದಿರುವದಿಲ್ಲ. ಕೆಲ ಭಾಗ ಶಬ್ದಗಳು ಅರ್ಥವಾಗುವದಿಲ್ಲ.

ಇದು ಗೋರಕ್ಷನೆಂಬಸಿದ್ಧನು ರೇವಣೇಶ್ವರನು ತಾನು ಸಿದ್ಧನೆಂಬುದಕ್ಕೆ ಕಾರಣವೇನೆಂದು ಗರ್ವಿಸಿ ಸುರಗಿಯ ಭಿಕ್ಷವ ನೀಡಿಸಲು, ಅವನ್ನು ಕರಗಿಸಿ ರೇವಣೇಶ್ವರನು ಕುಡಿಯಲು, ಅದು ಗೋರಕ್ಷ ಹೊಟ್ಟೆಯಲ್ಲಿ ಉರಿಮಾಡಲು, ಗೋರಕ್ಷನು ಶರಣಾಗತನಾದನೆಂಬ ಕಥೆಯಾಗಿರುತ್ತದೆ.

ಈ ವಿಚಾರಕ್ಕೆ ರಾಘವಾಂಕನ ಸಿದ್ಧರಾಮ ಪುರಾಣದಲ್ಲಿ ಪದ್ಯ ಹೀಗಿದೆ:—

(೧ ನೆ ಸಂಧಿ)

" ಹರುಷದಿಂದ ಲಗನಾಹುತಿಗೊಂಡದಿಬ್ಬ। ನೆಲ್ಲರನಳಿಸುತ"

ಎಂದು ಇದೆ.

ಬೊಮ್ಮರಸನ ರೇವಣಸಿದ್ಧ ಪುರಾಣದಲ್ಲಿ ಹೀಗಿದೆ:— (೬ನೆ ಸಂಧಿ)

" ಗೋರಕ್ಷನಿಳಯವೀ ಪೊಳಲು ಪಿರಿದುಂ ವಿಚಿತ್ರವೀ ತಾಣಕೆ ಭಿಕ್ಷೆಯಂ ಧರಿಸಲೈತಂದ ಸಿದ್ಧನಾರಿಂತಿವನ ಪರಿಕಿ ಪೆನೆನುತ್ತೆ ಸುರಗಿಯ ಭಿಕ್ಷೆಯಂ ನೀಡಿಸಿದನಂದು ಗೋರಕ್ಷಕಂ॥ ರೇವಣೇಶ್ವರನು ನೊಸಲ ಕಣ್ದೆರದು ಗಿರ್ರನೆ ಕರಗಿಸಿ॥ ಆರೋಗಿಸಲು ವೇದನಿಸೆ ಗೋರಕ್ಷನಾಥನೆ ರಗಿದನು ಗುರುವಿನ ಪದದೊಳು॥" ಎಂದಿದೆ.

[ಇಲ್ಲಿ ಶಾಸನದಲ್ಲಿರುವ " ಅಂದೊಮ್ಮೆ ಸಿದ್ಧನೆಂದೊಡೆ ನಿಂದಿಸಿದರು ಮನುಜರೆಲ್ಲ" ಎಂಬ ಮಾತಿಗೂ, ಮೇಲಿನ ಪದ್ಯದಲ್ಲಿರುವ "ಭಿಕ್ಷೆಯಂ

ಧರಿಸಲ್ಕೈಕಂದ ಸಿದ್ಧನಾರಿಂತಿವನ ಪರಿಕಿಪೆನೆನುತ್ತ " ಎಂಬ ಮಾತಿಗೂ ತಾಳೆಯುನ್ನು ನೋಡಬೇಕು.]

ನಾಲ್ಕನೇ ಪದ್ಯವನ್ನು ತೆಗೆದುಕೊಳ್ಳುತ್ತೇನೆ. ಅದರ ಅರ್ಥವೇನೆಂದರೆಃ—

"ತಾನು ಸಿದ್ಧನಾಗಿರುತ್ತ ತವನಿಧಿಯು ತೋರಿದನು ಎಂದರ್ಥ"

[ಶಾಸನ ಪದ್ಯದಲ್ಲಿ ಬರೆದವರ ಹಸ್ತ ದೋಷಗಳಿದ್ದಂತೆ ಕಾಣುತ್ತದೆ. ಆದರಿಂದ ಕೆಲವು ಶಬ್ದಗಳೇನೆಂದು ಗೊತ್ತಾಗುವದಿಲ್ಲ.]

ಇದು- ರೇವಣಸಿದ್ಧನು ತಾನು ಗಾಣದ ಕಲ್ಲಿಶೆಟ್ಟಿಯ ಮನೆಯಲ್ಲಿ ಕೆಲಸ ಮಾಡಿ ಗಾಣದ ಕಲ್ಲಿಶೆಟ್ಟಿಗೂ, ಅವನ ಹೆಂಡತಿಗೂ ಬಡತನವನ್ನು ಹಿಂಗಿಸಿ ತವನಿಧಿಯನ್ನು ಕೊಟ್ಟನೆಂಬ ಕಥೆಯಾಗಿರುತ್ತದೆ. ಈ ವಿಚಾರಕ್ಕೆ ಬೊಮ್ಮರಸನ ರೇವಣಸಿದ್ಧ ಪುರಾಣದಲ್ಲಿ ಪದ್ಯ ಹೀಗಿದೆಃ—
೫ ನೇ ಸಂಧಿ

"(ರೇಣುಕಂ) ಭವನ ಭವನದ ಮುಂದೆ ನಿಲುತೆ ಕುಳ್ಳಿರುತೆ ಬಳಲ್ದವನಂತೆ ಬರುತಮಿರೆ ಕಾಣುತಯ್ಯೊ ಭ್ರಾಂತನಿವನಪಸಿವಂಕಳೆವೆನೆನುತೆ ಗಾಣದ ಕಲ್ಲಿಶೆಟ್ಟಿ ವಿನಯದೆ ಕರೆದನು. ಎತ್ತುಗಳೊಂಹೊಡೆದುತವೆ ತಿರುಗಿಸುತ್ತೆ ಗಾಣವನಾಡಿ ಹಿಂಡಿಯಂ ಕಳೆದುಕೊಂಡಾರೋಗಿಸಿ॥ ಶಿವಸಿದ್ಧಶೇಖರಂ ಕತಿಪಯ ದಿವಸ ಮಿರುತ ದಂಪತಿಗಳ್ಗೆ ರಸರಸಾಯನದ ತವನಿಧಿಯನಿತ್ತು.—" ಎಂದು ಇದೆ.

ಶಾಸನ ಪದ್ಯದಲ್ಲಿ "ಸಿದ್ಧನಾಗಿ ಯುವನ್ನದ ತವನಿಧಿಯ ತೋರೆ ಎಂಬ ಮಾತಿಗೂ, ಮೇಲಿನ ಪದ್ಯದಲ್ಲಿರುವ " ರಸರಸಾಯನದ ತವನಿಧಿಯನಿತ್ತು" ಎಂಬ ಮಾತಿಗೂ ತಾಳೆಯನ್ನು ನೋಡಬೇಕು.

(ಐವನೇ ಪದ್ಯವು ಯಾವದಕ್ಕೆ ಸೇರುತ್ತದೋ ಗೊತ್ತಾಗುವದಿಲ್ಲ.)

ಆರನೇ ಪದ್ಯವನ್ನು ತೆಗೆದುಕೊಳ್ಳುತ್ತೇನೆ. ಅದರ ಅರ್ಥವೇನಂದರೆಃ—

"ನಾಟ್ಯಮಾಡುವದಕ್ಕೆ ನಿಂತರೆ ಅತ್ಯದ್ಭುತ ಮರುಳನಂತಿದ್ದು ರೌದ್ರವಿದೆನ್ನುವ ಹಾಗೆ ಮಾಡುತ್ತಿದ್ದನೆಂದರ್ಥ."

[ಶಾಸನ ಪದ್ಯದಲ್ಲಿ ಕೆಲ ಭಾಗದರ್ಥ ಗೊತ್ತಾಗುವದಿಲ್ಲ.]

ಇದು ಮೇಲೆ ಹೇಳಿದ ಗಾಣದ ಕಲ್ಲಿ ಶೆಟ್ಟಿಯ ಮನೆಯಲ್ಲಿ ಕೆಲಸದೊಳಗೆ ಮರುಳನಾಗಿ ವರ್ತಿಸಿದನೆಂಬ ಮತ್ತು ಕಂಚಿಯಲ್ಲಿ ವರದರಾಜನ ಅಲ್ಲಾಟವನ್ನು ನಿಲ್ಲಿಸುವಾಗ ಪಿಣ್ಣಾಕ ನೈನಾರೆಂಬ ಹೆಸರಿನಿಂದ ಹುಚ್ಚುಹುಚ್ಚಾಗಿ ನಟಿಸಿದನೆಂಬ ಕಥೆಯಾಗಿದೆ.

ಈ ವಿಚಾರಕ್ಕೆ ಬೊಮ್ಮರಸನ ರೇವಣಸಿದ್ಧ ಪುರಾಣದಲ್ಲಿ ಪದ್ಯ ಹೀಗಿದೆ.—

೫ ನೆ ಸಂಧಿ

"ಸುಳಿದನು ಬಾಲನಂತೆ ವಿಭ್ರಾಂತನಂತುನ್ಮತ್ತನಂತೆ ಲೌಕಿಕ ಜನಕೆ ಕಾಣಿಸುತೆ ಬಿನದದಿಂದೆ ಮರುಳನಂತೆ ನೋಟಕರ ಮನಕೆ ಪಿಣ್ಣಾಕ ನಾಯ್ನಾರೆಂಬ ನಾಮಧೇಯದಿ ನೊಪ್ಪುತಿರ್ದನಲ್ಲಿ. ಕನಸಿನೊಳಗೆ ತಾಮ್ರನಾಥನೆಯ್ತಂದು ಚೋಳನ ಮನದ ಕೊನೆಯ ಮೇಲೆಡೆವಿಡದೆ ಪಿಣ್ಣಾಕನೆನಿಪ ಶಿವಸಿದ್ಧನೆಮ್ಮಯ ಕುಮಾರಂ ನಿನ್ನ ಪೊಳಲೊಳಗೆ ಮರುಳನಂತೆ ಬಿನದದಿಂದಿರ್ದಪಂ ನಗುತೆ ಘನಮಹಿಮ ಸಿದ್ಧನಾಕಾಶಕ್ಕೆ ನೆಗೆವ ಭೂಂಕನೆಕೊಂಡ ಹಲವರು ಬೀಳ್ದರು ಗಾಳಿ ಪೊಯ್ಯೆ ಮರನಿಂದುದಿರ್ದಪಣ್ಗಳಂತೆ ಲೌಕಿಕನಿಕರ ವಿವನಿದೆಲ್ಲಿಯ ಮರುಳನೆನೆ ಪೊಳಲೊಳೈದಿದನು ಕಾಣುತಯ್ಯೊ ಭ್ರಾಂತನಿವನ ಪಸಿವಂ ಕಳೆವೆನೆನುತೆ ನಮ್ಮ ಕೊಟ್ಟಿಗೆಯಳಿರ್ಪ ಹಿಂಡಿಯ ಮರುಳನ ಬರವು ಸಮನಿಸಿದುದೆಂದು"

ಎಂದಿದೆ.

ಶಾಸನಪದ್ಯದಲ್ಲಿರುವ "ಅತ್ಯದ್ಭುತಮರುಳ ತಾ" ಎಂಬ ಮಾತಿಗೂ, ಮೇಲಿನ ಪದ್ಯದಲ್ಲಿರುವ "ಮರುಳಂತೆ ನೋಟಕರಮನೆ" "ಪೊಳಲೊಳಗೆ ಮರುಳನಂತೆ ಬಿನದದಿಂದಿರ್ದಪಂ" "ಲೌಕಿಕನಿಕರವಿವನೆಲ್ಲಿಯ ಮರುಳನೆನೆ" "ನಮ್ಮ ಕೊಟ್ಟಿಗೆಯೊಳಿರ್ಪ ಹಿಂಡಿಯಮರುಳನ ಬರವು" ಎಂಬ ಮಾತುಗಳಿಗೂ ತಾಳೆಯನ್ನು ನೋಡಬೇಕು.

ಈ ರೀತಿ ಮೇಲ್ಕಂಡ ಶಾಸನಪದ್ಯಗಳಿಗೂ, ರಾಘವಾಂಕನಸಿದ್ಧರಾಮಪುರಾಣಕ್ಕೂ, ಬೊಮ್ಮರಸನ ರೇವಣಸಿದ್ಧ ಪುರಾಣಕ್ಕೂ ತಾಳೆ ಹಾಕಿ ನೋಡುವಲ್ಲಿ ವಿಷಯಗಳು ಸಂಪೂರ್ಣವಾಗಿ ಒಂದೆ ಆಗಿರುತ್ತವೆ. ರೇಣುಕರು ಅಗಸ್ತ್ಯರಿಗೆ ಬೋಧಿಸಿದ ವಿಚಾರವೂ, ವಿಭೀಷಣನ ಇಷ್ಟ ಪ್ರಕಾರ ಲಿಂಗ ಪ್ರತಿಷ್ಠೆ ಮಾಡಿದ ವಿಚಾರವೂ, ರಾಜ ಪುತ್ರಿಯ

ರನ್ನು ಮುದುವೆಯಾದ ವಿಚಾರವೂ ಶಾಸನ ಪದ್ಯದಲ್ಲಿ ಅಡಕವಾಗದೆ ಬಿಟ್ಟು ಇರುತ್ತದೆ. ಅದರಂತೆ ರಾಘವಾಂಕನ ಸಿದ್ಧರಾಮ ಪುರಾಣ ದಲ್ಲಿ ಹೇಳಿರುವ ರೇಣುಕ ವಿಷಯದ ಪದ್ಯದಲ್ಲಿಯೂ ಬಿಟ್ಟಿರುತ್ತದೆ. ಇದಕ್ಕೆ ಏನು ಕಾರಣವೋ ಗೊತ್ತಾಗಲಿಲ್ಲ. ಆದರೆ ಶಾಸನದ ಪದ್ಯದ ಲ್ಲಿಯೂ, ರಾಘವಾಂಕನ ಸಿದ್ಧರಾಮ ಪುರಾಣದಲ್ಲಿಯೂ ಕೇವಲ ಸಂ ಕ್ಷಿಪ್ತವಾಗಿ ಬರೆದಿರುವದರಿಂದ ಕೆಲ ವಿಷಯಗಳು ಬಿಟ್ಟು ಹೋಗಿದ್ದರೂ ಬಿಟ್ಟಿರಬಹುದು. ರಾಘವಾಂಕನ ಜೊತೆಯವನಾದ ಹಂಪೆಯ ಹರೀ ಶ್ವರ ದೇವನ ರೇವಣಸಿದ್ಧರಗಳೆಯಲ್ಲೂ ಮಲ್ಲಣ್ಣನ ರೇವಣಸಿದ್ಧ ಕಾವ್ಯ ದಲ್ಲೂ ಹೇಗೆ ಬರೆದಿದೆಯೋ ಅದನ್ನು ನೋಡಬೇಕು. ಆ ಗ್ರಂಥಗಳು ನನ್ನಲ್ಲಿಲ್ಲ.

ಈ ಮೇಲ್ಕಂಡ ಶಾಸನದಲ್ಲಿ ಕಾಲದ ವಿಚಾರದಲ್ಲಿ ಹೀಗೆ ಬರೆ ದಿರುತ್ತದೆ. ಹೇಗೆಂದರೆ:—

“ ಶೀಲಾವರ ವಂಶದ ಶ್ರೀಮನ್ಮಹಾ ಮಂಡಲೇಶ್ವರ ಎಳಿಮೇಲಿ ಶಿಂಗಿ ದೇವರಸರು, ಅವ್ವೆನಾಗಲದೇವಿಯರು, ಶ್ರೀಮನ್ಮಹಾಪ್ರಧಾನ ಸೇನಾ ಧಿಪತಿ, ಶ್ರೀಮತು ಪುಟ್ಟಿಯ ಕೆರೆಯ ನಾಯಕನುಂ, ಶ್ರೀಮತು ಬಲ್ಲು ಮದೇವರ ಮಹಾಪಸಾಯಿತ ಅಯ್ಯನಾಯಕರುಂ, ಶಕವರ್ಷಂಗಳು ೧೧೧೯ ನೆಯ ಪ್ಲವಂಗ ಸಂವತ್ಸರ ಭಾದ್ರಪದ ಬಹುಳ ೩೦ ನೇ ಶುಕ್ರ ವಾರ ಸೂರ್ಯಗ್ರಹಣ ನಿಮಿತ್ತವಾಗಿ, ಯೆಳಿಮೇಲೆಯುವತ್ತರ ಬಳಿಯ ಬಾಡಂ ಮರುವಡಿಯ ಮನ್ನೆಯ ಮೇಲಾಳಿಕೆಯುಂ, ಶ್ರೀಮದ್ದಕ್ಷಿಣವಾರ ಣಾಸಿ, ಶಿರಿವೊಳಲ ಶ್ರೀಮತು ಸಿದ್ಧಶಾಂತೇಶ್ವರ ಅಂಗಭೋಗರಂಗ ಭೋಗಖಂಡ ಸ್ಫುಟಿತ ಜೀರ್ಣೋದ್ಧಾರಕ್ಕಂ ಶಿವಯೋಗಿಗಳಶನಾಚ್ಛಾ ದಕ್ಕಂ ಕೊಟ್ಟರು. ”— ಎಂದು ಬರೆದಿದೆ. ಇದರಲ್ಲಿ ಶಕೆ ವರ್ಷಂಗಳು ೧೧೧೯ ಎಂದು ಹೇಳುವದರಿಂದ ಕ್ರಿ. ಶ. ೧೧೮೭ ಆಗುತ್ತದೆ. ಇದರಿಂದ ಪುರಾಣ ಪ್ರಸಿದ್ಧರಾದ, ಪಂಚಾಚಾರ್ಯರಲೊಬ್ಬರಾದ ರೇಣುಕಾ ಚಾರ್ಯರು ಅಥವಾ ರೇವಣಸಿದ್ಧರು ಬಸವನ ಸಮಕಾಲದಲ್ಲಿದ್ದರೆಂದು ಸ್ಪಷ್ಟವಾಗಿ ಗೊತ್ತಾಗುತ್ತದೆ. ಈ ರೇಣುಕರು ಕೇವಲ ದೀರ್ಘಾಯುಗಳಾ ಗಿದ್ದುದರಿಂದ ಬಸವನಿಗಿಂತ ಕೊಂಚ ಮೊದಲೂ, ಬಸವನಿಗಿಂತ ಕೊಂಚ ಈಚೆಗೂ ಇದ್ದಂತೆ ಕಾಣುತ್ತದೆ.

ಈ ರೇಣುಕರು ಮೊದಲು ಕಾಳಾಮುಖ ಶೈವರಾಗಿದ್ದರೆಂದು ಹೇಳು ವದಕ್ಕೆ ಅದೇ ಕಾಲದ ಮತ್ತೊಂದು ಶಾಸನದಿಂದ ವಿಷಯಗಳು ದೊರೆ

ಯುತ್ತವೆ. ತುಂಗಭದ್ರೆಯ ತಡಿಯಲ್ಲಿ ಮುಕ್ತೇಶ್ವರ ದೇವಸ್ಥಾನದಲ್ಲಿ ದೊರೆತ ಶಾಸನದಲ್ಲಿ ರೇವಣಸಿದ್ಧೇಶ್ವರರ ಆಜ್ಞೆಯಿಂದ ವೀರಕನ್ನಾದೇವಿಯರು ಇಲ್ಲಿಗೆ ಬಂದಂತೆಯೂ, ಗುತ್ತರಸ ವಿಕ್ರಮಾದಿತ್ಯನ ಪ್ರಧಾನ ಕಾಮೆಯ ನಾಯಕನು ಶಕೆ ೧೧೧೩ ವಿರೋಧಿಕೃತು ಸಂವತ್ಸರದಲ್ಲಿ ಇದೇ ದೇವರಿಗೆ ಮುಕ್ತಜೀಯರ ಕಾಲಂಕರ್ಚಿ ದತ್ತಿಯನ್ನು ಬಿಟ್ಟಂತೆಯೂ ಸಂಕೀರ್ಣಶಾಸನ ೧೭ ರಿಂದ ಕಂಡುಬರುವದಾಗಿಯೂ, ಈ ಕಾಲದಲ್ಲಿ ಅಲ್ಲಿಯ ಸ್ಥಾನದಾಚಾರ್ಯರು ಕಾಳಾಮುಖ ಗುರುಗಳಾದ ಮುಕ್ತಜೀಯರೆಂಬವರಿದ್ದರೆಂದು ಕಂಡುಬರುವದಾಗಿಯೂ ಮ॥ ರಾ॥ ಡಾ. ನಂದಿಮಠರವರು ಬರೆದಿರುತ್ತಾರೆ. ಆದರೆ ಮೊದಲು ಹೇಳಿದ ಶಿರಿವಾಳದ ಸಿದ್ಧಲಿಂಗೇಶ್ವರ ಗುಡಿಯ ಶಾಸನದಲ್ಲಿ ಹೇಳಿರುವ ರೇವಣಸಿದ್ಧರೂ, ಈ ರೇವಣಸಿದ್ಧರೂ ಒಂದೇಯೋ, ಬೇರೆಯೋ ಹೇಳುವದಕ್ಕಾಗುವದಿಲ್ಲ. ಮೊದಲು ಹೇಳಿದ ರೇವಣಸಿದ್ಧರೇನೊ ಪುರಾಣದಲ್ಲಿ ಹೇಳಿದ ರೇವಣಸಿದ್ಧರೇ ಎಂಬುದು ಈಗ ಸ್ಥಿರವಾದ ಸಂಗತಿಯಾಯಿತು. ನಾನು ಮೇಲೆ ಹೇಳಿದಂತೆ ಯಾವ ರೇವಣಸಿದ್ಧರೇ ಆಗಲಿ ಮೊದಲು ಶೈವರಾಗಿದ್ದು ಆಮೇಲೆ ವೀರಶೈವರಾಗಿರುತ್ತಾರೆಂಬುದು ನನ್ನ ಸಿದ್ಧಾಂತ. ರೇಣುಕರು ಶಾಸನದಲ್ಲಿ ಗುರುಗಳಾಗಿ ಹೇಳಲ್ಪಟ್ಟಿರುವದರಿಂದ, ವೀರಶೈವಕ್ಕೆ ಬರುವದಕ್ಕೆ ಮೊದಲು, ಪ್ರಸಿದ್ಧರಾದ ಕಾಳಾಮುಖ ಗುರುಗಳಾಗಿರಬೇಕು.

ಪುರಾಣಪ್ರಸಿದ್ಧರಾದ, ಪಂಚಾಚಾರ್ಯರಲ್ಲೊಬ್ಬರಾದ ರೇವಣಸಿದ್ಧರು ತಂದೆತಾಯಿಗಳುಳ್ಳವರಾಗಿದ್ದರೆಂದು ಮೇಲೆ ಬರೆದಿರುವ ಶಾಸನದಿಂದ ಗೊತ್ತಾಗುತ್ತದೆ. ಅದರಲ್ಲಿ "ಶಿವಯೋಗಿಶಾಂತಿಮಯ್ಯಗಳ ಪುತ್ರ ರೇಣುಕಾಚಾರ್ಯ" ಎಂದು ಬರೆದಿರುತ್ತದೆ. ಪಂಚಾಚಾರ್ಯರಿಗೆ ಲಿಂಗೋದ್ಭವರೆಂದು ಬರೆದಿರುವದು ಪ್ರಾಶಸ್ತ್ಯಕ್ಕೋಸ್ಕರವೂ, ಆಯಾಯ ಲಿಂಗಸನ್ನಿಧಿಯಲ್ಲಿ ಜನಿಸಿದ್ದರಿಂದಲೂ ಬರೆದುದಾಗಿರುತ್ತದೆ. ಪಂಡಿತಾರಾಧ್ಯರು ಭೀಮನಪಂಡಿತ, ಗೌರಾಂಬಿಕೆಯ ಮಗನಾಗಿರುವರೆಂದು ಪಂಡಿತಾರಾಧ್ಯ ಚರಿತ್ರೆಯಿಂದ ಗೊತ್ತಾಗುತ್ತದೆ. ಏಕೋರಾಮರು ತಾಯಿತಂದೆಗಳಲ್ಲಿ ಜನಿಸಿದರೆಂದು ಏಕೋರಾಮರ ಪುರಾಣದಿಂದ ಗೊತ್ತಾಗುತ್ತದೆ. ಮರುಳಸಿದ್ಧರು ಕಗ್ಗಲ್ಲಗೌಡನಿಗೆ ಮಗುವಾಗಿ ಸಿಕ್ಕಿದರೆಂದು ಮರುಳಸಿದ್ಧಚರಿತ್ರೆಯಿಂದ ಗೊತ್ತಾಗುತ್ತದೆ.

ಈ ರೀತಿಯಾಗಿ ನನಗೆ ತೋರಿದಮಟ್ಟಿಗೆ ಚಾರಿತ್ರ್ಯದ ಸತ್ಯತೆಯ ಮೇಲೆ ದೃಷ್ಟಿಯಿಟ್ಟು, ಯಾವ ದಾಕ್ಷಿಣ್ಯಕ್ಕೂ ಬದ್ಧನಾಗದೆ ಪುರಾಣಪ್ರಸಿದ್ಧರಾದ ರೇವಣಸಿದ್ಧರ ಕಾಲದ ವಿಚಾರದಲ್ಲಿ ಶಾಸನವಿಮರ್ಶೆ ಗ್ರಂಥವಿಮರ್ಶೆಗಳಿಂದ ಬರೆದಿರುತ್ತೇನೆ. ಇನ್ನು ಹೆಚ್ಚು ಶೋಧಿಸಿ ಇನ್ನು ಬೇರೆ ಬೇರೆ ವಿಧಾನದ ಸಂಗತಿಗಳನ್ನು ಚಾರಿತ್ರ್ಯದ ಸತ್ಯತೆಯಿಂದ ತೋರಿಸಿದರೆ ಅದಕ್ಕೆ ನಾನು ಬಹಳ ಸಂತೋಷಪಡುವದಲ್ಲದೆ, ಅದನ್ನು ನಾನು ಶಾಸನಮಾಡಿ ಇಟ್ಟುಕೊಳ್ಳುತ್ತೇನೆ.

ಈಚೆಗೆ ಮರುಳತನದ ಶ್ರೇಷ್ಠತ್ವದಾಶೆಗೆ ಲೇಖನವ್ಯತ್ಯಸ್ತಗಳು ಮಾಡಲ್ಪಡುತ್ತಿವೆಯೆಂದು ತಿಳಿದುಬರುತ್ತದೆ. ಇದು ವೀರಶೈವ ಚಾರಿತ್ರ್ಯಕ್ಕೆ ಬಹಳ ಅಪಾಯಕರವಾಗಿರುತ್ತದೆ. ಸುಳ್ಳಿಗೆ ಅವಕಾಶಕೊಡುತ್ತ ಹೋದರೆ, ಬರುತ ಬರುತ ನಿಜವು ಮುಚ್ಚಲ್ಪಡುತ್ತ ಹೋಗುತ್ತದೆ. ಈ ವಿಚಾರದಲ್ಲಿ ಕೆಲವು ಲೇಖಗಳು ಪತ್ರಿಕೆಯಲ್ಲಿ ಬಂದಿದ್ದವು. ಯಾವ ಗ್ರಂಥಗಳನ್ನು ಮುದ್ರಣಮಾಡಬೇಕಾದರೂ ಅನೇಕ ಪುರಾತನ ಪ್ರತಿಗಳನ್ನು ನೋಡಿ ಮುದ್ರಣಮಾಡಿಸಬೇಕಾಗಿ ಚಾರಿತ್ರಶೋಧಕ ವಿದ್ವಾಂಸರಿಗೆ ನನ್ನ ಅರಿಕೆ. ಇನ್ನು ಮೇಲೆ ಎಲ್ಲ ಲಿಂಗವಂತರೂ ಶುದ್ಧಮತಿಯಿಂದ ಲಿಂಗವಂತ ಧರ್ಮ ಗ್ರಂಥಗಳನ್ನು ಓದಬೇಕು. ಲಿಂಗವಂತ ಸಮಾಜಕ್ಕೂ ಲೋಕಕ್ಕೂ ಉಪಕಾರಮಾಡಬೇಕು.



# ಬಸವನ ಮಹತ್ಕಾರ್ಯಗಳು.

(ಲೇಖಕ:— ರಾ. ರಾ. ಯಂ. ಯನ್. ನಂಜಪ್ಪ ಬೆಂಗಳೂರನಗರ.)



ಅಸಮಲಿಂಗಾಂಗೈಕ್ಯ ಭಾವದ ।
ಬಸವನಂ ಬೇರೊಂದು ಭಾವದೊ ॥
ಳೊಸೆದು ಕೀರ್ತಿಸಲಹುದೆ ಇದು ತಪ್ಪೆಂದು ನುಡಿಯದಿರಿ ॥
ವಸುಮತಿಗೆ ಶಿವಭಕ್ತಿಯಂ ಪಸ ।
ರಿಸುವಂತನಾಗಿಯಾತನ ।
ದೆಸೆಯೊಳೆಲ್ಲ ಧನ್ಯರಾದವರೆಂದು ನುತಿಸುವೆನು ॥

(ಶ್ರೀ ಭೀಮಕವಿಗಳು)

ಇಂದು ಭಾರತವರ್ಷದ ಮೇಲೆ, ಹಿಮಾಚಲದಿಂದ ಕನ್ಯಾಕುಬ್ಜದವರೆಗೆ, ಯಾವ ಕಾರ್ಯಕ್ರಮದ ಮೇಲೆ ದೇಶೀಯ ಸ್ವಾತಂತ್ರ್ಯ ಚಳುವಳಿಯ ಆಂದೋಲನವು ನಡೆದಿರುವುದೋ ಅದಕ್ಕಿಂತಲೂ ಹೆಚ್ಚಿನ ಮತ್ತು ಶೀಘ್ರ ಫಲದಾಯಕವಾದ ಕಾರ್ಯಕ್ರಮವನ್ನು ಇಂದಿಗೆ ಸುಮಾರು ಎಂಟು ನೂರು ವರ್ಷಗಳ ಮೊದಲೇ ತಯಾರಿಸಿ ಅದನ್ನು ಕಾರ್ಯರೂಪಕ್ಕಿಳಿಸಿ ಮಾನವರೆಲ್ಲರೂ ಒಂದೇ, ಹೆಚ್ಚು ಕಡಿಮೆ ಎಂಬ ವರ್ಗಾವರ್ಗಿಯು ದೇವನಿಂದಾದುದಲ್ಲ, ಅದನ್ನು ಸ್ವಾರ್ಥಪರರಾದ ಮಾನವರೇ ಕಲ್ಪಿಸಿಕೊಂಡಿರುವರು, ಮಾನವರನ್ನೂ, ಪಶುಪಕ್ಷಿಗಳನ್ನೂ ದೇವನು ಸಮಾನ ದೃಷ್ಟಿಯಿಂದ ನೋಡುವನೇ ಹೊರ್ತು ಪಕ್ಷಪಾತ ಮಾಡುವದಿಲ್ಲ, ಜಗತ್ತಿಗೆಲ್ಲ ಒಬ್ಬನೇ ದೇವರು ಹಲವು ತರತರದ ದೇವತೆಗಳನ್ನು ಪಶು ಪ್ರಾಣಿಗಳನ್ನು ಬಲಿಗೊಟ್ಟು ಪೂಜಿಸುವ ರಾಕ್ಷಸೀ ಪೂಜೆಯಿಂದ ದೇವನು ಒಲಿಯನು, ದಯಾಮಯನಾದ ಜಗದೀಶ್ವರನನ್ನು ಸಾತ್ವಿಕ ಭಕ್ತಿಯೋಗಾಚರಣೆಯಿಂದಲೇ (ಜಗತ್ತಿನ ಸೇವಕರಾಗುವದರಿಂದಲೇ) ಒಲಿಸಿಕೊಂಡು ಮುಕ್ತಿಸಾಮ್ರಾಜ್ಯ ಸುಖವನ್ನನುಭವಿಸಬಹುದು, ಮುಂತಾದ ಇಹಪರ ಸುಖಸಾಧಕವಾದ ನಿಜತತ್ವವನ್ನು ಜಗತ್ತಿಗೆ ಸ್ವತಃ ತನ್ನ ನಡತೆಯಿಂದ ತೋರಿಸಿಕೊಟ್ಟು, ನಾಸ್ತಿಕರ ಉಪಟಳದಿಂದ ಲುಪ್ತವಾಗಿ ಎಲ್ಲಿಯೋ ಅಡಗಿಕೊಂಡಿದ್ದ ವೀರಶೈವ ಸಮಾಜವನ್ನು ಬೆಳಕಿಗೆ ತಂದು ಕರ್ನಾಟಕ, ಮಹಾರಾಷ್ಟ್ರ, ಆಂಧ್ರ ಮುಂತಾದ ಭರತಖಂಡದ ಬಹು

ಭಾಗಗಳಲ್ಲಿ ವೀರಶೈವ ಸಮಾಜದ ಬೆಳವಣಿಗೆಗೆ ಪ್ರೋತ್ಸಾಹಕೊಟ್ಟು ತನ್ಮೂಲಕ ಮಹಾಪುರುಷರ ಪಙ್ಕ್ತಿಯ ಮಧ್ಯಭಾಗದಲ್ಲಿ ವಿರಾಜಿಸುತ್ತಿರುವ ಮಹಾನುಭಾವರಿಂದ ಶ್ರೀ ಬಸವಣ್ಣನವರನ್ನು ಪರಮತೀಯರೆಲ್ಲರೂ ಹೊಗಳಿ ಹಾಡಿ ಹರಸುತ್ತಿರಲು, ಹಲವರು ವೀರಶೈವರೇ ಶ್ರೀ ಬಸವಣ್ಣನವರನ್ನು ಮನಸ್ವೀ ನಿಂದಿಸುವುದನ್ನು ನೋಡಿದರೆ ಆವನಿಗೆ ಅಸಹ್ಯ ದೋರಲಿಕ್ಕಿಲ್ಲ? ಈಗಿನ ಸ್ವಾತಂತ್ರ್ಯ ಚಳುವಳಿಯನ್ನು ಭರತಖಂಡದ ತುಂಬ ಹಬ್ಬಿಸುವುದಕ್ಕಾಗಿ ಅಖಿಲಭಾರತ ರಾಷ್ಟ್ರೀಯ ಮಹಾಸಭೆಯು ಹಳ್ಳಿ ಹಳ್ಳಿಗೂ ಕೇರಿ ಕೇರಿಗೂ ಹೇಗೆ ತನ್ನ ಶಾಖಾ ಸಂಘಗಳನ್ನೇರ್ಪಡಿಸಿದೆಯೋ ಹಾಗೆಯೇ ಅಂದು ಶ್ರೀ ಬಸವಣ್ಣನವರು ಪ್ರತಿಯೊಂದು ಊರು ಕೇರಿಗಳಲ್ಲಿಯೂ ಒಂದೊಂದು ಮಠವನ್ನು ಸ್ಥಾಪಿಸಿ ಆ ಮೂಲಕ ಅದ್ಭುತವಾದ ಧಾರ್ಮಿಕ ಕ್ರಾಂತಿಯನ್ನೆಬ್ಬಿಸಿ ನಾಸ್ತಿಕರ ಉಪಟಳಕ್ಕೆ ಸಿಲ್ಕಿ ನರಳುತ್ತಿದ್ದ ವೈದಿಕ ಧರ್ಮವನ್ನು ಕಾಪಾಡಿ ಸತ್ಯ, ಅಹಿಂಸೆ, ಅಸ್ತೇಯ, ಬ್ರಹ್ಮಚರ್ಯ, ಅಪರಿಗ್ರಹ, ನಿರ್ಭಯ ಮುಂತಾದ ಉದಾತ್ತ ತತ್ವದ ಅಡಿಗಲ್ಲುಗಳಿಂದ ನಿರ್ಮಿತವಾಗಿದ್ದರೂ ಪೋಷಕರಿಲ್ಲದೆ ಹ್ರಾಸವಾಗುತ್ತ ನಡೆದಿದ್ದ ಪರಮಪವಿತ್ರವಾದ ವೀರಶೈವ ಧರ್ಮವನ್ನು ಸಂಜೀವನಪ್ರಾಯವಾದ ತನ್ನ ಧಾರ್ಮಿಕ ಕ್ರಾಂತಿಯ ಮೂಲಕ ಸಚೇತನಗೊಳಿಸುವದು ಅವಶ್ಯವಿದೆ.

“ ದೇವ ದೇವ ಬಿನ್ನಪವ ಅವಧಾರು. ವಿಪ್ರಮೊದಲು ಅಂತ್ಯಜ ಕಡೆಯಾಗಿ, ಶಿವಭಕ್ತರಾದವರನೆಲ್ಲರನೊಂದೇ ಎಂಬೆ. ಹಾರುವ ಮೊದಲು ಶ್ವಪಚ ಕಡೆಯಾಗಿ ಭವಿಯಾದವರನೊಂದೇ ಎಂಬೆ. ಹೀಗೆಂದು ನಂಬುವುದೆನ್ನ ಮನವು. ಈ ನುಡಿದ ನುಡಿಯೊಳಗೆಳ್ಳಮೊನೆಯಷ್ಟು ಸಂದೇಹವುಳ್ಳರೆ ಹಲ್ಲುದೋರಿ ಮೂಗು ಕೊಯ್ಲಿ ಕೂಡಲಸಂಗಮದೇವಾ.

ಮುಂತಾದ ವಿಶಾಲಭಾವನಾ ಪೂರಿತವಚನಗಳಿಂದ ಸಂಕುಚಿತದ ಕೋಮುವಾರು ಭೂತವನ್ನು ಹೊಡೆದೋಡಿಸಿರಿ.

ದಯವಿಲ್ಲದ ಧರ್ಮವಾವುದಯ್ಯ? । ದಯವೇ ಬೇಕು ಸಕಲಪ್ರಾಣಿಗಳಲ್ಲಿ । ದಯವೇ ಧರ್ಮದ ಮೂಲವಯ್ಯ । ಕೂಡಲಸಂಗಯ್ಯನಂತಲ್ಲದೊಲ್ಲನಯ್ಯ.

ಮೊದಲಾದ ದಯಾರಸ ಪೂರಿತ ವಚನಾಮೃತದಿಂದ ಲೋಪ ಹಾಗುತ್ತ ನಡೆದಿದ್ದ ದಯಾಧರ್ಮವನ್ನು ಪುನರುಜ್ಜೀವನಗೊಳಿಸಿ ಮಾನ

ವರು ದಂಭ ದರ್ಪಗಳನ್ನು ತ್ಯಜಿಸಿ ವಿನಮ್ರಬುದ್ಧಿಯಿಂದ ಜಗತ್ತಿನಲ್ಲಿ ಬಾಳ್ವೆ ಮಾಡಬೇಕೆಂಬುದನ್ನು

"ಪುಣ್ಯಪಾಪಂಗಳೆಂಬುವು ತಮ್ಮ ಇಷ್ಟವು ಕಂಡಿರೆ। ಅಯ್ಯ ಎಂದಡೆ ಸ್ವರ್ಗ। ಎಲವೊ ಎಂದಡೆ ನರಕ। ದೇವಭಕ್ತ ಜಯ ಜೀಯಾ ಎಂಬ ನುಡಿಯೊಳಗೆ ಕೈಲಾಸವೈದದೇ ಕೂಡಲಸಂಗಮದೇವಾ॥

ಎಂಬುವ ವಚನವಾಣಿಯಿಂದಲೂ, ಮನುಷ್ಯನು ಸತ್ಯ ಸದಾಚಾರ, ಸದ್ಧರ್ಮಗಳಿಂದ ವರ್ತಿಸಿದರೆ ಇಹಲೋಕದಲ್ಲಿಯೇ ದೇವಲೋಕದ ಸುಖ ಸೌಖ್ಯಗಳನ್ನು ಪಡೆಯಬಹುದೆಂಬುದನ್ನು

ದೇವಲೋಕ, ಮರ್ತ್ಯಲೋಕವೆಂಬುದು ಬೇರಿಲ್ಲ ಕಾಣಿರೋ। ಸತ್ಯವ ನುಡಿವುದೇ ದೇವಲೋಕ। ಮಿಥ್ಯವ ನುಡಿವುದೇ ಮರ್ತ್ಯಲೋಕ ಆಚಾರವೇ ಸ್ವರ್ಗ। ಅನಾಚಾರವೇ ನರಕ। ಕೂಡಲಸಂಗಮದೇವಾ ನೀವೇ ಸಾಕ್ಷಿ॥

ಎಂಬ ಅಮೃತವಾಣಿಯಿಂದಲೂ, ಜಗತ್ತಿಗೆಲ್ಲಾ ದೇವನೊಬ್ಬನೇ ಎಂಬುದನ್ನೂ ಅವನ ವಿನಃ ಅನ್ಯ ಕ್ಷುದ್ರ ದೇವತೆಗಳನ್ನು ಪೂಜಿಸಬಾರದೆಂಬುದನ್ನೂ ಹಾಗೆ ಪೂಜೆಸುವುದು ಎಂಥಹ ಅಸಂಗತವೆಂಬುದನ್ನೂ

ನಂಬಿದ ಹೆಂಡತಿಗೆ ಗಂಡನೊಬ್ಬನೇ ಕಾಣಿರೋ। ನಂಬಬಲ್ಲ ಭಕ್ತಂಗೆ ದೇವನೊಬ್ಬನೇ ಕಾಣಿರೋ। ಬೇಡ; ಬೇಡ; ಅನ್ಯದೈವದ ಸಂಗ ಹೊಲ್ಲ। ಅನ್ಯದೈವವೆಂಬುದು ಹಾದರ ಕಾಣಿರೊ ಕೂಡಲಸಂಗಮದೇವರು ಕಂಡರೆ ಮೂಗಕೊಯ್ಯುವ ಕಾಣಿರೋ॥

ಎಂಬದಾಗಿ ಜನತೆಯ ಮನಸ್ಸಿನ ಮೇಲೆ ಎಷ್ಟು ಸುಲಭವಾಗಿ ಪರಿಣಾಮಕಾರಿಯಾಗುವಂತೆ ಎಷ್ಟು ಸ್ವಾರಸ್ಯವಾಣಿಯಿಂದ ಹೇಳಿರುವರು! ಮತ್ತು ಆಸ್ತಿಕಶಿರೋಮಣಿಗಳಾದ ವೀರಶೈವರೆಲ್ಲರೂ ಐಕಮತ್ಯದಿಂದಿದ್ದು ಅವರ ಕಸಬುಗಳಿಗೆ ಪ್ರಾಧಾನ್ಯಕೊಡದೆ ಒಬ್ಬರಲ್ಲೊಬ್ಬರು ಭಿನ್ನಭೇದಗಳನ್ನೆಣಿಸದೆ ಸಮರಸಭಾವದಿಂದಿರಬೇಕೆಂಬ ತಮ್ಮ ಸದಿಚ್ಛೆಯನ್ನು "ದೇವ ಸಹಿತ ಭಕ್ತ ಮನೆಗೆ ಬಂದರೆ ಕಾಯಕವಾವುದೆಂದು ಬೆಸಗೊಂಡೆನಾದೊಡೆ ನಿಮ್ಮಾಣೆ ನಿಮ್ಮ ಪುರಾತನರಾಣೆ ತಲೆದಂಡ ತಲೆದಂಡ ಕೂಡಲಸಂಗಮದೇವಾ ಭಕ್ತರಲ್ಲಿ ಕುಲವನಾರಿಸಿದರೆ ನಿಮ್ಮ ರಾಣಿವಾಸದಾಣೆ.

ಎಂಬುದಾಗಿ ಎಂತಹ ಕಠಿಣ ಪ್ರತಿಜ್ಞೆಯ ಮೂಲಕ ಹೊರಪಡಿಸಿರುವರೆಂಬುವನ್ನು ನೋಡಿದರೆ, ಆ ಮಹಾನುಭಾವರಿಗಿದ್ದ ಸಮಾಜ ಸುಧಾರಣಾ ಕಾಂಕ್ಷೆಯೂ, ಮಾನವ ಜನ್ಮದುದ್ಧಾರಕ್ಕಾಗಿ ಎಷ್ಟು ಶ್ರಮಪಟ್ಟಿರುವರೆಂಬುದೂ ವ್ಯಕ್ತವಾಗುವದಲ್ಲವೇ? ಕಳ್ಳತನ ಮಾಡಬಾರದು. ಪ್ರಾಣಿದಯೆ ಇರಬೇಕು, ಸುಳ್ಳು ಹೇಳಬಾರದು, ಮತ್ಸರಿಸಬಾರದು, ತನ್ನ ತಾನು ಹೊಗಳಿಕೊಳ್ಳಬಾರದು, ಮದ್ಯ ಮಾಂಸಗಳನ್ನು ಸೇವಿಸಬಾರದು, ಪರಸ್ತ್ರೀಯರನ್ನು ಕಣ್ಣೆತ್ತಿ ನೋಡಬಾರದು ಎಂದು ಮಾನವ ಧರ್ಮವನ್ನು,

"ಕಳಬೇಡ ಕೊಲಬೇಡ ಹುಸಿಯನುಡಿಯಬೇಡ ಅಸೂಯಪಡಬೇಡ ತನ್ನ ಬಣ್ಣಿಸಬೇಡ ಇದಿರ ಹಳಿಯಲುಬೇಡ ಇದೇ ಅಂತರಂಗ ಶುದ್ಧಿ, ಇದೆ ಬಹಿರಂಗಶುದ್ಧಿ, ಇದೆ ನಮ್ಮ ಕೂಡಲ ಸಂಗನ ನೊಲಿಸುವ ಪರಿ;"

ಮುಂತಾದ ಒಂದೊಂದೇ ವಚನಗಳಿಂದ ಎಷ್ಟೊಂದು ವಿಷಯಗಳನ್ನು ಗರ್ಭೀಕರಿಸಿ ಮಾನವರಿಗುಪದೇಶಿಸಿ, ತಾವೂ ಸಹ ನುಡಿಯಂತೆ ನುಡಿದು ತಾವೂ ತಮ್ಮ ಜೊತೆಗೆ ಲೋಕವನ್ನು ಕೃತಾರ್ಥಗೊಳಿಸಿರುವರಲ್ಲವೇ? ಮತ್ತು ವೀರಶೈವ ಸಮಾಜದ ಧಾರ್ಮಿಕ ಮತ್ತು ಸಾಂಪ್ರತಿಕ ಶಾಸನಗಳಂತಿರುವ ಶೀಲಂಗಳೆಂಬ ಶಾಸನಗಳ ಮೂಲಕ ವೀರಶೈವರೆಲ್ಲರೂ ಕೊಂಬಿನ ಲಾಳಿಗಳನ್ನುಪಯೋಗಿಸದ ವೀರಶೈವರಿಂದಲೇ ನೂತ ಕೈಯಿಂದ ನೈಯ್ದ ಬಟ್ಟೆಗಳನ್ನೇ ಉಪಯೋಗಿಸಬೇಕು. ವೀರಶೈವರೆಲ್ಲರೂ ವೀರಶೈವರಲ್ಲೇ ವ್ಯಾಪಾರ ವ್ಯವಹಾರಗಳನ್ನು ಮಾಡಬೇಕು. ಮುಂತಾದ ನಿಯಮಗಳನ್ನು ಹಾಕಿಕೊಟ್ಟು ತನ್ಮೂಲಕ ಸಮಾಜದಲ್ಲಿ ಸಹಕಾರ ಯುಕ್ತ ರಾಷ್ಟ್ರೀಯ ಭಾವನೆಯನ್ನು ಹಬ್ಬಿಸಿ ತಮ್ಮ ಅಸಂಖ್ಯ ವಚನಗಳ ಮೂಲಕ ಪ್ರಪಂಚಕ್ಕೆ ಮಾನವ ಧರ್ಮವನ್ನರುಹಿ ಕನ್ನಡಿಗರಲ್ಲಿ ಸ್ವಧರ್ಮ ಸ್ವಭಾಷೆ ಸ್ವದೇಶಗಳೆಂಬ ಜ್ವಾಲೆಗಳು ಸದಾ ಕೆಡಿಗಳನ್ನು ಹಾರಿಸುತ್ತಿರುವಂತೆ ಮಾಡಿರುವ ಮಹಾನುಭಾವರನ್ನು ದೂಷಿಸುವುದೆಂದರೆ ಅಂತ್ಯ ಕಾಲಕ್ಕೆ ನನಗೆ ನರಕವಾಸವನ್ನೇ ಕರುಣಿಸೆಂದು ದೇವನಲ್ಲಿ ವರವಂ ಬೇಡಿದಂತೆಯೇ ಸರಿ. ಇನ್ನೂ ಬಾಲ್ಯಾವಸ್ಥೆಯಲ್ಲಿರುವಾಗಲೇ ಉಪನಯನ ಕರ್ಮವನ್ನು ಮಾಡಿಸಬಂದ ಮಾತಾಪಿತೃಗಳಿಗೆ ಉಪನಯನವು ಬರೀ ಕರ್ಮಮಾರ್ಗವನ್ನನುಸರಿಸುವುದೆಂತಲೂ ಜ್ಞಾನವನ್ನು ಬಿಟ್ಟು ಬರೀ ಕರ್ಮಒಂದನ್ನೇ ಆಚರಿಸುವುದರಿಂದಮುಕ್ತಿಯು

ಹಸ್ತಗತವಾಗದೆಂತಲೂ ಮುಕ್ತ್ಯಂಗನೆಯುನ್ನೊಲಿಸಿಕೊಳ್ಳಬೇಕಾದರೆ ಜ್ಞಾನ ಕರ್ಮ ಸಮಾಯುಕ್ತವಾದ ಶಕ್ತಿವಿಶಿಷ್ಟಾದ್ವೈತ ತತ್ವವನ್ನೇ ಮರೆ ಹೊಗಬೇಕೆಂತಲೂ ಪಂಚವಿಂಶತಿ ತತ್ವಗಳಿಂದ ಕೂಡಿದ ಶರೀರವೇ ಅಂಗವೆಂತಲೂ ಇಂತೊಪ್ಪುವ ಅಂಗಕ್ಕೆ ದೀಕ್ಷಾ ಸಂಸ್ಕಾರವಂ ಮಾಡಿ ನಂತರ ಪಂಚಸೂತ್ರಘಟಿತವಾದ ಲಿಂಗಕ್ಕೆ ಪಂಚಕಲೆಗಳ ಆಹ್ವಾಹನೆಯುನ್ನೂ ಷಡಧ್ವಸಂಸ್ಕಾರವನ್ನೂ ಮಾಡಿ, ಆ ಲಿಂಗದಲ್ಲಿ ಹನ್ನೊಂದು ತತ್ವಗಳನ್ನು ಸರಿಯೋಜಿಸಿ ಆ ಹನ್ನೊಂದು ತತ್ವಂಗಳಿಂ ಕೂಡಿದ ಲಿಂಗವನ್ನು ಆ ಇಪ್ಪತ್ತೈದು ತತ್ವಮಯವಾದ ಅಂಗದಲ್ಲಿ ಧರಿಸಿ, ಸಂಸ್ಕೃತನಾಗಿ ಲಿಂಗಧಾರಣೆ ಮಾಡಿಕೊಂಡಿರುವವನನ್ನು ಅಪ್ರಾಕೃತ ಶರೀರಿ ಮುವ್ವತ್ತಾರು ತತ್ವಮಯವಾದ ಶರೀರವುಳ್ಳವನು ಎನಿಸಿ ಆ ಶರೀರದಲ್ಲಿ ಶಿವಭಕ್ತಿ ಅಷ್ಟಾವರಣ ಪಂಚಾಚಾರ, ಷಟ್ಥಲ, ಲಿಂಗಾಂಗ ಸಾಮರಸ್ಯಗಳೆಂಬ ಅಪ್ರಾಕೃತ ಧರ್ಮಂಗಳನ್ನು ನೆಲೆಗೊಳಿಸಿ, ಭಕ್ತಿ ಜ್ಞಾನ, ವೈರಾಗ್ಯಗಳನ್ನುಂಟು ಮಾಡಿ ತ್ಯಾಗಾಂಗ, ಭೋಗಾಂಗ, ಯೋಗಾಂಗಗಳೆಂಬ ಮೂರಂಗಗಳಲ್ಲಿ ಇಷ್ಟಲಿಂಗ, ಪ್ರಾಣಲಿಂಗ, ಭಾವಲಿಂಗಗಳನ್ನು ಪೂಜಿಸಿ ಈ ಜಗತ್ತಿನ ಸಾರಭೂತವಾದ ರೂಪು, ರುಚಿ, ತೃಪ್ತಿಗಳನ್ನು ಆ ಲಿಂಗಗಳಿಗರ್ಪಿಸಿ ಆ ಪ್ರಸಾದಾನುಭವದಲ್ಲೇ ಮಗ್ನನಾಗಿಸಿ ಆ ಮೂರುಲಿಂಗಳಲ್ಲೇ ಆ ಮೂರು ಅಂಗಗಳನ್ನು ಸಾಮರಸ್ಯಗೊಳಿಸಿ ಇಹದಲ್ಲಿ ಭೋಗವನ್ನೂ ಪರದಲ್ಲಿ ಮೋಕ್ಷವನ್ನೂ, ಒಂದೇ ಜನ್ಮದಲ್ಲಿ ಉಂಟುಮಾಡುವ ಶಿವಾದ್ವೈತ ಸಿದ್ಧಾಂತವನ್ನು ನಂಬಿ ಆಚರಿಸುವುದೇ ಶ್ರೇಷ್ಠವೆಂದೂ ಅದನ್ನು ಬಿಟ್ಟು ಪ್ರಾಕೃತ ಧರ್ಮಕ್ಕೆ ಸಂಬಂಧಿಸಿದ ಉಪನಯನ ಮುಂತಾದುವುಗಳನ್ನಾಚರಿಸುವುದರಿಂದ, "ಕ್ಷೀಣೇ ಪುಣ್ಯೇ ಮರ್ತ್ಯಲೋಕಂ ವಿಶಂತಿ," ಎಂಬ ಶೃತ್ಯನುಸಾರವಾಗಿ ಸ್ವರ್ಗ ಸುಖವಂ ಪಡೆಯಬೇಕೆಂದಪೇಕ್ಷೆಯುಳ್ಳವರು ಉಪನಯನಕ್ಕೆ ಸಂಬಂಧಿಸಿದ ಕರ್ಮಗಳನ್ನು ಮಾಡಬೇಕು. ಅನಂತರ ಯಜ್ಞಾದಿ ಕರ್ಮಗಳನ್ನಾಚರಿಸಿ ಸ್ವರ್ಗವನ್ನು ಹೊಂದಿರುವಾತನು ಅವನ ಪುಣ್ಯವೆಲ್ಲವೂ ಸ್ವರ್ಗದಲ್ಲಿ ತೀರಿದನಂತರ ಪುನಃ ಭೂಲೋಕದಲ್ಲಿ ಹುಟ್ಟಬೇಕು. ಕರ್ಮಾಚರಣೆಯನ್ನನುಸರಿಸುವವನಿಗೆ ಬರೀ ಭೋಗ ಸೌಖ್ಯವೇ ಲಭಿಸುವುದು, ಜ್ಞಾನಾಚರಣೆಯಂ ಮಾಡುವವನಿಗೆ ಬರೀ ಬ್ರಹ್ಮಾದ್ವೈತವೇ ಸಿದ್ಧಿಸುವುದು. ಆದ್ದರಿಂದ ಜ್ಞಾನ ಮತ್ತು ಕರ್ಮ ಇವೆರಡರಲ್ಲಿ ಯಾವುದಾದ

ರೊಂದೆನ್ನೇ ಅನುಸರಿಸದೆ ಜ್ಞಾನ ಕರ್ಮ ಸಮಾಯುಕ್ತವಾಗಿ ರಾರಾಜಿಸು ತ್ತಿರುವ ಶಕ್ತಿವಿಶಿಷ್ಟಾದ್ವೈತ ಸಿದ್ಧಾಂತವನ್ನವಲಂಬಿಸುವುದೇ ಶ್ರೇಷ್ಠವೆಂದೂ ಅಹಂಬ್ರಹ್ಮಾಸ್ಮಿ ಎಂಬ ತತ್ವಕ್ಕಿಂತಲೂ, ಶಿವೋಹಂ ಸ್ಮಿ, ಎಂಬ ತತ್ವ ಶಾಸ್ತ್ರವೇ ಶ್ರೇಷ್ಠವೆಂತಲೂ ಮುಂತಾಗಿ ಇನ್ನೂ ತಾನು ಬಾಲ್ಯಾ ವಸ್ಥೆಯಲ್ಲಿರುವಾಗಲೇ ತನಗೆ ಜನ್ಮವನ್ನಿತ್ತ ಜನನೀ ಜನಕರಿಗೇ ತತ್ವ ಶಾಸ್ತ್ರವನ್ನುಪದೇಶಿಸುವುದೆಂದರೆ ದೈವಾಂಶ ಸಂಭೂತರಲ್ಲದ ಸಾಮಾನ್ಯ ಮಾನವ ಬಾಲಕನಿಂದ ಸಾಧ್ಯವಾಗುವ ಕಾರ್ಯವೇ? ಇದಲ್ಲದೆ ಜಾತಿ ಭೇದಗಳನ್ನು ತೋರ್ಪಡಿಸುವುದು ಎಷ್ಟು ಕೆಟ್ಟದೆಂಬುದನ್ನೂ ಜಾತಿ ಭೇದಗಳನ್ನು ತೋರ್ಪಡಿಸುವುದರಿಂದ ಸಮಾಜದ ಅಥವಾ ರಾಷ್ಟ್ರದ ಮೇಲೆ ಎಂಥಹ ಕೆಟ್ಟ ಪರಿಣಾಮವಾಗುವುದೆಂಬದನ್ನೂ ಜಾತಿ ಜಾತಿಗ ಳನ್ನೆಣಿಸ ಹೋದರೆ ವೈದಿಕ ಧರ್ಮದ ಶ್ರೇಷ್ಠ ಮತ್ತು ಪವಿತ್ರ ವ್ಯಕ್ತಿಗ ಳೆಂದೆಣಿಸಲ್ಪಟ್ಟಿರುವ ಋಷಿವರ್ಯರನ್ನೆಲ್ಲ ಅತ್ಯಂತ ನಿಕೃಷ್ಟತೆಯಿಂದ ಕಾಣಬೇಕಾಗುವುದೆಂಬುದನ್ನೂ,

"ವ್ಯಾಸಬೋಯಿತಿಯ ಮಗ, ಮಾರ್ಕಂಡೇಯ ಮಾತಂಗಿಯ ಮಗ, ಮಂಡೋದರಿ ಕಪ್ಪೆಯ ಮಗಳು, ಕುಲವನರಸದಿರಿಭೋ। ಕುಲ ದಿಂದಮುನ್ನೇನ್ನಾದಿರಿಂಭೋ। ಸಾಕ್ಷಾತ್ ಅಗಸ್ತ್ಯ ಕಬ್ಬಿಲ, ದೂರ್ವಾಸ ಮಚ್ಚಿಗ, ಕಶ್ಯಪ ಕಮ್ಮಾರ, ಕೌಂಡಿಲ್ಯನೆಂಬ ರುಷಿ ಮೂರು ಭುವನ ವರಿಯೆ ನಾಯಿದ ಕಾಣಿಭೋ ನಮ್ಮ ಕೂಡಲ ಸಂಗಮದೇವನ ವಚ ನವಿಂತೆಂದುದು ॥

ಎಂಬ ತಮ್ಮ ಅನುಭವ ವಾಣಿಯಿಂದ ಸಮಾಜವನ್ನೆಚ್ಚರಿಸಿರುವ ಮಹಾನುಭಾವರನ್ನು ಬಸವನು ವೈದಿಕ ಧರ್ಮವನ್ನು ವರ್ಣಸಂಕರ ಮಾಡಿ ಬಿಟ್ಟನು, ಪುಂಡು ಜಂಗಮರಿಗಾಶ್ರಯವನ್ನಿತ್ತು, ಧರ್ಮ, ಆಚಾರ, ನೀತಿ, ನಿಯಮಂಗಳಿಗೆ ತಿಲಾಂಜಲಿಯನ್ನು ಕೊಟ್ಟಿದ್ದನು, ಮುಂತಾಗಿ ದೂಷಿ ಸುವ ಈ ಕಾಲದ ಸ್ವಾನುಭವಿಗಳನ್ನು ಭಾಸ್ಕರನನ್ನು ನಿಂದಿಸುವ ದಿವಾ ಭೀತ ಪಕ್ಷಿಗೆ ಹೋಲಿಸಬಹುದಲ್ಲವೇ? ಬಸವ ಮಹಾನುಭಾವರು ಪುಂಡು ಜಂಗಮರಿಗಾಶ್ರಯ ಕೊಡುತ್ತಿರಲಿಲ್ಲವೆಂಬುದನ್ನೂ, ಎಂತಹ ಕರ್ತವ್ಯ ನಿಷ್ಠರಾದ ಲೋಕ ಸೇವಕರಿಗೆ ಅವರಲ್ಲಿ ಆಶ್ರಯ ದೊರೆಯುತ್ತಿತ್ತೆಂಬುದೂ, ಅವರ.

"ಆಪ್ಯಾಯನಕ್ಕೆ ಅನ್ನವ ನೀಡುವೆ। ಲಾಂಛನಕ್ಕೆ ಶರಣೆಂಬೆ। ಲಾಂಛನಕ್ಕೆ ತಕ್ಕ ಆಚರಣೆ ಇಲ್ಲದಿದ್ದರೆ ಕೂಡಲ ಸಂಗಮದೇವ ನೀ ಸಾಕ್ಷಿಯಾಗಿ ಛೀ ಎಂಬೆನು ॥"

ಎಂಬ ಒಂದೇ ವಚನದಿಂದ ತಿಳಿದುಕೊಳ್ಳಬಹುದಲ್ಲವೇ? ಮತ್ತು ಪವಾಡಗಳ ಮೂಲಕ ಶ್ರೇಷ್ಠತೆಯನ್ನು ನಿರ್ಣಯಿಸುವ ಕಾಲವಿದಲ್ಲವಾದ್ದರಿಂದ ಆ ಮಹಾನುಭಾವರ ಪವಾಡುಗಳನ್ನೊತ್ತಟ್ಟಿಗಿಟ್ಟು ಅವರ ಕರ್ತವ್ಯ ಶಕ್ತಿಯನ್ನು ನೋಡಿದರೂ ಕೂಡ ಅವರು ಮೇಲ್ಪಂಙ್ತಿಯನ್ನು ಹಾಕಿ ಕೊಟ್ಟು ಕಣ್ಮರೆಯಾಗಿ ಹೋಗಿ ಹಲವು ಶತಮಾನಗಳು ಕಳೆದು ಪ್ರಪಂಚವೇ ತಿರುಗಮುರುಗಾಗಿದ್ದರೂ. ಅಂದು ಅವರಿಂದ ರಚಿತವಾಗಿದ್ದ ಕಾರ್ಯಕ್ರಮವು ಮಾತ್ರ ಇಂದಿಗೂ ಸಮಾಜದ ಮುಂದೆ ಅಚ್ಚಳಿಯದೆ ನಿಂತಿರುವುದನ್ನು ನೋಡಿದರೆ ಅವರಲ್ಲಿದ್ದ ಕರ್ತೃತ್ವ ಶಕ್ತಿಯು ಎಂತಹ ಅದ್ಭುತವಾದುದೆಂಬುದು ತಿಳಿಯುವುದಲ್ಲವೇ? ವೀರಶೈವ ಸಮಾಜವನ್ನೂ ಕರ್ನಾಟಕ ಭಾಷೆಯನ್ನೂ ಕರ್ನಾಟಕ ದೇಶವನ್ನೂ ಅಷ್ಟೇ ಏಕೆ ಜೈನ, ಬೌದ್ಧ, ಚಾರ್ವಾಕಾದಿನಾಸ್ತಿಕ ಮತೀಯ ಉಪಟಳಕ್ಕೆ ಸಿಕ್ಕಿ ಮಣ್ಣುಮುಕ್ಕುತ್ತಿದ್ದ ವೈದಿಕ ಧರ್ಮವನ್ನೂ ಬಲವಾದ ಸಾಮಾಜಿಕ ಕ್ರಾಂತಿಯ ಚಳುವಳಿಯನ್ನೆಬ್ಬಿಸಿ ಪುನರುಜ್ಜೀವನ ಗೊಳಿಸಿದ್ದಲ್ಲದೆ ಹಲಸಿನ ಹಣ್ಣಿನ ಮಾಧುರ್ಯವನ್ನ ಸವಿದುಣ್ಣಬೇಕಾದರೆ ಕೈಗೆ ಎಣ್ಣೆಯನ್ನು ಹಚ್ಚಿಕೊಂಡು ಹಣ್ಣನ್ನು ಬಿಚ್ಚುವುದರ ಮೂಲಕ ಹೇಗೆ ಸುಲಭವೋ ಹಾಗೆಯೇ ಮಾನವನು ಇಹಪರಗಳೆರಡರ ಸುಖದ ಸವಿಯನ್ನುಣ್ಣಬೇಕಾದರೆ ಭಕ್ತಿಯೋಗ ಅಥವಾ ಸೇವಾಧರ್ಮವೆಂಬ ಎಣ್ಣೆಯನ್ನು ಮನಸ್ಸಿಗೆ ಹಚ್ಚಿಕೊಂಡರೆ ಬಹು ಸುಲಭವಾಗಿ ಇಹ, ಪರಗಳೆರಡರ ಶ್ರೇಷ್ಠ ಸುಖವನ್ನನುಭವಿಸಬಹುದೆಂಬುದನ್ನೂ ನುಡಿದು ಅದರಂತೆ ತಾವು ನಡೆದು ಜಗತ್ತಿಗೆ ಮೇಲ್ಪಙ್ತಿಯನ್ನು ಹಾಕಿಕೊಟ್ಟಿರುವರಲ್ಲವೇ? ಇಂತಹ ಸಚ್ಚರಿತರೂ ಪತಿತಪಾವನರೂ ಧರ್ಮೋದ್ಧಾರಕರೂ ಆದ ಮಹಾ ಪುರುಷರನ್ನು ಪ್ರಾಚ್ಯ, ಮತ್ತು ಪಾಶ್ಚಾತ್ಯವರೇಣ್ಯರೂ ತತ್ವಶಾಸ್ತ್ರಜ್ಞರುಗಳೂ ಭೇದ ಬುದ್ಧಿಯನ್ನಿಡದೆ ಹೊಗಳುತ್ತಿದ್ದರೂ ಸ್ವಮತೀಯರಾಗಿ ಶ್ರೀ ಬಸವಣ್ಣನವರಿಂದುದ್ಧರಿಸಲ್ಪಟ್ಟ ಧರ್ಮದ ಪೋಷಣೆಯಲ್ಲೇ ಬೆಳೆದು ಹಲವರು ವೀರಶೈವರೇ ಈಗ ಆ ಮಹಾಪುರುಷರನ್ನು ನಿಂದಿಸುವದೆಂದರೆ ಇದಕ್ಕಿಂತಲೂ ಧರ್ಮ ದ್ರೋಹವುಂಟೆ? ಹನ್ನೆರಡನೆಯ ಶತಮಾನದಲ್ಲಿ ಸಮಸ್ತ ಆಸ್ತಿಕ ಪಂಗಡಗಳನ್ನು ನಾಸ್ತಿಕರ ಉಪಟಳದಿಂದ ರಕ್ಷಿಸಿ ಪರ್ಯಾಯದಿಂದ ಆರ್ಯ ಸಂಸ್ಕೃತಿಯನ್ನು ರಕ್ಷಿಸಿರುವ ಆ ಮಹಾಪುರುಷರ ಗುಣಗಾನಗಳ ಸಂಸ್ಮರಣೆ ಮಾಡುವದು ಕನ್ನಡಿಗರೆಲ್ಲರ ಅದರಲ್ಲಿಯೂ ವೀರಶೈವರ ಮುಖ್ಯ

ಕರ್ತವ್ಯವಲ್ಲವೇ? ಆದ್ದರಿಂದ ಯಾವ ಮಹಾಪುರುಷರನ್ನೂ ನಿಂದಿಸದೆ ಅವರ ಚರಿತ್ರೆಯ ಮೂಲಕ ಅವರ ಜೀವನದ ಸದಸದ್ವಿಚಾರಗಳನ್ನು ತಿಳಿದುಕೊಂಡು ಸಾಧ್ಯವಾದಷ್ಟು ನಾವೂ ಅದನ್ನನುಸರಿಸುವುದುಕ್ತವು ವಲ್ಲವೇ? ಅಲೌಕಿಕ ಬುದ್ಧಿಕುಶಲತೆ, ಅಪ್ರತಿಮ ಶಿವಭಕ್ತಿ, ಸಹೋದರವಾತ್ಸಲ್ಯ, ಸ್ನೇಹಾನುರಾಗಗಳು, ಕೃತಜ್ಞತೆ" ಗಾಂಭೀರ್ಯ, ರಾಜತಂತ್ರಪ್ರವೀಣತೆ, ಸರ್ವತೋಮುಖವಾದ ಪಾಂಡಿತ್ಯ, ದುರಾಚಾರದೂರತ್ವ, ಸ್ವದೇಶಾಭಿಮಾನ, ನಿರ್ಭಯತೆ, ಇವುಗಳ ಜೊತೆಗೆ ತಾಳ್ಮೆ, ನಮ್ರತೆ, ದಯಾದಾಕ್ಷಿಣ್ಯಾದಿಗಳು, ಧೃಡಚಿತ್ತತೆ ಮುಂತಾದ ಸಮಸ್ತ ಸದ್ಗುಣಗಳೂ, ಆ ಮಹಾಪುರುಷರಲ್ಲಿ ಏಕತ್ರ ಸಮ್ಮಿಳಿತವಾಗಿದ್ದುದರಿಂದ "ಗುಣಾಃ ಪೂಜಾಸ್ಥಾನಂ" ಎಂಬ ಆರ್ಯೋಕ್ತಿಯನ್ನನುಸರಿಸುವುದಾದರೆ ಈ ಮಹಾಪುರುಷರು ಪ್ರಪಂಚದ ಸಮಸ್ತ ಜನಾಂಗಗಳ ಗೌರವಾದರಗಳಿಗೂ ಪಾತ್ರರಾಗಲು ಅರ್ಹರಲ್ಲವೇ? ಇಂತೊಪ್ಪುವ ಸದ್ಗುಣ ಗಣಂಗಳಿಂದ ಶೋಭಿಸುವ ಮಹಾಪುರುಷರನ್ನು ನಿಂದಿಸುವವರನ್ನು ಸೂರ್ಯನನ್ನುಗುಳಹೋದ ದಡ್ಡನಿಗೇಕೆ ಹೋಲಿಸಬಾರದು?

# ತೋಂಟದ ಸಿದ್ಧಲಿಂಗೇಶ್ವರರ ಎಡೆಯೂರ ಮಠದಲ್ಲಿರುವ ಶಿಲಾಲಿಪಿ

(ಲೇಖಕಃ— ಶ್ರೀಮನ್ನಿರಂಜನ ಶಿವಾನುಭವ ಚರವರ್ಯ ತೋಂಟದ ಶಿವಯೋಗೀಂದ್ರರು ವಿರಕ್ತಮಠ ಮು॥ ಶಿರೋಳ ಪೋಃ ನರಗುಂದ.)

ಮೈಸೂರಸೀಮೆಯ ಕುಣುಗಲೆ ತಾಲೂಕಪೈಕಿ ಎಡೆಯೂರ ಗ್ರಾಮದಲ್ಲಿರುವ ಶ್ರೀಮನ್ನಿರಂಜನ ಜಗದ್ಗುರು ತೋಂಟದ ಸಿದ್ಧಲಿಂಗೇಶ್ವರ ಮಹಾಸ್ವಾಮಿಯ ಮಠದಲ್ಲಿದ್ದ ಶಿಲಾಲೇಖವು ಕೆಳಗೆ ಕಾಣಿಸಿದ ಪ್ರಕಾರ ಇರುತ್ತದೆ.

"ಕೊಡಗೀ ಹಳ್ಳಿಯ ದೇವರು ತಾವು ಪಡೆದ ಮಠದ ಭೂಮಿಯಲ್ಲಿ ತೋಂಟದ ಸ್ವಾಮಿಗೆ ತಮ್ಮ ಭಕ್ತಿಯಿಂದ ಕಟ್ಟಿಸಿಕೊಟ್ಟಮಠ· ಈ ಮಹಾಸಿದ್ಧೇಶ್ವರನ ಅತಿಶಯವೆಂತೆಂದೊಡೆ

ಶ್ರೀಮತ್ ಸಚ್ಚಿದಾನಂದ ನಿತ್ಯ ಪರಿಪೂರ್ಣವುಳ್ಳ ಅನಾದಿ ಭಕ್ತ ಆ ಭಕ್ತನ ಹೃದಯದಲ್ಲಿ ಜಂಗಮ ಜಂಗಮದ ಮುಕುಟದಲ್ಲಿ ಶೂನ್ಯ ಲಿಂಗದಲ್ಲಿ ಚಿದಂಬರ ಶಿವಶಕ್ತಿ ಪಂಚಶಕ್ತಿ ಪಂಚನಾದ ಪಂಚಬ್ರಹ್ಮ ಈಶ್ವರಾಷ್ಟಕ ಮಹೇಶ್ವರ ಪಂಚವಿಂಶತಿ ರುದ್ರರೇಕಾದಶ ತ್ರಯಹಿರಣ್ಯ ಗರ್ಭ ವಿರಾಟಮೂರ್ತಿ ಇಂತೀ ಎಂಭತ್ತೊಂದು ಮೂರ್ತಿ ಏಕವಾಗಿ ಪ್ಪಾತನೇ ಅನಾದಿಭಕ್ತನು. ಆ ಭಕ್ತನ ಪ್ರಾಣಕಲೆ ಚೈತನ್ಯ ಸ್ವರೂಪ ತೋಂಟದ ಸಿದ್ಧಲಿಂಗೇಶ್ವರನು ಆ ಸಿದ್ಧಲಿಂಗೇಶ್ವರನ ಮೂರ್ತಿ ಕ್ರಮ ವೆಂತೆಂದೊಡೆ.

ಪ್ರಣವವೇ ಶಿರಸ್ಸು ನಮಸ್ಕಾರವೇ ಭುಜ ಶಿಕಾರವೇ ದೇಹ ವ ಯಕಾರವೇ ಪಾದ ಅನಂತಕೋಟಿ ಬ್ರಹ್ಮಾಂಡಗಳೇ ಮುಕುಟ ಸಮಸ್ತ ಲೋಕಾದಿಲೋಕಂಗಳೇ ದೇಹದ ವಳವಳಿಯು. ಆಕಾಶವೇ ಮುಖ ದಶದಿಕ್ಕುಗಳೇ ತೋಳು ಚಂದ್ರಸೂರ್ಯಾದಿಗಳೇ ನಯನ ಪಾತಾಳವೇ ಎದೆ ಮೇಘಂಗಳೇ ಜಟಾಬಂಧ ಆ ಜಟಾಬಂಧದಲ್ಲಿ ಶೂನ್ಯಲಿಂಗ ವೇದ ಪುರಾಣಗಳೇ ಕ್ರಿಯಾ ನಕ್ಷತ್ರಂಗಳೇ ಪುಷ್ಪ ಚಂದ್ರಪ್ರಕಾಶವೇ ವಿಭೂತಿ ಅಷ್ಟಪರ್ವತಂಗಳೇ ರುದ್ರಾಕ್ಷಿ ಸಪ್ತಸಮುದ್ರಂಗಳೇ ಕಮಂಡಲು ಭುವ ನಸೃಷ್ಟಿಯೇ ಕಂಥ ದಿವಾರಾತ್ರಿಗಳೇ ಮಠ ಷಡ್ರುತುಗಳೇ ಷಟ್‌ಸ್ಥಲ ಮಹಾಶೇಷನೇ ಕಟಿಸೂತ್ರ ಪರಿಪೂರ್ಣಜ್ಞಾನವೇ ಪಂಚಮುದ್ರೆ ತ್ರಿಕಾ ಲಜ್ಞಾನವೇ ಮಹದೈಶ್ವರ್ಯ ಮಹಾಮೇರುವೇ ದಂಡ ಸದ್ಗುಣವೇ ಕಪ್ಪರ ಕುಲವೇ ಶಿವಕುಲ ಇಂತಪ್ಪ ಅನಾದಿಜಂಗಮವೇ ಜಗದ್ಧಿತಾರ್ಥವಾಗಿ ಚರಿಸಿದ ಕ್ರಮವೆಂತೆಂದೊಡೆ ಜ್ಞಾನಕ್ರಿಯಾಸ್ವರೂಪನು ಸರ್ವಾಂಗಲಿಂಗ ಷಟ್‌ಸ್ಥಲಜ್ಞಾನಿ ಸರ್ವಾಚಾರಸಂಪನ್ನ ಪಾದೋದಕ ಪ್ರಸಾದ ಪ್ರತಿಷ್ಠಾ ಚಾರ್ಯರು ಅಷ್ಟಾವರಣ ಅಲಂಕಾರಣ ದ್ವೈತಾದ್ವೈತ ತಿಮಿರಮಾರ್ತಾಂ ಡನು ಇಂತಪ್ಪ ಶಿವಯೋಗಿಸಿದ್ಧೇಶ್ವರಂಗೆ ಸಮ್ಯಜ್ಞಾನೋದಯವಾಗಿ ಸಂಸ್ಕಾರವಾಗಿ ದೇಹಮಂಮಾಡಿ ಶರಣುಹೊಕ್ಕ ಶಿಷ್ಯಜನಗಳ ನಾಮ ಪರಿಶ್ರಮವೆಂತೆಂದೊಡೆ ಸೊಪ್ಪೆ ದೇವರು ಉಪ್ಪಿನಹಳ್ಳಿ ಸ್ವಾಮಿದೇವರು ನಂಜೇದೇವರು ಬೋಳಬಸವದೇವರು ಗುಮ್ಮಳಾಪುರದಸಿದ್ಧಲಿಂಗದೇವರು ಘಟ್ಟಣದದೇವರು ರೇವಣಸಿದ್ಧದೇವರು ಶೀಲವಂತದೇವರು ಚಿಟ್ಟಿಗದೇ ವರು ಇಂತಿವರು ಮುಖ್ಯವಾದ ಭಕ್ತಮಾಹೇಶ್ವರರಿಗೆ ಷಟ್‌ಸ್ಥಲಜ್ಞಾನ ಸಮ್ಬಂಧ ಸಮರಸ ಏಕಾಂತಮಂ ಬೋಧಿಸಿ ಮುಕ್ತರಂಮಾಡಿ ಷಟ್

ಸ್ಥಲ ಏಕಾರ್ಥವಾಗಿ ಮಾಡುವ ಕ್ರಿಯೆಗಳೆಲ್ಲ ನಿಷ್ಪತ್ಯಾಗಿ ಎಡೆಯೂರಲ್ಲಿ ತಮಗೆ ಕಟ್ಟಿಸಿದ ಮಠದಲ್ಲಿ ಶಿವಯೋಗಸಮಾಧಿಸನ್ನದ್ಧರಾದರು. ತೋಂಟದ ಸ್ವಾಮಿಯ ಪಾದಪದ್ಮಜರಾದ ದಾನಿವಾಸಿಗ ನಿವಾಸಿಗಳಾದ ಚನ್ನರಾಯ ಒಡೆಯರ ಮಕ್ಕಳು ಲಿಂಗಪ್ಪಒಡೆಯರು ಲಿಂಗಪ್ಪಒಡೆಯರ ಮಕ್ಕಳು ಪಾದೋದಕಪ್ರಸಾದಸಂಪನ್ನರಾದ ಚನ್ನವೀರಪ್ಪಒಡೆಯರ ಸತಿ ಪಾರ್ವತಮ್ಮ ದಂಪತಿಗಳು ತಮ್ಮ ಭಕ್ತಿಯಿಂದ ತೋಂಟದ ಸ್ವಾಮಿಗೆ ಕಲ್ಲುಮಠ ಕಟ್ಟಿಸಬೇಕೆಂದು ಚಿಟ್ಟಿಗದೇವರಿಗೆ ಪದಾರ್ಥಮಂ ನಮಸ್ಕಾರಮಂ ಮಾಡಲಾಗಿ ಭಕ್ತಿಪದಾರ್ಥಮಂ ಕೈಕೊಂಡು ಎಡೆಯೂರಿಗೆ ಬಿಜಯಂಗೊಂಡು ತೋಂಟದ ಸ್ವಾಮಿಗೆ ಕಲ್ಲುಮಠವನ್ನು ಎಂಟು ಜಡೆಯ ಒಗೆಯ ಹಿರಿಯರು ಚಿಟ್ಟಿಗದೇವರು ಕಟ್ಟಿಸಿದರು. ಎಡೆಯೂರಸ್ಥಲದಲ್ಲಿ ಆದ ಕೊಡಗಿಮಾನ್ಯ ನಿತ್ಯಬಂದ ಕಾಣಿಕಾ ಸೀಮೆಯಮೇಲೆ ಬಂದ ನಂದಾದೀಪದ ಕಾಣಿಕಾ ಇಷ್ಟು ಈ ಮಠದ ಹಿರಿಯರು ಪಚ್ಚಕಂಥೆಚನ್ನಮಲ್ಲಿಕಾರ್ಜುನದೇವರು ಎಂಟು ಜಡೆಯ ಬಗೆಯ ಹಿರಿಯರು ಚಿಟ್ಟಿಗದೇವರು ಪಡೆದ ಪುರವರ್ಗ ಉತ್ಸವ ಮುಖದಲ್ಲಿ ಬಂದ ಕಾಣಿಕಾ ತೋಂಟದ ಸ್ವಾಮಿಯ ದಾಸೋಹದ ದ್ರವ್ಯ ಈ ಮಠದಲ್ಲಿ ತೋಂಟದಸ್ವಾಮಿಯ ದಾಸೋಹವನ್ನು ಚಿಟ್ಟಿಗದೇವರು ಕಟ್ಟಿಸಿದ ಮಠದಲ್ಲಿ ಶಿವಒಡೆಯರು ಭಕ್ತರು ಒಪ್ಪಿಸಿ ಸತ್ಪಾತ್ರರಾದರು. ಈ ದಾಸೋಹವನ್ನು ಮಾಡುವದು ತೋಂಟದ ಸ್ವಾಮಿಯ ದಾಸೋಹಕ್ಕೆ ಸಲ್ಲುವದು ಅದಿವರ್ಗೇ ಪಾರಂಪರವಾಗಿ ಸಲ್ಲುವದು. ಸಜ್ಜನಸತ್ಪುರುಷರಾಗಿ ಅನುಭೋಗಿಸುವದು ಶ್ರೀಮನ್ನಿರಂಜನ ಜಗದ್ಗುರು ಪ್ರಭು ತೋಂಟದ ಸಿದ್ಧಲಿಂಗೇಶ್ವರಾಯನಮಃ. ಇದು ಸಟಿ ಅಂದವರಿಗೆ ಶ್ವಾನಸೂಕರಜನ್ಮದಲ್ಲಿ ಹುಟ್ಟುವರೆಂದು ಇದು ಸಿದ್ಧಾಂತವು.

ಈ ಮೇಲ್ಕಂಡ ಲಿಪಿಯ ಅಭಿಪ್ರಾಯದಂತೆಯೇ ಅನಾದಿಭಕ್ತನ ಅಂಗಕ್ಕೆ ಚೇತಸಾರೂಪಿಯಾದ ನಿರಂಜನ ಜಂಗಮದ ಅಸ್ತಿತ್ವವಾದರೂ ವೇದಾಗಮ ಪುರಾಣೋಪನಿಷದ್ಭಾಷ್ಯಾದಿಗಳಲ್ಲಿ ಸಂಸಿದ್ಧವಾಗಿರುತ್ತದಷ್ಟೆ. ಹಾಗೂ ಶ್ರೀ ಮದನಾದಿನಿರಂಜನ ಜಗದ್ಗುರುಪ್ರಭು ತೋಂಟದ ಸ್ವತಂತ್ರ ಸಿದ್ಧೇಶ್ವರನ ಮಹತ್ವಾತಿಶಯದ ಅಸ್ತಿತ್ವವಾದರೂ ಸಿದ್ಧೇಶ್ವರ ಪುರಾಣ ಸಿದ್ಧೇಶ್ವರವಚನ ಮುಂತಾದ ಉದ್ಗ್ರಂಥಗಳಲ್ಲಿ ಸರ್ವಜನಗಳಿಗೂ ದೃಗ್ಗೋಚರವಾಗುವಂತೆ ಇರುತ್ತದೆ.

# ವೀರಶೈವ ಮಠಗಳು ಮತ್ತು ಕಾಯದೆಯಲ್ಲಿ ಅವುಗಳ ಸ್ಥಾನ.

ಲೇಖಕಃ— ಶ್ರೀಯುತ ವಿರಕ್ತಪ್ಪಾ ವಿರುಪಾಕ್ಷಪ್ಪಾ ಮುಧೋಳಕರ
ಬಿ. ಎ. ಎಲ್. ಎಲ್ ಬಿ.

( ಲೇಖಾಂಕ ೨ )

ವೀರಶೈವ ಮಠಗಳ ಉದ್ದೇಶವು ವೀರಶೈವ ಸಮಾಜದಲ್ಲಿ ಧಾರ್ಮಿಕ ಉನ್ನತಿ ಆತ್ಮಿಕ ವಿಕಾಸ ಮತ್ತು ಸಮಾಜದ ಸುಧಾರಣೆ ಇವುಗಳನ್ನು ಜರುಗಿಸುವದೇ ಇರುತ್ತದೆ. ಇವುಗಳ ಅಸ್ತಿತ್ವವು ಸಮಾಜದವರು ಕೊಡುವ ದಾನಗಳು, ಇನಾಮುಗಳು ಸಾರ್ವಜನಿಕ ವರ್ಗಣಿಗಳು, ಭಿಕ್ಷೆ ಇವುಗಳ ಮೇಲೆ ಅವಲಂಬಿಸಿರುತ್ತದೆ. ಮತ್ತು ಇವುಗಳ ಕಾರ್ಯಗಳು ನಡಿಯುವದಕ್ಕೋಸ್ಕರ ಜನರು ದಾನಪತ್ರ ಮೃತ್ಯುಪತ್ರಗಳನ್ನು ಮಾಡುವದುಂಟು. ಜನರು ಮೇಲ್ಕಂಡ ಉದ್ದೇಶಗಳು ಸಫಲವಾಗಬೇಕೆಂದು ಇಚ್ಛಿಸಿ ದೇಣಿಗೆಗಳನ್ನು ಕೊಡುವದರಿಂದ ಈ ದೇಣಿಗೆಗಳಾದರೂ ಸಾರ್ವಜನಿಕ ಸ್ವರೂಪದ (*Public endowments*) ವಿರುತ್ತವೆಂಬ ಸಿದ್ಧಾಂತವು ತಾನಾಗಿಯೇ ನಿಷ್ಪನ್ನವಾಗುತ್ತದೆ.

ಧರ್ಮ ಮತ್ತು ಜ್ಞಾನ ಪ್ರಸಾರಕ್ಕೋಸ್ಕರ, ಮತ್ತು ಮಠಗಳೆಂಬ ಸಂಸ್ಥೆಗಳ ಸ್ವರೂಪವು ಸುಸಂಗತವಾಗಿ ನಡೆಯುವದಕ್ಕೋಸ್ಕರ ದಾನಗಳನ್ನು ಕೊಡುವ ಪದ್ಧತಿಯು ವೀರಶೈವರಲ್ಲಿ ಬಹುಕಾಲದಿಂದ ಇದ್ದದ್ದು ತೋರಿಬರುತ್ತದೆ. ಮತ್ತು ಹೀಗೆ ಕೊಡುವ ದಾನಗಳು ಕಾಯದೆಯಿಂದ ಮಾನ್ಯವಾದವುಗಳೂ ನಿಶ್ಚಿತವಾದವುಗಳೂ ಇರುತ್ತವೆ. ವೀರಶೈವರು ಬಹುತರವಾಗಿ ಒಕ್ಕಲತನ ಮತ್ತು ವ್ಯಾಪಾರಗಳ ಮೇಲೆ ಉಪಜೀವಿಸುವವರಾಗಿರುವರು. ಈ ಉಭಯ ವರ್ಗದವರು ತಮ್ಮ ಹೊಲಗಳಲ್ಲಿ ಆಗುವ ಧಾನ್ಯಾದಿಗಳು ಅಥವಾ ವ್ಯಾಪಾರದಿಂದ ಆಗುವ ಲಾಭಗಳು ಇವುಗಳಲ್ಲಿ ಕೆಲವೊಂದು ಭಾಗವನ್ನು ಮಠಗಳ ಉದ್ದೇಶವು ಸಫಲವಾಗುವ ಕುರಿತು ದಾನಗಳೆಂದು ಮೊದಲು ತೆಗೆದಿಟ್ಟು ಆ ಮೇಲೆ ಉಳಿದದ್ದನ್ನು ತಾವು ಉಪಯೋಗಿಸಿ ಕೊಳ್ಳುವ ರೂಢಿಯು ಅವರಲ್ಲಿ ಇದೆ.

ಅದೇ ಪ್ರಕಾರ ಅನೇಕ ಶುಭಾ ಶುಭ ಕಾರ್ಯಗಳಲ್ಲಿ ಅಂದರೆ ಜನ್ಮಕಾಲ, ಅಥವಾ ಮೃತ್ಯು ಸಮಯಗಳಲ್ಲಿ ಮಠಗಳಿಗೋಸ್ಕರ ಅವರು

ದಾನ ಮಾಡುವದುಂಟು. ಹಾಗೆಯೇ ವ್ಯಾಜ್ಯಗಳನ್ನು ತಮ್ಮ ತಮ್ಮೊಳಗೆ ನಿರ್ಣಯಿಸುವ ಪ್ರಸಂಗಗಳಲ್ಲಿ ಮತ್ತು ಸಾಮಾಜಿಕ ನ್ಯಾಯ ನಿರ್ಣಯಗಳನ್ನು ಮಾಡುವ ಕಾಲದಲ್ಲಿ ಬಹಳ ಸಾರೆ ದಕ್ಷಿಣೆ ಅಥವಾ ಕಾಣಿಕೆ ಎಂದು ಬೇರೆ ತೆಗೆದಿಡುವದುಂಟು. ಅವರು ಹೀಗೆ ತೆಗೆದಿಡುವದರ ಉದ್ದೇಶವು ಮಠಗಳು ಮಾಡುತ್ತಿವ ಸಾಮಾಜಿಕ, ಧಾರ್ಮಿಕ ಕಾರ್ಯಗಳು ಸರಿಯಾಗಿಯೂ ಅಬಾಧಿತವಾಗಿಯೂ ನಡೆಯಬೇಕೆಂತಲೇ ಇರುತ್ತದೆಂಬದು ಸ್ಪಷ್ಟವು.

ಹಾಗೆಯೇ ಸರಕಾರದವರು ವತನದಾರರು ಮತ್ತು ಭಕ್ತರು ಇವರ ಕಡೆಯಿಂದ ಮಠಗಳಿಗೋಸ್ಕರ ಭೂಮಿಗಳು ದೊರೆದ ಉದಾಹರಣೆಗಳು ಹೇರಳವಾಗಿರುತ್ತವೆ. ಅದರಂತೆಯೇ ಶ್ರದ್ಧಾಯುಕ್ತರಾದ ಅಸಂಖ್ಯ ವೀರಶೈವರು ಕೇವಲ ಸ್ವಧರ್ಮ ಪರಿಪಾಲನೆ, ಸ್ವಧರ್ಮ ಪ್ರಸಾರ, ಸ್ವಧರ್ಮ ಪ್ರೇಮ ಇವುಗಳಿಂದ ಪ್ರೇರಿತರಾಗಿ ಮಠಗಳಿಗೆ ತಮ್ಮ ಜಿಂದಿಗೆಗಳನ್ನು ಸಂಪೂರ್ಣವಾಗಿ ಅರ್ಪಣ ಮಾಡುವದುಂಟು. ಕೆಲ ವೀರಶೈವರು ಮಠಗಳಿಗೆ ನಿಯತಕಾಲಿಕ ದೇಣಿಗೆಗಳನ್ನೂ ವರ್ಷಾಶನಗಳನ್ನೂ ಹಾಕಿಕೊಡುವದುಂಟು. ಮಠಾಧಿಕಾರಿಗಳಾದರೂ ಈ ಎಲ್ಲ ದೇಣಿಗಳನ್ನು ವೈಯ್ಯಕ್ತಿಕ ರೀತಿಯಂತೆ ಸ್ವೀಕರಿಸದೆ, ಮಠದ ಪರವಾಗಿಯೇ ಸ್ವಿಕರಿಸುತ್ತಾರೆ. ಎಂದರೆ ಅವುಗಳ ವಹಿವಾಟದಾರ ಅಥವಾ ವ್ಯವಸ್ಥಾಪಕ ಈ ದೃಷ್ಟಿಯಿಂದ ಸ್ವೀಕರಿಸುತ್ತಾರೆ. ಯಾಕಂದರೆ ಧರ್ಮ ದೃಷ್ಟಿಯಿಂದ ಮಠಾಧಿಕಾರಿಗಳು ವ್ಯಕ್ತಿಶಃ ಏನೂ ಸಂಗ್ರಹಿಸಕೂಡದೆಂಬ ನಿಬಂಧನೆಗಳಿರುವಲ್ಲದೆ ನಾವು ಮೇಲೆ ಹೇಳಿದ ಪ್ರಕಾರ ಸಾಂಪ್ರದಾಯವೂ ಕೂಡ ಇರುತ್ತದೆ.

ಮಠಗಳಿಗೆ ಒಬ್ಬ ವ್ಯಕ್ತಿಯು ದಾನ ಕೊಡುವ ಕಾಲದಲ್ಲಿ ಮೇಲ್ಕಂಡ ತನ್ನ ಉದ್ದೇಶಗಳನ್ನು ಸ್ಪಷ್ಟ ಶಬ್ದಗಳಿಂದ ಹೊರಪಡಿಸಿರಲಿಕ್ಕಿಲ್ಲ. ಅಂದರೆ ತಾನು ಕೊಟ್ಟ ದೇಣಿಗೆಯು ಒಂದು ವಿಶಿಷ್ಟ ರೀತಿಯಿಂದಲೇ ಅಥವಾ ಇಂಥದೊಂದು ಕಾರಣದ ಸಲುವಾಗಿಯೇ ಉಪಯೋಗಿಸಬೇಕೆಂದು ಹೇಳಿರಲಿಕ್ಕಿಲ್ಲ. ಆದರೂ ಕೂಡ ಮಠಾಧಿಕಾರಿಯು ಮಠಕ್ಕೆ ದೊರೆತ ದಾನವನ್ನು ಧಾರ್ಮಿಕ ಮತ್ತು ಅಧ್ಯಾತ್ಮಿಕ ಕಾರ್ಯಗಳ ಸಲುವಾಗಿಯೇ ಯೋಗ್ಯರೀತಿಯಿಂದ ವಿನಿಯೋಗಿಸಲು ಬದ್ಧನಾಗಿರುವನು. ಈಗಿನ ಕಾಲ ಮತ್ತು ಪರಿಸ್ಥಿತಿಯಲ್ಲಿ ಮಠಾಧಿಕಾರಿಗಳಲ್ಲಿ ಅಧಾರ್ಮಿಕ ವೃತ್ತಿ, ಅಯೋಗ್ಯ ವರ್ತನೆ ಮತ್ತು ಐಷ ಆರಾಮಿ ಕಾರ್ಯಗಳು ಹೆಚ್ಚುತ್ತಲಿರುವದರಿಂದ ಜನರಲ್ಲಿ ಅವುಗಳ ಬಗ್ಗೆ ಆದಾರಭಾವವು ಕಡಿಮೆಯಾಗಹತ್ತಿದೆ.

ಇದರಿಂದ ಜನರು ಈಗ ಈ ಮಠಗಳಿಗೆ ದೇಣಿಗೆಗಳನ್ನು ಕೊಡುವ ಸಮಯದಲ್ಲಿ ಅವುಗಳನ್ನು ಇಂಥದೊಂದು ವಿಶಿಷ್ಟ ಉದ್ದೇಶಕ್ಕಾಗಿಯೇ ಕೊಟ್ಟಿರುವೆವೆಂದು ತಮ್ಮ ಇಚ್ಛೆಯನ್ನು ವ್ಯಕ್ತ ಪಡಿಸಲು ಹೆಚ್ಚಿಗೆ ಲಕ್ಷ್ಯಕೊಡ ಹತ್ತಿರುತ್ತಾರೆ. ಆದರೆ ಈ ಉದ್ದೇಶಗಳನ್ನು ಹೀಗೆ ಹೊರಪಡಿಸಿ ಕೊಟ್ಟರೂ ಈ ದೇಣಿಗೆಗಳು ಅವರ ಇಚ್ಛಾನುಸಾರವಾಗಿ ಉಪಯೋಗವಾಗದೆ ಹೋಗುವದುಂಟು. ಈ ಸ್ಥಿತಿಯುಂಟಾಗಿರುವದರಿಂದ ವೀರಶೈವ ಸಮಾಜದವರು ಕಾಲಮಾನ ಧೋರಣಕ್ಕನುಸರಿಸಿ ಈ ದೇಣಿಗೆಗಳ ಮೂಲ ಉದ್ದೇಶವು ವಿಫಲಹೊಂದಿದರೂ, ಅದಕ್ಕೆ ತೀರ ನಿಕಟವಾಗಿರುವ ಅಥವಾ ಅದಕ್ಕೆ ಸರಿಸಮಾನವಾಗಿರುವ ಎರಡನೇ ಉದ್ದೇಶಗಳಿಗೋಸ್ಕರ ಅವುಗಳು ವಿನಿಯೋಗವಾಗುವಂತೆ ಏರ್ಪಡಿಸಿಕೊಳ್ಳಲು ಹಕ್ಕುದಾರರಿರುವರು. ಇದಕ್ಕೆ "ಸೈಪ್ರೆಸ್ಸ" ತತ್ವವೆಂಬ ಹೆಸರು. ಆದರೆ ಈ ತತ್ವವನ್ನು ಪ್ರಚಾರದಲ್ಲಿ ತಂದುಕೊಳ್ಳಲು ವೀರಶೈವ ಸಮಾಜದವರು ತಟಸ್ಥ ಭಾವವನ್ನು ಅಂಗೀಕರಿಸುವದೇ ಬಹಳವಿರುತ್ತದೆ.

ಮೇಲ್ಕಂಡ ವಿವೇಚನೆಯಿಂದ ವೀರಶೈವರು ಈ ಮಠಗಳಿಗೆ ಕೊಡುವ ದಾನಗಳ ಉದ್ದೇಶವು ಸಮಾಜದ ಕಲ್ಯಾಣ, ಸ್ವಧರ್ಮ ಜಾಗ್ರತಿ ಇವುಗಳೇ ಇರುತ್ತವೆಂಬುದು ಸ್ಪಷ್ಟವದೆ. ಒಂದು ವೇಳೆ ಈ ಉದ್ದೇಶವು ಸ್ಪಷ್ಟ ಶಬ್ದಗಳಿಂದ ದ್ಯೋತಕನಾಗದಿದ್ದರೂ ಧ್ವನಿತಾರ್ಥವಾಗಿಯಾದರೂ ಈ ದೇಣಿಗೆಗಳಲ್ಲಿ ದ್ಯೋತಕವಾಗಿರುತ್ತದೆ. ಮತ್ತು ಈ ಉದ್ದೇಶವು ನಿಶ್ಚಿತ ಸ್ವರೂಪದ್ದು ಇರುತ್ತದೆ. ವೀರಶೈವ ಮಠವು ಒಂದು ಧಾರ್ಮಿಕ ಸಂಸ್ಥೆಯಾಗಿರುವದರಿಂದ ಅದೊಂದು ಕಾಯದೆಯ ಹಕ್ಕುಳ್ಳ ವ್ಯಕ್ತಿ ( *Juridical person* ) ಎಂದು ನಾವು ನಿರ್ವಿವಾದವಾಗಿ ಭಾವಿಸಬಹುದು. ಮತ್ತು ಈ ವ್ಯಕ್ತಿಯ ಪರವಾಗಿ ದಾನಗಳನ್ನು ಸ್ವೀಕರಿಸುವ ಜಂಗಮನಾವರೂ ಕಾಯದೆಯಿಂದ ಯೋಗ್ಯನಾಗಿರುತ್ತಾನೆ. ಸೂಕ್ಷ್ಮಾಗಮದ ೭ ನೇ ಪಟಲ ೮೫ ನೇ ಶ್ಲೋಕದಲ್ಲಿ "ದತ್ತಂ" ಎಂಬ ಶಬ್ದವಿದ್ದು ಮಠಾಧಿಕಾರೀ ಜಂಗಮನಿಗೆ ದಾನಕೊಟ್ಟಿದ್ದಾದರೆ ಅದು ಸಲ್ಲುತ್ತದೆ ಎಂಬ ಭಾವವನ್ನು ದರ್ಶಿಸುತ್ತದೆ. ಸಿದ್ಧಾಂತ ಶಿಖಾಮಣಿ ೯ ನೇ ಪರಿಚ್ಛೇದದ ದಾನ ಪ್ರಕರಣವೂ ಕೂಡ ಈ ಭಾವವನ್ನೇ ಪುಷ್ಟೀಕರಿಸುತ್ತದೆ.

"ಶಿವಾಯದತ್ತಂ ಕ್ಷೇತ್ರಾದಿ ದಾನಂ ಸಹಜದಾನಂ ಇತ್ಯರ್ಥಃ" ಎಂಬ ಶಬ್ದಗಳು ಇದರಲ್ಲಿ ಇದ್ದು, ಇದೇಬಗೆಯ ಅಭಿಪ್ರಾಯಗಳು

ಮನುವಿನ ದರ್ಮಶಾಸ್ತ್ರದಲ್ಲಾದರೂ ಇರುತ್ತವೆ. ಅದರಲ್ಲಿಯ ೯—೩೨ ನೋಡಿರಿ. ಇದರಲ್ಲಿ ಉಪಾಧ್ಯಾಯನಿಗೆ ಸಂಪತ್ತನ್ನು ದಾನಕೊಡಬೇಕೆಂಬ ವಿಚಾರವು ಹೇಳಲ್ಪಟ್ಟಿರುತ್ತದೆ. ಸರ್. ಎಫ್. ಮ್ಯಾಕ್ನಾಟನ್ ಸಾಹೇಬರ "ಹಿಂದೂ ಲಾ" ಎಂಬ ಗ್ರಂಥದ ೩೩೫ ನೇ ಪುಟದಲ್ಲಿ ಕಾಣಿಸಿದ ವಿಷಯಗಳೂ ಮೇಲ್ಕಂಡ ಭಾವವನ್ನೇ ಪುಷ್ಟೀಕರಿಸುತ್ತವೆ.

ಮಠಾಧಿಕಾರಿಗಳು ತಮ್ಮ ಧಾರ್ಮಿಕ ಮತ್ತು ಅಧ್ಯಾತ್ಮಿಕ ಕಾರ್ಯಗಳಲ್ಲಿ ತತ್ಪರರಾಗಿ ಹಾಗೆ ವರ್ತಿಸುವವರಾಗಬೇಕೆಂತಲೇ ಅವರು ಆ ಸ್ಥಾನಗಳಿಗೆ ಸಮಾಜದಿಂದ ನಿಯೋಜಿಸಲ್ಪಟ್ಟವರಿರುತ್ತಾರೆ. ಮತ್ತು ಈ ಕಾರ್ಯಗಳಲ್ಲಿ ಪ್ರವೃತ್ತರಾಗಬೇಕೆಂಬ ಉದ್ದೇಶವನ್ನು ಹೊಂದಿ ಅವುಗಳ ನಿಯಮಗಳಂತೆ, ಮತ್ತು ಧ್ಯೇಯದಂತೆ ಕಾರ್ಯಮಾಡಲು ಮಠಾಧಿಕಾರಿಗಳೂ ಮುಂದಾಗುವರುಂಟು. ಆದ್ದರಿಂದ ಈ ಮಠಗಳ ವಿಷಯವಾಗಿ ಮಠಾಧಿಕಾರಿಗಳಿಗೆ ವೈಯ್ಯಕ್ತಿಕ ಅಥವಾ ಖಾಸಗೀ ಸಂಬಂಧವು ಇರಲಾರದು. ಆದರೆ ಭಕ್ತರು ತಮ್ಮ ಅನುಕೂಲತೆಯ ಪ್ರಕಾರ ದೇಣಿಗೆಗಳನ್ನು ಕೊಡುತ್ತಿರುವದರಿಂದ ಅವು ಇಂತಿಷ್ಟೇ ದೊರೆಯುವವೆಂದು ನಿಶ್ಚಿತವಾಗಿ ಹೇಳಲಿಕ್ಕೆ ಬರುವದಿಲ್ಲ. ಒಮ್ಮೊಮ್ಮೆ ಮಠದ ಸಾರ್ವಜನಿಕ ಮತ್ತು ಧಾರ್ಮಿಕ ಕಾರ್ಯಗಳನ್ನು ಮಾಡಲಿಕ್ಕೆ ಮಠಾಧಿಕಾರಿಗಳಿಗೆ ಸಾಕಷ್ಟು ಹಣವೂ ದೊರೆಯುವದಿಲ್ಲ. ಈ ಸ್ಥಿತಿಯಲ್ಲಿ ಮಠಾಧಿಕಾರಿಗಳು ಭಿಕ್ಷೆ, ದಕ್ಷಿಣೆ, ಕಾಣಿಕೆ, ಅಥವಾ ದಾನಗಳನ್ನು ಎತ್ತಲಿಕ್ಕೆ ಸಂಚಾರಮಾಡುವ ಪದ್ಧತಿಯು ಇರುತ್ತದೆ. ಇಂಥ ಸಂಚಾರಗಳಲ್ಲಿ ಅವರು ದೊರಕಿಸಿದ ಸುವರ್ಣ, ಧನ ಅಥವಾ ಧಾನ್ಯಗಳನ್ನು ಮಠಾಧಿಕಾರಿಯು ತನ್ನ ಮಠದಲ್ಲಿ ಇದ್ದಕ್ಕಿದ್ದ ಹಾಗೆ ಇಡುವನು. ಅಥವಾ ಅವುಗಳನ್ನು ಮಠಕಟ್ಟಿಸೋಣ ಅಥವಾ ಭೂಮಿಯನ್ನು ಕೊಂಡುಕೊಳ್ಳೋಣ ಹೀಗೆ ಮಾಡಿ ಅವುಗಳ ರೂಪಾಂತರ ಮಾಡುವನು. ಅಥವಾ ಹೀಗೆ ಬಂದ ಹಣವನ್ನು ಬ್ಯಾಂಕಿನಲ್ಲಿಯಾಗಲಿ ಇಲ್ಲವೇ ಸಾವುಕಾರರಲ್ಲಾಗಲಿ ಬಡ್ಡಿಯಿಂದ ಇಡುವನು. ಈ ಎಲ್ಲ ಕಾರ್ಯಗಳನ್ನು ಮಠಾಧಿಕಾರಿಯು ತನ್ನ ಸ್ವಂತ ಹೆಸರಿನಿಂದ ಮಾಡಿದರೂ ಕೂಡ, ಇದು ತನ್ನ ವ್ಯಕ್ತಿಗೋಸ್ಕರ ಇರದೆ, ಮಠಾಧಿಕಾರೀ ಈ ದೃಷ್ಟಿಯಿಂದ ಮಠಕ್ಕೋಸ್ಕರ ಮಾಡಿದ್ದಿರುತ್ತದೆಂಬದು ಸ್ಪಷ್ಟವು. ಈ ಹಣ ಅಥವಾ ಸ್ವಾಸ್ತಿಯು ಸಾರ್ವಜನಿಕ ಸ್ವರೂಪದ್ದು ಇದ್ದು ಅದು ಮಠದ ಆಸ್ತಿಯೇ ಸರಿ.

ಈ ಮಠಗಳು ವೀರಶೈವ ಸಾರ್ವಜನಿಕ, ಧಾರ್ಮಿಕ ಮತ್ತು ಅಧ್ಯಾತ್ಮಿಕ ಕಾರ್ಯಗಳನ್ನು ನಿರ್ವಹಿಸುವದಕ್ಕೋಸ್ಕರ ಇರುತ್ತವೆಂದು ನಾವು ಮೇಲೆ ಹೇಳಿರುವೆವಷ್ಟೇ. ಈ ಉದ್ದೇಶಗಳನ್ನು ಕೊನೆಗಾಣಿಸಲು ಸಮಾಜದವರು ಒಬ್ಬ ಯೋಗ್ಯನಾದ ವ್ಯಕ್ತಿಯನ್ನು ಮಠಾಧಿಕಾರಿ ಅಥವಾ ಮಠಸ್ವಾಮಿಯಾಗಿ ಅಧಿಕಾರಸ್ಥಳದ ಮೇಲೆ ಶಾಸ್ತ್ರಾನುಸಾರ ಅಥವಾ ಸಮಾಜದ ರೂಢಿಗನುಸರಿಸಿ ನೇಮಿಸುವದುಂಟು. ಹೀಗೆ ನೇಮಿಸಲ್ಪಟ್ಟವನು ಮಠಕ್ಕೆ ಬಂದ ಸುವರ್ಣ, ಭೂಮಿ ಮೊದಲಾದ ಆಸ್ತಿಯನ್ನು ತನ್ನ ಸ್ವಂತದ ಸಲುವಾಗಿ ಸ್ವೀಕರಿಸತಕ್ಕಲ್ಲ, ಅಥವಾ ಉಪಯೋಗಿಸತಕ್ಕದ್ದಲ್ಲ. ಅವನು ಮಠದ ಆಸ್ತಿಯಮೇಲೆ ತನ್ನ ಸ್ವಂತದ ಮಾಲಕಿಯ ಹಕ್ಕನ್ನು ಹೇಳಲಿಕ್ಕೆ ಬರಬಾರದೆಂತಲೂ ವೀರಶೈವ ಧರ್ಮ ಗ್ರಂಥಗಳು ಬಹಳ ಎಚ್ಚರಪಟ್ಟಿರುತ್ತವೆ. ಇದು ಸೂಕ್ಷ್ಮಾಗಮದ ಪಟಲ ೭ ನೇದ್ದರಲ್ಲಿಯ ೮೬ ನೇ ಶ್ಲೋಕದಿಂದ ಚನ್ನಾಗಿ ಸ್ಪಷ್ಟವಾಗುತ್ತದೆ.

ಮಠಗಳು ಮಠಾಧಿಕಾರಿಗಳ ಖಾಸಗೀ ಆಸ್ತಿಗಳಲ್ಲೆಂಬ ತತ್ವವನ್ನು ಈಗಿನ ಬ್ರಿಟಿಶ್ ಹೈಕೋರ್ಟುಗಳೂ ಸಹ ಒಪ್ಪಿಕೊಂಡಿರುತ್ತವೆ. ಮಠದ ಸ್ವಾಮಿಯು ಮಾಲಕನು ತನ್ನ ಆಸ್ತಿಯನ್ನು ತನ್ನ ಸಲುವಾಗಿ ಉಪಯೋಗಿಸುವಂತೆಯೇ ಬಾಹ್ಯತಃ ಅದನ್ನು ಉಪಭೋಗಿಸುತ್ತಿರಬಹುದು. ಆದರೂ ಕೂಡ ಆತನ ಆ ಮಠ ಅಥವಾ ಆ ಮಠದ ಆಸ್ತಿಯು ನಿಜವಾದ ಮಾಲಕನು ಆಗಲಾರನು. ಇದು ೪೩ ನೇ ಕಲಕತ್ತಾ ಪುಟ ೭೦೭ ಇದರಲ್ಲಿ ಕಲಕತ್ತೆಯ ಹೈಕೋರ್ಟಿನವರು ಮಾಡಿದ ನಿರ್ಣಯದಲ್ಲಿ ಸ್ಪಷ್ಟವಾಗುತ್ತದೆ. ಮಠಸ್ವಾಮಿಯು ಮಠಸಂಸ್ಥೆಯ ಉದ್ದೇಶಗಳನ್ನು ನಿರ್ವಹಿಸುವದಕ್ಕೋಸ್ಕರ ಒಬ್ಬ ಟ್ರಸ್ಟಿಯಂತೆ ಮಾತ್ರ ಇರುತ್ತಾನೆ. ಮಠಗಳ ಕಾಗದಪತ್ರಗಳಲ್ಲಿ ಮಠಾಧಿಕಾರಿಯ ಹೆಸರು ಮಾತ್ರ ಕಾಣಬಂದರೂ ಕೂಡ ಅವನು ಅವುಗಳ ಮಾಲಕನೆಂದು ಹೇಳಲಿಕ್ಕೆ ಬರಲಾರದು. ಹ್ಯಾಗೆ ಒಬ್ಬ ಅಜ್ಞಾನನ ಪಾಲನಕರ್ತನು, ಅಥವಾ ಹಿಂದೂ ವಿಧವೆಯು ತಾವು ಉಪಭೋಗಿಸುವ ಆಸ್ತಿಗೆ ಮಾಲಕರಲ್ಲವೋ, ಅಥವಾ ಹ್ಯಾಗೆ ಬೇನಾಮೀ ವ್ಯವಹಾರದಲ್ಲಿ ಬೇನಾಮೀದಾರನು ತೋರಿಕೆಯ ಮಾಲಕನು ಇರುತ್ತಾನೋ, ಅಥವಾ ಸಾರ್ವಜನಿಕ ಅಧಿಕಾರಸ್ಥಾನದ ಮೇಲಿನ ಅಧಿಕಾರಿಯು ಅಥವಾ ಅಂಗಡಿಯಮೇಲೆ ನೇಮಿಸಲ್ಪಟ್ಟ ಗುಮಾಸ್ತನು ಅಥವಾ ಏಜಂಟನು ಆಯಾ ವ್ಯವಹಾರಗಳಲ್ಲಿ ಪೂರ್ಣ ಮಾಲ

ಕನಂತೆ ತೋರುತ್ತಾನೋ ಹಾಗೆಯೇ ವೀರಶೈವ ಮಠಾಧಿಕಾರಿಯು ತನ್ನ ಮಠಗಳ ಆಸ್ತಿಯಬಗ್ಗೆ ಇರುತ್ತಾನೆ. ಅವನು ಅವುಗಳ ಪೂರ್ಣ ಕಾಯ ದೇಶೀರ ಮಾಲಕನು ಆಗಲಾರನು.

(ಮುಂದೆ ಸಾಗುವದು.)

---

# ಸತ್ಯದೃಷ್ಟಿ.

(ಬರೆದ:— ಗೆಳೆಯರಗುಂಪಿನ ಮಾಧುರಚನ್ನ ಹಲಸಂಗಿ)

---

## ಸೂತ್ರ.

"ನಿನ್ನ ಆತ್ಮನನ್ನು ಅನುಸರಿಸು, ಮನವನ್ನು ಅನುಸರಿಸಬೇಡ. ಸತ್ಯವನ್ನು ವ್ಯಕ್ತಪಡಿಸುವ ಆತ್ಮನನ್ನು ಬಿಟ್ಟು ಹೊರಮಾಟಕ್ಕೆ ಹಾರುವ ಮನಸ್ಸಿನ ಬೆನ್ನು ಹತ್ತದಿರು. ಹತ್ತಿದರೆ ನಿನ್ನ ಮಹಾಮಾತೆಯು ಪ್ರತ್ಯಕ್ಷವಾದರೂ ಮನವು ಅವಳನ್ನು ಗುರುತಿಸದು."

**ಶ್ರೀ ಅರವಿಂದ್ರಯೋಗಿಗಳು.**

ದಿವ್ಯಸತ್ಯವು ತ್ರಿಕಾಲಾಬಾಧಿತವು. ಬದಲಾಗಬೇಕಾದುದು ಸೃಷ್ಟಿಯಲ್ಲ, ನಮ್ಮ ದೃಷ್ಟಿ. ದೃಷ್ಟಿ ಬದಲಾಗದಿರುವಾಗ ನಮಗೆ ಸೃಷ್ಟಿಯೊಂದು ಅಪ್ರಿಯಕರವಾದ ಅಗ್ನಿಕುಂಡ. ಆದರೆ ಅದೇ ಸೃಷ್ಟಿಯು ನಮ್ಮ ದೃಷ್ಟಿ ಅರಳಿದಾಗ ಮಧುರ ಮಧುಮಯವೆನಿಸುವದು. ಸತ್ಯದ ಅಸ್ತಿತ್ವವು ಹೊಸದಾಗಿ ಹುಟ್ಟಬೇಕಾಗಿರದೆ ನಮ್ಮಲ್ಲಿ ಸತ್ಯದೃಷ್ಟಿ ಮಾತ್ರ ಉದಯಿಸಬೇಕಾಗಿರುವದು. ಈ ದೃಷ್ಟಿಯ ಹುಟ್ಟೇ ಹೊಸಹುಟ್ಟು. ಮಾನವನು ದ್ವಿಜನಾಗದೆ ದೇವನನ್ನು ಕಾಣಲಾರನೆಂಬುದರ ಗುಟ್ಟು ಇದೇ.

ಈಗಿನ ನಮ್ಮ ದೃಷ್ಟಿಯೆಂದರೆ ನಾವು ಮುಂಚಿನಿಂದ ಹೌದೆಂದು ಒಪ್ಪಿಕೊಳ್ಳುತ್ತಬಂದ ಗ್ರಹಿಕೆಗಳದೊಂದು ಬಣ್ಣಬಳಿದ ಕನ್ನಡಕ. ನಮ್ಮ ಈ ಕನ್ನಡಕದ ಬಣ್ಣದೊಡನೆ ನಾವು ಹೊಂದಿದ ತಾದಾತ್ಮ್ಯವು ನಮಗೀಗ ಸ್ವಭಾವಜಾತವಾಗಿ ಬಿಟ್ಟಿರುವದರಿಂದ ನೈಜ ಸತ್ಯವು ಅಸಹಜವೆನಿಸಿ ಸಾಮಯಿಕ ಸತ್ಯವೇ ನೈಸರ್ಗಿಕವಾಗಿ ತೋರುತ್ತಿದೆ. ಈ ತಿರುವು ಮುರುವು ಸರಿಪಡುವುದೇ ಸತ್ಯದೃಷ್ಟಿ, ಸಹಜದೃಷ್ಟಿ, ಸಮನ್ವಯದೃಷ್ಟಿ, ಆತ್ಮದೃಷ್ಟಿ.

ಸತ್ಯದೃಷ್ಟಿಯ ಮುಂದೆಯೇ ದಿವ್ಯದೃಷ್ಟಿ ನಮ್ಮ ಜಡದೃಷ್ಟಿಯು ದಿವ್ಯದೃಷ್ಟಿಯಾಗುವ ಮುಂಚೆ ಹೊಂದುವ ಪ್ರಥಮ ರೂಪಾಂತರವೇ ಸತ್ಯದೃಷ್ಟಿ, ಶುದ್ಧದೃಷ್ಟಿ, ಪ್ರಾತಿಭಚಕ್ಷು. ಚಿತ್ತಶುದ್ಧಿಗೆ ಸಾಕ್ಷಿಯಾಗಿ, ಬುದ್ಧಿ ಪರಿಪಾಕಕ್ಕೆ ನಿದರ್ಶನರೂಪವಾಗಿ ಜನಿಸುವುದೇ ಈ ಸತ್ಯದೃಷ್ಟಿ. ಸತ್ಯ ದೃಷ್ಟಿ ಗಂಭೀರವಾಗಿರುವಷ್ಟೇ ಸೂಕ್ಷ್ಮವೂ ಆಗಿದೆಯಾದರೂ ಸೂಕ್ಷ್ಮ ದೃಷ್ಟಿಯೆಂದು ಇದು ವರೆಗೆ ನಾವು ಕೇಳುತ್ತ ಬಂದದ್ದು ಇದಲ್ಲ. ದೈಹಿಕ ವ್ಯಾಯಾಮಕ್ಕೆ ಪ್ರತಿಫಲವಾಗಿ ಬರುವ ದೇಹದಾರ್ಢ್ಯದಂತೆ ಸೂಕ್ಷ್ಮ ದೃಷ್ಟಿಯು ಪ್ರಾಣಶಕ್ತಿಯ ನಿರೋಧದಿಂದಲೂ ಮನಶ್ಶಕ್ತಿಯ ಏಕಾಗ್ರ ತೆಯಿಂದಲೂ ಮಾನಸವ್ಯಾಯಾಮಕ್ಕೆ ಫಲರೂಪವಾಗಿ ಒಡಮೂಡು ವದು. ಇದು ಸತ್ಯದೃಷ್ಟಿಯ ಅನಂತರದಲ್ಲಿ ತಾನಾಗಿಬರುವದು. ಆದರೆ ಅದು ಮಾನಸ ವ್ಯಾಯಾಮದಿಂದ ಮೊದಲೇ ಬಂದರೂ ಸತ್ಯದೃಷ್ಟಿಯುಂ ಟಾಗುವ ವರೆಗೆ ಅದಕ್ಕೆ ಸಾರ್ಥಕತೆಯಿಲ್ಲ. ಸೂಕ್ಷ್ಮದೃಷ್ಟಿಯು ಚಾಕ್ಷುಷ ಶಕ್ತಿಯ ಸೂಕ್ಷ್ಮರೂಪವು. ಆದರೆ ಸತ್ಯದೃಷ್ಟಿಯ ಪ್ರಾತಿಭಶಕ್ತಿಯ ಪ್ರಥಮ ರೂಪವು. ದಿವ್ಯದೃಷ್ಟಿಯು ದೇವನ ದೃಷ್ಟಿಯು, ಮಾನವನ ಮಾನವತ ನದ ಹಿಂದೆ ಮರೆಯಲ್ಲಿ ಮೆರೆಯುವ ತೃತೀಯ ನೇತ್ರವಿದು. ಜಡದೃಷ್ಟಿಗೂ ದಿವ್ಯದೃಷ್ಟಿಗೂ ನಡುವಿನ ಗಡಿನಾಡಿನ ಸಂಧಿಪ್ರಕಾಶವೇ ಸತ್ಯದೃಷ್ಟಿಯು. ಅಪರಾಪ್ರಕೃತಿಯು ಸಡಿಲಾಗಿ ಪರಾಪ್ರಕೃತಿಯು ಮೊಳಕೆಯೊತ್ತುವುದರ ಕುರುಹೇ ಸತ್ಯದೃಷ್ಟಿ, ಶುದ್ಧದೃಷ್ಟಿ. ಇದೇ ದ್ವಿಜಾವಸ್ಥೆ.

ನಮ್ಮ ನಿತ್ಯ ವ್ಯವಹಾರದ ಸಂಸ್ಕಾರವೇ ನಮ್ಮ ಸದ್ಯದ ದೃಷ್ಟಿ, ಜಡದೃಷ್ಟಿ. ನಮ್ಮೊಡನೆ ಸಂಬಂಧಬರುವ ವಿಷಯುಗಳ ವ್ಯವಹಾರವೇ ನಮ್ಮ ದೃಷ್ಟಿಕೋನ ವೇರ್ಪಡುವದಕ್ಕೆ ಕಾರಣವು. ಈ ವರೆಗೆ ನಾವು ಬಳಿಸಿ ರುವ ವಸ್ತು ವಿಷಯುಗಳೆಲ್ಲವೂ ಮರ್ಯಾದಿತವಾಗಿರುವದರಿಂದ ತದನು ಸಾರಿಯಾದ ನಮ್ಮ ದೃಷ್ಟಿಯೂ ಮರ್ಯಾದಿತವಾಗಿಯೇ ಇರುವುದು ಸಹಜ. ಈ ಮರ್ಯಾದೆಯಿಂದ ದಾಟಿ ಪಾರಾಗುವದೇ ದೃಷ್ಟಿಶುದ್ಧಿ. ಇದೇ ಜ್ಞಾನಸಾಧನದ ಪ್ರಥಮಸಿದ್ಧಿ. ಇದೇ ಪೂರ್ಣಸಿದ್ಧಿಯ ಪ್ರಥಮಾ ವತಾರ. ಇಲ್ಲಿಗೇ ಉತ್ತರ ಸಾಧನದ ಆರಂಭ. ಉತ್ತರಸಾಧಕನ ಕುರುಹೇ ಸತ್ಯದೃಷ್ಟಿ, ಶುದ್ಧದೃಷ್ಟಿ, ನಿರ್ಮಾಯಿಕ ದೃಷ್ಟಿ.

ನಾವು ನಿತ್ಯವೂ ವ್ಯವಹರಿಸುವ ವಸ್ತು ವಿಷಯುಗಳೆಲ್ಲವೂ ತ್ರಿಲಕ್ಷಣ ಯುಕ್ತವಾದ ಒಂದು ಮರ್ಯಾದೆಯಿಂದ ಬದ್ಧವಾಗಿವೆ. ನಾವು ವ್ಯವ

ಹರಿಸುವ ವಿಷಯುಗಳಿಗೆಲ್ಲ ದಿಕ್ಕಾಲ ಪಾತ್ರ ಮರ್ಯಾದೆ ಇಲ್ಲದೆಯಿಲ್ಲ. ಯಾವದೊಂದು ವಸ್ತುವನ್ನು ನೋಡಿದರೂ ಅದು ಒಂದಾನೊಂದು ಕಾಲ ದಲ್ಲಿ ಒಂದಾನೊಂದು ಪರಿಣಾಮಯುಕ್ತವಾಗಿ ಒಂದಾನೊಂದು ವ್ಯಕ್ತಿ ಯಿಂದಾಗಲಿ ಶಕ್ತಿಯಿಂದಾಗಲಿ ನಿರ್ಮಿತವಾದದ್ದು ಕಂಡುಬರುವದು. ನಮಗೆ ಗೊತ್ತಿರುವ ಇಂಥ ಆದ್ಯಂತವಂತವಾದ ವಸ್ತು ಮಾತ್ರವೆಲ್ಲವೂ ಈ ತ್ರಿಮರ್ಯಾದೆಯಿಂದ ಯುಕ್ತವಾಗಿಯೇ ಇರುವದರಿಂದ ನಮಗೆ ಯಾವ ವಸ್ತುವನ್ನು ಕುರಿತು ಆಲೋಚಿಸಬೇಕಾದರೂ ಆ ವಸ್ತುವಿನಲ್ಲಿ ಈ ತ್ರಿಲ ಕ್ಷಣಗಳನ್ನು ಹುಡುಕ ಹೊರಡುವೆವು. ಇದೇ ನಮ್ಮ ಈಗಿನ ಜಡದೃಷ್ಟಿ, ಅಥವಾ ತರ್ಕಶಕ್ತಿ. ಇದೇ ಜಡಬುದ್ಧಿ, ಇದರ ಮುಕ್ತತೆಯೇ ಶುದ್ಧಿ. ಅದೇ ನಮಗೆ ಬೇಕಾದ ಸಿದ್ಧಿ.

ಅಪರಾ ದೃಷ್ಟಿಯು ಪರಾತ್ಪರ ಸತ್ಯವನ್ನು ತನ್ನ ಈ ಜಡವಾದ ಮರ್ಯಾದಿತಮಾನದಿಂದ ಅಳೆಯ ಹೊರಟು, ಅಳತೆಹತ್ತದಂತಾಗಿ "ಅಸಾಧ್ಯ" "ಅಶಕ್ಯ" "ಅಸತ್ಯ" ಗಳ ದಾಳಿಯನ್ನೆಬ್ಬಿಸುವದು. ಆಗ ವಿಶ್ವನಿಧಿಯ ಪರಸ್ಪರ ವಿರೋಧ ದರ್ಶಕ ಅಸಂಖ್ಯ ಸತ್ಯ ಮುಖ ಗಳ ಭೀಷಣ ರೌದ್ರ ಸ್ವರೂಪವು ಮಾನವನನ್ನು ದಂಗುಬಡಿಸುತ್ತದೆ. ಇದೇ ಸಾಧನ ಸಮರ. ಈ ದಿಙ್ಮೂಢತೆಯಿಂದ ವೈದಾಳುವ ನಾಸ್ತಿಕ್ಯ ವು ಸಾಧಕನ ಜಿಜ್ಞಾಸೆಯ ಪ್ರಖರತೆಯ ಕುರುಹು. ಇಂಥ ಪ್ರಖರ ನಾಸ್ತಿಕ್ಯ ಬಾರದವನು ಇನ್ನೂ ಸಾಧಕನೇ ಅಲ್ಲ. ಜಿಜ್ಞಾಸೆಯು ಸಾಧ ನದ ಆರಂಭ, ನೈರಾಶ್ಯವು ಅದರ ಮಧ್ಯ.

ವಿಶ್ವದ ಪ್ರತಿವಸ್ತುವು ಕ್ರಮಪರಿಣತಿಯ ತಪಸ್ಸಿನಲ್ಲಿ ತಪ್ತವಾಗಿಯೇ ತನ್ನ ಸ್ವರೂಪಕ್ಕೆ ಬಂದಿರುವಾಗ ನಮ್ಮ ಸ್ವರೂಪವು ನಮಗೆ ಒಡಮೂ ಡುವುದಕ್ಕೂ ಈ ಕ್ರಮವಿಕಾಸದ ತಪಸ್ಸಿನ ತಾಪವು ತಪ್ಪಿದ್ದಲ್ಲವೆಂಬುದು ಸ್ಪಷ್ಟ. ಇಂದಿನ ತಪಸ್ಸು ನಾಳಿನ ಸಿದ್ಧಿ. ಇಂದಿನ ತಾಪ ನಾಳಿನ ಶಾಂತಿ. ಇಂದಿನ ಮೊಗ್ಗೆ ನಾಳಿನ ಹೂ. ಇಂದಿನ ಹೊಯ್ದಾಟ ನಾಳಿನ ಸ್ಥೈರ್ಯ.

ಸಾಧನಪ್ರವೃತ್ತಿಯು ಸಿದ್ಧಿಯು ಉನ್ಮೇಷ. ಉನ್ಮೇಷಮಾತ್ರದಲ್ಲಿ ದ್ದದ್ದು ವ್ಯಕ್ತರೂಪಕ್ಕೆ ಬಂದದ್ದೇ ಸಿದ್ಧಿ. ಇದೇ ತುದಿತಳಗಳ ಐಕ್ಯ. ಹಿಗ್ಗು ತಗ್ಗುಗಳ ಐಕ್ಯ. ಸಬಲ ನಿರ್ಬಲತೆಗಳ ಸಖ್ಯ. ಇಂದಿನ ಆಭಾಸ ನಾಳಿನ ನಿಚ್ಚಳ. ಇದು ನಿಶ್ಚಿತ.

ನಾಸ್ತಿಕತೆಯ ನೈರಾಶ್ಯದಲ್ಲಿ ನಮ್ಮ ಅಧೋದೃಷ್ಟಿಯು ಊರ್ಧ್ವಮು ಖವಾಗುವದು. ಆ ವರೆಗೆ ಲಕ್ಷಿಸದ ವಸ್ತುವಿಶೇಷಗಳು ನಮ್ಮ ಲಕ್ಷ್ಯ ಪಥಕ್ಕೆ ಆಗ ಬರಹತ್ತುವವು. ನಮ್ಮ ಚಿತ್ತಕ್ಕೆ ಅವುಗಳ ಸಂಪರ್ಕವು ಬೆಳೆದಂತೆ ನಮ್ಮ ಬುದ್ಧಿಗೆ ಅವುಗಳ ವಿಶೇಷ ಲಕ್ಷಣಗಳ ಕಡೆಗೆ ಲಕ್ಷ್ಯ ವೆಳೆಯಹತ್ತುವದು. ಯದ್ಯದ್ವಿಭೂತಿಮತ್ಸತ್ವವಮ್ ಮಮತೇಜೋಂಶಸಂ ಭವಂ ।

ಆಕಾಶಕ್ಕೆ ಅಂತವಿಲ್ಲ; ಕಾಲಕ್ಕೆ ಆದಿಯಿಲ್ಲ. ಆದಿಯಿಲ್ಲದ ಅಂತ ವಿಲ್ಲದ ಅಕ್ಷಯ ಅನಾದ್ಯನಂತ ನಿರಾಲಂಬ ಸ್ವರೂಪವು ಅಜಾತವಾಗಿ ರಲೇಬೇಕು. ದಿಕ್ಕಾಲಪಾತ್ರ ಮರ್ಯಾದಿಗಳಿಂದ ಅತೀತವಾದ ಈ ವಸ್ತು ವಿಶೇಷದ ದರ್ಶನವು ನಮ್ಮ ಬುದ್ಧಿಯಲ್ಲಿ ಅಪೂರ್ವವಾದೊಂದು ಅಸಾ ಧಾರಣ ಗ್ರಹಿಕೆಯನ್ನುಂಟುಮಾಡದಿರದು. ಇದೇ ಅಪರೋಕ್ಷ ಶ್ರದ್ಧೆ. ಅನಂತ ಅಜಾತಸ್ವಯಂಭೂ ಪರಾತ್ಪರ ಸತ್ಯದ ಅಸ್ತಿತ್ವವು ಈ ಶುದ್ಧ ಸತ್ಯದೃಷ್ಟಿಗೆ ಸಹಜ ಸಂಭವನೀಯವೆನಿಸುವದು. ಪರಸ್ಪರ ವಿರೋಧ ವಾಗಿ ಕಾಣುವ ಬಹು ಸತ್ಯಗಳ ಏಕತಾನತೆಯು ಈ ದೃಷ್ಟಿಗೆ ಸಹಜ ವಾಗಿ ಹೊಳೆಯುವದು. ಅವಿಭಕ್ತಂ ವಿಭಕ್ತೇಷು.

ತ್ರಿಲಕ್ಷಣಾತೀತವಾದ ಪರವಸ್ತುವಿನ ಈ ಚತುರ್ಥ ಲಕ್ಷಣದ ಅಪ ರೋಕ್ಷ ದರ್ಶನವೇ ಸಿದ್ಧಿಯ ಆರಂಭ. ಪರವಸ್ತುವಿನ ಅಸ್ತಿತ್ವವು ಒಪ್ಪಿ ಗೆಗೆ ಬಂದರೆ ಅದರ ಮುಂದಿನ ಅವಸ್ಥೆಯು ಅದಕ್ಕೆ ಒಮ್ಮಿಲ್ಲದೊಮ್ಮೆ ಕಟ್ಟಿಟ್ಟದ್ದೇ. ಅಸ್ತಿತ್ಯೇವೋಪಲಬ್ಧಸ್ಯ ತತ್ವಭಾವಃ ಪ್ರಸೀದತಿ. ಸಂಶಯ ಪಿಶಾಚದ ಉಚ್ಚಾಟನವು ಸಾಧಕನ ಸಿದ್ಧಿಗೆ ನಿಶ್ಚಿತತೆಯನ್ನುಂಟು ಮಾಡದೇ? ಪೂರ್ವಪಶ್ಚಿಮದಂಥ ವೈಷಮ್ಯವು ಸಾಮ್ಯಕ್ಕೆ ಬಂದಾಗ ಸಿದ್ಧಿಯ ಭರವಸವಿಲ್ಲದೆ ಹೋದೀತೇ? ಆಗ ಅಡ್ಡದಾರಿಗೆಳೆಯುವ ಅಡ್ಡ ಬುದ್ಧಿಯು ಮಾರ್ಪಟ್ಟು ಪರಸತ್ಯವನ್ನು ಗುರುತಿಸುವದು. ಸದಸತ್ತತ್ಪರಂ ಯತ್. ನಸತ್ತನ್ನಾಸದುಚ್ಯತೆ; ಸರ್ವಾಶ್ಚರ್ಯಮಯಂ ದೇವಂ; ಅಚಿಂ ತ್ಯರೂಪಂ ।

ಇದರ ಮುಂದಿನದೇ ಉತ್ತರಸಾಧನೆ. ಪೂರ್ವಸಾಧನದಲ್ಲಿ ಜೀವವು ಅನಾಥವಾಗಿದ್ದುಕೊಂಡು ಆಶ್ರಯವನ್ನರಸುತ್ತ ಅಲೆದಲೆದು ನೆಲೆಗಾಣದೆ ಬಳಲಿ ಬೆಂಡಾಗಿ ಅಧೈರ್ಯ ಅಸ್ಥೈರ್ಯಗಳಲ್ಲಿ ಮುಳು ಮುಳುಗೆದ್ದು ಕೊನೆಗೆ

ವಸ್ತು ದೃಷ್ಟಿಯನ್ನು ದಾಟಿ ತತ್ತ್ವ ದೃಷ್ಟಿಗೆ ಬಂದಬಳಿಕ ಸತ್ಯದ ಅಸ್ತಿತ್ವವು ಪ್ರಮಾಣಿತವಾಗುವದರಿಂದ ಶಾಶ್ವತವಾದ ಆಶ್ರಯವು ಅದಕ್ಕೆ ಕೈಸಾರಿದ್ದು ನಿಶ್ಚಯವಾಗುತ್ತದೆ. ನಿಜವಾದ ಸಮರ್ಪಣದ ಆರಂಭವು ಇಲ್ಲಿಯೇ ಆಗುವದು. ಬಳಿಕ ಸಂಚಿತ ಕರ್ಮದ ಮೂಲಕ ಕಾಲದ ಅಂತರಾಯವೊಂದುಳಿದು ಇನ್ನಾವ ಬಂಧನವೂ ತನಗಿಲ್ಲವೆಂದೆನಿಸಿ ಒಂದು ನಿಶ್ಚಿತ ಕಾಲದಲ್ಲಿನ್ನು ತನ್ನ ಪರಿಪೂರ್ಣತೆಯು ಕಟ್ಟಿಟ್ಟದ್ದೇ ಎಂಬ ದೃಢವಿಶ್ವಾಸವು ಬೆಳೆಯುವದರಿಂದ ಜೀವವು ಆ ಕಾಲ ಪ್ರಮಾಣವನ್ನು ಪ್ರತೀಕ್ಷಿಸುತ್ತ ನಿಲ್ಲುವದು. ಆಗಲೂ ಈ ಆತ್ಮಶೈಶವದ ಕಾಲದಲ್ಲಿ ಮಾನಸಕ್ಷೇತ್ರದೊಳಗೆ ಏರಿಳಿತದ ಹಗಲಿರುಳುಗಳು ಬರುವವಾದರೂ ಮುಂಚಿನ ಅಧೈರ್ಯ ಅಸ್ಥೈರ್ಯಗಳಿಗೆ ಅಷ್ಟು ಇಂಬಿಲ್ಲ. ತನ್ನ ಶ್ರದ್ಧೆಯ ಕಾರಣಗಳನ್ನೇ ನೆನೆನೆನೆಸಿಕೊಳ್ಳುತ್ತ ಶ್ರದ್ಧಾವಸ್ಥಿತಚೇತಸನಾಗಿ ಇರುಳನ್ನು ನುಗಿಸುವನು. ತಚ್ಚ ಸಂಸ್ಮೃತ್ಯ ಸಂಸ್ಮೃತ್ಯ ಭಿದ್ಯತೇ ಹೃದಯ ಗ್ರಂಥಿಶ್ಛಿದ್ಯಂತೇ ಸರ್ವ ಸಂಶಯಾಃ।

# ಅಷ್ಟಾವರಣದ ಬಗ್ಗೆ ಪದ್ಯಗಳು.

(ಲೇಖಕಃ— ಅನ್ನದಾನಯ್ಯ ರೇವಣಸಿದ್ಧಯ್ಯ ಹಿರೇಮಠ
ಹೆಡ್‍ಮಾಸ್ತರ ಚಿಕ್ಕಮಾಗಿ)

॥ಕಂದ॥ ಗುರುವಿನ ಕೃಪಾಕಟಾಕ್ಷಂ।
ಸರಸಾವಗೆ ದೊರೆವುದವನ ಕಷ್ಟಗಳಳಿಗುಂ॥
ಹರಿವುದು ಭವಬಂಧನತಾಂ।
ದೊರೆವುದು ವರಮೋಕ್ಷ ಸುಖವು ಗುರುಸೇವೆಯೊಳುಂ ॥೧॥

ಪ್ರತಿನಿತ್ಯ ಲಿಂಗಪೂಜಿಪ।
ನತಿಭಕ್ತಿಯೊಳವನೆ ವೀರಶೈವಂ ಜಗದೊಳ್॥
ಸತಿತಾನು ಲಿಂಗಪತಿಯುಂ।
ಬತಿಮತಿಯುತನಂತ್ಯದಲ್ಲಿ ಲಿಂಗದೆಬೆರೆವಂ ॥೨॥

ಜಂಗಮನ ಪೂಜೆ ಸೇವೆಯೊ।
ಳಂಗವನುರೆ ಭಕ್ತಿಯಿಂದ ಸವಿಸುವ ಮನುಜಂ॥
ಭಂಗಿತನಾಗನು ಜಗದೊಳು।
ಮಂಗಲಕರನಾದ ಮುಪ್ಪುರಾರಿಯು ಬೆರೆವಂ ॥೩॥

ಗುರುಲಿಂಗ ಜಂಗಮದಪರ।
ತರ ಪಾದೋದಕವು ಶುದ್ಧತೆಯನುಂ ಕೊಡುಗುಂ॥
ವರತೇಜತೆ ಕೊಡುತಿಹುದದು॥
ನರದೇಹವ ಕಳೆದು ನಿತ್ಯಸುಖ ಕೊಡುತಿಹುದೈ ॥೪॥

ಪ್ರಾಣದುಳಿವುಪ್ರಸಾದದಿ।
ಜಾಣನೆಭುಂಜಿಸುವನ್ನವೀಶಪ್ರಸಾದಂ॥
ಕಾಣುತೆ ಗುರುಪ್ರಸಾದವ।
ಮಾಣದೆಸೇವಿಸಲು ಪೋಗುವದು ಭವರೋಗಂ ॥೫॥

ಭಸಿತದೆ ಭಾಗ್ಯವು ದೊರೆವುದು।
ಭಸಿತದೆ ಭೂತಾದಿಕಾಟ ಬಿಟ್ಟೋಡುವದೈ॥
ಭಸಿತದೆ ಶುದ್ಧತೆ ಬರ್ಪುದು।
ಭಸಿತವ ನನವರತ ಧರಿಪನರನೇಧನ್ಯಂ ॥೬॥

ಶಿವ ಪ್ರೀತಿಕರ ಭಸಿತವು ।
ಅವನಿಯೊಳಿಷ್ಟಾರ್ಥ ಮೊದಗಿಸುವದೀ ಭಸಿತಂ ॥
ಭವಬಾಧೆಕಳೆದು ಭಸಿತವು ।
ಜವನವರನ್ನೋಡಿಸುತ್ತ ಮೋಕ್ಷವ ಕೊಡುಗುಂ ॥೭॥

ರುದ್ರಾಕ್ಷಿ ಮಹಿಮೆ ಯುಗಣಿತ ।
ರುದ್ರಂ ತ್ರಿಪುರವನು ನಾಶಿಪಾಸಮಯದೊಳುಂ ॥
ಭದ್ರಕರಮೆನಿಸಿ ಪುಟ್ಟಿದ ॥
ರುದ್ರಾಕ್ಷಿಯನೊಂದನಾದರನುದಿನ ಧರಿಸೈ ॥೮॥

ಜ್ವರಪೀಡೆಯನೀಶಾಕ್ಷಿಯು ।
ಪರಿಹರಿಸುತ ಮನಕೆ ಶಾಂತಿಸುಖಮಂ ಕೊಡುಗುಂ ॥
ಧರಿಸಲುಬೇಡನುಶುನಕಗೆ ।
ವರಮೋಕ್ಷವಪೊಂದಿತಿದು ಶಿವಾಕ್ಷಿಯುಮಹಿಮಂ ॥೯॥

ಗುರುವರ ತಿಳಿಸಿದ ಮಂತ್ರವ ।
ನರತಾನೆಡೆವಿಡದೆ ಜಪಿಸೆಗುಪಿತದೊಳದರಿಂ ॥
ವರಫಲದೊರೆವುದು ಸತ್ಯವು ।
ಧರೆಯೊಳ್ಯೋಗಲ್ಕೆ ಮಂತ್ರಮಹಿಮೆಯ ದಳಿಗುಂ ॥೧೦॥

ಮಂತ್ರಲಕ್ಷನೆಂಬನುತಾ ।
ಮಂತ್ರದ ಮಹಿಮೆಯೊಳು ಪುಷ್ಪಕವನೇರುತ್ತಂ ॥
ಮಂತ್ರಮಯನೊಡನೆಬಿಡದಾ ।
ಮಂತ್ರವಜಪಿಸುತ್ತೆ ರಜತಗಿರಿಯನುಸಾರ್ದಂ ॥೧೧॥

ಶಿವಸ್ತುತಿ: — ಕಂ॥ ಹರನಂ ಶಂಕರನಂಪುರ ।
ಹರನಂ ವರವೀರಭದ್ರ ಪಿತನಂ ಯಮಸಂ ॥
ಹರನಂ ಹರಿಸುಕುಮಾರನ ।
ಹರನಂ ಶಿತಿಕಂಠನಂ ಸದಾಜಾನಿಪೆನಾಂ ॥೧೨॥



# ಭಾರತೀಯ ತತ್ತ್ವಶಾಸ್ತ್ರ ಸಂಗ್ರಹ.

# Out lines of Indian Philosophy.

(ಲೇಖಕಃ— ಶಿವಸುತ.)

---

ಮೇಲ್ಕಂಡ ಶಿರೋನಾಮೆಯುಳ್ಳ ಉದ್ಗ್ರಂಥವು ಕನ್ನಡದಲ್ಲಿ ಮೈಸೂರು ಯುನಿವರ್ಸಿಟಿಯವರಿಂದ ಪ್ರಕಟಿತವಾಗಿದ್ದು ವಾಚಕರ ಹಸ್ತಗತವಾಗಿರಬಹುದು. ಗ್ರಂಥಕರ್ತರು ಮೈಸೂರು ಮಹಾರಾಜಾ ಕಾಲೇಜಿನಲ್ಲಿ ತತ್ವಶಾಸ್ತ್ರಬೋಧಕರಾಗಿರುವ ವಿದ್ವಾನ್ ರಾಘುವೇಂದ್ರಾಚಾರ್ಯ ಎಂ. ಎ ಇವರು. ಗ್ರಂಥದ ಆದಿಭಾಗದಲ್ಲಿ ಶ್ರೀಮಾನ್ ವಿ. ಸುಬ್ರಹ್ಮಣ್ಯ ಅಯ್ಯರವರ ಮುನ್ನುಡಿಯೂ ಮತ್ತು ಈ ಗ್ರಂಥದ ಬಗ್ಗೆ ಅನೇಕ ವಿದ್ವನ್ಮಣಿಗಳು ಪಟ್ಟ ಸದಭಿಪ್ರಾಯಗಳೂ ಗ್ರಂಥದ ಪ್ರಾಶಸ್ತ್ಯವನ್ನು ವ್ಯಕ್ತಗೊಳಿಸುತ್ತವೆ. ಗ್ರಂಥಕರ್ತರು ಚಾರ್ವಾಕ, ಬೌದ್ಧ, ಜೈನ, ನ್ಯಾಯ ವೈಶೇಷಿಕ, ಸಾಂಖ್ಯ, ಯೋಗದರ್ಶನ, ಪೂರ್ವ ಮೀಮಾಂಸಾ, ಉತ್ತರ ಮೀಮಾಂಸಾ ಮುಂತಾದ ಭಾರತೀಯ ತತ್ವಶಾಸ್ತ್ರಗಳನ್ನು ವಿಹಂಗಮ ದೃಷ್ಟಿಯಿಂದ ವಿವರಿಸಿರುವುದಲ್ಲದೆ ಪ್ರತಿಯೊಂದು ತತ್ವದ ಹೆಗ್ಗುರುತುಗಳನ್ನು ಸಾಧಕ ಬಾಧಕ ವಾದಗಳಿಂದ ಚರ್ಚಿಸುತ್ತ ಅಲ್ಲಲ್ಲಿ ತಮ್ಮ ಸ್ವಂತ ಅಭಿಪ್ರಾಯವನ್ನು ಸಹ ಸೂಚಿಸುತ್ತ ಬಂದಿರುತ್ತಾರೆ. ಶ್ರೀ ಶಂಕರಾಚಾರ್ಯ, ಶ್ರೀ ಮಧ್ವಾಚಾರ್ಯ, ಶ್ರೀ ರಾಮಾನುಜಾಚಾರ್ಯ ಇವರ ಸಿದ್ಧಾಂತಗಳನ್ನು ವಿವರಿಸುತ್ತ ಏತತ್ಕೃತ ಭಾಷ್ಯಗಳ ಬಗ್ಗೆ ವಿಮರ್ಶನೆಯನ್ನು ಬರೆದಿರುತ್ತಾರೆ. ಈ ಮೂವರನ್ನು ಬಿಟ್ಟರೆ ಬಾಕಿ ಭಾಷ್ಯಕಾರರೆಂದರೆ ಭಾಸ್ಕರಾಚಾರ್ಯರನ್ನು ಮಾತ್ರ ನಮೂದಿಸಿರುತ್ತಾರೆ. ಗ್ರಂಥವು ಲೇಖಕರ ವಿದ್ವತ್ಪ್ರೌಢಿಮೆಯನ್ನು ಸರ್ವತೋ ಮುಖವಾಗಿ ವ್ಯಕ್ತಗೊಳಿಸುತ್ತದೆ. ಶೈಲಿಯಾದರೂ ಬಹು ಅಚ್ಚುಕಟ್ಟಾಗಿದೆ. ವಿಷಯ ವಿವೇಚನೆಯೂ ಬಹು ಸಮರ್ಪಕವಾಗಿದೆ. ಕನ್ನಡದಲ್ಲಿ ಇಂಥ ಗ್ರಂಥಗಳನ್ನು ಬರೆದಿರುವವರು ಬಹು ವಿರಳ. ಆದಕಾರಣ ಲೇಖಕರು ಕರ್ನಾಟಕ ವಾಙ್ಮಯಕ್ಕೆ ಒಂದು ದೊಡ್ಡ ಉಪಕಾರವನ್ನೇ ಮಾಡಿರುತ್ತಾರೆಂದು ನಿಸ್ಸಂದೇಹವಾಗಿ ಹೇಳಬಹುದು.

ಈ ಗ್ರಂಥಕ್ಕೆ ಮೈಸೂರು ಯುನಿವರ್ಸಿಟಿಯವರು ರೂ. ೫೦೦ ಬಹುಮಾನವನ್ನು ಕೊಟ್ಟಿರುವದಲ್ಲದೆ " ಈ ಗ್ರಂಥವನ್ನು ಮೈಸೂರು ಯುನಿವ

ರ್ಸಿಟಿಯಿಂದ ಪ್ರಸಿದ್ಧವಾದಂತೆ ಪರಿಗಣಿಸಿ ಇದಕ್ಕೆ ಒಂದು ಮಹತ್ವನ್ನುಂಟು ಮಾಡಿದರು" ಎಂದು ಗ್ರಂಥ ಪೀಠಿಕೆಯಲ್ಲಿ ಲೇಖಕರು ಬರೆದಿರುತ್ತಾರೆ. ನಿಜ. ಯೂನಿವರ್ಸಿಟಿಯವರು ಯಾವುದಾದರೊಂದು ಗ್ರಂಥವನ್ನು ಪ್ರಸಿದ್ಧಗೊಳಿಸಿದರೆ ಸದರಿ ಗ್ರಂಥದಲ್ಲಿರುವ ಅಭಿಪ್ರಾಯಗಳ ಜವಾಬ್ದಾರಿಕೆಯನ್ನು ಹೊತ್ತಂತೆ ಸರಿ. ಈ ಗ್ರಂಥಕ್ಕೆ ಇಷ್ಟು ಮಹತ್ವವಿರುವದರಿಂದ ಈ ಗ್ರಂಥದಲ್ಲಿರುವ ಒಂದು ಕೊರತೆಯ ಬಗ್ಗೆ ಈ ಲೇಖನದ ಮೂಲಕ ಸದರಿ ಗ್ರಂಥಕರ್ತರಿಗೆ ಸೂಚಿಸುವದೇ ಈ ಚಿಕ್ಕ ಲೇಖನದ ಮುಖ್ಯೋದ್ದೇಶವು.

ಆ ಕೊರತೆಯೇನಂದರೆ:— "ಭಾರತೀಯ ತತ್ತ್ವಶಾಸ್ತ್ರಗಳೆಲ್ಲವೂ ಸಂಗ್ರಹಿಸಲ್ಪಟ್ಟಿರುವ ಈ ದೊಡ್ಡ ಗ್ರಂಥದಲ್ಲಿ ಒಂದೆಡೆಯಲ್ಲಾದರೂ ವೀರಶೈವ ಸಿದ್ಧಾಂತದ ಹೆಸರು ಸಹ ಎತ್ತಲ್ಪಟ್ಟಿಲ್ಲ. ಅದೇನು ಕಾರಣವೋ ಏನೋ. ಹಿಂದೂ ಧರ್ಮದ ಬಗ್ಗೆ ಆಂಗ್ಲೇಯ ಮತ್ತು ತದಿತರ ಭಾಷೆಗಳಲ್ಲಿ ಅನೇಕಾನೇಕ ಗ್ರಂಥಗಳಿದ್ದರೂ ಅವುಗಳಲ್ಲಿ ವೀರಶೈವ ಧರ್ಮದ ಪ್ರತಿಪಾದನೆಯೇ ಇರುವುದಿಲ್ಲ. ಅಪ್ಪಿತಪ್ಪಿ ಯಾರಾದರೊಬ್ಬರು ಈ ಧರ್ಮದ ಬಗ್ಗೆ ಅಲ್ಪಸ್ವಲ್ಪ ಬರೆಯಹತ್ತಿದರೆ ಅದರ ಮೂಲ ತತ್ತ್ವವನ್ನರಿತುಕೊಳ್ಳದೆ ವಿಕೃತ ಸ್ವರೂಪದಲ್ಲಿ ಚಿತ್ರಿಸಿ ಬಿಡುವರು. ಕರ್ನಾಟಕವು ವೀರಶೈವ ಪ್ರಜಾಸಂಖ್ಯೆಯು ಒಂದು ಮುಖ್ಯ ಜನಾಂಗವಾಗಿ ಪರಿಗಣಿಸಲ್ಪಟ್ಟಿರುವ ದೇಶವು. ಹೀಗಿದ್ದು ಮೈಸೂರು ಸೀಮೆಯವರಿಂದ ಬರೆಯಲ್ಪಟ್ಟು ಮೈಸೂರು ಯೂನಿವರ್ಸಿಟಿಯವರ ಆಶ್ರಯದಲ್ಲಿ ಪ್ರಸಿದ್ಧಿಸಲ್ಪಟ್ಟು ಕನ್ನಡಿಗರಿಗಾಗಿ ಪ್ರಚಾರಮಾಡಲ್ಪಟ್ಟಿರುವ ಈ "ಭಾರತೀಯ ತತ್ತ್ವಸಾರ ಸಂಗ್ರಹ" ದಲ್ಲಿ ವೀರಶೈವ ಸಿದ್ಧಾಂತದ ಮತ್ತು ವೀರಶೈವ ಆಚಾರ್ಯರ ಮತ್ತು ಶ್ರೀ ಬಸವೇಶ್ವರನ ವಿಷಯವೇ ಇಲ್ಲವೆಂದರೆ ಆಶ್ಚರ್ಯಕರವಲ್ಲವೇ?

ಗ್ರಂಥಕರ್ತರು ಆಗಮಸಿದ್ಧಾಂತದ ಬಗ್ಗೆ ಸ್ವಲ್ಪಮಟ್ಟಿಗೆ ಬರೆಯುತ್ತ ಸ್ಪಂದ ಪ್ರತ್ಯಭಿಜ್ಞಾ ದರ್ಶನಗಳ ವಿಷಯವಾಗಿ ವಿವೇಚನೆಯನ್ನು ಮಾಡಿರುವರು. ಆ ಸಂಧರ್ಭದಲ್ಲಾದರೂ ಇವರು ವೀರಶೈವ ಧರ್ಮದ ವಿಷಯವಾಗಿ ಎತ್ತಿಕೊಳ್ಳಬಹುದಾಗಿದ್ದಿತು. ಕಾಶ್ಮೀರ ಪ್ರಾಂತದಲ್ಲಿ ಉಗಮವಾದ ಈ ದರ್ಶನಗಳು ಕಾಲಾನುಗತವಾಗಿ ಉತ್ತರ ಹಿಂದೂಸ್ಥಾನವನ್ನೆಲ್ಲ ಆಕ್ರಮಿಸಿ ವಿಂಧ್ಯಾದ್ರಿಯನ್ನು ದಾಟಿ ವೀರಶೈವ ಧರ್ಮೋದ್ದೀಪನಕ್ಕೆ

ಕಾರಣವಾದನೆಂದು ಆಗಮಾಂತದ ಮೇಲೆ ಅನೇಕ ಗ್ರಂಥಗಳನ್ನು ಬರೆದು ಪ್ರಸಿದ್ಧರಾಗಿರುವ ಶ್ರೀ ರಮಣಶಾಸ್ತ್ರಿ ಪಿ. ಹೆಚ್. ಡಿ. ಯವರು ಅಭಿಪ್ರಾಯಪಟ್ಟಿರುತ್ತಾರೆ. *The stream of Pratyabhigna and Spanda flowed south and became the parent of the Virasaiva system that in its turn grew in fluential and spread in the Deccan etc.* ಈ ಗ್ರಂಥವು ಒಂದು ಜವಾಬ್ದಾರಿಕೆಯ ವಿಶ್ವವಿದ್ಯಾಲಯದಿಂದ ಪ್ರಕಟಿಸಲ್ಪಟ್ಟಿರುವುದರಿಂದ ಈ ಕೊರತೆಯನ್ನು ತೋರಿಸಿಕೊಡುವುದರಲ್ಲಿ ಬಂದಿತಾಗಲಿ ವ್ಯಕ್ತಿಶಃ ಗ್ರಂಥಕರ್ತರನ್ನು ಈ ವಿಷಯವನ್ನು ಏತಕ್ಕೆ ಬಿಟ್ಟಿರಿ ಎಂದು ಕೇಳುವ ಹಕ್ಕು ನಮಗಿರುವುದಿಲ್ಲ.

ಆದರೆ ಗ್ರಂಥಕರ್ತರು ಪ್ರತಿಪಾದಿಸಿರುವ ವಿಷಯಗಳಲ್ಲಿ ಕೆಲವು ನ್ಯೂನತೆಗಳಿವೆ. ಸುಪ್ರಸಿದ್ಧರೂ ಪ್ರಥಮಭಾಷ್ಯಕಾರರೂ ಆದ ಶ್ರೀ ನೀಲಕಂಠ ಶಿವಾಚಾರ್ಯರ ವಿಷಯವಾಗಿ ಗ್ರಂಥಕರ್ತರು ಈ ರೀತಿ ಬರೆದಿರುತ್ತಾರೆ. "೧೪ ನೆಯ ಶತಮಾನದಲ್ಲಿ ನೀಲಕಂಠನೆಂಬಾತನು ಬ್ರಹ್ಮಸೂತ್ರಗಳಿಗೆ ಶೈವಪರವಾದ ವ್ಯಾಖ್ಯಾನವನ್ನು ಬರೆಯುವದರ ಮೂಲಕ ವೇದ ಮತ್ತು ಆಗಮಗಳ ಪ್ರಮೇಯಗಳಿಗೆ ವಿರೋಧವಿಲ್ಲವೆಂದು ನಿರೂಪಿಸುವನು. ಈತನು ಅದ್ವೈತವನ್ನು ತಿರಸ್ಕರಿಸಿರುವನು. ಶಿವನೇ ಸರ್ವೋತ್ತಮನೆಂದೂ ಅಂಬಾ ಎಂಬಾಕೆಯು ಆತನ ಪತ್ನಿಯೆಂದೂ, ಚೇತನಾಚೇತನಾತ್ಮಕವಾದ ಜಗತ್ತು ಆತನ ಶರೀರವೆಂದೂ ಈತನ ಅಭಿಪ್ರಾಯವು." ಇಷ್ಟೇನೆ ನೀಲಕಂಠ ಶಿವಾಚಾರ್ಯರ ಅಭಿಪ್ರಾಯವು? ಇವರು ಪ್ರತಿಪಾದಿಸಿದ ತತ್ತ್ವವು? "ಶೈವಸಿದ್ಧಾಂತ" ದ ಮೇಲೆ ಅನೇಕ ಆಧಾರ ಗ್ರಂಥಗಳನ್ನು ಬರೆದಿರುವ ಶ್ರೀ ನಲ್ಲಸ್ವಾಮಿ ಪಿಳ್ಳೆಯೆಂಬ ವಿದ್ವಾಂಸರು ನೀಲಕಂಠ ಭಾಷ್ಯದ ಪ್ರಶಸ್ತ್ಯವನ್ನು ಈ ರೀತಿ ಕೊಂಡಾಡಿರುವರು.

Sree Nilakantha Bhashyam on the Brahma sutras is the earliest Commentary now extant and as such it is entitled to the great weight and will be found to be the most accurate and reliable in terpreter of the Vedanta Sutras and sree Nilakantha is the accepted authority by the Southern Saiva School. (ಈಗದೊರಕಿರುವ ಭಾಷ್ಯಗಳಲ್ಲೆಲ್ಲಾ ಶ್ರೀ ನೀಲಕಂಠ ಭಾಷ್ಯವು ಅತಿ ಪ್ರಾಚೀನವಾದುದು. ಆದಕಾರಣ ಅದು

ಒಳ್ಳೇ ಪ್ರಾಮುಖ್ಯತೆಗೆ ಅರ್ಹವಾಗಿರುತ್ತದೆ. ವೇದಾಂತ ಸೂತ್ರಗಳಿಂದ ಅದು ಸರಿಯಾದ ಮತ್ತು ಆಧಾರ ಭೂತವಾದ ವಿವರಣೆಯಾಗಿರುತ್ತದೆ. ದಾಕ್ಷಿಣಾತ್ಯ ಶೈವಧರ್ಮಕ್ಕೆ ಅದು ಆಧಾರ ಭೂತವಾಗಿ ಗಣಿಸಲ್ಪಟ್ಟಿದೆ." ಇತ್ಯಾದಿ. ಇದಲ್ಲದೆ ಶ್ರೀ ಕ. ವಿ. ಲಕ್ಷ್ಮಣರಾವು ಎಂ. ಎ. ಇವರು ತಮ್ಮ "ಹಿಂದೂ ದೇಶ ಕಥಾಸಂಗ್ರಹದ" ಹಿಂದೂ ಮಹಾಯುಗದಲ್ಲಿ ಶಂಕರ, ರಾಮಾನುಜ, ಮಧ್ವ ಭಾಷ್ಯಗಳಿಗೆ ಪೂರ್ವವೇ ನೀಲಕಂಠ ಶಿವಾಚಾರ್ಯರು ನೀಲಕಂಠ ಭಾಷ್ಯವನ್ನು ರಚಿಸಿದ್ದರೆಂದು ಅಭಿಪ್ರಾಯಪಟ್ಟಿರುತ್ತಾರೆ. ಹೀಗಿದ್ದು ವಿದ್ವಾನ್ ರಾಘುವೇಂದ್ರಾಚಾರ್ಯರು ಶ್ರೀ ನೀಕಂಠ ಶಿವಾಚಾರ್ಯರ ಕಾಲವನ್ನು ೧೪ ನೆಯ ಶತಮಾನವಾಗಿ ಹೇಗೆ ನಿರ್ಣಯಿಸಿದರೋ ತಿಳಿಯದು.

"ಇಂಡಿಯನ್ ರಿವಿಯೂ" ೧೯೦೫ ನೇ ಸಂ. ರದ ಮೇ ಅಂಕದಲ್ಲಿ ಓರ್ವ ಲೇಖಕರು ಸುಪ್ರಸಿದ್ಧ ಭಾಷ್ಯಕಾರರ ವಿಷಯವಾಗಿ ಬರೆಯುತ್ತಾ ಅದರಲ್ಲಿ ಮುಖ್ಯರಾದ ೫ ಜನ ಆಚಾರ್ಯರಲ್ಲಿ ಶ್ರೀಕರ ಭಾಷ್ಯದ ಕರ್ತರಾದ ಶ್ರೀಪತಿಪಂಡಿತರಿಗೆ ಒಳ್ಳೇ ಪ್ರಾಮುಖ್ಯತೆಯನ್ನು ಕೊಟ್ಟಿರುವದಲ್ಲದೆ ಅವರ ಕಾಲವು ೧೧ನೇ ಶತಮಾನವಾಗಿ ಗಣಿಸಿರುತ್ತಾರೆ. ಹೀಗೆಯೇ ವೀರಶೈವ ಧರ್ಮಪರವಾಗಿ ಅನೇಕ ಮಹಾ ವಿಭೂತಿಗಳು ಭಾಷ್ಯಗಳನ್ನು ರಚಿಸಿರುವರು. ವಿಶಿಷ್ಟಾದ್ವೈತಮತಬೋಧಕವಾದ ಅನಿರ್ವಚನೀಯಾನುಪಪತ್ತಿ ಮುಂತಾದ ಯುಕ್ತಿಗಳನ್ನು ದ್ವೈತಮತಪ್ರತಿಪಾದಕವಾದ "ತಸ್ಯತ್ವಮಸಿ" ಮುಂತಾದ ವ್ಯಾಖ್ಯಾನಗಳನ್ನು ಶ್ರೀ ಮಲ್ಲಿಕಾರ್ಜುನ ಪಂಡಿತಾರಾಧ್ಯರು ತಮ್ಮ "ಶಿವತತ್ವಸಾರ" ದಲ್ಲಿ ಉಲ್ಲೇಖಿಸಿದ್ದು ಈ ವಿಷಯವಾಗಿ ಶ್ರೀ ಕೆ. ವಿ. ಲಕ್ಷಣರಾಯರು ಈ ರೀತಿ ಬರೆದಿರುತ್ತಾರೆ. "ಮಲ್ಲಿಕಾರ್ಜುನ ಪಂಡಿತಾರಾಧ್ಯರು ೧೨ನೇ ಶತಾಬ್ದದವರು ಮಧ್ವರಾಯರು ೧೩ನೇ ಶತಾಬ್ದದವರು. ಆದ ಕಾರಣ "ತತ್ವಮಸಿವಾಕ್ಯಕ್ಕೆ "ತಸ್ಯತ್ವಮಸಿ" ಎಂಬುವ ಅರ್ಥವನ್ನು ಮಾಡುವುದು ಮಧ್ವರಾಯರು ಪಂಡಿತಾರಾಧ್ಯರಿಂದಲೋ ಅವರ ಮತಾನುಯಾಯಿಗಳಿಂದಲೋ ಗ್ರಹಿಸಿರಬಹುದು."

ಇಷ್ಟೆಲ್ಲಾ ಬರೆಯುವದರ ಉದ್ದೇಶವೇನಂದರೆ— ವೀರಶೈವ ಧರ್ಮದ ನಿರೂಪಣೆಯಿಲ್ಲದೇ "ಭಾರತೀಯ ತತ್ವಶಾಸ್ತ್ರ ಸಂಗ್ರಹವು"

ಸಂಪೂರ್ಣ ಕೃತಿಯೆಂದೆನಿಸಿಕೊಳ್ಳಲಾರದು. ಭಾಷ್ಯಕಾರರೆಂದರೆ ಆಚಾರ್ಯಪ್ರಿಯರು ಮಾತ್ರವೇ ಅಲ್ಲ. ಇನ್ನು ಧಾರ್ಮಿಕ ವಿಪ್ಲವವನ್ನೆಬ್ಬಿಸಿ ನೂತನ ಯುಗವನ್ನೇ ಸ್ಥಾಪಿಸಿದ ಶ್ರೀ ಬಸವಾದಿ ಪ್ರಮಥರ ಹೆಸರನ್ನೆತ್ತದೇ ಇರುವದು ಹಿಂದೂ ತತ್ವಶಾಸ್ತ್ರಗಳನ್ನು ಪ್ರತಿಪಾದಿಸುವ ಯಾವ ಗ್ರಂಥದಲ್ಲಾದರೂ ಅದರಲ್ಲಿ ವಿಶೇಷವಾಗಿ ಕನ್ನಡಗ್ರಂಥದಲ್ಲಿ ಒಂದು ದೊಡ್ಡ ದೋಷವೇ ಸರಿ. ಮೈಸೂರ ವಿಶ್ವವಿದ್ಯಾಲಯದವರೂ ಗ್ರಂಥ ಕರ್ತರಾದ ಪಂಡಿತ ಮಹಾಶಯರೂ ಈ ವಿಷಯವನ್ನು ಲಕ್ಷಕ್ಕೆ ತರದೇ ಇರಲಾರರೆಂದು ಈ ಲೇಖಕನ ಆಶಯವು.



ಸುತ್ತ ಕೋಟಿ ಕಟ್ಟಿ, ಆದರ ಒಳಗೆ ಟೀಪೂಸುಲ್ತಾನರ ಕಡೆ ಪವುಜು ಕಿಲ್ಲೇದಾರ ಸಹ ಇದ್ದರು. ದೊರೆಗಳು ಆ ಕೋಟೆಗೆ ಪಿರಂಗಿಯಿಂದ ಗುಂಡು ಹೊಡೆಯುವಾಗ್ಗೆ ಆ ಮೂರು ದೇವಸ್ಥಾನಕ್ಕೂ ಗುರ್ತಿನ ಬಗ್ಗೆ ಮೂರು ಗುಂಡು ಹೊಡೆದಲ್ಲಿ, ಆ ದೇವಸ್ಥಾನಗಳ ಮೇಗಣ ತಾಮ್ರದ ತಗಡು ಕತ್ತರಿಸಿ ಹೋದ್ದರಿಂದ, ಆ ಕತ್ತರಿಸಿ ಹೋದ ಜಾಗಕ್ಕೆ ಬೆಳ್ಳಿ ತಗಡು ಹತ್ತಿಸಿ ಇರುವಂತಾದ್ದು [ಹಾಜರು] × ಇದೆ. ಆ ಕೋಟೆ ಯಲ್ಲು ಇದ್ದ ಆಯುಧ ಮದ್ದು ಗುಂಡು ಪಿರಂಗಿ ಮುಂತಾದ್ದು ನಾಲ್ಕು ನಾಡು ಅರಮನೆಗೆ ಸಾಗಿಸಿ, ಆ ಬಳಿಕ ತುಳುವನಾಡು ಸೀಮೆ ಸಾಧಿ ಸುವ ಬಗ್ಗೆ ಕೊಡಗು ಮಂದಿಯನ್ನು ಹೊಂಬಾಳೆ ನಾಯಕನ ಸಂಗಡ ಕೂಡಿಸಿ, ಮೆಣಸಿನ ಗಟ್ಟದ ಮಾರ್ಗವಾಗಿ ಕಳುಹಿಸಿದಲ್ಲಿ, ಹೊಂಬಾಳೆ ನಾಯಕನು ಟೀಪೂಸುಲ್ತಾನರ ಪವುಜಿನ ಸಂಗಡ ಲಡಾಯಿಮಾಡಿ, ಅಮರಸುಳ್ಯದ ಸರಹದ್ದಿನ ಆಚೆ ಕೊಡೆಯಾಲದ ಈಚೆಗೆ ನಡುಮಧ್ಯ ಇರುವಂತಾ ಸೀಮೆಯನ್ನು ಕಟ್ಟಿಕೊಂಡು, ಮೊಗರ್ನಾಡು ಹೊಳೆಬಳಿಯ ಒಡ್ಡು ಕಟ್ಟಿ, ಕೆಲವು ಮಂದಿಯನ್ನು ಠಾಣ್ಯ ಯಿಟ್ಟು, ಆ ವಿವರಕ್ಕೆ ರಾಜ ರಿಗೆ ಬಿನ್ನಹವತ್ತಲೆ ಬರಕೊಂಡಲ್ಲಿ— "ಈಗ ಹೊಸದಾಗಿ ಕಟ್ಟಿರುವ ಸೀಮೆ ಅವಲನ್ನು ನಿನಗೆ ಮೊಕರೂರು ಮಾಡಿ ಇದೆ. ಕೊಡಗು ಮಂದಿ ಯಲ್ಲು ಅಲ್ಲಲ್ಲಿ ಠಾಣ್ಯಕ್ಕೆ ಬೇಕಾದ ಮಂದಿ ಇಟ್ಟುಕೊಂಡು, ಉಳಿಕೆ ಮಂದಿಯನ್ನು ಹಜೂರಿಗೆ ಕಳುಹಿಸುವದು"— ಎಂಬದಾಗಿ ನಿರೂಪ ಬರೆಸಿ ಕಳುಹಿಸಿದ್ದರಿಂದ, ಅದೇ ಮೇರೆಗೆ ಬಂದೋಬಸ್ತುಮಾಡಿ, ಉಳಿಕೆ ಮಂದಿಯನ್ನು ಕಲಿಸಂದ ೪೮೯೩ ನೆ ಸಾಧಾರಣ ಸಂವತ್ಸರದ ಚೈತ್ರ ಮಾಸದಲ್ಲಿ ಕಳುಹಿಸಿಕೊಟ್ಟನು.

ಆ ಬಳಿಕ ಮಂಡೆಪ್ಪನ ಅಪ್ಪಯ್ಯ ನಗರಹಳ್ಳಿ ಪುಟ್ಟಯ್ಯ ಗವು ಡಗೆ ಸಹ ಅಪ್ಪಣೆ ಕೊಟ್ಟದ್ದು:— "ಮಹಾದೇವನ ಕಟಾಕ್ಷದಿಂದ ಮಡಿ ಕೇರಿ ಕೋಟೆಯು ವಿನಾ ನಮ್ಮ ರಾಜ್ಯ ಯಾವತ್ತೂ ನಮ್ಮ ಕೈವಶ ವಾಯಿತು. ಇದಲ್ಲದೆ ತುಳುವ ರಾಜ್ಯದ ಸೀಮೆಯನ್ನು ಹೊಸದಾಗಿ ಸಾಧಿಸಿದೆವು. ಮಡಕೇರಿ ಕೋಟೆಯು ನಮ್ಮ ಸಂಸ್ಥಾನದ ಜಾಗವಿದೆ. ಅಲ್ಲಿ [ಜಾಫರಲ್ಲಿ] * ಬೇಗು ಕಿಲ್ಲೇದಾರನು ಪವುಜು ಸಮೇತ ಇದ್ದಾನೆ.

× ಬ ಗುರುತು ಹಾಜರು

* ಬ ಜಾಫರಕಲ್ಲಿ

ನೀವು ಮಂದಿ ತೆಗೆದುಕೊಂಡು ಹೋಗಿ, ಮಡಿಕೇರಿ ಕೋಟೆಗೆ ರಸ್ತೆ ಬರುವಂತಾ [ಪಕ್ಕ] = ಮಾರ್ಗಕ್ಕೆಲ್ಲ ಮಂದಿ ಇಟ್ಟು, ಮಾರ್ಗ ಕಟ್ಟಿ, ಉಳಿಕೆ ಮಂದಿ ಯಾಪತ್ತೂ ತೆಗೆದುಕೊಂಡು ಹೋಗಿ ಟೀಪೂಸುಲ್ತಾನರ ಸೀಮೆ ಸಾಧಿಸುವುದೆ"ಂತ ಅಪ್ಪಣೆ ಕೊಟ್ಟು ಕಳುಹಿಸಿದಲ್ಲಿ, ಅದೇ ಅಪ್ಪಣೆ ಪ್ರಕಾರ ಮಂದಿ ತೆಗೆದುಕೊಂಡು ಹೋಗಿ, ಮಡಿಕೇರಿ ಕೋಟೆಗೆ ರಸ್ತೆ ಬರುವಂತ [ಪಕ್ಕ] = ಮಾರ್ಗಕ್ಕೆಲ್ಲ ಮಂದಿ ಇಟ್ಟು ಬಂದೋಬಸ್ತು ಮಾಡಿ, ಟೀಪೂಸುಲ್ತಾನರ [ಸೀಮೆ] ± ಅರಕಲಗೋಡು, ಕೊಣನೂರು ಸೀಮೆ ಲೂಟಿ ಮಾಡುತ್ತ ಇದ್ದಲ್ಲಿ, ಈ ಎರಡು ತಾಲೂಕಿನ ರೈತರು ಲಾಚಾರಾಗಿ ಬಂದು— "ನಾವು ರೈತರು ಇದ್ದೇವೆ. ನಮಗೆ ದುಃಖ ಕೊಡಬೇಡ. ನಾವು ಟೀಪೂ ಸುಲ್ತಾನರಿಗೆ ಒಂದು ವರಹ ತೆತ್ತರೆ ನಿಮಗೆ ಒಂದು ರೂಪಾಯಿ ತೆತ್ತೇವು. ಈ ಮೇರೆ ನಮ್ಮ ಎರಡು ತಾಲೂಕಿನಿಂದ ಟೀಪೂಸುಲ್ತಾನರಿಗೆ ಎಷ್ಟು ವರಹ ಕೊಡುತ್ತ ಇದ್ದೇವೋ ಅಷ್ಟು ರೂಪಾಯಿ ನಿಮ್ಮ ಸರಕಾರಕ್ಕೆ ತೆತ್ತು ಕೊಟ್ಟೇವು"— ಎಂಬದಾಗಿ ಎರಡು ತಾಲೂಕಿನ ರೈತರೂ ಒಡಂಬಟ್ಟು ಅದೇಮೇರೆ ನಿಗದಿ ಮಾಡಿದ್ದರಿಂದ, ಆ ತಾಲೂಕಿನಲ್ಲಿ ದವುಡು ಮಾಡುವಂತಾದ್ದು ನಿಲ್ಲಿಸಿ, ಆ ಮಂಡೆಪ್ಪನ ಅಪ್ಪಯ್ಯ, ನಗರ(ಹ)ಳ್ಳಿ ಪುಟ್ಟಯ್ಯ ಗೌಡ ಸಹ ಮಂದಿ ತೆಗೆದುಕೊಂಡು, ಐಗೂರು ಸೀಮೆಗೆ ಹೋಗಿ, ಅಲ್ಲಿ ಠಾಣ್ಯ ಇದ್ದ ಟೀಪೂಸುಲ್ತಾನರ ಕಡೆ ಜನರನ್ನು ಹೊಡೆದು ಓಡಿಸಿ ಬಿಟ್ಟು, ಮಂಜರಾಬಾದು ತಾಲೂಕಿನ ಕೆಲವು ಸೀಮೆಯನ್ನು ಕಟ್ಟಿಕೊಂಡು, ಅದರ ಸಮೀಪದ ಅರೆಕೆರೆಯಲ್ಲು ಒಡ್ಡು ಕಟ್ಟಿ, ಠಾಣ್ಯ ಇಟ್ಟು [ಆ] § ಮಂದಿಗೆ ಸರದಾರನಾಗಿ ಈ ನಗರಹಳ್ಳಿ ಪುಟ್ಟೇ ಗೌಡನು ಇದ್ದ(ನು). ಮಂಡೆಪ್ಪನ ಅಪ್ಪಯ್ಯನು ಆ ಸೀಮೆಯನ್ನು ವಿಚಾರಿಸಿಕೊಂಡು ಬಂದೋಬಸ್ತು ಮಾಡಿಕೊಂಡು ಇದ್ದನು. ಈ ಮೇರೆ ಇರುವಲ್ಲಿ, ಟೀಪೂ ಸುಲ್ತಾನರು ಪವುಜು ಸಮೇತ ರಾಮರಾಜರ [ಕೊಚ್ಚಿ] † ಕೋಟೆಯನ್ನು ತೆಗೆದುಕೊಳ್ಳಬೇಕೆಂಬುದಾಗಿ ಅದರ ಸಮೀಪದಲ್ಲಿ ಇಳಿದುಕೊಂಡು, ಮೂರು ದಿವಸದ

---

= ಬ ಪಥ
± ಬ ಇಲಾಖೆ
§ ಬ ಆ ಠಾಣ್ಯದ
† ಬ ಚಿಟ್ಟಿ

ಮೇಲೆ ಮೂರನೆ ಜಾವದಲ್ಲಿ [ಅವರು ಖಾಸಾ ಮಂದಿಯನ್ನು] * ತೆಗೆದುಕೊಡು, ಅಹಂಕಾರದಿಂದ ಪಿಡ [ಹೊಳೆ ಮಾರ್ಗಕ್ಕಾಗಿ] § ಆ [ಕೊಚ್ಚಿ] ಕೋಟೆಗೆ ನುಗ್ಗಿ, [ನಾಲ್ಕು] × ಬತ್ತೇರಿಯನ್ನು ಆಕ್ರಮಿಸಿಕೊಂಡು ಜಗಳಕ್ಕೆ ನಿಂತಲ್ಲಿ, ಮೇಗಣ ಬತೇರಿಗಳಿಂದ ಪಿರಂಗಿ ಗುಂಡು ಬಂದೂಕಿನ ಗುಂಡು ಸಹ ಇಟ್ಟು ಕತ್ತಿ ತೆಗೆದು [ಕೊಂಡು] = ಕಡಿಯುತ್ತ ಬಂದಲ್ಲಿ, ಟೀಪೂ ಸುಲ್ತಾನರ ಅಗಾಡಿ ಪವುಜಿನಲ್ಲಿ ಇದ್ದ ಜಮಾಬೇಗು ಎಂಬ ಶಿಪಾದಾರನು ಬಿದ್ದು ಹೋಗಿ, ಆ ಕೋಟೆ ಮೇಲೆ ಬತ್ತೇರಿಗಳ ಮೇಲೆ ಸಹ ಹತ್ತಿ ಇದ್ದಂತಾ ಟೀಪೂ ಸುಲ್ತಾನರ ಪವುಜು ಯಾವತ್ತು ಪೆಟ್ಟು ತಡೆಯಲಾರದೆ, ದಾರಿ ಕಾಣದೆ, ಕೋಟೆ ಮೇಗಣಿಂದ ಕಂದಕದ ಒಳಗೆ ಬಿದ್ದು, ಮೃತವಾದರು. ಟೀಪೂ ಸುಲ್ತಾನರು ಔರಂಗ ಎಂಬ ಖಾಸಾ ಪಾಲಕಿ, ಖಾಸಾ ಮೊಹರ ಇದ್ದಂತಾ ಕಲಂದಾನಿ, ಸವಾರಿ ಕುದುರೆ, ಖಾಸಾ ಕತ್ತಿ ಸಹಾ ಅಲ್ಲಿ ಬಿಟ್ಟು, ಟೀಪೂ ಸುಲ್ತಾನರು ಮುಖಭಂಗಿತರಾಗಿ ಆ ಕಂದಕದಿಂದ ಗಿಡಬಿದ್ದು ಬಂದು ತಮ್ಮ ತಂಬಿಗೆ ಸೇರಿದರು. ಆ ಕಂದಕದಲ್ಲಿ ಬಹಳ ಮಂದಿ ದೊಡ್ಡ ದೊಡ್ಡ ಸರದಾರರು ಹೇರಳ ಪವುಜು ಸಹ [ಪ್ರಾಣ ಬಿಟ್ಟರು]. ± ಆ ಬಳಿಕ ಟೀಪೂ ಸುಲ್ತಾನರು [ಕೊಚ್ಚಿ] † ಕೋಟೆ ತೆಗೆದುಕೊಳ್ಳಬೇಕೆಂದು ಅಲ್ಲಿಯೇ [ಕಚೇರಿ] || ಮಾಡಿಕೊಂಡು ಸನ್ನದ್ಧರಾಗುತ್ತ ಇದ್ದರು.

ಇತ್ತಲಾಗಿ ತಲಚೇರಿ ಕೋಟೆ ಛೀಫ್ ರಾಬರ್ಟು ಟೆಲ್ಲೇರೀ ಸಾಹೇಬರು ಕೆಲವು ಪವುಜನ್ನು ತಲಚೇರಿಯಿಂದ ಕಳುಹಿಸಿ, ಕದನೂರು ಎಂಬ ಜಾಗದಲ್ಲಿ ಟೀಪೂ ಸುಲ್ತಾನರ ಕಡೆ ಠಾಣ್ಯ ಇದ್ದ ಮಂದಿಯನ್ನು ಹೊಡೆದು ಓಡಿಸಿ ಬಿಟ್ಟು, ಆ ಜಾಗವನ್ನು ತೆಗೆದುಕೊಂಡರು. ಆ ಸಮಯದಲ್ಲಿ ಕಣ್ಣೂರ ಬಲಿಯ ಬೀಬಿಯು ಟೀಪೂ ಸುಲ್ತಾನರ

---

* ಬ ಅರು ಕುಸುಮ್ಮನ್ನು

§ ಬ ವಳಿಮಾರ್ಗದಿಂದ

× ಬ ಮೂರು ನಾಲ್ಕು

= ಬ ಕೊಂಡು ಮೇಲೆ ಬಿದ್ದು

± ಬ ಮೃತಪಟ್ಟು ಹೋದರು.

† ಬ ಬಿಟ್ಟ

|| ಬ ಛಾವಣಿ

ಕಡೆ ಪಜಲ್‌ಖಾನನ ಕುಸುವ್ಮಿನ ಜನ ಆರು ಸಾವಿರ, ತನ್ನ ಕಡೆ ಮಾಪ ಳೆಯರು ನಾಲ್ಕು ಸಾವಿರ ಜನ ಸಹ ಕೂಡಿಕೊಂಡು ಇದ್ದದ್ದರಿಂದ, ಛೀಪ್ ರಾಬರ್ಟ್ಟು ಟೆಲ್ಲೇರೀ ಸಾಹೇಬರವರು ಆ ಬೀಬಿಗೆ— "ಟೀಪೂ ಸುಲ್ತಾನರ ಪವುಜು [ನೀನು] * ಜಗಳ ಮಾಡುವವಳೋ? ಅದಲ್ಲಾ, ಅವರ ದೋಸ್ತಿ ಬಿಟ್ಟು ಇಂಗ್ರೇಜಿ ಬಾಹದ್ದರವರ ಕುಂಪಣಿಯುವರ ಕೂಡೆ ಕೂಡಿ ನಿಲ್ಲುವವಳೊ?" ಎಂಬದಾಗಿ ಹೇಳಿ ಕಳುಹಿಸಿದಲ್ಲಿ, ಆ ಬೀಬಿಯು ಟೀಪೂ ಸುಲ್ತಾನರ ಕಡೆ ಪವುಜಿನ ಸರದಾರರ ಕೂಡೆ ಹೇಳಿದ್ದು:-"ಇಂಗ್ರೇಜಿ ಬಾಹದ್ದರವರ ಪವುಜನ್ನು ಉಪಾಯ [ದಿಂದ] † ಕರೆಸುತ್ತೇನೆ. ಅವರು ಬಂದಲ್ಲಿ ನೀವೂ ನಾವೂ ಕೂಡಿ ಅವರನ್ನು ಹೊಡೆಯಬೇಕೆಂ"ಬು ದಾಗಿ ಹೇಳಿದಲ್ಲಿ, ಅವರು ಒಪ್ಪಿಕೊಂಡದ್ದರಿಂದ, ಆ ಬೀಬಿಯು ತಲಚೇರಿ ಸರದಾರ ಛೀಪ್ ರಾಬರ್ಟ್ಟು ಟೆಲೇರು ಸಾಹೇಬರವರಿಗೆ ಹೇಳಿಕಳುಹಿ ಸಿದ ವಿವರ— "ಕಂಣೂರು ಕೋಟೆ ಒಳಗೆ ಇರುವ ಟೀಪೂ ಸುಲ್ತಾ ನರ ಪವುಜನ್ನು ೭-೮ ದಿವಸದ ಒಳಗೆ ಉಪಾಯದಿಂದ ಕೊಡಿಯಾ ಲದ ಕಡೆಗೆ ಕಳುಹಿಸಿಬಿಡುತ್ತೇನೆ. ಈ ಮಂದಿ ಕೋಟೆಯಿಂದ ಇಳಿದು ಹೋದ ಬಳಿಕ, ಇಂಗ್ರೇಜಿ ಬಹದ್ದರವರ ಪವುಜು ಕಳುಹಿಸಿಕೊಟ್ಟಲ್ಲಿ, ಅವರನ್ನು ಕೋಟೆ ಒಳಗೆ ಕರೆದುಕೊಂಡು, ಕೋಟೆಮೇಲೆ ಅವರ ಜಾಂಡೆ ಹಾಕಿಸಿಕೊಳ್ಳುತ್ತೇನೆ"— ಎಂಬದಾಗಿ ಹೇಳಿಕಳುಹಿಸಿ, ಆ ಬಳಿಕ ೫ ದಿವಸದ ಮೇಲೆ ಬೀಬಿಯು ಟಿಪ್ಪೂಸುಲ್ತಾನರ ಕಡೆ ಸರದಾರನಿಗೆ ಹೇಳಿದ್ದು— "ನೀವು ನಿಮ್ಮ ಪವುಜು ತೆಗೆದುಕೊಂಡು ಕೊಡಿಯಾಲಕ್ಕೆ ಹೋಗುತ್ತೇವೆ ಎಂಬದಾಗಿ ಸುದ್ದಿ ಹುಟ್ಟಿಸಿಬಿಟ್ಟು, ಕವಾಯಿಯಲ್ಲಿ ಇಳ ಕೊಂಡು ಇರಿ. ಆ ಬಳಿಕ— "ಈ ಮೇರೆ ಟೀಪೂಸುಲ್ತಾನರ ಪವುಜು ಕೋಟೆಯಿಂದ ಹೊರಗೆ ಹೋಯಿತು ನಿಮ್ಮ ಪವುಜು ತೆಗೆದುಕೊಂಡು ಇಲ್ಲಿಗೆ ಬಂದು ನಾಳೆ ದಿವಸ ಕೋಟೆ ಮೇಲೆ ನಿಮ್ಮ ಜಾಂಡೆ ಹಾಕಿ ಕೊಳ್ಳಿ"— ಎಂಬದಾಗಿ ಹೇಳಿ ಕಳುಹಿಸುತ್ತೇನೆ. ಅವರು ಪವುಜು ತೆಗೆ ದುಕೊಂಡು ಇಲ್ಲಿಗೆ ಬಂದಲ್ಲಿ, ಅವರನ್ನು ಕೋಟೆ ಹೊರಗೆ ಇಳಿಸಿ ಇರುತ್ತೇನೆ. ಆ ಸಮಯದಲ್ಲಿ ನೀವು ಪವುಜು ಸಮೇತ ರಾತಾರಾ ತ್ರಿಯೇ ಬಂದು ಮಾಪಿಳ್ಳೆಯರ ಸಹ ಕೂಡಿಕೊಂಡು, ಅವರ ಪವು

---

* ಬ ನೀನು ತೆಗೆದುಕೊಂಡು

† ಬ ತಂತ್ರದಿಂದ

ಜನ್ನ ಹೊಡೆದು ಜಾಯಾ ಮಾಡಬೇಕು"-- ಎಂಬದಾಗಿ ಹೇಳಿ, ಆ ಟಿಪ್ಪೂಸುಲ್ತಾನರ ಸರದಾರನ (ನ್ನ) ಕೋಟೆಯಿಂದ ಹೊರಗೆ ಕಳುಹಿಸಿ ಬಿಟ್ಟು, "ಟೇಪೂಸುಲ್ತಾನರ ಪವುಜು ಕೋಟೆ ಬಿಟ್ಟು ಹೊರಗೆ ಹೋಯಿತು. ನಿಮ್ಮ ಕಡೆ ಮಂದಿ ಜಲದಿ ಕಳುಹಿಸಿಕೊಟ್ಟು ಕೋಟೆಗೆ ಇಂಗ್ರೇಜಿ ಬಹದರರ ಜಾಂಡೆ ಹಾಕಿಕೊಳ್ಳಿ"-- ಎಂಬವಾಗಿ ಛೀಫ್ ರಾಬರ್ಟ್ಸ್ ಟಿಲೇರಿ ಸಾಹೇಬರವರಿಗೆ ಹೇಳಿಕಳುಹಿಸಿದಲ್ಲಿ, ಆ ಮಾತನ್ನು ನಂಬಿ, ಮೇಜರ್ ಡೋ ಸಾಬರಿಗೆ— "ನಿಮ್ಮ ಪವುಜು ತೆಗೆದುಕೊಂಡು ಕಣ್ಣೂರು ಕೋಟೆಗೆ ಹೋಗಿ ಇಂಗ್ರೇಜಿ ಜಾಂಡೆ ಹಾಕಿಕೊಳ್ಳಿ"— ಎಂಬದಾಗಿ ಹೇಳಿ ಕಳುಹಿಸಿದ್ದರಿಂದ, ಅದೇ ಮೇರೆ ಆ ಮೇಜರ್‌ಡೋ ಸಾಹೇಬರು ತಮ ಮಂದಿ ತೆಗೆದುಕೊಂಡು ಬಂದು, ಕಣ್ಣೂರು ಕೋಟೆ ಸಮೀಪದಲ್ಲಿ ಇಳಕೊಂಡಲ್ಲಿ, ಆ ಬೀಬಿಯು ಕವಾಯಿ ಎಂಬಲ್ಲಿ ಇಳಕೊಂಡು ಇದ್ದ ಟೇಪೂಸುಲ್ತಾನರ ಕಡೆ ಸರದಾರನಿಗೆ ಬರೆದು ಕಳುಹಿಸಿದ ವಿವರ— "ಇಂಗ್ರೇಜಿ ಬಹದ್ದರರ ಪವುಜು ಬಂದು ಕೋಟೆ ಸಮೀಪದಲ್ಲಿ ಇಳಿದು ಇವೆ. ನಿಮ್ಮ ಪವುಜು ತೆಗೆದುಕೊಂಡು ರಾತ್ರಾರಾತ್ರೆಯೇ ಇಲ್ಲಿಗೆ ಬಂದು, ನಮ್ಮ ಕಡೆ ಮಾಪಿಳ್ಳೆಯವರು ಸಹ ಕೂಡಿಕೊಂಡು, ಇಂಗ್ರೇಜಿಯವರ ಪವುಜನ್ನು ಜಾಯುಮಾಡಿ"— ಎಂಬದಾಗಿ ಬರೆಸಿ ಕಳುಹಿಸಿದ್ದರಿಂದ, ಆ ಮೇರೆ ಆ ಟೇಪೂಸುಲ್ತಾನರ ಕಡೆ ಸರದಾರನು ಪವುಜು ತೆಗೆದುಕೊಂಡು ಬಂದು, ಮಾಪಿಳ್ಳೆಯರನ್ನು ಕೂಡಿಕೊಂಡು, ರಾತ್ರೆ ಮೂರು ಜಾವದ ಮೇಲೆ ಇಂಗ್ರೇಜಿಯವರ ಪವುಜಿನ ಮೇಲೆ ಬಿದ್ದು, ಕೆಲವು ಜನಕ್ಕೆ ಜಾಯುಜಕ್ಕಂ ಮಾಡಿದರು. ಅಷ್ಟರಲ್ಲಿ ಇಂಗ್ರೇಜಿಯವರ ಪವುಜು ಎಚ್ಚತ್ತು, ಈ ದಗಾಮಾಡುವದಕ್ಕೆ ಬಂದಂತಾ ಟೇಪೂಸುಲ್ತಾನರ ಜನಕ್ಕೂ ಮಾಪಿಳ್ಳೆಯರಿಗೂ ಚೆನ್ನಾಗಿ ಪೆಟ್ಟು ಹೊಡೆದಲ್ಲಿ, ಮುರಿದು ಹೋಗಿ ಕಣ್ಣೂರು ಕೋಟೆಗೆ ಹೊಕ್ಕರು. ಆ ಬಳಿಕ [ಅಲ್ಲಿಯ] † ಬೀಬಿಯು ನಮ್ಮ ಪವುಜಿಗೆ ಮೋಸ ಮಾಡಬೇಕೆಂಬದಾಗಿ ಕರೆಸಿದವಳೇ ಹೊರತು ಕೋಟೆ ಕೊಡುವದಕ್ಕೆ ಕರೆಸಿದವಳಲ್ಲ ಎಂದು ಆ ಡೋ ಸಾಹೇಬರವರು ತಿಳಿದು, ಆ ಬೆಳಿಗ್ಗೆ ತಮ್ಮ ಪವುಜು ಸಮೇತ ತಲಚೇರಿಗೆ ಹೋಗಿ, ಈ ವೃತ್ತಾಂತವೆಲ್ಲ ರಾಬರ್ಟ್ಸ್ ಟಿಲೇರೀ ಸಾಹೇಬರವರಿಗೆ ಬರೆದು ಕಳುಹಿಸಿದಲ್ಲಿ, ಅವರು ಈ ವಿವರವೆಲ್ಲಾ ಬೊಂಬಾಯಿ [ಗೌರ್ನರ್] = ಅವರ್ ಕರಂಬಿ ಸಾಹೇಬರಿಗೆ

† ಬ ಈ ಕಣ್ಣೂರು

= ಬ ಗೌರ್ನರ್ ಮೇಜರ್ ಜನರಲ್

ಬರೆದು ಕಳುಹಿಸಿದಲ್ಲಿ,— "ಒಳ್ಳೇದು, ಈ ಬಗ್ಗೆ ಬೊಂಬಾಯಿ ಪವುಜು ತೆಗೆದುಕೊಂಡು, ಕೆಲವು ದಿವಸದಲ್ಲಿ ಟೀಪೂಸುಲ್ತಾನರ ಮೇಲೆ ಜಗಳಕ್ಕೆ ಹೋಗುವ ಬಗ್ಗೆ ಆ ಕಡೆ ಬರುತ್ತೇವೆ. ಆವಾಗ್ಗೆ ಆ ಕಣ್ಣೂರು ಬೀಬಿಗೆ ತಕ್ಕ ಶಿಕ್ಷೆ ಮಾಡಿಸಬಹುದು. ಇದ ತಿಳಿದು ದಂಡಿಗೆ ಬೇಕಾದ ಸಾಮಾನು ಗಾಡಿ ಎತ್ತುಗಳು ಮುಂತಾಗಿ ಜಮಾಯಿಸಿಕೊಂಡು ಇರುವದು"— ಎಂಬದಾಗಿ ಜವಾಬು ಬರೆದು ಕಳುಹಿಸಿದ್ದರಿಂದ, ಆ ಟಿಲೇರಿ ಸಾಹೇಬರು [ಗಾಡಿ] * ಎಳೆಯುವ ಲಾಯಕಿನ ದೊಡ್ಡ ಎತ್ತುಗಳ (ನ್ನು) ತಲಾಸು ಮಾಡುತ್ತ ಇದ್ದರು.

ಆ ತರುವಾಯ ಕೊಡಗಿನ ದೊರೆಗಳು ವೀರರಾಜೇಂದ್ರ ಒಡೆಯರವರಿಗೆ ಕೆಲವು ಸಾಮಾನು ಬೇಕಾದ್ದರಿಂದ— "ತಲಚೇರಿ ಪೇಟೆಗೆ ಹೋಗಿ, ಕ್ರಯ ಮೂಲವಾಗಿ ಸಾಮಾನು ತೆಗೆದುಕೊಂಡು ಒಳ್ಳೆ ಊಚು ಕುದುರೆ ಸಿಕ್ಕದರೆ ಒಂದು ಕುದುರೆಯನ್ನು ಕ್ರಯಕ್ಕೆ ತೆಗೆದುಕೊಂಡು ಬಾ"— ಎಂಬುದಾಗಿ ತಮ್ಮ ಬಳಿಯಿದ್ದ ಮುತ್ತು ಭಟ್ಟನ ಕಯ್ಯ ಒಂದು ಯಾದಾಸ್ತು ಬರೆದು ತಲಚೇರಿಗೆ ಕೊಟ್ಟು ಕಳುಹಿಸಿದರು. ಅವನು ತಲಚೇರಿ ಪೇಟೆಗೆ [ಹೋಗಿ] † ವಿಚಾರಿಸುತ್ತ ಇದ್ದಲ್ಲಿ, ಈ ಸಮಾಚಾರ ಛೀಫ್ ರಾಬರ್ಟ್ಸು ಟಿಲೇರಿ ಸಾಹೇಬರು ಕೇಳಿ, ಈ ಮುತ್ತುಭಟ್ಟನ (ನ್ನು) ಕರೆ ಕಳುಹಿಸಿ, ಕೊಡಗು ಸಂಸ್ಥಾನದ ವೀರರಾಜೇಂದ್ರ ಒಡೆಯರಿಗೂ ಟೀಪೂಸುಲ್ತಾನರಿಗೂ ಆದ ಜಗಳದ ವೃತ್ತಾಂತ ಯಾವ ಮೇರೆ ಎಂಬದಾಗಿ ಕೇಳಿದಲ್ಲಿ, ಆ ಮುತ್ತುಭಟ್ಟನು ಸವಿಸ್ತಾರವಾಗಿ ಹೇಳಿದಲ್ಲಿ, ಅದನ್ನು ಕೇಳಿ, ಆ ಸರದಾರನು ಬಹಳ ಪಸಂದು ಪಟ್ಟು,— " ಈ ಮೇರೆ ಟೀಪೂಸುಲ್ತಾನರು ಕೊಡಗಿನ ದೊರೆಗಳಿ[ಗೂ] § ಕುಂಪಣಿ ಸರಕಾರಕ್ಕೂ ಶತ್ರುವಾಗಿ ಇದ್ದಾರೆ. ಆದ್ದರಿಂದ ಕೊಡಗಿನ ವೀರರಾಜರಿಗೂ ಇಂಗ್ರೇಜಿ ಬಹದ್ದರರ ಕುಂಪಣಿ ಸರಕಾರಕ್ಕೂ ಮಿತ್ರತ್ವ ವಾಂಛಲ್ಯವಿಟ್ಟು ನಡೆಯ.ಬೇಕೆಂಬ ಅಪೇಕ್ಷೆ ನಮಗೆ ಇದೆ. ಅದು ಕಾರಣ

---

* ಬ ದಂಡಿಗೆ ಬೇಕಾದ ಕೆಲವು ಸಾಮಾನ ವಿಚಾರಿಸಿ, ತರಿಸಿ, ಜಮಾಯಿಸುತ್ತ ಇದ್ದಲ್ಲಿ, ಮಳೆಯಾಳದಲ್ಲಿ ಇರುವ ಎತ್ತುಗಳು ಗಿಡ್ಡರಾಶಿಯಾಗಿ ಗಾಡಿ ಯೆಳೆಯುವ ಲಾಯಕು ಅಲ್ಲವಾದುದರಿಂದ, ಗಾಡಿ

† ಬ ಹೋಗಿ ಆ ಯಾದಾಸ್ತು ಮೇರೆ ಸಾಮಾನು

§ ಬ ಗೆ ಶತ್ರುವಾಗಿದ್ದಾರಷ್ಟೇ. ಅದೇ ಮೇರೆಗೆ ಅವರು ಇಂಗ್ರೇಜಿ

ದೊರೆಗಳಿಗೆ ಬೇಕಾದ ಸಾಮಾನು ಸರಂಜಾಮು ಕುದುರೆ ಸಹ ಅವರು ನಿನ್ನ ಕಯ್ಯಲ್ಲಿ ಯಾದಾಸ್ತು ಬರೆಸಿಕೊಟ್ಟಿರುವ ಮೇರೆ ನಾವು ತರಿಸಿಕೊಡುತ್ತೇವೆ. ನಮ್ಮಲ್ಲಿ ಫಿರಂಗಿ ಗಾಡಿ ಎಳೆಯುವ ಬಗ್ಗೆ ಮಲ್ಯಾಳ ಪ್ರಾಂತ್ಯದಲ್ಲಿ ದೊಡ್ಡ ಎತ್ತುಗಳು ಸಿಕ್ಕುವುದಿಲ್ಲ. ಅಲ್ಲಿ ದೊಡ್ಡದಾಗಿ ಇರುವಂತಾ ಎತ್ತುಗಳ ವಿಚಾರಿಸಿ, ಕುಂಪಣಿಸರಕಾರಕ್ಕೆ ಕಳುಹಿಸಿಕೊಟ್ಟರೆ ಉಪಕಾರವಾದೀತು"— ಎಂದು ಮುತ್ತುಭಟ್ಟನ ಸಂಗಡ [ಹೇಳಿ]* ಮಹಾರಾಜರಿಗೆ ದೋಸ್ತಿ ಕಾಗದವನ್ನು ಬರೆಸಿ ಮುತ್ತುಭಟ್ಟನ ಕೈಲಿ ಕೊಟ್ಟು, ತಲಚೇರಿಯಿಂದ ಕಲಿಸಂದ ೪೮೯೧ ನೇ ಸಾಧಾರಣ ಸಂವತ್ಸರದ ಚೈತ್ರಮಾಸದಲ್ಲಿ ಕಳುಹಿಸಿದ್ದರಿಂದ, ಆ ಕಾಗದವನ್ನು ತಂದು ಒಪ್ಪಿಸಿ, ಅವರು ಹೇಳಿದ ಬಾಯಿಮಾತು ಸಹ ವಿಸ್ತಾರನಾಗಿ ಶ್ರುತಪಡಿಸಿದಲ್ಲಿ, ಆ ಮಾತು ಕೇಳಿ, ರಾಜರಿಗೆ ಕುಂಪಣಿ ಇಂಗ್ರೇಜಿ ಬಹದ್ದರವರ ದೋಸ್ತಿ ಬೆಳೆಸಬೇಕೆಂಬ ಮೋಹ ಹುಟ್ಟಿ, "ಸೂರ್ಯಚಂದ್ರಾದಿಗಳು ಇರುವ ಪರಿಯಂತರಕ್ಕೂ ಕುಂಪಣಿ ಇಂಗ್ರೇಜಿ ಬಹದ್ದರವರ ಸರಕಾರಕ್ಕೂ ನಮ್ಮ ಸಂಸ್ಥಾನಕ್ಕೂ ಮಿತ್ರತ್ವ ಸ್ಥಿರವಾಗಿ ನಡೆದು ಬರಬೇಕೆಂಬುದಾಗಿ ಭಾಷಾಪತ್ರಿಕೆ ಎರಡು ಕಡೆಯಿಂದಲೂ ಬರೆದು ಎರಡು ಕಡೆಯಲ್ಲೂ ಮಡಗಬೇಕೆ"ಂಬದಾಗಿ ಬಾಯಿಮಾತಾಗಿಯೂ ಹೇಳಿ, ಅವರ ಕಾಗದಕ್ಕೆ ಜಬಾಬು ಸಹ ಬರೆದು, ಮುತ್ತುಭಟ್ಟನ ಕೈಲಿ ಕೊಟ್ಟು ಕಳುಹಿಸಿದಲ್ಲಿ, ಅವನು ರಾಬರ್ಟ್ಸು ಟಿಲೇರಿ ಸಾಹೇಬರ ಬಳಿಗೆ ಹೋಗಿ ರಾಜರು ಹೇಳಿಕಳುಹಿಸಿದಂಥ ಬಾಯಿಮಾತು ಯಾವತ್ತು ವಿವರವಾಗಿ ಆ ಸಾಹೇಬರಿಗೆ ತಿಳಿಸಿ, ಆ ಕಾಗದವನ್ನು ಅವರಿಗೆ ಕೊಟ್ಟಲ್ಲಿ, ಅದಕ್ಕೆ ಟಿಲೇರಿ ಸಾಹೇಬರು ಮುತ್ತುಭಟ್ಟನ ಸಂಗಡ— "ಈ ವಿವರ ಯಾವತ್ತೂ ಬೊಂಬಾಯಿ ಸಂಸ್ಥಾನದಲ್ಲಿರುವ ಗವುನರ್ ರಾಬರ್ಟ್ಸು ಆಬ್ರಕರಂಬಿ ಸಾಹೇಬರಿಗೆ ಬರೆದು ಕಳುಹಿಸಿ, ಇದಕ್ಕೆ ಜಬಾಬನ್ನೂ ದೊರೆಗಳಿಗೆ ಬೇಕಾದ ಕುದುರೆ ಸಹ ಆವಲ್ ಮೊಸಮಿನಲ್ಲಿ ಬೊಂಬಾಯಿಂದ

---

ಬ ಬಾಯಿಮಾತಿನಿಂದ ಹೇಳಿ

* ಮುತ್ತುಭಟ್ಟನಸಂಗಡ ಹೇಳಿದ್ದು— ಈ ವ್ಮೇರೆ ಅವರು ಬಾಯಿಮಾತಿನಿಂದ ಹೇಳಿ ಕಳುಹಿಸಿದ್ದರಿಂದಲೂ, ಕಾಗದ ಬರೆದು ಕಳುಹಿಸಿದ್ದರಿಂದಲೂ, ನಮ್ಮ ವ್ಮನಸ್ಸಿಗೆ ಸಮ್ಮತವಿಲ್ಲ. ನಮಗೂ ಕುಂಪಣಿ ಇಂಗ್ರೇಜಿ ಬಹಾದರ ಸರಕಾ·ಕ್ಕೂ ಸಾರೋದ್ಧಾರವಾಗಿ ಮಿತ್ರತ್ವ ನಡೆದು ಬರಬೇಕೆಂಬ ಮೋಹ ನಮಗೆ ಬಹಳ ಇದೆ. ಅವರಿಗೂ ಈ ಮೇರೆ ದ್ದರೆ, ನಾವು ಅವರು ಕೂಡಿ ಬೇಟಿಯಾಗಿ

ತರಿಸಿ ಕಳುಹಿಸಬಹುದು. ಈಗ ನಮಗೆ ಅಗತ್ಯ ಬೇಕಾದ ಫಿರಂಗಿ ಗಾಡಿ ಎಳೆಯುವ ಎತ್ತುಗಳನ್ನು ಜಮಾಯಿಸಿದಲ್ಲಿ ತರಿಸಿಕೊಂಡೇವು"— ಎಂಬದಾಗಿ ಹೇಳಿ ಪ್ರತಿ ಜವಾಬು ಬರೆಸಿ ಮುತ್ತುಭಟ್ಟನ ಕೈಲಿ ಕಳುಹಿಸಿದ್ದರಿಂದ, ಅವನು ಬಂದು ಆ ಸರದಾರನು ಹೇಳಿದ ಮೇರೆ ಬಾಯಿ ಮಾತು ಯಾವತ್ತು ಶ್ರುತಪಡಿಸಿ, ಆ ಕಾಗದವನ್ನು ಕೊಟ್ಟಲ್ಲಿ, ವೀರರಾಜೇಂದ್ರ ಒಡೆಯರು ಆ ವಿವರ ಯಾವತ್ತು ತಿಳಿದು ಬಹಳ ಸಂತೋಷಪಟ್ಟು, ಗಾಡಿ [ಎತ್ತು] § ಗಳು ಕೊಡಗಿನ ಸೀಮೆಯಲ್ಲಿ ಸಿಕ್ಕದ್ದರಿಂದ ಟೀಪೂಸುಲ್ತಾನರ ಕಡೆ ಎತ್ತುಗಳು ಇದ್ದಂಥ ಸ್ಥಳವನ್ನು ಗೊತ್ತುಪಡಿಸಿ, ಪ್ರಯತ್ನ ಮಾಡಿ, ಅಲ್ಲಿಂದ ೮೦೦ ಎತ್ತು ಪರಿಯಂತರ ತರಿಸಿ, ಅದರಲ್ಲಿ ಒಳ್ಳೇ ಅನುವಾದಂಥ, ಗಾಡಿ ಎಳೆಯುವಂಥ [೫೦೦ ಎತ್ತುಗಳನ್ನು ಚಾಸು ಕಾಯಿಸಿ ತೆಗೆದುಕೊಂಡು] = ಉಳಿದ ಎತ್ತುಗಳನ್ನು ರೈತರಿಗೆ ಹಂಚಿ ಕೊಟ್ಟು, ಈ ವಿವರ ಟಿಲೇರಿ ಸಾಹೇಬರಿಗೆ ಬರೆದು ಕಳುಹಿಸಿದಲ್ಲಿ, ಅಲ್ಲಿಂದ ಸಿಪಾಯಿಗಳು ಬೇಗಾರಿ ಜನರ ಸಹ ಒಬ್ಬ ಇಂಜಿನೀರು ಸರದಾರನ ಸಂಗಡ ಕೂಡಿಸಿ ಕಳುಹಿಸಿದ್ದರಿಂದ, ಅವರು ಬಂದಲ್ಲಿ, ವೀರರಾಜೇಂದ್ರ ಒಡೆಯರವರು ಆ (ಯ್) ದು ಮುಡಗಿಸಿ ಇರುವಂತಾ ಎತ್ತುಗಳನ್ನು ಅವರ ತಾಬೆಗೆ ಕೊಟ್ಟು ಕಳುಹಿಸಿದರು. ಆ ಬಳಿಕ ಟಿಲೇರಿ ಸಾಹೇಬರು ದೊರೆಗಳಿಗೆ ಬರೆಸಿ ಕಳುಹಿದ ಕಾಗದದಲ್ಲಿ—"ತಾವು ಹೇಳಿದ ಪ್ರಕಾರ ಭಾಷಾಪತ್ರಿಕೆ ಬರೆದು ಕೊಡತಕ್ಕದ್ದಕ್ಕೆ ಬೊಂಬಾಯಿಂದ ನಮಗೆ ಹುಕ್ಕುಂ ಬಂದು ಇದೆ. ಆದರಿಂದ ಇಲ್ಲಿಂದ ಒಂದು ಕುಂಪಣಿ ಸಿಪಾಯಿಗಳು, ನಿಶಾನಿ ಸಹ ಕಪ್ಟೆನ್ ಬ್ರೌನ್ ಸಾಹೇಬ ಎಂಬ ಸರದಾರರನ್ನು ಕಳುಹಿಸಿ ಇದ್ದೇವೆ. ತಾವು ಇಲ್ಲಿಗೆ ಬಂದು ತಮ್ಮ ಮುಲಾಕತ್ತಿನ ಫಾಯಿದೆಯಿಂದ ಸಂತೋಷಪಡಿಸಬೇಕೆ"ಂಬದಾಗಿ ಬರೆದು ಕಳುಹಿಸಿ ಇದ್ದರು. ಅದೇ ಮೇರೆಗೆ ಆ ಕಪ್ಟಿನ್ ಬ್ರೌನ್ ಸಾಹೇಬರು ಬಂದು, ಆ ಕಾಗದವನ್ನು ಕೊಟ್ಟು, ಕೆಲವು ವಿವರ ಬಾಯಿಮಾತಿನಿಂದಲೂ ಹೇಳಿದ್ದರಿಂದ, ವೀರರಾಜರು ಸರ್ವ ಬಗೆಯಲ್ಲೂ ಕುಂಪಣಿ ಇಂಗ್ರೇಜಿ ಬಹದ್ದರರ ಸರಕಾರ ನಂಬಿ, ಆ ಸರದಾರರ ಸಂಗಡ, ಇದೇ ಆಶ್ವೀಜ ಶುದ್ಧ ವಿಜಯದಶಮಿ ದಿವಸ ಕೊಡಗಿನಿಂದ ಹೊರಟು, ತಲಚೇರಿ ಕೋಟೆಗೆ

§ ಬ ಎಳೆಯುವಂಥ ಎತ್ತು

= ಬ ಎತ್ತು ಅಯ್ನೂರೈವತ್ತೈದನ್ನು ವಿಂಗಡವಾಗಿ ಇಟ್ಟು

೫. ಭಾಷೆಗೆ ತಪ್ಪಿ ತನುವಿಂಗೆ ಅಲಗ ಕಿತ್ತರೆ, ಲಿಂಗ ಓಸರಿಸಿತ್ತಯ್ಯಾ! ಮುಂದೆ ವೀರನಪ್ಪನು. ಇಂತಪ್ಪ ಭಾಷೆವಂತನು ಶರಣ ಅಲ್ಲ ಕಾಣಿರೋ. ಆತ ಕಲ್ಪಿತಾಕಾರನಲ್ಲ ಪೂರ್ವಾಶ್ರಯುವಿಲ್ಲ. ಉಭಯ ಕುಳ ರಹಿತ ಕೂಡಲ ಚನ್ನಸಂಗ ನಿಮ್ಮ ಶರಣ.

೬. ಅಂಗದ ಮೇಲಣ ಲಿಂಗ ಹಿಂಗಿತ್ತೆಂದು, ಆತ್ಮ ಘಾತಕವ ಮಾಡಿಕೊಳ್ಳಬೇಕೆಂಬ ಅಜ್ಞಾನಿಗಳು ನೀವು ಕೇಳಿರೊ. ಅಂಗವಾವುದು ಎಂದರಿಯಿರಿ. ಲಿಂಗವಾವುದು ಎಂದರಿಯಿರಿ. ಅಂಗವೆದೊಂಡೆ ಆತ್ಮನು, ಲಿಂಗವೆಂದೊಡೆ ಸಂಯುಕ್ತನು. ಈ ಎರಡರ ಸಂಬಂಧದ ಸಂಚವನರಿಯದೆ, ಅಂಗದ ಮೇಲಣ ಲಿಂಗ ಹಿಂಗಿತ್ತೆಂಬರಿಗೆ ಪ್ರಾಣಲಿಂಗ ನಾಸ್ತಿ. ಪ್ರಾಣಲಿಂಗವಿಲ್ಲದವರಿಗೆ ಪ್ರಸಾದವೆಲ್ಲಿಹದೋ? ಆ ಪ್ರಸಾದವಿಲ್ಲದವರಿಗ ಮುಕ್ತಿ ಎಲ್ಲಿಹದೋ ಕೂಡಲಚನ್ನಸಂಗಮದೇವಾ?

೭. ದೇವರು ಬದ್ದರು ದೇವರು ಬಿದ್ದರು ಎಂದು ಸಾಹಿತ್ಯದ ಕೂಡ ಸಾಯಬೇಕೆಂಬಿರಿ. ಅದಾವಾಗ ಬಿದ್ದಿತೆಂದರಿಯಿರಿ. ಅದಾವಾಗಿದ್ದಿತ್ತು, ಅದಾವಾಗ ಬಿದ್ದಿತ್ತೆಂಬುವುದ ನೀವು ಬಲ್ಲರೆ ಹೇಳಿರೆ. ॥ಸಾಕ್ಷಿ॥ ಅದೃಶ್ಯಂ ಭಾವನಾ ನಾಸ್ತಿ। ದೃಶ್ಯಮೇವ ವಿನಶ್ಯತಿ। ಅವರ್ಣಮಕ್ಷರಂ ಬ್ರಹ್ಮ। ತಧ್ಯಾಯಂಚ ವಿಯೋಗಿನಾಂ॥ ಇದು ಕಾರಣ ಕೂಡಲಚನ್ನ ಸಂಗಯ್ಯ ನಿಮ್ಮನರಿದಾಗಲಿದ್ದಿತ್ತು ಮರೆದಾಗ ಬಿದ್ದಿತ್ತು.

೮. ಉಭಯ ದಳವು ನಡೆದು ಬಂದು ಮುಂದೆ ನಿಂದಿರ್ದು, ಭಾಷೆಯಾಗಿ, ಬಿರಿದನುಚ್ಚರಿಸುತ್ತ ಹೊಯ್ದು ಕುಟ್ಟಾಡುವ ಕಾಳಗದೊಳಗೆ ಕೈದು ಬಿದ್ದೊಡೆ ಭಂಗವಲ್ಲದೆ ನಾಕಲಿವೆನೆಂದು ಅಭ್ಯಾಸ ಮಾಡುವ ಸಮಯದಲ್ಲಿ ಕೋಲು ಬಿದ್ದರೆ ಭಂಗವಲ್ಲ. ಮರಳಿ ಕೋಲು ಕೊಂಡಭ್ಯಾಸವ ಮಾಡುವುದುಚಿತವಲ್ಲದೆ ನಾ ನಿನ್ನಭ್ಯಾಸವ ಮಾಡಲಾಗದು. ಕೋಲುಬಿದ್ದಿತ್ತೆಂಬ ಗಾವಿಲರ ಮಾತು ಕೇಳಲಾಗದು. ದೃಷ್ಟವೇ ಕೋಲು. ಅದೃಷ್ಟವೇ ಕಾವುದು. ಕಾಣಬಾರದ ಲಿಂಗವ ಕಾಂಬುದಕ್ಕೆ ತನ್ನ ಶಕ್ತಿ ಕಾಣಾ ಕೂಡಲ ಚನ್ನಸಂಗಮದೇವಾ.

೯. ಭಕ್ತಿಯಂತುಟಲ್ಲ, ಯುಕ್ತಿಯಂತುಟಲ್ಲ, ಮುಕ್ತಿಯಂತುಟಲ್ಲ. ನಿಜ ಭಕ್ತಿಯ ಪರಿ ಬೇರೆ ಕೇಳಿರಣ್ಣಾ! ವೀರ ವೈರಾಗ್ಯದ ಭಾಷೆಯಂತುಟಲ್ಲ. ಸಹಜದ ಪರಿ ಬೇರೆ ಕಾಣಿರಣ್ಣಾ! ಅಂಗ ಲಿಂಗ ಸಂಗ ಸಮರಸದ ಸಂಬಂಧವು ನಿಜ ಸಾರಾಯಂಗಲ್ಲದೆ ಪ್ರಸಾದದ ಗ್ರಾಹಕತ್ವವು ಪ್ರಾಣಲಿಂಗಿಗಲ್ಲದೆ ॥ಸಾಕ್ಷಿ॥ ಪರಿಣತಂ ಪ್ರಾಣಲಿಂಗಿನಾಂ। ಲಿಂಗ

ಪ್ರಾಣಂತು ಉತ್ತಮಂ। ಸಯಾತ್ಮ ವಂದನಂ ಕೃತ್ವಾ। ನರಕೆ ಕಾಲ ವಾಕ್ಯಯಂ॥ ಇದು ಕಾರಣ ಕೂಡಲಚನ್ನಸಂಗಯ್ಯ ನಿಮ್ಮ ಸಹಜ ಸಂಬಂಧದ ಸಾರಾಯದ ಸುಪ್ರಸಾದದ ಪ್ರಾಣ ನಿಯತಾಚಾರವು ಪ್ರಾಣಲಿಂಗಿಗಲ್ಲದೆ, ಮತ್ತಾರಿಗೆಯೂ ಸಲ್ಲದಯ್ಯಾ.

೧೦. ಹರಿ, ಬ್ರಹ್ಮ, ಇಂದ್ರ, ಚಂದ್ರ, ರವಿ, ಕಾಲ, ಕಾಮ, ದಕ್ಷಾದಿಗಳು ಮೊದಲಾಗಿ, ಇವರೊಳಗಾದ ಸರ್ವ ಸಮಸ್ತರು ಲಿಂಗವನಾರಾಧಿಸಿ, ಧ್ಯಾನ ಮೌನ ನೇಮ ನಿತ್ಯ ತಪಸ್ಸಿನಿಂದೆ, ಅರ್ಚಿಸಿ ಪೂಜಿಸಿ, ಹಲವು ಪ್ರಕಾರದಿಂದೆ ಒಲಿಸಿ, ನಾನಾ ಫಲಪದಂಗಳ ಪಡೆದು ಭೋಗಿಸಿ ಸುಖಿಯಾಗಿಹುದಕ್ಕೆ ಸಂಶಯವೇಕೆ? ಸಂದೇಹವೇನು? ಶೃತ ದೃಷ್ಟಾನುಮಾನದಿಂದೆ ತಿಳಿದು ನೋಡಿರೆ. ಎರಡಿಲ್ಲದೆ ಏಕವಾಗದೆ, ನಾ ನೀನೆಂಬ ಭಿನ್ನದೋರದೆ, ಶಿವನೆ ಅಂಗವಾದ ಸದ್ಭಕ್ತನಿರವು ಇಂತಲ್ಲ ಕೇಳಿರಣ್ಣಾ! ಅದೆಂತೆಂದೊಡೆ, ಜಪ ತಪ ಧ್ಯಾನ ಮೌನ ನಿಯಮ ಶೀಲ, ಕ್ರಿಯೆಗಳೆಂಬ ನಾನಾ ವ್ರತಂಗಳ ಕೈಕೊಂಡು, ಹಲವು ಪ್ರಕಾರದ ಅರ್ಚನೆ ಪೂಜೆಯಂ ಮಾಡಿ, ಒಲಿಸಿಕೊಂಡು, ಭಕ್ತಿ ಯುಕ್ತಿ ಶಕ್ತಿಯಿಂದ, ಚತುರ್ವಿಧ ಫಲಪದಂಗಳಂ ಪಡೆದು ಮೇಲೆ ಮುಕ್ತಿಯಾಗಬೇಕೆಂಬ ಅಲ್ಪಾಸೆವಿಡಿದು ಭ್ರಮೆಗೊಳಗಾದ ಭ್ರಾಂತು ಮರ್ಕಟರಂತಲ್ಲ ನೋಡಿರೆ. ಶಿವಶಿವಾ ಮಹಾದೇವ ಶಂಕರ ಸಾಂಬ ಎಂದು ಆ ಮಹಾವಸ್ತುವಿನಲ್ಲಿ ಬೆರಸಿದ ಅಭೇದ್ಯ ಶರಣಂಗೆ ಜಪ ತಪ ಧ್ಯಾನ ಮೌನವಲ್ಲಿಹದೊ? ಜಪ ಕೈಸಾರಿದಂಗೆ ಧ್ಯಾನ ಮೌನವೆಲ್ಲಿಹದೊ? ಧ್ಯಾನ ಧ್ಯೇಯವಳವಟ್ಟ, ಅನಾದಿಪಂಗೆ ತಪದ ತಗಹು ಇನ್ನೆಲ್ಲಿಹದೋ? ಇಹ ಪರವೆರಡು ದೆಸೆಗೆಟ್ಟವಂಗೆ ವ್ರತ ನೇಮದ ನೋಂಪಿಯ ಸೂತಕವಿನ್ನೆಲ್ಲಿಹದೋ? ಇಂತಿದನುದ್ಯಾಪನೆಯ ಮಾಡುವ ಸಂಪನ್ನ ಸತ್ಪುರುಷಮಂ ಪಡೆದುಕೊಂಡು, ತೆರಹು ಮರಹಿಲ್ಲದೆ, ಪತಿಭಕ್ತಿಯ ಮಾಡುವ ಸಜ್ಜನ ಸತಿಗೆ ಭಜನೆ ಪೂಜಾಕ್ರಿಯೆಗಳೆಂಬ ನೇಮದಿಂದರ್ಪಿಸಿ ಪೂಜಿಸಿ, ಧ್ಯಾನ ಮಾಡಬೇಕೆಂಬ ಸಂಭ್ರಮದ ದಂದುಗದ ಕೋಟಲೆ ಎಲ್ಲಿಹದೋ? ಅರ್ಥ ಪ್ರಾಣಾಭಿಮಾನ ಮೊದಲಾದ ಸಕಲ ಪದಾರ್ಥಂಗಳೆಲ್ಲವು ಮೊದಲೆ ಪುರಾತರವೆಂದರಿದು ಶಿವಯೋಗೀಶ್ವರರೆಂಬ ಪರಶಿವ ಶರಣರ್ಗೆ ಸಮರ್ಪಣೆಯ ಮಾಡುವ ಸದ್ಭಕ್ತಂಗೆ ಆವಾಗಲು ಶ್ರೀ ಗುರುಸೇವೆಯ ಮಾಡುವ ಕೈಯ್ಯಲ್ಲಿ ಮಣಿಗಳ ಹಿಡಿದು ತಿರುಹಬೇಕೆಂಬ ಧಾವತಿಗೊಳಗಾಗಲೇಕೋ? ಸದಾ

ಸನ್ನಿಹಿತನಾಗಿ ಅನುದಿನ ಶೃತಿಗೆಯ್ಯ ಮನದ ನೆನಹ ಬಿಡಿಸಿ, ಎಣಿಕೆಗಿಕ್ಕಿ ಸಂಚರಿಸುವ ಸಂದೇಹವದೇಕೋ? ಅನುಮಿಷನಾಗಿ ನೋಡುವ ದೃಷ್ಟಿಗೆ ಎವೆಯ ಮರೆಯ ಮಾಡಿಕೊಂಡು ಕಣ್ಣ ಮುಚ್ಚುವದೇಕೋ? ಕರ ಮನ ನೇತ್ರವೆಂಬ ತ್ರಿಸ್ಥಾನದಲ್ಲಿರಿಸಲರಿಯದೆ ಭೇದವ ಮಾಡಿ ಅಗಲಿಸುವಂತಹ ಜಪ ತಪ ತಾನೇಕೋ? ಪರಿಪೂರ್ಣವಾದ ವಸ್ತು ಕರಕಮಲದಲ್ಲಿರಲಿಕ್ಕಾಗಿ ಅಗಲಿಸಿ ದೂರಕಿಕ್ಕಿ ಎವೆವೆರಹ ಮಾಡಿ ಖಂಡಿಸಿ ಕಂಡಿಹೆನೆಂಬ ಧ್ಯಾನ ಮೌನವೇಕೊ? ಸರ್ವ ಸಂಪದವನೀವಂತಹ ಸ್ವತಂತ್ರ ಕರ್ತುವೆನಿಸುವ ಸಮರ್ಥಿಕೆಯನುಳ್ಳ ವಸ್ತುವೆಂಬ ಪರಬ್ರಹ್ಮದೊಳಗಿರ್ದು ಅಲ್ಪಪದವ ಸಾಧಿಸಿಹೆನೆಂದು ಕಾಯವ ದಂಡಿಸಿ ಆತ್ಮನಿಗ್ರಹಂ ಮಾಡಿ, ಬಟ್ಟ ಗುತ್ತತನವಂ ಹಣ್ಣಿ ತಗಹನಿಕ್ಕಿ ಕುಳ್ಳಿರ್ದು ಬೇಡಿಕೊಂಬ ತಪವು ತಾನೇಕೋ? ಮುಟ್ಟಿತ್ತಿಲ್ಲವು ಪವಿತ್ರ ನೋಡಿತ್ತಿಲ್ಲವು ಪಾವನ ನಿರ್ಮಳನೆಂಬ ನಿರ್ಮಯಲಿಂಗ ಸದಾ ದಾಸೋಹದೊಳಿರುತ್ತ ಸೂತಕ ಬಡದೆಂದು ಜಡ ಕ್ರಿಯೆದಿಂದೆ ಭಾಷೆಗೊಡಲ ಗುರಿಮಾಡಿ ಮೀಸಲಾಗಿಹ ಪ್ರಾಣವನಿರಿದುಕೊಂಡು ಸಾವ ಸಂಕಲ್ಪ ವ್ರತ ನೇಮಂಗಳವೇಕೋ? ಪೂಜೆ ಪೂಜಿಸುವನು ಪೂಜಿಸಿಕೊಂಬುವನು ತಾನೆ ಎಂದು ತಿಳಿದು ಈ ತ್ರಿವಿಧ ಪೂಜೆಯ ಸೂತ್ರಾತ್ಮಕ ತಾನೆ ಎಂಬ ಹವಣನರಿದು ಆ ಅರುಹಿಂಗೆ ತಾನೆ ಆಶ್ರಯವಾಗಿರಲು ಇದನರಿಯದೆ ನಾನಾ ಪರಿಯಿಂದೆ ಒಲಿಸಿ ಮೆಚ್ಚಿಸಿ ಸ್ವರ್ಗದ ಭೋಗವೆಂಬ ಧರ್ಮಕರ್ಮಂಗಳನುಂಬ ಕೈಕೂಲಿಕಾರನಂತೆ ಮಾಡುವ ಅರ್ಚನೆಯ ಪೂಜೆಯ ಆಯಸವೇಕೋ? ಜಪ ತಪ ಜಾಡ್ಯದ ಜಂಜಡದವನಲ್ಲ. ಧ್ಯಾನ ಮೌನದಿಂದೆ ಬಿಗಿದು ಬಿರ್‍ರನೆ ಬೆರತಿಹ ಬಂಧನದವನಲ್ಲ. ನೆವದಿಂದ ತದ್ದಿನವ ಮಾಡಬೇಕೆಂಬ ಉದ್ದೇಶಿಯಲ್ಲ. ವರುಷಕ್ಕೊಂದು ತಿಥಿ ಎಂದು ಮಾಡುವ ಕೀರ್ತಿ ವಾರ್ತೆಗೆ ಮುಯ್ಯಾನುವವನಲ್ಲ. ಮಿಕ್ಕ ಕಿರುಕುಳ ಹಾದಿಯುವನಲ್ಲ. ಸಹಜ ಸಂತೋಷದಿ ಹಾಲಸಾಗರದೊಳಗಿರ್ದ್ದು ವಾಳಿಯಾವಿನಬೆನ್ನ ಹರಿವವನಲ್ಲ. ಸರ್ವಾಂಗದೊಳ್ತನ್ಮಯವಾಗಿರಲು ಭಿನ್ನವೇಕೋ? ಪರುಷದ ಗಿರಿ ಕೈಸಾರಿರ್ದು ನಾಡ ಮಣ್ಣ ಕೂಡಲಿಕ್ಕಿ ತೊಳೆದು ಹಾಗವ ಸಾಧಿಸಬೇಕೆಂಬ ಧಾವತಿಯುವನಲ್ಲ. ಅತ್ಯಂತ ಸ್ನೇಹದಿಂದ ಮನಕ್ಕೆ ಬಂದು ನೆನಹಿನಿಂದೆ ನೆಲೆಗೊಂಡಿರಲು ಆಹಾ ಎನ್ನ ಪುಣ್ಯವೇ ಆಹಾ ಎನ್ನ ಭಾಗ್ಯವೇ ಎಂದು ಕರ ಮನ ಭಾವ

ತುಂಬಿ ಕ್ರೀಡಿಸುವ ರತಿ ಸುಖವ ಬಿಟ್ಟು ಬರಿ ನೆನಹಿನ ಆಸೆ ಎಂಬ ಚಿಂತೆಯಿಂದೆ ತೊಳಲಿ ಬಳಲುವ ಮರಹಿನಲ್ಲಿಯು ತಂತ್ರಿಗಳಂತೆ ಭಿನ್ನವಿಟ್ಟು ಕಂಡಿಹೆನೆಂದು ಆಸೆ ಬಡುವವನಲ್ಲ. ಮತ್ತೆ ಕೆಲವು ಮತದವರಂತೆ ಕಂಡಿಹೆನೆಂದು ತೆರಹುಗೆಟ್ಟು ನುಡಿವವನಲ್ಲ. ಅರಸಲುಂಟೇ ? ಬಯಸಲುಂಟೇ ? ತಾನಲ್ಲದೆ ಅನ್ಯವಿಲ್ಲೆಂದು ಅಹಂಕರಿಸಿ ಬೆಳಿವವನಲ್ಲ. ಮತ್ತೆ ಉಳಿದ ಕಾಕುಮತದ ಸೊಗಸಿಗೆಳಸಿ ಕಾಮುಕನಾಗಿ ಹೊಲಬುಗೆಡುವವನಲ್ಲ. ಆಹುದಾದುದ ಹುಸಿ ಮಾಡಿಮತ್ತೊಂಟೆಂದು ಭೇದವ ಮಾಡುವ ದುಷ್ಟ ದುರ್ಮತಿಗಳ ಪರಿಯಲ್ಲ. ಭಿನ್ನವಿಟ್ಟು ಮಾಡಿಹೆನೆಂಬ ಸಂಸಾರ ದಂದುಗದವನಲ್ಲ. ಕೂಡಲೊಲ್ಲೆನೆಂಬ ವಿಕಳವಾವರಿಸಿದ ವೈರಾಗ್ಯದವನಲ್ಲ. ರತಿಯುಳ್ಳ ಸತಿಯೊಡನೆ ಸಂಯೋಗವ ಮಾಡುವಂತೆ ಕೂಡುವ ಶಿವಸುಖದಲ್ಲಿ, ಆ ಶಿವಸುಖವನಗಲಿಸುವ ಕಷ್ಟ ದುಃಖಕ್ಕೊಲಿವವನಲ್ಲ. ಋತುವರಿತ ಸತಿಯ ಕೂಟದಂತೆ ಅಗಲಿಕೆ ಇಲ್ಲದ ರತಿಯ ಸುಖ ಸಂಯೋಗದ ನೆಲೆಯನರಿದಾತಂಗೆ ಬೇರುಂಟೆ? ಇಲ್ಲವಾಗಿ, ಮಾಡುವಾತನು ತಾನೆ, ಮಾಡಿಸಿಕೊಂಬಾತನು ತಾನೆಯಾಗಿ, ಸೋಹ ದಾಸೋಹ ತಾನೆ ಎಂದು ಮಾಡುವ ಮಾಟವೆಲ್ಲವು ತಾನೆ ಬೇರೆಂದೆನ್ನದೆ, ಅದೆಂತೆಂದೊಡೆ ದಾತೃ ಭೋಕ್ತೃ ಶಿವನೊಬ್ಬನೆಯಲ್ಲದೆ ಬೇರೆ ತಮ ತಮಗೆ ಒಡೆತನ ಉಂಟೆ? ಇಲ್ಲವಾಗಿ. ಅನಾದಿ ಪರಶಿವ ತಾನೆ ಮಾಡುವ ಮಾಟವೆಲ್ಲವು ಸಟೆ ಇಲ್ಲದೆ ದಿಟ ಘಟಿಸಿ ಸ್ವಯವಾಗಿ ನಿಂದು ನಿರಾಶೆಯ ಕುಳದನುವನರಿದು, ನಿಜಗೊಂಡ ನಿಲವ ಪ್ರಮಾಣಿಸಿಕೊಂಡು, ಮಾಡಬೇಕೆಂದು ದ್ರವ್ಯವ ಕಲ್ಪಿಸಿ ಕೊಟ್ಟವರಾರೋ? ಮಾಡಬೇಕೆಂಬರಿವ ಕಣ್ದೆರದವರಾರೋ? ಮಾಡಬೇಕೆಂದು, ನೆನವ ಚೈತನ್ಯವಾದ ಪ್ರಾಣವ ತಂದಿರಿಸಿದವರಾರೋ? ಮಾಡಬೇಕೆಂಬ ಮಾಡಿಹೆನೆಂಬ ಮಾಡುವ ಇವನೆಲ್ಲವನು ಅಳವಡಿಸಿಕೊಂಡಿಹ ಕಾಯವ ರೂಪಿಸಿದವರಾರೋ? ಆದಿಯಿಂದ ನಡಿಸಿ ನುಡಿಸಿ ರೂಪಿಸಿ ಪ್ರಭಾವಿಸಿ, ವ್ಯಾಪಾರಕ್ಕೆ ತಂದವರಾರೋ? ಬೇರೆ ಹೊರವಳಿಯಿಂದೆ ನಾಮವಿಡಿದು ಪ್ರತಿಜ್ಞೆಯ ಕೈಕೊಂಡು, ಇಲ್ಲದುದನುಂಟು ಮಾಡಿ ಪಡೆದು ಸಾಧಿಸಿಹೆನೆಂಬ ಬಯಲ ಸಂಭ್ರಮದಾಯಸವ ನೋಡಿರೆ. ಆ ಮಾಯಾಭ್ರಮೆಯು ತಲೆಗೇರಿ ಉಬ್ಬುಬ್ಬಿ ಹರಿದಾಡುವ ಅವಿಚಾರದ ಮನದ ಮರವೆಯ ಬಲೆಯ ವಿವರದ ಪರಿಯ ನೋಡಾ! ಪರಶಿವನು ತನ್ನ ಲೀಲಾವಿನೋದಕ್ಕೆ ಸಕಲವೆಲ್ಲವನು ರೂಪಿಸಿ ಆಗು ಮಾಡಿ ತೋರಲು ಎಲ್ಲವು ಎನ್ನಿಂ

ಭೋ. ಷ. ಶರಣಹಿಡಿವ ಮಣ್ಣುಚಿಹ್ನ।
ಶರಣನುಡಿದನುಡಿಯು ಪ್ರಣವ।
ಶರಣನಡೆದನಡೆಯು ಮೋಕ್ಷಪಥವುಲೋಕಕೆ॥
ಶರಣಕುಡಿದ ಜಲವುತೀರ್ಥ
ಶರಣನೆಡೆಯು ಸುಪ್ರಸಾದ।
ಶರಣನಿರ್ದ ಸ್ಥಲವು ಪುಣ್ಯಕ್ಷೇತ್ರವಪ್ಪುದು॥

ಶರಣನ ಸಂಬಂಧವಾಗಿ ಶ್ರೀಬಸವಣ್ಣನವರು ಹೇಳಿರುವದೇನಂದರೆ "ಶರಣ ನಿದ್ರೆಗೈದರೆ ಜಪಕಾಣಿರೋ, ಶರಣನೆದ್ದು ಕುಳಿತರೆ ಶಿವರಾತ್ರಿ ಕಾಣಿರೋ, ಶರಣ ನಡೆದುದೇ ಪಾವನ ಕಾಣಿರೋ, ಶರಣ ನುಡಿದುದೇ ಶಿವತತ್ವ ಕಾಣಿರೋ, ಕೂಡಲ ಸಂಗನ ಶರಣನ ಕಾಯವೇ ಕೈಲಾಸ ಕಾಣಿರೋ." ನುಡಿದಂತೆ ನಡೆ ಈ ಜನ್ಮಕಡೆ, ಯೆಂಬೀ ನಾಣ್ನುಡಿಯು ಸತ್ಯಾಂಶವು ಶರಣ ಸ್ಥಲದಲ್ಲಿ ಕಂಡುಬರುತ್ತದೆ. ಮೊದಲು ಮನುಷ್ಯನಲ್ಲಿ ವಿಚಾರ ಉದ್ಭವಿಸುವದು. ಆಮೇಲೆ ಆತನ ಬಾಯಿಯಿಂದ ಶಬ್ದಗಳು ಹೊರಬೀಳುವವು. ಮುಂದೆ ಆತನು ಆ ಶಬ್ದಗಳಂತೆ ಆಚರಿಸುವನು. ಶರಣನು ಆಚಾರ ವಿಚಾರ ಉಚ್ಚಾರಗಳಲ್ಲಿ ಒಂದಾಗಿ ಲೋಕಕ್ಕೆ ಮಾರ್ಗದರ್ಶಕನಾಗಿರುವನು. 'ಮನಸ್ಯೇಕಂ ವಚಸ್ಯೇಕಂ ಕರ್ಮಣ್ಯೇಕಂ ಮಹಾತ್ಮನಾಂ'। ಎಂಬ ನೀತಿಯ ವಾಕ್ಯವಿರುವದಿಲ್ಲವೇ?

ಶರಣನು ದ್ವಂದ್ವಾತೀತನು. ಆತನಿಗೆ ಸುಖದುಃಖ, ಶೀತೋಷ್ಣ, ಸ್ತುತಿನಿಂದೆ ಮುಂತಾದವುಗಳ ಬಾಧೆಯಾಗುವದಿಲ್ಲ. 'ಸುಖದುಃಖೇ ಸಮೇ ಕೃತ್ವಾ ಲಾಭಾಲಾಭೌ ಜಯಾಜಯೌ' ಎಂಬೀ ಗೀತಾವಾಕ್ಯದಂತೆ ಆತನ ನಡೆಯಿರುತ್ತದೆ. ನಮಗೆ ಸಂಪತ್ತು ಬಂದರೆ ಹಿಗ್ಗುವೆವು. ಅದು ನಷ್ಟವಾದರೆ ವಿಷಾದಬಡುವೆವು. ಆದರೆ ಶರಣನು ಸಂಪತ್ತುಬರಲಿ ಅಥವಾ ಹೋಗಲಿ ತನ್ನಲ್ಲಿರುವ ಲೀಲಾನಂದವನ್ನೆಂದಿಗೂ ಕಳೆದುಕೊಳ್ಳುವದಿಲ್ಲ. ಶರಣರು ಕಾಷ್ಠಲೋಷ್ಠಗಳನ್ನು ಸಮನಾಗಿ ತಿಳಿಯುವರು. ತುಕಾರಾಮ ಸಾಧುವು ತನ್ನೆದುರಿಗೆ ಬಂಗಾರದ ಗಟ್ಟಿಯು ಬಿದ್ದಿರಲು ಅದನ್ನು ಮಣ್ಣು ಹೆಂಟಿಯೋಪಾದಿಯಲ್ಲಿ ಭಾವಿಸಿ ಒದೆದು ಮುಂದಕ್ಕೆ ಸಾಗಲಿಲ್ಲವೇ? ಶ್ರೀಬಸವಣ್ಣನವರು ಮನೆಯಲ್ಲಿ ಸುವರ್ಣನಾಣ್ಯಗಳನ್ನಿರಿಸಿರಲು ಮೋಳಿಗೆಯ ಮಾರಯ್ಯನವರು ಆ ನಾಣ್ಯಗಳನ್ನೆಲ್ಲ ಕಸಬರಿಗೆಯಿಂದ ಉಡುಗಿ ಬಿಡಲಿಲ್ಲವೇ? ಮತ್ತು ತಮ್ಮ ಕಟ್ಟಿಗೆಯ ಹೊರೆಯನ್ನು ಬಿಚ್ಚಿ ತಾನು

ಚಿನ್ನಹ ಮಾಡಿಕೊಂಡ ಜಂಗಮ ಮೂರ್ತಿಗಳಿಗೆ ಒಂದೊಂದು ಕಟ್ಟಿಗೆಯನ್ನು ಕೊಡಲು ಅವು ಸುವರ್ಣದವಾಗಲಿಲ್ಲವೇ? ಶರಣರು ಕೊಟ್ಟ ಕಟ್ಟಿಗೆಯು ನಿಜವಾಗಿಯೂ ಕಟ್ಟಿಗೆಯೇ ಆಗಿದ್ದರೂ ಗ್ರಾಹಕರಿಗೆ ಅದು ಸುವರ್ಣವಾಗಿಯೇ ತೋರುತ್ತದೆ. ಶರಣರು ಚಿನ್ನವನ್ನು ಮಣ್ಣಿಗಿಂತ ಕಡೆಯಾಗಿ ಕಾಣುತ್ತಾರೆ. ಅಂತೆಯೇ ಅವರು ಚಿನ್ನದಂತೆ ಜಗದಲ್ಲಿ ಬೆಳಗುತ್ತಾರೆ. 'ಆಶೆಯೇ ದಾಸತ್ವ. ನಿರಾಶೆಯೇ ಈಶತ್ವ.' ಶರಣರು ನಿರಾಶೆ ನಿರ್ಭಯವುಳ್ಳವರು.

ಶರಣಸತಿ ಲಿಂಗಪತಿಯೆಂಬದು ನಾಣ್ನುಡಿಯಾಗಿದೆ. ಶಿವ ಮತ್ತು ಶರಣನಲ್ಲಿ ಸತಿಪತಿ ಭಾವವಿರುತ್ತದೆ. ನಿಜವಾದ ಸತಿಯು ಪರಮ ಪತಿವ್ರತೆಯಾಗಿ ನಿರಂತರ ತನ್ನ ಪತಿಯ ಧ್ಯಾನಸೇವೆಗಳಲ್ಲಿ ಹೇಗೆ ನಿರತಳಾಗಿರುವಳೋ ಹಾಗೆಯೇ ಶರಣನು ಇಷ್ಟಲಿಂಗದಲ್ಲಿ ಸದೈವ ನಿರತನಾಗಿರುವನು. ಗಂಡಹೆಂಡಿರು ಕೂಡಿ ಸೊಗಸಾಗಿ ವಿಷಯ ಸುಖವನ್ನು ಅನುಭವಿಸುವಂತೆ ಶರಣನು ಲಿಂಗದೊಡನೆ ಬೆರೆದು ಆಧ್ಯಾತ್ಮಿಕಾನಂದವನ್ನು ಪಡೆಯುವನು. ಸತಿಪತಿಗಳು ಕೂಡಿದಾಗ ಕೆಲವು ನಿಮಿಷಗಳವರೆಗೆ ತಮ್ಮನ್ನು ತಾವು ಮರೆದು ಚಿಂತಾತುರತೆಗಳನ್ನು ಮನಸ್ಸಿನಲ್ಲಿ ತಾರದೆ ಹೇಗೆ ಅಮಳಾನಂದದಿಂದ ನಲಿಯುವರೋ ಹಾಗೆಯೇ ಶರಣನು ಲಿಂಗಸಂಗಿಯಾಗಿ ತನ್ನನ್ನು ಮರೆದು ಲಿಂಗಪತಿಯೊಡನೆ ತುಂಗಮೋಕ್ಷದ ಶೃಂಗಸುಖವನ್ನೇರಿ ವಿರಾಜಿಸುವನು. ಶರಣನು ಈ ಜಗತ್ತಿನಲ್ಲಿ ಸಾಮಾನ್ಯರಂತೆ ವ್ಯವಹರಿಸುತ್ತಿದ್ದರೂ ಆತನ ಆಚಾರ ವಿಚಾರಗಳೆಲ್ಲವೂ ಪರಮಾತ್ಮನಲ್ಲಿ ಲೀನವಾಗಿರುತ್ತವೆ. ಲಿಂಗಸುಖವೇ ತನ್ನ ಸುಖವಲ್ಲದೆ ಪಂಚೇಂದ್ರಿಯಗಳ ಸುಖದ ಕಡೆಗೆ ಆತನು ಎಳ್ಳಷ್ಟು ಸಹ ಲಕ್ಷ್ಯಕೊಡಲಾರನು. 'ಲಿಂಗವೇಪತಿಯಾಗಿ ತಾನು ಸತಿಯೆಂಬ ಭಾವದಲ್ಲಿ ಆಚರಿಸಿ ಪಂಚೇಂದ್ರಿಯ ಸುಖಗಳ ಬಯಸದಿಹುದೀಗ ಶರಣಸ್ಥಲ ನೋಡಾ ಅಪ್ರಮಾಣ ಕೂಡಲ ಸಂಗಮದೇವಾ." ಎಂದು ವಚನಕಾರನು ಹೇಳಿದ್ದಾನೆ.

ಶರಣನು ಲಿಂಗದಲ್ಲಿಯೇ ಮನಮಗ್ನನಾಗಿ ತಾನೂ ಸಾಕ್ಷಾತ್ ಲಿಂಗವೇ ಆಗುವ ಹವಣಿಕೆಯಲ್ಲಿರುತ್ತಾನೆ. ಕುರುಡಿಕುಠಾರವೆಂಬ ಕೀಡೆಯು ಪತಂಗವನ್ನು ನೋಡಿ ನೋಡಿ ಒಂದು ದಿನ ತಾನೂ ಏತಾಂಗವಾಗೇ ತೀರುವದು. ಆದುದರಿಂದ ಯಾರು ಒಂದು ವಸ್ತುವಿನಲ್ಲಿ ಅತೀವ

ಲೀನರಾಗುವರೋ ಆ ವಸ್ತುವೇ ತಾವಾಗುವರೆಂಬದು ಸೃಷ್ಟಿಯ ನೇಮವು. ಒಬ್ಬ ಕ್ರೈಸ್ತಯೋಗಿಯು ಕ್ರಿಸ್ತನನ್ನು ನೆನೆನೆನೆದು ನೋಡುವವರಿಗೆ ತಾನೂ ಮೂರ್ತಿಮಂತ ಕ್ರಿಸ್ತನಂತೆಯೇ ಕಾಣುತ್ತಿದ್ದನಂತೆ. ಎಷ್ಟೋ ಜನ ಗಂಡ ಹೆಂಡಿರು ಪರಸ್ಪರ ಪ್ರೇಮಾಸಕ್ತರಾಗಿರುವುದರಿಂದ ಅವರ ಮುಖಮುದ್ರೆಯು ವಿಶೇಷವಾಗಿ ಹೋಲುತ್ತಿರುತ್ತದೆ. ಯಾವುದಾದರೊಂದು ವಸ್ತುವಿನಲ್ಲಿ ನಾವು ನಿರ್ಮಲವಾದ ಪ್ರೇಮವನ್ನಿರಿಸಿದ್ದಾದರೆ ಆ ಪ್ರೇಮವು ನಮಗೆ ಆ ವಸ್ತುವಿನ ರೂಪನ್ನುಂಟುಮಾಡಿಕೊಡುತ್ತದೆ. ಪ್ರೇಮದಲ್ಲಿ ಅಂಥ ವಿಲಕ್ಷಣವಾದ ಶಕ್ತಿಯುಂಟು. ಶರಣನಿಗೆ ಲಿಂಗದಲ್ಲಿ ದೃಢತರವಾದ ಪ್ರೇಮವಿರುತ್ತದೆ. ಸಂಯೋಗದಿಂದ ಪ್ರೇಮವು ಹೆಚ್ಚುತ್ತದೆ. ವಿಯೋಗದಿಂದ ಕ್ಷೀಣಾಗುತ್ತದೆ. ಶರಣನಿಗೆ ಲಿಂಗದಲ್ಲಿ ನಿರುಪಮವಾದ ಪ್ರೇಮವಿರುತ್ತದೆ. ಪ್ರೇಮವೆಂದರೆ ಹೃದಯದಿಂದ ಹೊರಸೂಸಿ ಹರಿಯುವ ಪ್ರವಾಹವು. ಶರಣನಲ್ಲಿ ಲಿಂಗದ ವಿಷಯವಾಗಿ ಪ್ರೇಮವು ಹೊರಸೂಸಿ ಹರಿಯುತ್ತಿರುತ್ತದೆ. ಪ್ರೇಮದಲ್ಲಿ ಮಾಧುರ್ಯವಿರುತ್ತದೆ. ಗಂಡಹೆಂಡರಿಗೆ ಅಂಥ ಮಧುರತರವಾದ ಪ್ರೇಮವೇ ಭೂಷಣವು. ಪ್ರೇಮಿಗಳ ಸಿಟ್ಟನಲ್ಲಿಯೂ ಕೂಡ ಮಾಧುರ್ಯವೂ ಸೌಂದರ್ಯವೂ ಕೂಡಿರುತ್ತದೆಂದು ಕೆಳಗಿನ ಹಾಡಿನ ಮೇಲಿಂದ ತಿಳಿಯುತ್ತದೆ. "ಗಂಡಹೆಂಡಿರ ಜಗಳ ಗಂಧ ತೀಡಿದ ಹಾಂಗ। ಲಿಂಗಕ್ಕೆ ನೀರ ಎರೆದ್ಹಾಂಗ। ಲಿಂಗಕ ನೀರ ಎರದ್ಹಾಂಗ ಹಿರಿಹೊಳಿಯ ಗಂಗವ್ವ ಸೂಸಿ ಹರಿದ್ಹಾಂಗ॥ ಶರಣನು ಲಿಂಗದ ಬಗ್ಗೆ ಇಂಥ ನಿರ್ಮಳವಾದ ಪ್ರೇಮವುಳ್ಳವನಾಗಿರುತ್ತಾನೆ.

ಶರಣನಿಗೂ ಪ್ರಾಣಲಿಂಗಿಗೂ ನಡುವಿರುವ ಭೇದವೇನು? ಪ್ರಾಣಲಿಂಗಿಯ ಸ್ಥಳವು ಆಧ್ಯಾತ್ಮಿಕೋನ್ನತಿಯ ಛನೆಯ ಸೋಪಾನವು. ಶರಣಸ್ಥಲವು ೫ನೆಯ ಸೋಪಾನವು. ಪ್ರಾಣಲಿಂಗಿಯು ಈ ಜಗತ್ತಿನೊಳಗಿನ ಎಲ್ಲ ಪ್ರಾಣಿಗಳ ಮೇಲೆ ದಯೆಯುಳ್ಳವನಾಗಿರುತ್ತಾನೆ ಮತ್ತು ಅವುಗಳ ಸೇವೆ ಮಾಡಿ ಪರವಸ್ತುವಿನ ಕೃಪೆಗೆ ಪಾತ್ರನಾಗುತ್ತಾನೆ. ಶರಣನು ಇಹಲೋಕದ ಜೀವಿಗಳೊಡನೆ ಸಂಸರ್ಗ ಮಾಡುವದಕ್ಕಿಂತಲೂ ಆ ಪರವಸ್ತುವಿನ ಸಂಸರ್ಗವನ್ನೇ ವಿಶೇಷವಾಗಿ ಹಂಬಲಿಸುವನು. ಇಹವೆಂಬುದು ಪ್ರಾಣಲಿಂಗಿಯ ಸ್ಥಳಕ್ಕೆ ಮುಗಿಯಿತು. ಪ್ರಾಣಲಿಂಗಿಯ ಅಂಗನು (ಜೀವಾತ್ಮನು) ಲಿಂಗ (ಪರಮಾತ್ಮ) ದಿಂದ ದೂರವಾಗಿದ್ದು ಅನಿವಾರ ಪ್ರೇಮಕಟಾಕ್ಷೆಯಿಂದ ಲಿಂಗಮೂರ್ತಿಯನ್ನು ನೋಡುತ್ತ ಕರು

ಣಾಶ್ರುಬಿಂದುಗಳನ್ನು ಸುರಿಸುತ್ತಿರುವನು. ಶರಣನ ಜೀವಾತ್ಮನು ಪರಮಾತ್ಮನೊಡನೆ ಬೆರೆದು ಪರಮ ಸುಖ ಹೊಂದಿ ಲಿಂಗದಿಂದ ಬಿಡುಗಡೆ ಹೊಂದಿ ಸತಿಭಾವದಿಂದ ಪ್ರೀತಿಸುವನು. ಲಿಂಗದಲ್ಲಿ ಬೆರೆಯುವದೂ ಬಿಡುವದೂ ಶರಣಸ್ಥಿತಿಯಲ್ಲಿ ಎಡೆಬಿಡದೆ ನಡೆದಿರುತ್ತವೆ. ಆದರೆ ಮುಂದೆ ಐಕ್ಯಸ್ಥಿತಿಯಲ್ಲಿ ಒಮ್ಮೆ ಬೆರೆದ ಬಳಿಕ ಮರಳಿ ಇಹಕ್ಕೆ ಬಾರನು. ಜೋಕಾಲಿಯು ಜೀಕ ಹೊಡೆದಾಗ ಮೇಲಕ್ಕೇರಿ ಪುನಃ ತಾನಿದ್ದ ಮೆಟ್ಟಿಗೆ ಹೇಗೆ ಬರುತ್ತದೆಯೋ ಹಾಗೆಯೇ ಶರಣನು ಲಿಂಗಗೂಡಿ ಪರಸುಖ ಸುರಿದು ಇಹದಲ್ಲಿ ರಮಿಸುವನು. ಭಾರದ್ವಾಜ ಪಕ್ಷಿಯು ಅಡ್ಡತಿಡ್ಡ ಹಾರಾಡದೆ ಮೇಲಮೇಲಕ್ಕೆ ಹಾರುತ್ತ ಹೋಗಿ ಸರ್‍ರನೆ ಕೆಳಗೆ ಇಳಿಯುವದು. ಇದನ್ನು ನೋಡಿ ವರ್ಡ್ಸ್‌ವರ್ಥನೆಂಬ ಆಂಗ್ಲ ಕವಿಯು ಮಹಾತ್ಮರಾದವರು ಅಡ್ಡದಾರಿ ಹಿಡಿಯದೆ ಊರ್ಧ್ವಗತಿಯಿಂದ ಹೋಗುತ್ತಿರುತ್ತಾರೆ. ಯಾಕಂದರೆ ಮೇಲಿನ ಸ್ವರ್ಗಕ್ಕೂ ಕೆಳಗಿನ ಭೂಮಿಗೂ ನೆಂಟಸ್ತನವುಂಟು. (*The type of the wise who soar but never roam, true to the kindred points of keaven and home*)

ಪ್ರಾಣಲಿಂಗಿಗೆ ಪ್ರಾಣವೇ ಲಿಂಗವಾಗಿದ್ದರೆ ಶರಣನಿಗೆ ಆತ್ಮವೇ ಲಿಂಗವಾಗಿರುತ್ತದೆ. ಪ್ರಾಣವು ಕರುಣಾರಸ ಪರಿಪೂರಿತವಾದುದು. ಆತ್ಮವು ಅರುವಿನ ಅಮಳಜ್ಯೋತಿಯಿಂದ ಪ್ರಕಾಶಿಸುತ್ತಿರುವದು. ಶ್ರೀ ಭಗವದ್ಗೀತೆಯಲ್ಲಿ ಹೇಳಿದ ಸ್ಥಿತಪ್ರಜ್ಞನ ಲಕ್ಷಣಗಳೆಲ್ಲವೂ ಶರಣನಿಗನ್ವಯಿಸುತ್ತವೆ. ಲೋಕಸಂಗ್ರಹ ಕಾರ್ಯಗಳು ಪ್ರಾಣಲಿಂಗಿಗನ್ವಯಿಸುತ್ತವೆ. ಪ್ರಾಣಲಿಂಗಿಗೆ ಪ್ರಕೃತಿಯ ಅಂಶವು ಕೊನೆಯಾಯಿತು. ಶರಣನು ಪ್ರಕೃತಿಪುರುಷ ಇವುಗಳ ನಡುವಿನ ಸ್ಥಿತಿಯವನು. ಶರಣನು ಪ್ರಕೃತಿಯನ್ನು ಬಿಡುತ್ತ ಬಿಡುತ್ತ ಪರಮಾತ್ಮನನ್ನು ಆಶ್ರಯಿಸುವ ಹವಣಿಕೆಯಲ್ಲಿರುವನು. ಪ್ರಾಣಲಿಂಗಿಯು ಅಲ್ಪಸ್ವಲ್ಪ ಮಾನವ ಸೃಷ್ಟಿಗೊಳಪಟ್ಟಿರುತ್ತಾನೆ. ಶರಣನು ಶಿವನ ಸೃಷ್ಟಿಗೊಳಪಟ್ಟವನು. ಪ್ರಾಣಲಿಂಗಿಗೆ ಪ್ರೇಮಬಲವಿದ್ದರೆ ಶರಣನಿಗೆ ಆತ್ಮಬಲವಿರುತ್ತದೆ. ಆ ಆತ್ಮಬಲದಿಂದ ಶರಣನಿಗೆ ಇಡೀ ಜಗತ್ತನ್ನೇ ಅಲ್ಲೋಲ ಕಲ್ಲೋಲ ಮಾಡುವ ಸಾಮರ್ಥ್ಯವಿರುತ್ತದೆ. ಪ್ರಾಣಲಿಂಗಿಯ ಜೀವಕ್ಕೆ ಯಾರಾದರೂ ಹಿಂಸೆಪಡಿಸಿದರೆ ಆತನು ಕಳವಳಪಡುವನು. ಶರಣನು ನಿರ್ಭೀತಿಯಿಂದ ನಗುವನು. ಶರಣನಿಗೆ ಪರ

ಮಾತ್ಮನ ಹೆದರಿಕೆ ಸಹ ಇರುವದಿಲ್ಲ. 'ಶರಣನಾರಾರಿಗೂ ಅಂಜುವವನಲ್ಲ' ಎಂದು ಶ್ರೀ ಬಸವಣ್ಣನವರು ಒಂದು ಸಂದರ್ಭದಲ್ಲಿ ಹೇಳಿದ್ದಾರೆ. ಪ್ರಾಣಲಿಂಗಿಯು ದ್ವೈತನು. ಪರಮಾತ್ಮನೂ ತಾನೂ ಬೇರೆಯೆಂಬೀ ಭಾವದಿಂದ ಆಚರಿಸುವನು. ಶರಣನು ತಾನೂ ಪರಮಾತ್ಮನೂ ಒಂದೇ ಆಗುವ ಪ್ರಯತ್ನದಲ್ಲಿರುವನು.

ಮನುಷ್ಯನ ಅವಯವ ಹಾಗೂ ನಿತ್ಯ ವ್ಯವಹಾರಗಳಲ್ಲಿ ಏನೂ ವ್ಯತ್ಯಾಸ ಕಾಣದಿದ್ದರೂ ಅಂತರಂಗದ ಆಧ್ಯಾತ್ಮಿಕ ವಿಕಾಸದಿಂದ ಒಂದು ಸ್ಥಲದವನು ಮೊದಲಿನ ಸ್ಥಲಕ್ಕಿಂತಲೂ ಹೆಚ್ಚು ಮುಂದರಿವಿರುತ್ತಾನೆ.

---

## ಐಕ್ಯಸ್ಥಲ.

ವಾ. ಷ. ತನ್ನೊಳಗೆ ಪರಸುಖವ ನನ್ನಿಯಿಂಸೇವಿಸುವ
ಸನ್ನುತಾತ್ಮ ಸುಯೋಗಿ ಐಕ್ಯನೆಂದೆನಿಸಿರ್ಪ
ಉನ್ನತದ ಮೋಕ್ಷಶಿಖರವನೇರಿ ತಾ ಪರಮಹಂಸ ಸಾನಂದಿಸುವನು ।

ಎನ್ನಂತರಾತ್ಮ ಪರಮಾತ್ಮನೊಳು ಬೆರೆಯಲ್ಕೆ
ಚೆನ್ನಶ್ರೀಬಸವೇಶ ನೀನೊಲಿದು ಕೈವಲ್ಯ
ಪೊನ್ನತಿಕೆಯನ್ನಿತ್ತು ಸಲುಹೆಂದು ನಿನ್ನಡಿಗೆ ಬಿನ್ನವಿಪೆ ಬಹುಭಕ್ತಿಯಿಂ ॥

'ಅರಿವು ನಿಜದಲ್ಲಿ ಸಮರಸ ಭಾವವನ್ನೈದಿ ನಿರ್ಭಾವ ಪದದೊಳು ನಿಂದ ಭೇದವೇ ಐಕ್ಯಸ್ಥಲ ನೋಡಾ ಗುಹೇಶ್ವರಾ.' ಎಂಬುದಾಗಿ ಶ್ರೀ ಪ್ರಭುದೇವರು ಹೇಳಿದ್ದಾರೆ. ಅರುವಿನಿಂದ ಅಂಗ ಲಿಂಗ ಬೇರೆಯೆಂಬ ಭೇದಭಾವವನ್ನಳಿದು ಅಂಗವೂ ಲಿಂಗವೂ ಒಂದೇ ಎಂಬೀ ಭಾವನೆಯಿಂದ ಲಿಂಗದಲ್ಲಿ ಬೆರೆದು ತಾನೂ ಲಿಂಗರೂಪಾಗಿ ಬೆಳಗುತ್ತಿರುವವನೇ ಐಕ್ಯನು. ಲಿಂಗಾನಂದವೆಂಬ ಸರೋವರದಲ್ಲಿ ಐಕ್ಯನು ತುಂಗಪರಮಹಂಸನಾಗಿ ವಿರಾಜಿಸುವನು. ಯಾರು ಯಾವ ವಸ್ತುವಿನಲ್ಲಿ ಜಾಗ್ರತೆ ಸ್ವಪ್ನ ಸುಷುಪ್ತಿಗಳಲ್ಲಿಯೂ ಕೂಡ ಅನನ್ಯಮನಸ್ಕರಾಗಿರುವರೋ ಅವರು ಪತಂಗ ಕೀಟಕ ನ್ಯಾಯದಂತೆ ತಾವೂ ಮೂರ್ತಿ

ಮಂತ ಆ ವಸ್ತುವೇ ಆಗುವರೆಂಬುದು ಸಿದ್ಧಾಂತದ ಮಾತು. ಅಂಗನು ಲಿಂಗವಲ್ಲಿ ಬೆರೆದು ಲಿಂಗವೇ ಆದಬಳಿಕ ಆತನಲ್ಲಿ ಅಂಗದ ಯಾವ ವಾಸನೆಯೂ ಉಳಿಯುವದಿಲ್ಲ. ಅಂಗದ ವಾಸನೆಯನ್ನುಳಿಸಿಕೊಂಡವರು ಲಿಂಗೈಕ್ಯರಾಗಲಾರರು. ಅಂಥವರು ಪುನಃ ಭವದಲ್ಲಿ ಹುಟ್ಟಿಬರಬೇಕಾಗುತ್ತದೆ. ತಮ್ಮ ವಾಸನೆಯು ಪೂರೈಸಿದ ಬಳಿಕ ಲಿಂಗೈಕ್ಯರಾಗಲು ಸಮರ್ಥರಾಗುತ್ತಾರೆ. ಲಿಂಗೈಕ್ಯನಿಗೆ ಪುನರ್ಜನ್ಮವಿಲ್ಲ. 'ಪುನರಪಿ ಜನನಂ ಪುನರಪಿ ಮರಣಂ ಪುನರಪಿ ಜನನೀ ಜಠರೇ ಶಯನಂ' ಎಂಬೀ ನುಡಿಯು ವಾಸನೆಯುಳ್ಳವರಿಗನ್ವಯಿಸುತ್ತದೆ. ಆದರೆ

'ಅಂತಕಾಲೇಚ ಮಾಮೇವ ಸ್ಮರನ್ಮುಕ್ತ್ವಾಕಲೇವರಂ ।
ಯಃ ಪ್ರಯಾತಿ ಸಮದ್ಭಾವಂ ಯಾತಿ ನಾಸ್ತ್ಯತ್ರ ಸಂಶಯಃ ॥

ಅಂದರೆ ಅಂತ್ಯಕಾಲದಲ್ಲಿ ಕೇವಲ ನನ್ನನ್ನೇ ಸ್ಮರಿಸುತ್ತ ಈ ದೇಹವನ್ನು ಬಿಟ್ಟು ತೆರಳುವವನು ನನ್ನಲ್ಲಿಯೇ ಬೆರೆಯುವನು. ಇದರಲ್ಲಿ ಯಾವ ಸಂದೇಹವೂ ಇಲ್ಲ ಎಂದು ಗೀತೆಯಲ್ಲಿ ಹೇಳಿದೆ. ಅಂದರೆ ವಿಷಯ ವಾಸನೆಯು ಸ್ವಲ್ಪೂ ಇಲ್ಲದೆ ತನ್ನ ವಾಸನೆಯನ್ನೆಲ್ಲ ಸಂಪೂರ್ಣವಾಗಿ ಪರಮಾತ್ಮನಲ್ಲಿಯೇ ಲೀನಗೊಳಿಸಿದ್ದಾದರೆ ಪರಮಾತ್ಮನಲ್ಲಿ ಬೆರೆಯಲು ಅನುಕೂಲವು. ನೂರೆಂಟು ಪ್ರಾಪಂಚಿಕ ಆಶೆಗಳನ್ನಿಟ್ಟುಕೊಂಡು ಸಾಯುವಾಗ 'ಶಿವ ಶಿವಾ' ಎಂದರೆ ಮೋಕ್ಷವಾಗುವದೆಂಬ ಮಾತು ಅಸಂಭವವು. ಮೋಕ್ಷವೇನೂ ಅಷ್ಟು ಸುಲಭವಾದುದಲ್ಲ. ಹಾಗಿದ್ದರೆ ಅದಕ್ಕೆ ಅಷ್ಟು ಪ್ರಾಶಸ್ತ್ಯವು ಪ್ರಾಪ್ತವಾಗುತ್ತಿರಲಿಲ್ಲ. ಹಿಂದಿನ ೫ ಸ್ಥಳಗಳಲ್ಲಿ ಮನುಷ್ಯನು ಅಂಗದ ಗುಣಗಳನ್ನು ಅಳಿಯುತ್ತ ಅಳಿಯುತ್ತ ಅರ್ಥಾತ್ ವಿಷಯ ವಾಸನೆಯನ್ನು ಕಡಿಮೆ ಮಾಡುತ್ತ ಕೊನೆಗೆ ಐಕ್ಯಸ್ಥಲದಲ್ಲಿ ಅಂಗಗುಣಗಳನ್ನು ಸಂಪೂರ್ಣವಾಗಿ ಅಳಿದು ಅಂಗಗುಣ ಸಂಪನ್ನನಾಗುವನು. ಲಿಂಗಗುಣವುಳ್ಳವನಾದವನಿಗೇ ನಾವು ಲಿಂಗೈಕ್ಯನೆಂದೆನ್ನುತ್ತೇವೆ. ಲಿಂಗವೇ ಆದವನು ಪುನಃ ಜೀವನಾಗಲಾರನು. ಜೀವನಿಗೆ ದೇಹದ ವಾಸನೆಯಿರುತ್ತದೆ. ಲಿಂಗೈಕ್ಯನಾದ ಕೂಡಲೆ ಜೀವವೂ ಹೋಗಿಬಿಡುತ್ತದೆ. ಆದುದರಿಂದ 'ಲಿಂಗೈಕ್ಯ' ಈ ಶಬ್ದವು ಮನುಷ್ಯನು ಜೀವಿಸುವಾಗ ಉಪಯೋಗಿಸಲ್ಪಡದೆ ಸತ್ತಾಗ ಮಾತ್ರ ಉಪಯೋಗಿಸಲ್ಪಡುವದು ಸರ್ವಶ್ರುತವಿದೆ. ಇದಲ್ಲದೆ 'ಲಿಂಗೈಕ್ಯ' ಈ ಶಬ್ದವನ್ನು ವಿಷಯವಾಸ

ನೆಯನ್ನು ಸಂಪೂರ್ಣ ನಿರ್ಮೂಲವಾಡಿದಂಥ ಮಹಾಯೋಗಿಗಳ ಅಂತ್ಯ ಕಾಲಕ್ಕಷ್ಟೇ ಉಪಯೋಗಿಸುವರಲ್ಲದೆ ಉಳಿದವರಿಗಾಗಿ ಪ್ರಯೋಗಿಸುವ ದಿಲ್ಲ.

ಅಂಗವು ಲಿಂಗದಲ್ಲಿ ಬೆರೆದಾಗ ಉಂಟಾದ ಸ್ಥಿತಿಯನ್ನು ವರ್ಣಿಸಲು ಯಾರಿಗೂ ಸಾಧ್ಯವಿಲ್ಲ. ಅರಿದೆವೆಂಬುವವರು ಶರಣರು, ಐಕ್ಯರಲ್ಲ. ಶರಣನಿಗೆ ಅರಿವು ಇರುವದರಿಂದ ಕ್ಲುಪ್ತವಾದ ಕಾಲದ ವರೆಗ ಮಾತ್ರ ಲಿಂಗದೊಡನೆ ಬೆರೆದಾಗ ಆತನು ತನಗಾದ ಆನಂದಾತಿರೇಕವನ್ನು ದಿವ್ಯವಾಣಿಯಿಂದ ಹೊರಪಡಿಸಿರಬಹುದು. ಆದುದರಿಂದಲೇ ಪ್ರಭುದೇವರು ಹೇಳಿರುವುದೇನಂದರೆ "ಅರಿದೆವರಿದೆವೆಂಬಿರಯ್ಯಾ. ನೀವು ಅರಿತ ಪರಿ ಎಂತು ಪೇಳಿರೋ? ಅರಿದವರು ಅರಿದೆವೆಂಬರೇ? "........" ಸತ್ತಂಥ ಮನುಷ್ಯನು 'ನಾನು ಸತ್ತಿದ್ದೇನೆ' ಎಂದು ಹೇಳುವದು ಎಷ್ಟು ಅಸಂಗತವಾದದ್ದೋ ಅಷ್ಟೇ ಲಿಂಗೈಕ್ಯನಾದವನು 'ನಾನು ಲಿಂಗದೊಳಗೆ ಬೆರೆದಿವೆನೆಂದು' ಹೇಳುವದು ಅಸಂಗತವಾದುದು. 'ಅರುವಿನ ಸೀಮೆಯ ಮೀರಿದ ಐಕ್ಯಂಗೆ ತಾನು ಬೆರೆದ ಪರಿಯೆಂತು ತಿಳಿವುದಯ್ಯಾ? ಇದು ಅಶಕ್ಯ. ಆದರೆ ಶರಣನು ಸತಿಯಾಗಿ ಪತಿಯಾದ ಲಿಂಗದೊಡನೆ ಸಮರಸ ಹೊಂದಿದಾಗ ತನಗಾದ ಆನಂದವನ್ನು ಈ ಪ್ರಕಾರ ಶಬ್ದಗಳಿಂದ ವರ್ಣಿಸಬಹುದುಃ—

ಭೋ. ಪ. ಹೊರಗೆ ಶಬ್ದ ಶೂನ್ಯವಾಗಿ
ಮಿರುಗುತಿಹುದು ಪ್ರಣವನಾದ
ಮಿರುಪ ಲಿಂಗ ರೂಪವೊಂದೆ ಮಿನುಗುತಿರ್ಪುದು
ಪರಮ ಸುಪ್ರಕಾಶ ಮಿಂಚಿ
ಪರಿಯುತಿಹುದು ಪೂರವಾಗಿ
ವರಸಮಾಧಿಯಲ್ಲಿ ಶರಣ ನಿರತನಾಗಿರೆ॥

ಶರಣನಿಗಾದರೂ ತನಗಾದ ಲಿಂಗಾನಂದವು ಹೀಗೆಯೇ ಇರುವದೆಂದು ನಿರ್ಧಾರವಾಗಿ ಹೇಳಲಿಕ್ಕೆ ಬರುವದಿಲ್ಲ. ಆದರೆ ಬಹಳ ಆನಂದವಾಗಿರಲು ಯಾರಾದರೂ ನಿಮಗೆಷ್ಟು ಆನಂದವಾಯಿತೆಂದು ಕೇಳಿದರೆ 'ಹಾಲು ಸಕ್ಕರೆ ಕುಡಿದಷ್ಟು' ಎಂದು ನಾವು ಹೇಳುವದಿಲ್ಲವೇ? ಆದರೆ ನಿಜವಾಗಿ ನಮ್ಮ ಆನಂದವು ಹಾಲು ಸಕ್ಕರೆ ಕುಡಿದದ್ದರಕ್ಕಿಂತಲೂ ಅಧಿಕವಾಗಿರಬಹುದು. ಆದರೆ ಬಾಯಿಗೆ ಬಂದ ಶಬ್ದಗಳ ಉಪಮೆಯನ್ನು

ಕೊಟ್ಟು ನಮ್ಮ ಆನಂದವನ್ನು ಮೂರ್ತಿಗೊಳಿಸುವೆವಲ್ಲವೇ? ಅದೇ ಪ್ರಕಾರ ಶರಣಸ್ಥಿತಿಯಲ್ಲಿದ್ದ ಮನುಷ್ಯನು ತಾನು ಲಿಂಗದೊಡನೆ ಸಂಗ ಮಾಡಿದಾಗ ತನಗಾದ ವಿಮಲಾನಂದವನ್ನು ಬೇರೆ ಬೇರೆ ಉಪಮೆಗಳಿಂದ ಹೇಳಿರುವನಲ್ಲದೆ ಅದೇ ನಿಜವಾದದ್ದೆಂದು ತಿಳಿಯಬಾರದು. ಆದರೆ ನಾವು ತಿಳಿದುಕೊಳ್ಳತಕ್ಕ ವಿಷಯವಿಷ್ಟೇ. ಏನಂದರೆ ಶರಣನು ತನಗಾದ ಆನಂದವನ್ನು ಹೇಳಬಲ್ಲನು, ಐಕ್ಯನು ಹೇಳುವದು ಅಸಂಭವ.

ಅಂಗವು ಲಿಂಗದಲ್ಲಿ ಐಕ್ಯವಾಗುವದೆಂಬುದರ ಅರ್ಥವೇನು? ಅಂಗವು (ಜೀವಾತ್ಮನು) ಲಿಂಗದಲ್ಲಿ (ಪರಮಾತ್ಮನಲ್ಲಿ) ಬೆರೆಯುವದು. ಅರ್ಥಾತ್ ಲಿಂಗವೇ ತಾನಾಗುವದು. ಬೆರೆಯುವ ಪರಿಯನ್ನು ಶಿವಶರಣರು ಬೇರೆ ಬೇರೆ ಉಪಮೆಗಳಿಂದ ತಿಳಿಸಿರುವರು. ನೀರಿನಲ್ಲಿ ಲವಣ ಬೆರೆದಂತೆಯೂ, ಕ್ಷೀರದಲ್ಲಿ ಸವಿಯು ಕೂಡಿದಂತೆಯೂ, ದೀಪದಲ್ಲಿ ಜ್ಯೋತಿಯು ಅಡಗಿರುವಂತೆಯೂ, ನೀರಿನಲ್ಲಿ ನೀರು ಕೂಡಿದಂತೆಯೂ, ಅಂಗನು ಲಿಂಗದಲ್ಲಿ ಬೆರೆಯುವನು. ಈ ಮೊದಲಾದ ರೀತಿಯಲ್ಲಿ ಹೇಳಿದ್ದಾರೆ. 'ವಾರಿಯ ಕಲ್ಲು ವಾರಿಯ ಬೆರೆದಂತೆ ಉಪ್ಪಿನ ಪಟ್ಟಣ ಉದಕದೊಳ್ ಬಯಚಿಟ್ಟಂತೆ ಚನ್ನಮಲ್ಲಿಕಾರ್ಜುನನಲ್ಲಿ ಬೆರೆತು ನಿರ್ವಯಲಾದಳು ಅಕ್ಕಮಹಾದೇವಿ ಎಂಬುದಾಗಿಯೂ, 'ಬಯಲು ಬಯಲು ಕೂಡಿದಂತೆ, ಮಾತು ಮಾತ ಕಲಿತಂತೆ, ಜ್ಯೋತಿ ಜ್ಯೋತಿಯೊಂವಾದಂತೆ ನಿಮ್ಮೊಳೊಡೆವೆರೆದ ನಿಜೈಕ್ಯನ ಕುರುಹು ಎಂತುಟಯ್ಯ ಅಖಂಡೇಶ್ವರಾ, ಎಂಬುದಾಗಿಯೂ ಶಿವಶರಣರು ಅಪ್ಪಣೆ ಕೊಡಿಸಿದ್ದಾರೆ. ಏನೇ ಇರಲಿ, ಐಕ್ಯನೆಂದರೆ ಜೀವಾತ್ಮನು. (ಅಂಗನು) ಕೇವಲ ಪರಮಾತ್ಮನೇ (ಲಿಂಗನೇ) ಆಗುವದು. ಇಷ್ಟು ಹೇಳಿದರೆ ಸಾಕು. ಇದಕ್ಕೇ ಕೈವಲ್ಯ ಮೋಕ್ಷವೆನ್ನುವರು. ವೀರಶೈವರು ಕೈವಲ್ಯ ಮೋಕ್ಷವನ್ನೇ ಮಾನಿಸುತ್ತಾರೆ. ಎಳ್ಳನ್ನು ಅಕ್ಕಿಯಲ್ಲಿ ಬೆಳಸಿದರೆ ಬೆರೆತದ್ದೇನೋ ನಿಜ. ಆದರೆ ಎಳ್ಳು ಬೇರೆ, ಅಕ್ಕಿ ಬೇರೆ. ಇದಕ್ಕೆ ತಿಲತಂಡುಲನ್ಯಾಯವೆನ್ನುವರು. ಇದು ನಿಜವಾದ ಲಿಂಗೈಕ್ಯದ ಉಪಮೆಯಲ್ಲ. ದ್ವೈತಧರ್ಮ ಪ್ರತಿಪಾದನೆಯು. ನೀರಿನಲ್ಲಿ ಲವಣ ಬೆರೆದರೆ ಲವಣವೇನೋ ನೀರಾಗುವದು ನಿಜ. ಆದರೆ ನೀರಿಗೆ ಲವಣದ ರುಚಿಯುಂಟಾಗಿರುವದರಿಂದ ಈ ಉಪಮೆ ಕೊಟ್ಟರೆ ಜೀವಾತ್ಮನು ತನ್ನ ಅಂಶವನ್ನು ಪರಮಾತ್ಮನಲ್ಲುಳಿಸಿದಂತಾಗುತ್ತದೆ. ಈ ಉಪಮೆಯೂ ದೋಷಯುಕ್ತವಾದದ್ದು. ಹಾಲಿನಲ್ಲಿ ನೀರು ಕೂಡಿದರೆ

ನೀರಾದರೂ ಹಾಲಿನಂತೆಯೇ ಕಾಂಬುವದೇನೋ ನಿಜ. ಆದರೆ ನೀರು ಕೂಡಿದ ಹಾಲು ನೀರಲ್ಲ; ಹಾಲಲ್ಲ. ಮೋಸದ ಹಾಲು ಹಂಸದ ಮುಂದಿರಿಸಿದರೆ ನೀರನ್ನು ಬಿಟ್ಟು ಹಾಲನ್ನಷ್ಟೇ ಸ್ವೀಕರಿಸುವದು ಜೀವಾತ್ಮ ಪರಮಾತ್ಮರ ಸಮರಸವು ಈ ಪ್ರಕಾರ ಖೊಟ್ಟಿತನದ್ದಾಗಿರಕೂಡದು. ಆದರೆ ಅಖಂಡೇಶ್ವರರು ಹೇಳಿದಂತೆ ಬಯಲು ಬಯಲನ್ನು ಕೂಡುವದು ಜ್ಯೋತಿಯು ಜ್ಯೋತಿಯೊಳಗೆ ಕೂಡುವದು, ಲಿಂಗಾಂಗ ಸಮರಸಕ್ಕೆ ಸಮಂಜಸವಾದ ಉಪಮೆಗಳಾಗುವವು. 'ಲಿಂಗೈಕ್ಯ' ಎಂದರೆ ಸ್ಥಾವರಲಿಂಗದಲ್ಲಿ ಈ ಜಡದೇಹ ಸಹಿತವಾಗಿ ಮುಳುಗುವದೆಂದು ಕೆಲವರು ತಿಳಿದಿರುತ್ತಾರೆ. ಇದು ಶುದ್ಧ ತಪ್ಪು. ಶಿಲೆಯಲ್ಲಿ ಮನುಷ್ಯನು ಹುಟ್ಟುತ್ತಾನೆಂಬದು ಎಷ್ಟು ಹುಚ್ಚುತನವೋ ಅಷ್ಟೇ ಅದರಲ್ಲಿ ಐಕ್ಯನಾಗುತ್ತಾನೆಂಬದೂ ನಗೆಗೇಡು. ಹಾಗೆ ಪ್ರತಿಪಾದಿಸುವದೂ ಧರ್ಮಕ್ಕೆ ಕುಂದು. 'ಐಕ್ಯನಾದರೆ ಬಯಲು ಬಯಲಾಗಿರಬೇಕು, ಎಂದು ಶ್ರೀ ಚನ್ನಬಸವಣ್ಣನವರು ಹೇಳಿದ್ದಾರೆ. 'ಕ್ಷೀರದೊಳಗಣ ಘೃತದಂತೆ, ತಿಲದೊಳಗಣ ತೈಲದಂತೆ ಪುಷ್ಪದೊಳಗಣ ಪರಿಮಳದಂತೆ ಉಪ್ಪು ಉದಕ (ಸಮುದ್ರದ ನೀರು) ವ ಕೂಡಿದಂತೆ ಮನಲಿಂಗದಲ್ಲಿ ಲೀಯವಾಗಿಹುದೀಗ ಐಕ್ಯಸ್ಥಲ ನೋಡಾ ಕೂಡಲ ಸಂಗಮದೇವಾ." ಎಂಬುದಾಗಿ ಶ್ರೀಬಸವಣ್ಣನವರು ಅಪ್ಪಣೆ ಕೊಡಿಸಿದ್ದಾರೆ.

ಲಿಂಗೈಕ್ಯನಿಗೆ ಪುನರ್ಜನ್ಮವಿಲ್ಲ. ಶಿವನೇ ತಾನಾದ ಬಳಿಕ ಭವಕ್ಕೇಕೆ ಬರುವನು? ಜೀವಾತ್ಮನು ತನ್ನ ವಾಸನೆಯ ಮೂಲಕ ಆಯಾಯ ಜನ್ಮಗಳನ್ನು ಧರಿಸುತ್ತಾನೆ. ನಾವು ಪೂರ್ವ ಜನ್ಮದಲ್ಲಿ ಯಾವ ವಾಸನೆಯನ್ನಿಟ್ಟುಕೊಂಡು ಪಾಪಪುಣ್ಯಗಳನ್ನಾಚರಿಸಿರುವೆವೋ ಅದಕ್ಕನುಗುಣವಾಗಿ ಈಗ ಜನ್ಮ ತಾಳಿದ್ದೇವೆ. ಇನ್ನು ಮುಂದೆ ನಾವು ಶಿವಪಥವನೇರುವದಾಗಲಿ, ಭವಕ್ಕೆ ಬರುವದಾಗಲಿ ನಮ್ಮ ಕೈಯ್ಯೊಳಗೇ ಇರುತ್ತದೆ. ನಾವು ನಮ್ಮಲ್ಲಿರುವ ವಿಷಯವಾಸನೆಯನ್ನು ಕ್ಷೀಣಿಸುತ್ತ ಹೋದರೆ ನಿಶ್ಚಯವಾಗಿಯೂ ಲಿಂಗದಲ್ಲಿ ಬೆರೆಯುತ್ತೇವೆ. ಆದರೆ ವಾಸನೆಯನ್ನು ಬೆಳೆಸುತ್ತ ಹೋದಂತೆ ನಮಗೆ ಭವಕ್ಕೆ ಬರುವದೇನೂ ತಪ್ಪಿದ್ದಲ್ಲ. ನಾವು ಭವಕ್ಕೆ ಬರುವದೆಂದರೆ ನಾನಾವಿಧದ ಯಾತನೆಗೆ ಗುರಿಯಾಗುವದು. ಅರ್ಥಾತ್ ವಿಷಯವಾಸನೆಯುಳ್ಳವರು ಸಂಸಾರದ ಮೋಹದಲ್ಲಿ ಸಿಲ್ಕಿ ಚಟಪಡಿಸುತ್ತಾರೆ. ಆ ವಾಸನೆಯನ್ನು ಹುರಿದವರು ಅಮಿತ ಸುಖವನ್ನು

ಪಡೆಯುತ್ತಾರೆ. ಭವವೆಂಬುದು ಕೆಳಗಿಲ್ಲ. ಮೋಕ್ಷವೆಂಬುದು ಮೇಲಿಲ್ಲ. ವಾಸನೆಯುಳ್ಳನಕ ನಾವು ಭವಿಗಳೇ. ವಾಸನೆಯನ್ನು ಬಿಟ್ಟಬಳಿಕ ನಾವು ಶಿವಸ್ವರೂಪಗಳೇ. ವಾಸನೆಯುಳ್ಳವರು ನಾನು ನನ್ನದೆಂಬೀ ಅಹಂಕಾರ ಮಮಕಾರಗಳಿಂದ ನಾನಾ ದುರಾಶೆ ದುರ್ವರ್ತನೆಗಳಿಗೀಡಾಗಿರುವದ ರಿಂದ ದುಃಖಿಗಳಾಗುತ್ತಾರೆ. ಇದೇ ಭವ. ಇದಕ್ಕೇ ಪುನರ್ಜನ್ಮವೆನ್ನ ಬೇಕು. ಆದರೆ ವಾಸನಾ ರಹಿತರು ನಿರಾಶೆ ನಿರ್ಭಯಗಳ ಮೂಲಕ ಈಶ್ವರಾರ್ಪಣ ಬುದ್ಧಿಯಿಂದ ಕೆಲಸ ಮಾಡುತ್ತಿರುವರಾದ್ದರಿಂದ ಅವರು ನಿರಂತರ ಸುಖಿಗಳಾಗಿರುತ್ತಾರೆ. ಇದೇ ಮೋಕ್ಷ. ಇದೇ ಪುನರ್ಜನ್ಮ ರಾಹಿತ್ಯವು.

ದೇಹಧಾರಿಗಳಿಗೆ ಮರಣವು ಸ್ವಭಾವಸಿದ್ಧವಾದುದು. 'ಮರಣಂ ಪ್ರಕೃತಿಃ ಶರೀರಿಣಾಂ ವಿಕೃತಿರ್ಜೀವಿತಮುಚ್ಯತ ಬುಧೈಃ" ಎಂದು ಕಾಳಿ ದಾಸ ಕವಿಯು ಹೇಳಿದ್ದಾನೆ. 'ಜಾತಸ್ಯಹಿ ಧ್ರುವೋ ಮೃತ್ಯುಃ ಧ್ರುವಂ ಜನ್ಮ ಮೃತಸ್ಯ ಚ ।' ಎಂದು ಭಗವದ್ಗೀತೆಯಲ್ಲಿ ಹೇಳಿದೆ. ಜೀವಾತ್ಮ ನಲ್ಲಿ ಈ ದೇಹದ ಬಗ್ಗೆ ವಾಸನೆಯಿರುವದರಿಂದ ಸಾಯಬೇಕೆಂದರೆ ಹಿಂಜರಿಯುವನು. ಆದರೆ ಯಾವಾತನು ಮರಣವೆಂದರೆ ಬಹು ಆನಂದ ಬಡುವನೋ ಆತನೇ ಐಕ್ಯನು. ಮಕ್ಕಳಿಲ್ಲದವರಿಗೆ ಪುತ್ರೋತ್ಸವವಾ ದರೆ, ಕಣ್ಣಿಲ್ಲದವರಿಗೆ ಕಣ್ಣು ಬಂದರೆ, ಮೂಕನಿಗೆ ವಾಕ್‌ಸ್ಫುಟವಾದರೆ ಎಷ್ಟು ಆನಂದವೋ ಅಷ್ಟೇ ಐಕ್ಯಸ್ಥಲದವನಿಗೆ ಮರಣ ಬಂದರೆ ಆನಂದ. ಆತನಿಗೆ ಮರಣದಂಥ ಆನಂದದ ಸ್ಥಿತಿಯು ಮತ್ತಾವುದೂ ಇಲ್ಲ. ಮರಣ ಬರುವಾಗ ಸಹಸ್ರ ಚೇಳು ಕಡಿದಂತಾಗುತ್ತದೆಂದೂ, ಕಾಲಯಮನರ ಕೈಗೆ ಸಿಕ್ಕಾಗ ನಾನಾ ಹಿಂಸೆ ಪಡಿಸುವರೆಂದೂ, ಅಗ್ನಿಕುಂಡ, ನರಕ ಕುಂಡಗಳಲ್ಲಿ ಹಾಕುವರೆಂದೂ, ನಮಗೆ ಸುಳ್ಳುಸುಳ್ಳೆ ಹೆದರಿಕೆ ಹಾಕಿ ಪುರಾಣಗಳು ಮರಣವೆಂದರೆ ಎದೆಯೊಡಕೊಂಡು ಸಾಯುವಂಥ ಕಲ್ಪ ನೆಯನ್ನು ಹುಟ್ಟಿಸಿ ಬಿಟ್ಟಿರುತ್ತವೆ. ಅನ್ಯಾಯ ಮಾಡಬಾರದೆಂಬ ಉದ್ದೇ ಶದಿಂದ ಆ ತರಹದ ಭಯವನ್ನು ಹುಟ್ಟಿಸಿರಬಹುದು. ಆದರೆ ತಪ್ಪು ಹಾದಿಯಿಂದ ಧರ್ಮವನ್ನು ತಿಳಿಸುವದೇನೂ ಸಮಂಜಸವಲ್ಲ. ಆದರೆ ನಿಜವಾದ ಮರಣದಂಥ ಆನಂದದ ಸ್ಥಿತಿಯು ಮತ್ತಾವುದೂ ಇಲ್ಲ. ಯಾವನಾದರೊಬ್ಬ ಮನುಷ್ಯನು ಅತಿ ಅಸಹ್ಯವಾದ ರೋಗದಿಂದ ಬಳ ಲುತ್ತಿದ್ದರೆ ಘಾಯಗಳಿಂದ ನೆರಳುತ್ತಿದ್ದರೆ, ಚಿಂತಾತುರತೆಗಳಿಂದ ಚಟ

ಪಟಿಸುತ್ತಿದ್ದರೆ ಜಗತ್ತಿನೊಳಗಿನ ಎಲ್ಲ ಔಷಧಿಗಳಿಗಿಂತಲೂ ಮರಣವೇ ಪರಮೌಷಧಿಯೆಂದು ಭಾವಿಸುವನು. ಮರಣವು ಎಲ್ಲ ದುಃಖ ವ್ಯಾಧಿಗಳಿಂದ ಮನುಷ್ಯನನ್ನು ಮುಕ್ತನನ್ನಾಗಿ ಮಾಡುವದು. ಆದರೆ ಅಕಾಲ ಮರಣ, ದುರ್ಮರಣಗಳು ದೇಹವನ್ನು ಬಹಳೇ ವ್ಯಥೆ ಪಡಿಸುವದರಿಂದ ಜೀವಾತ್ಮನಿಗೆ ದೇಹದ ವಾಸನೆಯು ಮೂಲಕ ಅತಿ ಕಳವಳವಾಗುವದು. ಆದರೆ ಸ್ವಾಭಾವಿಕವಾದ ಮರಣಕಾಲದಲ್ಲಿ ಜೀವಾತ್ಮನು ದೇಹವನ್ನು ಬಿಟ್ಟು ಹೋಗಲಿಕ್ಕೆ ಸ್ವಲ್ಪು ಹಳಹಳಿಪಡುವದಿಲ್ಲ. ಆದರೆ ವಾಸನಾರಹಿತನಾದ ಐಕ್ಯನು ಅತ್ಯಾನಂದದಿಂದ ಶಿವಸಾಯುಜ್ಯವನ್ನು ಹೊಂದುವನು.

ಇನ್ನು ದೇವನಿಗೂ ಐಕ್ಯನಿಗೂ ನಡುವಿರುವ ವ್ಯತ್ಯಾಸವನ್ನಿಷ್ಟು ವಿಚಾರಿಸುವ. ಶರಣಸ್ಥಲವು ಆಧ್ಯಾತ್ಮಿಕ ತರಗತಿಯ ೫ ನೆಯ ಮೆಟ್ಟಲು. ಐಕ್ಯಸ್ಥಲವು ಕೊನೆಯ ಮೆಟ್ಟಲು. ಶರಣನು ಶಿವನ ಬಳಿಗೆ ಶರಣು ಬಂದಿರುತ್ತಾನೆ. ಐಕ್ಯನು ಶಿವನಲ್ಲಿ ಬೆರೆತು ಹೋಗುತ್ತಾನೆ. ಶರಣ ಲಿಂಗಕ್ಕೆ ಸತಿಯಾಗಿರುತ್ತಾನೆ. ಐಕ್ಯನು ಲಿಂಗವೇ ತಾನಾಗಿರುತ್ತಾನೆ. ಶರಣನಿಗೆ ಇಹಪರಗಳ ಅರಿವು ಇರುತ್ತದೆ. ಐಕ್ಯನಿಗೆ ಇಹಪರವೆಂಬ ಭಯ ನಾಸ್ತಿ. ಶರಣನು ಲಿಂಗಾಂಗ ಸಾಮರಸ್ಯಾನಂದವನ್ನು ಅರಿದು ಅದನ್ನು ದಿವ್ಯವಾಣಿಯಿಂದ ವ್ಯಕ್ತಮಾಡುವನು. ಐಕ್ಯನು ಅರುವಿನ ಮೇರೆಯನ್ನು ದಾಂಟಿ ನಾದ ಬಿಂದು ಕಲಾತೀತನಾಗಿ ವಿಶ್ರಮಿಸುವನು. ಶರಣನು ಜೀವಾತ್ಮನು ದೇಹದಲ್ಲಿದ್ದು ದೇಹದ ಮೇಲಿನ ವಾಸನೆಯನ್ನು ಬಿಟ್ಟಿರುತ್ತಾನೆ. ಐಕ್ಯನು ದೇಹವನ್ನೇ ಬಿಟ್ಟು ಹೋಗಿರುತ್ತಾನೆ. ಶರಣನು ಮರಣಭಯವಿದೂರನು. ಐಕ್ಯನು ಮರಣಾನಂದಲೋಲನು. ಶರಣನು ಸತ್ವಗುಣದ ಕೊನೆಯ ಮೆಟ್ಟಲನ್ನು ಹತ್ತಿರುತ್ತಾನೆ. ಐಕ್ಯನು ತ್ರಿಗುಣಾತೀತನು. ಶರಣನು ದಿವ್ಯಜ್ಞಾನದ ವಿಶಿಷ್ಟನಾದ ಜೀವಾತ್ಮನು. ಐಕ್ಯನು ನಿತ್ಯಶುದ್ಧ ನಿರಂಜನನಾದ ಪರವಸ್ತುವು. ಶರಣನ ಪ್ರಭಾವವು ಜೀವವಿರುವಾಗ ಬೆಳಗುತ್ತಿರುತ್ತದೆ. ಐಕ್ಯನ ಪ್ರಭಾವವು ಆತನ ಗದ್ದುಗೆಯ ಮುಖಾಂತರವಾಗಿ ನಡೆಯುತ್ತಿದೆ.

ಮನುಷ್ಯನು ಅನೇಕ ವಿಷಯಗಳಲ್ಲಿ ವಾಸನೆಯನ್ನಿಟ್ಟು ತನಗೆ ಸುಖವಾದೀತೆಂದು ಎಡೆಬಿಡದೆ ಪ್ರವೃತ್ತಿಪರನಾಗಿ ಹೋರಾಡುವನು. ಆದರೆ ಆ ಸುಖದಿಂದ ಆತನಿಗೆ ತೃಪ್ತಿಯಾಗುವದಿಲ್ಲ. ಮನುಷ್ಯನು

ತನಗೆ ಯಾವಾಗಲೂ ಅತ್ಯಂತ ಸುಖವು ಪ್ರಾಪ್ತವಾಗಬೇಕೆಂದೇ ಬಯಸುತ್ತಿರುತ್ತಾನೆ. ಆ ಅತ್ಯಧಿಕ ಸುಖಕ್ಕಾಗಿ ನಿವೃತ್ತಿಪರನಾಗಿ ಪ್ರಯತ್ನಿಸುವನು. ಆಗ ಅವನಿಗೆ ಅದರಲ್ಲಿ ಸುಖದ ಪರಮಾವಧಿಯಿರುವದೆಂಬ ಭಾವನೆಯಾಗುವದು. ಆಗ ಆತನು ತೃಪ್ತನಾಗುವನು. ವೀರಶೈವರು ಐಕ್ಯಸ್ಥಾನವು ಸುಖದ ಪರಮಾವಧಿಯೆಂದು ಹೇಳುತ್ತಿದ್ದಾರೆ. ಅಧ್ಯಾತ್ಮ ಶಾಸ್ತ್ರ ಶೋಧವು ಐಕ್ಯಸ್ಥಾನಕ್ಕೇನೇ ಮುಗಿಯಿತೆಂದು ಮಾತ್ರ ನಾವು ಸಿದ್ಧಾಂತರವಾಗಿ ಹೇಳಲಾರೆವು. ಐಕ್ಯಸ್ಥಿತಿಯಾನಂತರ ಮುಂದೇ ಸಾಗುವದೋ ಏನೋ ಯಾರಿಗೆ ಗೊತ್ತು? ಆ ಪ್ರಶ್ನೆಯು ಶೋಧೆಗೆ ... ದ್ವಾರವಾಗಿಯೇ ಉಳಿದಿರುತ್ತದೆ. ಭೌತಿಕ ಶಾಸ್ತ್ರಗಳಿಗೆ ಉಗಮ-ಏಕಾಸಗಳಿದ್ದು ಪರ್ಯಾವಸಾನವು ಹೇಗೆ ಕ್ಲಪ್ತವಾಗಿ... ...ೀ ಹಾಗೆಯೇ ಆಧ್ಯಾತ್ಮಿಕ ಶಾಸ್ತ್ರಕ್ಕೂ ಪ್ರಾರಂಭ ಬೆಳವಣಿಗೆಗಳುಂಟು... ...ದು. ಅದರ ಅಳವು ಇಲ್ಲಿಗೇ ನಿಂತಿತೆಂದು ಹೇಳಲಿಕ್ಕಾಗುವದಿಲ್ಲ. ಐಕ್ಯಸ್ಥಲಗಳ ಮುಂದೆ ಎಷ್ಟು ಸ್ಥಲಗಳ ಶೋಧವಾಗುವದೋ ಪರಮಾತ್ಮನೇ ಬಲ್ಲ.

---

## ಸಪ್ಪಡಿ ಸಿದ್ಧಮಲ್ಲಿಕಾರ್ಜುನ ಸ್ವಾಮಿ. ರಾಜಪಟ್ಟೆ.

(ಲೇಖಕ:— ರಾ. ಸಾ. ಫ. ಗು. ಹಳಕಟ್ಟಿ ಬಿ. ಎ. ಎಲ್. ಎಲ್. ಬಿ.)

ರಾಜಕೋಟೆ ಎಂಬ ಊರು ಮದ್ರಾಸ ಇಲಾಖಾ ಕಡಪಾ ಜಿಲ್ಹೆಯಲ್ಲಿಯ ಒಂದು ತಾಲೂಕು ಸ್ಥಾನವಿರುತ್ತದೆ. ಇದು ಕಡಪೆಯಿಂದ ದಕ್ಷಿಣಕ್ಕೆ ೩೨ ಮೈಲಿನ ಮೇಲೆ ಇರುತ್ತದೆ. ಈ ಗ್ರಾಮದಲ್ಲಿ ಶ್ರೀ ವೀರಭದ್ರ ದೇವರ ಒಂದು ಪುರಾತನ ದೇವಸ್ಥಾನವಿದ್ದು ಇದು ಆ ಪ್ರಾಂತದಲ್ಲಿಯಷ್ಟೇ ಅಲ್ಲ, ಕರ್ನಾಟಕದಲ್ಲಿಯೂ ಬಹು ಪ್ರಸಿದ್ಧವಾಗಿರುತ್ತದೆ. ರಾಜಕೋಟೆ ವೀರಭದ್ರ ದೇವರು ಮನೆದೇವರುಳ್ಳ ವೀರಶೈವ ಮನೆತನಗಳು ದೇಶದಲ್ಲೆಲ್ಲ ಅಸಂಖ್ಯವಾಗಿರುತ್ತವೆ. ಈ ತಾಲೂಕಿನಲ್ಲಿ ವೀರಶೈವರ ವಸತಿಯು ಅತ್ಯಂತ ಅಲ್ಪವಾಗಿರುತ್ತದೆ. ಅಥವಾ ಅದು ಅಲ್ಲಿ ಏನೂ ಇಲ್ಲೆಂದರೂ ಸಲ್ಲುವದು. ಆದರೂ ಈ ದೇವಸ್ಥಾನದ ಆಧಿಪತ್ಯವು ಓರ್ವ ವೀರಶೈವ ಮಠಾಧಿಪತಿಗಳ ಕಡೆಗೆ ಇದ್ದು ಅವರಿಗೆ ಸಪ್ಪಡಿ ಸಿದ್ಧಮಲ್ಲಿಕಾರ್ಜುನ ಸ್ವಾಮಿಗಳೆಂದು ಬಹು ಪುರಾತನ ಕಾಲ

ದಿಂದಲೂ ಹೆಸರು ಇದ್ದುದು ತೋರಿಬರುತ್ತದೆ. ಈ ಮಠಾಧೀಶ್ವರರಲ್ಲಿ ಅನೇಕರು ವಿದ್ವಾಂಸರೂ, ಕವಿಗಳೂ, ಆಗಿಹೋಗಿರುವರು. ಸಪ್ಪಡಿ [illegible]ಧಮಲ್ಲಿಕಾರ್ಜುನಸ್ವಾಮಿ ಈ ಹೆಸರಿನ ಬದಲು ಸಪ್ಪಿಸಿದ್ಧ ಮಲ್ಲಿಕಾರ್ಜುನ [illegible]ಮಿ ಅಥವಾ ಸೊಪ್ಪಿ ಸಿದ್ಧಮಲ್ಲಿಕಾರ್ಜುನ ಸ್ವಾಮಿ ಇಲ್ಲವೆ ಸೊಪ್ಪಯ [illegible]ಗಳು ಎಂದು ರೂಢಿಯಲ್ಲಿ ಜನರು ಅನ್ನುವದುಂಟು. ಆದೇ [illegible]ರ ಇವರಿಗೆ ರಾಚೋಟಿ ದೇವರು ಇಲ್ಲವೆ ರಾಯಚೋಟಿ ಸಟ್ಟಾ[illegible] ಎಂತಲೂ ಹೆಸರುಗಳಿರುತ್ತವೆ. ಸೊಪ್ಪಿಸಿದ್ಧಮಲ್ಲಿಕಾರ್ಜುನ [illegible] ಹೆಸರು ಇವರಿಗೆ ಏಕೆ ಬಿದ್ದಿತೆಂಬುದಕ್ಕೆ ಒಂದು ಅಖ್ಯಾಯಿಕೆಯು ಇರುತ್ತದೆ. ಅದು ಏನೆಂದರೆ— ಈ ದೇವಾಲಯದ ಮುಂದೆ ಒಂದು ಬಸವಣ್ಣನ ಗುಡಿಯಿದ್ದು ಅದರಲ್ಲಿ ಒಂದು ದೊಡ್ಡ ನೀರಿನ ದೋಣಿ ಇದೆ. ಈ ದೇವಸ್ಥಾನದ ವಿಷಯಕ್ಕೆ ಮಠದ ಗುರುಗಳಿಗೂ ವೈಷ್ಣವ ಬ್ರಾಹ್ಮಣರಿಗೂ ಒಂದು ಕಾಲಕ್ಕೆ ವ್ಯಾಜ್ಯವಾಯಿತಂತೆ. ಈ ವ್ಯಾಜ್ಯದಲ್ಲಿ ವೈಷ್ಣವ ಬ್ರಾಹ್ಮಣರು ಸ್ವಾಮಿಗಳಿಗೆ— ನೀವು ದೇವಸ್ಥಾನದಲ್ಲಿ ನಿಜವಾದ ಗುರುಗಳಾಗಿದ್ದರೆ ಈ ಬಸವಣ್ಣನಿಗೆ ನೀವು ಸೊಪ್ಪೆ ಮತ್ತು ನೀರು ಕುಡಿಸಿದರೆ ನೀವೇ ಬಾಧ್ಯಸ್ಥರು, ಇಲ್ಲದಿದ್ದರೆ ನಾವು ಹಕ್ಕುದಾರರು ಎಂದು ಪಣವನ್ನು ಹಾಕಿದರಂತೆ. ಈ ವಾಕ್ಯವನ್ನು ಸಿದ್ಧಮಾಡುವ ಸಲುವಾಗಿ ಸ್ವಾಮಿಗಳು ಬಸವಣ್ಣನ ಮುಂದೆ ಸೊಪ್ಪೆ ಮತ್ತು ನೀರು ತಂದು ಇಟ್ಟಾಕ್ಷಣವೇ ಆ ಬಸವಣ್ಣನು ಅವುಗಳನ್ನು ಸ್ವೀಕಾರ ಮಾಡಿದನಂತೆ. ಅಂದಿನಿಂದ ಸ್ವಾಮಿಗಳಿಗೆ 'ಸೊಪ್ಪಯ್ಯ ಸ್ವಾಮಿ' ಅಥವಾ 'ಸಪ್ಪಡಿಸಿದ್ಧಸ್ವಾಮಿ' ಎಂಬ ಹೆಸರು ಉಂಟಾಯಿತು.

ದೇವಾಲಯಕ್ಕೆ ಪುರಾತನ ಪದ್ಧತಿಯ ಕಟ್ಟಡವಿದ್ದು ಪೂರ್ವದಿಕ್ಕಿನ ಮಹಾದ್ವಾರವು ಭವ್ಯವೂ, ರಮಣಿಯವೂ, ಆಗಿರುತ್ತದೆ. ಉತ್ತರದಿಕ್ಕಿಗೆ ಮತ್ತೊಂದು ದ್ವಾರವಿದ್ದು ಇದಾದರೂ ಸುಂದರವಾಗಿದೆ. ದಕ್ಷಿಣದ ಬಾಗಿಲು ಯಾವಾಗಲೂ ಮುಚ್ಚಲ್ಪಟ್ಟಿರುತ್ತದೆ. ಪಶ್ಚಿಮಭಾಗದಲ್ಲಿ ಸಪ್ಪಡಿ ಸ್ವಾಮಿಗಳ ಮಠವಿರುತ್ತದೆ. ಅಲ್ಲಿ ಶ್ರೀ ಗುರುಗಳ ಆವುಗೆಗಳೂ, ಗದ್ದುಗೆಗಳೂ, ಇರುತ್ತವೆ. ಅಲ್ಲದೆ ಮುಂದಿನ ಪಟಾಂಗಣದಲ್ಲಿ ವೀರಭದ್ರ ದೇವರ ಪೂಜಾರಿಗಳ ವಾಸಸ್ಥಾನಗಳೂ ಇರುತ್ತವೆ. ದೇವಾಲಯದ ಸುತ್ತಲು ದೊಡ್ಡ ದೊಡ್ಡ ಪಟಾಂಗಣಗಳಿಂದ ಕೂಡಿದ ಪೌಳಿಗಳಿರುತ್ತವೆ. ಜಾತ್ರೆಯ ಕಾಲದಲ್ಲಿ ಬಹಳ ಜನರು ಇರಲಿಕ್ಕೆ ಇವು ಬಹು

ಅನುಕೂಲವುಳ್ಳವಾಗಿವೆ. ಗರ್ಭಗುಡಿಯು ಸುಂದರವೂ, ಚಿತ್ತಾಕರ್ಷಕವೂ ಇದ್ದು ಹಂಪೆಯ ವಿರುಪಾಕ್ಷದೇವಸ್ಥಾನದ ಕಟ್ಟಡವನ್ನು ಹೋಲುತ್ತದೆ.

ದೇವಸ್ಥಾನದ ಜಾತ್ರೆಯು ಶಿವರಾತ್ರಿಯಲ್ಲಿ ನಡೆಯುತ್ತದೆ. ಈ ಜಾತ್ರೆಗೆ ಸುಮಾರು ೪--೫ ಸಾವಿರ ಜನರು ದೂರ ದೂರ ದೇಶ್ಗಳಿಂದ ತಪ್ಪದೇ ಬರುತ್ತಾರೆ. ಈ ದೇವರ ಮೇಲೆ ಎಲ್ಲ ಜಾತಿ ಜನರು ಭಕ್ತಿಭಾವವುಳ್ಳವರಾದ್ದರಿಂದ ದೇವರ ಪ್ರಸಾದವನ್ನು ಯಾವ ಭೇದಾಭೇದವನ್ನು ಎಣಿಸದೆ ಸ್ವೀಕರಿಸುತ್ತಾರೆ. ದೇವಾಲಯದಲ್ಲಿ ಶಿ ಲಿಪಿಗಳ ಸಮುದಾಯವು ದೊಡ್ಡದಾಗಿರುವದು. ಅನೇಕ ಸುಂದರವಾದ ಮತ್ತು ಹಿಂದಿನ ಕಲಾಕೌಶಲ್ಯವನ್ನೂ ಚನ್ನಾಗಿ ವ್ಯಕ್ತಪಡಿಸುವಂಥ ಮೂರ್ತಿಗಳೂ ಅನೇಕವಿರುತ್ತವೆ. ಶಿಲಾಲೇಖಗಳನ್ನು ಸಂಶೋಧನ ಮಾಡುವದರಿಂದ ಅತ್ಯಂತ ಮಹತ್ವದ ಐತಿಹಾಸಿಕ ವಿಷಯಗಳು ಗೊತ್ತಾಗಬಹುದೆಂದು ನಿರೀಕ್ಷಿಸಲ್ಪಟ್ಟಿರುತ್ತದೆ.

ಈ ಪ್ರಕಾರ ತೆಲಗು ದೇಶದಲ್ಲಿದ್ದ ಒಂದು ಮಹತ್ವದ ದೇವಸ್ಥಾನದಲ್ಲಿ ವೀರಶೈವರು ಯಾಜಮಾನ್ಯವನ್ನು ವಹಿಸಿರುವರೆಂಬದು ವಿಶೇಷವಾಗಿ ಲಕ್ಷಿಸತಕ್ಕ ಸಂಗತಿಯಾಗಿರುತ್ತದೆ. ಇದರಮೇಲಿಂದ ಒಂದು ಕಾಲಕ್ಕೆ ವೀರಶೈವರಲ್ಲಿ ವೀರಶೈವ ಮತಪ್ರಚಾರ ಕಾರ್ಯಗಳು ಎಷ್ಟು ಘನತರವಾಗಿ ನಡೆದಿದ್ದುವೆಂಬುದು ಚನ್ನಾಗಿ ವ್ಯಕ್ತವಾಗುತ್ತದೆ. ನಾವು ಹಿಂದೊಮ್ಮೆ ಶಿವಾನುಭವದಲ್ಲಿ ಸಾರಂಗದೇವರೆಂಬ ಮಹಾಪುರುಷರ ಚರಿತ್ರೆಯನ್ನು ವಿವರಿಸಿದ್ದು ವಾಚಕರ ಲಕ್ಷದಲ್ಲಿರಬಹುದು. ಇವರು ಕರ್ನಾಟಕಭಾಗದಲ್ಲಷ್ಟೇ ಅಲ್ಲ, ತಮಿಳು, ತೆಲಗು ಸೀಮೆಗಳಲ್ಲಿ ಸಹ ಅನೇಕ ಸಾಹಸದ ಕಾರ್ಯಗಳನ್ನು ಮಾಡುತ್ತ ಕುಂಭಕೋಣಂ ಪಟ್ಟಣದಲ್ಲಿ ಸಾರಂಗಮಠವೆಂಬ ಪ್ರಸಿದ್ಧ ದೇವಸ್ಥಾನವನ್ನು ಸ್ಥಾಪಿಸಿದರು. ಇವರ ಮಠಗಳು ವಿಜಾಪುರ ಜಿಲ್ಲೆಯಲ್ಲಿ ಅನೇಕವಾಗಿರುವವು. ಅದೇ ಪ್ರಕಾರ ರಾಚವಟ್ಟಿಯ ಸಪ್ಪಡಿ ಸಿದ್ಧಮಲ್ಲಿಕಾರ್ಜುನ ಸ್ವಾಮಿಗಳಿಗೂ ವಿಜಾಪುರ ಪಟ್ಟಣಕ್ಕೂ ವಿಶೇಷ ಸಂಬಂಧವಿದ್ದಹಾಗೆ ತೋರುತ್ತದೆ. ಯಾಕಂದರೆ ವಿಜಾಪುರ ಪಟ್ಟಣದಲ್ಲಿ ಈಗ ಸೊಪ್ಪೆಯ ಮಠ ಅಥವಾ ಸೊಪ್ಪಯ್ಯನ ಮಠ ಎಂಬ ಹೆಸರಿನ ಮಠವಿದ್ದು ಈ ಮಠದಲ್ಲಿ ಶೋಧ ಮಾಡಲು ಅದರ ಈಗಿನ ಯಜಮಾನರು ರಾಚವಟ್ಟಿಯ ಮಠದ ಅನೇಕ ಕಾಗದಪತ್ರಗಳನ್ನು ನನಗೆ ತೋರಿಸಿದರು. ಈ ಮಠದ ಹಿಂದಿನವರೊಬ್ಬರು ರಾಚವಟ್ಟಿ

ಮಠದ ಪಟ್ಟಾಧ್ಯಕ್ಷರಾಗಿದ್ದುದೂ ತಿಳಿದುಬರುತ್ತದೆ. ಈ ಮಠದ ಕಾಗದಪತ್ರಗಳಲ್ಲಿ ಪುಣೆಯ ಪೇಶ್ವೆಯಾದ ಮಾಧವರಾವ ಬಲ್ಲಾಳ ಈತನು ರಾಚವಟ್ಟಿ ಸ್ವಾಮಿಗಳಿಗೆ ಹಾಕಿಕೊಟ್ಟ ಮೂಲ ಸನದು ನನಗೆ ಉಪಲಬ್ಧವಾಯಿತು. ಆದರಿಂದ ಕೆಳಗೆ ಕಾಣಿಸಿದ ಇತಿಹಾಸಗಳು ದೃಗ್ಗೋಚರವಾಗುತ್ತವೆ. ಅವು ಬೋಧಪ್ರದವಾಗಿದ್ದು ಅವುಗಳನ್ನು ಸಂಕ್ಷಿಪ್ತವಾಗಿ ವಿವರಿಸುತ್ತೇವೆ. ಅವುಗಳು ಯಾವವೆಂದರೆ:—

“ಶಕೆ ೧೬೯೨ ವಿಕೃತನಾಮ ಸಂವತ್ಸರದಲ್ಲಿ ನಾವು (ಎಂದರೆ ಮಾಧವರಾವಪೇಶ್ವೆ) ಹೊಸಕೋಟೆ ಎಂಬಲ್ಲಿ ಇದ್ದ ಕಾಲಕ್ಕೆ ನೀವು (ಎಂದರೆ ಸ್ವಾಮಿಗಳು) ನಮ್ಮ ಕಡೆಗೆ ಬಂದು ವಿನಂತಿಮಾಡಿಕೊಂಡಿದ್ದು ಏನಂದರೆ:— ಮಠಪಲಿ ಎಂಬ ಗ್ರಾಮವು ನಿಮ್ಮ ಗುರು ಸಂಗನಬಸಯ್ಯರುಪ್ರಮುನಿ ಇವರ ಕಡೆಗೆ ಬರಹೋಗುವವರಿಗೆ ಅನ್ನಕೊಡಲಿಕ್ಕೆ ಮತ್ತು ವೀರಭದ್ರದೇವರ ಸೇವೆ ಮಾಡಲಿಕ್ಕೆ ಇನಾಮಾಗಿ ಕೊಡಲ್ಪಟ್ಟಿತ್ತು. ಈ ಪ್ರಕಾರ ಕಡಪೆಯ ಪಠಾಣರು ದಾನಕೊಟ್ಟಿದ್ದರು. ಆಪರೆ ಈ ಗುರುಗಳು ದೇಶ ಬಿಟ್ಟು ಸಾಗೋಲೆ ಪ್ರಾಂತದ ಕಡೆಗೆ ಹೋದದ್ದರಿಂದ ಈ ಊರಿಗೆ ಯಾರೂ ವಾರಸದಾರರು ಉಳಿಯಲಿಲ್ಲ. ಈ ಪ್ರಕಾರ ೨೫—೩೦ ವರ್ಷ ನಡೆದದ್ದರಿಂದ ಭಗವಂತ ತ್ರ್ಯಂಬಕ ಎಂಬ ಸರಕಾರದ ಅಮಲದಾರರು ಗುರುವಂಭಟ್ಟ ಬಿನ್ ವೆಂಕಟಾವಧಾನಿ ಶೇಟಿಪಲಿಕರ ಈತನಿಗೆ ಊರು ಕರಾರು ಮಾಡಿಕೊಡಲ್ಪಟ್ಟಿತು. ಆ ಪ್ರಕಾರ ಭಟಜೀಯವರ ಕಡೆಗೆ ಈ ಗ್ರಾಮವು ನಡೆಯುತ್ತಬಂದಿತು. ಆ ಮೇಲೆ ಗುರುಮಕೋಡಾ ಕೋಟೆಯು ಹೈದರ ಅಲ್ಲಿಯ ಕಡೆಗೆ ಹೋಯಿತು. ಆಗ ಅಲ್ಲಿ ಮೀರಜಾ ಅಲ್ಲಿಖಾನ ಎಂಬವನು ಅಧಿಕಾರಿಯಾಗಲಾಗಿ ಅಷ್ಟರಲ್ಲಿ ಸಾಗೋಲೆಯಿಂದ ನಿಮ್ಮ ಗುರು ಪಂಚಮಠಯ್ಯ ಇವರು ಬಂದು ಮೀರಾನಿಗೆ ಭೆಟ್ಟಿಯಾಗಿ ತಮ್ಮ ಸನದು ತೋರಿಸಿಕೊಟ್ಟರು. ಅದರ ಮೇಲಿಂದ ಮೀರಾನು ಯಾವತ್ತು ಗ್ರಾಮವನ್ನು ಮಠದ ಕಡೆಗೆ ಕರಾರು ಮಾಡಿಕೊಟ್ಟು ಸನದು ಮಾಡಿಕೊಟ್ಟನು. ಮುಂದೆ ಪಂಚಮಠಯ್ಯನು ಮರಣಹೊಂದಿದನು. ಆಗ ಭಟಜಿಯು ಮೀರಾನ ಕಡೆಗೆ ಹೋಗಿ ಊರು ತನ್ನ ಕಡೆಗೆ ಮಾಡಿಸಿಕೊಂಡನು. ಆ ಪ್ರಕಾರ ಈ ಊರು ಇನ್ನೂ ಆತನ ಕಡೆಗೆ ನಡೆಯುತ್ತದೆ. ಆದ್ದರಿಂದ ಮೊದಲಿನಂತೆ ಈ ಊರು ಮಠದ ಕಡೆಗೆ ನಡೆಯಬೇಕೆಂದು ನಮಗೆ ನೀವು ಕೇಳಿಕೊಳ್ಳಲು ನಾವು ಉಭಯ ಪಕ್ಷಗಳ ವೃತ್ತಾಂತವನ್ನು ಮನಸ್ಸಿನಲ್ಲಿ ತಂದು ಧರ್ಮಾ

ಚರಣೆ ನಡೆಯುವ ಸಲುವಾಗಿ ಇಬ್ಬರೂ ಕೂಡಿ ಈ ಊರಿನ ಉಪ ಭೋಗ ಮಾಡಬೇಕೆಂದು ಗೊತ್ತುಪಡಿಸಿದೆವು. ಈ ಪ್ರಕಾರ ವ್ಯವಸ್ಥೆ ಮಾಡಿ ನಿಮ್ಮ ನಿಮ್ಮ ಶಿಷ್ಯಪರಂಪರೆಯಾಗಿ ಗ್ರಾಮವನ್ನು ಇನಾಮಾಗಿ ಅನುಭೋಗಿಸಬೇಕು" ಎಂದು ಈ ಸನದಿನಲ್ಲಿ ವಿವರಿಸಲ್ಪಟ್ಟಿದೆ. ಈ ಸನದು ಮರಾಠಿ ಭಾಷೆಯಲ್ಲಿದ್ದು ಅದನ್ನು ಇದ್ದಕ್ಕಿದ್ದ ಹಾಗೆ ನಾವು ಇಲ್ಲಿ ಕೊಡುತ್ತೇವೆ.

**शिवभक्त परायेण सिधमलकार्जुन अया जंगममठ का॥ राचोटी पो गुडटूर सरकार गुरुमकोडा प्रांत कडपे गोसावी यांस.**

श्री माधवराव बलाळ प्रधान सूहूर संन ईहिदेस बेनमया व अलफ शके १६९२ विक्रती नाम संवत्सरे तुम्ही हुजूर नर्जाक पो हुसकोटे येथील मु॥ येऊन विनंती केली कीं, मजरे मटपली को मजकूर हा गांव आपले गुरु संगन बसयाव रुद्रमुनी अया जंगम मठ मजकूर हे आल्या गेल्यास अंन देऊन व श्री वीरभद्र देवाची सेवा करून धर्माचरण करीत होते खावंद कडपेकर पठाण याणी मजरा मजकूर इनाम करून दिल्हा त्या प्रे॥ त्याचे अंमलात चालिला त्यावर आपले गुरु परागंदा होऊन सागोले प्रांताकडे गेले गावास कोणी वारीसदार नाही याजमुळे आलीकडे पंचवसि तीस वर्षे भोगवटा चालिला नाही पो मजकूरचा अमल संनसमान खमसंनात सरकारात आला ते समई राजश्री भगवंत त्रिंबक सरकारचे अंमलदार याणी वो राजश्री गुरवंभट बिन वेंकटावधानी शेटीपलीकर यास श्रोत्रीय गाव करार करून गावचा आकार होईल त्या पैकी दरसाल चक्रे पनास सरकारात घ्यावयाचा करार करून बाकी गाव श्रोत्रीय करून दिल्हा त्या प्रो भटजीकडे चालत होता त्यावर किले गुरूमकोडा हैदर अली खानाकडे गेला त्याणी मिरजा अलीखान याचे हवाली केला त्या प्रो फिरान सरकारात अमल झाल्यावर सरकार तर्फेने मिरास सरंजाम दिल्हा तेव्हां आपला गुरुपंचमतया सागोलियाहून येऊन मिरास भेटोन पूर्वील वृत्त सागोन सनदा दाखविल्या त्या वरून मिराने मागील दाखला पाहून गाव मठाकडे करार करून देऊन सनद करून दिली त्या प्रो भोगवटा चालवतो पंचमतया मृत्य पावले मग भटजींनी मिराकडे जाऊन पूर्ववत प्रो पनास चक्रे सरकारात घ्यावयाचा करार करून गाव आपल्याकडे करून घेतला त्या प्रो श्रोत्रीय गाव भटजीकडे चालत आहे त्यास हाली प्रो मजकूरचा अमल सरकारा

आला यास्तव कृपाळु होऊन पूर्ववत प्रो। गाव मठाकडे करार करून देऊन चालविले पाहिजे म्हणोन त्या वरून मनास आणिता पूर्वी गाव मठाकडे इनाम चालत होता आलीकडे भोगवटा नाही व गुरवंभट याजकडे श्रोत्रीय गाव सरकार तर्फेचे आमलदारानी करार करून देऊन सनद करून दिल्ही त्या प्रो। आजपर्यंत चालत आहे दुतर्फा व्रत मनास आणिता धर्माचरण करितात हे जाणून पेसजी भगवंत त्रिंबक याणी सरकारचे अमलात मजरा मजकूर पो। पनास चक्र सरकारात घ्यावयाचा करार केला होता त्यास उभयता धर्माचरण करितात कालक्षेप चालला पाहिजे खावंद गुरुवंभट याजपासून गावाचे ऐवजी पनास चक्रे सरकारात घ्यावयाचा करार केला होता त्यास उभयता धर्माचरण करितात कालक्षेप चालला पाहिजे खावंद गुरुवंभट याजपासून गावचे ऐवजी पनास चक्रे सरकारात घ्यावयाचा करार केला होता ते हाली दूर करून मजरा मजकूर हा गाव कुलबाबा कुलकानु खाते हमदार व इनामदार करून दरोबस्त पैकी निमे गाव गुरवंभट याजकडे देऊन बाकी निमे गाव तुम्हाकडे इनाम करार करून दिल्हा असे तरी मजरा मजकूर निमे गाव तुम्ही आपले दुमाल करून घेऊन तुम्ही व तुमचे शिष्य परंपरागत इनाम अनभऊन सुखरूप राहाणे जाणिजे छ ९ रमजान आज्ञा प्रमाण. ಶಿಕ್ಕಾ ಇದೆ.

ಮೇಲ್ಕಂಡ ಸನದು ಇಸ್ವಿ ಸನ್ ೧೭೭೦ ನೇ ದರಲ್ಲಿಯದು ಇದ್ದು ಪೇಶ್ವೆ ಮಾಧವರಾಯನು ಹೊಸಕೋಟೆ ಸೀರ್ಯ ಪ್ರಾಂತಗಳನ್ನು ಅಭಿಯೋಗಿಸಿದ ಕಾಲಕ್ಕೆ ಇದರಲ್ಲಿ ವಿವರಿಸಿದ ಸಂಗತಿಗಳು ಉತ್ಪನ್ನವಾಗಿರಬಹುದು. ಇದರಲ್ಲಿ ಮಠದ ಅಧಿಪತಿಗಳೊಬ್ಬರಾದ ಸಂಗನಬಸಯ್ಯನೆಂಬವರು ಸಾಗೋಲೆ ಎಂಬಲ್ಲಿಗೆ ಸ್ಥಾನತ್ಯಾಗ ಮಾಡಿ ಬಂದಿದ್ದರ ಉಲ್ಲೇಖವಿದೆ. ಈ ಸಾಗೋಲಿಯು ಈಗ ಸೊಲ್ಲಾಪುರ ಜಿಲ್ಹೆಯ ನೈಋತ್ಯ ದಿಕ್ಕಿಗೆ ಒಂದು ತಾಲೂಕಿನ ಸ್ಥಳವಾಗಿದೆ. ಇದಕ್ಕೆ ಸಾಂಗೋಲಾ ಎಂದೆನ್ನುವದುಂಟು. ಇವರು ಈ ಸ್ಥಳದಲ್ಲಿದ್ದ ಕಾಲಕ್ಕೆ ಅವರಿಗೆ ಬಂದ ಅನೇಕ ಪತ್ರಗಳು ವಿಜಾಪುರದಲ್ಲಿಯ ಸೊಪ್ಪಯ್ಯನವರ ಮಠದಲ್ಲಿ ಈಗಲೂ ಇರುತ್ತವೆ. ಅವುಗಳನ್ನು ನಾನು ನೋಡಲಾಗಿ ಈ ಪ್ರಾಂತದ ವೀರಶೈವರು ಈ ಸ್ವಾಮಿಗಳಿಗೆ ಬಹು ಮನ್ನಣೆಯನ್ನು ಕೊಡುತ್ತಿದ್ದದ್ದು ತೋರಿಬರುತ್ತದೆ. ಈ ಪತ್ರಗಳಲ್ಲಿ ಇರುವ ಅವರ ಒಕ್ಕಣಿಕೆಗಳನ್ನು ನೋಡಿದರೆ ಅವು "ರಾಜಾಧಿರಾಜಮಾನ್ಯ ರಾಜಶ್ರೀ ಆದಿ ಸಾಂಗೋಲಿಮಠ ಮೊದಲಾದ ಸಮಸ್ತ ದೇಶದ ಮಠಕ್ಕೆ ಕರ್ತೃಗಳಾದ ರಾಚೋಟಿ ದೇವರ

ಚರಣಾರವಿಂದಕ್ಕೆ” “ಪರತರ ಪರಂಜ್ಯೋತಿ-ಪಂಡಿತಾರಾಧ್ಯ ಸ್ಥಲ ಪಚ್ಛೆದಕಂಥೆ ಪರಮಮೂರ್ತಿ ಆದಿ ಸಂಗೋಲಿಮಠ ಮೊದಲಾದ ಸಮಸ್ತ ದೇಶ ಮಠಕ್ಕೆ ಕರ್ತೃಗಳಾದ ರಾಚೋಟಿ ದೇವರವರ ಚರಣಾರವಿಂದಕ್ಕೆ” ಮತ್ತೊಂದರಲ್ಲಿ “ವೇದ ವೇದಾಂತ ಸಿದ್ಧಾಂತವು ಪುರಾಣಾಗಮ ಇತಿಹಾಸಶಾಸ್ತ್ರ ಪ್ರಸಿದ್ಧ ಶ್ರೀಮದ್ವೀರಶೈವ ಮತಸ್ಥಾಪನಾಚಾರ್ಯವರ್ಯ ಶ್ರೀಮನ್ನಿರಾಭಾರಿ ದೇಶಿಕವರೇಣ್ಯ ರಾಯಚೋಟಿ ಪಟ್ಟಾಧ್ಯಕ್ಷ ಸಪ್ಪಡಿ ಸಿದ್ಧಮಲ್ಲಿಕಾರ್ಜುನಸ್ವಾಮಿ ಸನ್ನಿಧಿಗೆ” ಎಂದು ಮೊದಲಾಗಿ ಒಕ್ಕಣಿಕೆಗಳು ಇವೆ. ಇವುಗಳಲ್ಲಿ ಕೆಲವು ಪತ್ರಗಳು ಕಪ್ಪಡಿ ಸಂಗಮೇಶ್ವರದಲ್ಲಿ ಇದ್ದ ಸಾರಂಗದೇವರ ಮಠದ ಅಧಿಪತಿಗಳಿಂದಲೂ ಬಂದವುಗಳು ಇವೆ. ಅವುಗಳಲ್ಲಿ ಕಂಡುಬರುವ ಅವರ ಒಕ್ಕಣಿಕೆಗಳು ಏನಂದರೆ— “ಶಿವಸಾಂಪ್ರದಾಯಕರಾದ ರುದ್ರಸ್ವಾಮಿ ಚರಮೂರ್ತಿಗಳು ಕಾಸಪ್ಪಯ್ಯ ಕಪ್ಪಡಿ ಸಂಗಮೇಶ್ವರ ಧರ್ಮಸಿಂಹಾಸನ ಪತಿಗಳು ಮಾಡುವ ಅನೇಕ ನಮಸ್ಕಾರಗಳು” ಈ ರೀತಿಯಾಗಿ ಇರುತ್ತವೆ. ಮೇಲ್ಕಂಡ ಸನದಿನಲ್ಲಿ ಕಡಪೆಯ ಪಠಾಣ ಅರಸನು ಒಂದು ಗ್ರಾಮವನ್ನು ರಾಚೋಟಿಸ್ವಾಮಿಗಳಿಗೆ ಉಂಬಳಿ ಹಾಕಿ ಕೊಟ್ಟದ್ದು ತಿಳಿಯುತ್ತದೆ. ಇದಾದರೂ ಲಕ್ಷಿಸತಕ್ಕ ಸಂಗತಿಯಾಗಿದೆ. ಇದರ ಮೇಲಿಂದ ಆಗಿನ ಮುಸಲ್ಮಾನ ಅರಸರು ಹಿಂದೂ ದೇವಾಲಯಗಳಿಗೋಸ್ಕರ ಯಾವ ರೀತಿಯಾಗಿ ವರ್ತಿಸುತ್ತಿದ್ದರೆಂಬುದನ್ನು ನಾವು ಊಹಿಸಬಹುದಾಗಿದೆ.

ವಿಜಾಪುರ ಸೊಪ್ಪಯ್ಯನವರ ಮಠದಲ್ಲಿ ರಾಚವಟ್ಟಿ ಸ್ವಾಮಿಗಳ ಮೊಹರೂ ಇರುತ್ತದೆ. ಅದು ತಾಮ್ರದಲ್ಲಿ ಮಾಡಿದ್ದು ಅದರ ಮಧ್ಯದಲ್ಲಿ ಬಸವಣ್ಣನ ಮುದ್ರೆಯು ಕೊರೆಯಲ್ಪಟ್ಟಿರುತ್ತದೆ, ಅದರ ಶರೀರದ ಬೇರೆ ಬೇರೆ ಭಾಗಗಲ್ಲಿ ಅ, ಉ, ಮ, ಬ, ಸ, ವ, ಹ್ರಂ, ಎಂಬ ಪ್ರಣವಾಕ್ಷರಗಳು ಇವೆ. ಬಸವಣ್ಣನ ಎಡಗಾಲು ಒಂದು ರುಂಡದ ಮೇಲೆ ಇಡಲ್ಪಟ್ಟಿದೆ. ಮೇಲಿನ ಮಗ್ಗಲು ಓಂ ಹ್ರಂ, ಬಸವ ಪವಿತ್ರ ಪಾವನಪಾದ ಎಂದು ಬರೆಯಲ್ಪಟ್ಟಿದೆ. ಬಲ ಮಗ್ಗಲು ಓಂ ಹ್ರಂ ಪ್ರಸಿದ್ಧ ಗುರುಬಸವ ಎಂದು ಬರೆಯಲ್ಪಟ್ಟಿದೆ. ಕೆಳಮಗ್ಗಲು ಕೃತಯುಗ, ತ್ರೇತಾಯುಗ, ದ್ವಾಪಾರಯುಗ, ಕಲಿಯುಗ ಎಂದು ಒಂದು ಸಾಲಿನಲ್ಲಿದೆ. ಅದರ ಕೆಳಗಿನ ಸಾಲಿನಲ್ಲಿ ಋಗ್ವೇದ, ಯಜುರ್ವೇದ, ಸಾಮವೇದ, ಅಥರ್ವವೇದ, ಎಂದು ಕೊರೆಯಲ್ಪಟ್ಟಿದೆ. ಎಡಮಗ್ಗಲು ಶ್ರೀ ರಾಚೋಟಿ ಶ್ರೀ ವೀರಸೂರ್ಯ ಸಿಂ

ಹಾಸನಕ್ಕೆ ಸಪ್ಪಿ ಸಿದ್ಧಮಲ್ಲಿಕಾರ್ಜುನ ಸ್ವಾಮಿಯವರು ಎಂದು ಕೊರೆಯಲ್ಪಟ್ಟಿದೆ. ಈ ಪ್ರಕಾರ ಮೊಹರಿನ ಅಕ್ಷರಗಳಿದ್ದು ಇವೆಲ್ಲವೂ ನಂದಿಯ ಮಹಾತ್ಮ್ಯವನ್ನು ಮಂತ್ರಾಕ್ಷರಗಳಿಂದ ವರ್ಣಿಸುವಂತಹವಿರುತ್ತವೆ. ಈ ಮೊಹರೇ ರಾಚವಟ್ಟಿ ಸ್ವಾಮಿಗಳು ಉಪಯೋಗಿಸುತ್ತಿದ್ದುದೆಂದು ತೋರಿ ಬರುತ್ತದೆ.

ಈ ಪ್ರಕಾರ ರಾಚವಟ್ಟಿ ಸ್ವಾಮಿಗಳವರ ವೃತ್ತಾಂತವು ನಾನು ನೋಡಿದ ಕಾಗದ ಪತ್ರಗಳಿಂದ ಹೊರಪಡುತ್ತದೆ. ಇನ್ನು ಮೇಲೆ ವಿಜಾಪುರ ದಲ್ಲಿಯ ಸೊಪ್ಪೆಯ ಮಠದ ವಿಷಯವಾಗಿಯೂ ಒಂದೆರಡು ವಿಷಯಗಳನ್ನು ಇದೇ ಲೇಖದಲ್ಲಿ ವಿವರಿಸುವದು ಯೋಗ್ಯ ತೋರುತ್ತದೆ.

ಈ ಮಠದಲ್ಲಿ ಒಂದು ತಾಮ್ರಪಟವಿದ್ದು ಅದರಲ್ಲಿ ಈ ಮಠಕ್ಕೆ ಸಂಬಂಧಿಸಿದ ಶಿಷ್ಯಮನೆತನಗಳ ಉಲ್ಲೇಖವಿರುತ್ತದೆ. ಇದನ್ನು ಬರೆದ ಮಿತಿಯು ಶಕೆ ೧೫೫೩ ನಿರೋಧಕೃತನಾಮಸಂವತ್ಸರ ಮಿತಿ ಚೈತ್ರ ಶುದ್ಧ ೫ ಸೋಮವಾರ ಎಂದು ಬರೆಯಲ್ಪಟ್ಟಿದೆ. ಇದು ಕ್ರಿಸ್ತ ಶಕ ೧೬೩೦ ಆಗುತ್ತಿದರಿಂದ ವಿಜಾಪುರ ಪಟ್ಟಣವನ್ನು ಔರಂಗಜೇಬನು ತೆಗೆದುಕೊಳ್ಳುವ ಪೂರ್ವದಲ್ಲಿ (೧೬೮೭) ಅಂದರೆ ಸುಮಾರು ೫೭ ವರ್ಷ ಹಿಂದಿನದು ಇರುತ್ತದೆ. ಇದರಲ್ಲಿ ಕೆಳಗೆ ಬರೆದ ಮೇರೆಗೆ ಬರೆಯಲ್ಪಟ್ಟಿದೆ. "ವಿಜಾಪುರ ಹಿರೇಮಠದ ಮುತ್ತಿನ ಕಂಥಿ ಶಿವಲಿಂಗ ಸ್ವಾಮಿಗಳ ಶಿಷ್ಯ ಮನೆಗಳ ಹೆಸರು:"—ಎಂದು ಇದೆ. ಮತ್ತೊಂದು ಭಾಗದಲ್ಲಿ "ಪಂಚಮಸೆಟ್ಟಿ ನವಾಶ್ಯಾ ಪೇಟಿಯಲ್ಲಿ ಇರತಕ್ಕ ಮನೆಗಳು" ಎಂದು ಬರೆಯಲ್ಪಟ್ಟು ಮನೆಗಳ ಯಜಮಾನರ ಹೆಸರುಗಳೂ ಕೊರೆಯಲ್ಪಟ್ಟಿವೆ. ಮತ್ತು ಅವರ ಬಂಧುವರ್ಗದ ಮನೆಗಳ ಸಂಖ್ಯೆಯು ಮಾತ್ರ ಕೊಡಲ್ಪಟ್ಟಿದೆ. ಈ ಮನೆತನಗಳ ದೇವರ ಹೆಸರು ರಾಚೋಟಿ ವೀರಭದ್ರ ಎಂದು ಕಾಣಿಸಲ್ಪಟ್ಟಿದೆ. ಇದರಲ್ಲಿ ಕಾಣಿಸಿದ ಮನೆತನಗಳೆಲ್ಲವೂ ವಿಜಾಪುರ ಪಟ್ಟಣದಲ್ಲಿಯವೇ ಇರುತ್ತವೆ.

ವಿಜಾಪುರದಲ್ಲಿ ಇರುವ ಪುರಾತನ ವೀರಶೈವ ಮನೆತನಗಳೆಲ್ಲವು ಬಹುಶಃ ಈಗಲೂ ರಾಚೋಟಿ ವೀರಭದ್ರನಿಗೆ ನಡೆದುಕೊಳ್ಳುವದು ತೋರಿ ಬರುತ್ತದೆ. ಮತ್ತು ಅವರು ನೇಲಿಂದ ಮೇಲೆ ಈ ದೇವಸ್ಥಾನದ ದರ್ಶನಕ್ಕೆ ಹೋಗುವದುಂಟು.

ವಿಜಾಪುರದ ಈ ಸೊಪ್ಪೆಯ ಮಠಕ್ಕೆ ಮೈಸೂರಿನ ಕೃಷ್ಣರಾಜ ಒಡೆಯರವರು ಹರಿಹರದ ಸಮೀಪ ಅಮರಾವತಿ ಎಂಬಲ್ಲಿ "ಕಂಠೀ

ರಾವು ಹದಿನೈದು ಹಣದ ಭೂಮಿ” ಯನ್ನು ಸರ್ವಮಾನ್ಯವಾಗಿ ಕೊಟ್ಟಿದ್ದು ತಿಳಿದುಬರುತ್ತದೆ. ಇದು ಕೊಟ್ಟ ಸನದಿನ ವರ್ಷ ೨೬ ನೇ ನವ್ಹಂಬರ ೧೮೨೨ ಇರುತ್ತದೆ. ಇದರಲ್ಲಿ “ಹರಿಹರದಲ್ಲಿರುವ ಶೆಟ್ರ ಭಕ್ತಿಮಠದ ರಾಚವಟ್ಟೆ ದೇವರಿಗೆ” ಎಂದು ಉಲ್ಲೇಖಿಸಲ್ಪಟ್ಟಿದೆ. ಮೇಲ್ಕಂಡ ಸ್ವಾಮಿಗಳು ವಿಜಾಪುರ ಸೊಪ್ಪಿಯ ಮಠದವರೇ ಇದ್ದು ಈ ಸನದಿಗನುಸರಿಸಿ ೨ ಎಕರೆ ೭೦ ಗುಂಟೆ ತರಮು ೫ ರೂಪಾಯಿ ಇಷ್ಟು ಜಮೀನು ಹರಿಹರ ತಾಲೂಕಿನಲ್ಲಿಯ ಅಮರಾವತಿ ಗ್ರಾಮಕ್ಕೆ ಸೇರಿದ್ದನ್ನು ಕೊಟ್ಟ ಬಗ್ಗೆ ಉಲ್ಲೇಖವಿದೆ. ಬೇರೊಂದು ಛಾಪೀ ಸನದು ಇದ್ದು ಇದರ ತಾರೀಖು ೨೬-೨-೧೮೬೯ ಇದೆ. ಮುಂದೆ ಈ ಹರಿಹರದ ಮಠವು ನಿಂತುಹೋಗಲಾಗಿ ಈ ಜಮೀನನ್ನು ಮೈಸೂರ ಸರಕಾರದವರು ಖಾಲಸಾತ ಮಾಡಿದ್ದು ತಿಳಿದುಬರುತ್ತದೆ ಈ ಖಾಲಸಾತ ಮಾಡಿದ ಬಗ್ಗೆ ಮಠದ ಈಗಿನ ಬಾಧ್ಯಸ್ಥರು ಅಪೀಲು ಮಾಡಿಕೊಂಡರೂ ಅದರಿಂದ ಏನೂ ಉಪಯೋಗವಾಗಿಲ್ಲೆಂದು ತಿಳಿಯುತ್ತದೆ.

ಈ ಸೊಪ್ಪಿಯ ಮಠದಲ್ಲಿಯ ಕೈಬರಹದ ಪತ್ರಗಳನ್ನು ನೋಡಲಾಗಿ ಕೆಲವು ಪತ್ರಗಳು ವಿಜಯನಗರದಲ್ಲಿದ್ದ ಒಂದಾನೊಂದು ಮಠದಿಂದ ಬಂದ ಹಾಗೆ ತೋರುತ್ತದೆ. ಬರೆದವರ ಒಕ್ಕಣೆಯು ಕೆಳಗೆ ಬರೆದಂತೆ ಇದೆ. “ಶ್ರೀಮತು ಚತುರ್ದಿಕ್ಕು ಐವತ್ತಾರುದೇಶ ನವಖಂಡ ಪೃಥ್ವಿಯೊಳೊಪ್ಪುವ ಶ್ರೀ ಜಂಬೂದ್ವೀಪ ಸ್ವಯಂಭು ಭೂಕೈಲಾಸ ಪಂಪಾಕ್ಷೇತ್ರ ಮಾತಂಗ ಮಾಲ್ಯವಂತ ಋಷ್ಯಶೃಂಗ ಕಿಷ್ಕಿಂಧ ಹೇಮಕೂಟ ಮಣಿಖಚಿತ ಸಿಂಹಾಸನಾರೂಢರಾದ ಶ್ರೀ ಸಿಂಹಾಸನ ಶಿಖಾಮುದ್ರೆಗೆ ಕಾರಣಕರ್ತರಾದ ಭೂಸನೂರ ಚರಮೂರ್ತಿ ಹುಚ್ಚಪ್ಪಯ್ಯನವರು” ಇತ್ಯಾದಿ ಎಂದು ಇದೆ. ಈ ತರದ ಪತ್ರಗಳು ಕೆಲವು ಇವೆ. ಇವುಗಳಲ್ಲಿ ಯಾವುದರಲ್ಲಿಯೂ ಶಕವರ್ಷವು ತೋರಿಸಲ್ಪಟ್ಟಿಲ್ಲ.

ಕೆಲವು ಪತ್ರಗಳು ವಿಜಾಪುರದಲ್ಲಿಯ ದೈವದವರಿಗೆ ಬರೆದದ್ದಾಗಿ ತೋರುತ್ತದೆ. ಅವು ಬಹುಶಃ ಇಲ್ಲಿಯ ಬಣಜಿಗರಿಗೆ ಬರೆದಿರಬಹುದು. ಅವುಗಳಲ್ಲಿ ಕಾಣಿಸಿದ ಒಕ್ಕಣೆಯು ವಿಲಕ್ಷಣವಾಗಿದೆ. ಅದನ್ನು ನಾನು ಇಲ್ಲಿ ಕೊಡುತ್ತೇನೆ. “ಶೈವಮತ ಸಜ್ಜನ ಸಿದ್ಧ ಶಿವಾಚಾರ ಸಂಪನ್ನ ಗುರುಲಿಂಗ ಜಂಗಮ ಪ್ರೇಮಿಗಳಾದ ಹರಗುರುಭಕ್ತಿಪರಾಯಣರಾದ ಬಂಧುಜನಚಿಂತಾಮಣಿಗಳಾದ ಬಹು ಕುಟುಂಬಕ್ಕೆ ಆಧಾರಿಗಳಾದ ಬಹು ನಿತ್ಯಾನ್ನವಿನೋದಿಗಳಾದ ಪಾದೋದಕ ಪ್ರಸಾದಾಮೃತ ಸೇವಿತರಾದ

ಅಗಣಿತಗುಣ ಗಂಭೀರರಾದ, ಹಾದಿ ಜಗಳ ಹಣ ಒಡ್ಡ ಕೊಟ್ಟುಕೊಂಬುವರಾದ, ಬೀದಿಜಗಳ ಬೆಳೆಕಾಸಿಗೆ ಕೊಂಬುವರಾದ, ಹರುವ (?) ಬಡಿಗೆ ಕಾಲು ಚಾಚುವರಾದ ಸಲ್ಲದ ನಾಣ್ಯ ಸಲ್ಲಿಸುವರಾದ, ಸಲ್ಲುವ ನಾಣ್ಯಕ್ಕೆ ಅಡ್ಡನಿಕ್ಕಿಸುವರಾದ, ಹುಲಿಮೀಸೆ ಉಯ್ಯಾಲೆ ಆಡುವರಾದ, ಗಿಡನ ಪಟ್ಟಣವ ಮಾಡುವರಾದ, ಪಟ್ಟಣ ಹಾಳು ಮಾಡುವರಾದ, ಅಡವಿ ಅಂಗಡಿಯ ಮಾಡುವರಾದ, ಅಂಗ, ವಂಗ, ಕಳಿಂಗ, ಕಾಶ್ಮೀರ, ಗುಜ್ಜರ, ಗೌರಳ ಚಪ್ಪನ್ನ ದೇಶದೊಳೊಪ್ಪುವ ಶ್ರೀ ಹರಧನ ಬಸವೇಶ್ವರ ದೇವರ ಸಾಂಪ್ರದಾಯಕರಾದ ಶಹರ ವಿಜಾಪುರದ ಪೇಟೆಯ ಪಾಚ್ಛಾಪುರ ಸಕ್ರಿ ಬಸಪ್ಪ ......... ಸಮಸ್ತ ದೈವದವರಿಗೆ, ಮಹಾನಾಡ ಮುಂತಾದವರಿಗೆ, ತ್ರಿಸಂಧ್ಯಾಕಾಲದಲ್ಲಿ ಹರಸಿ ಮಾಡುವ ಅನೇಕಾಶೀರ್ವಾದವು"— ಈ ತರದ ಒಕ್ಕಣಿಕೆಗಳು ಕೆಲವು ಪತ್ರಗಳಲ್ಲಿ ಕಂಡು ಬರುತ್ತಿವೆ.

ಮೇಲ್ಕಂಡ ಮಠದ ಕಾಗದ ಪತ್ರಗಳಲ್ಲಿ ನನ್ನ ದೃಷ್ಟಿಗೆ ಬಿದ್ದ ವಿಶೇಷ ಸಂಗತಿಗಳನ್ನು ನಾನು ಇಲ್ಲಿ ವಿವರಿಸಿದ್ದೇನೆ. ಈ ತರದ ಪುರಾತನ ಕಾಗದ ಪತ್ರಗಳು ಕರ್ನಾಟಕದಲ್ಲಿಯ ಅನೇಕ ಮಠಗಳಲ್ಲಿಯೂ ಮಹತ್ವದ ಪುರಾತನ ದೇಸಾಯಿ ಮತ್ತು ಗೌಡರ ಮನೆತನಗಳಲ್ಲಿಯೂ, ಇನ್ನೂ ಅನೇಕ ಸಿಗಬಹುದು. ಇವುಗಳಿಂದ ಕರ್ನಾಟಕ ದೇಶದ ಪೂರ್ವದ ರಾಜಕೀಯ ಮತ್ತು ಸಾಮಾಜಿಕ ಪರಿಸ್ಥಿತಿಯ ಮೇಲೆ ಮಹತ್ವದ ಪ್ರಕಾಶವು ಬೀಳಬಹುದಾಗಿದೆ.

---

## ಶ್ರೀಶೈಲದ ಐತಿಹಾಸಿಕ ವರ್ಣನೆಯು.

ಶ್ರೀಶೈಲ ಬೆಟ್ಟವು ಸಮುದ್ರ ಪಾತಳಿಯಿಂದ ೧೫೦೦ ಫೂಟು ಎತ್ತರದ ಮೇಲೆ ಇರುವಂಥ ಒಂದು ತಪ್ಪಲು ಪ್ರದೇಶವಾಗಿರುವದು. ಅದರ ಪೂರ್ವ ಪಶ್ಚಿಮ ಉದ್ದಳತೆಯು ೩ರಿಂದ ೪ಮೈಲುಗಳ ವರೆಗೂ, ಹಾಗು ದಕ್ಷಿಣೋತ್ತರ ಉದ್ದಳತೆಯು ೬ರಿಂದ ೭ಮೈಲುಗಳ ವರೆಗೂ ಇರುತ್ತದೆ. ಕರ್ನೂಲ ಜಿಲ್ಹೆಯ ನಂದಿಕೊಟಕುರ ತಾಲೂಕಿನ ಹತ್ತರ ಪೂರ್ವ ಮೂಲೆಯಲ್ಲಿ (ಈಶಾನ್ಯ ಮೂಲೆಯಲ್ಲಿ) ರುವ ನಲ್ಲಮಲೈ ಪರ್ವತದ ದಟ್ಟ

ವಾದ ಅರಣ್ಯ ಭೂಮಿಯಲ್ಲಿ ಈ ಬೆಟ್ಟವು ಇರುವದು. ಪೂರ್ವ ಉತ್ತರ ಮತ್ತು ಪಶ್ಚಿಮ ಈ ಮೂರು ದಿಕ್ಕುಗಳಲ್ಲಿ ಈ ಬೆಟ್ಟವು ಕೃಷ್ಣಾನದಿ ಯಿಂದ ಸುತ್ತುಗಟ್ಟಲ್ಪಟ್ಟಿರುವದು. ಈ ಬೆಟ್ಟದ ದಕ್ಷಿಣ ಭಾಗಕ್ಕೆ ಒಂದು ಆಳವಾದ ಕೊಳ್ಳವಿರುವದರಿಂದ ಇದು ಉಳಿದ ಅರಣ್ಯದಿಂದ ವಿಂಗಡಿ ಸಲಾಗಿದೆ. ಈ ಕೊಳ್ಳದಲ್ಲಿ "ಭೀಮುನಿ ಕೊಳನು" ಎಂಬ ಚಿಕ್ಕ ಪ್ರವಾ ಹವು ಹರಿಯುತ್ತದೆ.

ಮಲ್ಲಿಕಾರ್ಜುನ ದೇವರ ಹಾಗೂ ಭ್ರಮರಾಂಬಾ ದೇವಿಯ ದೇವಾ ಲಯಗಳು ಈ ಬೆಟ್ಟದ ತುದಿಯಲ್ಲಿರುವಂಥ ಒಂದು ತಗ್ಗು ಪ್ರದೇಶದಲ್ಲಿ ರುವವು. ಈ ದೇವಾಲಯಗಳ ಸುತ್ತಲೂ ೨೨ ಫೂಟು ಎತ್ತರವಾದ ಭವ್ಯವಾದ ಕೋಟೆಯ ಗೋಡೆಗಳಿರುವವು. ಈ ಆವಾರ ಗೋಡೆಗಳೊಳ ಗಿನ ಪಟಾಂಗಣವು ೬೦೦ ಪೂಟು ಉದ್ದ, ೫೦೦ಫೂಟು ಅಗಲು ಇರುವದು.

ಯಾತ್ರಿಕರು ಹೋಗುವ ಶಿಖರೇಶ್ವರ ಹಾಗೂ ಹಾಟಕೇಶ್ವರ ದೇವಾ ಲಯುಗಳೆಂಬ ಎರಡು ಪ್ರಮುಖ ಗುಡಿಗಳು ಈ ದೇವಾಲಯದ ಆಗ್ನೇಯ ದಿಕ್ಕಿನಲ್ಲಿ ೬ ಮೈಲುಗಳ ಅಂತರದಲ್ಲಿವೆ. ಶಿಖರೇಶ್ವರ ಗುಡಿಯು ಆ ತಪ್ಪಲು ಪ್ರದೇಶದ ಅತ್ಯುನ್ನತ ಸ್ಥಳದಲ್ಲಿದ್ದು ಅಲ್ಲಿಂದ ಕೃಷ್ಣಾನದಿಯು ಕಾಣಬರುತ್ತದೆ. ಯಾತ್ರಾರ್ಥ ಬರುತ್ತಲಿರುವವರು ಅದೇ ಸ್ಥಳದಿಂಥಲೇ ಮಲ್ಲಿಕಾರ್ಜುನ ದೇವಾಲಯದ ಶಿಖರವನ್ನು ನೋಡಲು ಬಗೆಯುವರು.

ಈ ದೇವಾಲಯದ ಪಶ್ಚಿಮ ಭಾಗಕ್ಕೆ ಒಂದು ಮೈಲು ಅಂತರ ದಲ್ಲಿ ಘಂಟಾಮಠ, ವಿಭೂತಿಮಠ, ರುದ್ರಾಕ್ಷಿಮಠ, ಸಿದ್ಧುಲಮಠ ಮತ್ತು ಸಾರಂಗಧರಮಠವೆಂಬ ಐದು ಮಠಗಳಿರುವವು. ಈ ಮಠಗಳು ಸರ ಸ್ವತಿವಗು ಎಂಬ ಸಣ್ಣ ಹಳ್ಳದ ದಂಡೆಯ ಮೇಲಿರುವವು. ಆರಂಭದಲ್ಲಿ ಇವುಗಳು ತಪಸ್ಸು ಮಾಡಲು ತಕ್ಕ ಸ್ಥಳಗಳಾದ್ದರಿಂದ, ಆಪ್ರಕಾರ ಅವು ಉಪಯೋಗ ಮಾಡಲ್ಪಡುತ್ತಿದ್ದವು.

ಈ ದೇವಾಲಯದ ಸುತ್ತಲೂ ಅಷ್ಟಭೈರವರಿಗಾಗಿ ಕಟ್ಟಿಸಿದ ಎಂಟು ಚಿಕ್ಕ ದೇವಾಲಯಗಳುಂಟು. ಇವುಗಳ ಹೊರ್ತಾಗಿ ಆ ತಪ್ಪಲು ಪ್ರದೇ ಶದಲ್ಲಿ ಅಸಂಖ್ಯ ಚಿಕ್ಕ ಚಿಕ್ಕ ಶಿವದೇವಾಲಯಗಳು ಅಲ್ಲಲ್ಲಿ ಕಂಗೊಳಿ ಸುವವು.

ಭಗ್ನಾವಶೇಷವಾದಂಥ ಅನೇಕ ಕಟ್ಟಡಗಳನ್ನೂ, ಅಳಿದುಳಿದಂಥ ಕಲ್ಲುಹಾಸಿಗೆಯ ಬೀದಿಗಳನ್ನೂ ಈ ದೇವಾಲಯದ ದಕ್ಷಿಣಕ್ಕೂ ಪಶ್ಚಿಮಕ್ಕೂ ಕಾಣಬಹುದು. ಅದರಂತೆಯೇ ಪೂರ್ವ ಭಾಗದಲ್ಲಿ ರಥಬೀದಿಯ ಅವಶೇಷಗಳನ್ನೂ, ಹಾಳಾದ ಪೇಟೆಯನ್ನೂ ಈಗಲೂ ಕಾಣಬಹುದು.

ಶ್ರೀಶೈಲದ ಸುತ್ತಲಿರುವ ಪ್ರದೇಶವು ವಿಜಯನಗರ ಸಾಮ್ರಾಜ್ಯದ ಕೃಷ್ಣದೇವರಾಯನ ಕಾಲದಲ್ಲಿ ಶ್ರೀಶೈಲವೆಂಬ ಹೆಸರಿನ ಒಂದು ಚಿಕ್ಕ ಪ್ರಾಂತವಾಗಿದ್ದಿತೆಂದೂ ಆ ಪ್ರಾಂತಕ್ಕೆ ಒಬ್ಬ ಪ್ರಾಂತಾಧಿಪತಿಯು ಇದ್ದನೆಂತಲೂ ಈ ದೇವಾಲಯದಲ್ಲಿರುವ ಶಿಲಾಲಿಪಿಗಳಿಂದ ತಿಳಿದುಬರುತ್ತದೆ. ಈ ಪ್ರದೇಶವು ಮುಚ್ಚಿದ ಬಾವಿಗಳಿಂದಲೂ ಕೆರೆಗಳಿಂದಲೂ ಜಲಪ್ರವಾಹಗಳಿಂದಲೂ ಹಾಗೂ ಬೇರೆ ನೀರಿನ ಝುರಿಗಳಿಂದಲೂ ತುಂಬಿರುವದು. ಮಹಮ್ಮದೀಯರಿಂದ ಗೆದೆಯಲ್ಪಟ್ಟ ನಂತರ ಈ ಪ್ರದೇಶವು ಹಾಳು ಬಿದ್ದಂತೆ ತೋರುತ್ತದೆ. ೧೮ ನೆಯ ಶತಮಾನದಲ್ಲಿ ಮುನಾವರಖಾನನ ಕಾಲದಲ್ಲಿ ಈ ಪ್ರದೇಶವು ಸುಲಿಗೆಗಾರರಿಂದ ಸುಲಿಯಲ್ಪಟ್ಟ ತರುವಾಯ ಉಳಿದ ಕೆಲವು ಮನೆತನಗಳೂ ಈ ಸ್ಥಳವನ್ನು ಬಿಟ್ಟವೆಂದು ಕಂಡು ಬರುತ್ತದೆ. ಕೆಲವು ಚಂಚು ಮನೆತನಗಳು ಹಾಗೂ ದೇವಾಲಯದ ಅರ್ಚಕರು ಇವರ ಹೊರ್ತಾಗಿ ಈ ಪ್ರದೇಶದಲ್ಲಿ ಯಾರೂ ವಾಸಿಸುವದಿಲ್ಲ.

## ಶ್ರೀಶೈಲ ನಾಮೋತ್ಪತ್ತಿ.

ಇದರ ಸ್ಥಲ ಮಹಾತ್ಮ್ಯದಿಂದ ತಿಳಿದುಬರುವ ಪೌರಾಣಿಕ ಚರಿತ್ರೆಯೇನಂದರೆ:— ಶಿಲಾದ ಮುನಿಯು ಒಂದು ಪರ್ವತದ ಮೇಲೆ (ಸದ್ಯದ ಶ್ರೀಶೈಲ ಪರ್ವತದ ಮೇಲೆ) ತಪಸ್ಸನ್ನು ಮಾಡಿದನು. ಶಿವಾನುಗ್ರಹದಿಂದ ಆತನು ನಂದೀಶ್ವರ ಹಾಗೂ ಪರ್ವತರೆಂಬ ಇಬ್ಬರು ಮಕ್ಕಳನ್ನು ಪಡೆದನು. ಪರ್ವತನಾದರೂ ತಪಸ್ಸು ಮಾಡಿ ಕೈಲಾಸವನ್ನು ಬಿಟ್ಟು ತಾನು ತಪಸ್ಸನ್ನು ಮಾಡಿದಂಥ ಪರ್ವತದ ಮೇಲೆಯೇ ಸ್ಥಾಯಿಕವಾಗಿ ವಾಸವಾಗಿರಲು ಶಿವನನ್ನು ಪ್ರಾರ್ಥಿಸಿದನು. ಅವನ ಪ್ರಾರ್ಥನೆಯು ಮೇರೆಗೆ ಶಿವನು ಆ ಪರ್ವತದ ಮೇಲೆ ಲಿಂಗರೂಪದಲ್ಲಿ ಕಾಣಿಸಿಕೊಂಡು ಪರ್ವತಲಿಂಗವೆಂಬ ಹೆಸರಿನಿಂದ ಪ್ರಸಿದ್ಧನಾದನು.

ವಸುಮತಿಯೆಂಬ ಋಷಿಯ ಕನ್ಯೆಯು ದೀರ್ಘತಪಸ್ಸನ್ನಾಚರಿಸಿ ಬ್ರಹ್ಮನನ್ನು ಪ್ರಾರ್ಥಿಸಿ ಶ್ರೀದೇವಿಯೆಂಬ ಶುಭಸೂಚಕವೂ, ಮನೋಹ

ರವೂ ಆದ ಹೆಸರನ್ನು ಧರಿಸಿಕೊಳ್ಳಲು ಅಪ್ಪಣೆಯನ್ನು ಪಡೆದುಕೊಂಡಳು. ಶ್ರೀ ಪರ್ವತವು ಅವಳ ಹೆಸರಿನಿಂದಲೇ ಕರೆಯಲ್ಪಡುತ್ತಿರುವದು.

## ಮಲ್ಲಿಕಾರ್ಜುನ ನಾಮೋತ್ಪತ್ತಿ.

ಚಂದ್ರಾವತಿಯೆಂಬ ಗುಪ್ತಮನೆತನದ ರಾಜ ಕನ್ಯೆಯು ಶ್ರೀಶೈಲ ಪರ್ವತದ ಮೇಲೆ ಅರ್ಜುನ ಅಥವಾ ಮದ್ದಿ ವೃಕ್ಷಗಳ ಹೂವುಗಳ ಬಣ್ಣದಂತಿರುವ ಮಲ್ಲಿಗೆಯ ಹೂವುಗಳಿಂದ ಶಿವನನ್ನು ಪೂಜಿಸಿದಳು. ಈ ರಾಜ ಕನ್ಯೆಯ ಪೂಜೆಗೆ ಒಳ್ಳೇ ಸಂತುಷ್ಟನಾಗಿ ಶಿವನು ತನ್ನನ್ನು ಮಲ್ಲಿಕಾರ್ಜುನನೆಂದು ಕರೆದುಕೊಳ್ಳಬೇಕೆಂದು ಅವಳು ಕೇಳಿದ ವರವನ್ನು ಅವಳಿಗೆ ಕೊಟ್ಟನು. ಅಂದಿನಿಂದಲೂ ಶ್ರೀ ಪರ್ವತದ ಮೇಲಿರುವ ಲಿಂಗವು ಶ್ರೀಶೈಲ ಮಲ್ಲಿಕಾರ್ಜುನನೆಂಬ ಹೆಸರನ್ನು ಹೊಂದಿರುವದು.

## ಶ್ರೀಶೈಲ ಮಲ್ಲಿಕಾರ್ಜುನನ ಮಹತ್ವ.

ಶ್ರೀಶೈಲ ಪರ್ವತದ ಮೇಲಿರುವ ಮಲ್ಲಿಕಾರ್ಜುನ ಲಿಂಗವು ೧೨ ಜ್ಯೋತಿರ್ಲಿಂಗಗಳಲ್ಲಿ ಒಂದಾಗಿರುವದರಿಂದ ಯಾವತ್ತೂ ಹಿಂದುಗಳಿಗೆ ಅದರಲ್ಲಿ ವಿಶೇಷತಃ ವೀರಶೈವರಿಗೆ ಬಹಳ ಪೂಜ್ಯವಾಗಿರುವದು. ಪ್ರತಿಯೊಬ್ಬ ಹಿಂದುವು ಪೂಜಾರಿಯ ಮಧ್ಯಸ್ತಿಕೆಯಿಲ್ಲದೆ ಲಿಂಗವನ್ನು ಸ್ವಂತ ಪೂಜಿಸುವದೊಂದು ವಿಶೇಷ ಸಂಗತಿಯು. ಮಲ್ಲಿಕಾರ್ಜುನ ದೇವರ ಪ್ರತಿ ದಿವಸದ ಪೂಜೆಯನ್ನು ಜಂಗಮ (ವೀರಶೈವ) ಪೂಜಾರಿಯು ಮಾಡುತ್ತಿರುವನು. ಭ್ರಮರಾಂಬಾದೇವಿಯು ಹಿಂದುಸ್ತಾನವನ್ನು ಸಂರಕ್ಷಿಸುವ ೧೮ ಶಕ್ತಿಗಳಲ್ಲಿ ಒಬ್ಬಳು. ಅಲ್ಲಿಯ ಪ್ರತಿ ದಿವಸದ ಪೂಜೆಯನ್ನು ಒಬ್ಬ ಬ್ರಾಹ್ಮಣನು ಮಾಡುತ್ತಿರುವನು.

## ಶ್ರೀಶೈಲ ಪರ್ವತದ ಪ್ರಾಚೀನತೆ.

ಈ ದೇವಾಲಯವು ಪೌರಾಣಿಕ ಕಾಲದ್ದು. ಇದರ ಉಲ್ಲೇಖವು ಮಹಾಭಾರತದಲ್ಲಿಯೂ ಸ್ಕಾಂದ ಪುರಾಣದಲ್ಲಿಯೂ ಬಂದಿರುವದು. ಈಗಲೂ ಪಾಂಡವ ದೇವಾಲಯಗಳೆಂದು ಪ್ರಸಿದ್ಧವಾಗಿರುವ ಐದು ಚಿಕ್ಕ ದೇವಾಲಯಗಳು ಈ ಅಭಿಪ್ರಾಯಕ್ಕೆ ಬಲಕೊಡುತ್ತವೆ.

ಫಾಹಿಯನ ಮತ್ತು ಹ್ಯುಯೆನತ್ಸಾಂಗ ಎಂಬ ಬೌದ್ಧ ಪ್ರವಾಸಿಕರ ಟಿಪ್ಪಣೆಗಳಲ್ಲಿ ಶ್ರೀ ಪರ್ವತದ ಹಾಗು ೧ನೆಯ ಶತಮಾನದಲ್ಲಿ

ಬಾಳಿಹೋದಂಥ ಮಹಾಯಾನವೆಂಬ ಬೌದ್ಧ ಪಂಥದ ಉತ್ಪಾದಕನಾದ ನಾಗಾರ್ಜುನನನ ಉಲ್ಲೇಖಗಳು ಕಂಡುಬರುವವು. ಶ್ರೀಶೈಲಕ್ಕೂ ಗುಪ್ತವಂಶದ ರಾಜಕನ್ಯೆಗೂ ಸಂಬಂಧವನ್ನು ತೋರಿಸುವ ಪೌರಾಣಿಕ ಕಥೆಯು ಆ ಸ್ಥಳದ ಅತಿ ಪ್ರಾಚೀನತೆಯನ್ನು ತೋರಿಸುತ್ತದೆ. ಶ್ರೀ ಶಂಕರಾಚಾರ್ಯರು ಶಿವಾನಂದಲಹರಿಯ ಎರಡು ಶ್ಲೋಕಗಳಲ್ಲಿ ಮಲ್ಲಿಕಾರ್ಜುನ ದೇವರನ್ನೂ, ಭ್ರಮರಾಂಬಾ ದೇವಿಯನ್ನೂ, ಸ್ತುತಿಸಿರುವರು. ಸುಮಾರು ೭ನೆಯ ಅಥವಾ ೮ನೆಯ ಶತಮಾನದಲ್ಲಿ ಒಳ್ಳೇ ಪ್ರಸಿದ್ಧಿ ಹೊಂದಿದ ಅಪ್ಪಾರ, ಸುಂದರರ್ ಮತ್ತು ಸಮ್ಮಂಧರ್‌ರೆಂಬ ತಮಿಳು ಸತ್ಪುರುಷರು ದೇವರಮ್‌ದಲ್ಲಿ ಶ್ರೀಶೈಲ ದೇವಾಲಯದ ಮುಖ್ಯ ದೇವತೆಗಳನ್ನು ಸ್ಮರಿಸಿರುವರು.

**ದೇವಾಲಯದ ಆವಾರ ಗೋಡೆಗಳೊಳಗಿನ ಪ್ರಮುಖ ಗುಡಿಗಳು.**

ಇದಕ್ಕೆ ಉನ್ನತವಾದ ಆವಾರ ಗೋಡೆಗಳಿದ್ದು ಪಟಾಂಗಣದ ಉತ್ತರ ದಕ್ಷಿಣ ಮತ್ತು ಪೂರ್ವ ಭಾಗಗಳಲ್ಲಿ ಜೀರ್ಣಸ್ಥಿತಿಯಲ್ಲಿದ್ದಂಥ ಮತ್ತು ಬುರುಜುಗಳುಳ್ಳಂಥ ಅಗಸೆಗಳಿರುವವು. ಪಶ್ಚಿಮದ ಅಗಸಿಯು ಅಪೂರ್ಣವಾಗಿರುವದು. ಉತ್ತರ ದಿಕ್ಕಿನ ಬುರುಜಿಗೆ ಶಿವಾಜಿಯ ಗೋಪುರವೆಂದು ಕರೆಯುತ್ತಾರೆ.

ಪಟಾಂಗಣದ ಮಧ್ಯದಲ್ಲಿ ಒಳಅಂಗಣವಿರುವದು. ಈ ಒಳಅಂಗಣದಲ್ಲಿ ಮುಖ್ಯ ದೇವಾಲಯವಾದ ಮಲ್ಲಿಕಾರ್ಜುನ ದೇವಾಲಯ ಹಾಗೂ ಅದಕ್ಕೆ ಸಂಬಂಧಿಸಿದ ಕಟ್ಟಡಗಳೂ ಇರುವವು. ಮುಖ್ಯ ದೇವಾಲಯವು ಕಲ್ಲಿನಿಂದ ಕಟ್ಟಲ್ಪಟ್ಟ ಸಣ್ಣದೊಂದು ಕಟ್ಟಡವಿರುವದು. ಅದರ ಮುಂಭಾಗದಲ್ಲಿ ವಿಜಯನಗರದ ಅರಸನಾದ ೨ನೆಯ ಹರಿಹರನು ಕ್ರಿ. ಶ. ೧೪೦೫ರಲ್ಲಿ ಕಟ್ಟಿಸಿದ ಮುಖಮಂಟಪವು ಅಂದರೆ ಕಂಬಗಳಿಂದ ಕೂಡಿದ ಸಭಾಮಂಟಪವಿರುವದು. ಪೂರ್ವ ಭಾಗಕ್ಕಿರುವ ಅಗಸಿಯ ಹಾಗು ಈ ಮುಖಮಂಟಪದ ನಡುವೆ ಕಂಬಗಳಿದ್ದ ೨ ಸಭಾ ಮಂಟಪಗಳಿರುತ್ತವೆ. ಅಲ್ಲಿ ಅನೇಕ ಶಿಲಾಲಿಪಿಗಳಿರುವವು. ಅವೆರಡರಲ್ಲಿ ಒಂದು ಚಿಕ್ಕದಿದ್ದು ಅದರ ಹೆಸರು ವೀರಮಂಟಪವೆಂದಿರುವದು. ಶಕೆ ೧೨೯೯ರಲ್ಲಿ ಅಣವೆಮರಡ್ಡಿಯು ಇದನ್ನು ದಾನವಾಗಿ ಕೊಟ್ಟಿರುವನು. ಇನ್ನೊಂದು ಇದಕ್ಕಿಂತ ದೊಡ್ಡದಿದ್ದು ಅದರಲ್ಲಿ ಭವ್ಯವಾದ ನಂದಿಯ ಮೂರ್ತಿ ಇರುವದು. ದೇವಾಲಯದ ಉತ್ತರ ಭಾಗದಲ್ಲಿ ವೃದ್ಧ ಮಲ್ಲಿಕಾರ್ಜುನ ಗುಡಿ

ಇರುವದು. ಈ ಗುಡಿಯಲ್ಲಿ ರಾಜಕುಮಾರಿಯಾದ ಚಂದ್ರಾವತಿಯಿಂದ ಮಲ್ಲಿಕಾಕುಸುಮಗಳಿಂದ ಅರ್ಚಿಸಲ್ಪಟ್ಟ ಲಿಂಗವಿರುವದೆಂದು ಹೇಳಲ್ಪಡುವದು. ಈ ಗುಡಿಯ ಪೂರ್ವಕ್ಕೆ ಸಹಸ್ರಲಿಂಗೇಶ್ವರ ಗುಡಿ ಇರುವದು. ಈ ಗುಡಿಯಲ್ಲಿರುವ ಲಿಂಗದಲ್ಲಿ ಆಕಾರಶುದ್ಧವಾಗಿ ಕಟ್ಟಿದಂಥ ಒಂದು ಸಾವಿರ ಚಿಕ್ಕ ಚಿಕ್ಕ ಲಿಂಗಗಳಿರುವವು. ಈ ಲಿಂಗವು ಮನೋಹರವಾಗಿ ನುಣುಪು ಮಾಡಿದಂಥ ಕರಿಯ ಕಲ್ಲಿನ ಗದ್ದುಗೆಯ ಮೇಲೆ ಸ್ಥಾಪಿಸಲ್ಪಟ್ಟಿರುವದು. ಈ ಗುಡಿಯ ಪಶ್ಚಿಮಕ್ಕೆ ಸುಂದರವಾದ ಬಲಿಪೀಠವಿರುವದು. ಇದರ ನೆರೆಯಲ್ಲಿ ವೀರಭದ್ರ ಗುಡಿ ಇರುವದು. ಇವೆರಡೂ ಗುಡಿಗಳನ್ನು ರಾಜಮಹೇಂದ್ರಿಯ ಒಬ್ಬ ಶ್ರೀಮಂತ ವರ್ತಕನು ಕಟ್ಟಿಸಿರುವನೆಂದು ಹೇಳುತ್ತಾರೆ. ಇದರ ಸಮೀಪದಲ್ಲಿ ಸುಂದರವಾಗಿ ಕಟ್ಟಿದಂಥ ಮಲ್ಲಿಕಾಗುಂಡವೆಂಬ ಕೆರೆಯ ಮಧ್ಯದಲ್ಲಿ ವಸಂತ ಮಂಟಪವಿರುವದು. ವರ್ಷಕ್ಕೊಮ್ಮೆ ತೆಪ್ಪದ ಮಹೋತ್ಸವಕ್ಕಾಗಿ ದೇವರನ್ನು ಅಲ್ಲಿಗೆ ಒಯ್ಯುವರು. ಮುಖ್ಯ ದೇವಾಲಯದ ಪಶ್ಚಿಮ ಗೋಡೆಯ ಸಮೀಪದಲ್ಲಿ ಒಂದೇ ಸಾಲಿನಲ್ಲಿ ಆರು ಚಿಕ್ಕ ಗುಡಿಗಳಿರುವವು. ಇವುಗಳಲ್ಲಿ ಐದು ಪಂಚಪಾಂಡವರ ಗುಡಿಗಳೆಂಬ ಉಲ್ಲೇಖವು ಈ ಮೊದಲು ಬಂದಿರುವದು. ಆರನೆಯದು ಶ್ರೀ ಪಾರ್ವತಿಯ ಗುಡಿಯು.

ಈ ಒಳಅಂಗಣದ ಸುತ್ತಲೂ ಕುಮಾರಸ್ವಾಮಿ, ಪಂಚನಂದೀಶ್ವರ ಹಾಗೂ ರಾಜರಾಜೇಶ್ವರಿ ಗುಡಿಗಳಿರುವವು. ಕುಮಾರಸ್ವಾಮಿಯ ಗುಡಿಯ ಸಮೀಪದಲ್ಲಿ ಶಕೆ. ೧೪೫೧ ರಲ್ಲಿದ್ದ ಕೃಷ್ಣದೇವರಾಯನ ಪ್ರಸಿದ್ಧ ಮಂತ್ರಿಯಾದ ಚಂದ್ರಶೇಖರರಾಯನು ಕಟ್ಟಿಸಿದ ಕಲ್ಯಾಣ ಮಂಟಪವಿರುವದು.

ದೇವಾಲಯದ ದಕ್ಷಿಣ ಭಾಗದಲ್ಲಿ ದೇವಾಲಯದ ಪಾಕಶಾಲೆ ಇರುವದು. ಅಲ್ಲಿ ಶ್ರೀಶೈಲ ರಾಜ್ಯದ ಕರ್ಣನಾದ ಯಲಿಕಂಟಿ ಕಮರಜುವಿನ ಪುತ್ರರು ಶ್ರೀ ಅನ್ನಪೂರ್ಣಾಭವಾನಿಯ ಮೂರ್ತಿಯನ್ನು ಸ್ಥಾಪಿಸಿದ್ದರು.

ಒಳಅಂಗಣದ ಪಶ್ಚಿಮ ಭಾಗದಲ್ಲಿ ಶ್ರೀಮಲ್ಲಿಕಾರ್ಜುನ ದೇವಾಲಯಕ್ಕಿಂತಲೂ ಎತ್ತರವಾದ ಸ್ಥಳದಲ್ಲಿ ಬೇರೊಂದು ಚಿಕ್ಕ ಆವಾರಗೋಡೆಯಲ್ಲಿ ಅಂಬಾದೇವಿಯ ಗುಡಿ ಇರುವದು. ಅನೇಕಾಕೃತಿಗಳ ಕೆತ್ತಿಗೆಯ ಕೆಲಸವಲ್ಲದೆ ಗೋಡೆಯ ಮೇಲೆ ರಾಮಾಯಣದೊಳಗಿನ ದೃಶ್ಯಗಳನ್ನು ಕಟೆದಿರುವರು. ಇದರ ಪಶ್ಚಿಮ ಗೋಡೆಯಲ್ಲಿರುವ ದ್ವಾರವು

ಇಲ್ಲಿಯ ವರೆಗೆ ಮುಚ್ಚಲ್ಪಟ್ಟಿದ್ದು ಈಗ ಸ್ವಚ್ಛ ಮಾಡಲ್ಪಟ್ಟಿದೆ. ಇದರಿಂದ ಇಲ್ಲಿಯ ವರೆಗೆ ಮರೆಯಾಗಿದ್ದ ದೇವಾಲಯದ ಪೂರ್ವ ದಿಕ್ಕಿನ ಗೋಪುರಕ್ಕೆ ಸರಿಯಾದ ಗೋಪುರವನ್ನು ಕಟ್ಟಿಸಲು ಸಿದ್ಧ ಮಾಡಿದ ನೆಲಗಟ್ಟು ಬೈಲಿಗೆ ಬಿದ್ದಿರುವದು. ಅಂಬಾದೇವಿಯ ಗುಡಿಯ ಮಹಾದ್ವಾರದ ಸಮೀಪದಲ್ಲಿ ಮಲ್ಲಿಕಾರ್ಜುನ ದೇವಾಲಯದ ಹತ್ತಿರದಲ್ಲಿದ್ದು ಗುಡಿಯಕ್ಕಿಂತಲೂ ಚಿಕ್ಕದಾದ ಬೇರೊಂದು ಸಹಸ್ರಲಿಂಗ ಗುಡಿಯುಂಟು.

ದೇವಾಲಯದ ಆವಾರ ಗೋಡೆಯೊಳಗೆ ೧೦ ಬಾವಿಗಳಿರುವವು. ಅವುಗಳಲ್ಲಿ ೪ ಬಾವಿಗಳು ಸೂರ್ಯನ ನೀಟಾದ ಕಿರಣಗಳ ಪತನವನ್ನು ತಡೆಯುವ ಹಾಗೆ ಆಚ್ಛಾದಿಸಲ್ಪಟ್ಟಿರುವವು. ಪೂರ್ವದ ಅಗಸೆಯ ಹೊರಮಗ್ಗಲು ಪಾತಾಳಗಂಗೆಯೆಂದು ಹೆಸರನ್ನು ಪಡೆದ ಕೃಷ್ಣಾನದಿಗೆ ಹೋಗುವ ದಾರಿಯ ಇಕ್ಕೆಲದಲ್ಲಿಯೂ ಸದ್ಯಕ್ಕೆ ಉಪಯೋಗಿಸಲು ಅಯೋಗ್ಯವಿರುವ ಮಂಟಪಗಳ ಸಾಲುಗಳಿರುವವು. ಇವುಗಳನ್ನು ೧೬ನೆಯ ಶತಮಾನದಲ್ಲಿ ಕೃಷ್ಣದೇವರಾಯನು ಕಟ್ಟಿಸಿದನು. ಪಾತಾಳಗಂಗೆಗೆ ಹೋಗುವ ಈ ದಾರಿಯು ಸುಮಾರು ೨ಮೈಲು ಉದ್ದವಿದ್ದು ದಾರಿಯುದ್ದಕ್ಕೂ ಪಾವಟಿಗೆಯ ಸಾಲುಗಳಿರುವವು. ನದಿಯಲ್ಲಿಯ ನೀರು ಸಮುದ್ರದಲ್ಲಿಯ ನೀರಿನಂತೆ ಹಸರು ವರ್ಣದ್ದಿರುವದು. ಬ್ರಹ್ಮಗಿರಿ, ವಿಷ್ಣುಗಿರಿ, ಹಾಗೂ ರುದ್ರಗಿರಿ ಎಂಬ ಮೂರು ಸಣ್ಣ ಬೆಟ್ಟಗಳಿಂದ ಸುತ್ತುಗಟ್ಟಲ್ಪಟ್ಟು ನೋಡಲಿಕ್ಕೆ ಒಂದು ದೊಡ್ಡ ಸರೋವರದ ಹಾಗೆ ಕಾಣುತ್ತದೆ.

ಉಪಯೋಗದಲ್ಲಿಲ್ಲದ ಇನ್ನೊಂದು ಸೋಪಾನಾವಳಿಯು ಮೊದಲಿನದರಷ್ಟು ಕಡಿದಾದದ್ದಿಲ್ಲ. ಅದೂ ಕೂಡ ನದಿಗೇ ಹೋಗಿ ಕೂಡುತ್ತದೆ.

ಈ ಪಾವಟಿಗೆಗಳನ್ನು ೧೪ನೆಯ ಶತಮಾನದಲ್ಲಿ ಅಣವೆಮರಡ್ಡಿ ಎಂಬವನು ಕಟ್ಟಿಸಿದನೆಂದೂ ಹಿಂದಿನಿಂದ ಕದಂಬ ರಾಜ ಕುಮಾರಿಯಾದ ವಿಠ್ಠಲಾಂಬೆಯು ಜೀರ್ಣೋದ್ಧಾರ ಮಾಡಿಸಿದಳೆಂದೂ ಪ್ರಸಿದ್ಧಿ ಇರುವದು.

ಪಾತಾಳಗಂಗೆಯ ಹತ್ತರ ನದಿಯು ಬಹಳ ಪವಿತ್ರವಾದದ್ದಿರುವದೆಂದು ಕಲ್ಪನೆಯಿದ್ದದರಿಂದ ಸಾವಿರಾರು ಯಾತ್ರಿಕರು ಅಲ್ಲಿ ಸ್ನಾನಕ್ಕಾಗಿ ಹೋಗುವರು. ಸ್ನಾನ ಮಾಡುವ ಘಟ್ಟದಿಂದ ಸುಮಾರು ೧೦೦ಯಾರ್ಡು

ಗಳ ಅಂತರದಲ್ಲಿ ನರಸಿಂಹ ಬಲವಮ್ ಎಂಬ ಗುಹೆಯು ಇರುತ್ತದೆ. ಆ ಗುಹೆಯಲ್ಲಿ ನರಸಿಂಹನ ಶಿಲಾಮೂರ್ತಿಯೊಂದು ಇರುವದು.

## ದಾನಗಳು.

ಮಲ್ಲಿಕಾರ್ಜುನ ದೇವರ ಮೇಲ್ಭಾಗದಲ್ಲಿರುವ ಸೋಪಾನಯುಕ್ತ ಗೋಪುರವೂ ಅದರ ಬಾಗಿಲು ಚೌಕಟ್ಟುಗಳೂ ಛಾವಣಿಯನ್ನು ಶೃಂಗರಿಸಿದ ನಂದಿ ವಿಗ್ರಹಗಳೂ ಒಂದಾನೊಂದು ಕಾಲದಲ್ಲಿ ಬಂಗಾರದ ನೀರು ಕೊಟ್ಟ ತಾಮ್ರದ ತಗಡುಗಳಿಂದ ಅಣವೆಮರಡ್ಡಿ ಶಾಂತಲಿಂಗಾರ್ಯ ಮೊದಲಾದವರಿಂದ ಹೊದಿಸಲ್ಪಟ್ಟಿದ್ದವು. ಶಿಲಾಲಿಪಿಗಳಾದರೂ ಬೇರೆ ಬೇರೆ ರಾಜಕುಮಾರರು ದರ್ಶನಕ್ಕಾಗಿ ಶ್ರೀಶೈಲಕ್ಕೆ ಆಗಮಿಸಿದಾಗ್ಗೆ ಜಹಗೀರುಗಳನ್ನೂ, ಭೂಮಿಗಳನ್ನೂ, ಕೆರೆ ಮೊದಲಾದವುಗಳನ್ನೂ, ಮಲ್ಲಿಕಾರ್ಜುನ ದೇವರಿಗೆ ಸಮರ್ಪಿಸಿದ ಸಂಗತಿಗಳನ್ನೇ ಸೂಚಿಸುತ್ತವೆ.

## ಪ್ರತಿಮೆಗಳು.

ದೇವಾಲಯದಲ್ಲಿ ದೊರೆತ ಧಾತುಕೃತ ಅನೇಕ ಪ್ರತಿಮೆಗಳಲ್ಲಿ ೩ ನಟರಾಜ ಮೂರ್ತಿಗಳಲ್ಲಿ ೨ ಮೂರ್ತಿಗಳು, ಮತ್ತು ಪಾರ್ವತಿ ಪರಮೇಶ್ವರರ ಮಧ್ಯದಲ್ಲಿ ಕೂತಂಥ ಸೋಮಸ್ಕಂದ ಇವರೆಲ್ಲರ ಸಾಮುದಾಯಿಕ ಮೂರ್ತಿಯೂ ಒಳ್ಳೇ ಮನೋಹರವಿರುವವು. ದಕ್ಷಿಣ ಹಿಂದುಸ್ಥಾನದಲ್ಲಿ ದೊರೆತ ಯಾವತ್ತೂ ಮೂರ್ತಿಗಳಲ್ಲಿ ಈ ಮೂರ್ತಿಗಳು ಅತ್ಯಂತ ದೊಡ್ಡವೂ ಒಳ್ಳೇ ಸುಂದರವಾದವುಗಳೂ ಎಂದು ತಿಳಿಯಲ್ಪಡುತ್ತವೆ.

## ಕೆತ್ತಿಗೆಯ ಕೆಲಸಗಳು.

ಶ್ರೀಶೈಲ ದೇವಾಲಯದ ಪುರಾತನ ಕೆತ್ತಿಗೆಯ ಕೆಲಸಗಳಲ್ಲಿ ದೇವಾಲಯಗಳನ್ನು ಸುತ್ತುಗಟ್ಟಿದ ಕೋಟೆಯ ಗೋಡೆಗಳ ಹೊರಭಾಗದಲ್ಲಿ ಕೊರೆದ ಕೆತ್ತಿಗೆಯ ಕೆಲಸಗಳು ವಿಶೇಷವಾಗಿ ಉಲ್ಲೇಖಿಸಲು ಅರ್ಹವಾಗಿವೆ. ಅವು ೫ ಫೂಟು ಉದ್ದ ೪ ಫೂಟು ಅಗಲವಾದ ದೊಡ್ಡ ಕಲ್ಲುಗಳ ಮೇಲೆ ಕೊರೆಯಲ್ಪಟ್ಟಿದ್ದು ಒಂದರ ಮೇಲೊಂದು ಅನೇಕ ಸಾಲುಗಳಾಗಿ ದಂಡೆಗಳ ಮೇಲೆ ಕೂಡಹಾಕಲ್ಪಟ್ಟಿರುವವು. ಶಿವನ ಯಾವತ್ತೂ ಪ್ರಸಿದ್ಧ ರೂಪುಗಳನ್ನು ತೋರಿಸಿದ್ದು ಅವುಗಳಿಗೆ ಸಂಬಂಧಿಸಿದಂಥ ಪೌರಾಣಿಕ ಕಥೆಗಳನ್ನೂ ಕೂಡ ಸವಿಸ್ತಾರವಾಗಿ ಕೊರೆಯು

ಲ್ಪಟ್ಟಿರುವವು. ಇಂಥ ಅಮೌಲ್ಯ ಕೈಗಾರಿಕೆಯ ಕೆಲಸವು ೧೬ ನೆಯ ಶತಮಾನದಲ್ಲಿ ವಿಜಯನಗರದ ಸಮ್ರಾಟನಾದ ಕೃಷ್ಣದೇವರಾಯನಿಂದ ಮಾಡಿಸಲ್ಪಟ್ಟಿತು.

## ಶಿವಾಜಿ ಮಹಾರಾಜನು.

ದೇವಾಲಯುವನ್ನು ಸಂದರ್ಶಿಸಿದ ರಾಜಕುಮಾರರಲ್ಲಿ ಶಿವಾಜಿ ಮಹಾರಾಜನೇ ಕೊನೆಯುವನು. ಅವನು ಶ್ರೀಶೈಲದಲ್ಲಿ ಶ್ರೀ ಅಂಬಾದೇವಿಯ ಪೂಜೆಯುನ್ನು ಮಾಡುತ್ತ ಬಹಳ ಕಾಲಕಳೆದನು. ಮತ್ತು ಶಿವಾಜಿ ಗೋಪುರವೆಂಬ ಹೆಸರಿನಿಂದ ಪ್ರಸಿದ್ಧವಿದ್ದು ಉತ್ತರದ ಗೋಪುರವನ್ನು ಕಟ್ಟಿಸಿದನು.

## ಹಬ್ಬಗಳು.

ದೇವಾಲಯುದ ಮುಖ್ಯ ಹಬ್ಬಗಳು ಮಾಘಮಾಸದಲ್ಲಿ ಮಹಾಶಿವರಾತ್ರಿಗಿಂತ ಕೆಲವು ದಿವಸ ಮೊದಲು ಪ್ರಾರಂಭವಾಗಿ ಕುಂಭೋತ್ಸವದ ವರೆಗೆ ಅಂದರೆ ಚೈತ್ರ ಶುದ್ಧ ಪೌರ್ಣಿಮೆಯ ತರುವಾಯ ಒಂದು ವಾರದ ವರೆಗೆ ನಡೆಯುುವವು. ಉತ್ಸವಗಳು ದಿನಾಲು ನಡೆದಿರುತ್ತವೆ. ಮಂಗಳವಾರ ಮತ್ತು ಶುಕ್ರವಾರಗಳಲ್ಲಿ ಭ್ರಮರಾಂಬಾದೇವಿಯ ವಿಶೇಷ ಪೂಜೆಗಳು ಜರುಗಿ ಪಶು ಬಲಿಗಳು ಸಮರ್ಪಿಸಲ್ಪಡುವವು.

## ಯಾತ್ರಿಕರು.

ಶಿವರಾತ್ರಿಯ ಹಬ್ಬಕ್ಕೆ ಹಿಂದುಸ್ಥಾನದ ಯಾವತ್ತೂ ಭಾಗಗಳಿಂದ ಎಲ್ಲಕ್ಕೂ ಹೆಚ್ಚು ಜನ ಯಾತ್ರಿಕರು ಕೂಡುವರು. ಯುಗಾದಿಯ ಹಬ್ಬಕ್ಕೆ ಯಾತ್ರಿಕರ ವಿಶೇಷತಃ ವೀರಶೈವ ಯಾತ್ರಿಕರ ಗುಂಪುಗಳು, ಅನೇಕ ಗಣಾಚಾರಿಗಳು, ಹಾಗು ಕಂಬಿಗಳು ಕರ್ನಾಟಕದ ಸೊಲ್ಲಾಪುರ, ವಿಜಾಪುರ, ಬೆಳಗಾವ ಜಿಲ್ಹೆಗಳಿಂದ ಬರುವವು. ಈ ಹಬ್ಬದ ವಿಶೇಷ ಸಂಗತಿ ಏನಂದರೆ— ಎಷ್ಟೋ ಜನರು ಮೈಸೂರು ಸಂಸ್ಥಾನದಿಂದಲೂ, ಕೋಯಿಮುತ್ತೂರ ಜಿಲ್ಹೆಯ ಕೊಳ್ಳೆಗಾಲ ತಾಲೂಕದಿಂದಲೂ, ಯಾವತ್ತೂ ಪ್ರವಾಸವನ್ನು ಕಾಲಿನಿಂದ ಮಾಡಿ ಸಂಗಡ ಕಂಟಲಿ ಎತ್ತುಗಳನ್ನು ತೆಗೆದುಗೊಂಡು ಭ್ರಮರಾಂಬಾ ದೇವಿಗೆ ವಾರ್ಷಿಕ ಕಾಣಿಕೆಗಳನ್ನು ಕೊಡಲಿಕ್ಕೆ ಬರುವರು. ಯಾಕಂದರೆ ಮಲ್ಲಿಕಾರ್ಜುನ ದೇವರು ಭ್ರಮರಾಂಬಾ ದೇವಿಯನ್ನು ತಮ್ಮ ಭಾಗದ ದೇಶ

ದಿಂದ ವಧುವನ್ನಾಗಿ ಆರಿಸಿಕೊಂಡಿರುವನೆಂದು ಅವರ ತಿಳುವಳಿಕೆಯಿರುವದು. ಈ ಯಾತ್ರಿಕರ ಗುಂಪುಗಳ ನಾಯಕರು ಯುಗಾದಿಯ ದಿವಸ ಭ್ರಮರಾಂಬಾದೇವಿಯನ್ನು ಅಲಂಕರಿಸುವ ಹಾಗೂ ಪೂಜೆ ಮಾಡುವ ವಿಶೇಷ ಅನುಕೂಲತೆಗಳನ್ನು ಉಪಭೋಗಿಸುವರು. ೧೫ದಿವಸಗಳ ನಂತರ ಯಾತ್ರಿಕರ ಕೊನೆಯ ಗುಂಪು ಹುಕ್ಕೇರಿಯಿಂದ ಬಂದು ಕುಂಭೋತ್ಸವದ ವರೆಗೆ ಬೆಟ್ಟದ ಮೇಲೆಯೇ ಇರುವದು.

## ದೇವಾಲಯದ ಸದ್ಯಸ್ಥಿತಿಯು.

ಕಾಲಾನುಕಾಲದಿಂದ ಅವ್ಯಾಹತವಾಗಿ ತನ್ನ ವೈಭವವನ್ನೂ, ಪಾರಮಾರ್ಥಿಕ ಹೆಚ್ಚಳವನ್ನೂ ಕಾಯ್ದುಕೊಂಡು ರಾಜರು ಮಹಾರಾಜರುಗಳಿಂದ ಜಹಗೀರುಗಳನ್ನೂ, ಮಾನಮರ್ಯಾದೆಗಳನ್ನೂ, ಹೊಂದಿದಂಥ ದೇವಾಲಯದ ದೊಡ್ಡಸ್ತಿಕೆಯೂ, ವೈಭವವೂ, ಸದ್ಯಕ್ಕೆ ಕಲ್ಪನೆಗೆ ಮಾತ್ರ ಹೊಳೆಯುವವು. ಪ್ರತಿದಿವಸ ಪೂಜೆಯ ವೆಚ್ಚಕ್ಕೂ ಕೂಡ ಸಾಕಷ್ಟು ಉತ್ಪನ್ನವಿಲ್ಲದ ಈ ಮಹಾಕ್ಷೇತ್ರದ ಸದ್ಯದ ಆಳಿಗಾಲದ ದೃಶ್ಯವನ್ನು ಕಂಡು ಎಂಥ ಕಲ್ಲೆದೆಯವನ ಹೃದಯವಾದರೂ ಕರಗದಿರಲಾರದು. ಒಂದಾನೊಂದು ಕಾಲದಲ್ಲಿ ಕಾಂಚನ ವರ್ಣದ ತಗಡುಗಳಿಂದಲಂಕೃವಾದಂಥ ಗೋಡೆಗಳು ಗಿಲಾಯಿ ಮಾಡದೆ ಇದ್ದದರಿಂದಲೂ, ಜೀರ್ಣೋದ್ಧಾರದ ಅಭಾವದ ಮೂಲಕವಾಗಿಯೂ, ಪುಡಿಪುಡಿಯಾಗಿ ಹಾಳಾಗುತ್ತಿರುವವು. ಅವ್ಯಾಹತವಾದ ಅಲಕ್ಷ್ಯದಿಂದ ನೀರಿನ ಝರಿಗಳು ಕೆಸರಿನಿಂದ ತುಂಬಿಕೊಂಡಿರುವವು. ಮುಖ್ಯ ದೇವಾಲಯದ ಗರ್ಭಾಲಯದೊಳಗಿನ ಕಲ್ಲಿನ ತೊಲೆಗಳೂ ಕಂಬಗಳೂ ಬಲಹೀನವಾಗಿ ಅವು ಶೀಘ್ರದಲ್ಲಿಯೇ ನಾಶ ಹೊಂದುವವೋ ಎಂಬ ಹೆದರಿಕೆಯನ್ನುಂಟುಮಾಡುತ್ತಿರುವವು. ಅಯ್ಯೋ, ಕನಸುಮನಸಿನಲ್ಲಿಯೂ ಕೂಡ ತರಲಿಕ್ಕಾಗದಂಥ ಎಂಥ ವಿಕಾರವಿದು!

## ಪೂರ್ವದ ಹಾಗೂ ಸದ್ಯದ ದೇವಾಲಯದ ವ್ಯವಸ್ಥೆಯು.

ಕರ್ನೂಲ ಜಿಲ್ಹೆಯ ಕೈಪಿಡಿಯ ಮೇಲಿಂದ ೧೮೪೦ ರಿಂದ ಪುಷ್ಪಗಿರಿ ಪೀಠದ ಶ್ರೀ ಜಗದ್ಗುರು ಶಂಕರಾಚಾರ್ಯ ಶ್ರೀಮತ್ ಅಭಿನವೋದ್ದಂಡ ವಿದ್ಯಾನರಸಿಂಹ ಭಾರತಿ ಸ್ವಾಮಿಗಳವರೇ ಆನುವಂಶಿಕವಾಗಿ ಈ ದೇವಾಲಯದ ಪಂಚರಿದ್ದದ್ದು ಕಂಡುಬರುವದು. ೧೯೩೧ ರಲ್ಲಿ ಶ್ರೀಗಿರಿ

ರಾಜಸೂರ್ಯ ಸಿಂಹಾಸನ ವೀರಶೈವ ಚರಪಟ್ಟಾಧ್ಯಕ್ಷ ವೀರಭಿಕ್ಷಾವ ರ್ತಿರಾಜ ದೇಶಿಕೇಂದ್ರ ಮಹಾ ಸ್ವಾಮಿಗಳವರು ಈ ದೇವಾಲಯ ಪಂಚ ತನದ ಅಧಿಕಾರದ ಬಗ್ಗೆ ಒಂದು ದಾವೆಯನ್ನು ತಂದಿದ್ದರು. ಇದರ ಪರಿಣಾಮರೂಪವಾಗಿ ಕರ್ನೂಲದ ಸಬಾರ್ಡಿನೇಟ ಜಜ್ಜರಿಂದ ಓ. ಎಸ್. ನಂ. ೯—೧೯೨೬ ತಾರೀಖು ೨೧-೧೨-೧೯೨೮ ರಲ್ಲಿ ಆಜ್ಞೆಯು ಮಾಡ ಲ್ಪಟ್ಟಿರುವದು. ಈ ಅಪ್ಪಣೆಯ ಮೇರೆಗೆ ಸಿದ್ಧಮಾಡಲ್ಪಟ್ಟ ಯೋಜನೆ ಯಂತೆ ಪುಷ್ಪಗಿರಿ ಪೀಠದ ಶ್ರೀಜಗದ್ಗುರು ಶಂಕರಾಚಾರ್ಯ ಸ್ವಾಮಿ ಗಳು ದೇವಾಲಯದ ಪಂಚರಿರತಕ್ಕದ್ದು. ಮತ್ತು ದೇವಾಲಯದ ವ್ಯವ ಸ್ಥೆಯನ್ನು ಶ್ರೀಶೈಲ ವ್ಯವಸ್ಥಾಪಕ ಬೋರ್ಡ ಎಂಬ ಹೆಸರಿನ ೫ ಜನರು ಸದಸ್ಯರುಳ್ಳ ಒಂದು ಬೋರ್ಡಿನ ಕಡೆಗೆ ಒಪ್ಪಿಸಿರುವರು. ಈ ೫ ಜನ ರಲ್ಲಿ ಮೇಲ್ಕಾಣಿಸಿದ ಶ್ರೀಗಿರಿರಾಜ ಸೂರ್ಯ ಸಿಂಹಾಸನ ವೀರಶೈವ ಮಹಾಸ್ವಾಮಿಗಳಿಂದ ನಿಯಮಿಸಲ್ಪಟ್ಟ ಓರ್ವ ವೀರಶೈವ ಸಭಾಸದರಿರು ವರು. ಮತ್ತು ಈ ಬೋರ್ಡಿನ ಅಧ್ಯಕ್ಷರನ್ನು ದೇವಾಲಯದ ಪಂಚರು ನಿಯಮಿಸತಕ್ಕದ್ದು. ಉಳಿದ ಸಭಾಸದರು ಕರ್ನೂಲ ಜಿಲ್ಹೆಯ ನ್ಯಾಯಾ ಧೀಶರಿಂದ ನಿಯಮಿಸಲ್ಪಡುವರು.

ತಾರೀಖು ೫-೨-೧೯೨೯ ನೆಯ ದಿವಸ ವ್ಯವಸ್ಥಾಪಕ ಬೋರ್ಡವು ಯಥೋಚಿತವಾಗಿ ಕರ್ನೂಲ ಸಬಾರ್ಡಿನೇಟ ಜಜ್ಜರಿಂದ ನಿಯಮಿಸ ಲ್ಪಟ್ಟಿತು. ಮೂರು ವರ್ಷಗಳ ಅವಧಿಯು ಮುಗಿದದ್ದರಿಂದ ಕರ್ನೂಲ ಜಿಲ್ಹೆಯ ನ್ಯಾಯಾಧೀಶರಿಂದ ಅದನ್ನು ಮತ್ತೆ ಮೂರು ವರ್ಷಗಳವರೆಗೆ ತಾರೀಖು ೨೯-೧೨-೧೯೩೧ ನೆಯ ದಿವಸ ನಿಯಮಿಸಲ್ಪಟ್ಟಿತು.

## ಅಪವಾದಾತ್ಮಕ ದೇವಾಲಯವು.

ಮದ್ರಾಸ ಹಿಂದುಧರ್ಮ ಸ್ವಾಸ್ಥ್ಯ ಬೋರ್ಡಿನವರಿಗೆ ಮದ್ರಾಸ ಹಿಂದು ಧಾರ್ಮಿಕ ಸ್ವಾಸ್ಥ್ಯ ಕಾಯಿದೆಯ ೪೪ ನೆಯ ಕಲಮಿನ ಪ್ರಕಾರ ಅರ್ಜಿಯನ್ನು ಮಾಡಿಕೊಳ್ಳಲು ಶ್ರೀಶೈಲ ದೇವಾಲಯವು ಅಪವಾದಾ ತ್ಮಕವಿರುವದೆಂದು ಸಾರಲ್ಪಟ್ಟಿತು.

## ಜೀರ್ಣೋದ್ಧಾರ ಕಮಿಟಿಯು.

ಕರ್ನೂಲ ಜಿಲ್ಹೆಯ ನ್ಯಾಯಾಧೀಶರಿಂದ ತಯಾರಿಸಲ್ಪಟ್ಟ ಯೋಜ ನೆಯ ೨೭ ನೆಯ ನಿಯಮದ ಪ್ರಕಾರ ದೇವಾಲಯದ ಪಂಚರು ಶ್ರೀಶೈಲ

ಜೀರ್ಣೋದ್ಧಾರ ಹಾಗೂ ಸುಧಾರಣೆಯು ಕಮೀಟಿಯೆಂಬ ಬೇರೊಂದು ಕಮೀಟಿಯನ್ನು ಮಾಡಿ ಅದರ ಅಧ್ಯಕ್ಷಸ್ಥಾನವನ್ನು ಆಂಧ್ರ ಪತ್ರಿಕೆಯು ಸಂಪಾದಕರಾದ ಶ್ರೀಯುತ ದೇಶೋದ್ಧಾರಕ ಕೆ. ನಾಗೇಶ್ವರರಾವ ಪಂತಲುಗರು ಇವರಿಗೆ ಒಪ್ಪಿಸಿರುವರು. ದೇವಾಲಕ್ಕೆ ಹಬ್ಬಗಳಲ್ಲಿ ಯಾತ್ರಿಕರಿಂದ ದೊರೆತ ಹಣವನ್ನುಳಿದು ಬೇರೆ ಯಾವ ಉತ್ಪನ್ನದ ಮಾರ್ಗವೂ ಇರುವದಿಲ್ಲ. ಮತ್ತು ಈ ರೀತಿಯಾಗಿ ಬಂದ ಹಣವಾದರೂ ದೇವಾಲಯದ ವಾರ್ಷಿಕ ವೆಚ್ಚಕ್ಕೆ ಸಾಕಷ್ಟು ಇರುವದಿಲ್ಲ.

ದೇವಾಲಯಕ್ಕೆ ಸಂಬಂಧಿಸಿದ ಮಂಟಪಗಳನ್ನೂ, ಗೋಪುರವನ್ನೂ ನೆಲಗಟ್ಟನ್ನೂ, ಜೀರ್ಣೋದ್ಧಾರಮಾಡುವದಕ್ಕಾಗಿಯೂ ಮತ್ತು ಗರ್ಭಾಲಯ-ದೊಳಗಿನ ಒಡೆದಂಥ ತೊಲೆಗಳನ್ನು ತೆಗೆದು ಬೇರೆ ತೊಲೆಗಳನ್ನು ಹಾಕುವದಕ್ಕಾಗಿಯೂ, ಯಾವತ್ತು ನೀರಿನ ಝರಿಗಳನ್ನು ಸುಧಾರಿಸುವದಕ್ಕೂ ಅದರಂತೆ ಹೋಗಬರುವ ಮಾರ್ಗವನ್ನು ಸುಧಾರಿಸುವದಕ್ಕಾಗಿಯೂ ಬೇಕಾಗುವ ಹಣದ ಸಲುವಾಗಿ ಅವಶ್ಯವಾದ ನಿಧಿಯನ್ನು ಕೂಡಿಸುವ ಕಾರ್ಯಗಳು ಕೈಕೊಳ್ಳಲ್ಪಟ್ಟಿವೆ. ಹಿಂದುಸ್ತಾನದ ಎಲ್ಲ ಭಾಗಗಳಲ್ಲಿ ಪಸರಿಸಿದ ಮಲ್ಲಿಕಾರ್ಜುನದೇವರ ಅಸಂಖ್ಯ ಭಕ್ತರ ಉದಾರ ಸಹಾಯದಿಂದಲೂ ಅಂತಃಕರುಣಪೂರ್ವಕವಾದ ಸಹಕಾರದಿಂದಲೂ, ಕೈಕೊಂಡಿರುವ ಜೀರ್ಣೋದ್ಧಾರದ ಈ ಯೋಜನೆಯು ಶೀಘ್ರದಲ್ಲಿಯೇ ಫಲಕಾರಿಯಾಗುವದೆಂದೂ ಹಾಗೂ ದೇವಾಲವು ತನ್ನ ಪೂರ್ವಿಕ ಪ್ರತಿಷ್ಠೆಯನ್ನೂ, ವೈಭವವನ್ನೂ, ಹೊಂದುವದೆಂದೂ ಮನಃಪೂರ್ವಕವಾಗಿ ಆಶಿಸುತ್ತೇವೆ.

# ಶೈವಾಗಮುಗಳು.

(ಡಾ. ಎಸ್. ಸಿ. ನಂದೀಮಠ ಪಿ. ಎಚ್. ಡಿ. ಇವರ ನಿಬಂಧದ ವಿಮರ್ಶೆ)

(ಲೇಖಕ.— ರಾ. ಸಾ. ಫ. ಗು. ಹಳಕಟ್ಟಿ ಬಿ. ಎ. ಎಲ್. ಎಲ್. ಬಿ.)

ಆಗಮ ಗ್ರಂಥಗಳಲ್ಲಿ ಕ್ರಿಯಾ, ಚರ್ಯಾ, ಯೋಗ, ಜ್ಞಾನ ಎಂಬ ನಾಲ್ಕು ಭಾಗಗಳಿದ್ದು ಈ ಭಾಗಗಳಲ್ಲಿ ಯಾವ ಯಾವ ವಿವರಣೆಗಳು ಬರುತ್ತವೆಂಬದನ್ನು ಡಾ. ನಂದೀಮಠ ಇವರು ತಮ್ಮ ನಿಬಂಧ (*Thesis*) ದಲ್ಲಿ ವಿವರಿಸಿದ್ದನ್ನು ನಾವು ನಮ್ಮ ಹಿಂದಿನ ಲೇಖಾಂಕಗಳಲ್ಲಿ ವಿವರಿಸಿದ್ದೇವೆ. ಅವುಗಳ ಮೇಲಿಂದ ಆಗಮ ಧರ್ಮದ ಸಾಮಾನ್ಯ ತತ್ವಗಳು ಈ ವಿಷಯುಗಳ ಬಗ್ಗೆ ಏನಿರುತ್ತದೆಂಬದು ವಾಚಕರಿಗೆ ವಿದಿತವಾಗಿರಬಹುದು. ಈಚೆಗೆ ಈ ವಾಙ್ಮಯದ ವಿಷಯವಾಗಿ ಅನೇಕರಲ್ಲಿ ನಾನಾಬಗೆಯ ತಪ್ಪು ಅಭಿಪ್ರಾಯಗಳು ಉಂಟಾಗಿರುತ್ತವೆ. ಮತ್ತು ಅದರ ಬಗ್ಗೆ ಅನೇಕ ತರದ ಅನುಮಾನಗಳನ್ನು ಮಾಡುವದುಂಟು. ಇಂಥ ಅನುಮಾನಗಳ ಮೇಲಿಂದ ವೀರಶೈವ ಧರ್ಮದ ನಿಜಸ್ವರೂಪನ್ನು ಸಹ ಕಂಡು ಹಿಡಿಯುಲು ಅನೇಕರು ಪ್ರಯತ್ನಿಸುವದುಂಟು. ಇದರಿಂದ ತಪ್ಪು ಅಭಿಪ್ರಾಗಳು ಈಗ ಪ್ರಕಟವಾದದ್ದಾದರೆ ಆಶ್ಚರ್ಯವೇನೂ ಇಲ್ಲ. ಆದರೆ ಡಾ. ನಂದೀಮಠ ಇವರು ಉಪಲಬ್ಧವಿರುವ ಆಗಮ ಗ್ರಂಥಗಳನ್ನು ಪರೀಶೀಲಿಸಿ ತಮ್ಮ ವಿಚಾರಗಳನ್ನು ಪ್ರಕಟ ಮಾಡಿರುವದರಿಂದ ಅವು ಮಹತ್ವವಾದವುಗಳೆಂದು ನಾವು ಹೇಳದೆ ಇರಲಾರೆವು. ಅವರು ಆಗಮುಗಳಲ್ಲಿರುವ ನಾಲ್ಕೂ ಪಾದಗಳನ್ನು ವಿವೇಚಿಸಿ ಕೆಲವು ಸಾಮಾನ್ಯ ವಿಧಾನಗಳನ್ನು ಮಾಡಿರುತ್ತಾರೆ. ಅವುಗಳನ್ನು ನಾವು ಇಲ್ಲಿ ವಿವರಿಸಿ ಈ ಲೇಖಾಂಕವನ್ನು ಮುಗಿಸುತ್ತೇವೆ.

ವೇದಗಳು ಮತ್ತು ಶೈವಾಗಮುಗಳು, ಇವುಗಳನ್ನು ತುಲನಾತ್ಮಕ ದೃಷ್ಟಿಯಿಂದ ಹೋಲಿಸಿ ನೋಡಿದರೆ ಅವುಗಳಲ್ಲಿ ಕೆಲವು ಸಾಮಾನ್ಯ ಲಕ್ಷಣಗಳಿರುವದು ತೋರಿಬರುತ್ತದೆ. ಶೈವಾಗಮುಗಳಲ್ಲಿಯ ವಿಧಿವಿಧಾನಗಳಲ್ಲಿ ವೇದಗಳಲ್ಲಿ ಉಪಲಬ್ಧವಿರುವ ವಿಧಿವಿಧಾನಗಳೂ ಸಹ ಬಂದಿರುವದು ತೋರಿಬರುತ್ತದೆ. ತರ್ಪಣ, ಅಗ್ನಿಕಾರ್ಯ, ಶ್ರಾದ್ಧ, ಅಷ್ಟಕಗಳು, ನಮುಸ್ಕಾರಗಳು, ಇವೆಲ್ಲವೂ ಶಿವಾಗಮುಗಳಲ್ಲಿ ಬರುತ್ತವೆ. ತರ್ಪಣ

ವಿಧಿಗಳು ಒಂದೇತರದವಿರುತ್ತವೆ. ಇವುಗಳಲ್ಲಿ ಕೃಚ್ಛ ಮತ್ತು ಚಾಂದ್ರಾಯಣ ಎಂಬವು ಇದ್ದು ಇವುಗಳಾದರೂ ಆಗಮಗಳಲ್ಲಿ ಹೇಳಲ್ಪಡುತ್ತವೆ. ವೈದಿಕ ಮಂತ್ರಗಳೂ ಇರುವದು ಕಂಡುಬರುತ್ತದೆ. ಚಾತುರ್ವರ್ಣಗಳೂ, ಚತುರಾಶ್ರಮಗಳೂ, ಆಗಮಗಳಲ್ಲಿ ಉಂಟು. ಆದರೆ ಅವುಗಳ ಕಟ್ಟುಗಳು ಮಾತ್ರ ಬಹಳ ಸಡಿಲಾಗಿವೆ. ವಿಷ್ಣು, ಇಂದ್ರ, ಯಮ, ವರುಣ ಮೊದಲಾದ ದೇವತೆಗಳೂ ಆಗಮಗಳಲ್ಲಿ ಬರುತ್ತಿದ್ದು ಇವುಗಳ ಪೂಜೆಯು ದೇವಾಲಯಗಳಲ್ಲಿ ಸೇರ್ಪಡೆಯಾಗಿದೆ. ಆದರೆ ಈ ಪೂಜೆಯಲ್ಲಿ ಶಿವನಿಗೆ ಶ್ರೇಷ್ಠಸ್ಥಾನ ಮಾತ್ರ ಇರುತ್ತದೆ. ಶೈವಾಗಮಗಳಲ್ಲಿಯ ಜ್ಞಾನಪಾದದ ತಾತ್ವಿಕ ವಿಚಾರಗಳು ಮತ್ತು ಉಪನಿಷತ್ತುಗಳ ಪ್ರತಿಪಾದನೆಗಳು ಇವುಗಳಲ್ಲಿ ಪರಸ್ಪರ ಭೇದವು ಬಹಳ ಸ್ವಲ್ಪ ಇರುತ್ತದೆ. ಉಪನಿಷತ್ತುಗಳಂತೆಯೇ ಆಗಮಗಳು ದೇವರು ಒಬ್ಬನೇ ಇದ್ದಾನೆಂಬ ತತ್ವವನ್ನು ಹೇಳುತ್ತವೆ. ಪರಬ್ರಹ್ಮನನ್ನು ಕಾಣಬೇಕಾದರೆ ಅವನನ್ನು ತನ್ನ ಹೃದಯದಲ್ಲಿಯೇ ಕಾಣಬೇಕೆಂದು ಇವು ಹೇಳುತ್ತವೆ. ಆದರೆ ಇವುಗಳಲ್ಲಿಯ ಶಕ್ತಿಯ ವಿಷಯವು ಮಾತ್ರ ಉಪನಿಷತ್ತುಗಳಲ್ಲಿ ಕಂಡುಬರುವುದಿಲ್ಲ. ಅವುಗಳಲ್ಲಿ ಇದರ ಉಲ್ಲೇಖವು ಶ್ವೇತಾಶ್ವತರ ನಾರಾಯಣ ಮೊದಲಾದ ಹಿಂದುಗಡೆ ಆದ ಉಪನಿಷತ್ತುಗಳಲ್ಲಿ ಮಾತ್ರ ತೋರಿಬರುತ್ತದೆ. ಈ ಎಲ್ಲ ಸಂಗತಿಗಳನ್ನು ನಾವು ಲಕ್ಷಿಸಿದರೆ ತಿರುಮೂಲ ಈತನು ಅನ್ನುವದರ ನಿಜತ್ವವು ಕಂಡುಬರುತ್ತದೆ. ಈತನು ಅನ್ನುವದೇನಂದರೆ:— "ಆಗಮಗಳನ್ನು ಕೂಡಿದ ವೇದವೇ ಸತ್ಯ. ಅದೇ ಪರಮಾತ್ಮನ ನಿಜವಾದ ಶಬ್ದವು. ಜನರು ಆಗಮಗಳು ಮತ್ತು ವೇದಗಳು ಎಂದು ಭಿನ್ನತೆಯನ್ನು ಅವುಗಳಲ್ಲಿ ಕಲ್ಪಿಸಿದರೂ ತಿಳಿದವರು ಅವುಗಳು ಒಂದೇ ಎಂದು ಅಭಿಪ್ರಾಯಪಡುತ್ತಾರೆ" ಬ್ರಹ್ಮಮೀಮಾಂಸೆಯ ಕರ್ತನಾದ ಶ್ರೀಕಂಠನು ಅನ್ನುವದೇನಂದರೆ— "ವೇದ ಮತ್ತು ಆಗಮಗಳಲ್ಲಿ ಭೇದವಿರುವದು ಕಂಡುಬರುವುದಿಲ್ಲ." ಈ ಪ್ರಕಾರ ತಿರುಮೂಲರ್ ಈತನಿಂದ ಹಿಡಿದು ಶಿವಾಗ್ರಯೋಗಿ ಮತ್ತು ನಿಷ್ಠುರ ನಂಜಣಾಚಾರ್ಯರ ವರೆಗೆ ಅನೇಕ ಗ್ರಂಥಕಾರರು ವೇದಗಳು ಮತ್ತು ಶಿವಾಗಮಗಳು ಇವುಗಳಲ್ಲಿ ಪರಸ್ಪರ ಭೇದವನ್ನು ಕಲ್ಪಿಸಿಲ್ಲೆಂದು ತಿಳಿದುಬರುತ್ತದೆ.

ಆದರೆ ಈ ಉಭಯ ವಾಙ್ಮಯಗಳ ಕೊನೆಯ ಉದ್ದೇಶವೇನೋ ಒಂದೇ, ಅಂದರೆ ಮೋಕ್ಷ ಸಾಧನವೇ ಇರುತ್ತದೆ. ಆದರೆ ಶೈವಾಗಮ

ಗಳಲ್ಲಿ ಕೆಲವು ವಿಶಿಷ್ಟತೆಗಳಿದ್ದು ಅವುಗಳನ್ನು ನಾವು ದುರ್ಲಕ್ಷಿಸತಕ್ಕದ್ದ ಲ್ಲೆಂದು ಡಾ. ನಂದೀಮಠ ಇವರ ಅಭಿಪ್ರಾಯವಿದೆ. ಈ ವಿಶಿಷ್ಟತೆಗಳ ಮೂಲಕ ಹಿಂದೂ ಧರ್ಮಕ್ಕೆ ಮಹತ್ವದ ಬಲವು ಪ್ರಾಪ್ತವಾಗಿ, ಅದು ಬೌದ್ಧ ಜೈನ ಮೊದಲಾದ ವಿರೋಧೀ ಧರ್ಮಗಳ ಪ್ರಾಬಲ್ಯವನ್ನು ಕಡಿಮೆ ಮಾಡಲಿಕ್ಕೆ ಸಾಮರ್ಥ್ಯವನ್ನು ಹೊಂದಿತು. ಅವು ಕೆಳಗೆ ಬರೆದವುಗಳು ಇರುತ್ತವೆ.

೧. ದೀಕ್ಷೆ:— ಶೈವಾಗಮಗಳು ದೀಕ್ಷಾವಿಧಿಯನ್ನು ಪ್ರಚಾರದಲ್ಲಿ ತಂದಿರುತ್ತವೆ. ಇದೊಂದು ಅವು ಮಾಡಿದ ವಿಶೇಷ ಕಾರ್ಯವಾಗಿರು ತ್ತದೆ. ಇದರಿಂದ ಪುನರ್ಜನ್ಮದ ವಿಚಾರಗಳು ಬಹುಮಟ್ಟಿಗೆ ತಗ್ಗಿದವು. ಶೈವಾಗಮಗಳು ಹಿಂದೂ ಧರ್ಮದ ಬೇರೆ ಮತಗ್ರಂಥಗಳು ಒಪ್ಪುವಂತೆ ಪುನರ್ಜನ್ಮದ ತತ್ವಗಳನ್ನು ಒಪ್ಪುವದು ನಿಜವು. ಆದರೆ ದೀಕ್ಷೆಯ ಮೂಲಕ ಪುನರ್ಜನ್ಮವು ಒಂದೇ ಜನ್ಮದಲ್ಲಿ ಅಳಿದುಹೋಗುತ್ತದೆಂದು ಅವರು ಭಾವಿಸುತ್ತಾರೆ. ಕೇವಲ ಕರ್ಮ ಮಾಡುವದರಿಂದ ಮೋಕ್ಷ ಸ್ಥಾನವು ದೊರಕುವದು ಕಠಿಣವು. ಯಾಕಂದರೆ ಕರ್ಮದ ಮೂಲಕ ಅದರ ಪರಿಣಾಮಗಳು ಹೆಚ್ಚುತ್ತಲೇ ಹೋಗುವವು. ಕರ್ಮವು ಎಷ್ಟು ಅಲ್ಪವಾಗಿದ್ದರೂ ಕೂಡ ಅದನ್ನು ಅಳಿದುಹಾಕಲಿಕ್ಕೆ ಪುನಃ ಜನ್ಮವನ್ನು ಎತ್ತಲೇ ಬೇಕಾಗುತ್ತದೆ. ಹೀಗೆ ಜನ್ಮವನ್ನು ಎತ್ತಿದ ಬಳಿಕ ಪುನಃ ಏನಾದರೊಂದು ಹೊಸ ಕರ್ಮವನ್ನು ಮಾಡಿದಲ್ಲಿ ಅದು ನಾಶವಾಗುವ ದರ ಬದಲು ಹೆಚ್ಚಾಗುತ್ತಲೇ ಹೋಗುವದು. ಇದರಿಂದ ಮೋಕ್ಷ ಪ್ರಾಪ್ತಿಯು ಅನಿಶ್ಚಯಾತ್ಮಕವಾಗಿ ಉಳಿಯುವದು. ಇದಕ್ಕೆ ಅನೇಕ ಯುಗಗಳು ಸಹ ಬೇಕಾಗಬಹುದು. ಆದರೆ ದೀಕ್ಷೆಯ ಮೂಲಕ ಒಂದೇ ಜನ್ಮದಲ್ಲಿ ಮೋಕ್ಷವನ್ನು ಹೊಂದುವದು ಶಕ್ಯವು. ಆದರಿಂದ ಕರ್ಮದ ಬೇರುಗಳು ಮೂಲದಲ್ಲಿಯೇ ಹರಿದುಹೋಗುವವು. ಹೀಗೆ ಕರ್ಮವೇ ನಿಂತುಹೋದ ಬಳಿಕ ಕರ್ಮಫಲದ ಉಪಭೋಗವಾದರೂ ನಿಂತುಹೋ ಗುತ್ತದೆ. ವೈದಿಕ ವಾಙ್ಮಯದಲ್ಲಿ ಈ ತರದ ಆಶಾದಾಯಕ ಸ್ಥಿತಿಯು ಕಂಡುಬರುವದಿಲ್ಲ.

೨. ಜಾತಿಭೇದ.— ದೀಕ್ಷೆಯ ಮೂಲಕ ಶೈವಾಗಮಗಳು ಮ ತ್ತೊಂದು ಮಹತ್ವದ ಬದಲಾವಣೆಯನ್ನುಂಟುಮಾಡಿದವು. ಇದು ಸಾಮಾ ಜಿಕ ಸುಧಾರಣೆಗೆ ಸಂಬಂಧಪಟ್ಟಿದ್ದಿರುತ್ತದೆ. ಒಬ್ಬನು ಯಾವ ಜಾತಿ

ಅಥವಾ ಪಂಥಕ್ಕೆ ಸೇರಿದವನಾದರೂ ಕೂಡ ಅವನಿಗೆ ದೀಕ್ಷೆಯನ್ನು ಮಾಡಲು ಬರುತ್ತದೆ. ಹೀಗೆ ದೀಕ್ಷೆಯಾದಕೂಡಲೆ ಅವನು ಉನ್ನತ ಸ್ಥಿತಿಯನ್ನು ಹೊಂದಿ ಜನ್ಮದಿಂದ ಯಾವನು ಹೆಚ್ಚಿನ ತರಗತಿಯವನು ಇರುತ್ತಾನೋ ಅವನ ತರಗತಿಯನ್ನೇ ಇವನೂ ಹೊಂದುವನು. ಶೈವಾಗಮಗಳು ಈ ತತ್ವವನ್ನು ಪ್ರತಿಪಾದಿಸಿದರೂ ಕೂಡ ಹಿಂದೂ ಸಮಾಜದಲ್ಲಿ ದೃಢವಾಗಿ ರೂಢವಾಗಿರುವ ಜಾತಿಭೇದವನ್ನು ಅಳಿದು ಹಾಕಲು ಶಕ್ಯವಾಗಲಿಲ್ಲ. ಬ್ರಾಹ್ಮಣ ಗ್ರಂಥಗಳಂತೆಯೇ ವರ್ಣಗಳನ್ನು ಮನ್ನಿಸಬೇಕೆಂಬ ವಿಚಾರಗಳು ಅನೇಕ ಆಗಮಗಳಲ್ಲಿ ಇರುವದು ಕಂಡುಬರುತ್ತದೆ.

ಯಜ್ಞಃ— ಶೈವಾಗಮಗಳು ವೇದಗಳಲ್ಲಿ ತೋರಿಬರುವ ಯಜ್ಞವಿಧಿ ಮತ್ತು ಪಶುಬಲಿಯನ್ನು ನಿಲ್ಲಿಸಿರುವವು.

ದೇವಾಲಯಗಳಲ್ಲಿ ಪೂಜೆಃ— ಶೈವಾಗಮಗಳು ಯಜ್ಞಯಾಗಾದಿಗಳನ್ನು ನಿಲ್ಲಿಸಿಬಿಟ್ಟರೂ ಅವುಗಳ ಬದಲು ದೇವಾಲಯಗಳಲ್ಲ ಪೂಜಾ, ಅರ್ಚನೆ, ಮೊದಲಾದ ಕಾರ್ಯಗಳನ್ನು ಪ್ರಾರಂಭಿಸಿರುವವು. ಈ ವಿಧಾನಗಳು ಬರಬರುತ್ತ ವೇದಗಳಲ್ಲಿಯ ಯಜ್ಞಗಳಂತೆಯೇ ಗಡುಚಾದವುಗಳೂ, ಕಠಿಣವಾದವುಗಳೂ, ಆಗಹತ್ತಿದವು

ಶಿವಮಂತ್ರಗಳು.— ಶೈವಾಗಮಗಳು ಸುಲಭವಾದ ಶೈವಮಂತ್ರಗಳನ್ನು ಪ್ರಾರಂಭದಲ್ಲಿ ತಂದವು. ವೇದಮಂತ್ರಗಳನ್ನು ದ್ವಿಜನು ಮಾತ್ರ ಉಚ್ಚರಿಸಬೇಕೆಂಬ ವಿಧಿಯು ಇದ್ದರೂ ಇದನ್ನು ಶೈವಾಗಮಗಳು ಪಾಲಿಸುವದಿಲ್ಲ.

ಲಿಂಗಪೂಜೆಃ— ಶೈವಾಗಮಗಳು ಶಿವ ಮತ್ತು ಲಿಂಗ ಇವುಗಳ ಪೂಜೆಗೆ ಮಹತ್ವದ ಸ್ಥಾನವನ್ನು ಕೊಟ್ಟಿರುವವು.

ಭಕ್ತಿಮಾರ್ಗಃ— ಶೈವಾಗಮಗಳು ಭಕ್ತಿಮಾರ್ಗವನ್ನು ಪ್ರಚಾರದಲ್ಲಿ ತಂದು ಅದಕ್ಕೆ ಶ್ರೇಷ್ಠಸ್ಥಾನವನ್ನು ತಂದುಕೊಟ್ಟವು.

ಮೇಲ್ಕಂಡ ಬದಲಾವಣೆಗಳನ್ನು ಶೈವಾಗಮಗಳು ಪ್ರಚಾರದಲ್ಲಿ ತಂದಿರುವದು ಕಂಡುಬರುತ್ತದೆ.



# ಧರ್ಮಜಾಗ್ರತಿ.

(ಲೇಖಕ.— ಒರ್ವ ಸಮಾಜಹಿತಚಿಂತಕ.)

ಧರ್ಮವೆಂದರೆ ಕರ್ತವ್ಯ. ಧರ್ಮವು 'ಧೃ' ಧಾತುವಿನಿಂದ ಹುಟ್ಟಿರುತ್ತದೆ. 'ಧೃ' ಧಾರಣ ಪೋಷಣಯೋಃ ಎಂಬೀ ಸೂತ್ರಕ್ಕನುಸರಿಸಿ ಧರ್ಮವೆಂದರೆ ನಮ್ಮ ಭದ್ರತೆ ರಕ್ಷಣೆಗಳಿಗಾಗಿ ನಾವು ಮಾಡತಕ್ಕ ಕರ್ತವ್ಯ. ಅಂದರೆ ಐಹಿಕ ಪಾರಮಾರ್ಥಿಕ ಸುಖಗಳನ್ನು ಪಡೆಯಬೇಕಾದರೆ ನಾವು ಮಾಡತಕ್ಕ ಕರ್ತವ್ಯ ಎಂಬರ್ಥವು. ಧರ್ಮವು ವ್ಯಕ್ತಿಗತವಾಗಿದೆ. ಅಂಥ ಅನೇಕ ವ್ಯಕ್ತಿಗಳು ಕೂಡಿದರೆ ಅದೇ ಸಮಾಜವೆನಿಸುತ್ತದೆ. ಮನುಷ್ಯನು ಸಮಾಜದ ಕಟ್ಟಳೆಗಳಿಗೆ ಬದ್ಧನಾಗಿರುತ್ತಾನೆ. ಆದರೆ ಧಾರ್ಮಿಕ ವಿಷಯದಲ್ಲಿ ಸ್ವತಂತ್ರನಿರುತ್ತಾನೆ. ಧರ್ಮದ ತತ್ವಗಳೇ ಸಮಾಜದಲ್ಲಿ ಕಟ್ಟಳೆಯ ರೂಪದಿಂದ ಪರಿಣಮಿಸಿರುತ್ತವೆ. ಒಮ್ಮೊಮ್ಮೆ ಸಾಮಾಜಿಕ ಕಟ್ಟಳೆಗಳಲ್ಲಿ ಶಿಥಿಲತೆಯುಂಟಾಗಿ ಧಾರ್ಮಿಕ ತತ್ವಗಳಿಗೆ ಗ್ಲಾನಿ ಬರುವದುಂಟು. ಒಮ್ಮೊಮ್ಮೆ ದೇಶಕಾಲ ಪರಿಸ್ಥಿತಿಗನುಸಾರವಾಗಿ ಧಾರ್ಮಿಕ ತತ್ವಗಳು ವ್ಯತ್ಯಾಸ ಹೊಂದಿ ಸಮಾಜದ ಕಟ್ಟಳೆಗಳಲ್ಲಿ ಕ್ರಾಂತಿಯಾಗಬಹುದು. ಇಂಥ ಪ್ರಸಂಗಗಳಿಗೇನೇ ಧರ್ಮಜಾಗ್ರತೆಯ ಕಾಲಗಳೆಂದೆನ್ನುವರು. ಈ ಜಾಗ್ರತೆಯ ಕಾಲಗಳಲ್ಲಿ ಬೇಸರವಾದ ಹಳೆ ಪದ್ಧತಿಗಳೆಲ್ಲ ವ್ಯತ್ಯಾಸ ಹೊಂದಿ ಹೊಸ ಸ್ಫೂರ್ತಿಯೂ ಚೈತನ್ಯವೂ ನೆಲೆಗೊಳ್ಳುವವು.

ಐಹಿಕ ಪಾರಮಾರ್ಥಿಕ ಸುಖಗಳಿಗಾಗಿ ಮಾಡುವ ಕರ್ತವ್ಯವೇ ಧರ್ಮವೆಂದು ಮೇಲೆ ಹೇಳಿದೆಯಷ್ಟೇ. ಮನುಷ್ಯನು ಮಾಡತಕ್ಕ ಕರ್ತವ್ಯಗಳೆಲ್ಲ ಆತನ ಸುಖಕ್ಕಾಗಿಯೇ ಇರುತ್ತವೆ. ಆದರೆ ಸುಖದ ಮಾರ್ಗಗಳು ಮಾತ್ರ ಭಿನ್ನ ಭಿನ್ನವಾಗಿರುವವು. ಕೆಲವರು ಸುಖಪ್ರಾಪ್ತಿಗಾಗಿ ಪ್ರವೃತ್ತಿ ಮಾರ್ಗವನ್ನವಲಂಬಿಸಬಹುದು; ಕೆಲವರು ನಿವೃತ್ತಿ ಮಾರ್ಗವನ್ನು ಹಿಡಿಯಬಹುದು. ಅದು ಅವರವರ ಇಚ್ಛೆ. ಸಂಸಾರದಲ್ಲಿದ್ದುಕೊಂಡೇ ನಾವು ಆನಂದಪಡೆಯಬಹುದು. ಸಂಸಾರ ಬಿಟ್ಟೂ ಆನಂದ ಪಡೆಯಬಹುದು. ಆದರೆ ನಮ್ಮ ವೀರಶೈವ ಧರ್ಮವು ಸಂಸಾರದಲ್ಲಿದ್ದು ಮೋಕ್ಷ ಪಡೆಯೆಂದು ಹೇಳುತ್ತದಲ್ಲದೆ ಸಂಸಾರವನ್ನು ಬಿಡಬೇಕೆಂದು ಹೇಳುವದಿಲ್ಲ. ಶ್ರೀ ಭಗವದ್ಗೀತೆಯಲ್ಲಿಯೂ ಇದನ್ನೇ ಹೇಳಿದೆ.

'ಸನ್ಯಾಸಃ ಕರ್ಮಯೋಗಶ್ಚ ನಿಶ್ರೇಯಸ ಕರಾವುಭೌ।
ತಯೋಸ್ತು ಕರ್ಮಸನ್ಯಾಸಾತ್ ಕರ್ಮಯೋಗೋವಿಶಿಷ್ಯತೆ॥

ಅಂದರೆ ಸಂಸಾರ ಬಿಡುವದೂ ಸಂಸಾರ ಹಿಡಿಯುವದೂ ಇವೆರಡೂ ಮೋಕ್ಷಕ್ಕೆ ಕಾರಣವಾಗಿವೆ. ಆದರೆ ಅವುಗಳಲ್ಲಿ ಸಂಸಾರ ಬಿಡುವದಕ್ಕಿಂತ ಸಂಸಾರ ಹಿಡಿಯುವದೇ ಹೆಚ್ಚು ಶ್ರೇಯಸ್ಕರವಾಗಿದೆ.

ಮೋಕ್ಷಸುಖವು ಮೊದಲು ನಮ್ಮ ದೇಹದಿಂದ ಪ್ರಾದುರ್ಭವಿಸಿ ಭಾವದಲ್ಲಿ ಪರ್ಯವಸಾನ ಹೊಂದುತ್ತದೆ. ಮನುಷ್ಯನಿಗೆ ೩ ದೇಹಗಳಿರುತ್ತವೆಂದು ನಮ್ಮ ಧರ್ಮವು ಪ್ರತಿಪಾದಿಸುತ್ತದೆ. ಅವು ಯಾವವೆಂದರೆ ೧ ಸ್ಥೂಲ ೨ ಸೂಕ್ಷ್ಮ ೩ ಕಾರಣ. ಸ್ಥೂಲ ದೇಹವೆಂದರೆ ವ್ಯಕ್ತವಾದ ೩॥ ಮೊಳದ ತನುವು. ಸೂಕ್ಷ್ಮ ದೇಹವೆಂದರೆ ಚರ್ಮಚಕ್ಷುವಿಗೆ ಅಗೋಚರವಾದ ಮನಸ್ಸು. ಕಾರಣಶರೀರವೆಂದರೆ ಅನುಭವದ ಕೊನೆಯನ್ನಾಶ್ರಯಿಸಿದ ಭಾವವು. ಸ್ಥೂಲತನುವು ಪ್ರಕೃತಿಯ ಸ್ಥಾನವು. ಮನಸ್ಸು ಜೀವಾತ್ಮನ ನಿವಾಸವು. ಭಾವವು ಪರವಸ್ತುವಿನ ಪರಂಧಾಮವು. ಮನುಷ್ಯನು ತನು ಮನ ಭಾವ ಶುದ್ಧಿಯನ್ನು ಹೊಂದಿ ಹೆಚ್ಚಿನ ಸುಖವನ್ನು ಪಡೆಯಬೇಕೆಂದೇ ನಮ್ಮ ವೀರಶೈವ ಧರ್ಮವು ಹೇಳುತ್ತದೆ. ದೇಹಶುದ್ಧಿಯಿಂದ ಮನಶುದ್ಧಿಯಾಗುತ್ತದೆ. ಮನಶುದ್ಧಿಯಿಂದ ಭಾವಶುದ್ಧಿಯಾಗುತ್ತದೆ. ಭಾವಶುದ್ಧಿಯಾದರೆ ಆನಂದವು ಪರಮಾವಧಿಗೇರುವದು. ಈ ಆನಂದವೇ ಮೋಕ್ಷವು.

ಇಂಗ್ಲಿಷದಲ್ಲಿ *Sound body sound mind* ಅಂದರೆ 'ತನುಶುದ್ಧಿಯಿಂದ ಮನಶುದ್ಧಿ' ಎಂಬ ಹೇಳಿದೆ. ಈ ತನುಶುದ್ಧಿಗಾಗಿಯೇ ಅಷ್ಟಾವರಣಗಳ ಯೋಜನೆಯಿರುವದು. ಸ್ನಾನ, ಲಿಂಗಪೂಜೆ, ಪಾದೋದಕ, ಪ್ರಸಾದ, ವಿಭೂತಿ ಈ ಮೊದಲಾದವುಗಳು ನಮ್ಮ ದೇಹಪವಿತ್ರತೆಯನ್ನುಂಟುಮಾಡುವದಲ್ಲದೆ ನಮ್ಮ ಆಯುಷ್ಯವನ್ನೂ ಅಭಿವೃದ್ಧಿಗೊಳಿಸುತ್ತವೆ. 'ಶರೀರಮಾದ್ಯಂ ಖಲುಧರ್ಮಸಾಧನಂ' ಎಂಬ ನೀತಿಯ ವಾಕ್ಯವಿರುವದು. ಆದುದರಿಂದಲೇ ದೇಹದ ಸ್ವಚ್ಛತೆಗಾಗಿ ಧರ್ಮವು ಆರೋಗ್ಯದ ನಿಯಮಗಳನ್ನು ಕಲ್ಪಿಸಿಕೊಟ್ಟಿರುವದು. ಸ್ನಾನ ಪೂಜೆ ಮಡಿ ಶುದ್ಧಾಹಾರ ನಿರ್ಮಲೋದಕ ಇವು ಒಳ್ಳೆ ಆರೋಗ್ಯಕ್ಕೆ ಸಾಧನವಾಗಿವೆ. ಈ ಆರೋಗ್ಯದ ನಿಯಮಗಳ ಕಡೆಗೆ ಲಕ್ಷಗೊಟ್ಟು ನಡೆ

ದದ್ದಾದರೆ ನಮ್ಮ ದೇಹ ಸೌಖ್ಯ ಹೆಚ್ಚುವದಲ್ಲದೆ ಮನಶ್ಶಾಂತಿಯುಂಟಾಗುವದು. ಆದರೆ ದೇಹಶುದ್ಧಿಯು ನಮ್ಮ ಅಭೀಷ್ಟಿತ ಗುರಿಯನ್ನು ಸಾಧಿಸಲು ಸಾಧನವಾಗಿರುವದೇ ಹೊರತು ಅದೇ ಸಾಧ್ಯವೆಂದು ಭಾವಿಸಲಾಗದು.

ದೇಹದೊಡನೆ ಮನಸ್ಸನ್ನೂ ಶುದ್ಧಗೊಳಿಸಬೇಕೆಂದು ನಮ್ಮ ಧರ್ಮವು ಹೇಳುತ್ತದೆ. ನಮಗೆ ಗುದ, ಗುಹ್ಯ, ಪದ, ಪಾಣಿ, ವಾಕ್‌ಗಳೆಂಬ ಪಂಚ ಕರ್ಮೇಂದ್ರಿಯಗಳೂ; ನೇತ್ರೇಂದ್ರಿಯ, ಕರ್ಣೇಂದ್ರಿಯ ಘ್ರಾಣೇಂದ್ರಿಯ ರಸನೇಂದ್ರಿಯ ಸ್ಪರ್ಶೇಂದ್ರಿಯಗಳೆಂಬ ಪಂಚ ಜ್ಞಾನೇಂದ್ರಿಯಗಳೂ ಈ ದಶೇಂದ್ರಿಯಗಳನ್ನಾಳತಕ್ಕಂಥ ಮನಸ್ಸೆಂಬ ಬಲಾಢ್ಯ ಇಂದ್ರಿಯವೂ ಇರುತ್ತವೆ. ಆ ಮನಸ್ಸೇ ಮನುಷ್ಯನನ್ನು ಉನ್ನತಸ್ಥಿತಿಗಾಗಲಿ ಅವನತ ಸ್ಥಿತಿಗಾಗಲಿ ಒಯ್ಯುವದು. 'ಮನ ಏವ ಮನುಷ್ಯಾಣಾಂ ಕಾರಣಂ ಬಂಧಮೋಕ್ಷಯೋಃ' ಎಂದು ಮನುಸ್ಮೃತಿಯಲ್ಲಿ ಹೇಳಿದೆ. ಶ್ರೀ ಬಸವಣ್ಣನವರು ಹೇಳಿರುವದೇನಂದರೆಃ—

"ಕೊಂಬೆಯ ಮೇಲಣ ಮರ್ಕಟನಂತೆ ಲಂಘಿಸುವದೆನ್ನ ಮನವು ನಿಂದಲ್ಲಿ ನಿಲಲೀಯದೆನ್ನ ಮನವು, ಹೊಂದಿದಲ್ಲಿ ಹೊಂದಲೀಯದೆನ್ನ ಮನವು ಕೂಡಲಸಂಗಮದೇವಾ ಎನ್ನ ಮನವ ನಿಮ್ಮ ಚರಣಕಮಲದಲ್ಲಿ ಭ್ರಮರನಾಗಿರಿಸು ನಿಮ್ಮ ಧರ್ಮ."

ಇದೇ ಪ್ರಕಾರ ಗೀತೆಯಲ್ಲಿಯೂ ಸಹ 'ಇಂದ್ರಿಯಾಣಿ ಪ್ರಮಾಥೀನಿ ಹರಂತಿ ಪ್ರಸಭಂ ಮನಃ' ಅಂದರೆ ಇಂದ್ರಿಯಗಳು ದಬ್ಬಾಳಿಕೆಯನ್ನೆಬ್ಬಿಸಿ ಬಲಾತ್ಕಾರದಿಂದ ಮನಸ್ಸನ್ನೆಳೆಯುತ್ತವೆ ಎಂದು ಹೇಳಿದೆ. ಒಮ್ಮೊಮ್ಮೆ ಇಂದ್ರಿಯಗಳಿಗೆ ಮನಸ್ಸು ವಶವಾಗಿರುತ್ತದೆ. ಒಮ್ಮೊಮ್ಮೆ ಮನಸ್ಸಿಗೆ ಇಂದ್ರಿಯಗಳು ವಶವಾಗಿರುತ್ತವೆ. ಮನಸ್ಸು ಹಾಗೂ ಇಂದ್ರಿಯಗಳನ್ನು ಸುಮ್ಮನಿರಿಸುವದು ಎಂಥ ಮಹಾತ್ಮನಿಗೂ ಸಾಧ್ಯವಿಲ್ಲ. ಸುಮ್ಮನಿರುವದು ಅವುಗಳ ಸ್ವಭಾವವಲ್ಲ. ಆದರೆ ಅವುಗಳ ಪ್ರವೃತ್ತಿಯನ್ನು ಅಲ್ಲದ ವಿಷಯಗಳ ಕಡೆಗೆ ಹೋಗಗೊಡದೆ ಒಳ್ಳೆಯ ವಿಷಯಗಳಲ್ಲಿ ತೊಡಗಿಸುವದೇ ನಮ್ಮ ಕರ್ತವ್ಯವು. ನೀತಿಯು ಮನಸ್ಸು ಇಂದ್ರಿಯಗಳನ್ನು ಹೇಗೆ ವಶದಲ್ಲಿಟ್ಟುಕೊಳ್ಳಬೇಕೆಂಬುವದನ್ನು ಕಲಿಸಲಿಕ್ಕೇ ಹುಟ್ಟಿದೆ. ಕಾಮ, ಕ್ರೋಧ, ಲೋಭ, ಮೋಹ, ಮದ ಮಾತ್ಸರ್ಯಗಳೆಂಬ ಷಡ್ವೈರಿಗಳು ನಮ್ಮ ಮನೋರಾಯನ ಗೆಳೆಯಂದಿರಾಗಿರುತ್ತವೆ. ಇವೆಲ್ಲ

ದುಷ್ಟಗೆಳೆಯರು. ಅವು ಮನಸ್ಸನ್ನು ಕಂಡ ಕಂಡ ಕಡೆಗೆ ಎಳೆದು ಗಾಸಿಮಾಡುತ್ತವೆ. ಅದರಿಂದ ಮನಶ್ಶುದ್ಧಿಯಾಗದೆ ಕಲುಷಿತವಾಗುತ್ತದೆ. ಕನ್ನಡಿಯ ಮೇಲೆ ಧೂಳ ಕುಳಿತಾಗ ಅದರಲ್ಲಿ ಹೇಗೆ ನಮ್ಮ ಮುಖವು ಸ್ಪಷ್ಟವಾಗಿ ಕಾಣುವದಿಲ್ಲವೋ ಹಾಗೆಯೇ ಕಲುಷಿತವಾದ ನಮ್ಮ ಮನಸ್ಸಿನಲ್ಲಿ ಪರಮಾತ್ಮನ ಪ್ರತಿಬಿಂಬವು ಒಡೆದು ಕಾಣುವದಿಲ್ಲ.

ನಮ್ಮ ಮನಸ್ಸು ಶುದ್ಧವಾಗಬೇಕಾದರೆ ಅದಕ್ಕೆ ವಿವೇಕವೆಂಬ ಒಳ್ಳೆ ಗೆಳೆಯನ ಸಹವಾಸ ಬೇಕಾಗುತ್ತದೆ. ವಿವೇಕದಿಂದಲೇ ಮನಸ್ಸು ಶುದ್ಧವಾಗಿ ಮನುಷ್ಯನು ಪವಿತ್ರ ಜೀವಿಯೆಂದೆನಿಸಿಕೊಳ್ಳುತ್ತಾನೆ. ವಿವೇಕ ವಿಶಿಷ್ಟವಾದ ಮನುಷ್ಯನಿಗೇ ಜನರು ಮಾನಮರ್ಯಾದೆಗಳನ್ನು ಮಾಡುತ್ತಾರೆ. ವಿವೇಕಿಯ ಮನಸ್ಸು ಶಾಂತಿ ಹೊಂದುವದಲ್ಲದೆ ಭಾವದ ಆನಂದವನ್ನು ಪಡೆಯಲಿಕ್ಕೂ ಸಹಾಯ ಮಾಡುವದು. ಮನಸ್ಸನ್ನು ಸುಸಂಸ್ಕೃತಗೊಳಿಸುವದಕ್ಕಾಗಿಯೇ ವೀರಶೈವ ಧರ್ಮದಲ್ಲಿ ಶಿವಾಚಾರ, ಲಿಂಗಾಚಾರ, ಸದಾಚಾರ, ಗಣಾಚಾರ, ಭೃತ್ಯಾಚಾರಗಳೆಂಬ ಪಂಚಾಚಾರಗಳ ಯೋಜನೆಯಿರುವದು. "ಆಚಾರಃ ಪ್ರಥಮೋಧರ್ಮಃ" ಎಂಬ ಶ್ರುತಿವಾಕ್ಯವಿರುವದು. ಆಚಾರ (*Character*) ವೇ ಮನುಷ್ಯತ್ವದ ಕುರುಹಾಗಿರುವದು. ಮನಶ್ಶುದ್ಧಿಯೇನೂ ನಮ್ಮ ಅಂತಿಮ ಧ್ಯೇಯವಲ್ಲ. ಅದು ಅಂತಿಮ ಧ್ಯೇಯಕ್ಕೆ ಸಾಧನವಾಗಿದೆ.

ಮನದಲ್ಲಿ ಜೀವನು ಇರುವಂತೆ ಆತ್ಮನು ಭಾವದಲ್ಲಿರುತ್ತಾನೆ. ಭಾವವು ಅತ್ಯಂತ ಆನಂದಾವಸ್ಥೆಗೇರಿದಾಗ ಆತ್ಮನಿಗೆ ಪರಮಾತ್ಮನೆಂಬ ಸಂಜ್ಞೆಯುಂಟಾಗುವದು. ಆ ಭಾವವನ್ನು ಯಾವಾಗಲೂ ಆನಂದಸ್ವರೂಪದಲ್ಲಿಡಬೇಕೆಂದು ಹಿರಿಯರು ಕರ್ಮಮಾರ್ಗ, ಭಕ್ತಿಮಾರ್ಗ, ಜ್ಞಾನಮಾರ್ಗ, ಯೋಗಮಾರ್ಗ ಮುಂತಾದ ಉಪಾಯಗಳನ್ನು ಯೋಜಿಸಿರುವರು. ವೀರಶೈವರಿಗೆ ಬೇಕಾದ ಮಾರ್ಗದಿಂದ ಹೋಗಿ ತಮ್ಮ ಅಭೀಷ್ಟಿತ ಗುರಿಯನ್ನು ಅಂದರೆ ಅಂತಿಮ ಧ್ಯೇಯವನ್ನು ಪಡೆಯಲು ಅವಕಾಶವಿದೆ. ಭಕ್ತಿಮಾರ್ಗಹಿಡಿದು ಬಸವಣ್ಣನವರು ಮೋಕ್ಷ ಪಡೆದರು. ಜ್ಞಾನಮಾರ್ಗಹಿಡಿದು ಚೆನ್ನಬಸವಣ್ಣ ಪ್ರಭುದೇವರು ಲಿಂಗಾನಂದದಲ್ಲಿ ಬೆರೆದರು; ಯೋಗಮಾರ್ಗದಿಂದ ಸಿದ್ಧರಾಮಶಿವಯೋಗಿಗಳೂ, ಅಕ್ಕಮಹಾದೇವಿಯೂ ಮೋಕ್ಷಪಡೆದರು. ಅನೇಕ ಶಿವಶರಣರು ನಿಷ್ಕಾಮಬುದ್ಧಿಯಿಂದ ಕಾಯಕ ಮಾಡಿ ಮೋಕ್ಷಸುಖವನ್ನು ಸಂಪಾದಿಸಿದರು.

ಕರ್ಮಮಾರ್ಗವೆಂದರೆ ಫಲಾಪೇಕ್ಷೆಯಿಲ್ಲದೆ ಲೋಕಸಂಗ್ರಹ ಕಾರ್ಯ ಮಾಡುವದು. ಭಕ್ತಿಮಾರ್ಗವೆಂದರೆ ನವವಿಧರೀತಿಯಿಂದ ಪರಮಾತ್ಮ ನಲ್ಲಿಯೇ ಮನಸ್ಸಿಟ್ಟು ವ್ಯವಹರಿಸುವದು. ಜ್ಞಾನಮಾರ್ಗವೆಂದರೆ ಪರ ಮಾತ್ಮನ ಅಗಾಧ ಮಹಿಮೆಯನ್ನು ಬುದ್ಧಿ, ತರ್ಕ, ಅನುಭವಾದಿಗಳಿಂದ ಅರಿತು ಆನಂದಪಡುವದು. ಯೋಗಮಾರ್ಗವೆಂದರೆ ಬಾಹ್ಯಪರಿವೆಯಿ ಲ್ಲದೆ ಪರಮಾತ್ಮನಲ್ಲಿಯೇ ನಿರಂತರ ತಲ್ಲೀನ ಮನಸ್ಕನಾಗಿರುವದು. ಈ ಮೋಕ್ಷಮಾರ್ಗಗಳು ನಮ್ಮ ಷಟಸ್ಥಲಗಳಲ್ಲಿ ಬಹು ಸುಗಮವಾಗಿ ಕ್ರೋಡೀ ಕರಿಸಲ್ಪಟ್ಟಿವೆ. ಭಕ್ತಮಹೇಶಸ್ಥಳಗಳಲ್ಲಿ ಭಕ್ತಿಮಾರ್ಗ ಮತ್ತು ಕರ್ಮ ಮಾರ್ಗಗಳು ಸಮಾವೇಶವಾಗುತ್ತವೆ. ಪ್ರಸಾದಿ ಪ್ರಾಣಲಿಂಗಿ ಸ್ಥಳಗಳಲ್ಲಿ ಜ್ಞಾನಮಾರ್ಗವು ವಿವೇಚಿಸಲ್ಪಟ್ಟಿದೆ. ಶರಣ ಐಕ್ಯ ಸ್ಥಾನಗಳು ಯೋಗ ಮಾರ್ಗಕ್ಕೆ ಸಂಬಂಧಪಟ್ಟಿರುತ್ತವೆ.

ಜಗತ್ತಿನಲ್ಲಿ ಯಾವ ಆಚಾರವಿಚಾರಗಳಾಗಲಿ, ತತ್ವಗಳಾಗಲಿ, ತ್ರಿಕಾ ಲಾಬಾಧಿತವಾಗಿ ಸತ್ಯವಾದವುಗಳೆಂದು ಯಾರೂ ಕಲ್ಪಿಸಲಾಗದು. ಯಾಕಂದರೆ ಮಾನವೀ ಬುದ್ಧಿಶಕ್ತಿಯು ಪರಿಪೂರ್ಣವಾದುದೆಂದು ಹೇಳ ಲಾಗುವದಿಲ್ಲ. ಒಂದು ಕಾಲಕ್ಕೆ ಪೃಥ್ವಿಯೇ ಸ್ಥಿರವೆಂದೂ ಸೂರ್ಯನೇ ತಿರುಗುತ್ತಾನೆಂದೂ ನಂಬಿದಂಥ ಜನರು ಗ್ಯಾಲಿಲಿಯೋನು ಸೂರ್ಯನೇ ಸ್ಥಿರವೆಂದೂ ಪೃಥ್ವಿಯೇ ತಿರುಗುತ್ತದೆಂದೂ ಸಿದ್ಧಮಾಡಿಕೊಟ್ಟಾಗ ತಮ್ಮ ಕಲ್ಪನೆಯನ್ನು ವ್ಯತ್ಯಾಸಗೊಳಿಸಿದರು. ಒಂದು ಕಾಲಕ್ಕೆ ಸತ್ಯವಾದದ್ದು ಯಾವಾಗಲೂ ಸತ್ಯವಾದುದೆಂದು ಭೂಗೋಲದೃಷ್ಟಿಯಿಂದ ಹೇಗೆ ತಪ್ಪಿ ಗುತ್ತದೆಯೋ ಅದರಂತೆಯೇ ಜಗತ್ತಿನಲ್ಲಿ ಯಾವ ಶಾಸ್ತ್ರವೂ ಪರಿಪೂ ರ್ಣವಾದದ್ದೆಂದು ಹೇಳಲಾಗದು. ಅದು ಕಾಲಕಾಲಕ್ಕೆ ಬೆಳೆಯುತ್ತ ಅದ ರಲ್ಲಿ ವ್ಯತ್ಯಾಸವಾಗುತ್ತಹೋಗುತ್ತದೆ. ಅದೇಪ್ರಕಾರ ದೇಶಕಾಲಪರಿ ಸ್ಥಿತಿಗನುಗುಣವಾಗಿ ಧಾರ್ಮಿಕ ಹಾಗೂ ಸಾಮಾಜಿಕ ಆಚಾರ ವಿಚಾ ರಗಳೂ ತತ್ವಗಳೂ ವ್ಯತ್ಯಾಸ ಹೊಂದುತ್ತವೆ. ಅಂತೆಯೇ ಲಾರ್ಡ ಟೆನಿ ಸನ್‌ನೆಂಬ ಕವಿಯು (*Old order changeth yielding place to new*) ಅಂದರೆ ಹಳೆ ಪದ್ಧತಿಯು ವ್ಯತ್ಯಾಸವಾಗಿ ಹೊಸ ಪದ್ಧತಿಯು ನೆಲೆಸುತ್ತದೆ ಎಂದು ಹೇಳಿದ್ದಾನೆ.

ಒಮ್ಮೊಮ್ಮೆ ಧರ್ಮದಲ್ಲಿ ಎಷ್ಟೋ ರೂಢಿಗಳು ಪ್ರವೇಶಿಸಿ, ತತ್ವ ವನ್ನೇ ಮೂಲಿಗೊತ್ತಿಬಿಡುವವು. 'ರೂಢಿಃ ತತ್ವಾದ್ಬಲೀಯಸೀ' ಎಂದು

ಹೇಳಿದೆ. ತತ್ವಗಳಿಗಿಂತಲೂ ರೂಢಾಚಾರಗಳೇ ಬಲವಾಗಿ ಬಿಡುತ್ತವೆ. ನಿಜವಾದ ಧರ್ಮಜಾಗ್ರತೆಯಾಗಬೇಕಾದರೆ ರೂಢಾಚಾರಗಳನ್ನು ಬದಿಗೊತ್ತಿ ತತ್ವಗಳನ್ನು ಪ್ರಸ್ಥಾಪಿಸಬೇಕಾಗುತ್ತದೆ. ಮತ್ತು ಯುಕ್ತಕಂಡಂತೆ ತತ್ವಗಳನ್ನು ಸರಿಪಡಿಸಿಕೊಳ್ಳಬೇಕಾಗುತ್ತದೆ. ಉದಾಹರಣಾರ್ಥವಾಗಿ ಲಿಂಗಾಯತರೆಲ್ಲರೂ ಪರಸ್ಪರ ಅನ್ನೋದಕ ವಿವಾಹಾದಿ ಕಾರ್ಯಗಳನ್ನು ಮಾಡಬೇಕೆಂದು ವೈಚಾರಿಕದೃಷ್ಟಿಯಿಂದ ನಿಜವಿದ್ದರೂ ರೂಢಿಯಲ್ಲಿ ಕೆಲವು ಒಳಪಂಗಡಗಳು ಪರಸ್ಪರ ಅನ್ನೋದಕಾದಿ ವ್ಯವಹಾರ ಮಾಡುವದಿಲ್ಲ. ಕಾಲಾವಧಿಯಿಂದ 'ರೂಢಾಚಾರಗಳನ್ನು ತತ್ಕ್ಷಣವೇ ನಾಶ ಮಾಡುವದು ಶಕ್ಯವಿಲ್ಲ. ಹಾಗೆ ಮಾಡಿದರೆ ಸಮಾಜದಲ್ಲಿ ದೊಡ್ಡ ಗೊಂದಲವೇ ಏಳಬಹುದು. ರಾಜಾ ಅಮಾನುಲ್ಲಾಖಾನನು ಪೂರ್ವ ದೇಶದಲ್ಲಿ ಪಾಶ್ಚಾತ್ಯ ಪದ್ಧತಿಗಳನ್ನು ನೆಲೆಗೊಳಿಸಬೇಕೆಂದು ಮಾಡಿದಂತಾಗುವದು.

ಸಮಾಜದಲ್ಲಿ ಗೊಂದಲವೇಳದೆ ನಿಜವಾದ ತತ್ವಗಳು ಪ್ರಕಾಶಕ್ಕೆ ಬರಬೇಕಾದರೆ ನಾವು ೩ ಮುಖ್ಯ ಸಂಗತಿಗಳನ್ನು ಲಕ್ಷಿಸಬೇಕಾಗುತ್ತದೆ. ಅವು ಯಾವವೆಂದರೆ:— ೧ ವಿಚಾರ ೨ ಉಚ್ಚಾರ ೩ ಆಚಾರ ನಾವು ವಿಚಾರಮಾಡಲಿಕ್ಕೆ ಸ್ವತಂತ್ರರಿದ್ದಷ್ಟು ಉಚ್ಚಾರ ಮಾಡಲಿಕ್ಕಿರುವದಿಲ್ಲ. ಉಚ್ಚಾರ ಮಾಡಲಿಕ್ಕೆ ಸ್ವತಂತ್ರರಿದ್ದಷ್ಟು ಆಚರಿಸಲಿಕ್ಕಿರುವದಿಲ್ಲ. ಉದಾಹರಣಾರ್ಥವಾಗಿ ನಮ್ಮ ಸಮಾಜದಲ್ಲಿ ಕೆಲವು ಸ್ವಾಮಿಗಳು ಪರಸ್ಪರ ಬಡಿದಾಡಿ ಕೋರ್ಟಿಗೆ ಹೋಗುತ್ತಿರುವದರಿಂದ ಅಂಥವರ ಮಠಗಳನ್ನು ದೈವದವರು ತಮ್ಮ ವಶಪಡಿಸಿಕೊಳ್ಳಬೇಕೆಂಬ ವಿಚಾರವು ನಮ್ಮ ಮನಸ್ಸಿನಲ್ಲಿ ಬಂದಿತೆಂದು ಕಲ್ಪಿಸಿರಿ. ಈ ಪ್ರಕಾರ ವಿಚಾರಿಸಲು ನಾವು ಬೇಕಾದ ಹಾಗೆ ಸ್ವತಂತ್ರರಿದ್ದೇವೆ. ಅದಕ್ಕೆ ಯಾರ ಭಯವೂ ಇಲ್ಲ. ಆದರೆ ಅದೇ ವಿಚಾರಗಳನ್ನು ಉಚ್ಚರಿಸಲಿಕ್ಕೆ ನಾವು ಅಷ್ಟು ಸ್ವತಂತ್ರರಿಲ್ಲ. ಯಾಕಂದರೆ ನಮ್ಮ ವಿಚಾರಗಳಿಗೆ ಎಲ್ಲರೂ ಒಪ್ಪಿಗೆ ಕೊಡುತ್ತಾರೆಂದು ಹೇಳಲಿಕ್ಕಾಗದು. ಕೆಲವರು ನಮ್ಮನ್ನು ಟೀಕಿಸಬಹುದು; ತೊಂದರೆ ಪಡಿಸಬಹುದು. ಆದರೆ ಆ ನಮ್ಮ ವಿಚಾರಗಳನ್ನು ಆಚರಣೆಯಲ್ಲಿ ತರಲಿಕ್ಕೆ ಹೋದರೆ ಅದರಿಂದ ಮಹದನರ್ಥಗಳಾಗುವ ಸಂಭವ ಹೆಚ್ಚು.

ಒಂದೇ ವಿಚಾರವು ಬಹುಜನರ ಮನಸ್ಸಿನಲ್ಲಿ ಹುಟ್ಟಿದಾಗ ಅದನ್ನು ಉಚ್ಚಾರಮಾಡಲಿಕ್ಕೆ ಯಾರಿಗಾದರೂ ಧೈರ್ಯಬರುತ್ತದೆ. ಉಚ್ಚಾರ ಮಾಡುವವರೂ ಬಹಳ ಜನರಾದಾಗ ಅದರಂತೆ ಆಚರಿಸಲಿಕ್ಕೂ ಅವ

ಕಾಶ ಹತ್ತುವದಿಲ್ಲ. ಆ ಆಚರಣೆಯನ್ನು ಯಾವನಾದರೊಬ್ಬ ಧೈರ್ಯಶಾಲಿಯು ಮುಂದುವರಿದು ಮಾಡುವನು. ಉಳಿದವರು ಆತನನ್ನು ಹಿಂಬಾಲಿಸುವರು. ಆ ಮುಂದಾಳುವಿನಿಂದಲೇ ಎಲ್ಲ ವಾತಾವರಣವೂ ಪರಿಸ್ಥಿತಿಯೂ ಬದಲಾಗುವದು. ಆತನಿಗೇನೇ ಜನರು ಅವತಾರಿಕ ಪುರುಷನೆಂದು ಕರೆಯುವರು. ಈ ಕಾರಣದಿಂದಲೇ ರಾಮ, ಕೃಷ್ಣ, ಬೌದ್ಧ, ಕ್ರೈಸ್ತ, ಬಸವ, ಮಹಾತ್ಮಾ ಗಾಂಧಿ ಮೊದಲಾದವರು ಅವತಾರಿಕ ಪುರುಷರೆಂದು ತಿಳಿಯಲ್ಪಡುತ್ತಾರೆ.

ಈಗ ನಮ್ಮ ಸಮಾಜದಲ್ಲಿ ೩ ವಿಧವಾದ ಜನರು ಕಂಡುಬರುವರೆಂದು ಜನರು ಹೇಳುತ್ತಿದ್ದಾರೆ. ಅವರು ಯಾರೆಂದರೆ (೧) ಧರ್ಮಭ್ರಷ್ಟರು (೨) ಧರ್ಮಲಂಡರು (೩) ಧರ್ಮನಿಷ್ಠರು. ಇವರಲ್ಲಿ ಮೊದಲನೆಯ ಇಬ್ಬರ ಸಂಖ್ಯೆಯು ಅಧಿಕವಾಗಿರುವದು. ಉಳಿದವರ ಸಂಖ್ಯೆಯು ತೀರ ಕಡಿಮೆಯಾಗಿರುವದು. ಧರ್ಮಭ್ರಷ್ಟರೆಂದರೆ ತಮ್ಮ ಧರ್ಮದ ಸಂಬಂಧವಾಗಿ ಓದದೆ, ಕೇಳದೆ, ವಿಚಾರಮಾಡದೆ ಅದರೊಳಗೇನಿದೆ ? ಇದರೊಳಗೇನಿದೆ ? ಇದು ಪೊಳ್ಳು; ಅದು ಗೊಳ್ಳು; ಇದು ಹುಚ್ಚು; ಅದು ಮಬ್ಬು ಎಂದು ಮನಬಲ್ಲಂತೆ ಪಾಶ್ಚಾತ್ಯ ಸುಧಾರಣೆಯ ಬಲೆಯಲ್ಲಿ ಶಿಲುಕಿ ತಮ್ಮ ಧರ್ಮವನ್ನು ನಿಂದಿಸುತ್ತ ಅಪಾನಪೇಯ ಅಭಕ್ಷಭಕ್ಷಣಗಳನ್ನು ಮಾಡುತ್ತ ಸ್ವೈರವೃತ್ತಿಯಿಂದ ಸಂಚರಿಸುವಂಥವರು. ಧರ್ಮಲಂಡರೆಂದರೆ ನಿಜವಾದ ತತ್ವವನ್ನರಿಯದೆ ಪರಧರ್ಮದ ರಹಸ್ಯವನ್ನು ತಿಳಿಯದೆ ಕೇವಲ ಧರ್ಮಾಂಧತೆಯಿಂದ ಅನ್ಯಧರ್ಮವನ್ನು ಹಳಿಯುತ್ತ ವಿಭೂತಿ ರುದ್ರಾಕ್ಷಿ ಮೊದಲಾದ ಬಾಹ್ಯಾಡಂಬರಗಳಿಂದ ಭೂಷಿತರಾಗಿ ಅಂತರಂಗ ಪರಿಶುದ್ಧವಿಲ್ಲದೆ ಮಬ್ಬು ಜನಗಳಿಗೆ ಮಂಕು ಬೂದಿಯನ್ನು ಹಚ್ಚುತ್ತ ತಮ್ಮ ಸ್ವಾರ್ಥಪರವಾದ ಕಾರ್ಯವನ್ನು ಸಾಧಿಸಿಕೊಳ್ಳುವಂಥವರು. ಧರ್ಮನಿಷ್ಠರೆಂದರೆ ಸ್ವಧರ್ಮದಲ್ಲಿ ಶ್ರದ್ಧೆಯುಳ್ಳವರಾಗಿ ಪರಧರ್ಮದಲ್ಲಿ ಸಹಾನುಭೂತಿಯುಳ್ಳವರಾಗಿ ವಿಶ್ವಧರ್ಮದ ತತ್ವಗಳನ್ನು ಚೆನ್ನಾಗಿ ಪರಿಶೀಲಿಸಿ ದೇಶಕಾಲಪರಿಸ್ಥಿತಿಗನುಸರಿಸಿ ಸ್ವಧರ್ಮವನ್ನು ಸರಿಪಡಿಸಿಕೊಳ್ಳಬೇಕೆಂಬ ಹಂಬಲವುಳ್ಳವರು. ಇಂಥವರ ಸಂಖ್ಯೆಯು ಸಮಾಜದಲ್ಲಿ ಅಧಿಕವಾದಾಗಳೇ ನಮ್ಮ ಧರ್ಮದ ಮತ್ತು ಸಮಾಜದ ಜಾಗ್ರತೆಯಾಗುವದೆಂದು ಧಾರಾಳವಾಗಿ ಹೇಳಬಹುದು.

---

# ಬ್ರಹ್ಮಸೂತ್ರಗಳು. ×

(ಲೇಖಕ— ರಾ. ರಾ. ಮಡಿವಾಳಪ್ಪ ಸಾಸನೂರ ಬೂದಿಹಾಳ ತಾ. ಸಿಂದಗಿ.)



ಬ್ರಹ್ಮಸೂತ್ರವು ವೇದಾಂತ ಪ್ರಸ್ಥಾನತ್ರಯದಲ್ಲಿ ಒಂದಾಗಿರುವದು. ಇದನ್ನು ಬರೆದವರು ಬಾದರಾಯಣವ್ಯಾಸರು. ಇವರು ಉಪನಿಷತ್ತುಗಳನ್ನು § ಅವಲಂಬಿಸಿಯೇ ಈ ಸೂತ್ರಗಳನ್ನು ರಚಿಸಿದರು. ಇದಕ್ಕೆ ವೇದಾಂತದರ್ಶನ, ಬ್ರಹ್ಮಮೀಮಾಂಸೆ, ಉತ್ತರಮೀಮಾಂಸೆ, ವ್ಯಾಸಸೂತ್ರಗಳೆಂದೂ ಹೆಸರುಂಟು.

ಬಾದರಾಯಣನಿಂದ ರಚಿತವಾದ ಈ ವೇದಾಂತ ದರ್ಶನದ ಪೂರ್ವದಲ್ಲಿಯೂ ಸಹ ಇಂತಹ ಜಾತೀಯ ವೇದಾಂತ ದರ್ಶನದ ಗ್ರಂಥಗಳಿದ್ದವೆಂದು ತಿಳಿಯುತ್ತದೆ. ಈ ವೇದಾಂತದರ್ಶನಕಾರರಲ್ಲಿ ಔಡುಲೋಮಿ, ಕಾಶಕೃತ್ಸ್ನ, ಜೈಮಿನಿ, ಕಾರ್ಷ್ಣಾಜಿನಿ, ಆತ್ರೇಯ ಪ್ರಭೃತಿ ಮುನಿಗಳ ಹೆಸರುಗಳು ದೊರೆತರೂ ಅವರ ಗ್ರಂಥಗಳು ಮಾತ್ರ ಇನ್ನೂ ದೊರೆತಿಲ್ಲ.

---

× ಅಲ್ಪಾಕ್ಷರಮಸಂದಿಗ್ಧಂ ಸಾರವದ್ವಿಶ್ವತೋಮುಖಮ್ ।
ಅಸ್ತೋಭಮನವದ್ಯಂ ಚ ಸೂತ್ರಂ ಸೂತ್ರವಿದೋವಿದುಃ ॥

§ ಕೆಳಗೆ ಬರೆದ ಗ್ರಂಥಗಳನ್ನು ಅವಲಂಬಿಸಿ ವೇದಾಂತ ಸೂತ್ರಗಳು ರಚಿತವಾಗಿರುವವೆಂದು ಪಂಡಿತರ ಮತ:—

೧ ಉಪನಿಷತ್ತುಗಳು— ಈಶಾವಾಸ್ಯ, ಕೇನ, ಕಠ, ಪ್ರಶ್ನ ಮುಂಡಕ, ಮಾಂಡುಕ್ಯ, ಐತರೇಯ, ತೈತ್ತಿರೀಯ, ಛಾಂದೋಗ್ಯ, ಬೃಹದಾರಣ್ಯಕ, ಶ್ವೇತಾಶ್ವತರ, ಕೌಷೀತಕೀಬ್ರಾಹ್ಮಣ, ಕೈವಲ್ಯ, ಜಾಬಾಲ.

೨ ಬ್ರಾಹ್ಮಣಗ್ರಂಥ— ಕಾಣ್ವಶಾಖಾ, ಅಗ್ನಿರಹಸ್ಯ, ತಾಂಡಿಶಾಖಾ, ಶಾಟ್ಯಾಯನೀಶಾಖಾ, ಶೈಂಗೀರಹಸ್ಯ.

೩ ಸ್ಮೃತಿಗಳು— ಮನುಸಂಹಿತೆ, ಮಹಾಭಾರತ, ಭಗವದ್ಗೀತೆ.

೪ ಪಾಂಚರಾತ್ರ ಅಥವಾ ಭಾಗವತಮತವಾದ.

೫ ದರ್ಶನಗಳು— ಕಪಿಲ, ಪತಂಜಲಿ, ಕಣಾದ, ಗೌತಮ ಜೈಮಿನಿಗಳಿಂದ ವಿರಚಿತಗಳಾದ ದರ್ಶನಗಳು.

೬ ಬುದ್ಧ ಪೂರ್ವಯುಗದಲ್ಲಿ ಅಧುನಿಕ, ಚಾರ್ವಾಕ, ಬೌದ್ಧ, ಜೈನ ಮತ್ತು ಮಾಹೇಶ್ವರಪ್ರಭೃತಿ, ಮತಾನುರೂಪಮತವಾದ.

ವೇದಾಂತ [ಉಪನಿಷತ್] ಗಳನ್ನು ಅವಲಂಬಿಸಿ ರಚಿತವಾಗಿರುವದರಿಂದ ಇದಕ್ಕೆ ವೇದಾಂತದರ್ಶನವೆಂದೂ ಹೆಸರು. ಇದರಲ್ಲಿ ವೇದಾಂತದ ಚರಮ ತಾತ್ಪರ್ಯವಾದ 'ಬ್ರಹ್ಮ' ದ ವಿಷಯವನ್ನು ಹೇಳಿರುವದರಿಂದ ಇದಕ್ಕೆ ಬ್ರಹ್ಮಸೂತ್ರವೆಂದೂ ಹೆಸರು. ಮತ್ತು ಇಂತಹ ಬ್ರಹ್ಮದ ವಿಷಯದಲ್ಲಿ ಯಾವತ್ತು ಸಂಶಯ ಮತ್ತು ವಿಪರ್ಯಯಗಳನ್ನು ನಿರಾಕರಣ ಮಾಡಲ್ಪಟ್ಟಿದೆ ಎಂದು ಇದಕ್ಕೆ 'ಬ್ರಹ್ಮಮೀಮಾಂಸಾದರ್ಶನ' ಮತ್ತು ವೇದದ ಉತ್ತರ ಭಾಗದಲ್ಲಿ ಹೇಳಿದ ಜ್ಞಾನ ಮತ್ತು ಉಪಾಸನಾ ವಿಷಯಗಳ ಮೀಮಾಂಸೆ ಮಾಡಿದೆ ಎಂದು 'ಉತ್ತರಮೀಮಾಂಸಾ' ದರ್ಶನವೆಂದು ಹೆಸರುಂಟಾಗಿದೆ. ವ್ಯಾಸ ಮಹರ್ಷಿಗಳು ಇದನ್ನು ರಚಿಸಿರುವದರಿಂದ ಇದಕ್ಕೆ 'ವ್ಯಾಸಸೂತ್ರ' ಗಳೆಂದೂ ಹೆಸರು. ವೇದಾಂತದರ್ಶನ ಕರ್ತೃವಾದ ಬಾದರಾಯಣ ವ್ಯಾಸನೂ, ವೇದವಿಭಾಗ ಕರ್ತೃವಾದ

---

೧೯೦ನೇ ಪುಟದ ಟಿಪ್ಪಣಿಯ ಮುಂದಿನ ಟಿಪ್ಪಣಿಯು

ಆದರೆ ಶ್ರೀಶಂಕರ ಭಗವತ್ ಪೂಜ್ಯಪಾದರವರು ತಮ್ಮ ಭಾಷ್ಯದಲ್ಲಿ ಉಪರ್ಯುಕ್ತ ಗ್ರಂಥಗಳನ್ನಲ್ಲದೆ ಕೆಳಗೆ ಬರೆದ ಗ್ರಂಥಗಳನ್ನು ಸಹ ಉಲ್ಲೇಖಿಸಿರುವರು.

೧ ಐತರೇಯಆರಣ್ಯಕ, ೨ ಐತರೇಯಬ್ರಾಹ್ಮಣ, ೩ ಆಪಸ್ತಂಭಧರ್ಮಸೂತ್ರ, ೪ ಆರ್ಷೇಯಬ್ರಾಹ್ಮಣ, ೫ ಗೌಡಪಾದಕಾರಿಕಾ, ೬ ಮೈತ್ರಾಯಣೀ ಸಂಹಿತಾ, ೭ ನಿರುಕ್ತ, ೮ ಪಾಣಿನಿ, ೯ ಋಗ್ವೇದಸಂಹಿತೆ, ೧೦ ಷಡ್ವಿಂಶಬ್ರಾಹ್ಮಣ, ೧೧ ಶತಪಥಬ್ರಾಹ್ಮಣ, ೧೨ ತೈತ್ತಿರೀಯಆರಣ್ಯಕ, ೧೩ ತೈತ್ತಿರೀಯಬ್ರಾಹ್ಮಣ, ೧೪ ತೈತ್ತಿರೀಯಸಂಹಿತಾ, ೧೫ ವಾಜಸನೇಯಿಸಂಹಿತಾ, ೧೬ ವಿಷ್ಣುಪುರಾಣ, ೧೭ ವಿಷ್ಣುಧರ್ಮೋತ್ತರ, ೧೮ ಶಿವಪುರಾಣ, ೧೯ ಶಿವಧರ್ಮೋತ್ತರ, ೨೦ ಉಪವರ್ಷವೃತ್ತಿ, ೨೧ ವೃತ್ತಿಕಾರನಗ್ರಂಥ (ಈ ಮತ ಖಂಡಿತವಾಗಿದೆ.)

ಶ್ರೀರಾಮಾನುಜಾಚಾರ್ಯರು ಈ ಗ್ರಂಥಗಳನ್ನಲ್ಲದೆ ಕೆಳಗೆ ಬರೆದ ಗ್ರಂಥಗಳನ್ನು ಉದ್ಧೃತಮಾಡಿರುವರು.

೧ ದಕ್ಷಸ್ಮೃತಿ, ೨ ಗರ್ಭೋಪನಿಷತ್ತು, ೩ ಗೌತಮಧರ್ಮಸೂತ್ರ, ೪ ಚೂಲಿಕೋಪನಿಷತ್ತು, ೫ ಮಹಾನಾರಾಯಣೋಪನಿಷತ್ತು, ೬ ಮಹೋಪನಿಷತ್ತು, ೭ ಮೈತ್ರಾಯಣಉಪನಿಷತ್ತು, ೮ ಸನತ್ಸುಜಾತೀಯ (ಇದರ ಮೇಲೆ ಒಂದು ಶಾಂಕರ ಭಾಷ್ಯವಿರುವದು. ಆದರೆ ಇದು ಶಂಕರಕೃತವೋ ಎಂಬ ಬಗ್ಗೆ ಸಂಶಯವದೆ.) ೯ ಸುಬಾಲೋಪನಿಷತ್ತು ೧೦ ಯಾಜ್ಞವಲ್ಕ್ಯಸ್ಮೃತಿ ೧೧ ಯಾಮುನಾಚಾರ್ಯ ಮತ್ತು ಶಠಕೋಪಾದಿಕೃತ ಗ್ರಂಥಗಳು.

ಕೃಷ್ಣ ದ್ವೈಪಾಯನವ್ಯಾಸನೂ, ಒಂದೇ ವ್ಯಕ್ತಿಯೆಂದು ಕೆಲವರು ಹೇಳುವರು, ಭಿನ್ನ ವ್ಯಕ್ತಿಯೆಂದು ಕೆಲವರು ಹೇಳುವರು. ಈ ಮತಭೇದದ ಮೀಮಾಂಸೆಯು ಪ್ರಕೃತ ಪ್ರಬಂಧದ ಉದ್ದೇಶವಲ್ಲವಾದ ಕಾರಣ ಅದನ್ನು ಪ್ರತ್ಯೇಕ ಪ್ರಬಂಧವಾಗಿ ಮತ್ತೊಮ್ಮೆ ಬರೆಯುವೆವು.

ನಮ್ಮ ಧರ್ಮದ ಕರ್ಮಾಂಶ ನಿರ್ಣಯದ ಸಲುವಾಗಿ ರಚಿತವಾದ ದರ್ಶನಕ್ಕೆ "ಕರ್ಮಮೀಮಾಂಸಾದರ್ಶನ" ವೆಂದು ಹೆಸರು. ಈ ಕರ್ಮದ ವಿಷಯವು ವೇದದ ಪೂರ್ವ ಭಾಗದಲ್ಲಿ ಇರುವದರಿಂದ ಇದಕ್ಕೆ "ಪೂರ್ವಮೀಮಾಂಸಾದರ್ಶನ" ವೆಂದು ಮತ್ತೊಂದು ಹೆಸರು. ಇದನ್ನು ರಚಿಸಿದವನು 'ಜೈಮಿನಿ' ಯು. ಪೂರ್ವ ಮೀಮಾಂಸೆಯಲ್ಲಿ ಬಾದರಾಯಣವ್ಯಾಸರ ಹೆಸರೂ, ಉತ್ತರಮೀಮಾಂಸೆಯಲ್ಲಿ ಜೈಮಿನಿಯ ಹೆಸರೂ, ದೊರೆಯುವದರಿಂದ ಈ ಎರಡು ಗ್ರಂಥಗಳು ಸಮಸಾಮಯಿಕವೆಂದು ತಿಳಿಯುವದು. ಪುರಾಣಗಳಲ್ಲಿ ಜೈಮಿನಿಯು ವ್ಯಾಸರ ಶಿಷ್ಯನೆಂದು ಹೇಳಿದೆ. ಇವರಿಬ್ಬರೂ ಕೂಡಿ ವೇದಾರ್ಥ ಮೀಮಾಂಸಾರೂಪ ಎರಡು ಮೀಮಾಂಸಾದರ್ಶನಗಳನ್ನು * ರಚಿಸಿದ್ದಾರೆಂದು ರಾಮಾನುಜ ಮೊದಲಾದವರು ಒಪ್ಪುವರು. ಇವೆಲ್ಲ ಸಂಗತಿಗಳಿಂದ ಇವರು ಸಮಕಾಲೀನರೆಂದೇ ಸಿದ್ಧ. ಆದರೆ ಶ್ರೀ ಶಂಕರಾಚಾರ್ಯ ಮೊದಲಾದವರು ಇವರಿಬ್ಬರು ಬೇರೆಬೇರೆಯಾಗಿ ಈ ಶಾಸ್ತ್ರಗಳನ್ನು ರಚಿಸಿದರೆಂದು ಹೇಳುವರು.

---

* ಚತುರ್ದಶ ವಿದ್ಯಗಳೊಳಗೆ ಮೀಮಾಂಸೆಯೆಂಬುವದೇ ಮಿಗೆ ವಿಶೇಷವಾಗಿ ಇಪ್ಪತ್ತಧ್ಯಾಯಮೆನಿಸಿ ಕರ್ಮಾರ್ಥ ಪ್ರತಿಪಾದಕತ್ವದಿಂ ದ್ವಿಭಾಗವಾಗಿ ಹುದದರೊಳಗೆ ಮೊದಲನೆಯ ಭಾಗವೇ ಜೈಮಿನಿಸೂತ್ರ ರೂಪದಿಂ ದ್ವಾದಶಾಧ್ಯಾಯಮೆನಿಸಿ ಕರ್ಮಕರ್ತೃ ಪ್ರತಿಪಾದಕವಾಗಿ ಲೋಕ ವೇದಾಧಿ ಕರಣವೆಂಬುವದು ಮೊದಲಾದ ಸಹಸ್ರಾಧಿ ಕರಣಾತ್ಮಕ ಶಾಸ್ತ್ರನ್ಯಾಯದಿಂ 'ಪೂರ್ವಮೀಮಾಂಸೆ' ಯೆನ್ನಿಸಿಕೊಂಬುವದು ......... ಬಳಿಕೆರಡನೆಯ ಭಾಗವೇ ಬ್ರಹ್ಮಾರ್ಥ ಪ್ರತಿಪಾದಕತ್ವದಿಂದುತ್ತರಮೀಮಾಂಸೆ ಯೆನ್ನಿಸಿಕೊಂಡು ವ್ಯಾಸಸೂತ್ರರೂಪದಿಂದೆಂಟಧ್ಯಾಯವಾಗಿಹುದದರೊಳಗೆ ಪೂರ್ವದ ನಾಲ್ಕಧ್ಯಾಯವೇ ದೇವತಾಕಾಂಡಮೆನಿಸಿಕೊಂಬುವದರಲ್ಲಿ ಮಂತ್ರವಾದದಂತೆ ದೇವತಾದಿ ಲಕ್ಷಣವೇ ಬಲಭದ್ರರಾಮನಿಂ ಪ್ರತಿಪಾದಿಸಲ್ಪಟ್ಟಿತು. ಬಳಿಕುತ್ತರವಾದ ನಾಲ್ಕಧ್ಯಾಯವೇ ಬ್ರಹ್ಮಕಾಂಡಮೆನಿಸಿಕೊಂಬುವದು. . . . . .

(ಶ್ರೀಮನ್ನಿಜಗುಣ ಶಿವಯೋಗಿಗಳ ವಿವೇಕಚಿಂತಾಮಣಿ ವೇದಾಂತಪ್ರಕರಣ.)

ಈ ವೇದಾಂತ ದರ್ಶನದಲ್ಲಿ ಯಾವ ಅರ್ಥವು ಲಕ್ಷಿತವಾಗಿರುವದು ಅವ ಸಿದ್ಧಾಂತಗಳನ್ನು ಅವಲಂಬಿಸಿ ಈ ಸೂತ್ರಗಳು ರಚಿತವಾದವು ಎಂಬ ವಿಷಯವಾಗಿ ವಿಷಮ ಮತಭೇದ ಉಂಟಾಗಿರುವದು.

ಈಗ ಉಪಲಬ್ಧವಿರುವ ವೇದಾಂತಸೂತ್ರದ ಎಲ್ಲ ಭಾಷ್ಯಗಳಲ್ಲಿ ಶಂಕರಾಚಾರ್ಯರಿಂದ ರಚಿತವಾದ 'ಶಾರೀರಕ ಭಾಷ್ಯ' ವೇ ಮೊದಲಿನದು. ಇವರು ಅದ್ವೈತ ಮತದಂತೆ ಭಾಷ್ಯವನ್ನು ಬರೆದಿರುವರು. ಭಾಸ್ಕರಾಚಾರ್ಯರು ದ್ವೈತಾದ್ವೈತ ಮತದಂತೆಯೂ, ಮಧ್ವಾಚಾರ್ಯರು ದ್ವೈತ ಮತದಂತೆಯೂ ರಾಮಾನುಜರು ವಿಶಿಷ್ಟಾದ್ವೈತ ಮತದಂತೆಯೂ ಶ್ರೀಕಂಠ ಶಿವಾಚಾರ್ಯರು ಶಕ್ತಿವಿಶಿಷ್ಟಾದ್ವೈತ ಮತದಂತೆಯೂ, ವ್ಯಾಖ್ಯೆಯನ್ನು ಮಾಡಿರುವರು. ಇವಲ್ಲದೆ ಇನ್ನೂ ಹಲವು ವ್ಯಾಖ್ಯೆಗಳು ದೊರೆಯುವವು. ಇದರ ಹೊರತು ಶಾಕ್ತ, ಗಾಣಾಪತ್ಯ ಸೌರ ಮೊದಲಾದ ಮತಗಳ ವ್ಯಾಖ್ಯೆಗಳು ದೊರೆಯದಿದ್ದರೂ ಅವು ರಚಿತವಾಗಿದ್ದವೆಂದು ಊಹಿಸಲು ಅವಕಾಶವಿದೆ. ವೇದಾಂತ ದರ್ಶನದ ನಾನಾ ಮತಗಳಲ್ಲಿ ಬಹು ಭಾಷ್ಯೆಗಳು ಇರುವವು. ಮತ್ತು ಈ ಎಲ್ಲ ಭಾಷ್ಯೆಗಳ ವ್ಯಾಖ್ಯೆಗಳಲ್ಲಿ ಪುನಃ ಮತಭೇದ ಬಹುಟೀಕಾ ಟಿಪ್ಪಣೆಗಳೂ ಉಂಟು. =

---

= ಭಾರತೀವಿಜಯ, ಸಂವಿದಾನಂದ, ಬ್ರಹ್ಮಘೋಷ, ಶತಾನಂದ, ಬೌಧಾಯನ, ಉದ್ಧತ, ವಿಜಯ, ರುದ್ರಭಟ್ಟ, ವಾಮನ, ಯಾದವ, ಪ್ರಕಾಶ, ಶಂಕರಾಚಾರ್ಯ, ಭರ್ತೃಪ್ರಪಂಚ, ಶಠಕೋಪ, ರಾಮಾನುಜ, ಬ್ರಹ್ಮದತ್ತ, ಭಾಸ್ಕರ, ಪಿಶಾಚ, ವಿಜಯಭಟ್ಟ, ವಿಷ್ಣುಕಾಂತ, ವಾದೀಂದ್ರ; ಮಾಧವದಾಸ, ಪೂರ್ಣಪ್ರಜ್ಞ, ರಾಘವೇಂದ್ರಸ್ವಾಮಿ, ವಲ್ಲಭಾಚಾರ್ಯ, ವಿಜ್ಞಾನಭಿಕ್ಷು, ಶಂಕರಾನಂದ, ಶ್ರೀಕಂಠಶಿವಾಚಾರ್ಯ, ಶ್ರೀಶಂಕರ ಭಗವತ್ಪಾದ ಶಿಷ್ಯ, ಧರ್ಮಭಟ್ಟ, ವಜ್ರನಾಥಭಟ್ಟ, ಭೈರವ, ನಿಂಬಾರ್ಕ ಇತ್ಯಾದಿ ವ್ಯಾಖ್ಯಾನಕಾರರ ಹೆಸರನ್ನು ಹೇಳಿರುವರು.

[ಮ. ಮ. ವೇ. ಶಾ. ಸ. ವಾಸುದೇವಶಾಸ್ತ್ರಿ ಅಭ್ಯಂಕರರ ಶಾಂಕರಬ್ರಹ್ಮಸೂತ್ರದ ಮರಾಠೀ ಬಾಷಾಂತರದ ಪ್ರಸ್ತಾವನೆ.]

ಉಪಲಬ್ಧವಿರುವ ವ್ಯಾಖ್ಯೆಗಳು

ಶ್ರೀ ಶಂಕರಾಚಾರ್ಯ, ರಾಮಾನುಜ, ಪೂರ್ಣಪ್ರಜ್ಞ, ವಲ್ಲಭ, ಭಾಸ್ಕರ, ವಿಜ್ಞಾನಭಿಕ್ಷು, ಶ್ರೀಕಂಠಶಿವಾಚಾರ್ಯ ಇವರ ಭಾಷ್ಯೆಗಳು ಶಂಕರಾನಂದ ಮತ್ತು ಶಂಕರಭಗವತ್ಪಾದಶಿಷ್ಯರ ವೃತ್ತಿ ಧರ್ಮಭಟ್ಟನ ಅದ್ವೈತಾಮೃತ

ವೇದಾಂತ ದರ್ಶನದಲ್ಲಿಯ ವ್ಯಾಸದೇವರ ಅಭಿಪ್ರಾಯವೇನು? ಅವರು ಇದರಲ್ಲಿ ಯಾವ ತತ್ವವನ್ನು ಉಪದೇಶ ಮಾಡಿರುವರು? ಯಾವ ಮತವು ಉಪನಿಷತ್ ಅಥವಾ ವೇದಾಂತದ ಅಭೀಷ್ಟವು? ಎಂಬ ಬಗ್ಗೆ ಈಗ ವಿಷಮ ಮತಭೇದಗಳಿವೆ. ಈ ಮತಭೇದಗಳನ್ನು ವಿಚಾರ ಮಾಡಲು ಇವು ಬಹು ದುರವಗಾಹವೂ, ಸೂಕ್ಷ್ಮಯುಕ್ತಿತರ್ಕದಿಂದ ಪುರಿಪುಷ್ಟಗಳಾಗಿಯೂ, ಪರಿಪೂರ್ಣಗಳೂ ಆಗಿರುವವೆಂದು ತಿಳಿಯು ವದು. ಅಂದಮೇಲೆ ವೇದಾಂತದರ್ಶನದ ಪ್ರತಿಪಾದ್ಯ ಅಥವಾ ವ್ಯಾಸ ದೇವರ ಅಭಿಪ್ರಾಯವು ತಿಳಿಯುವದು. ಮತ್ತು ನಿರ್ಣಯ ಮಾಡುವದು ಶಕ್ಯವಿಲ್ಲ. ವೇದಾಂತ ದರ್ಶನದಲ್ಲಿಯ ವ್ಯಾಸದೇವರ ಅಭಿಪ್ರಾಯವು ಈಗ ನಿರ್ಣಯವಾಗಲು ಶಕ್ಯವೋ? ಮತ್ತು ಒಂದು ವೇಳೆ ನಿರ್ಣ ಯವಾಗಲು ಶಕ್ಯವಾದರೆ ಅದರ ಉಪಾಯುಗಳಾವವು? ಎಂಬೀ ವಿಷ ಯದ ಸಂಬಂಧವಾಗಿಯೇ ಈ ಪ್ರಬಂಧದಲ್ಲಿ ವಿಚಾರಿಸಲ್ಪಡುತ್ತದೆ.

---

## ಎಲ್ಲಿಗೆ ಹೋಗುವೆ?

(ಲೇಖಕಃ— ಪಿ. ಇಂದುಧರ ಸ್ವಾಮಿ. ಬಳಗಾವಿ.)

ಅನೇಕ ಜನ್ಮಗಳಲ್ಲಿ ಅನೇಕ ಜನರು ತಂದೆ ತಾಯಿಗಳು ಅಕ್ಕ ತಂಗಿಯರು ಅಣ್ಣ ತಮ್ಮ ಮೊದಲಾದ ಬಂಧುಗಳು ಆಗಿಹೋದರು. ಅದರಂತೆ ಈ ಜನ್ಮದಲ್ಲಿಯೂ ಜನ್ಮವೆತ್ತುತ್ತಲೇ ತಂದೆತಾಯಿಗಳು ತೀರಿದ ಕಾರಣ ಅವರ ಪರಿಚಯವಿಲ್ಲದೆ ಇದ್ದ ಕಾರಣ ತಂದೆ ತಾಯಿ ಅಕ್ಕ ಮೊದಲಾದವರ ಪರಿಚಯ ಮಾಡಿಕೊಳ್ಳಬೇಕೆಂಬ ಇಚ್ಛೆಯುಳ್ಳ ನಾನೊಬ್ಬ ಜೀವನು. ನನಗೆ ಮೂವರು ಚಿಕ್ಕಪ್ಪಗಳು ಇರುವರು. ಆದರೆ ಅವರು

---

೧೯೩ನೇ ಪುಟದ ಟಿಪ್ಪಣಿಯ ಮುಂದಿನ ಟಿಪ್ಪಣಿಯು.

ವರ್ಷಿಣೀ ರಾಮಾನುಜರ ವೇದಾಂತದೀಪ, ನಜ್ರುನಾಥಭಟ್ಟನ ಮರೀಚಿಕಾ, ರಾಘ ವೇಂದ್ರನ ದೀಪಿಕೆ, ಭೈರವಪಂಡಿತನ ಬ್ರಹ್ಮಸೂತ್ರ ತಾತ್ಪರ್ಯ ವಿವರಣ, ಸುರೇ ಶ್ವರಾಚಾರ್ಯರ ಬ್ರಹ್ಮಸೂತ್ರವೃತ್ತಿ, ಶ್ರೀ ಸದಾಶಿವೇಂದ್ರ ಸರಸ್ವತೀವಿರಚಿತ ತತ್ವ ಪ್ರಕಾಶಿಕಾವೃತ್ತಿ, ಶ್ರೀಭಾರತೀ ತೀರ್ಥ ಸ್ವಾಮಿಗಳವರ ವೈಯಾಸಿಕೀ ನ್ಯಾಯ ಮಾಲಾ

ನನ್ನ ತಂದೆತಾಯಿ ಮುಂತಾದವರ ಪರಿಚಯ ಮಾಡಿಕೊಡಲು ಸಮರ್ಥರಲ್ಲ. ಯಾಕೆಂದರೆ ಅವರು ಜನ್ಮತಃ ವೈರಿಗಳ ಸಹವಾಸದಿಂದ ತಮ್ಮ ಕುಲದ ಮರ್ಯಾದೆಯನ್ನು ಬಲ್ಲವರಲ್ಲ. ಅವರು ಯಾರೆಂದರೆ-ಆಧ್ಯಾತ್ಮಿಕ, ಆಧಿಭೌತಿಕ, ಆಧಿದೈವಿಕ ದುಃಖತ್ರಯುಳೆಂಬವರು. ಇವರ ಪತ್ನಿಯವರಾದರೂ ಮೂವರು ಇರುವರು. ಕ್ರಮೇಣ ದಾರೇಷಣಾ, ಧನೇಷಣಾ, ಲೋಕೇಷಣಾ ಎಂಬ ಸುಂದರ ನಾಮವುಳ್ಳವರು. ಇವರೆಲ್ಲ ಹುಟ್ಟುತ್ತಲೇ ನಾನು ಬಡವನಾದ ಕಾರಣ ನನ್ನ ಮೇಲೆ ಇವರ ಪ್ರೇಮವು ಬಹಳ ಕಡಿಮೆಯಾಯಿತು. ವಾಸ್ತವಿಕವಾಗಿ ನಾನು ಅವರನ್ನು ತ್ರಿಕರಣಪೂರ್ವಕವಾಗಿ ಪ್ರೇಮದಿಂದ ಕಾಣಬೇಕಾಗಿತ್ತು. ಆದರೆ ದೈವಯೋಗದಿಂದ ಅವರು ನನಗೆ ಅನೇಕ ತರಹದಿಂದ ಕಷ್ಟಕೊಟ್ಟದ್ದರಿಂದ ಅವರಲ್ಲಿ ನನ್ನ ಮಮತೆಯು ಉಳಿಯಲಿಲ್ಲ. ಮತ್ತು ಈಶ್ವರನ ಧರ್ಮಪತ್ನಿಯರಲ್ಲಿ ಪ್ರಥಮಳಾದ ಪ್ರವೃತ್ತಿಯ ಮಕ್ಕಳಾದ ಕಾಮ, ಕ್ರೋಧ, ಲೋಭ ಮುಖ್ಯರೇ ಚಿಕ್ಕಪ್ಪಗಳ ಪೂರ್ವೋಕ್ತ ಮಿತ್ರರು. ಇವರ ಸಹವಾಸದಿಂದ ಇಂದ್ರ ಚಂದ್ರ ಮೊದಲಾದವರ ಸರ್ವಸಂಪತ್ತು ನಮ್ಮನ್ನಾಶ್ರಯಿಸಲೆಂಬ ಅವರ ಒಳಗಿನ ಅಭಿಪ್ರಾಯವು ತಿಳಿದುಬಂದಿತು. ಆದಕಾರಣ ನನ್ನ ನಿಜವಾದ ರಕ್ಷಕರು ದೊರೆಯಲಿಲ್ಲದ ಮೂಲಕ ನನ್ನ ತಂದೆ ತಾಯಿ ಮೊದಲಾದವರ ಪರಿಚಯುವನ್ನು ಮಾಡಿಕೊಳ್ಳಬೇಕೆಂಬ ಇಚ್ಛೆಯಾದರೂ ಆ ಕಾಲದಲ್ಲಿ ನನಗೆ ಇರಲಿಲ್ಲ.

ಲೋಕದಲ್ಲಿ ಸರ್ವಪ್ರಾಣಿಗಳಲ್ಲಿಯೂ ವಾಸಮಾಡಿ ಅವರವರ ಸುಖಕ್ಕೆ ಕಾರಣವಾಗುವಂತೆ ನನಗೂ ಸುಖವನ್ನು ಉಪದೇಶಿಸುವ ಒಬ್ಬ ಮಿತ್ರನು ಜನ್ಮತಃ ದೊರೆತಿದ್ದನು. ಅವನ ಹೆಸರು ಅಜ್ಞಾನಶರ್ಮ ಎಂದಿತ್ತು. ಅವನು ಸರ್ವರಲ್ಲಿ ಇರುವನಾದರೂ ಬಡವನಾದ ನನ್ನ ಮೇಲಂತೂ ಪ್ರೇಮದ ನಿಖಿಲ ಸ್ವರಾಜ್ಯವನ್ನೇ ಇರಿಸಿದ್ದನು. ಆತ್ಮನ ಸಹವಾಸವು ಬಾಲ್ಯಾವಸ್ಥೆಗೆ ಚಿನ್ನಕ್ಕೆ ರತ್ನವೆರಿಸಿದಂತೆ ಶೋಭೆಯನ್ನು ಉಂಟು ಮಾಡಿದ ಕಾರಣ ನಿಂದೆಯು ಒಂದು ತರಹದ ಗಿಡದಂತೆ ಅಪಮಾನವು ಒಂದು ತರಹದ ಪುಷ್ಪದಂತೆ ಸುಳ್ಳುತನವು ಮಧುರ ಫಲವಿದ್ದಂತೆ ಸುಖರೂಪವಾಗಿ ಪರಿಣಮಿಸಿತು. ಗುರುಗಳು ಯಾರು, ಹಿರಿಯರೆಂದರೆ ಯಾರಿಗೆ ಅನ್ನುವರು, ಇದು ನನ್ನ ಪದಾರ್ಥವು, ಇದನ್ನು ಚನ್ನಾಗಿ ರಕ್ಷಣೆಮಾಡಬೇಕು, ಇದು ಪರಮಾರ್ಥವು, ಇದರಿಂದ ದೂರ ಇರಬೇಕೆಂದು ತಿಳಿಯುವ ರೀತಿಯು ಎಷ್ಟೋ ಗಾವುದ ದೂರದಲ್ಲಿತ್ತು.

ಉಪದೇಶಕರಾದರೂ ಆ ಕಾಲದಲ್ಲಿ ಸಿಕ್ಕಲಿಲ್ಲ. ಯಾರ ನೇತೃತ್ವವು ಬಾಲ್ಯದ ಸ್ವರಾಜ್ಯದ ಮೇಲೆ ನಡೆಯುತ್ತಿರಲಿಲ್ಲ. ಹುಡುಗಾಟದ ವೈಭವ ಸುಖದಲ್ಲಿ ಲೋಲಾಡುವ ಬಾಲ್ಯದ ಸ್ವರಾಜ್ಯಕ್ಕೆ ಪ್ರತಿಬಂಧಕರಾದ ನೇತೃಗಳು ಅನೇಕರಿದ್ದರೂ ಅನೇಕ ನೀತಿಸಂಪನ್ನರಾದ ಬ್ರಿಟಿಷ್ ರಾಜ್ಯ ಮಂತ್ರಿಗಳಂತೆ ಬಾರ ಆ್ಯಟ್. ಲಾ. ಎಲ್. ಎಲ್. ಬಿ ಎಮ್. ಎ ಮುಂತಾದ ಪರೀಕ್ಷೆಗಳಲ್ಲಿ ಪಾಸಾದವರಿಗಿಂತಲೂ ಬುದ್ಧಿವಂತವರಾದ ಕಲಹವೆಂಬ ಮಂತ್ರಿಯು ಚಾಡಿಕಾರನೆಂಬ ಚಾರನು ಶೃಂಗಾರನೆಂಬ ಸೇನಾಪತಿಯು ರಾಜ್ಯವನ್ನು ಚನ್ನಾಗಿ ಆಳಿದರು. ಆದ್ದರಿಂದ ಯಾರ ನೇತೃತ್ವವೂ ನಡೆಯಲಿಲ್ಲ.

ಹೀಗಿರುವ ಕಾಲದಲ್ಲಿ ದಶೇಂದ್ರಿಯಗಳೆಂಬ ಗೋವುಗಳೊಡನೆ ವಿನೋದಿಸುವ ನನ್ನ ಮೇಲೆ ಚಿಕ್ಕಪ್ಪಗಳಾದ ದುಃಖತ್ರಯಗಳ ಕೃಪಾದೃಷ್ಟಿಯು ಲೇಶತಃ ಬಿದ್ದರೂ ಅವರನ್ನು ಅನುಸರಿಸದೇ ಇರತಕ್ಕ ನನ್ನ ಮೇಲೆ ಚಿಕ್ಕಮ್ಮನವರಾದ ಈಷಣತ್ರಯಗಳ ಕ್ರೂರದೃಷ್ಟಿಗೆ ಹೆದರಿದೆನು. ಯಾಕಂದರೆ ಲೋಕದಲ್ಲಿ ಮನೆತನದ ಭಾಗವು ಹೆಣ್ಣುಮಕ್ಕಳಿಗಿದ್ದಷ್ಟು ಪುರುಷರಿಗೆ ಇರುವದಿಲ್ಲ. ಆದರೆ ಅವರನ್ನು ಬಿಡುವದೂ ನನ್ನಿಂದ ಆಗಲಿಲ್ಲ. ಯಾಕಂದರೆ ಲೋಕದ ಯಾತ್ರೆಯು ದುಃಖತ್ರಯ ಈಷಣತ್ರಯನಿಬಂಧನವಾದದ್ದು ಬಿಡಲಿಕ್ಕೂ ಬರುವಂತಿಲ್ಲ. ಬಿಟ್ಟವನೇ ಮುಕ್ತನಾಗುವನಲ್ಲದೆ ಅವನಿಗೆ ಪುನರ್ಜನ್ಮಉಂಟೇ ? ಆದರಲ್ಲಿಯೂ ಅನೇಕ ಜನ್ಮಸಿದ್ಧ ಹಕ್ಕಿನವರಾಗಿದ್ದರು. ಹೀಗಿರುತ್ತಿರಲು ತಂದೆತಾಯಿಗಳಿಲ್ಲದ ನಾನು ಕಷ್ಟದಿಂದ ರಕ್ಷಿಸುವರನ್ನು ಸರಿಯಾಗಿ ನಂಬಲಿಲ್ಲ. ಇದಕ್ಕೆ ಕಾರಣವು ಚಪಲತನವುಳ್ಳ ಬಾಲ್ಯವಾಯಿತಲ್ಲದೇ ಅಜ್ಞಾನವೆಂಬ ಮಿತ್ರನ ಸಹವಾಸವೂ ಮುಖ್ಯ ಕಾರಣವಾಯಿತು. ಈ ಅವಸ್ಥೆಯಲ್ಲಿರುವ ನನ್ನ ಪರದೇಶಿತನವು ಯಾರಲ್ಲಿಯೂ ದಯೆಯನ್ನು ಹುಟ್ಟಿಸಲಿಲ್ಲ. ಹೀಗಿರುತ್ತಿರಲು ಒಂದು ದಿವಸ ನಿದ್ರೆ ನೀರಡಿಕೆ ಇಲ್ಲದೆ ಬಳಲುವ ನನಗೆ ಇಬ್ಬರು ದುಷ್ಟರ ಭೆಟ್ಟಿಯಾಯಿತು. ಅವರನ್ನು ನಾನು ಹೆಸರು ಕೇಳಿದೆನು. ತಮ್ಮ ಸುಖದುಃಖವೆಂಬ ಶುಭ ನಾಮಧೇಯವನ್ನು ತಿಳಿಸುವ ಅವರ ಮುಖಕಮಲವನ್ನು ನೋಡಲು ಅವರಿಬ್ಬರಲ್ಲಿ ಒಬ್ಬನ ಮುಖಚಿನ್ಹವು ಸ್ವಲ್ಪ ದಯೆಯುಳ್ಳತನವನ್ನು ಹೇಳಿತು. ಇದರಿಂದಲೇ ನಾನು ಇವನು ಸುಖನೆಂಬುವನೆಂದು ತಿಳಿದೆನು. ಇನ್ನೊಬ್ಬನು ದುಃಖನಾದನು. ಆದರೆ ಇಬ್ಬರು

ಬಹಳ ಮಿತ್ರರಾದ ಮೂಲಕ ದುಃಖನ ಅನುಮತಿಯಿಲ್ಲದೇ ಸುಖನು ಎಂದೂ ದಯಮಾಡುತ್ತಿರಲಿಲ್ಲ 'ಸುಖಂ ಹಿ ದುಃಖಾನ್ಯನುಭೂಯ ಶೋಭತೆ.' ಅವರ ವಾಸಸ್ಥಾನವನ್ನು ಕೇಳಿದೆನು. ಅದಕ್ಕೆ ಅವರೀರ್ವರು ನಾವೀರ್ವರು ದುಃಖತ್ರಯಗಳಲ್ಲಿ ಗಳಸ್ಯ ಕಂಠಸ್ಯ ರೂಪದಿಂದಲಿರುವೆ ವೆಂದುಸುರಿದರು. ತತ್ಕ್ಷಣವೇ ವಿಷವನ್ನು ಕಂಡ ಚಕೋರಕ್ಕೆ ಕಣ್ಣು ಕೆಂಪಗಾಗುವಂತೆ ಕಣ್ಣು ಕೆಂಪಗಾದವು. ಇಂಥ ಅವಸ್ಥೆಯಲ್ಲಿ ನನ್ನ ಗತಿಯು ಹೀಗಾಯಿತು. 'ಏಕಃಕಪೋತ ತಪೋತಃ ಶತಶಃ ಸೇನಾ ಕ್ಷುಧ್ವಾಭಿಧಾವಂತಿ। ಅಂಬರಮಾವೃತಿಶೂನ್ಯಂ ಹರಹರ ಶರಣ. ವಿಧೇಃ ಕರುಣಾ' ಅಂದರೆ ನಿರಾಧಾರವಾದ ಆಕಾಶದಲ್ಲಿ ಹೋಗುವ ಒಂದಾ ನೊಂದು ಪಾರವಾಳದ ಮರಿಯ ಮೇಲೆ ಅನೇಕ ಗಿಡಗಗಳು ಮುತ್ತಿದರೆ ರಕ್ಷಕರಿಲ್ಲದ ಅದಕ್ಕೆ ಶಿವನೇ ರಕ್ಷಕನಲ್ಲವೇ? ಮತ್ತು 'ಸರ್ವಂ ಶೂನ್ಯಂ ದರಿದ್ರಸ್ಯ' ಅನ್ನುವಂತೆ ದಶದಿಕ್ಕುಗಳೂ ಶೂನ್ಯಪ್ರಾಯವಾದವು. ಹೀಗಿ ರುತ್ತಿರಲು ಅವ್ಯಕ್ತರೂಪವಾದ ಲೌಕಿಕಕ್ಕೆ ಸಹಾಯರಾದ ತಂದೆತಾಯಿ ಗಳಂತೆ ಇರುವ ಧೈರ್ಯ ಕ್ಷಮೆ ಇವುಗಳನ್ನು ನಾನು ಬಿಡಲಿಲ್ಲ.

ಇದೇ ರೀತಿಯಿಂದ ಕಾಲಕಳೆಯುತ್ತಿರುವ ನನಗೆ ಇದಕ್ಕೂ ಪೂರ್ವ ದಲ್ಲಿ ಎಷ್ಟೋ ಜನ್ಮಗಳನ್ನು ನಿರರ್ಥಕವಾಗಿ ಕಳೆದ ಕಾರಣ ಸಮಯದ ಚಿಂತೆಯು ಇರಲಿಲ್ಲ. ಕೆಲವು ದಿವಸಗಳ ಮೇಲೆ ನನ್ನ ಕಂಡ ಸರ್ವ ಜನರೂ ನಿಂದೆಯಿಂದ ತಾಪವನ್ನು ಉಂಟುಮಾಡಲು ಪ್ರಾರಂಭ ಮಾಡಿ ದರು. ತದನಂತರ ಸರ್ವರನ್ನೂ ತಿರಸ್ಕರಿಸಿ ನಮ್ಮ ಊರಿಗೆ ಹತ್ತರವಿ ರುವ ಅಶೋಕಸಿದ್ಧ ವೃಷಭಸ್ವಾಮಿಯ ಗುರುಕುಲವನ್ನು ಸೇರಿದೆನು. ತದನಂತರ ಪೂರ್ವಚಿಕ್ಕಪ್ಪನಾದ ಆಧ್ಯಾತ್ಮಿಕ ಬಾಧೆಯು ಸ್ವಲ್ಪ ಕಡಿಮೆ ಯಾಯಿತು. ಆಧ್ಯಾತ್ಮಿಕ ಬಾಧೆಯು ಶಾರೀರಿಕ ಮಾನಸಿಕ ರೂಪವಾ ದದ್ದು. ಆದರೂ ಕೆಲವು ಸಮಯಗಳಲ್ಲಿ ಅಧ್ಯಾತ್ಮಿಕನ ಭೆಟ್ಟಿಯಾಗು ತ್ತಿತ್ತಾದ ಕಾರಣ ಸ್ವಲ್ಪ ಕಷ್ಟವಾಗುತ್ತಿತ್ತು. ಆದರೆ ಇನ್ನುಳಿದ ಆದಿ ಭೌತಿಕ ಆಧಿದೈವರರಾದ ಈರ್ವ ಚಿಕ್ಕಪ್ಪಗಳ ಬಾಧೆಯು ಇತ್ತೇ ಇತ್ತು. ಅವರ ಬಾಧೆಯನ್ನು ಅಂದರೆ ದೈವಿಕ ಬಾಧೆಯನ್ನು ಭೌತಿಕ ಬಾಧೆ ಯನ್ನು ಅಶೋಕ ಸಿದ್ಧವೃಷಭಗುರುಕುಲವಾಸವು ನಿವಾರಣೆಮಾಡಲು ಸಮರ್ಥವಾಗಲಿಲ್ಲ. ಅದಕ್ಕೂ ಅವರ ಬಾಧೆಯು ಕಿಂಚಿನ್ಮಾತ್ರವಿತ್ತು. ಅದನ್ನು ಆ ಗುರುಕುಲವು ಅನೇಕ ಉಪಾಯಗಳಿಂದ ಅವುಗಳಲ್ಲಿ ವೈತ್ರಿ

ಯನ್ನು ತೋರಿಸುತ್ತ ಮುಕ್ತಿಯ ಯುಕ್ತಿಯನ್ನು ಹುಡುಕುತ್ತಿತ್ತು. ಚತುರತನದಿಂದ ಲೌಕಿಕವನ್ನು ಮುಗಿಸುವದೇ ಈ ಅಶೋಕ ಸಿದ್ಧ ವೃಷಭ ಗುರುಕುಲದ ನಿಜಾಚರಣೆಯಾಗಿತ್ತು. ಮತ್ತು ಇದನ್ನು ಸರ್ವರಿಗೂ ತಿಳಿಸುವದಕ್ಕೋ ಎನೋ ಎಂಬುವಂತೆ 'ಜಾಣನು ಲೌಕಿಕ ಪಾರಮಾರ್ಥವೆರಡನು' ಎಂಬ ನಿಜಗುಣಶಿವಯೋಗಿಗಳ ವಚನಮಂತ್ರವು ಈ ಗುರುಕುಲದ ಬಾಗಿಲಲ್ಲಿ ಕೆಚ್ಚಿತ್ತು. ಇದನ್ನೆಲ್ಲಾ ನೋಡಿ ಇಲ್ಲಿಯೂ ಚಿಕ್ಕಪ್ಪಗಳಾದ ಆಧಿ ದೈವಿಕ ಆಧಿ ಭೌತಿಕ ವೃದ್ಧಿಯುದೆ ಎಂದು ತಿಳಿದು ಅದರಲ್ಲಿಯೂ ವಿಶ್ವಾಸವಿಲ್ಲದಕಾರಣ ಪುನಃ ಮೂವರು ಚಿಕ್ಕಪ್ಪರನ್ನು ಆಶ್ರಯಿಸಿದೆನು. ಹೀಗಿರುವ ನನ್ನನ್ನು ಕಂಡಾಕ್ಷಣಕ್ಕೆ ಚಿಕ್ಕಪ್ಪನವರು ಕೆಂಡುಗಣ್ಣಿನಿಂದ ಬೆಂಕಿಯನ್ನು ಕಾರಿದರು. ಹೀಗಿರಲು ಕಾರಣವನ್ನು ವಿಚಾರಮಾಡಬೇಕಾಯಿತು. ಇದಕ್ಕೆ ಮೂಲಕಾರಣವು ನನ್ನ ಪರಮ ಮಿತ್ರ ಅಜ್ಞಾನವೇ ಕಾರಣವಾಯಿತು. ಆದರೆ ಮಿತ್ರನನ್ನು ಬಿಡುವ ರೀತಿಯು ಹೇಗೆ? ಆದರೂ ಚಿರಕಾಲಿಕ ಮಿತ್ರನ ಮೈತ್ರತೆಯನ್ನು ಕಡಿಮೆ ಮಾಡಲು ಶನೈಃ ಶನೈಃ ಯತ್ನಮಾಡಿದೆನು. ಸಹಾಯರಹಿತನಾದ ನಾನು ಅವನನ್ನು ಬಿಡಲು ಮಾಡಿದ ಯತ್ನವು ನಿಷ್ಫಲವಾಯಿತು. ಈವಾಗ ನನ್ನ ವೈರಿಗಳ ಹಾಸ್ಯ ಸಮುದ್ರವು ನನ್ನ ಪ್ರಯತ್ನದ ನಿಷ್ಫಲವೆಂಬ ಚಂದ್ರೋದಯದಿಂದ ಉಕ್ಕೇರಹತ್ತಿತು.

ಇಷ್ಟರಲ್ಲಿ ಒಬ್ಬ ಹೆಣ್ಣುಮಗಳು ಭೆಟ್ಟಿಯಾದಳು. ಅವಳು ಸ್ವಭಾವದಿಂದ ಸುಂದರಳೂ ಸತ್ಕುಲಪ್ರಸೂತಳೂ ಸುಶೀಲ ಸ್ವಭಾವವುಳ್ಳವಳೂ ಆದ ಕಾರಣ ಅವಳ ಶುಭನಾಮಧೇಯವನ್ನು ಕೇಳಿದೆನು. ಆಕೆಯು ಮುಖಕಮಲಕ್ಕೆ ಭೂಷಣವಾದ ಸುಂದರಾಕ್ಷರಗಳಿಂದ ಕೂಡಿದ ವಾಣಿಯಿಂದ ಪವಿತ್ರವಾದ ಬುದ್ಧಿ ಎಂಬ ತನ್ನ ಹೆಸರನ್ನು ತಿಳಿಸಿದಳು. ಇಂಥ ಹೆಣ್ಣುಮಗಳನ್ನು ಕಾಣುತ್ತಲೇ ನನ್ನ ವಿಚಾರವೂ ಮುಖಮುದ್ರೆಯೂ ಬದಲಾಯಿತು. ಇದನ್ನು ಪ್ರತ್ಯಕ್ಷ ಕಾಣುತ್ತಿದ್ದ ನನ್ನ ಮಿತ್ರ ಅಜ್ಞಾನದ ವಿಚಾರವೂ ಬದಲಾಯಿತು. ಈ ರೀತಿ ಮಿತ್ರರಲ್ಲಿ ಭಿನ್ನಾಭಿಪ್ರಾಯವು ವಿಘ್ನರೂಪವಾಯಿತು. ಪರಸ್ಪರ ಮಿತ್ರತ್ವವನ್ನು ಬಿಡಲು ಬಂದ ತೊಂದರೆಯು ಅನುಭವಿಕರಿಗಲ್ಲದೆ ಬೇರೆಯವರಿಗಲ್ಲ. ಮಿತ್ರನಾದ ಅಜ್ಞಾನನು ಉದಾಸೀನತೆಯಿಂದ ಇರಲು ಪ್ರಾರಂಭ ಮಾಡಿದನು. ಯಾಕಂದರೆ ಅವನ ಸಾತ್ವಿಕ ರಾಜಸ ತಾಮಸ ಗುಣತ್ರಯಗಳಲ್ಲಿ ಸಾತ್ವಿಕವು ಬುದ್ಧಿ

ಯನುಗ್ರಹದಿಂದ ನನ್ನಲ್ಲಿತ್ತು. ಇದು ನನಗೆ ಸಮ್ಮತವಿತ್ತು. ಅಷ್ಟರಲ್ಲಿ ಆ ಬುದ್ಧಿ ಎಂಬ ಹೆಣ್ಣುಮಗಳು ನನಗೆ ಈ ರೀತಿ ಉಪದೇಶಮಾಡಿದಳು. ನೀನು ನಿನ್ನ ನಿಜವಾದ ತಂದೆತಾಯಿ ಬಂಧುಬಳಗದವರನ್ನು ಕಾಣಬೇಕೆಂದಿದ್ದರೆ, ನಮ್ಮಕ್ಕನನ್ನು ಭೆಟ್ಟಿಯಾಗು. ಆಕೆಯ ಹೆಸರು ವಿದ್ಯೆಎಂಬ ಪವಿತ್ರಾಕ್ಷರಗಳಿಂದ ಕೂಡಿದೆ. ಆಕೆಯು ವಿನೀತಳಾದ ಕಾರಣ ಬಹಳ ಯೋಗ್ಯಳು. ಸರ್ವಸಂಪತ್ತುಗಳು ಆಕೆಯನ್ನು ಸೇವಿಸುತ್ತಿರುವವಾದ ಕಾರಣ ನಿಜವಾದ ಧರ್ಮ ನಿಜವಾದ ಸುಖಕ್ಕೆ ನಿಧಿಯಾಗಿರುವಳು. ದೀನದಯಾಪರಳೂ ಆಶ್ರಿತರಕ್ಷಕಳೂ ಆದ ಕಾರಣ ನಿನ್ನ ವೈರಿಗಳ ಬಾಧೆಯೂ ನಾಶವಾಗುವದು. ಆಕೆಯ ಸೇವೆಯು ಅಷ್ಟು ಕಷ್ಟವಲ್ಲ. ಪರಂತು ಆಕೆಯ ಸೇವೆಯು ಲಕ್ಷ್ಮೀಪುತ್ರರ ಆಧೀನವಾಗಿದೆ. ಎಂದು ಬಹಳ ಪ್ರೇಮಾಲಾಪಗಳಿಂದ ತಿಳಿಸಿದ ಅನಂತರದಲ್ಲಿ ಬುದ್ಧಿಯು ನನ್ನನ್ನು ಎಡಬಿಡದೇ ಕಾಯುಹತ್ತಿದಳು. ಆ ಮೇಲೆ ಪುನಃ ಚಿಕ್ಕಪ್ಪಗಳ ಹತ್ತರವಿರುವ ನಾನು ಅವರನ್ನು ಸಹಾಯ ಬೇಡಿದೆನು. ಅದಕ್ಕೆ ಅವರ ಸಮ್ಮತವಿರಲಿಲ್ಲ. ಯಾಕಂದರೆ ಅವರು ಜನ್ಮತಃ ಲಕ್ಷ್ಮೀಲೋಲುಪರು ಬಹಳ ಬಡವರು. ಆದಕಾರಣ ಅವರು ಸಹಾಯ ಮಾಡುವದು ಸೆರಗಿನಲ್ಲಿ ಬೆಂಕಿ ಕಟ್ಟಿಕೊಂಡಂತಾಯಿತು. ಇದನ್ನೆಲ್ಲಾ ವಿಚಾರಿಸಿ ಅವರ ಕಡೆಯ ಲಕ್ಷವಿಲ್ಲದೇ ಪುನಃ ಪೂರ್ವದಲ್ಲಿದ್ದ ಅಶೋಕಸಿದ್ಧವೃಷಭ ಗುರುಕುಲಕ್ಕೆ ಸಾಷ್ಟಾಂಗವೆರಗಿದೆನು. ಅಷ್ಟರಲ್ಲಿ ನನ್ನ ಜನ್ಮಮಿತ್ರ ಅಜ್ಞಾನನು ಸಿಟ್ಟಿಗೆದ್ದು ನನ್ನ ಪ್ರಯತ್ನಕ್ಕೆ ವಿಘ್ನಮಾಡಲು ಅಶೋಕಸಿದ್ಧವೃಷಭ ಗುರುಕುಲವು ಬಹು ಶೋಕ ಪ್ರಿಯವಾಗಿ ಕಂಡಿತು. ಅವಾಗ ಶ್ರೀ ವಿದ್ಯೆಯ ಸೇವೆಯನ್ನು ಯಾವಾಗ ಮಾಡುವೆನೋ ಯಾವಾಗ ನಿಜವಾದ ತಂದೆತಾಯಿಗಳ ಪವಿತ್ರ ದರ್ಶನವು ದೊರೆಯುವದೋ ಎಂಬುವ ಹೆಚ್ಚಿನ ಸಂಪತ್ತು ತಲೆಗೇರಿತು. ಇದನ್ನು ನೋಡಿ ಕೆಲವರು ವಿಪರೀತ ತಿಳಿಯಹತ್ತಿದರು. ಇದನ್ನು ಕಂಡು ದಯಾಮಯವಾದ ಅಶೋಕಸಿದ್ಧವೃಷಭಗುರುಕುಲವು ಬಹು ತರಹದಿಂದ ಬುದ್ಧಿಗೆ ಎಚ್ಚರವನ್ನು ತಿಳಿಸಿ ಸ್ವಲ್ಪ ಸಹಾಯವನ್ನು ಮಾಡಿತು. ಅದರ ಸಹಾಯದಿಂದ ವಿದ್ಯೆಯ ಸೇವೆಗಾಗಿ ಅನೇಕ ಸಣ್ಣಪುಟ್ಟ ಗುರುಕುಲಗಳನ್ನು ಸೇರಿದೆನು. ಅವುಗಳ ನಿಯಮಗಳನ್ನು ಬಹಳ ಅನುಸರಿಸಿದೆನು. ಅವುಗಳ ಸಹಾಯದಿಂದ ಯತ್ಕಿಂಚಿತ ವಿದ್ಯೆಯ ಸೇವೆಯು ಲಭಿಸಿದರೂ ಅವುಗಳ ಆಶಯವು ಸ್ವಾರ್ಥಪೂರ್ಣವುಳ್ಳದ್ದು ಆಗಿತ್ತಲ್ಲದೆ

ಲೌಕಿಕ ಸಂಪತ್ತಿನಲ್ಲಿ ಲೋಲುಪವಾಗಿ ಪರಾಧೀನತೆಯಿಂದ ತನ್ನ ಆಚ ರಣೆಯೇ ವೇದೋಕ್ತಾಚರಣೆ ಸರ್ವಸಂಪತ್ತಿಗೂ ಮೂಲವೆಂಬ ಭ್ರಾಂತಿ ಮಯ ವಿಚಾರದಿಂದ ಬದ್ಧವಾಗಿತ್ತು. ಹೆಸರಿಗೆ ಗುರುಕುಲವಾದರೂ ಸೂಕ್ಷ್ಮದೃಷ್ಟಿಗೆ ದೊಡ್ಡ ಸಂಸಾರವಾಗಿ ಬಹು ರಮ್ಯತೆಯಿಂದ ಸ್ವರ್ಗೀಯ ಸುಖಕ್ಕೆ ಅಧಿರೋಹಣೆಯನ್ನು ಇರಿಸಿದ್ದ ಮೂಲಕ ಚನ್ನಾಗಿ ನನ್ನ ದೃಷ್ಟಿಗೆ ಕಾಣಲಿಲ್ಲ. ಪಿತ್ತದ ಮನುಷ್ಯನಿಗೆ ಸರ್ವಪಿತ್ತವಾದರೂ ಪಿಂಡೇ ಪಿಂಡೇ ಮತಿರ್ಭಿನ್ನ ಎನ್ನುವಂತೆ ಉದಾಹರಣೆಗಳು ಸಿಕ್ಕರೂ ಸ್ಥೂಲ ದೃಷ್ಟಿಯನ್ನು ಬಿಟ್ಟು ಸೂಕ್ಷ್ಮನೇತ್ರಕ್ಕೆ ದೊಡ್ಡ ಸಂಸಾರವೇ ಹೊರತು ಬೇರೆಯಲ್ಲ. ಯಾಕಂದರೆ ಶಾಪೇನ ಶಾಪೇನ ಸರ್ವಕ್ಕೂ ನಿಗ್ರಹಾನು ಗ್ರಹಕ್ಕೆ ಸಮರ್ಥರಾದ ಜನಕರ ಮತ್ತು ತಪಸ್ವಿಪುಂಗವರಾದ ರಾಜಾ ಧಿರಾಜರಾದ ನಿಜಗುಣ ಶಿವಯೋಗಿಗಳ ಆಚರಣೆಯು ಹೇಳುವದಲ್ಲದೆ ಗುರುಕುಲಗಳಲ್ಲಿ ಮಹತ್ವವಿಲ್ಲ. ಎಲ್ಲಿ ಗುಣಾಢ್ಯನೋ ಅದೇ ಗುರು ಕುಲವು. ಆತ್ಮಜ್ಞರ ವಿಚಾರಕ್ಕೂ ಗುರುಕುಲದ ವಿಚಾರಕ್ಕೂ ಮಹ ದಂತರವಾದ ಕಾರಣ ಅದರ ವಿಚಾರವು ಜೀವನಾದ ನನಗೆ ಪ್ರಸ್ತುತ ದಲ್ಲಿ ಬೇಕಿಲ್ಲ. ಅಂತೂ ನನಗೆ ಗುರುಕುಲಗಳು ಯಾವವೂ ಸರಿಬರ ಲಿಲ್ಲ. ಯಾಕಂದರೆ ಅವುಗಳಲ್ಲಿ ನನ್ನ ವೈರಿಗಳಾದ ಚಿಕ್ಕಪ್ಪಗಳಾದ ದುಃಖತ್ರಯಗಳ ಆಧಿಪತ್ಯವು ಸಂಪೂರ್ಣವಿತ್ತು. ಅವರ ಪತ್ನಿಯರಾದ ಈ ಗುಣತ್ರಯಗಳು ಪರೋಪಕಾರ ನೆವದಿಂದ ಅಲ್ಲಿ ತಮ್ಮ ಪಾತಿವ್ರತ್ಯ ವ್ರತದ ಸೌಭಾಗ್ಯವನ್ನು ಅನುಭವಿಸುತ್ತಿದ್ದರೂ ಅಂತೂ ಜಗತ್ತೆಲ್ಲ ಜೀವ ನಾದ ನನಗೆ ದುಃಖತ್ರಯ ಈಷಣತ್ರಯಮಯವಾಗಿ ಕಂಡುಬಂದಿತು. ತತಃ ಇಹಪರಗಳಿಗೆ ದೂರನಾದ ನಾನು ಪೂರ್ವದ ಅಶೋಕಸಿದ್ಧವೃ ಷಭ ಗುರುಕುಲಕ್ಕೆ ಶರಣೆಂದೆನು. ತಾಪವನ್ನು ನಿವಾರಣೆ ಮಾಡಲು ಸಮರ್ಥವಾದ ಗುರುಕುಲವು ನನ್ನ ಉದ್ದೇಶವಾದ ವಿದ್ಯೆಯ ಸೇವೆ ತತಃ ತಂದೆತಾಯಿಗಳ ಭೆಟ್ಟಿಗೆ (ದರ್ಶನಕ್ಕೆ) ಅನುಗುಣವಾದ ವಿದ್ಯಾ ನಿಧಿಯಾದ ಸರಸ್ವತೀ ಸೇವೆಯನ್ನು ತೋರಿಸಿತು. ತ್ರಿಕರಣಪೂರ್ವಕ ಮಾಡಿದ ವಿದ್ಯಾಸೇವೆಯು ನೀನು ಜೀವನಲ್ಲ ಇದು ನಿನ್ನ ಭ್ರಾಂತಿಯು. ನೀನು ಶಿವನು, ನೀನು ಬಡವನಲ್ಲ ಶ್ರೀಮಂತನು, ಅಷ್ಟೈಶ್ವರ್ಯ ಸಂಪನ್ನನು, ನೀನು ದುಃಖಿಯಲ್ಲ, ಸಚ್ಚಿದಾನಂದಮಯನು, ನೀನು ಪಾಪಿಯಲ್ಲ ನಿರ್ಮಲನು, ಕಾಮಕ್ರೋಧಾದಿಗಳು ನಿನ್ನ ವೈರಿಗಳಲ್ಲ,

ನಿನ್ನ ಮಿತ್ರನಾಗಿದ್ದ ಅಜ್ಞಾನವಿಕಾರಗಳು, ಅವುಗಳು ನನ್ನ ಸಹಾಯು ದಿಂದ ನಿನಗೆ ಅನುಕೂಲಗಳು, ಅಜ್ಞಾನದ ಗುಣಗಳಿಂದ ಅನೇಕವಾಗಿ ಪರಿಣಮಿಸಿದವು. ಅವುಗಳೊಡನೆ ಐಕ್ಯತೆಯಿಂದ ಇರಬೇಕಾದರೆ, ನೀನು ನನ್ನ ಸೇವೆಯನ್ನು ಮಾಡು, ಲೌಕಿಕಕ್ಕೆ ಸಹಾಯಕರಾದ ಧೈರ್ಯ, ಕ್ಷಮಾ ಇವುಗಳು ನಿನ್ನ ನಿಜವಾದ ತಂದೆತಾಯಿಗಳಲ್ಲ. ಬೇರೆ ಇರು ವರು. ಅವರ ಸಂಪತ್ತು ಮುಕ್ತಿ ಆದ್ದರಿಂದ ಪ್ರಥಮದಲ್ಲಿ ಅವರ ಸೇವೆ ಯನ್ನು ಮಾಡು, ಆದರಿಂದ ಪೂರ್ವ ಜನ್ಮದ ಪಾಪವು ನಾಶವಾಗು ವದು. ನನ್ನ ಸೇವೆಯಿಂದಲೇ ಕೇವಲ ಜ್ಞಾನವು ಲಭಿಸಿ ನಿನ್ನ ಮಿತ್ರ ನಾಗಿದ್ದ ಅಜ್ಞಾನವನ್ನು ನಾಶ ಮಾಡುವದು, ಅದರ ಬಲದಿಂದ ನೀನು ಯೋಗಿಯಾಗು, ಚಿತ್ತವೃತ್ತಿಯನ್ನು ತಡೆದು ಅಹಿಂಸಾದಿ ಮಾರ್ಗಗಳ ನ್ನಾಶ್ರಯಿಸಿ ಜ್ಞಾನವನ್ನು ಬೆಳಿಸಿಕೊಂಡು ನಿರ್ಮಲ ಚಿತ್ತವೆಂಬ ಪುಷ್ಪ ವನ್ನು ತೆಗೆದುಕೊಂಡು ಅಶೋಕಸಿದ್ಧವೃಷಭಗುರುಕುಲದಲ್ಲಿರುವ ಭಕ್ತಿ ಯೆಂಬ ತಾಯಿಯನ್ನು ಮಂತ್ರರಾಜ ಶಿವಮಂತ್ರವೆಂಬ ತಂದೆಯನ್ನು ರುದ್ರಾಕ್ಷಮಾಲೆಯೆಂಬ ಸಹೋದರಿಯನ್ನು (ಅಕ್ಕವ್ವನನ್ನು) ಕಾಣು, ಅವರು ನಿನಗೆ ಶಾಂತಿಯೆಂಬುವ ಸ್ತ್ರೀಯೊಡನೆ ಪಾಣಿಗ್ರಹಣ ಮಾಡಿಸಿ ಸ್ವಸ್ವರೂಪಪ್ರಕಾಶಕವೆಂಬ ಮುಕ್ತಿಯೆಂಬ ನಿಜಸಂಪತ್ತನ್ನು ತೋರಿಸು ವರು, ಅದೇ ನಿನ್ನ ನಿಜವಾದ ಸ್ವರಾಜ್ಯವೆಂದು ಉಪದೇಶ ಮಾಡಿದ ಕಾರಣ ನಿಜವಾದ ತಂದೆ ತಾಯಿ ಸಹೋದರಿಯವರ ವಿಮಲ ಸೇವೆಗಾಗಿ ಅಶೋಕಸಿದ್ಧವೃಷಭಗುರುಕುಲಕ್ಕೆ ಹೋಗುವೆನು. ಆದಕ್ಕೆ ಪರಶಿವ ಸ್ವರೂಪಿಯಾದ ಚನ್ನಬಸವ ಶಿವಯೋಗಿಯ ಅನುಗ್ರಹವಿರಲಿ.

# ಆರ್ಯ ಸಂಸ್ಕೃತಿ.

(ಲೇಖಕರು—ಭಟಕಳನಿವಾಸಿ.)

"ಯಂ ಶೈವಾಃ ಸಮುಪಾಸನೆ ಶಿವ ಇತಿ ಬ್ರಹ್ಮೇತಿ ವೇದಂತಿನೊ।
ಬೌದ್ಧಾ ಬುದ್ಧ ಇತಿ ಪ್ರಮಾಣಪಟವಃ ಕರ್ತೇತಿ ನೈಯ್ಯಾಯಿಕಾಃ॥
ಅರ್ಹನ್ನಿತ್ಯಥ ಜೈನ ಶಾಸ್ತ್ರನಿರತಾಃ ಕರ್ಮೇತಿಮೀಮಾಂಸಕಾಃ।
ಸೋಯಂ ಯೋ ವಿದಧಾತು ವಾಂಛಿತ ಫಲಂ ವೈಕುಂಠನಾಥಾ ಹರಿಃ॥

ಈ ಶ್ಲೋಕದಿಂದ ನಮ್ಮ ಧರ್ಮವು ಬಹಳ ಉದಾರವೂ, ಘನವೂ ಆಗಿದ್ದು, ಕುತ್ಸಿತವೂ ಹಠವಾದಿ ಸ್ವರೂಪದ್ದೂ ಅಲ್ಲವೆಂದು ಸ್ಪಷ್ಟವಾಗುವದು. ಅದು ಪರಮತ ದ್ವೇಷವಿಲ್ಲದಂಥಾದ್ದು. ಈಗ ಪಾಶ್ಚಿಮಾತ್ಯ ರಾಜರಿಂದ ಇಷ್ಟು ಉದಾರ ಬುದ್ಧಿಯನ್ನು ತೋರಿಸುತ್ತೇವಂತಲ್ಲ. ಅನಾದಿ ಕಾಲದಿಂದ ನಮ್ಮ ಶೈವಶಾಕ್ತ ವೈಷ್ಣವ ಮೊದಲಾದ ಮತಗಳ ಅನುಯಾಯಿಗಳೂ, ಬೌದ್ಧ ಜೈನ ಮೊದಲಾದ ಬೇರೆ ಧರ್ಮಗಳನ್ನು ಅನುಸರಿಸುವವರೂ ಪರಸ್ಪರ ಪ್ರೇಮದಿಂದ ಇರುವದಲ್ಲದೆ, ಬ್ರಹಸ್ಪತಿ ಚಾರ್ವಾಕ ಮೊದಲಾದ ನಾಸ್ತಿಕರೂ ಸಹ ಸ್ನೇಹಭಾವದಿಂದ ಇದ್ದರೆಂಬ ಬಗ್ಗೆ ಚೀನದೇಶದ ಹಿವೆನ್‌ಶಾಂಗ ಮೊದಲಾದ ಪ್ರವಾಸಿಕರು ಬರೆದಿಟ್ಟ ಲೇಖಗಳಿಂದ ಸ್ಪಷ್ಟವಾಗುತ್ತದೆ. ನಮ್ಮ ಧರ್ಮಕ್ಕೆ ಸನಾತನ ವೈದಿಕ ಧರ್ಮವೆನ್ನುತ್ತಾರೆ. ಹಿಂದೂ ಧರ್ಮವೆಂತಲೂ ಅನ್ನುವರು. ಪ್ರಾಚೀನ ಕಾಲದಲ್ಲಿ ನಮ್ಮ ಪೂರ್ವಜರು ಪಂಜಾಬದಲ್ಲಿ ಸಿಂಧೂನದಿಯ ತೀರದಲ್ಲಿ ವಾಸಿಸುತ್ತಿದ್ದರು. ಸಿಂಧೂ ಈ ಸಂಸ್ಕೃತ ಶಬ್ದದ ಉಚ್ಚಾರ ಹಿಂದೂ ಎಂತ ಕೆಲವರು ಮಾಡುತ್ತಿರುವದರಿಂದ ಅದೇ ಶಬ್ದವು ನಮ್ಮ ಜನಾಂಗಕ್ಕೂ ಧರ್ಮಕ್ಕೂ ಹಚ್ಚಲ್ಪಟ್ಟಿತು. ಇನ್ನು ಸನಾತನವೆಂದರೆ ಶಾಶ್ವತ ನಿರಾತಂಕವಾಗಿ ಚಿರಕಾಲ ನಡೆಯುವಂಥ ಅರ್ಥಾತ್ ತ್ರಿಕಾಲಾ ಬಾಧಿತವು. ಈ ಹೆಸರು ಬೇರೆ ಪ್ರಚಾರದಲ್ಲಿರುವ ಯಾವ ಧರ್ಮಕ್ಕೂ ಬರುವದಿಲ್ಲ. ಯಾಕಂದರೆ ಜಗತ್ತಿನ ಆರಂಭದಿಂದ ಈ ಹೊತ್ತಿನವರೆಗೆ ಮನುಷ್ಯಪ್ರಾಣಿಯು ಉತ್ಪನ್ನವಾದಂದಿನಿಂದ ಹುಟ್ಟಿದಂಥ ಮತ್ತು ಮಾನವರು ಇರುವ ವರೆಗೆ ನಡೆಯುವಂಥ ಧರ್ಮಕ್ಕೇ ಸನಾತನ ಧರ್ಮವೆಂದೆನ್ನಬಹುದು ಹೊರ್ತು ಬೇರೆ ಧರ್ಮಗಳಿಗೆ ಸನಾತನವೆಂಬ ಹೆಸರು ಸಲ್ಲದು. ಯಾಕಂದರೆ ಇರಾಣದಲ್ಲಿ ಝುರತುಷ್ಟ್ರನು ಫಾರ್ಸಿ ಧರ್ಮ

ವನ್ನು, ಬುದ್ಧನು ಬೌದ್ಧ ಧರ್ಮವನ್ನು, ಮಹಾವೀರ ಮೊದಲಾದ ೨೪ ತೀರ್ಥಂಕರರು ಜೈನ ಧರ್ಮವನ್ನು, ಯೇಸುಕ್ರಿಸ್ತನು ಕ್ರೈಸ್ತಧರ್ಮ ವನ್ನು, ಪೈಗಂಬರ ಮುಹಮ್ಮದನು ಮುಸಲ್ಮಾನೀ ಧರ್ಮವನ್ನೂ ೧—೨ ಸಾವಿರ ವರ್ಷಗಳ ಹಿಂದೆ ಸ್ಥಾಪಿಸಿದರು. ಆದರೆ ನಮ್ಮ ಸನಾತನ ಧರ್ಮವನ್ನು ಯಾವ ಒಬ್ಬ ವ್ಯಕ್ತಿಯು ಸ್ಥಾಪಿಸಿದ್ದಲ್ಲ. ಅದು ಅನಾದ್ಯ ನಂತವಾಗಿದೆ. ಕೆಲವು ಕಾಲದ ಹಿಂದೆ ಮುಸಲ್ಮಾನರು ಹಿಂದುಸ್ಥಾನ ದಲ್ಲಿ, ಕ್ರೈಸ್ತರು ಗೋವೆಯಲ್ಲಿ ಒತ್ತಾಯದಿಂದ ಅನೇಕರನ್ನು ತಮ್ಮ ಧರ್ಮಕ್ಕೆ ಸೇರಿಸಿಕೊಂಡರು. ಈಗ ಮಿಶನರೀ ಪಾದ್ರಿಗಳು ನಾನಾತರದ ಉಪಾಯಗಳಿಂದ ನಮ್ಮ ಹಿಂದೂಗಳನ್ನು ತಮ್ಮ ಧರ್ಮಕ್ಕೆ ಸೇರಿಸಿಕೊ ಳ್ಳುತ್ತಾರೆ. ಆದರೆ ನಮ್ಮ ಸಂಖ್ಯೆಯು ತಕ್ಕಮಟ್ಟಿಗೆ ಕಡಿಮೆಯಾದರೂ ನಮ್ಮ ಧರ್ಮವು ನಷ್ಟವಾಗಲಿಲ್ಲ. ಮತ್ತು ಎಂದಿಗೂ ನಾಶವಾಗಲಿ ಕ್ಕಿಲ್ಲ. ಶ್ರೀ ಬಸವೇಶ್ವರ ಶ್ರೀ ದಯಾನಂದ ಸರಸ್ವತಿಗಳಂಥ ಸತ್ಪುರು ಷರೂ ೨ ನೆಯವರ ಅನುಯಾಯಿಗಳಾದ ಆರ್ಯಸಮಾಜದವರೂ, ಕೈ. ವಾ. ಗಜಾನನ ಭಾಸ್ಕರ ವೈದ್ಯರಂಥ ನಿಜವಾದ ಸುಧಾರಕರೂ, ಹಿಂದೂ ಮಿಶನರಿ ಸೊಸಾಯಿಟಿಯು ಪ್ರಚಾರದಲ್ಲಿ ತಂದಿರುವಂಥ ಶುದ್ಧಿ ಸಂಘಟ್ಟನ ವಿಧಾನಗಳೂ ಹಿಂದೆ ಪ್ರಚಾರದಲ್ಲಿದ್ದರೆ ಈಗಿನ ಹೀನಾವ ಸ್ಥೆಯು ಬರುತ್ತಿದ್ದಿಲ್ಲವೆಂದು ಸ್ಪಷ್ಟವೇ. ಶ್ರೀ ಬಸವೇಶ್ವರರು ಬ್ರಾಹ್ಮಣರು ತಾವು ಉಚ್ಚವರ್ಣದವರೆಂದು ಹಿಂದೂ ಧರ್ಮದ ಬೇರೆ ಅನುಯಾಯಿ ಗಳಿಗೆ ನಡಿಸುವ ಅಸಹಿಷ್ಣುತೆ ಮೊದಲಾದ ರೀತಿಯನ್ನು ನೋಡಿ ತಾವು ಸ್ವತಃ ಆರಾಧ್ಯ ಬ್ರಾಹ್ಮಣರಾದರೂ ಜಾತಿಕುಲ ಏನೂ ನೋಡದೆ ಸಕ ಲರೂ ಶಿವಭಕ್ತರಾಗಿ ಲಿಂಗಧಾರಣೆಯ ಮೂಲಕ ಶಿವಸಾಯುಜ್ಯವನ್ನು ಪಡೆಯಬಹುದೆಂದು ಇದ್ದ ಹಳೇ ಧರ್ಮವನ್ನೇ ಪುನರುಜ್ಜೀವನ ಮಾಡಿ ದರು. ಈಗ ಶುದ್ಧಿಯ ಕ್ರಮದಿಂದ ಅನೇಕ ಜಾತಿಗೆಟ್ಟು ಹೋದ ಜನರು ತಿರುಗಿ ನಮ್ಮ ಧರ್ಮವನ್ನೇ ಸ್ವೀಕರಿಸುತ್ತಾರಷ್ಟೇ. ಇದು ಒಂದು ಶುಭಚಿನ್ಹವೇ. ನಮ್ಮಲ್ಲಿ ಅನೇಕ ಜಾತಿಗಳುಂಟಾಗಿ ನಮ್ಮ ಬಲವು ಕಡಿ ಮೆಯಾಗಿದೆ. ನಮ್ಮ ಲಿಂಗಾಯತರಲ್ಲಿ ಆಧರ್ಮಸುಧಾರಕರಾದ ಶ್ರೀ ಬಸ ವೇಶ್ವರರ ಮೂಲ ಉದ್ದೇಶವನ್ನು ಬದಿಗಿಟ್ಟು ತಮ್ಮೊಳಗೆ ಭೇದಗಳನ್ನುಂ ಟುಮಾಡಿಕೊಂಡಿದ್ದಾರೆ. ಆದರೆ ನಾವು ಶುದ್ಧಿಸಂಘಟನ ವಿಧಾನಗ ಳನ್ನು ಸ್ವೀಕರಿಸಿದರೆ ನಮ್ಮ ಬಲವೂ ಐಕ್ಯವೂ ವೃದ್ಧಿಯಾಗುವದೆಂಬ

ದರಲ್ಲಿ ಸಂದೇಹವಿಲ್ಲ. ಪರಧರ್ಮೀಯರು ನಮ್ಮ ಧರ್ಮವನ್ನು ಕೆಡಿಸಿ ತಮ್ಮ ಧರ್ಮವನ್ನು ಬೆಳಿಸಬೇಕೆಂತ ನಡಿಸುವ ತಂತ್ರಗಳು ಈಗೀಗ ಬೆಳಕಿಗೆ ಬಂದಿರುತ್ತವೆ. ಕೆಲವು ಕಾಲದ ಹಿಂದೆ ಇಂಗ್ಲಿಷ ವಿದ್ಯೆಯು ಮಿಶನರೀ ಜನರ ಕೈಯಲ್ಲಿಯೇ ಇರುವಾಗ ಕೆಲವರು ಧರ್ಮಭ್ರಷ್ಟರಾದರು. ಆದರೆ ಥಿಯೊಸೊಫಿಕಲ್ ಸೊಸಾಯಿಟಿಯು ಅಸ್ತಿತ್ವದಲ್ಲಿ ಬಂದಂದಿನಿಂದ ನಮ್ಮ ತರುಣರ ಕಣ್ಣುತೆರೆದು, ನಮ್ಮ ಧರ್ಮದಲ್ಲಿರುವ ಉತ್ತಮವಾದ ತತ್ವಗಳನ್ನೂ ಸಹನವಾದ ವಿಚಾರಗಳನ್ನೂ ಅರಿತುಕೊಳ್ಳುವ ಇಚ್ಛೆಯು ಉಂಟಾಗಿದೆ. ಹೀಗಾಗಿ ಮೇಲುವರ್ಣದವರು ಈಗ ಜಾತಿ ಕೆಡುವದು ಕಡಿಮೆ. ಬರಗಾಲಬಿದ್ದಾಗ ಹೊಟ್ಟೆಗಿಲ್ಲದೆ ಪೇಚಾಡುವ ಕಡಿಮೆ ವರ್ಣದವರನ್ನು ಜಾತಿಕೆಡಿಸಿ ತಮ್ಮ ಧರ್ಮಕ್ಕೆ ಎಳಕೊಳ್ಳುವ ಸುಗ್ಗಿ ಸಿಗುತ್ತಿತ್ತು. ಆದರೆ ಶ್ರೀರಾಮಕೃಷ್ಣ ಪರಮಹಂಸರ ಮಿಶನದವರು ದುಷ್ಕಾಳಪೀಡಿತ ಜನರಿಗೆ ಅನ್ನಸಾಮಗ್ರಿಗಳನ್ನು ಪೂರೈಸುವ ಕೆಲಸವನ್ನು ಕೈಕೊಂಡಿದ್ದರಿಂದ ಅದರಲ್ಲೂ ಅವರಿಗೆ ಅಷ್ಟು ಯಶಸ್ಸು ಶಿಗುವದಿಲ್ಲ.

ಇನ್ನು ವೈದಿಕ ಧರ್ಮವೆಂದರೆ ವೇದಗಳಲ್ಲಿ ಹೇಳಿದಂಥ ಅಥವಾ ವೇದಪ್ರಣೀತವಾದ ಧರ್ಮವು. ವೈದಿಕ ಧರ್ಮಕ್ಕೆ ವೇದೋಕ್ತ ಧರ್ಮವೆಂತಲೂ ವೇದಪ್ರತಿಪಾದಿತ ಧರ್ಮವೆಂತಲೂ ಅನ್ನುವರು. ವೇದಗಳೆಂದರೆ ಪರಮಾತ್ಮನಿಂದ ಲಭಿಸಿದಂಥ ಪವಿತ್ರ ಗ್ರಂಥಗಳು. ನಮ್ಮ ಧರ್ಮಕ್ಕೆ ವೇದಗಳೇ ಮುಖ್ಯ ಆಧಾರಭೂತ ಪ್ರಮಾಣಗ್ರಂಥಗಳು. ಈಶ್ವರನು ಸೃಷ್ಟಿಯನ್ನು ನಿರ್ಮಾಣಮಾಡಿದಾಗಲೇ ವೇದಗಳು ಉತ್ಪನ್ನವಾದವು. ಸನಾತನ ವೈದಿಕಧರ್ಮ ಈ ವಾಕ್ಯದೊಳಗಿನ ಸನಾತನವೆಂಬ ಶಬ್ದವು ಧರ್ಮವೆಂಬ ಪದಕ್ಕಲ್ಲದೆ ವೇದವೆಂಬ ಶಬ್ದಕ್ಕೆ ವಿಶೇಷಣವಾಗಿದೆ. ವೇದಗಳು ಸನಾತನವಾದದರಿಂದ ವೈದಿಕಧರ್ಮವು ಸನಾತನ ಧರ್ಮವು. ವೇದಗಳು ಈಶ್ವರಪ್ರಣೀತವಾಗಿರುತ್ತವೆ. ಅಂದರೆ ಸೃಷ್ಟಿಯು ಉತ್ಪನ್ನವಾದಾಗ ಮನುಷ್ಯರು ಹ್ಯಾಗೆ ವರ್ತಿಸಬೇಕೆಂಬದು ತಿಳಿಯದೆ ಇರುವದರಿಂದ ಅವರೊಳಗೆ ಜ್ಞಾನಿಗಳೂ ತಪಸ್ವಿಗಳೂ ಆದ ಋಷಿಗಳು ಈಶ್ವರನ ಧ್ಯಾನ ಮತ್ತು ಸ್ತವನ ಮಾಡಹತ್ತಿದರು. ಋಷಿಗಳು ಧ್ಯಾನಸ್ಥರಾಗಿರುವಾಗ ಆ ಪರಮಾತ್ಮನಿಂದ ಅವರಿಗೆ ಈ ವೇದಗಳು ಪ್ರಾಪ್ತವಾದವು. ಅವುಗಳಿಗೆ ಶೃತಿಗಳೆಂದೆನ್ನುವರು. ಅವರು ಅವುಗಳನ್ನು ತಮ್ಮ

ಶಿಷ್ಯರಿಗೆ ಕಲಿಸಿದರು. ಪಠಣ ಪಾಠಣ ಮತ್ತು ಶ್ರವಣ ಈ ಗುರುಶಿಷ್ಯಪರಂಪರೆಯಿಂದ ವೇದಗಳು ನಡೆದು ಬಂದವೆಂಬುದರಿಂದ ಅವುಗಳಿಗೆ ಶ್ರುತಿಯೆಂಬ ಹೆಸರು ಬಂತು. ವೇದಗಳ ಆದಿ ಎಂದು ಎಂಬದನ್ನು ಹೇಳಲಿಕ್ಕೆ ಬರುವದಿಲ್ಲ. ಆದುದರಿಂದ ಅವು ಅನಾದಿ ವೇದಗಳ ಮರ್ಮದಲ್ಲಿ ಬೇರೆ ಯಾವ ಗ್ರಂಥಗಳೂ ಇದ್ದಿಲ್ಲ. ಆದದರಿಂದ ಅವು ಅನಾದಿ ಅವು ಅನಂತ ವಾಗಿವೆ. ಅವುಗಳಲ್ಲಿ ಬಹಳ ಭಾಗ ನಾಶವಾಗಿಹೋದರೂ ಈಗ ಪ್ರಚಾರದಲ್ಲಿ ಉಳಿದಿರುವಂಥ ಋಕ್, ಯಜುಸ್, ಸಾಮ ಮತ್ತು ಅಥರ್ವ ವೆಂಬ ನಾಲ್ಕು ವೇದಗಳು ಮಧುಛಂದಸ್, ಋಕ್ಷಮದ, ಭರದ್ವಾಜ, ವಿಶ್ವಾಮಿತ್ರ, ವಾಮದೇವ, ಅತ್ರಿ, ವಸಿಷ್ಠ, ಕಣ್ವ, ಶುನಃಶೇಪ, ಸಿಂಧುದ್ವೀಪ ಮೊದಲಾದ ಋಷಿಗಳಿಗೆ ಈಶ್ವರನಿಂದ ಆವು ಸಿಕ್ಕಿದವು. ಋಷಿಗಳಂತೆ ಲೋಪಾಮುದ್ರೆ, ಯಮೀ, ಶಶ್ವತೀ, ಮೊದಲಾದ ಋಷಿಪತ್ನಿಗಳಿಗೂ ಈಶ್ವರನಿಂದ ವೇದಗಳು ಪ್ರಾಪ್ತವಾದವು. ಈ ವೇದಗಳು ಅನಾದಿಕಾಲದಿಂದ ಗುರುಶಿಷ್ಯಪರಂಪರೆಯಿಂದ ನಡೆದು ಬಂದಿರುವವು. ವೇದಾಂತದೊಳಗಿನ ತತ್ವಗಳ ಮೇಲೆ ಹಿಂದೂ ಧರ್ಮದ ಕಟ್ಟೋಣವಾಗಿದೆ. ಆದುದರಿಂದ ಸಹ ಅದಕ್ಕೆ ಸನಾತನ ವೈದಿಕಧರ್ಮವೆಂಬ ಹೆಸರು. ಇದು ಪರದೇಶದ ಪರಧರ್ಮೀಯರಿಂದ ಅನೇಕ ಸಂಕಷ್ಟಗಳಿಗೊಳಗಾದರೂ ಈಹೊತ್ತಿನ ವರೆಗೆ ತಕ್ಕಮಟ್ಟಿಗೆ ಅವುಗಳಿಂದ ಪಾರಾಗಿ ಉಳಿದಿರುವದು. ಸಕಲ ಮಾನವಜಾತಿಯ ಕಲ್ಯಾಣಾರ್ಥವಾಗಿರುವದರಿಂದ ಇದಕ್ಕೆ "ಮಾನವಧರ್ಮ" ವೆಂಬ ಹೆಸರೂ ಬಂದಿದೆ. ಇದು ಶಾಶ್ವತ ನಿರಂತರ, ತ್ರಿಕಾಲಾಬಾಧಿತವಾಗಿರುವದರಿಂದ ಸನಾತನವು. ಬೇರೆ ಧರ್ಮಗಳು ಹಾಗಲ್ಲ. ಅವು ಇತ್ತಕಡೆಗೆ ಬಹಳ ವೆಂದರೆ ೨-೩ ಸಾವಿರ ವರುಷದೊಳಗಿನವು. ಮತ್ತು ಅವು "ವ್ಯಕ್ತಿನಿಷ್ಠ" ವೆಂದರೆ ಯಾರಾದರೊಬ್ಬ ವ್ಯಕ್ತಿಯ ಹೆಸರಿಗೆ ಜೋಡಿಸಿದವಿರುತ್ತವೆ. ಉದಾಹರಣಾರ್ಥ ಬುದ್ಧನಿಂದ ಬೌದ್ಧಧರ್ಮ, ಕ್ರಿಸ್ತನಿಂದ ಕ್ರೈಸ್ತಧರ್ಮ ಇತ್ಯಾದಿ. ಸನಾತನ ಧರ್ಮವು ಅತಿ ಪ್ರಾಚೀನವಿದ್ದು ಈ ಧರ್ಮದಲ್ಲಿ ವ್ಯಕ್ತಿನಿಷ್ಠತೆ ಇಲ್ಲ. ಅಂದರೆ ಅದನ್ನು ಇಂಥ ಒಬ್ಬ ಋಷಿಯು ರಚಿಸಿದನೆಂತ ತೋರಿಸಲಿಕ್ಕಾಗುವದಿಲ್ಲ. ಇದು ತತ್ವನಿಷ್ಠವಾಗಿದೆ. ಅಂದರೆ ಇದರಲ್ಲಿ ತತ್ವಗಳ ಸಂಬಂಧವೇ ಹೊರ್ತು ವ್ಯಕ್ತಿಗಳದಿಲ್ಲ. ಸನಾತನ ವೈದಿಕಧರ್ಮದ ಉತ್ಪತ್ತಿಯು ಸೃಷ್ಟಿಯ ಉತ್ಪತ್ತಿಯ ಸಂಗಡಲೇ ಆಗಿರುವದು.

ಶೃತಿ ಸ್ಮೃತಿ ಪುರಾಣಗಳೇ ನಮ್ಮ ಧರ್ಮದ ಮುಖ್ಯ ಪ್ರಮಾಣ ಗ್ರಂಥಗಳು. ಶೃತಿಗಳೆಂದರೆ ನಾಲ್ಕು ವೇದಗಳೆಂದು ಮೇಲೆ ಹೇಳಿದೆ ಯಷ್ಟೆ. ಋಗ್ವೇದದಲ್ಲಿ ಇಂದ್ರ, ಅಗ್ನಿ, ವರುಣ, ಸೋಮ, ಉಷಾ, ವಾಯು, ಯಮ ಮುಂತಾದ ದೇವತೆಗಳ ಸ್ತುತಿಸೂಕ್ತಗಳಿವೆ. ಯಜು ರ್ವೇದದಲ್ಲಿ ಯಜ್ಞಕರ್ಮಗಳ ವಿಚಾರವುಂಟು. ಯಜ್ಞಗಳನ್ನು ಮಾಡು ತ್ತಿರುವಾಗ ಮಂತ್ರಗಳನ್ನು ಹೇಳಿ ಅಗ್ನಿಯೊಳಗೆ ಅನ್ನ ತುಪ್ಪ ತಿಲಾದಿ ಜೀನಸುಗಳ ಆಹುತಿಗಳನ್ನು ಕೊಡಬೇಕಾಗುತ್ತದೆ. ಈ ಆಹುತಿಗಳನ್ನು ಕೊಡುವಾಗ ಮಂತ್ರಗಳನ್ನು ಗಾಯನದಿಂದ ಹಾಡಬೇಕು. ಇವುಗಳಿಗೆ ಸಾಮಗಾನವೆಂದೆನ್ನುವರು. ಇವು ಸಾಮವೇದದಲ್ಲಿರುತ್ತವೆ. ಅಥರ್ವಣ ವೇದವೆಂದರೆ ಮಂತ್ರಶಾಸ್ತ್ರವು. ಯಾವ ಮಂತ್ರವನ್ನು ಯಾವ ಉದ್ದೇ ಶದಿಂದ ಹ್ಯಾಗೆ ಜಪಿಸಬೇಕು, ಮತ್ತು ಅದರ ಫಲವೇನು, ಇದೆಲ್ಲ ಅಥರ್ವಣ ವೇದದಲ್ಲಿ ಹೇಳಿದೆ. ಋಗ್ವೇದದಲ್ಲಿ ಸೂಕ್ತಗಳು ಅಂದರೆ ಉತ್ತಮ ವಿಚಾರಗಳ ಸಂಗ್ರಹವಿದೆ. ಯಜುರ್ವೇದದಲ್ಲಿ ಉತ್ತಮ ಕರ್ಮ ಗಳ ವಿಚಾರ ಮಾಡುವ ಮಂತ್ರಗಳುಂಟು. ಸಾಮವೇದದಲ್ಲಿ ಚಲೋ ಉಪಾಸನೆಗಳ ಸಂಗ್ರಹವಿದೆ. ಮತ್ತು ಅಥರ್ವಣ ವೇದದಲ್ಲಿ ಮನ ಸ್ಸಿನ ನಿಶ್ಚಲತೆ ಮತ್ತು ಸಮತೆಯನ್ನು ಹ್ಯಾಗೆ ಸಂಪಾದಿಸಬೇಕು ಎಂಬ ಬಗ್ಗೆ ವಿವೇಚನವುಂಟು.

ಶೃತಿಗಳ ನಂತರ ಸ್ಮೃತಿಗಳು ಹಿಂದೂ ಧರ್ಮದ ಪ್ರಮಾಣಗ್ರಂಥ ಗಳು. ಸ್ಮೃತಿಯೆಂದರೆ ಧರ್ಮಶಾಸ್ತ್ರ. ವೇದಗಳು ಅನಂತವಿದ್ದವೆಂತಲೂ ಅವುಗಳಲ್ಲಿ ಬಹಳ ಲುಪ್ತವಾದವೆಂತಲೂ ಮೇಲೆ ಹೇಳಿದ್ದವಷ್ಟೆ. ಆದರೂ ವಿವಾದ ವೇದಗಳೊಳಗಿನ ಜ್ಞಾನವು ಋಷಿಗಳ ಸ್ಮರಣದಲ್ಲಿತ್ತು. ಅದರ ಆಧಾರದಿಂದ ಮನುಷ್ಯರು ಹ್ಯಾಗೆ ವರ್ತಿಸಬೇಕೆಂಬ ಬಗ್ಗೆ ಋಷಿಗಳು ನೇಮಗಳನ್ನು ಬರೆದು ಇಟ್ಟಿದ್ದಾರೆ. ಅವೆಲ್ಲಕ್ಕೂ ಕೂಡಿ ಸ್ಮೃತಿಯೆಂಬ ಹೆಸರು. ಸ್ಮೃತಿಗ್ರಂಥ ಎಂದರೆ ಧರ್ಮಗಳಲ್ಲಿ ಕುಲಧರ್ಮ, ಜಾತಿ ಧರ್ಮ, ದೇಶಧರ್ಮ, ರಾಜಧರ್ಮ, ಪ್ರಜಾಧರ್ಮ, ವರ್ಣಧರ್ಮ, ಆಶ್ರಮಧರ್ಮ ಮುಂತಾದ ಅನೇಕ ವಿಷಯಗಳುಂಟು. ಉದಾಹರ ಣಾರ್ಥ ಮನುಸ್ಮೃತಿ, ಯಾಜ್ಞವಲ್ಕ್ಯಸ್ಮೃತಿ, ಪಾರಾಶರಸ್ಮೃತಿ ಮೊದ ಲಾದ ಸ್ಮೃತಿಗಳುಂಟು. ಅವುಗಳಲ್ಲಿ ಇವು ಮೂರು ಮುಖ್ಯ. ಮೊದ ಲನೇದು ರಾಜರ್ಷಿಮನುವೂ ಉಳಿದ ಎರಡು ಅನುಕ್ರಮವಾಗಿ ಬ್ರಹ್ಮ ರ್ಷಿಗಳಿಂದ ಪಾರಾಶರ ಮತ್ತು ಯಾಜ್ಞವಲ್ಕ್ಯರಿಂದ ಪ್ರಣೀತವಾದವು.

ಇನ್ನು ಪುರಾಣಗಳುಂಟು. ಪುರಾಣಗಳೆಂದರೆ ಇತಿಹಾಸ ಗ್ರಂಥಗಳು. ಪ್ರಾಚೀನ ಕಾಲದ ಋಷಿಗಳೂ, ಅರಸರೂ, ಜ್ಞಾನಿಗಳೂ, ತಪಸ್ವಿಗಳೂ ಮೊದಲಾದವರ ಬಗ್ಗೆ ಕಥಾರೂಪದಿಂದ ಬರೆದ ಇತಿಹಾಸಗಳು. ಪುರಾಣಗಳು ಹದಿನೆಂಟು. ಅವು ವ್ಯಾಸ ಮಹರ್ಷಿಗಳೂ ಬೇರೆ ಕೆಲವು ಋಷಿಗಳೂ ಬರೆದಂಥವು. ಸ್ಮೃತಿಗಳ ನಂತರ ಈ ಪುರಾಣ ಗ್ರಂಥಗಳಿಗೆ ಮತ್ತು ರಾಮಾಯಣ, ಭಾರತ, ಭಾಗವತ ಗ್ರಂಥಗಳಿಗೆ ಪ್ರಮಾಣಗ್ರಂಥಗಳೆಂದು ತಿಳಿಯುತ್ತಾರೆ. ಪ್ರಮಾಣ ಗ್ರಂಥಗಳಿಗೆ ಅನುಕೂಲವಾಗಿದ್ದು ಸಾಧುಸಂತರೂ, ಜ್ಞಾನಿಗಳೂ, ತಪಸ್ವಿಗಳೂ, ಯೋಗಿಗಳೂ, ಬರೆದಿರುವ ಗ್ರಂಥಗಳಿಗೆ ಧರ್ಮಗ್ರಂಥಗಳೆನ್ನುವರು. ಸಾರಾಂಶವೇನಂದರೆ, ನಮ್ಮ ಪವಿತ್ರ ಗ್ರಂಥಗಳೆಂದರೆ ೧ ವೇದಗಳು, ೨ ಉಪವೇದಗಳು, ೩ ವೇದಾಂಗಗಳು ಮತ್ತು ಉಪಾಂಗಗಳು.

ವೇದಗಳು ನಾಲ್ಕು ಎಂತ ಮೇಲೆ ಹೇಳಿದ್ದೇವಷ್ಟೇ. ಪ್ರತಿ ಒಂದು ವೇದಕ್ಕೆ ಮತ್ತೆ ನಾಲ್ಕು ಭಾಗಗಳುಂಟು. ೧ ನೇ ಸಂಹಿತೆ (ಸೂಕ್ತಗಳು ಇತ್ಯಾದಿ) ೨ ನೇ ಬ್ರಾಹ್ಮಣ (ವಿಧಾನಗಳು) ೩ ನೇ ಜ್ಞಾನ ಅಥವಾ ಉಪನಿಷತ್ತು ಮತ್ತು ೪ ನೇ ಆರಣ್ಯಕ ಉಪವೇದಗಳು ಸಹ ನಾಲ್ಕು ಉಂಟು. ಯಾವವೆಂದರೆಃ— ೧ ನೇ ಆಯುರ್ವೇದ (ಋಗ್ವೇದದಿಂದ) ೨ ನೇ ಧನುರ್ವೇದ (ಯಜುರ್ವೇದದಿಂದ) ೩ ನೇ ಗಂಧರ್ವವೇದ (ಸಾಮವೇದದಿಂದ) ೪ ನೇ ಶಿಲ್ಪವೇದ (ಅಥರ್ವಣವೇದದಿಂದ)

ವೇದಾಂಗಗಳೆಂದರೆ ೧ ನೇ ಶಿಕ್ಷಾ (ಉಚ್ಚಾರಣೆ) ೨ ನೇ ಛಂದಸ್ಸು ೩ ನೇ ವ್ಯಾಕರಣ ೪ ನೇ ನಿರುಕ್ತ ೫ನೇ ಕಲ್ಪ (ಧಾರ್ಮಿಕ ಆಚಾರ ನೇಮ) ೬ನೇ ತಂತ್ರ [ಸಂಸ್ಕಾರ ಪದ್ಧತಿ]

ಸ್ಮೃತಿಗಳು ಎಷ್ಟೆಂದು ಮೇಲೆ ಹೇಳಿದೆ.

ಪುರಾಣಗಳು ೧೮. ಅವುಗಳಲ್ಲಿ ಸಾತ್ವಿಕ, ರಾಜಸ ಮತ್ತು ತಾಮಸವೆಂಬ ಆರಾರರ ೩ ಭಾಗಗಳಿವೆ.

೧. ಸಾತ್ವಿಕ [ವಿಷ್ಣು ಸಂಬಂಧಿ] — ೧ ವಿಷ್ಣುಪುರಾಣ, ೨ ನಾರದೀಯ ಪುರಾಣ, ೩ ಭಾಗವತಪುರಾಣ, ೪ ಗರುಡಪುರಾಣ, ೫ ಪದ್ಮಪುರಾಣ, ೬ ವರಾಹಪುರಾಣ,

೨. ರಾಜಸ (ಬ್ರಹ್ಮಸಂಬಂಧಿ)— ೧ ಬ್ರಹ್ಮಪುರಾಣ, ೨ ಬ್ರಹ್ಮಾಂಡ ಪುರಾಣ, ೩ ಬ್ರಹ್ಮ ವೈವರ್ತ ಪುರಾಣ, ೪ ಮಾರ್ಕಂಡೇಯ ಪುರಾಣ, ೫ ಭವಿಷ್ಯ ಪುರಾಣ, ೬ ವಾಮನಪುರಾಣ.

೩. ತಾಮಸ (ಅಗ್ನಿ ಅಥವಾ ಶಿವಸಂಬಂಧಿ)— ೧ ಮತ್ಸ್ಯಪುರಾಣ, ೨ ಕೂರ್ಮ ಪುರಾಣ, ೩ ಲಿಂಗಪುರಾಣ, ೪ ಶಿವಪುರಾಣ, ೫ ಸ್ಕಂದಪುರಾಣ, ೬ ಅಗ್ನಿ ಪುರಾಣ.

ಇವಲ್ಲದೆ ಮತ್ತೆ ಷಡ್ದರ್ಶನಗಳುಂಟು. ಇವು ತತ್ವಜ್ಞಾನದ ವಿಷಯವಾಗಿವೆ.

| ದರ್ಶನ. | ಗ್ರಂಥಕರ್ತ. | ವಿಷಯ. | ಆಸ್ತಿಕವೋ ನಾಸ್ತಿಕವು. |
|---|---|---|---|
| ೧ನೇ ಸಾಂಖ್ಯ | ಕಪಿಲ | ಪ್ರತ್ಯಕ್ಷಪ್ರಮಾಣ | ನಾಸ್ತಿಕ |
| ೨ನೇ ಯೋಗ | ಪತಂಜಲ | ಪರಮಾತ್ಮನೇ ಸೃಷ್ಟಿ ಕರ್ತನು | ಆಸ್ತಿಕ |
| ೩ನೇ ನ್ಯಾಯ | ಗೌತಮ | ಅನಾದಿಯಿಂದ ಅಸ್ತಿಕದಲ್ಲಿರುವ ಜೀವಾತ್ಮಗಳು ಪೂರ್ಣ ಜ್ಞಾನಿಗಳಾದಬಳಿಕ ಶರೀರಗಳಿಂದ ಬೇರೆಯಾಗಿ ನಿತ್ಯವಾಗಿರುವವು. | ಆಸ್ತಿಕ |
| ೪ನೇ ವೈಶೇಷಿಕ | ಕಣಾದ | ಪರಮಾಣುಗಳಿಂದ ಜಗತ್ತು ಉಂಟಾಗಿದೆ. | ನಾಸ್ತಿಕ |
| ೫ನೇ ಪೂರ್ವಮೀಮಾಂಸ | ಜೈಮಿನಿ | ವೇದಾಧ್ಯಯನ ಮಾಡತಕ್ಕದ್ದು ವೇದಗಳನ್ನು ಪಠಣಮಾಡಿ ಯಜ್ಞಕರ್ಮಗಳನ್ನುಮಾಡತಕ್ಕದ್ದು. | ನಾಸ್ತಿಕ |
| ೬ನೇ ಉತ್ತರ ಮೀಮಾಂಸ ಅಥವಾ ವೇದಾಂತ | ಬಾದರಾಯಣ ವ್ಯಾಸಮುನಿ | ಜಡಸೃಷ್ಟಿಯು ದೇವರಿಂದಲೇ ನಿರ್ಮಾಣವಾಯಿತು ಜಡ ಆತ್ಮವು ದೇವರಲ್ಲಿ ಐಕ್ಯವಾಗುವದು. ಇವನ ಮತವು ಉಪನಿಷದಗಳನ್ನು ಅವಲಂಬಿಸಿರುತ್ತದೆ. | ಆಸ್ತಿಕ |

ಕಡೆಯ ಎರಡು ಮತಗಳಿಗೆ ವೇದಾಂತ ಮತವೆಂದೆನ್ನುವರು.

ನಮ್ಮ ಧರ್ಮವು ತರ್ಕಕ್ಕೂ ವಿಜ್ಞಾನಶಾಸ್ತ್ರಕ್ಕೂ ಅನುಕೂಲವಾಗಿದೆ. ಬೇರೆ ಕ್ರೈಸ್ತ ಮೊದಲಾದ ಯಾವ ಧರ್ಮವೂ ಶಾಸ್ತ್ರೀಯ ಸಿದ್ಧಾಂತದ ಒರೆಗಲ್ಲಿಗೆ ಹತ್ತುವದಿಲ್ಲ. ನಮ್ಮಲ್ಲಿ ಪರಿಣಾಮವಾದ (ಇವೊಲ್ಯೂಶನ್) ಪ್ರಕಾರ ಪಂಚಮಹಾಭೂತಗಳು ಒಂದರೊಳಗಿಂದ ಮತ್ತೊಂದು ಉಂಟಾಗಿ ಇವೆಯೆಂದು ಗೊತ್ತು. "ಆಕಾಶಾದ್ವಾಯುಃ ವಾಯೋ

ರಗ್ನಿಃ, ಅಗ್ನೇರಾಪಃ, ಅದ್ಭ್ಯಾಂ ಪೃಥ್ವಿವೀ" ಈ ಪ್ರಕಾರ ಆಗಿವೆ ಎಂದು ಲೋಕಶಾಸ್ತ್ರಗಳು ಹೇಳುತ್ತವೆ. ಆದರೆ "ದೇವರು ಪ್ರಕಾಶವಾಗಲಿ ಎಂದ ಕೂಡಲೆ ಪ್ರಕಾಶವಾಯಿತು" ಇತ್ಯಾದಿ ವಾಕ್ಯಗಳಿಂದ ನಮ್ಮಲ್ಲಿರುವ ತತ್ವಗಳು ಅವರಲ್ಲಿಲ್ಲ. ಆದೇ ಪ್ರಕಾರ ರಸಾಯನ ಶಾಸ್ತ್ರ, ಭೂರಚನಾಶಾಸ್ತ್ರ ಮೊದಲಾದ ಶಾಸ್ತ್ರಗಳ ಪ್ರಕಾರ ಬೇರೆ ಯಾವ ಧರ್ಮವೂ ತರ್ಕಕ್ಕೆ ಸರಿಯಾಗಿ ಬರುವದಿಲ್ಲ. ಅದರಲ್ಲಿಯೇ ನಮ್ಮ ಧರ್ಮದ ವಿಶೇಷಗಳು ಉಂಟು. ಅದಕ್ಕಾಗಿಯೇ ಯುರೋಪ ವಗೈರೆ ಬೇರೆ ದೇಶಗಳಲ್ಲಿ ವಿದ್ಯಾವಂತರು ಹೆಚ್ಚಾಗಿ ನಾಸ್ತಿಕ ಮತದವರಾಗಿರುತ್ತಾರೆ.

ಪೃಥ್ವಿಯ ಮೇಲೆ ೮೪ ಲಕ್ಷ ಜೀವಿಗಳುಂಟೆಂತ ನಮ್ಮ ಪುರಾಣಗಳು ಹೇಳುತ್ತವೆ. ಇವುಗಳಲ್ಲಿ ಮಾನವ ಪ್ರಾಣಿಯೇ ಶ್ರೇಷ್ಠನು. ನಾನು ಯಾರು, ಎಲ್ಲಿಂದ ಬಂದೆನು, ಮುಂದೆ ನನ್ನ ಗತಿಏನು ಎಂಬೀ ಪ್ರಶ್ನೆಗಳು ಮನುಷ್ಯನಿಗೆ ಮಾತ್ರವಲ್ಲದೆ ಬೇರೆ ಪ್ರಾಣಿಗಳಿಗೆ ಹತ್ತಿಲ್ಲ ಈ ಜನ್ಮದಲ್ಲಿಯೇ ನಾವು ನಮ್ಮ ಆತ್ಮೋದ್ಧಾರ ಮಾಡಿಕೊಳ್ಳಬೇಕೆಂಬ ವಿಚಾರವೆಂಬದು ನಮಗೆ ದೇವರ ದೊಡ್ಡದೊಂದು ದೇಣಿಗೆಯು. ನಮಗೆ ಆದನ್ನು ದಯಪಾಲಿಸಿದಂತೆ ಅದನ್ನು ಬೇರೆ ತಿರ್ಯಗ್ ಯೋನಿಯಪ್ರಾಣಿಗಳಿಗೆ ಕೊಡಲಿಲ್ಲ.

ಇನ್ನು ಈಗ ಪ್ರಚಾರದಲ್ಲಿರುವ ನಮ್ಮ ಧರ್ಮದ ವಿಷಯವಾಗಿ ಸ್ವಲ್ಪ ವಿಚಾರ ಮಾಡುವಾ. ನಮ್ಮ ಧರ್ಮಕ್ಕೆ ವಿರುದ್ಧವಾಗಿ ಬೌದ್ಧ ಮತನು ಪ್ರಸಾರವಾಗಿ ಬಹಳ ಹಾನಿ ತಟ್ಟಿತು. ಆದರೂ ಸತ್ಯವು ಯಾವಾಗಲೂ ಜಯಹೊಂದುವದು. ಬೌದ್ಧ ಧರ್ಮ ಮಾತ್ರವಲ್ಲದೆ ಬೇರೆ ಮತಗಳೂ ರೂಢಿಯಲ್ಲಿದ್ದವು. ಆಗ ಕುಮಾರಿಲಭಟ್ಟರು ಆದಷ್ಟು ಪ್ರಯತ್ನಮಾಡಿ ತಕ್ಕಮಟ್ಟಿಗೆ ಕಾದುಕೊಂಡರು. ಆ ಕಾರ್ಯವು ಅವತಾರಿಕ ಪುರುಷರಾದ ಶ್ರೀಮತ್ ಶಂಕರಾಚಾರ್ಯರಿಂದ ಪೂರ್ಣವಾಯಿತು. ಅವರು ಅದ್ವೈತ ಮತವನ್ನು ಸ್ಥಾಪಿಸಿದರು. ಹಿಂದುಸ್ಥಾನದಲ್ಲಿ ೧೦೦ ಕ್ಕೆ ೭೫ ರಂತೆ ಅದ್ವೈತಮತದ ಅನುಯಾಯಿಗಳಿರುತ್ತಾರೆ. ಅವರು ಆಗಿನಕಾಲದಲ್ಲಿ ನಡೆಯುತ್ತಿರುವ ಸಕಲಮತಗಳನ್ನು ಖಂಡಿಸಿ, ತಮ್ಮ ಅದ್ವೈತ ಮತವನ್ನೇ ಸಿದ್ಧಮಾಡಿ ಕೇವಲ ತಮ್ಮ ಬುದ್ಧಿ ಮತ್ತು ಚಾತುರ್ಯಗಳ ಬಲದಿಂದ ಅನೇಕರನ್ನು ತಮ್ಮ ಧರ್ಮಕ್ಕೆ ಎಳಕೊಂಡರು. ಅವರಿಗೆ ರಾಜನ ಸಹಾಯವಿದ್ದಿಲ್ಲ. ಬರೇ ತಮ್ಮ ವಿದ್ವತ್ತಿ

ಕೆಯ ಬಲದಿಂದಲೇ ಹಿಮಾಲಯದಿಂದ ಶ್ರೀ ರಾಮೇಶ್ವರದ ವರೆಗೆ ತಮ್ಮ ಧರ್ಮವನ್ನು ಸ್ಥಾಪಿಸಿದರು. ಬರೇ ೩೨ ವರುಷ ಪ್ರಾಯದೊಳಗೆ ಇಷ್ಟು ಕಾರ್ಯವನ್ನು ಮಾಡಿದರಿಂದ ಅವರ ಕೀರ್ತಿಯು ದಿಗಂತರದಲ್ಲಿ ಪಸರಿಸಿತು. ಅವರ ಕಾಲದಲ್ಲಿ ನಮ್ಮ ಧರ್ಮದಲ್ಲಿ ಶೈವ, ಶಾಕ್ತ, ಗಾಣಪತ್ಯ, ಸೌರ ಮತ್ತು ವೈಷ್ಣವರೆಂಬ ಐದು ಮಕ್ಕಳಿದ್ದು ಪರಸ್ಪರ ಕಲಹಗಳನ್ನು ಮಾಡಿಕೊಳ್ಳುತ್ತಿದ್ದರು. ಅದನ್ನು ನೋಡಿ ಅವರು ತಮ್ಮ ಬುದ್ಧಿಬಲದಿಂದ ಸ್ಮಾರ್ತಧರ್ಮವನ್ನು ಸ್ಥಾಪಿಸಿದರು. ಆದರಿಂದ ಶಿವಸರ್ವೋತ್ತಮ, ವಿಷ್ಣು ಸರ್ವೋತ್ತಮ ಎಂಬೀ ತಂಟೆಗಳ ನಿಕಾಲೆಯಾಯಿತು. ಯಾವಾತನಿಗೆ ಯಾವ ದೇವತೆಯ ಮೇಲೆ ಹೆಚ್ಚು ಭಕ್ತಿಯೋ ಆ ದೇವತೆಯನ್ನು ಮಧ್ಯದಲ್ಲಿಟ್ಟು ಉಳಿದ ನಾಲ್ಕು ದೇವತೆಗಳನ್ನು ನಾಲ್ಕು ಮೂಲೆಗಳಲ್ಲಿಟ್ಟು ಪೂಜಿಸುವದೇ ಇವರ ಮುಖ್ಯಾಂಶವು. ಇದರಿಂದ ಎಲ್ಲರಿಗೂ ಸಮಾಧಾನವಾಗಿ ಅವರ ವಿದ್ವತ್ತಿಕೆಗೆ ಮೆಚ್ಚಿ ಅವರನ್ನು ಅನುಸರಿಸಿದರು. ಮುಂದೆ ಶ್ರೀರಾಮಾನುಜ, ಮಧ್ವ, ವಲ್ಲಭ ಮೊದಲಾದ ಆಚಾರ್ಯರೂ, ಶ್ರೀಬಸವೇಶ್ವರ, ಚನ್ನಬಸವೇಶ್ವರ ಮೊದಲಾದ ಮಹಾನುಭಾವರೂ ಆ ಆ ಕಾಲಕ್ಕೆ, ಸ್ಥಿತಿಗೆ, ದೇಶಕ್ಕೆ ಅನುಸಾರವಾಗಿ ಧರ್ಮಗಳನ್ನು ಉಜ್ಜೀವನಗೊಳಿಸಿದರು.

ನಮ್ಮ ಧರ್ಮದಲ್ಲಿ ೩೩ ಕೋಟಿ ದೇವರಿದ್ದಾರೆ, ಪ್ರತಿಮಾ ಪೂಜೆ ಅದೆ ಎಂತ ವಗೈರೆ ದೋಷಗಳನ್ನು ತೋರಿಸಿ ನಮ್ಮ ಧರ್ಮದ ಶತ್ರುಗಳು ತಮ್ಮ ಧರ್ಮವೇ ಮೇಲಾದದ್ದೆಂತ ಬಢಾಯಿ ಕೊಚ್ಚುವರಷ್ಟೇ. ಆದರೆ "ಏಕಂ ಸತ್" "ಏಕಮೇವಾದ್ವಿತೀಯಂ" ಈ ವಾಕ್ಯಗಳ ಅರ್ಥವೇನು? ಪರಮೇಶ್ವರನು ತನ್ನ ಈ ಸೃಷ್ಟಿಯೆಂಬ ರಾಜ್ಯವನ್ನು ನಡಿಸಬೇಕಾದರೆ ನೇಮಿಸಿದ ಸಣ್ಣ ಸಣ್ಣ ಅಧಿಕಾರಿಗಳಿಗೆ ದೇವತೆಗಳೆಂದೆನ್ನುವರು. ಪರಮಾತ್ಮನು ನಿರ್ಗುಣ, ನಿರಾಕಾರ, ಸರ್ವಾಂತರ್ಯಾಮಿ, ಸರ್ವಸ್ವತಂತ್ರ, ವಿಶ್ವರೂಪ, ಅಣುರೇಣುತೃಣಕಾಷ್ಠಪರಿಪೂರ್ಣವಾಗಿದ್ದರೂ, ಭಕ್ತರ ಪ್ರೇಮಕ್ಕಾಗಿ, ಭಕ್ತಾಧೀನನಾಗಿ, ಭಕ್ತವತ್ಸಲನಾದದರಿಂದ, ಸಗುಣ ರೂಪವನ್ನು ಧರಿಸುತ್ತಾನೆ. ಭಕ್ತರ ಸಲುವಾಗಿ ನಾನಾ ರೂಪಗಳನ್ನು ಧರಿಸಿದರೂ, ತನ್ನ ಮೂಲಸ್ವರೂಪದಲ್ಲಿಯೇ ಸದಾ ಸರ್ವದಾ ಆನಂದ ರೂಪನಾಗಿರುತ್ತಾನೆ. ಭಕ್ತರು ಯಾವ ಧ್ಯಾನದಿಂದ ಸ್ಮರಿಸುವರೋ ಆ ರೂಪದಿಂದ ಸಾಕ್ಷಾತ್ಕಾರವನ್ನು ತೋರಿಸುತ್ತಾನೆ. ಮತ್ತು

ಆ ರೂಪದ ವರ್ಣನೆಯನ್ನು ಭಕ್ತರು ಮಾಡುತ್ತಾರೆ. ಭಕ್ತರು ಯೋಗ ಶಾಸ್ತ್ರವನ್ನು ಪೂರ್ಣವಾಗಿ ತಿಳಿದವರಾದರೂ ಭಕ್ತಿ ಮತ್ತು ಜ್ಞಾನಗಳ ಮುಂದೆ ಯೋಗಕ್ಕೆ ಅಷ್ಟು ಮಹತ್ವ ಕೊಡುವದಿಲ್ಲ. ಯಾರ್‍ಯಾರಿಗೆ ಯಾವ ಮಾರ್ಗದಿಂದ ಜ್ಞಾನವಾಗುವದೋ ಅದೇ ಹೆಚ್ಚಿನ ದೆಂತ ತಿಳಿಯುವರು. ದೃಢ ವಿಶ್ವಾಸ, ಭಕ್ತಿಪ್ರೇಮಗಳಿಗೆ ಪರಮಾತ್ಮನು ಮೆಚ್ಚುತ್ತಾನೆ.

ಪರಮಾತ್ಮನು ಒಬ್ಬನೇ. ಅವನು ನಿರ್ಗುಣನೂ ನಿರಾಕಾರನೂ ಇದ್ದರೂ, ಭಕ್ತರ ಸಲುವಾಗಿ ಸಗುಣನೂ ಸಾಕಾರನೂ ಆಗುತ್ತಾನೆಂತ ಮೇಲೆ ಹೇಳಿದೆವಷ್ಟೆ. ನಿರಾಕಾರ ನಿರ್ಗುಣನೇ ವೇದಾಂತಿಗಳ ಬ್ರಹ್ಮವು. ವೇದ ಉಪನಿಷತ್ತುಗಳಲ್ಲಿರುವ ಜ್ಞಾನಕಾಂಡವನ್ನು ಅರಿತು ಆ ಪ್ರಕಾರ ಮುಕ್ತಿಯನ್ನು ಪಡೆಯುವದು ಸಕಲರಿಗೂ ಸರ್ವಸಾಧಾರಣವಾಗಿ ಸುಲಭ ಸಾಧ್ಯವಿಲ್ಲೆಂತಲೇ ಬ್ರಹ್ಮಸೂತ್ರಗಳನ್ನು ರಚಿಸಿದಂಥ ವ್ಯಾಸಮಹರ್ಷಿಗಳೇ ಪುರಾಣಗಳನ್ನು ಸಾಧಾರಣ ಜನರು ತಿಳಕೊಂಡು ಮುಕ್ತಿಯ ಮಾರ್ಗಕ್ಕೆ ಹತ್ತಲೆಂದು ರಚಿಸಿದರು. ನಿರಾಕಾರ ಬ್ರಹ್ಮವೇ ಸಾಕಾರವಾಗಬೇಕಾದರೆ ಸತ್ವ ರಜ ತಮಗಳೆಂಬ ಮೂರು ಗುಣಗಳಿಗೆ ಮಾಯೆಯ ಅಧೀನನಾಗಿ ಧರಿಸುತ್ತಾನೆ. ಅವರೇ ಬ್ರಹ್ಮ, ವಿಷ್ಣು, ಮಹೇಶ್ವರರು. ವೇದಗಳಲ್ಲಿ ದೇವರ ಬಗ್ಗೆ ಅನೇಕ ಶಬ್ದಗಳನ್ನು ಉಪಯೋಗಿಸಿದ್ದಾರೆ. ಅವೆಲ್ಲ ಕೂಡಿ ಬ್ರಹ್ಮವಾಚಕವೇ ಹೊರ್ತು ಬೇರೆ ಬೇರೆ ದೇವತೆಗಳಲ್ಲಿ ಪರಮಾತ್ಮನಲ್ಲಿ ಸೃಷ್ಟಿಸ್ಥಿತಿಲಯವನ್ನು ಮಾಡುವ ಶಕ್ತಿಗಳುಂಟು. ಆ ದೃಷ್ಟಿಯಿಂದ ನೋಡಿದರೆ ಅವನಿಗೆ ಬ್ರಹ್ಮ ವಿಷ್ಣು ಶಿವ ಎಂದೆನ್ನುವರು. ಇವೇ ಕೂಡಿ ನಿಜವಾದ ತ್ರಿಮೂರ್ತಿಗಳು. ಇಂಥ ವಿಚಾರಗಳು ಬೇರೆ ಧರ್ಮಗಳಲ್ಲಿದ್ದ ಹಾಗೆ ತೋರುವದಿಲ್ಲ. ಪುರಾಣಗಳನ್ನು ಮಾಡಿದ್ದು ಅಲ್ಪಜ್ಞರ ಸಲುವಾಗಿಯೇ ಹೊರ್ತು, ತತ್ವಜ್ಞಾನವನ್ನು ಅರಿತುಕೊಳ್ಳುವ ಶಕ್ತಿಯುಳ್ಳಂಥವರ ಬಗ್ಗೆ ಅಲ್ಲ. ಪುರಾಣಗಳನ್ನಾರೂ ವೇದಗಳ ಉತ್ತಮ ತತ್ವಗಳ ಮೇಲೆ ಅವಲಂಬಿಸಿ ಬರೆದಿದ್ದು, ಆ ತತ್ವಗಳ ಬಾಹ್ಯಗೂಢಾರ್ಥವನ್ನು ಜಾಣರೇ ಅರಿಯುವರು. ಪರಮಾತ್ಮನನ್ನು ನವವಿಧಭಕ್ತಿಯಿಂದ ಒಲಿಸಿಕೊಳ್ಳಬಹುದೆಂತ "ಶ್ರವಣಂಕೀರ್ತನಂ" ಇತ್ಯಾದಿ ಶ್ಲೋಕದಿಂದ ಸ್ಪಷ್ಟವಾಗುವದು. ಅವುಗಳಲ್ಲಿ "ಪಾದಸೇವನ" ವು ವಗೈರೆ ಸರ್ವರಿಗೂ ಸಾಕ್ಷಾತ್ ಅಲಭ್ಯವಾದುದರಿಂದ, ಮಂತ್ರಗಳಿಂದ ಪ್ರಾಪ್ತಸನ್ನಿಧಾನ ಪ್ರತಿಮೆಯಲ್ಲಿ

ಸನ್ನಿಧಾನಯುಕ್ತ ಶಾಲಿಗ್ರಾಮ, ಬಾಣಲಿಂಗ ಇತ್ಯಾದಿಗಳ ಪೂಜೆಯಿಂದಲೇ ಆಗಬೇಕು. "ಅಶ್ಮಾಪಿ ದೇವತ್ವಂಯಾತಿ ಸದ್ಭಿಃ ಸುಪ್ರತಿಷ್ಠಿತಃ" ಈ ವಾಕ್ಯದಿಂದಲೂ ಗಾಣಪತ್ಯಧರ್ಮಶಿರ್ಷದಲ್ಲಿರುವ "ಪ್ರತಿಮಾ ಸನ್ನಿಧೌವಾಜಪ್ತ್ವಾ" ವಾಕ್ಯದಿಂದಲೂ ಬೇರೆ ಅನೇಕ ಆಧಾರಗಳಿಂದಲೂ ಮೂರ್ತಿ ಪೂಜೆ ಮಾಡುವದು ಪಾಪವಲ್ಲ. ಮೂರ್ತಿ ಪೂಜೆ ನಿಷಿದ್ಧವೆಂದೆನ್ನುವವರು ಸಗುಣ ರೂಪವನ್ನು ಅಥವಾ ವ್ಯಕ್ತಿವಾಚ ದೇವತೆಗಳನ್ನು ಅಥವಾ ಬೇರೆ ಕುರುಹುಗಳನ್ನು ಪೂಜಿಸುವದು ಮೂರ್ತಿಪೂಜೆಯಾಗುವದಿಲ್ಲವೋ? ಮನಸ್ಸಿನಲ್ಲಿ ಮಾಡುವ ಧ್ಯಾನದ ಪ್ರಕಾರ ಗುರುಗಳು ಕೊಟ್ಟ ಮಂತ್ರೋಪದೇಶದಂತೆ ಚಿತ್ತೈಕಾಗ್ರತೆಯಾಗಬೇಕಾದರೆ ಕಣ್ಣೆದುರಿಗೆ ಒಂದು ಚಿತ್ರವಾಗಲಿ, ಮೂರ್ತಿಯಾಗಲಿ ಇದ್ದರೆ ಹ್ಯಾಗೆ ಆಗುವದೋ ಹಾಗೆ ಬೇರೆ ರೀತಿಯಿಂದ ಶಬ್ದಮಾತ್ರದಿಂದ ಆಗಲಾರದು. ದೇವರೆಂದು ಭಾವನೆ ಮಾಡಿದ ನಾವು ಭಯಭಕ್ತಿಯಿಂದ ಪೂಜಿಸಿದರೆ ಅಲ್ಲಿಯೇ ದೇವರು ಇರುವನು. ಸಕಲ ಜಗತ್ತಿನಲ್ಲಿ ಪರಿಪೂರ್ಣವಾಗಿರುವ ದೇವರು ಪ್ರತಿಮೆಯಲ್ಲಿ ಯಾಕೆ ಇರಲಿಕ್ಕಿಲ್ಲ? ಪ್ರತಿಮೆಯಾದರೂ ದೇವರ ಪ್ರತಿಮೆಯೆಂದು ನಾವು ಭಜಿಸುತ್ತೇವೇ ಹೊರ್ತು ಕಲ್ಲೆಂತ ಅಲ್ಲ.

---

## ಗುರುಲಿಂಗಜಂಗಮಗಳ ತಾರತಮ್ಯ

( ಲೇಖಕರು— ಶ್ರೀ ಬ್ಯಾಳಿ ಕಲ್ಯಾಣಪ್ಪನವರು ಬಿ. ಎ. )

---

ಗುರುಲಿಂಗಜಂಗಮಗಳು ಅಷ್ಟಾವರಣಗಳನ್ನು ಬಿಟ್ಟು ಬೇರೆಯಿಲ್ಲ. ಅಷ್ಟಾವರಣಗಳಲ್ಲಿಯೇ ಅವು ಸಮಾವೇಶವಾಗಿರುತ್ತವೆ. ಅಷ್ಟಾವರಣಗಳು ಪ್ರತಿಯೊಬ್ಬ ವೀರಶೈವನಿಗೂ ಅವಶ್ಯವಾಗಿ ಬೇಕೇ ಅಲ್ಲವೇ? ಅಂದಮೇಲೆ ಅಷ್ಟಾವರಣಗಳಲ್ಲಿ ತಾರತಮ್ಯವನ್ನೆಣಿಸಬಹುದೇ? ಸರ್ವಥಾ ಎಣಿಸಲಾಗದು. ಅದರಂತೆಯೇ ಗುರುಲಿಂಗಜಂಗಮಗಳಲ್ಲಿ ಭೇದವನ್ನೆಂದಿಗೂ ಕಲ್ಪಿಸಲಾಗದು. ಲಿಂಗ, ಪಾದೋದಕ, ವಿಭೂತಿ, ರುದ್ರಾಕ್ಷಿ, ಮಂತ್ರಗಳು ವೀರಶೈವರೆಲ್ಲರಿಗೂ ಹೇಗೆ ಅವಶ್ಯಕವಾದವುಗಳೋ ಹಾಗೆಯೇ ಗುರು ಜಂಗಮಗಳಾದರೂ ಅಗತ್ಯವಾದವುಗಳು. ಗುರುವು ಜಂಗಮ ಬೇಡವೆಂದರೆ ನಡೆಯದು. ಜಂಗಮವು ಗುರುವೇ ಬೇಕಾಗಿಲ್ಲವೆಂದರೆ ಸಾಗದು. ಗುರುವಾದವನಿಗೆ ಗುರುವೂ ಬೇಕು, ಜಂಗಮವೂ ಬೇಕು.

ಜಂಗಮವಾದವನಿಗೂ ಗುರುವೂ ಬೇಕು. ಜಂಗಮವೂ ಬೇಕು, ಯಾಕಂದರೆ ಉಭಯರೂ ವೀರಶೈವರಾದ್ದರಿಂದ ಅವರಿಗೆ ಅಷ್ಟಾವರಣವಿಯುಕ್ತವಾದ ಗುರುಜಂಗಮಗಳು ಅವಶ್ಯವಾಗಿ ಬೇಕೆಂಬುದು ಸ್ಪಷ್ಟವು. ಗುರುಲಿಂಗಜಂಗಮುಗಳು ಭೂಮಿ, ವೃಕ್ಷ, ಫಲಗಳಂತಿರುವವು. ಭೂಮಿಯಿಲ್ಲದೆ ವೃಕ್ಷವಿಲ್ಲ. ವೃಕ್ಷವಿಲ್ಲದೆ ಫಲವಿಲ್ಲ. ಅದರಂತೆಯೇ ಗುರುವಿನನ್ನು ಬಿಟ್ಟು ಲಿಂಗವಿಲ್ಲ. ಲಿಂಗವನ್ನು ಬಿಟ್ಟು ಜಂಗಮುವಿಲ್ಲ. ಯಾಕಂದರೆ ಗುರುವೇ ಲಿಂಗದ ಕಲ್ಪನೆಯನ್ನೂ ಲಿಂಗಪೂಜಾವಿಧಾನವನ್ನೂ ಹುಟ್ಟಿಸಿದವನು. ಲಿಂಗಪೂಜೆಯೇ ಜಂಗಮ (ಜ್ಞಾನ) ಪ್ರಾಪ್ತಿಗೆ ಸಾಧನವು.

ತಾತ್ವಿಕ ದೃಷ್ಟಿಯಿಂದ ಗುರುಲಿಂಗಜಂಗಮುಗಳಲ್ಲಿ ಯಾವ ಭೇದವೂ ಇರದಿದ್ದರೂ ವ್ಯವಹಾರದಲ್ಲಿ ಜನರು ಅವುಗಳಲ್ಲಿ ಸ್ವಲ್ಪ ಹೆಚ್ಚುಕಡಿಮೆಗಳನ್ನು ಮನ್ನಿಸುತ್ತಾರೆ. ಲಿಂಗವೆಂದರೆ ಪರಾತ್ಪರ ವಸ್ತುವಿನ ಆದರ್ಶರೂಪವೆಂದು ಎಲ್ಲರೂ ನಂಬತಕ್ಕ ಮಾತು. 'ಲಿಂಗಮಧ್ಯೇ ಜಗತ್ಸರ್ವಂ ತ್ರೈಲೋಕ್ಯಂ ಸಚರಾಚರಂ । ಲಿಂಗಬಾಹ್ಯಾತ್ಪರಂ ನಾಸ್ತಿ ತಸ್ಮೈ ಲಿಂಗಾತ್ಮನೇ ನಮಃ ।' ಎಂಬೀ ಶ್ಲೋಕವಾದರೂ ಇದೇ ಅರ್ಥವನ್ನೇ ಹೇಳುತ್ತದೆ. ಗುರುಜಂಗಮರೀರ್ವರಿಗೂ ಪರಾತ್ಪರ ಲಿಂಗವು ಪೂಜ್ಯವಾಗಿರುವದರಿಂದ ಅದು ಅವರಿಬ್ಬರಿಗಿಂತಲೂ ಅಧಿಕವೆಂದು ತಿಳಿಯುವದು ಯುಕ್ತವಾಗಿದೆ. ಆದರೆ 'ಗುರು' ವೆಂದರೇನು? 'ಜಂಗಮ' ವೆಂದರೇನು? ಗುರುವೂ ಜಂಗಮುವೂ ಒಂದೆಯೋ ಹೇಗೆ? ಭಿನ್ನವಾಗಿದ್ದರೆ ಭಿನ್ನವೆಂದು ತಿಳಿಯುವ ಬಗೆ ಹೇಗೆ? ಈಗಿನ ವಾತಾವರಣದಲ್ಲಿ ಒಂದು ವಿಶಿಷ್ಟ ಅಧಿಕಾರಿ ವರ್ಗವು ಅಂದರೆ ಪಂಚಾಚಾರ್ಯ ವರ್ಗವು ತಾವು ಗುರುಗಳೆಂದೂ ಆದರಂತೆಯೇ ಇನ್ನೊಂದು ವಿರಕ್ತವರ್ಗವು ತಾವು ಜಂಗಮರೆಂದೂ ಹೇಳಿಕೊಳ್ಳುತ್ತ ಅಷ್ಟಾವರಣವಿಯುಕ್ತವಾದ ಗುರುಜಂಗಮರಲ್ಲಿ ಭೇದವನ್ನು ಹುಟ್ಟಿಸಿದ್ದು ಸಮಂಜಸವೇ ಹೇಗೆ? ಎಂಬೀ ಮಹತ್ವದ ಪ್ರಶ್ನೆಗಳು ವಿಚಾರಾರ್ಹವಾಗಿವೆ.

ನನ್ನ ನಮ್ರ ಅಭಿಪ್ರಾಯದಲ್ಲಿ ಗುರುವೆಂದರೆ ಕ್ರಿಯಾ ಮೂರ್ತಿಯು. ಸಿದ್ಧಾಂತ ಶಿಖಾಮಣಿಯ ೧೧ ನೆಯ ಪರಿಚ್ಛೇದದ ೧೯ ನೆಯ ಶ್ಲೋಕದಲ್ಲಿ 'ಗುರುರೇವಾತ್ರ ಸರ್ವೇಷಾಂ ಕಾರಣಂ ಸಿದ್ಧಿ ಕರ್ಮಣಾಂ' । ಎಂದು ಗುರುಲಕ್ಷಣವು ಹೇಳಲ್ಪಟ್ಟಿದೆ. ಆದುದರಿಂದ ಇಷ್ಟಲಿಂಗ ಸಂಬಂಧದ ಕ್ರಿಯಾಚಾರಗಳನ್ನರಿತು ಅವುಗಳನ್ನು ಭಕ್ತಾದಿಗಳಿಗೆ ಹೇಳಿಕೊ

ಡುವನೇ ಗುರುವು. ಆದರೆ ಕೆಲವಡೆಯಲ್ಲಿ ಅಂದರೆ ಜಂಗಮವೆಂಬ ಶಬ್ದವೇ ಇಲ್ಲದ ಅದ್ವೈತ ಮತಾದಿಗಳಲ್ಲಿ ವೀರಶೈವ ಜಂಗಮದ ಲಕ್ಷಣಗಳೆಲ್ಲ 'ಗುರು'ಎಂಬ ಶಬ್ದದಿಂದ ಪ್ರತಿಪಾದಿತವಾಗಿವೆ. ಉದಾಹರಣಾರ್ಥ "ನ ಗುರೋರಧಿಕಂ' ಗುರುರ್ಬ್ರಹ್ಮಾ ಗುರುರ್ವಿಷ್ಣುರ್ಗುರ್ದೇವೋ ಮಹೇಶ್ವರಃ। ಗುರುಸ್ಸಾಕ್ಷಾತ್ಪರಂಬ್ರಹ್ಮತಸ್ಮೈ ಶ್ರೀಗುರುವೇನಮಃ ॥ ೧ ॥ ಗುರವೇ ಸರ್ವಲೋಕಾನಾಂ ಭಿಷಜೇ ಭವ ರೋಗಿಣಾಂ। ನಿಧಯೇ ಸರ್ವವಿದ್ಯಾನಾಂ ದಕ್ಷಿಣಾಮೂರ್ತಯೇನಮಃ ॥ ೨ ॥ ಗುರುದೇವೋ ಮಹಾದೇವೋ ಗುರುದೇವಸ್ಸದಾಶಿವಃ। ಗುರುದೇವಾತ್ಪರಂ ನಾಸ್ತಿತಸ್ಮೈ ಶ್ರೀಗುರವೇನಮಃ ॥ ೩ ॥ ದೃಷ್ಟಾಂತೋನೈವ ದೃಷ್ಟಸ್ತ್ರಿಭುವನ ಜಠರೇ ಸದ್ಗುರೋರ್ಜ್ಞಾನದಾತುಃ— ಈ ಮೊದಲಾದ ವಿವೇಚನೆಗಳು ಅಷ್ಟಾವರಣವಿಯುಕ್ತವಾದ ಗುರುವಿಗಲ್ಲ. ಅವು ಜಂಗಮಕ್ಕೆ ಸಮನ್ವಯಿಸುತ್ತವೆ. ವೀರಶೈವರಲ್ಲಿ 'ಗುರು'ಎಂಬ ಶಬ್ದದ ವೈಶಿಷ್ಟ್ಯವೇ ಬೇರೆ. ಅದು ಅಷ್ಟು ವ್ಯಾಪಕಾರ್ಥದಿಂದ ಉಪಯೋಗಿಸಲ್ಪಟ್ಟಿಲ್ಲ. ಅದು ಒಂದು ಮರ್ಯಾದಿತವಾದ ಅರ್ಥದಿಂದಲೇ ಅಷ್ಟಾವರಣದಲ್ಲಿ ಪ್ರಯೋಗಿಸಲ್ಪಟ್ಟಿದೆ. ಮೇಲೆ ಉಕ್ತವಾದ ವಿವರಗಳು ಅಷ್ಟಾವರಣದಲ್ಲಿಯ ಗುರುವಿಗೂ ಅನ್ವಯಿಸುತ್ತವೆಂದರೆ ಜಂಗಮ ಶಬ್ದವನ್ನೇ ನಾವು ಅಷ್ಟಾವರಣದಿಂದ ಕಿತ್ತೊಗೆದು ಸಪ್ತಾವರಣ ವೀರಶೈವರಾಗಬೇಕಾದೀತು ? ಆದುದರಿಂದ ಗುರು ಜಂಗಮವೆಂಬೆರಡು ಶಬ್ದಗಳು ನಮ್ಮ ಧರ್ಮಶಾಸ್ತ್ರದಲ್ಲಿ ಪ್ರಯೋಗಿಸಲ್ಪಟ್ಟಿರುವದರಿಂದ ಗುರುವೆಂದರೆ ಕೇವಲ ಕ್ರಿಯಾಧಿಕಾರವುಳ್ಳವನೇ ಅಹುದು. ಆದರಂತೆಯೇ ಜಂಗಮವೆಂದರೆ ಕೇವಲ ಜ್ಞಾನಮೂರ್ತಿಯು. 'ಸರ್ವಲೋಕೋಪಕಾರಾಯ ಯೋ ದೇವೋ ಪರಮೇಶ್ವರಃ। ಚರತ್ಯತಿಥಿ ರೂಪೇಣ ನಮಸ್ತೇ ಜಂಗಮಾತ್ಮನೇ' ॥ ಎಂಬುದಾಗಿ ಜಂಗಮದ ಲಕ್ಷಣವು ಹೇಳಲ್ಪಟ್ಟದೆ. ಲಿಂಗಾಂಗ ಸಾಮರಸ್ಯಜ್ಞಾನವನ್ನು ಜಗತ್ತಿನಲ್ಲಿ ಹರಡಿ ಜನರನ್ನು ಮೋಕ್ಷಮಾರ್ಗಕ್ಕೆ ಹಚ್ಚುವನೇ ಜಂಗಮನು. ವೇದೋಪನಿಷತ್ತುಗಳಲ್ಲಿ ಪ್ರತಿಪಾದಿತವಾದ ಗುರು ಶಬ್ದವು ನಮ್ಮ ವೀರಶೈವ ಜಂಗಮಕ್ಕೆ ಸಂಪೂರ್ಣವಾಗಿ ಸಮನ್ವಯಿಸುತ್ತದೆ.

ಕೆಲವರು ಗುರುಗಳಿಗೆ ಕ್ರಿಯಾಜ್ಞಾನಗಳೆರಡನ್ನೂ ತಿಳುಹಿಸುವ ಸಾಮರ್ಥ್ಯವಿದೆಯೆನ್ನುವರು. ಮತ್ತು ಕೆಲವರು ಜಂಗಮರಿಗೆ ಕ್ರಿಯಾಜ್ಞಾನೋಪದೇಶವನ್ನು ಮಾಡಲು ಬರುತ್ತದೆನ್ನುವರು. ಉಭಯರ ಅಭಿ

ಪ್ರಾಯುಗಳನ್ನು ಏಕೀಕರಿಸಿದರೆ ಗುರುಜಂಗಮುಕೊಂದೇ ಎಂಬ ಮಥಿತಾರ್ಥವು ಹೊರಡುವದು. ಒಂದೇ ಅಂದರೆ ಭಿನ್ನವಲ್ಲವೆಂಬರ್ಥ. ಹೀಗಂದರೆ ಅಷ್ಟಾವರಣಗಳಲ್ಲಿ ಗುರುಜಂಗಮುವೆಂಬ ಎರಡು ಬೇರೆ ಬೇರೆ ಶಬ್ದಗಳ ಪ್ರಯೋಗವನ್ನೇಕೆ ಮಾಡಬೇಕು? ಅಂದ ಬಳಿಕ ಅವರು ಒಂದೇ ಅಲ್ಲ. ಒಂದೇ ಎಂದರೆ ಸಮಾನ ಪೂಜ್ಯತೆಯುಳ್ಳವರೆಂಬ ಇನ್ನೊಂದರ್ಥ. ಹೀಗೆಂದರೆ ಲೋಕದಲ್ಲಿ ಕ್ರಿಯಾಮೂರ್ತಿಗಳು ಹೆಚ್ಚು ಪೂಜ್ಯರೋ ಜ್ಞಾನಮೂರ್ತಿಗಳು ಹೆಚ್ಚು ಪೂಜ್ಯರೋ ಎಂಬುದನ್ನು ವಾಚಕರೇ ಊಹಿಸಬೇಕು. ವಾಸ್ತವವಾಗಿ 'ಜ್ಞಾನಾದೇವತು ಕೈವಲ್ಯಂ' ಎಂಬೀ ಉಪನಿಷದ್ವಾಕ್ಯಾಧಾರದಿಂದಲೂ 'ನ ಹಿ ಜ್ಞಾನೇನ ಸದೃಶಂ ಪವಿತ್ರ ಮಿಹ ವಿದ್ಯತೆ' ಎಂಬೀ ಗೀತಾ ಶ್ಲೋಕದ ಅಧಾರದಿಂದಲೂ ಸರ್ವಂ ಚಿದ್ರೂಪ ವಿಜ್ಞಾನಾಜ್ಜಂಗಮಾಧಿಕ್ಯ ಮುಚ್ಯತೇ' (೧೧ನೆಯ ಪರಿಚ್ಛೇದ ೩೫ನೆಯ ಶ್ಲೋಕ) ಎಂಬೀ ಸಿದ್ಧಾಂತ ಶಿಖಾಮಣಿಯ ಶ್ಲೋಕಾಧಾರದಿಂದಲೂ ಜಂಗಮುವೇ ಶ್ರೇಷ್ಠವೆಂದು ನಾವು ಹೇಳಬಲ್ಲೆವು.

ಜ್ಞಾನಮೂರ್ತಿಯಾದ ಜಂಗಮುವೇ ಶ್ರೇಷ್ಠವೆಂದ ಬಳಿಕ ಜ್ಞಾನ ಪ್ರಾಪ್ತವಾದ ಬಳಿಕ ಕ್ರಿಯಾಚಾರವನ್ನು ಅರ್ಥಾತ್ ಗುರುವನ್ನು ಅತನೇಕೆ ಬಿಡುವದಿಲ್ಲ? ಎಂಬ ಪ್ರಶ್ನ ಹೊರಡುವದು ಇದಕ್ಕೆ ಉತ್ತರವೇನಂದರೆ ಗುರುವನ್ನು ಬಿಟ್ಟರೆ ವೀರಶೈವನು ಹೇಗಾಗುವನು? ಕ್ರಿಯೆಯು ಜಂಗಮುರಿಗೆ ಸಹಜವಾದ ಅಭ್ಯಾಸವಾಗಿ ಬಿಟ್ಟಿದೆ. ಮೇಲಾಗಿ ಶ್ರೇಷ್ಠರಾದವರು ಆಚರಿಸಿದಂತೆಯೇ ಸಾಮಾನ್ಯರು ನಡಕೊಳ್ಳುವದರಿಂದ ಅವರಿಗೆ ಮಾರ್ಗ ತೋರಿಸಲಿಕ್ಕೆ ಜ್ಞಾನಿಗಳು ಕ್ರಿಯೆಯನ್ನು ಬಿಡಲಾಗದು. ಯದ್ಯದಾಚರತಿ ಶ್ರೇಷ್ಠಸ್ತತ್ತದೇವೇತರೋ ಜನಃ' ಎಂಬೀ ಗೀತಾವಾಕ್ಯವು ಮೇಲಿನ ಮಾತನ್ನೇ ಪುಷ್ಟೀಕರಿಸುತ್ತದೆ. ಗುರುವನ್ನು ಬಿಟ್ಟಿಲ್ಲವೆಂದು ಜಂಗಮುಕ್ಕೆ ಕುಂದು ಬಂದಿತೆಂತಲ್ಲ. ಇದರಿಂದ ಗುರುವನ್ನು ಎತ್ತಿ ಮೇಲಕ್ಕೆ ಕೂಡ್ರಿಸಿದಂತಾಯಿತೆಂತಲೂ ಅಲ್ಲ. ಆದರೆ ಜಂಗಮುವು ವೀರಶೈವಾಚಾರಗಳನ್ನು ಶ್ರದ್ಧೆಯಿಂದ ಪಾಲಿಸಿ ಅಧಿಕನಾದನೆಂಬ ಮಾತು ಸಿದ್ಧವಾದಂತಾಯಿತು. ಅಂತೆಯೇ ಗುರುವಿನ ಗುರು ಜಂಗಮುವಿಂತೆಂದುದು ಕೂಡಲಸಂಗಮುದೇವನ ವಚನ ಎಂಬುದಾಗಿ ಬಸವಣ್ಣನವರು ಹೇಳಿದ್ದಾರೆ.

ಗುರುವು ಕ್ರಿಯಾಚಾರಗಳಿಗೆ ಅನುಕೂಲವಾದ ಅಷ್ಟಾವರಣ ಪಂಚಾಚಾರಗಳ ಮಹತ್ವವನ್ನು ತಿಳಿಸಿಕೊಡುವನು. ಜಂಗಮನು ಮೋಕ್ಷಕ್ಕೆ ಸಾಧನೀಭೂತವಾದ ಷಟ್‌ಸ್ಥಲ ಜ್ಞಾನವನ್ನರುಹುವನು. ಗುರುವು ಉಪದೇಶಕನು. ಜಂಗಮನು ಅನುಕರಣೀಯ ಮೂರ್ತಿಯು. ಗುರುವು ಹೇಳಿದಂತೆ ಆಚರಿಸಿದಾಗ ನಮಗಾಗುವ ಆನಂದವು ಜಂಗಮ ಮೂರ್ತಿಯನ್ನು ನೋಡಿದಾಕ್ಷಣವೇ ಉಂಟಾಗುತ್ತದೆ ಒಬ್ಬನಿಗೆ ಗುರುವಾದವನು ಇನ್ನೊಬ್ಬನಿಗೆ ಗುರುವಾಗಲಿಕ್ಕಿಲ್ಲ; ಆದರೆ ಜಂಗಮವು ಜಗದ್ಗುರುವು. ಇಂತಿಷ್ಟು ಕ್ಷೇತ್ರ ಜನಸಂಖ್ಯೆಗೆ ಗುರುವಾದವನು ಬೇರೆ ಕಡೆಯಲ್ಲಿ ಗುರುವೆಂದು ತಿಳಿಯಲ್ಪಡಲಿಕ್ಕಿಲ್ಲ; ಆದರೆ ಜಂಗಮವು ಹೋದ ಹೋದಲ್ಲಿ ಪೂಜಿಸಲ್ಪಡುವದು. ಗುರುವು ತನ್ನ ಸೂತ್ರಗೋತ್ರದವರಿಗಷ್ಟೇ ಪೂಜ್ಯನು. ಜಂಗಮನು ಎಲ್ಲ ಸೂತ್ರಗೋತ್ರಗಳಿಗೂ ಪೂಜ್ಯನು. ಗುರುವು ಕೆಲವು ಸಮಾಜ ಕಟ್ಟಳೆಗಳಿಂದ ಬದ್ಧನಾಗಿರುವನು. ಆದರೆ ಜಂಗಮನು ನಿರಾಭಾರಿಯೂ ನಿರ್ಲಿಪ್ತನೂ ಆಗಿರುವನು. ಗುರುಗಳ ಹಂಗಿನಲ್ಲಿ ಶಿಷ್ಯರೂ ಶಿಷ್ಯರ ಹಂಗಿನಲ್ಲಿ ಗುರುಗಳೂ ಇರುವರು. ಆದರೆ ಜಂಗಮರಿಗೆ ಶಿವನದೊಂದೇ ಹಂಗಲ್ಲದೆ ಬೇರೆ ಹಂಗು ಇಲ್ಲ. ಜಂಗಮರಿಗೆ ಭಕ್ತರು ಭಕ್ತಿಪೂರ್ವಕವಾಗಿ ಕೊಟ್ಟರೆ ಶಿವನ ಅರ್ಪಣೆಯೆಂದು ಅದನ್ನು ಅವರು ಸ್ವೀಕರಿಸಬಹುದು ಅಥವಾ ಬಿಡಬಹುದು. ಆದರೆ ಗುರುಗಳು ಸಮಾಜೋದ್ಧಾರದ ಕೆಲಸಮಾಡುವರೆಂದು ತಿಳಿದು ಸಮಾಜವು ಅವರಿಗೆ ಮಠಮಾನ್ಯಗಳನ್ನೂ ಅಧಿಕಾರಿಗಳನ್ನೂ ಹಾಕಿ ಕೊಟ್ಟಿರುವದು. ಸರಕಾರದಲ್ಲಿ ಉತ್ತರೋತ್ತರ ನೌಕರರ ಕ್ರಮವಿರುವಂತೆ ಸಮಾಜದಲ್ಲಿ ಗುರುಗಳ ಕ್ರಮವಿರುವದು. ಸಮಾಜ ಬಂಧುರತೆಗೆ ಗುರುಗಳು ಬೇಕು. ಆಧ್ಯಾತ್ಮ ಪ್ರಗತಿಗೆ ಜಂಗಮರು ಬೇಕು. ಗುರು ಜಂಗಮಗಳೆರಡೂ ಸಮಾಜದ ದೊಡ್ಡ ಆಧಾರಸ್ತಂಭಗಳಾಗಿವೆ. ಗುರುವಿನ ಕಾರ್ಯಕ್ಷೇತ್ರವು ಸಮಾಜದ ಶುಭಾಶುಭ ಕಾರ್ಯಗಳಿಗೂ, ದೀಕ್ಷಾದಿ ಸಂಸ್ಕಾರಗಳಿಗೂ, ಶಿಕ್ಷಣ ಸುಧಾರಣೆಗಳಿಗೂ, ಶಾಂತತೆ ಸುವ್ಯವಸ್ಥೆಗಳಿಗೂ ಮರ್ಯಾದಿತವಾಗಿದೆ. ಆದರೆ ಜಂಗಮರ ಕಾರ್ಯಕ್ಷೇತ್ರವು ಆಧ್ಯಾತ್ಮಿಕ ಬೆಳವಣಿಗೆಗಾಗಿಯೂ ಲೋಕಸಂಗ್ರಹ ಕಾರ್ಯಗಳಿಗಾಗಿಯೂ ಸಂಬಂಧಪಟ್ಟಿರುತ್ತದೆ. ಧರ್ಮರಕ್ಷಣೆ, ಸಮಾಜೋದ್ಧಾರದ ಕೆಲಸಗಳು ಗುರುವಿನವು. ಧರ್ಮ ಜಾಗ್ರತೆ ಪರೋಪಕಾರಗಳು ಜಂಗಮದವು. ಗುರುವಿನ ಕಾರ್ಯಕ್ಷೇತ್ರಗಳು ಅತ್ಯ

ಲ್ಪಕ್ಷೇತ್ರಕ್ಕೆ ಮರ್ಯಾದಿತವಾಗಿರುವದರಿಂದ ಆತನು ಸ್ವಲ್ಪೇ ಜನರಿಂದ ಪೂಜಿಸಲ್ಪಡತಕ್ಕವನು. ಜಂಗಮದರ್ಥವು ವಿಶ್ವವ್ಯಾಪಕವಾಗಿದ್ದು ಜಂಗಮನು ಜಗವಂದ್ಯನಾಗುತ್ತಾನೆ. ಅಲ್ಪ ಸಂಖ್ಯಾಕರಿಂದ ಪೂಜಿಸಲ್ಪಡುವವರಿಗಿಂತಲೂ ಬಹುಸಂಖ್ಯಾಕರಿಂದ ಪೂಜಿಸಲ್ಪಡುವವರೇ ಹೆಚ್ಚಿನವರೆಂದು ಸ್ವಾಭಾವಿಕವಾಗಿ ಹೇಳಬಹುದು. (ಆದುದರಿಂದ ಗುರುವೆಂದರೆ ಕ್ರಿಯಾಚಾರಗಳನ್ನು ಹೇಳಿಕೊಡುವವರೆಂತಲೂ) ಜಂಗಮರೆಂದರೆ ಜ್ಞಾನೋಪದೇಶ ಮಾಡುವವರೆಂತಲೂ ಹೇಳಿದರೆ ವಿಶೇಷ ತಪ್ಪಾಗಲಿಕ್ಕಿಲ್ಲ.

ಸದ್ಯಕ್ಕೆ ನಮ್ಮ ಸಮಾಜದಲ್ಲಿ ಗುರುವಿನ ಲಕ್ಷಣವಿಲ್ಲದ ಅನೇಕರು ತಾವು ಗುರುಗಳೆಂದು ಹೇಳಿಕೊಳ್ಳುತ್ತಿದ್ದಾರೆ. ಜಂಗಮದ ಲಕ್ಷಣವಿಲ್ಲದ ಕೆಲವರು ತಾವು ಜಂಗಮರೆಂದು ಅಭಿಮಾನಪಡುತ್ತಾರೆ. ಆದರೆ ಆಯಾಯ ಲಕ್ಷಣಗಳುಳ್ಳ ವೀರಶೈವನು ಯಾವನೇ ಇರಲಿ ಅಂದರೆ ಈಗ ರೂಢಿಯಲ್ಲಿರುವ ಭಕ್ತನೇ ಇರಲಿ ಮಹೇಶ್ವರನೇ ಇರಲಿ ಅವನಿಗೇ ಸಮಾಜವು ಸಂಸ್ಕಾರಮಾಡಿ ಗುರುವೆನ್ನಬೇಕು; ಜಂಗಮವೆನ್ನಬೇಕು. ಗುರುವಾಗಲಿ ಜಂಗಮವಾಗಲಿ, ಭಕ್ತನಾಗಲಿ ಮಹೇಶ್ವರನಾಗಲಿ, ಇಂತಿಂಥ ಜನ್ಮವಿಶಿಷ್ಟವಾದ ವ್ಯಕ್ತಿಯೆಂದು ಎಲ್ಲಿಯೂ ಹೇಳಿಲ್ಲ. ಹಾಗೆ ಯಾರೂ ಅಧಿಕಾರ ಹಾಕಿಕೊಟ್ಟಿರುವದಿಲ್ಲ. ಹಾಗೆ ಭಾವಿಸುವುದಾದರೂ ಶಾಸ್ತ್ರ ದೃಷ್ಟ್ಯಾ ಸಮಂಜಸವಾದುದಲ್ಲ. ಅವರವರ ಗುಣಧರ್ಮ ಪ್ರಾಧಾನ್ಯದಿಂದ ಅವರವರಿಗೆ ಅಂತಂಥ ಪ್ರಾಶಸ್ತ್ಯವು ಬರಬಹುದೇ ವಿನಾ ಇಂತಿಂಥ ಪೀಠದವರಿಗಾಗಲಿ, ಸಿಂಹಾಸನದವರಿಗಾಗಲಿ ಅಥವಾ ಮಠಸ್ಥರಿಗಾಗಲಿ ಅದನ್ನು ಕ್ರಯಕ್ಕೆ ಬರೆದುಕೊಟ್ಟಿಲ್ಲ. ಪಂಚಾಚಾರ್ಯರು ಗುರುಗಳೆಂದು ಹೇಳಿಕೊಳ್ಳುತ್ತಿರಬಹುದು. ಅವರ ಮಠಗಳ ಕೆಳಗೆ ಅನೇಕ ಶಿಷ್ಯರಿರಬಹುದು. ಆದರೆ ಗುರುತ್ವವನ್ನು ಅವರಿಗೇ ಗುತ್ತಿಗೆ ಹಾಕಿ ಕೊಟ್ಟಿಲ್ಲ. ಇಂಥಾದ್ದೊಂದು ವಿಶಿಷ್ಟವರ್ಗವು ನಿರಂಜನ ಮೂರ್ತಿಗಳೆಂದು ತಲೆಯೆತ್ತಿ ಮೆರೆದಾಡುವುದನ್ನೂ ಯಾರೂ ಕೈನೀಡಿ ಕೊಟ್ಟಿಲ್ಲ. ಹಿಂದಿನ ಪುಣ್ಯಾತ್ಮರ ತಪಃಪ್ರಭಾವದಿಂದಾಗಲಿ ಅಥವಾ ಮುಬ್ಬು ಜನಗಳ ಮೂಢಭಾವನೆಯಿಂದಾಗಲಿ ಅವರವರ ಸೂತ್ರಸಮುಯದವರು ತಾವು ಗುರುಗಳೆಂದೂ ಜಂಗಮರೆಂದೂ ಎಷ್ಟೋ ವರ್ಷಗಳ ವರೆಗೆ ಸಾಧಿಸುತ್ತ ಬಂದಿರಬಹುದು. ರೂಢಾಚಾರವೇನೂ ನಿರಂಕುಶ ಪ್ರಭುತ್ವದ ಸೊತ್ತಲ್ಲ. ತತ್ವದ ನಿಜವಾದ ಮರ್ಮವನ್ನರಿಯದೆ ಪೀಠಗಳೂ ಸಿಂಹಾಸನಗಳೂ

ನಡೆದುಕೊಳ್ಳುತ್ತ ಬಂದುದರಿಂದ ತತ್ವದ ನಿಜವಾದ ಪ್ರಕಾಶವನ್ನು ತೋರ್ಪಡಿಸಲಿಕ್ಕೆ ಈಗಿನ ಗುರು ವಿರಕ್ತರಲ್ಲಿ ಕಲಹಾಗ್ನಿಯುಂಟಾಗಿರುವದು. ಇದು ನಮ್ಮ ಭಾವೀ ವೀರಶೈವ ಸಮಾಜೋನ್ನತಿಗಾಗಿಯೇ ಹುಟ್ಟಿರುವದೆಂದು ನಾವು ತಿಳಿಯತಕ್ಕದ್ದು.

ಮಠ ಮಾನ್ಯ ಅಧಿಕಾರ ಆಂದಣಗಳ ಮೂಲಕ ಸ್ವಾರ್ಥಬುದ್ಧಿಯು ಹುಟ್ಟಿ ಈ ಕಲಹಾಗ್ನಿಗೆ ಕಾರಣವಾಯಿತು. ಅವರ ಸ್ವಾರ್ಥಕ್ಕೆ ಕಾರಣವಾದ ಮಠಾದಿಗಳ ಏರ್ಪಾಟನ್ನು ಬೇರೆ ತಾತ್ವಿಕ ದೃಷ್ಟಿಯಿಂದ ಸಮಾಜದವರು ಮಾಡಿದ್ದಾದರೆ ಗುರುಲಿಂಗಜಂಗಮದರಿವು ಎಲ್ಲರಿಗೂ ಸಮರ್ಪಕವಾಗಿ ಹೊಳೆಯುವದು.

---

## ಓರುಗಲ್ಲು ಪಟ್ಟಣವು.

(ಲೇಖಕ:— ಶ್ರೀ ಅನ್ನದಾನಿ ಸ್ವಾಮಿಗಳು. ಮು- ಅಂಬೂರು.)

ಕರ್ನಾಟಕ ಇತಿಹಾಸವು ಕರ್ನಾಟಕದ ಮಗ್ಗುಲಲ್ಲಿ ಇರುವ ತೆಲಗು, ತಮಿಳು ದೇಶಗಳಿಗೆ ಬಹಳ ಸಂಬಂಧಪಟ್ಟಿರುತ್ತದೆ. ಈ ಸಂಬಂಧವು ಕೇವಲ ರಾಜಕೀಯ ದೃಷ್ಟಿಯಿಂದಷ್ಟೇ ಅಲ್ಲ, ಸಾಮಾಜಿಕ ಮತ್ತು ಧಾರ್ಮಿಕ ದೃಷ್ಟಿಯಿಂದಲೂ ಕೂಡ ಇರುತ್ತದೆ. ತಮಿಳು ಮತ್ತು ತೆಲಗು ಸೀಮೆಯಲ್ಲಿ ಆಗಿ ಹೋದ ಮಹಾಪುರುಷರು ಮತ್ತು ಸಾಧುಗಳು ಕರ್ನಾಟಕದ ಮೇಲೆ ಬಹಳ ಪರಿಣಾಮ ಮಾಡಿರುತ್ತಾರೆ. ಇದು ಪಾಲ್ಕುರಿಕೆ ಸೋಮನಾಥ, ೬೩ ಪುರಾತನರ ಚರಿತ್ರೆಗಳು ಇವುಗಳನ್ನು ಪರಿಶೀಲಿಸಿದರೆ ತಿಳಿದುಬರುತ್ತದೆ. ಅದೇ ಮೇರೆಗೆ ಕರ್ನಾಟಕವೂ ಈ ಪ್ರಾಂತಗಳ ಮೇಲೆ ಬಹಳ ಪರಿಣಾಮ ಮಾಡಿರುತ್ತದೆ. ಶ್ರೀ ಬಸವೇಶ್ವರ ರಾಘವಾಂಕ ಇವರ ಚರಿತ್ರೆಗಳು, ವಿಜಯನಗರದ ಇತಿಹಾಸ ಇವುಗಳನ್ನು ನೋಡಿದರೆ ತಿಳಿದುಬರುತ್ತದೆ. ಈ ದೃಷ್ಟಿಯಿಂದ ಓರುಗಲ್ಲು ಪಟ್ಟಣದಲ್ಲಿ ಆಗಿಹೋದ ರಾಜ್ಯಗಳ ಇತಿಹಾಸವು ಕರ್ನಾಟಕಸ್ತರಿಗೆ ಬಹಳ ಮಹತ್ವವಾದದ್ದದೆ. ಆದ್ದರಿಂದ ಈ ಲೇಖದಲ್ಲಿ ಓರುಗಲ್ಲಿನ ಸಂಕ್ಷಿಪ್ತ ವೃತ್ತಾಂತವನ್ನು ಕೊಟ್ಟಿರುತ್ತೇವೆ.

ಪ್ರಾಚೀನ ಕಾಲದಲ್ಲಿಯೂ ಮಧ್ಯ ಕಾಲದಲ್ಲಿಯೂ ಈ ಭರತ ಖಂಡದಲ್ಲಿ ಸುಪ್ರಸಿದ್ಧಿ ಹೊಂದಿದ ರಾಜ್ಯಗಳು ಉತ್ತರ ಹಿಂದುಸ್ತಾನದಲ್ಲಿ ಇರುವದು ತೋರಿಬರುತ್ತದೆ. ಈ ರಾಜ್ಯಗಳೆಂದರೆ ಪುರಾತನ ಕಾಲದಲ್ಲಿ ಅಯೋಧ್ಯೆ, ಹಸ್ತಿನಾಪುರ, ಮಥುರಾಪಟ್ಟಣ, ಮಿಥಿಲಾಪುರ, ಕಾಶಿ, ಉಜ್ಜಿನಿ, ಮುಂತಾದವುಗಳು ಇವೆ. ಮಧ್ಯಕಾಲದಲ್ಲಿ ಸ್ಥಾನೇಶ್ವರ, ಕನ್ಯಕುಬ್ಜ, ಆಗ್ರಾ, ದಿಲ್ಲಿ, ಶ್ರೀನಗರ, ಉದೇಪುರ, ಚಿತ್ತೂರ ಈ ಮೊದಲಾದವುಗಳು ಇವೆ. ಇದರಂತೆಯೇ ದಕ್ಷಿಣಹಿಂದುಸ್ತಾನದಲ್ಲಿ ಅನೇಕ ಪ್ರಬಲ ರಾಜ್ಯಗಳು ಆಗಿಹೋದವು. ಇವುಗಳಲ್ಲಿ ದೇವಗಿರಿ, ಓರುಗಲ್ಲು, ವಿಜಯನಗರ, ಗುಲ್ಬುರ್ಗ, ಬಿದನೂರ, ಬಿಜಾಪುರ, ಗೋಲಗುಂಡ ಮೊದಲಾದ ನಗರಗಳನ್ನು ಎಣಿಸಬಹುದು. ಇವು ಒಂದು ಕಾಲದಲ್ಲಿ ಹಿಂದೂ ರಾಜರಿಗೂ ಮತ್ತೊಂದು ಕಾಲ ಮುಹಮ್ಮದೀಯ ರಾಜರಿಗೂ ಪ್ರಧಾನ ಪಟ್ಟಣಗಳಾಗಿ ಪ್ರಕಾಶಿಸಿ, ಈ ಕಾಲಕ್ಕೊಂದು ವಿಧವಾಗಿ ನಾಶ ಹೊಂದಿ ನಮ್ಮ ಕಣ್ಣುಗಳಿಗೆ ಒಂದರಿಂದೊಂದು ಸುಪ್ನ ದೃಶ್ಯ ಪದಾರ್ಥಗಳಾಗಿ ಕಾಣಿಸುತ್ತಲಿರುವವು. ಈ ಮಹಾಸ್ಥಲಗಳಿಗೆ ಹೋಗಿ ನೋಡಿದರೆ ಅಲ್ಲಿ ಸಿಥಿಲ ಭಿನ್ನಗಳಾಗಿ ಬಿದ್ದಿರುವ ನಿರ್ಮಾಣಗಳೂ ಶಿಲ್ಪಕಳಾ ಚಾತುರ್ಯಗಳೂ ಕಾಣಬರುವವಲ್ಲದೆ ಈ ಪ್ರದೇಶಗಳಲ್ಲಿ ಕೆಲವು ಪರ್ವತಾಗ್ರದಲ್ಲಿಯೂ ಮತ್ತೆ ಕೆಲವು ಮೈದಾನಗಳಲ್ಲಿಯೂ ಕಟ್ಟಿರುವದಾಗಿ ರಾಜಪ್ರಭುಗಳ ಮಹತ್ವಾತಿಶಯಗಳನ್ನು ಗುರ್ತಿಸಿ ಬೋಧಿಸುತ್ತಿರುವವು. ದೇವಗಿರಿ ದುರ್ಗವು ಪರ್ವತಾಗ್ರದಲ್ಲಿ ನಿರ್ಮಿಸಿರುವದು. ಓರುಗಲ್ಲು ಕೋಟೆಯು ಮೈದಾನದಲ್ಲಿ ಕಟ್ಟಿರುವದು ಮತ್ತು ಶಿಲಾನಿರ್ಮಾಣಗಳಾದ ಪ್ರಾಕಾರಗಳ ಮೇಲೆ ಆಧಾರವಾಗಿರುವದು. ಆದರೆ ಈ ಪುರದ ಸಮೀಪದಲ್ಲಿಯೇ ಒಂದು ದೊಡ್ಡ ಪರ್ವತ ಉಂಟು. ಈ ಪರ್ವತದ ಮೇಲೆಯೇ ಇದು ಕಟ್ಟಲ್ಪಟ್ಟಿದ್ದಾದರೆ ಶತ್ರುಗಳಿಗೆ ಸಾಧ್ಯವಾಗದೆ ಕಾಪಾಡಿಕೊಳ್ಳುವದಾಗಿತ್ತು. ಓರುಗಲ್ಲಿನ ಕುರಿತು ಚರಿತ್ರಕಾರರು ವಿಶೇಷವಾಗಿ ವರ್ಣನೆ ಮಾಡಿಲ್ಲ. ಪ್ರಯುಕ್ತ ಪ್ರಾರಂಭನಿರ್ಣಯ ಮಾಡಲಿಕ್ಕೆ ಸರಿಯಾದ ಆಧಾರಗಳು ಗುರ್ತಿಡಿಯವು.

ಆದರೂ ಇತಿಹಾಸದಿಂದ ಕಂಡುಬರುವದೇನಂದರೆ ೧೨೯೩ ಸ॥ ರಲ್ಲಿ ಡಿಲ್ಲಿ ಮಹಮ್ಮದೀಯ ಚಕ್ರವರ್ತಿಯು ಪ್ರಥಮದಲ್ಲಿ ವಿಂಧ್ಯ ಪರ್ವತದ ಕಣಿವೆಗಳ ಮಾರ್ಗವಾಗಿ ದಕ್ಷಿಣವನ್ನು ಪ್ರವೇಶ ಮಾಡಿದನು. ಆ ಸಮ

ನಡೆದುಕೊಳ್ಳುತ್ತ ಬಂದುದರಿಂದ ತತ್ವದ ನಿಜವಾದ ಪ್ರಕಾಶವನ್ನು ತೋರ್ಪಡಿಸಲಿಕ್ಕೆ ಈಗಿನ ಗುರು ವಿರಕ್ತರಲ್ಲಿ ಕಲಹಾಗ್ನಿಯುಂಟಾಗಿರುವದು. ಇದು ನಮ್ಮ ಭಾವೀ ವೀರಶೈವ ಸಮಾಜೋನ್ನತಿಗಾಗಿಯೇ ಹುಟ್ಟಿರುವದೆಂದು ನಾವು . ತಿಳಿಯತಕ್ಕದ್ದು.

ಮಠ ಮಾನ್ಯ ಅಧಿಕಾರ ಅಂದಣಗಳ ಮೂಲಕ ಸ್ವಾರ್ಥಬುದ್ಧಿಯು ಹುಟ್ಟಿ ಈ ಕಲಹಾಗ್ನಿಗೆ ಕಾರಣವಾಯಿತು. ಅವರ ಸ್ವಾರ್ಥಕ್ಕೆ ಕಾರಣವಾದ ಮಠಾದಿಗಳ ಏರ್ಪಾಟನ್ನು ಬೇರೆ ತಾತ್ವಿಕ ದೃಷ್ಟಿಯಿಂದ ಸಮಾಜದವರು ಮಾಡಿದ್ದಾದರೆ ಗುರುಲಿಂಗಜಂಗಮದರಿವು ಎಲ್ಲರಿಗೂ ಸಮರ್ಪಕವಾಗಿ ಹೊಳೆಯುವದು.

---

# ಓರುಗಲ್ಲು ಪಟ್ಟಣವು.

(ಲೇಖಕ:— ಶ್ರೀ ಅನ್ನದಾನಿ ಸ್ವಾಮಿಗಳು. ಮು- ಅಂಬೂರು.)

ಕರ್ನಾಟಕ ಇತಿಹಾಸವು ಕರ್ನಾಟಕದ ಮಗ್ಗುಲಲ್ಲಿ ಇರುವ ತೆಲಗು, ತಮಿಳು ದೇಶಗಳಿಗೆ ಬಹಳ ಸಂಬಂಧಪಟ್ಟಿರುತ್ತದೆ. ಈ ಸಂಬಂಧವು ಕೇವಲ ರಾಜಕೀಯ ದೃಷ್ಟಿಯಿಂದಷ್ಟೇ ಅಲ್ಲ, ಸಾಮಾಜಿಕ ಮತ್ತು ಧಾರ್ಮಿಕ ದೃಷ್ಟಿಯಿಂದಲೂ ಕೂಡ ಇರುತ್ತದೆ. ತಮಿಳು ಮತ್ತು ತೆಲಗು ಸೀಮೆಯಲ್ಲಿ ಆಗಿ ಹೋದ ಮಹಾಪುರುಷರು ಮತ್ತು ಸಾಧುಗಳು ಕರ್ನಾಟಕದ ಮೇಲೆ ಬಹಳ ಪರಿಣಾಮ ಮಾಡಿರುತ್ತಾರೆ. ಇದು ಪಾಲ್ಕುರಿಕೆ ಸೋಮನಾಥ, ೬೩ ಪುರಾತನರ ಚರಿತ್ರೆಗಳು ಇವುಗಳನ್ನು ಪರಿಶೀಲಿಸಿದರೆ ತಿಳಿದುಬರುತ್ತದೆ. ಅದೇ ಮೇರೆಗೆ ಕರ್ನಾಟಕವೂ ಈ ಪ್ರಾಂತಗಳ ಮೇಲೆ ಬಹಳ ಪರಿಣಾಮ ಮಾಡಿರುತ್ತದೆ. ಶ್ರೀ ಬಸವೇಶ್ವರ ರಾಘವಾಂಕ ಇವರ ಚರಿತ್ರೆಗಳು, ವಿಜಯನಗರದ ಇತಿಹಾಸ ಇವುಗಳನ್ನು ನೋಡಿದರೆ ತಿಳಿದುಬರುತ್ತದೆ. ಈ ದೃಷ್ಟಿಯಿಂದ ಓರುಗಲ್ಲು ಪಟ್ಟಣದಲ್ಲಿ ಆಗಿಹೋದ ರಾಜ್ಯಗಳ ಇತಿಹಾಸವು ಕರ್ನಾಟಕಸ್ತರಿಗೆ ಬಹಳ ಮಹತ್ವವಾದದ್ದದೆ. ಆದ್ದರಿಂದ ಈ ಲೇಖದಲ್ಲಿ ಓರುಗಲ್ಲಿನ ಸಂಕ್ಷಿಪ್ತ ವೃತ್ತಾಂತವನ್ನು ಕೊಟ್ಟಿರುತ್ತೇವೆ.

ಪ್ರಾಚೀನ ಕಾಲದಲ್ಲಿಯೂ ಮಧ್ಯ ಕಾಲದಲ್ಲಿಯೂ ಈ ಭರತ ಖಂಡದಲ್ಲಿ ಸುಪ್ರಸಿದ್ಧಿ ಹೊಂದಿದ ರಾಜ್ಯಗಳು ಉತ್ತರ ಹಿಂದುಸ್ಥಾನದಲ್ಲಿ ಇರುವದು ತೋರಿಬರುತ್ತದೆ. ಈ ರಾಜ್ಯಗಳೆಂದರೆ ಪುರಾತನ ಕಾಲದಲ್ಲಿ ಅಯೋಧ್ಯೆ, ಹಸ್ತಿನಾಪುರ, ಮಥುರಾಪಟ್ಟಣ, ಮಿಥಿಲಾಪುರ, ಕಾಶಿ, ಉಜ್ಜಿನಿ, ಮುಂತಾದವುಗಳು ಇವೆ. ಮಧ್ಯಕಾಲದಲ್ಲಿ ಸ್ಥಾನೇಶ್ವರ, ಕನ್ಯಕುಬ್ಜ, ಆಗ್ರಾ, ದಿಲ್ಲಿ, ಶ್ರೀನಗರ, ಉದೇಪುರ, ಚಿತ್ತೂರ ಈ ಮೊದಲಾದವುಗಳು ಇವೆ. ಇದರಂತೆಯೇ ದಕ್ಷಿಣಹಿಂದುಸ್ಥಾನದಲ್ಲಿ ಅನೇಕ ಪ್ರಬಲ ರಾಜ್ಯಗಳು ಆಗಿಹೋದವು. ಇವುಗಳಲ್ಲಿ ದೇವಗಿರಿ, ಓರುಗಲ್ಲು, ವಿಜಯನಗರ, ಗುಲ್ಬುರ್ಗ, ಬಿದನೂರ, ಬಿಜಾಪುರ, ಗೋಲಗುಂಡ ಮೊದಲಾದ ನಗರಗಳನ್ನು ಎಣಿಸಬಹುದು. ಇವು ಒಂದು ಕಾಲದಲ್ಲಿ ಹಿಂದೂ ರಾಜರಿಗೂ ಮತ್ತೊಂದು ಕಾಲ ಮುಹಮ್ಮದೀಯ ರಾಜರಿಗೂ ಪ್ರಧಾನ ಪಟ್ಟಣಗಳಾಗಿ ಪ್ರಕಾಶಿಸಿ, ಈ ಕಾಲಕ್ಕೊಂದು ವಿಧವಾಗಿ ನಾಶ ಹೊಂದಿ ನಮ್ಮ ಕಣ್ಣುಗಳಿಗೆ ಒಂದರಿಂದೊಂದು ಸುಪ್ನ ದೃಶ್ಯ ಪದಾರ್ಥಗಳಾಗಿ ಕಾಣಿಸುತ್ತಲಿರುವವು. ಈ ಮಹಾಸ್ಥಲಗಳಿಗೆ ಹೋಗಿ ನೋಡಿದರೆ ಅಲ್ಲಿ ಸಿಥಿಲ ಭಿನ್ನಗಳಾಗಿ ಬಿದ್ದಿರುವ ನಿರ್ಮಾಣಗಳೂ ಶಿಲ್ಪಕಳಾ ಚಾತುರ್ಯಗಳೂ ಕಾಣಬರುವವಲ್ಲದೆ ಈ ಪ್ರದೇಶಗಳಲ್ಲಿ ಕೆಲವು ಪರ್ವತಾಗ್ರದಲ್ಲಿಯೂ ಮತ್ತೆ ಕೆಲವು ಮೈದಾನಗಳಲ್ಲಿಯೂ ಕಟ್ಟಿರುವದಾಗಿ ರಾಜಪ್ರಭುಗಳ ಮಹತ್ವಾತಿಶಯಗಳನ್ನು ಗುರ್ತಿಸಿ ಬೋಧಿಸುತ್ತಿರುವವು. ದೇವಗಿರಿ ದುರ್ಗವು ಪರ್ವತಾಗ್ರದಲ್ಲಿ ನಿರ್ಮಿಸಿರುವದು. ಓರುಗಲ್ಲು ಕೋಟೆಯು ಮೈದಾನದಲ್ಲಿ ಕಟ್ಟಿರುವದು ಮತ್ತು ಶಿಲಾನಿರ್ಮಾಣಗಳಾದ ಪ್ರಾಕಾರಗಳ ಮೇಲೆ ಆಧಾರವಾಗಿರುವದು. ಆದರೆ ಈ ಪುರದ ಸಮೀಪದಲ್ಲಿಯೇ ಒಂದು ದೊಡ್ಡ ಪರ್ವತ ಉಂಟು. ಈ ಪರ್ವತದ ಮೇಲೆಯೇ ಇದು ಕಟ್ಟಲ್ಪಟ್ಟಿದ್ದಾದರೆ ಶತ್ರುಗಳಿಗೆ ಸಾಧ್ಯವಾಗದೆ ಕಾಪಾಡಿಕೊಳ್ಳುವದಾಗಿತ್ತು. ಓರುಗಲ್ಲಿನ ಕುರಿತು ಚರಿತ್ರಕಾರರು ವಿಶೇಷವಾಗಿ ವರ್ಣನೆ ಮಾಡಿಲ್ಲ. ಪ್ರಯುಕ್ತ ಪ್ರಾರಂಭನಿರ್ಣಯ ಮಾಡಲಿಕ್ಕೆ ಸರಿಯಾದ ಆಧಾರಗಳು ಗುರ್ತಿಡಿಯವು.

ಆದರೂ ಇತಿಹಾಸದಿಂದ ಕಂಡುಬರುವದೇನಂದರೆ ೧೨೯೩ ಸ॥ ರಲ್ಲಿ ಡಿಲ್ಲಿ ಮುಹಮ್ಮದೀಯ ಚಕ್ರವರ್ತಿಯು ಪ್ರಥಮದಲ್ಲಿ ವಿಂಧ್ಯ ಪರ್ವತದ ಕಣಿವೆಗಳ ಮಾರ್ಗವಾಗಿ ದಕ್ಷಿಣವನ್ನು ಪ್ರವೇಶ ಮಾಡಿದನು. ಆ ಸಮ

ಯದಲ್ಲಿ ದಕ್ಷಿಣ ಹಿಂದುಸ್ಥಾನವೆಲ್ಲವು ದೇವಗಿರಿ ಓರುಗಲ್ಲು ಮೊದಲಾದ ರಾಜರುಗಳ ಕಡೆಗೆ ಇತ್ತು. ಓರುಗಲ್ಲು ರಾಜರುಗಳ ಪ್ರಥಮದಲ್ಲಿ ಪೂರ್ವ ಚಾಲುಕ್ಯರು ರಾಜ್ಯವಾಳಿದರು. ತದನಂತರ ಗಣಪತಿ ರಾಜರು ಆಳಿದರು. ಇವರು ೧೨--೧೩ ಶತಾಬ್ದಗಳಲ್ಲಿ ಮಹಾ ಪ್ರಬಲವಾಗಿ ಆಂಧ್ರದೇಶಗಳೆಲ್ಲವನ್ನು ಆಗ್ರಹಿಸಿಕೊಂಡು ಪ್ರಖ್ಯಾತಿ ಹೊಂದಿದರು. ಈ ಓರುಗಲ್ಲಿನಲ್ಲಿಯೇ ಅನುಮಕೊಂಡ ಎಂಬ ಗ್ರಾಮವುಂಟು. ಈ ಗ್ರಾಮದಲ್ಲಿ ನಂದೀರಾಜರು ನಿರ್ಮಾಣ ಮಾಡಿದ ಅತಿ ರಮ್ಯವಾದ ಶಿವಾಲಯಗಳು ಉಂಟು.

ಈ ವಂಶದಲ್ಲಿ ಹತ್ತನೆಯವನಾದ ಕಾಕತೀಯ ರಾಜನು ೧೧೧೯ ಸಂ॥ ವರಿಪಿಗು ರಾಜ್ಯವನ್ನಾಳಿ ಓರುಗಲ್ಲು ಕೋಟೆಯನ್ನು ಕಟ್ಟಿಸಿದನು. ಈ ರಾಜನು ಅತಿ ಪ್ರಖ್ಯಾತನಾಗಿ ಪಶ್ಚಿಮ ಚಾಳುಕ್ಯ ರಾಜರುಗಳನ್ನು ಜೈಸಿ ತನ್ನ ಉತ್ತರ ದಿಕ್ಕಿನ ವರಿವಿಗೂ ದಕ್ಷಿಣ ದಿಕ್ಕಿನಲ್ಲಿ ಶ್ರೀಶೈಲವರಿವಿಗೂ ಪೂರ್ವಸಮುದ್ರ ನರಿವಿಗೂ ವ್ಯಾಪಕ ಮಾಡಿಕೊಂಡನು. ಇವನ ತರುವಾಯ ಆಳಿದವರುಗಳಲ್ಲಿ ಸುಪ್ರಸಿದ್ಧಿ ಹೊಂದಿದವನು ಗಣಪತಿರಾಜ. ಈತನು ದೇವಗಿರಿ ಕೋಟೆಗೆ ಮುತ್ತಿಗೆ ಮಾಡಿದನು. ಯಾದವ ರಾಜನು ತನ್ನ ಪುತ್ರಿಯಾದ ರುದ್ರಮದೇವಿಯನ್ನು ಇವನಿಗೆ ಕೊಟ್ಟು ಸಮಾಧಾನ ಮಾಡಿಕೊಂಡನು. ಈ ಕಾಲವಲ್ಲಿ ಜೈನರು ವಿಶೇಷ ಪ್ರಬಲವಾಗಿ ಇದ್ದರು. ಆದರೆ ಗಣಪತಿರಾಜನು ವೀರಶೈವ ಮತದಲ್ಲಿ ಸಂಪೂರ್ಣ ಅಭಿಮಾನ ಪಟ್ಟಿದ್ದನು. ಲಿಂಗಧಾರಿಗಳಾದ ಆರಾಧ್ಯ ಬ್ರಾಹ್ಮಣರುಗಳ ಶಿಷ್ಯನಾಗಿ ಅನೇಕ ಜೈನರನ್ನು ಸಂಹಾರ ಮಾಡಿದನು. ಈ ಕಾಲದಲ್ಲಿಯು ಕನುಮ ಗುಡ್ಡದಲ್ಲಿಯು ಅನೇಕ ಜೈನ ವಿಗ್ರಹಗಳು ಶಿಲಾಶಾಸನಗಳು ಕಾಣಬರುತ್ತವೆ. ಆಂಧ್ರಭಾರತೀ ದೇಶಕ್ಕೆ ಶ್ರೇಷ್ಠನಾದ ತಿಕ್ಕನ ಸೋಮಯಾಜಿ ಈ ರಾಜನ ಕಾಲದಲ್ಲಿ ಪ್ರಖ್ಯಾತಿ ಹೊಂದಿದನು. ಈ ಗಣಪತಿ ರಾಜನು ಸೊಮಯಾಜಿಯನ್ನು ತನ್ನ ರಾಜ್ಯಪ್ರತಿಷ್ಠೆಗೆ ನೇಮಿಸಿದನು.

ಗಣಪತಿರಾಜನ ತರುವಾಯ ಅವನ ಭಾರ್ಯೆಯಾದ ರಾಣಿ ರುದ್ರಮದೇವಿಯು ರಾಜ್ಯಾಧಿಕಾರಗಳನ್ನು ವಹಿಸಿ ೧೨೫೭ರ ಮೊದಲು ೧೨೯೫ ವರೆಗೂ ರಾಜ್ಯವಾಳಿದಳು. ಈ ಮಹೋತ್ತಮಳು ರಾಜನೀತಿಯಲ್ಲಿಯೂ, ಶೌರ್ಯಸಾಹಸದಲ್ಲಿಯೂ, ಧೈರ್ಯಸ್ಥೈರ್ಯಗಳಲ್ಲಿಯೂ, ಧರ್ಮಾಭಿಲಾಷೆಯಲ್ಲಿಯೂ, ಶಾಂತಶೀಲದಲ್ಲಿಯೂ, ಅಹಲ್ಯಾಬಾಯಿಗೆ ಸಮಾನ

ಳೆನಿಸಿರುವಳು ಈ ವೀರವನಿತೆಯು ಓರುಗಲ್ಲು ಕೋಟೆಯು ಶತ್ರುಗಳಿಗಭೇದ್ಯವಾಗುವಂತೆ ಪುನರಾವರ್ತಿ ನಿರ್ಮಿತ ಮಾಡಿದಳು. ಈ ಸಾಧ್ವೀರತ್ನವು ಒಂದೊಂದು ಸಮಯದಲ್ಲಿ ದುರ್ಗವನ್ನು ಬಿಟ್ಟು ಬೇರೊಂದು ಟಿಕಾಣೆಯಲ್ಲಿ ದೇವತಾಲಿಂಗ ನಿಷ್ಠೆ ಮೌನ ವ್ರತವನ್ನಾಚರಿಸಿ ನಿಷ್ಠೆಯಲ್ಲಿ ಇರುವ ಸಮಯದಲ್ಲಿ ಮುರಾರಿ ಎಂಬ ಸಾಮಂತನು ಇದೇ ಸಮಯವೆಂದು ಮುತ್ತಿಗೆ ಮಾಡಿದನು. ಯುದ್ಧಗಳಿಗೆ ಇದು ಸಮಯವಲ್ಲೆಂದು ಯೋಚಿಸಿ ಯುಕ್ತಿಯಿಂದ ಆ ವೇಳೆಗೆ ಸಮಾಧಾನ ವಾಕ್ಯಗಳಿಂದ ಅವನನ್ನು ಶಾಂತಪಡಿಸಿ ಸ್ವಾಧೀನ ಮಾಡಿಕೊಂಡು ತನ್ನ ವ್ರತನಿಷ್ಠೆ ತೀರಿದ ಬಳಿಕ ಅವನ ಸೈನ್ಯಗಳನ್ನು ನಾಶಗೊಳಿಸಿ ಅವನ ಕಪಟ ಕೃತ್ಯಂಗಳನ್ನು ತಿಳಿದುಕೊಂಡು ಶತ್ರುವನ್ನು ನಿಃಶೇಷದಿಂದೆ ಶಾಸನ ಮಾಡಿಸಿ ತನ್ನ ರಾಜ್ಯವನ್ನು ಕಾಪಾಡಿಕೊಂಡಳು. ಮತ್ತು ಸ್ವಲ್ಪ ಕಾಲದಲ್ಲಿ ತನ್ನ ತಂದೆತಾಯಿಗಳ ವಂಶದವರಾದ ದೇವಗಿರಿ ರಾಜನು ತನ್ನ ರಾಜ್ಯದ ಮೇಲೆ ದಂಡು ಮುತ್ತಿಗೆ ಮಾಡಲು ಸಂಶಯವಿಲ್ಲದಂತೆ ಅವನೊಡನೆ ವಿಜೃಂಭಿಸಿ ಐದು ಘೋರ ಯುದ್ಧಗಳ ಮಾಡಿ ಕ್ಷತ್ರಿಯ ಧರ್ಮವನ್ನು ನೆರವೇರಿಸಿದಳು. ಈ ಸ್ತ್ರೀರತ್ನದ ಸದ್ಗುಣಗಳನ್ನು . ಶೌರ್ಯಧೈರ್ಯಗಳನ್ನು, ಪರಿಪಾಲನ ಸಾಮರ್ಥ್ಯವನ್ನು, ಐರೋಪ ದೇಶವಂತನಾದ ಮಾರ್ಕೋಪೋಲ್ ಎಂಬವನು ತನ್ನ ಗ್ರಂಥದಲ್ಲಿ ಬಹಳ ಕೊಂಡಾಡಿರುವನು.

ಈ ಶಿರೋಮಣಿಯ ತರುವಾಯ ಈಕೆಯ ಕುಮಾರ್ತಿಯ ಪುತ್ರನಾದ ಪ್ರತಾಪರುದ್ರನೆಂಬವನು ಸಿಂಹಾಸನಾರೂಢನಾದನು. ಪ್ರತಾಪರುದ್ರನೀತನು ಭೋಜರಾಜನಂತೆಯೂ ವಿಕ್ರಮಾರ್ಕನಂತೆಯೂ ಸಂಸ್ಕೃತ ವಿದ್ಯಾಭಿವೃದ್ಧಿಯಲ್ಲಿ ತೇರಿದನು. ಅನೇಕ ಕವಿಗಳನ್ನು ವಿದ್ವಾಂಸರುಗಳನ್ನು ಬರಮಾಡಿಕೊಂಡು ಅವರ ಪೋಷಣೆ ಮಾಡುವದಲ್ಲದೆ ಸ್ವಯವಾಗಿ ವಿದ್ಯಾವಂತನಾಗಿ ಕವಿಶ್ರೇಷ್ಠನೆನಿಸಿಕೊಂಡನು. ಪ್ರತಾಪರುದ್ರನೆಂಬ ಅಲಂಕಾರ ಶಾಸ್ತ್ರಗಳನ್ನು ರಚಿಸಿದ ಸಾಕ್ಷಾತ್ ವಿದ್ಯಾಪ್ರವೀಣನು ಈತನಲ್ಲಿ ಇದ್ದವನು. ನೀತಿಶಾಸ್ತ್ರವಿಶಾರದನೆನಿಸಿಕೊಂಡು ಶೇಷಋಷಿಯೆಂಬಾತನು ಮಹಾರಾಜನಿಗೆ ಮಂತ್ರಿಯಾಗಿ ಕ್ಷತ್ರಿಯ ಧರ್ಮ ಪರಿಪಾಲನೆ ಮಾಡಲಿಕ್ಕೆ ನಿಂತನು. ನಿಜಾಮು ರಾಜ್ಯದಲ್ಲಿ ಪಾಕಾಲ ಕೆರೆಯನ್ನು ಈ ರಾಜನೇ ಕಟ್ಟಿಸಿರುವನು. ೧೩೦೩ ಸ॥ ದಲ್ಲಿ

ಡಿಲ್ಲೀಶ್ವರ ಸೈನ್ಯ ನಾಯಕನಾದ ಮಲಿಕಕಾಫರನೆಂಬ ತುರಷ್ಕನು ಓರುಗಲ್ಲಿಗೆ ಮುತ್ತಿಗೆ ಮಾಡಿದನು. ಆಗ ಅನೇಕ ದಿವಸಗಳು ಅಘೋರ ಯುದ್ಧಗಳು ಜರಗಿದವು. ಆದರೆ ದೇಶದ್ರೋಹಿಯಾದ ಕಟಕರಾಜನು ತುರುಷ್ಕರಿಗೆ ಸಹಾಯಮಾಡಿದನು. ವಸ್ತು ಕೆಲವರು ದ್ರೋಹಿಗಳು ದ್ರವ್ಯಾಶೆಗೆ ರಾಜ್ಯ ಮರ್ಮಗಳನ್ನು ಶತ್ರುಗಳಿಗೆ ಅನುಕೂಲ ಮಾಡಿದರು. ಈ ಕಾರಣದಿಂದ ಪ್ರತಾಪರುದ್ರನು ತನ್ನ ಭಾಂಡಾರವನ್ನು ಡಿಲ್ಲೀಶ್ವರನಿಗೆ ಕೊಟ್ಟು ಸಂಧಿ ಸಮಾಧಾನ ಮಾಡಿಕೊಳ್ಳುವನಾದನು. ಆದರೂ ನಿರಾಶೆಯುಳ್ಳವನಾಗವೆ ತನ್ನ ಕ್ಷತ್ರಿಯ ಧರ್ಮ ಬಿಡದೆ ಪ್ರತಾಪರುದ್ರನು ದೇವಗಿರಿ ರಾಜನನ್ನು ತಕ್ಕಂಥ ಹಿಂದೂ ರಾಜರುಗಳನ್ನು ಸ್ನೇಹಮಾಡಿಕೊಂಡು ಐಕ್ಯಮತ್ಯ ಮಾಡಿ ತುರಷ್ಕರನ್ನು ತರುಬಲಿಕ್ಕೆ ಸಮಮಾಡಿಕೊಂಡು ನಿಲ್ಲಲು ತುರುಷ್ಕರು ಪ್ರತಾಪರುದ್ರನ ಮೇಲೆ ಎರಡನೆಯ ಮುತ್ತಿಗೆಯನ್ನು ಮಾಡಿದರು. ಅವನನ್ನು ಜಯಿಸುವದಕ್ಕೆ ಅನೇಕ ಪ್ರಯತ್ನಗಳನ್ನು ನಡಸಿದರು. ಆದರೆ ಅವುಗಳೆಲ್ಲ ನಿಷ್ಫಲವಾಗಿ ಹೋದವು. ಕಡೆಯಲ್ಲಿ ಮಹಾಸೈನ್ಯಗಳು ತುರುಷ್ಕ ದೇಶದಿಂದ ಬಂದು ಓರುಗಲ್ಲು ಕೋಟೆಯನ್ನು ಮುತ್ತಿಗೆ ಮಾಡಿದವು. ಪ್ರತಾಪರುದ್ರನನ್ನು ಹಿಡಿದು ಬಂಧಿಸಿ ಡಿಲ್ಲಿಗೆ ಕೈದಿಯಾಗಿ ಹಿಡಿದೊಯ್ದರು. ಅದರ ಮೇಲೆ ರಾಜನೀತಿ ಧುರೀಣನಾದ ಯುಗಂಧರ ಮಂತ್ರಿ ತನ್ನ ಅಪ್ರತಿಮ ಪ್ರಭಾವ ವಿಶೇಷದಿಂದ ಪ್ರತಾಪರುದ್ರನನ್ನು ಪುನಃ ಓರುಗಲ್ಲಿಗೆ ತಂದು ರಾಜ್ಯಾಧಿಕಾರ ಸ್ವಧರ್ಮಗಳನ್ನು ನೆರವೇರಿಸಿ ಪ್ರಕಾಶಗೊಳಿಸಿದನು.

ಆ ಮಹಾರಾಜನ ತರುವಾಯ ಹಿಂದು ರಾಜರುಗಳಲ್ಲಿ ಅನೇಕ ಕಲಹಂಗಳು ಉತ್ಪನ್ನವಾಗಿ ಓರಗಲ್ಲು ರಾಜ್ಯವು ಪೂರ್ವ ವೈಭವಂಗಳಿಂದ ಚ್ಯುತಿಯಾಗಿ ಬಾಮಿನಿ ರಾಜ್ಯದಲ್ಲಿ ಮಿಶ್ರಹೊಂದಿ ಹೋಯಿತು.

ಅನುಮಕೊಂಡದಲ್ಲಿ ಶಿವಮಂದಿರವು ಸಹಸ್ರ ಸ್ತಂಭ ಮಂಟಪದಿಂದ ಕೂಡಿಕೊಂಡು ಶಿಲ್ಪಕಲಾಚಾತುರ್ಯದಿಂದ ಉತ್ಕೃಷ್ಟತೆಯನ್ನು ಹೊಂದಿರುವದು. ೧೧೬೪ ಸ॥ ವತ್ಸರದ ಹಿಂದೆ ಈ ದೇವಾಲಯವು ನಿರ್ಮಾಣವಾಗಿದೆಂದು ಆಂಧ್ರ ಶಿಲಾಶಾಸನದಿಂದೆ ತಿಳಿದುಬರುತ್ತದೆ. ಅದು ಸುಪ್ರಸಿದ್ಧವಾದ ಎಲ್ಲೋರದ ಗುಹೆಗಳಲ್ಲಿಯ ವಿಚಿತ್ರ ನಿರ್ಮಾಣ ಕೆಲಸಗಳು ಶಿಲ್ಪಕಳಾಚಾತುರ್ಯ ಇವುಗಳ ಸ್ಮರಣೆಯನ್ನು ನೋಡುವಂತವರಿಗೆ ಉಂಟುಮಾಡಿ ಆನಂದ ತೋರದಿರಲಾರದು. ಇದರ ಸಮೀಪದಲ್ಲಿ

ಒಂದು ಉನ್ನತವಾದ ಸಾವಿರ ಕಾಲ ಮಂಟಪವು ಇರುವದು. ಇದು ಬಿಳಿ, ಕರಿ, ನೀಲ ಶಿಲೆಗಳಿಂದ ನಿರ್ಮಾಣಮಾಡಲ್ಪಟ್ಟಿರುವದು. ಇದರಲ್ಲಿ ಮೂರು ದೇವಾಲಯಗಳು ನಿರ್ಮಿಸಿರುತ್ತವೆ. ನೋಡಲಿಕ್ಕೆ ಸೊಗಸಾಗಿ ಆಲಯತ್ರಯಂಗಳು ಸಿಂಹ ದ್ವಾರಂಗಳ ಮುಂದೆ ಮಂಟಪ ಪ್ರದೇಶಾಭಿಮುಖಗಳಾಗಿ ಇರುವವು. ಈ ಮಂಟಪದ ಸ್ತಂಭಗಳೆಲ್ಲವು ಮಾಡಿದ ಕೆಲಸೋನ್ನತಿಗಳಿಂದ ಅಲಂಕಾರವಾಗಿ ತೋರ್ಪಡುತ್ತವೆ. ಈ ಮಂಟಪದ ಮುಂದೆ ಒಂದು ದೊಡ್ಡ ನಂದಿವಿಗ್ರಹ ಸಂರಕ್ಷಣೆಗಾಗಿ ಕಟ್ಟಿರುವ ಮಂಟಪವು ಮುರಿದುಬಿದ್ದು ವಿಗ್ರಹವನ್ನು ಭಿನ್ನ ಮಾಡಿರುವದು. ಇದು ಎಲ್ಲ ಶಿಥಿಲವಾಗಿ ಹೋಗಿರುವದು.

ಓರುಗಲ್ಲು ಕಾಕತೀಯ ವಂಶದೊಳಗೆ ಹತ್ತನೇ ಪುರುಷನಾದ ರಾಜನು ೧೧೧೬ ಸಂ॥ ವರೆಗೂ ರಾಜ್ಯಾಧಿಕಾರ ವಹಿಸಿ ಓರುಗಲ್ಲು ದುರ್ಗವನ್ನು ನಿರ್ಮಾಣ ಮಾಡಿದನೆಂದು ಹಿಂದೆ ಹೇಳಿದ್ದೆವಷ್ಟೇ. ಈ ಕೋಟೆಯ ಹೊರ ಪ್ರಾಕಾರಗಳು ೩೦ಮೊದಲು ೫೦ ಅಡಿಗಳ ಎತ್ತರ ಮೂರು ಕೋಶಗಳ ಸುತ್ತಳತೆಗಳುಳ್ಳ ಅಗಾಧವಾದಂಥ ಕಂದಕದಿಂದ ಆವರಿಸಿರುವದು. ಈ ಪ್ರಕಾರದಿಂದ ಉತ್ತರದಿಂದ ದಕ್ಷಿಣ ದಿಕ್ಕು ದ್ವಾರಗಳುಂಟು. ಪ್ರಾಕಾರಗಳಿಗೆ ಕೆಲವು ದೂರದಲ್ಲಿ ಮತ್ತೊಂದು ಪ್ರಾಕಾರದೊಳಭಾಗವು ಭದ್ರವಾಗಿರುವದು. ಶಿಲಾಸ್ಥಾಪಿತಗಳಾದ ಪ್ರಕಾರಗಳಲ್ಲಿ ಬುರುಜುಗಳಿಂದ ಚಿತ್ರವಿಚಿತ್ರ ಕೆಲಸಗಳಿಂದದರಲ್ಲಿ ನಾಜೂಕ ಧಾತುವಿನಂತೆ ಈಗಾದರೂ ಬಾಜಿಸುತ್ತಿರುವದು. ರಾಜ್ಯವೈಭವಗಳನ್ನು ಶೂನ್ಯವಾದ ಗುರುತುಗಳು ತಿಳಿಯಬರುವಂತೆ ಪ್ರಾಕಾರದಲ್ಲಿ ಅನೇಕ ರಾಜವೈಭವಂಗಳಿಂದತಿ ರಮ್ಯವಾಗಿ ಕೇಳಿಕಾಗೃಹಗಳು ವೈಭವ ಮೊದಲಾದ ಮಹಾಪ್ರಭಾವ ಚಿತ್ರಕಳಾ ಕೆಲಸಗಳು ಅಂತಃಪುರ ಪೂಜಾಸ್ಥಾನಂಗಳು ಅನೇಕ ದೇವಾಲಯಗಳು ವಿವಿಧ ಶಸ್ತ್ರಾಸ್ತ್ರ ಪ್ರಪೂರ್ಣವಾದ ಗರುಡಿ ಸಾಲುಗಳು ಅಶ್ವಗಜಾಗಾರಗಳು ಪರ್ವತಶಿಖರಗಳಂತೆ ಗೋಪುರಗಳು, ಪ್ರಕಾಶಿಸುತ್ತಿರುವವು. ಈ ಎರಡು ಪ್ರಾಕಾರಗಳಲ್ಲಿಯು ರಚನಾಕಾರವಾಗಿ ಪಟ್ಟಣಗಳು ಇದ್ದಂತೆ ಚರಿತ್ರಕಾರರು ಹೇಳುವರು. ಎರಡನೇ ಪ್ರಾಕಾರದಲ್ಲಿ ಪ್ರಸ್ತುತ ಭಿನ್ನವಾಗಿ ಬಿದ್ದಿರುವ ಒಂದು ಮಹಾದೇವಾಲಯ ಚಿನ್ಹಗಳು ತಿಳಿಯಬರುವವು. ಆಲಯದ ಉತ್ತರ ದಕ್ಷಿಣ ಭಾಗದಲ್ಲಿ ಮೇಲುಚಿತ್ರಗಳಾದ ಶಿಲ್ಪಚಾತುರ್ಯಗಳನ್ನು ಹಿಡಿದು ನೋಡತಕ್ಕ ವೈಭವದ ಲಕ್ಷಣ

ಹಿಂದೂ ದೇಶದೊಳಗೊಂದು ಅಪೂರ್ವವಾದ ಮಹಾ ನಿರ್ಮಾಣವು ಪ್ರಸಿದ್ಧವಹಿಸಿ ಇರಬಹುದೆಂದು ಗೋಚರಿಸದೆ ಇರದು. ಹಿಂದುಗಳ ಮೇಲೆ ದ್ವೇಷಿಗಳಾದ ಮಹಮ್ಮದೀಯ ಪ್ರಭುಗಳು ಸಹ ಶಿಲ್ಪಿಕಳಾ ಚಾತುರ್ಯಗಳಿಗೆ ಆಶ್ಚರ್ಯ ಹೊಂದಿ ಅವುಗಳನ್ನು ನಿರ್ಮೂಲ ಮಾಡಲಿಕ್ಕೆ ಕೈಬಾರದೆ ಬಿಟ್ಟು ನಮಗೆ ಉಳಿದುಕೊಟ್ಟರು. ಈ ಪ್ರಾಕಾರದೊಳಗಿನ ಭೋಜನಶಾಲೆಗಳು ಇವುಗಳ ವಿಸ್ತಾರಗಳು ಚಿತ್ರಕೆಲಸಗಳು ತಿಳಿಯುವಂತೆ ಕಳಾವೈಶಾಲ್ಯಂಗಳು ಭೋಜನಸಾಲು ಮಹಮ್ಮದೀಯ ನಿರ್ಮಾಣವೆ ಎಂದು ಭ್ರಮಿಸುವಂತೆ ತೋರ್ಪಡುವದಲ್ಲದೆ ಇಂತಹ ನಿರ್ಮಾಣವೇ ಮದುರೆಯಲ್ಲಿ ಇದ್ದು ಮಹಮ್ಮದೀಯ ಪ್ರಭುಗಳಿಂದ ನಿರ್ಮಾಣಗಳು ಅಲ್ಲವೆಂದು ನಿಶ್ಚಯ ಮಾಡುವದಕ್ಕೆ ಅವಕಾಶ ಹುಟ್ಟುವದು. ಈ ಓರುಗಲ್ಲಿನ ಪ್ರದೇಶದಲ್ಲಿ ಸುತ್ತಲು ವ್ಯವಸಾಯ ವೃದ್ಧಿಗೆ ಕೂಡಿದ ಬೆಳೆಗಳ ಕಾಲುವೆಗಳು ನಿರ್ಮಿಸಲ್ಪಟ್ಟಿವೆ. ಇದು ಪೂರ್ವದಲ್ಲೊಂದು ಸಾರೆ ಹಿಂದು ಸಾಮ್ರಾಜ್ಯವಾಗಿ ಸೌಜನ್ಯಗಳಿಂದಲೂ, ಪ್ರೇಮ ಪ್ರಜಾವಾತ್ಸಲ್ಯಗಳಿಂದಲೂ, ನಿರೂಪಮಸಂದರ್ಪಗಳಿಂದಲೂ, ಪ್ರಸಿದ್ಧ ಹೊಂದಿದ ವೀರಮತಿ, ವೀರಪತ್ನಿ, ವೀರಪತಿವ್ರತಾ ರುದ್ರಮಾ ದೇವಿಗೆ ಆವಾಸಭೂಮಿಯಾಗಿ ತುರುಷ್ಕ ಸೈನ್ಯಸಂಘಟ್ಟನಗಳಿಂದ ಭಗ್ನವಾಗದಂತೆ ರಕ್ಷಿಸಿದ ನಿರ್ದುಷ್ಟ ನಿರ್ಮಲ ದೇಶಭಕ್ತಿ ವೀರಾದಿವೀರನಾದ ವಿದ್ಯಾನಾಥ ನಾಥ ಮಹಾಕವಿ ಪ್ರಮುಖ ಪಂಡಿತ ಮಂಡಲಿ ಸನ್ಮಾನಕರ್ತ ಮಹಾ ವಿದ್ಯಾಭಿಮಾನಿಯಾದ ಮಹಾ ಕವಿಯಾದ ರಾಜಕೀರ್ತಿಪರನಾದ ಪ್ರತಾಪರುದ್ರ ಮಹಾರಾಜನ ರಾಜಧಾನಿಯಾಗಿ ತ್ರೈಲಿಂಗ ಸಾಂದ್ರಲಕ್ಷ್ಮಿಗೆ ತಿಲಕವಾಗಿ ಪ್ರಕಾಶಿಸಿ ಶಿಲ್ಪಿ ನಿರ್ಣಯಗಳಿಗೆ ಕಳಾನೈಪುಣ್ಯಗಳಿಗೆ ವಿಹಾರಸ್ಥಾನವಾಗಿ ಈ ಮಹಾ ನಗರವು ಈಗ ಸುಮಾರು ೩೦೦ ಸಂವತ್ಸರ ರೂಪರಹಿತವಾಗಿ ಮನುಷ್ಯನಿವಾಸಕ್ಕೆ ಅಯೋಗ್ಯವಾಗಿ ಕ್ರೂರಮೃಗಗಳಿಗೆ ಸ್ಥಾನವಾಗಿ ಅರಣ್ಯಮಯವಾಗಿ ಭೀತಿಗೊಳಿಸುತ್ತಲಿದೆ.

ಹೋಗಿ, ದೊಡ್ಡ ದೊಡ್ಡ ಸರದಾರರ ಯಾವತ್ತೂ ಕಂಡು, ಭೇಟಿ ಆಗಿ, ದೋಸ್ತಿ ಪ್ರಸ್ತಾಪವನ್ನು ಮಾಡಿ, ಭಾಷಾಪತ್ರಿಕೆಯನ್ನು ಪೂರ್ವೋತ್ತರವಾಗಿ ಮಾತನಾಡಿ, ಒಪ್ಪಿ, ಉಭಯ ಕಡೆಯಿಂದಲೂ † ಭಾಷಾಪತ್ರಿಕೆ ಬರೆಸಿದ ಕ್ರಮವೆಂತೆಂದರೆ—

"ಶ್ರೀ ಇಂಡಿಯ ಪ್ರಾಂತ್ಯಕ್ಕೆ ಬಹುಮಾನ ಪಟ್ಟ, ಇಂಗ್ರೇಜಿ ಕುಂಪಣಿ ಹೆಸರಿಗೆ ತಲಚೇರಿ ಕೋಟೆ ಮ್ಯೆಯೊರು ರಾಬರ್ಟ್ ಟೆಲೆರು, ಸೆಂಗುಂದಮಾರರು ಕೊಡಗಿನ ಹಾಲೇರಿ ವೀರರಾಜ ಅರಸುಗಳು, ತಮ್ಮ ಒಳಿಗೆ ಒಪ್ಪಿಗೆ ಆಗಿ, ಬರೆದುಕೊಟ್ಟ ನಂಬಿಗೆ ಕಾಗದದ ವಿವರಃ—

ಒಂದನೇ ಕಲಂಃ— ಸೂರ್ಯ ಚಂದ್ರ ಇರುವ ಪರ್ಯಂತರಕ್ಕೂ ಇಕ್ಕರ್ತರ ಕಡೆ ವಿಶ್ವಾಸಕ್ಕೂ ಹೆಚ್ಚುಕಡಮೆ ಬಾರದಂತೆ ನಡೆದು ಬರುವಂಥಾದ್ದಕ್ಕೆ, ಹೆಚ್ಚುಕಡಿಮೆ ಬರಲಿಕ್ಕಿಲ್ಲ.

ಎರಡನೇ ಕಲಂಃ— ಟೀಪು ಸುಲ್ತಾನನಿಗೂ, ಅವನ ಕಡೆಯಿರುವ ಪಕ್ಷದವರು ಯಾವತ್ತು, ಎರಡು ಕಡೆಯವರು ಅವರು ನಮಗೆ ಶತ್ರುಯೆಂತ ಭಾವಿಸಿಕೊಂಡು ಬರಬೇಕು. ಇಂಗ್ರೇಜರಿಗೂ ಅವನಿಗೂ ನಡೆದು ಬರುವಂಥ ಲಡಾಯಿಯಲ್ಲು, ಅರಸುಗಳಿಗೆ ಸಮಯ ಸಿಕ್ಕಿದರೆ, ಶತ್ರುವಿಗೆ ತಮ್ಮಿಂದ ಆಗುವಷ್ಟು ನಾಶ ಮಾಡುವದಕ್ಕೆ ಹಾಜರಾಗಿರಬೇಕು. ಬೇರೆ ಕೊಡಗು ಮಲೆ ದಾರಿ ಇಂಗ್ರೇಜರ ಪಾಳಯ ಒಂದು ಸಮಯಕ್ಕೆ ಹೋಗುವಾಗ್ಗೆ ಸನ್ಮತವಿರಬೇಕು. ಯಾತರಿಂದ ಎಂದರೆ, ಟೀಪು ಸುಲ್ತಾನನ ಕಡೆಗೆ ಹೋಗುವ ಸಮಯ ಬಂದರೆ, ಆವಾಗ್ಗೆ ನಮ್ಮ ಪಾಳಯದವರಿಗೆ ರಾತೀಪು ಜೀನಸು, ನಿಮ್ಮ ಊರಲ್ಲಿ ಇರುವಂಥಾದ್ದು ಸಕಾಯ ಕ್ರಯಕ್ಕೆ ಕೊಡಿಸಿ ಸಹಾಯ ಮಾಡಬೇಕು. ಘಟ್ಟದ ಮೇಲೆ ಟೀಪು ಊರಲ್ಲು ನಮಗೂ ಆತಗೂ ಲಡಾಯಿ ಆಗುವಾಗ್ಗೆ, ರಾಜರು ತಮಗೆ ಕೂಡಿದಷ್ಟು ಬಲ ತೆಗೆದುಕೊಂಡು, ಇಂಗ್ರೇಜರ ಕಡೆಯಲ್ಲು ಕೂಡಿಯಿರ ಬೇಕು.

ಮೂರನೇ ಕಲಂಃ— ನಮ್ಮ ರಾಜ್ಯದಲ್ಲಿ ಆಗುವಂಥ ಸರಕು, ಕುಂಪಣಿಗೆ ಆಗುವಂಥಾ ಸರಕು ಮರ್ಯಾದೆಯ ಪ್ರಕಾರ ಸಕಾಯ ಕ್ರಯಕ್ಕೆ ಕುಂಪಣಿಗೆ ಕೊಡುವ ಬಗ್ಗೆ, ಒಪ್ಪಿಗೆ ಆಗಿ ಇದ್ದೇವೆ. ಬೇರೆ ಟೋಪಿಕಾರ ಜಾತಿಗೆ ಯಾರಿಗೂ ವ್ಯಾಪಾರ ಮಾಡುವುದಕ್ಕೆ ಒಪ್ಪಿಗೆ ಇಲ್ಲ.

---

† ಈ ಕರಾರಿನ ವಿವರಗಳು ಅ- ಪ್ರತಿಯಲ್ಲಿ ಕಂಡುಬರುವದಿಲ್ಲ.

ನಾಲ್ಕನೇ ಕಲಂ:— ಕುಂಪಣಿಗೆ ಅನ್ಯೋನ್ಯವಿಡಿದು ನಡೆದು ಬರುವಂಥ ಅರಸುಗಳ ಪ್ರಕಾರಕ್ಕೆ, ಟೀಪು ಸುಲ್ತಾನನ ಒಂದು ಹುಕುಂ ನಿಮ್ಮ ಮೇಲೆ ನಡೆಯದಂತೆ, ಕುಂಪಣಿಯಿಂದ ಆಗುವಂಥ ಪ್ರಯತ್ನ ಮಾಡಿ, ನಿಮ್ಮನ್ನು ಇರಿಸಿಕೊಳ್ಳುತ್ತೇವೆ. ಟೀಪುಗೂ ನಮಗೂ ಒಂದು ವೇಳೆಗೆ ಒಳ್ಳಿತಾಗಿ ಹೋಗುತ್ತದೆಯಾದರೆ, ತಹಾನಾಮೆ ಬರೆದು ಇಡುವಾಗ್ಗೆ, ಅದರಲ್ಲು, ಕೊಡಗಿನ ರಾಜರು ಇಂಗ್ರೇಜ ಕುಂಪಣಿಗೆ ಅನ್ಯೋನ್ಯವಿಡಿದು ನಡೆದು ಬರುವಂಥಾದ್ದು ಅವರ ಮೇಲೆ ಆತು ಬಂದು ಜೋರಾವರಿಯು ನಡೆಸದಂತೆ ಅದರಲ್ಲಿ ಬರೆಸೇವು.

ಐದನೇ ಕಲಂ:— ರಾಜರಿಗೆ ಒಂದು ಸಮಯಕ್ಕೆ ಇಲ್ಲಿಗೆ ಬರಬೇಕಾದರೆ, ಅವರ ಕುಟುಂಬ ಮುಂತಾಗಿ, ಆ ಊರಲ್ಲಿರುವ ರೈತರ ಕುಟುಂಬ ಮುಂತಾಗಿ, ಘಟ್ಟದ ಕೆಳಗೆ ಬಂದಲ್ಲಿ, ಇಲ್ಲಿಂದ ಒಂದು ಗಾಡದಿ ಶಿಪಾಯಿಗಳ ಕಳುಹಿಸಿಕೊಟ್ಟು, ದಾರಿಮಾರ್ಗದಲ್ಲಿ ಬಂದು ಅಟಕ ಆಗದಂತೆ ತಂದು, ತಲಚೇರಿಯಲ್ಲು ಒಂದು ಮನೆ ಸಹ ಬಿಡಿಸಿ ಕೊಟ್ಟು, ರಾಜಸ್ಥಿತಿ ಸೌಖ್ಯವಾಗುವ ಪರ್ಯಂತರ ರಕ್ಷಣ್ಯ ಮಾಡಿ ನಿಲ್ಲಿಸಿಕೊಳ್ಳುತ್ತಾ ಇದೆ. ಪುನಃ ರಾಜಸ್ಥಿತಿ ಸೌಖ್ಯವಾಗುತ್ತಲೇ ನಿಮ್ಮ ಊರಿಗೆ ಸಂಗಡ ಮನುಷ್ಯರ ಕೂಡಿಸಿ, ಚೆನ್ನಾಗಿ ಕಳುಹಿಕೊಡುವಲ್ಲಿ ಅಂತರವಿಲ್ಲ.

ಈ ಕಾರ್ಯಕ್ಕೆ ಅನ್ಯೋನ್ಯ ನಡೆದು ಬರುವಲ್ಲಿ, ಎಂದಿಗೂ ಹೆಚ್ಚು ಕಡಮೆ ಬಾರದಂತೆ, ಇಕ್ಕರ್ತರಲ್ಲು ಅಂತರ ಬರಲಿಕ್ಕಿಲ್ಲ. ಈ ಕಾರ್ಯಕ್ಕೆ ಎರಡು ಕಡೆಯವರಿಗೂ ಸಾಕ್ಷಿ:— ಶ್ರೀ ದೇವರು, ಸೂರ್ಯ, ಚಂದ್ರ, ಭೂಮಿ ಸಾಕ್ಷಿ. ಸಾಧಾರಣ ಸಂವತ್ಸರದ ಆಶ್ವೀಜ ಬ. ೫ ರಲ್ಲು ತಲಚೇರಿಯಲ್ಲಿರುವಂಥ ಮೈಯೂರ ರಾಬರ್ಟ ಟಿಲೇರರು ಕುಂಪಣಿ ಹೆಸರಿಗೆ, ಬಂಗಾಳದ ಗೌರ್ನರ ಜನರಲರ ಹೆಸರಿಗೂ, ಮುಂಬಯಿ ಗೌರ್ನರರ ಹೆಸರಿಗೂ, ತಲಚೇರಿಯಲ್ಲು ಇರುವಂಥ ಮೈಯೂರ ಕೌಂಸಲದಾರರೂ, ಕೊಡಗಿನ ಹಾಲೇರಿ ವೀರರಾಜೇಂದ್ರ ರಾಜರೂ ಒಂದು ಮನಸಾಗಿ, ಈ ವರ್ಷ, ಈ ತಿಂಗಳು ದಿನದಲ್ಲು ಬರೆದು ಇಟ್ಟ ನಿಶ್ಚಯ ಕಾಗದಕ್ಕೆ ನಮ್ಮ ಹೆಸರಲ್ಲು ಗುರುತು ಹಾಕಿ, ಕುಂಪಣಿ ಮೊಹರು ಮಾಡಿ, ಎರಡು ಕಡೆಗೂ ಬರೆದು ಕೊಟ್ಟು ಇದ್ದೇವೆ. ಶ್ರೀ. ಶ್ರೀ. ಶ್ರೀ. ಶ್ರೀ."

ಈ ಮೇರೆ ಉಭಯ ಕಡೆಯಿಂದಲೂ ಎರಡು ಭಾಷಾ ಪತ್ರ ಬರೆಸಿ, ಅದಕ್ಕೆ ಉಭಯ ಕಡೆ ಅರಮನೆ ಮೊಹರ ದಸ್ಕತು ಮಾಡಿ,

ಅದರಲ್ಲು ಒಂದನ್ನು ತಲಚೇರಿಯಲ್ಲು ಮಡಗಿ, ಮತ್ತೊಂದು ವೀರರಾಜೇಂದ್ರ ಒಡೆಯರವರ ಕಯ್ಯಾ ಕೊಟ್ಟು, ಜನರಾಲ್ ಸಾಹೇಬರು ಕಳುಹಿದ ಕುದುರೆಯನ್ನು ಕೊಟ್ಟು, ಉಭಯ ಕಡೆಯಿಂದಲೂ ಉಡುಗರೆ ಉತ್ಸಾಹವನ್ನು ಮಾಡಿ ಪುನಃ ಮಹಾರಾಜರು ಹೊರಟು ಬರುವಾಗ್ಗೆ, ಅದೇ ಕಪ್ಟಿನ್ ಬ್ರೌನ್ ಸಾಹೇಬರನ್ನೂ ಒಂದು ಕುಂಪಣಿ ಜನರ (ನ್ನು) ಸಹ ರಾಜರ ಸಂಗಡ ಕೂಡಿಸಿಕೊಟ್ಟು ಕೊಡಗಿನ ರಾಜ್ಯಕ್ಕೆ ಕಳುಹಿಸಿಕೊಟ್ಟರು. ಅದೇ ಮೇರೆಗೆ ದೊರೆಗಳವರು ಕೆಪ್ಟಿನ್ ಬ್ರೌನ್ ಸಾಹೇಬರವರು ಸಹ ಬಂದು ಅರಮನೆ ಸೀಮೆಗೆ ತಲಪಿದ ಬಳಿಕ ಆ ಕಪ್ತನ್ ಸಾಹೇಬರು ತಿರುಗಿ ಹೋಗುವಾಗ್ಗೆ ರಾಜರವರ ಕ್ಷೇಮ ಸಮಾಚಾರಕ್ಕೆ ಕಾಗದವನ್ನು ಬರೆಸಿ ತೆಗೆದುಕೊಂಡು ಹೋಗಿ ತಲಚೇರಿ ಕೋಟೆ ಸರದಾರರು ಛೀಫ್ ರಾಬರ್ಟು ಟೆಲೇರಿಸಾಹೇಬರಿಗೆ ಕೊಟ್ಟರು.

ಅಷ್ಟರಲ್ಲಿ ಮಡಿಕೇರಿ ಕೋಟೆಯಲ್ಲು ಇರುವ ಟೀಪೂ ಸುಲ್ತಾನರ ಕಡೆ ಮಂದಿಗೆ ರಸ್ತು (ವಗೈರೆ) § ಡೇರಿ ಹೋಗಿ, (ಮಾರ್ಗ) ± ಬಂದಾಗಿ ಹೋದ್ದರಿಂದ, ಅಲ್ಲಿ ಇದ್ದ ಜಾಫರ (ಕು) ಲ್ಲೀ ಬೇಗು ಕಿಲ್ಲೇದಾರನು ಈ ರಸ್ತು ತೀರಿಹೋದ ಪೂರ್ವೋತ್ತರವಾಗಿ ಅರ್ಜಿ ಬರೆದು, ಕಳ್ಳಮಾರ್ಗವಾಗಿ ಟೀಪೂ ಸುಲ್ತಾನರ ಬಳಿಗೆ ಕಳುಹಿಸಿದ್ದರಿಂದ, ಅವರು, ಖಾದರ್‌ಖಾನ್ (ಕೇಸರಿ) * ಸಂಗಡ ಭಾರಿ ಪವುಜನ್ನು ಕೊಡಿಸಿ, ಕೊಡಿಯಾಲದ ಪವುಜುದಾರ [ನತಡಕ] || ಮುಹಮ್ಮದ್ ಹುಸೇನಿ ಬಿಂತುರಿ ರಸ್ತಿನ ಸಾಮಾನು ಸರಂಜಾಮು ಸಹವಾಗಿ ಮಡಿಕೇರಿಗೆ ಕಳುಹಿಸಿದಲ್ಲಿ, ಅದೇ ಮೇರೆ ಖಾದರ್‌ಖಾನ್ [ಕೇಸರಿ] * ಭಾರೀ ಪವುಜು ಸಮೇತ ರಸ್ತು ತೆಗೆದುಕೊಂಡು, ಕೊಡಗಿನ ಸೀಮೆ [ಅರ್ದು] × ಮುಳ್ಳುಸೋಗೆ ಹೊಳೆ ಕಡ ದಾಟಿ, ಈಚೆಗೆ ತಡಿಯಲ್ಲು ಇಳಕೊಂಡಲ್ಲಿ, ಈ ಸಮಾಚಾರವನ್ನು ವೀರ ರಾಜೇಂದ್ರ ಒಡೆಯರವರು ಕೇಳಿ, ಕೊಡಗುಮಂದಿಯನ್ನು ತೆಗೆದುಕೊಂಡು, ಖಾಸಾ ತಾವೇ ಹೊರಟು ಹೋಗಿ, ಆ ರಸ್ತು ಬರುವ ಮಾರ್ಗ

§ ಮುಸ್ತೈದೆ

± ಬ ಪಥಮಾರ್ಗ

* ಕೇಸರಿ

|| ಬ ನತಡಕಾನ್.

× ಬ ಅದರು

ದಲ್ಲಿ ಬೂದಿಚಾವಡಿ ಎಂಬ [ಮಾರ್ಗ] = ದಲ್ಲಿ ಒಡ್ಡು ತಳಿ ಕಟ್ಟಿ, ಲಡಾಯಿಕ್ಕೆ ಕಾದು ಇದ್ದರು. ಅಷ್ಟರಲ್ಲಿ ಆ ಖಾದರು ಖಾನನು ಪವುಜು ಸಮೇತ ರಸ್ತು ಸಾಗಿಸಿಕೊಂಡು ಮಾರಣೇ ದಿವಸ ಬೆಳಿಗ್ಗೆ ೨॥ ಗಳಿಗೆ ಹೊತ್ತಿನಲ್ಲಿ ಬೂದಿಚಾವಡಿಗೆ ಮುಟ್ಟಿದಲ್ಲಿ, ಜಗಳ ಮಾಡಿ ಆ ಒಡ್ಡಿಗೆ ಹಲ್ಲಾ ಹತ್ತುವದಕ್ಕೆ ಬಂದಲ್ಲಿ, ಕೊಡಗು ಜನಕ್ಕೂ ಆ ಪವುಜಿಗೂ ಹೇರಳ ಲಡಾಯಿವಾಗಿ, ಕೋವಿ ಗುಂಡಿನ ಲಡಾಯಿ ನಿಂತು ಕೈಬೆರಸಿ ಕತ್ತಿಯಿಂದ ೫ ಗಳಿಗೆ ಪರಿಯಂತರ ಲಡಾಯಿವಾಗಿ, ಟೀಪೂ ಸುಲ್ತಾನರ ಕಡೆ ೫೦೦ ಜನ ಮೃತವಾಗಿ ೨೦೦ ಜನಕ್ಕೆ ಜಕ್ಕಮಿಯಾಗಿ, ಕಡೆಗೆ ಪೆಟ್ಟು ತಡೆಯಲಾರದೆ ಓಡಿಹೋಗಿ, ಖಾದರ್‌ಖಾನ [ಕೇಸರಿ] ‖ ಯು ಕೆಲಮಂದಿ ತೆಗೆದುಕೊಂಡು ಪಚಾಡಿಯಲ್ಲು ನಿಂತು ಇದ್ದಲ್ಲಿಗೆ ಕೂಡಿದರು. ಆ ಖಾದರಖಾನನು ಈ ಗಾಬರಿಯಾಗಿ ಬಂದ ಮಂದಿಗೆ ಸಮಾದಾಯಿಸಿ, ಯಾವತ್ತೂ ದಂಡು ಒಟ್ಟುಗೂಡಿಕೊಂಡು, ಅಲ್ಲಿಗೆ ಸಮೀಪದಲ್ಲಿ ಇದ್ದ ಚಿಕ್ಕದು ಒಂದು ಗುಡ್ಡೆ ಹತ್ತಿ, ಅದರಲ್ಲು ದಂಡು ಇಳಕೊಂಡು, ದಂಡಿನ ಸುತ್ತ ರಸ್ತು ತುಂಬಿದಂತ (ಹ) ಗೋಣಿಗಳನ್ನು ಕೋಟೆ ಕಟ್ಟಿದ ಹಾಗೆ ನಿಟ್ಟುವಟ್ಟಿ, ಅದರ ಆಶ್ರಯದ ಒಳಗೆ ಹೊಕ್ಕೊಂಡು, ಸಾಯಂಕಾಲ ಪರ್ಯಂತರ ಜಗಳ ಮಾಡಿದನು. ಆ ಬಳಿಕ [ದಂಡನ್ನು] × ಪುನಃ ಹೋಗದಂತೆ ದಂಡಿನ ಸುತ್ತಲೂ ದೊರೆಗಳು ತಮ್ಮ ಕಡೆ ಕೊಡಗು ಮಂದಿಯನ್ನು ಮುತ್ತಿಗೆ ಹಾಕಿಸಿದಲ್ಲಿ, ಕೊಡಗು ಮಂದಿಗೆ ಗೊತ್ತುಗಾರರಾಗಿ ಇದ್ದವರು ರಾಜರ ಬಳಿಗೆ ಬಂದು,— "ನಮಗೆ ಅಪ್ಪಣೆ ಆದರೆ ಈ ರಾತ್ರೆ ಬೆಳಗಿನ ಜಾವದಲ್ಲಿ ಅವರ ದಂಡಿನ ಮೇಲೆ ಬಿದ್ದು ಒಂದೊಂದು ಕೋವಿ ಗುಂಡು ಇಟ್ಟು, ಆ ಮೇಲೆ ಕತ್ತಿಯಿಂದ ಕಡಿದು ಅವರ ದಂಡನ್ನು ಮುಳುಗಿಸುತ್ತೇವೆ. ಆ ದಂಡಿನಲ್ಲು ಇರುವಂತಾ ಸಾಮಾನು ಸರಂಜಾಮು ಏನು ಇದ್ದಾಗ್ಯೂ ಲಡಾಯಿ ಮಾಡುವ ಮಂದಿಗೆ ಮಾಫು ಕೊಡಿಸಬೇಕು."— ಎಂಬದಾಗಿ ಅರಿಕೆಮಾಡಿ ಅಪ್ಪಣೆ ಕೇಳಿದಲ್ಲಿ, ಆ ಮಾತಿಗೆ ರಾಜರು ಒಡಂಬಟ್ಟು ಅಪ್ಪಣೆ ಕೊಡಿಸಿದ ವಿವರಃ— "ಪ್ರಾಕು ನಾವು ಟೀಪು ಸುಲ್ತಾನರ ಇಲಾಖೆ ಪಿರಿಯಾಪಟ್ಟಣದಲ್ಲು ಇರುವಾಗ್ಗೆ, ಒಂದು ದಿನ ಪಿರಿಯಾಪಟ್ಟಣದ [ಪ್ರಾಂತ್ಯ] ± ಕ್ಕೆ ಹೋಗಿ ಬೇಟೆ ಆಡಿ

---

= ಬ ಜಾಗ

‖ ಬ ಕೇಸರಿ

× ಬ ದಂಡಿನ ಜನ

± ಬ ಪಾಶ್ವ೯ಂಕ್ಕೆ

ಸಾಯಂಕಾಲಕ್ಕೆ ಪುನಃ ಹೋಗುವದಕ್ಕೆ ಸಂದರ್ಭ ಆಗದೆ ಉಳಕೊಂಡು ಇದ್ದಲ್ಲಿ, ಖಾದರಖಾನ [ಕೇಸರಿ] ಯು ನಮ್ಮ ಬಳಿಗೆ ಬಂದು, ನಮ್ಮನ್ನು ಕರಕೊಂಡು ಕುಶಾಲ್‌ನಗರಕ್ಕೆ ಹೋಗಿ, ಬೆಳಿಗ್ಗೆ ಸಾಯಂಕಾಲ ಎರಡು ಹೊತ್ತಿನ ಅಡಿಗೆಗೆ ಸೋಬಸ್ಕಾರವನ್ನು ಕೊಟ್ಟು ಇದ್ದಾನೆ. ಈ ಸಮಯದಲ್ಲಿ ನಾವು ಅವನ ಪ್ರಾಣ ಉಪಕಾರ ಮಾಡಬೇಕಾದ್ದರಿಂದ, ನೀವು ಹೇಳಿದ ಹಾಗೆ ಬೆಳಗಿನ ಜಾವದಲ್ಲಿ ಟೀಪೂ ಸುಲ್ತಾನರ ಪವುಜಿನ ಮೇಲೆ ಬಿದ್ದು ನಿಗ್ರಹಿಸಿ, ಆ ಖಾದರಖಾನ [ಕೇಸರಿ] † ಯೆಂಬ ಸರದಾರ ನನ್ನು ಪ್ರಾಣ ಬೆರಸಿ ನಮಗೆ ತಂದುಕೊಟ್ಟರೆ, ಆ ದಂಡಿನಲ್ಲಿ ಇದ್ದ ಸಾಮಾನು ಯಾವತ್ತೂ ನಿಮಗೆ ಮಾಫು ಕೊಡಿಸಬಹುದು."—ಎಂಬದಾಗಿ ಹೇಳಿ ದಲ್ಲಿ, ಆ ಗೊತ್ತುಗಾರರು ಹೇಳಿಕೊಂಡದ್ದುಃ--"ನಾವು ಕತ್ತಲೆ ವೇಳೆ ಯಲ್ಲಿ ಹೋಗಿ ಅವರ ದಂಡಿನ ಮೇಲೆ ಬಿದ್ದು ಕೈಬೆರಸಿ ಕಡಿಯು ವಾಗ್ಗೆ ಅವನ ಸರದಾರ ಖಾದರಖಾನ [ಕೇಸರಿ] † ಎಂತವ [ನು] ಎಂಬದಾಗಿ ನೆಪ್ಪು ಕಾಣತಕ್ಕದ್ದು ಹೇಗೆ? ಕಾಣದೆ ಮೋಸವಾಗಿ ಹೋದರೆ ಹೋಯಿತು. ಜೀವ ಸಹಿತ ಈ ಕಡೆ ಮುಂದಿಗೆ ಕೈಗೆ ಸಿಕ್ಕಿದರೆ ತಮಗೆ ತಂದು ಒಪ್ಪಿಸುತ್ತೇವೆ. "— ಎಂಬದಾಗಿ ಅರಿಕೆ ಮಾಡಿದಲ್ಲಿ, ಈ ಮಹಾರಾಜರು ಒಪ್ಪದೆ,— "ಹಾಗಾದರೆ ನಾವು ಮೂರಾವರ್ತಿ ಖಾದ ರಖಾನನ ಹೆಸರು ಹಿಡಿಸಿ ಕರೆಸುತ್ತೇವೆ. ಅವನ ಅದೃಷ್ಟ ಚೆನ್ನಾಗಿ ಇದ್ದು ಬಂದರೆ ಸರಿ. ಇಲ್ಲದಿದ್ದರೆ ನೀವು ಹೇಳಿದ ಮೇರೆ ನಾವು ಒಪ್ಪಿ ಇದ್ದೇವೆ. ಹಾಗೆ ಮಾಡಿ" — ಎಂಬದಾಗಿ ಅಪ್ಪಣೆ ಕೊಟ್ಟು, ಆ ಬಳಿಕ ಎರಡು ಜನ ಹತ್ತರ ಇದ್ದವರನ್ನು— "ಅವರ ದಂಡಿನ ಸಮೀಪಕ್ಕೆ ಹೋಗಿ, ಪ್ರಾಕು ದೊರೆಗಳು ಶಿಕಾರಿಗೆ ಬಂದಿದ್ದಾಗ್ಗೆ ಅಡಿಗೆ ಸೋಪ ಸ್ಕರ ಕೊಟ್ಟು ಉಪಕಾರ ಮಾಡಿ ಇದ್ದೀರಿ. ಆದ್ದರಿಂದ ನಿಮಗೆ ಪ್ರಾಣ ಉಪಕಾರ ಮಾಡಬೇಕೆಂಬದಾಗಿ ಮೋಹ ನಮ್ಮ ದೊರೆಗಳಿಗೆ ಹುಟ್ಟಿ ಇದೆ. ಈ ಸಮಯದಲ್ಲಿ ನೀವು ಶರಣಾಗತರಾಗಿ ದೊರೆಗಳ ಬಳಿಗೆ ಬಂದರೆ ಕ್ಷೇಮವಿದೆ. ಇಲ್ಲದಿದ್ದರೆ ಎರಡು ಗಳಿಗೆ ಒಳಗೆ ನಿಮ್ಮ ಪ್ರಾಣ ವ್ಯರ್ಥವಾಗುತ್ತದೆ."— ಎಂಬದಾಗಿ ಕರೆದು ಹೇಳುವಂತೆ ಅಪ್ಪಣೆ ಕೊಟ್ಟು ಕಳುಹಿಸಿದಲ್ಲಿ, ಆ ಜನ ಹೋಗಿ ಅದೇ ಮೇರೆ ಕರೆದು ಹೇಳಿ

† ಬ ಕೇಸಗಿ

ದಲ್ಲಿ, ಈ ಮಾತು ಕೇಳಿದಾಕ್ಷಣ ಖಾದರಖಾನ [ಕೇರಿ] = [ತಾಡು] ||
ಖಾನ, ಮುಹಮ್ಮದು ಹುಸೇನ ಬಿಂತೂರಿ, ಅಮಲ್ದಾರ ರಜಬಲ್ಲಿ ಸಹ
ಈ ನಾಲ್ವರೂ ತಮ್ಮ ದಂಡಿನಿಂದ ಹೊರಟು, ವೀರರಾಜೇಂದ್ರ ಒಡೆಯ
ರವರಿಗೆ ಶರಣಾಗತರಾಗಿ ಬಂದು ಕಂಡಲ್ಲಿ, ಆ ಖಾದರಖಾನನಿಗೆ ನಮ್ಮ
ದೊರೆಗಳು ಅಪ್ಪಣೆ ಕೊಟ್ಟದ್ದು— "ಒಂದು ದಿವಸ ನೀನು ನಮಗೆ ಉಪ
ಕಾರ ಮಾಡಿ ಇದ್ದೀಯಷ್ಟೆ! ಅದರ ಬದಲಿಗೆ ನಿಮಗೂ ನಿಮ್ಮ ನಂಟ
ರಿಷ್ಟರಿಗೂ ಮಾನ ಪ್ರಾಣ ಉಳಿಸಿ ಬಿಟ್ಟು ಕಳುಹುತ್ತ ಇದ್ದೇವೆ. ಉಳಿಕೆ
ಟೀಪೂ ಸುಲ್ತಾನರ ಕಡೆ ಪವುಜನ್ನು ನಿಗ್ರಹಿಸಿ, ರಸ್ತು ಸಾಮಾನು
ಯಾವತ್ತೂ ನಮ್ಮ ಮುಂದಿಗೆ ಮಾಫು ಕೊಡಿಸುತ್ತೇವೆ."— ಎಂಬದಾಗಿ
ಅಪ್ಪಣೆ ಕೊಟ್ಟಲ್ಲಿ, ಆ ಮಾತಿಗೆ ಖಾದರಖಾನನು ಅರಿಕೆ ಮಾಡಿಕೊಂಡದ್ದು—
"ಈ ದಂಡು ರಸ್ತು ಸಹ ಅತಂತ್ರವಾದ ಮೇಲೆ ಟೀಪೂ ಸುಲ್ತಾನರ ಬಳಿಗೆ
ಯಾವ ಮೇರೆ ಹೋಗಬೇಕು? ಇಲ್ಲಿಂದ ನನ್ನ ಪ್ರಾಣ ಉಳಿಸಿಕೊಂಡು
ಹೋದಾಗ್ಯೂ ನನ್ನ ಕುಟುಂಬ ಮಕ್ಕಳ ಪ್ರಾಣ ಸಹಿತ ಉಳಿಸಲಿಕ್ಕಿಲ್ಲ.
ಈ ಬಗ್ಗೆ ಪ್ರಾಣ ಉಳಿಸಬೇಕೆಂಬುದಾಗಿ ದಯವಿದ್ದರೆ, ದಂಡು ಸಾಮಾನು
ಸರಂಜಾಮು ಸಮೇತ ಪ್ರಾಣ ಉಳಿಸುವ ಮಾರ್ಗದಿಂದ ಬಿಟ್ಟುಕೊಟ್ಟರೆ,
ಈ ರಸ್ತನ್ನು ಮಡಿಕೇರಿ ಕೋಟೆಗೆ ಹಾಕಿ ಪುನಃ ಪವುಜು ಸಮೇತ ಪಟ್ಟ
ಣಕ್ಕೆ ಹೋದೇವು. ಈ ಮಾನ ಪ್ರಾಣ ಉಳಿಸಿದ ಉಪಕಾರ ನನ್ನ ಜೀವ
ಇರುವ ಪರಿಯಂತರ ಮರೆಯಲಿಕ್ಕೆ ಇಲ್ಲ"— ಎಂಬದಾಗಿ ಅರಿಕೆ ಮಾಡಿ
ಕೊಂಡದ್ದರಿಂದ, ಆ ಮಾತನ್ನು ರಾಜರು ಚಿತ್ತಕ್ಕೆ ತಂದುಕೊಂಡು, ಕಾರೀ
ಕಾರ ಕೊಂಗೇರ ಅಯ್ಯಣ್ಣಗೆ ಅಪ್ಪಣೆ ಕೊಟ್ಟ ವಿವರಃ—"ನೀನು ದಂಡಿನ
ಸಂಗಡ ಮಡಿಕೇರಿ ಪರಿಯಂತರ ಮಾರ್ಗದ ಒಡ್ಡುತಳಿಗಳಲ್ಲಿ ಇರುವ
ಕಾವಲು ಮಂದಿ ಏನಾದರೂ ಅಡ್ಡಿ ಹರಕತ್ತು ಮಾಡದೆ ಬಿಡುವಂತೆ
ತಾಕೀತು ಮಾಡಿಕೊಂಡು, ಹೋಗಿ, ಕಿಲ್ಲೆದಾರ ಜಾಫರಲ್ಲಿ ಬೇಗು
ನಮ್ಮ ಸಂಗಡ ಜಗಳ ಮಾಡತಕ್ಕವನೋ? ಅದಲ್ಲ, ಸಲ್ಲಾ ಮಾಡಿ
ಕೊಂಡು ಕೋಟೆ ಬಿಟ್ಟು ಈ ದಂಡಿನ ಸಂಗಡ ಹೋಗತಕ್ಕವನೋ? ಎಂಬ
ದಾಗಿ ಅವನ ಸಂಗಡ ಕೇಳಿ, ಅಲ್ಲಿಂದ ನಮ್ಮ ಗಡೀ ಮುಳ್ಳುಸೋಗೇ

---

ಬ = ಕೆಸಗಿ

ಬ || ನತ್ತಡ

ಹೊಳೆ ಕಡವಿನ ಆಚೆಗೆ ಈ ದಂಡನ್ನು ದಾಟಿಸಿಬಿಟ್ಟು, ಆ ವಿವರ ಅರಿಕೆ ಮಾಡು"—ಎಂಬದಾಗಿ ಅಪ್ಪಣೆ ಕೊಟ್ಟಲ್ಲಿ, ಆ ಅಯ್ಯಣ್ಣನು ಅದೇ ಮೇರೆ ಆ ದಂಡಿನ ಸಂಗಡ ಇದ್ದುಕೊಂಡು, ರಸ್ತಿನ ಸಾಮಾನನ್ನು ನಿಗವಾನಿಯಿಂದ ಮಡಿಕೇರಿಗೆ ತಲಪಿಸಿ, ದೊರೆಗಳು ಅಪ್ಪಣೆಕೊಟ್ಟು ಇದ್ದ ವಿವರವನ್ನು ಆ ಜಾಫರಲ್ಲಿ ಬೇಗನ ಸಂಗಡ ಹೇಳಿದಲ್ಲಿ, ಆತನು ಹೇಳಿದ್ದು— "ಕೋಟೆ ಯಲ್ಲು ಇದ್ದ ರಸ್ತು ಯಾವತ್ತೂ [ಮುಗೀತು ಎಂದು] § ನಾಳೆ ಕೋಟೆ ಯನ್ನು ಒಪ್ಪಿಸಿ [ಕೊಡ] = ಬೇಕೆಂಬ ಯೋಚನೆಯೊಳಗೆ ಇದ್ದೆನು. ಅಷ್ಟರಲ್ಲಿ ದೊರೆಗಳು ಖಾದರಖಾನನ ಮೇಲೆ ದಯವಿಟ್ಟು ರಸ್ತಿನ ಸರಂಜಾಮು ತಾವೇ ಮಡಿಕೇರಿ ಕೋಟೆಗೆ ತಲಪಿಸಿ ಇದ್ದಾರೆ. ಈ ಮೇರೆ ರಸ್ತು ಇದ್ದಂತೆ ಕೋಟೆ ಒಪ್ಪಿಸಿ ಬಿಟ್ಟು ನಾವು ಟೀಪೂಸುಲ್ತಾ ನರ ಬಳಿಗೆ ಹೋದರೆ, ನಮ್ಮ ಕುಟುಂಬ ಮಕ್ಕಳ ಪ್ರಾಣ ಉಳಿಸಲಿಕ್ಕೆ ಇಲ್ಲ. ಅದ ಕಾರಣ ದೊರೆಗಳ ಅಪ್ಪಣೆ ಆದರೆ ಈ ರಸ್ತು ತೀರುವ ಪರಿ ಯಂತರ ಇರುತ್ತೇವೆ. ಆ ಬಳಿಕ ಕೋಟೆಯನ್ನು ಒಪ್ಪಿಸಿ, ಅಪ್ಪಣೆ ಕೇಳಿಕೊಂಡು, ನಮ್ಮ ಖಾವಂದರ ಬಳಿಗೆ ಹೋದೇವು. ನಮ್ಮ [ಪ್ರಾಣ] ‖ ಉಳಿದೀತೆಂದು ಹೇಳಿಕೊಂಡ ಕಾರಣ, ಆ ಮಾತಿಗೆ ಕೊಂಗೇರ ಅಯ್ಯ ಣ್ಣನು [ಖಾದರ] * ಖಾನನ ಸಂಗಡ ಪುನಃ ಹೋಗಿ, ಅವರ ದಂಡನ್ನು ಸರಹ[ದ್ದು] ± ದಾಟಿಸಿ ಬಿಟ್ಟು, ತಾನು ಮಹಾರಾಜರ ಬಳಿಗೆ ಬಂದು [ಶ್ರುತ] [] ಪಡಿಸಿದನು. ಅತ್ತಲಾಗಿ ಟೀಪೂಸುಲ್ತಾನರು ಮಹಾ ಕೋಪ ದಿಂದ ತಮ್ಮ ಯಾವತ್ತೂ ಪವುಜು ತೆಗೆದುಕೊಂಡು ಬೆಟ್ಟ ಕೋಟೆಗೆ ಮೋರ್ಜಾ ಹಾಕಿ, ಲಡಾಯಿ ಮಾಡಿ, ಹಲ್ಲಾ ಹತ್ತಿ, ಆ ಕೋಟೆ ತೆಗೆದು ಕೊಂಡು, ಅದರಲ್ಲಿ ಇದ್ದಂತಾ ಪಿರಂಗಿ [ಗಳು] × ಮುಂತಾದ ಸಾಮಾನು ಯಾವತ್ತೂ ಪಟ್ಟಣಕ್ಕೆ ಸಾಗಿಸಿ, ಆ ಕೋಟೆಯನ್ನು [ಅಗೆದು] † ನೆಲ

---

§ ಬ ಮುಗಿದು ಹೋಗಿಯಿತ್ತು. ಇಂದು

= ಬ ಹೋಗ

‖ ಬ ಅರ್ಥಮಾನ ಪ್ರಾಣ

* ಬ ಅಲ್ಲಿ ಇದ್ದ ಆ ಖಾದರ

± ಬ ದ್ದಿನ ಮುಳ್ಳುಸೋಗೆ ಕಡ

[] ಬ ಆ ವಿವರ ಯಾವತ್ತು ಶ್ರುತ

× ಬ ಗಳು ಗುಂಡುಗಳು

† ಬ ಹುಡಿಗುಟ್ಟಿ ಅಗೆದು

ಸವು ಮಾಡಿ, ಅದಕ್ಕೆ ಸೇರಿದ ಸೀಮೆಯನ್ನು ಲೂಟಾಯಿಸಿ, ಹೇರಳ ಹೆಣ್ಣು ಗಂಡು ಸೆರೆ ಹಿಡಿದು, ಮನೆಗಳಿಗೆ ಬೆಂಕಿಹಾಕಿ, ಪವುಜು ಸಮೇತ ಪಟ್ಟಣ [ಕ್ಕೆ] || ಹೋದರು.

ಆ ಬಳಿಕ ಕೆಲವು ದಿವಸ ಕಳೆದ ಮೇಲೆ, ಬೊಂಬಾಯಿ ಗೌನರ್ ರಾಬರ್ಟ್ಸ ಅಬ್ರಾಕರಂಬಿ ಸಾಹೇಬ ಬಹದ್ದರವರು ಪೌಜುಸಮೇತ [ತಲ] = ಚೇರಿಯಲ್ಲು ಇಳಕೊಂಡು, ಕಣ್ಣೂರುಬೀಬಿ ಮಾಡಿದಂಥಾ ಮೋಸದ ವಿವರ [ವನ್ನು ಕೇಳಿ, ಆ] * ಜನರ ಸ್ಥಾನವನ್ನು ತೆಗೆದುಕೊಂಡು ಸ್ಥಾನ ಭ್ರಷ್ಟತ್ವ ಮಾಡಿ ಹಿಡಿದು ಬೊಂಬಾಯಿಗೆ ಕಳುಹಿಸಬೇಕೆಂದು ನಿಶ್ಚಯಿಸಿ, ತಮ್ಮ ಪವುಜು ತೆಗೆದುಕೊಂಡು ಹೋಗಿ, ಕಣ್ಣೂರು ಬಳಿಯಲ್ಲು ಇಳಿದು, ಆ ಜನರಲ್ ಸಾಹೇಬರೂ ರಾಜರೂ ಮಿಲಾಕತ್ತು ಆಗಬೇಕೆಂಬ ಅಪೇಕ್ಷೆಯಿಂದ [ಒಬ್ಬ] † ಸರದಾರ ಒಂದು ಕುಂಪಣಿ ಸಿಪಾಯಿಗಳ ಸಹ ಕಳುಹಿಸಿ [ಕೊಟ್ಟ ಮೇರೆ,] ± ರಾಜರವರು ಕೊಡಗಿನಿಂದ ಹೊರಟು ತಲಚೇರಿಗೆ ಹೋಗಿ ಸೇರಿದರು. ಅಲ್ಲಿಗೆ ಮುಟ್ಟುವದಕ್ಕೆ ಒಂದು ದಿವಸ ಮುಂಚಿತವಾಗಿ ಇಂಗ್ರೇಜಿಯವರ ಪವುಜು ಕಣ್ಣೂರು ಕೋಟೆಯಲ್ಲು ಲಡಾಯಿ ಮಾಡುವಾಗ್ಗೆ, ಟೀಪೂ ಸುಲ್ತಾನರ ಕಡೆ ಆರು ಸಾವಿರ ಜನ, ಕಣ್ಣೂರು ಬೀಬಿ ಕಡೆ ನಾಲ್ಕು ಸಾವಿರ ಜನ ಮಾಪಿಳ್ಳೆಯರು ಸಹ ಪೆಟ್ಟು ತಡೆಯಲಾರದೆ, ಸಲ್ಲಾ ಮಾಡುತ್ತೇವೆಂದು ರಾಜ § (ವಟ್ಟಣ) ನಡೆಸಿ (ದಲ್ಲಿ) = "ಕಣ್ಣೂರು ಕೋಟೆಯಲ್ಲಿ ಇರುವ ಮಾಪಿಳೆಯರು ಬೀಬಿಯು ಸಹ ಇಂಗ್ರೇಜಿ ಬಹದ್ದರ ಸರಕಾರದ ಫೌಜಿಗೆ ದಗಾ ಮಾಡಿ ಇದ್ದಾರೆ. ಅವರು ಈ ಸ್ಥಳದಲ್ಲಿ

---

|| ಬ ದ ಕಡೆಗೆ

= ಬ ಮುಂಬಾಯಿಂದ ಹೊರಟು ಬಂದು ತಲ

* ಬ ಮೇಲೆ ಸದರೀ ಬರೆದು ಇರುವಂಥಾದ್ದು ಕೇಳಿ ಇಂಥ ಮೋಸ ಮಾಡಿದ

† ಬ ಕರಕೊಂಡು ಬರುವ ಬಗ್ಗೆ ಒಬ್ಬ

± ಬ ದಲ್ಲಿ, ಆ ಸರದಾರನು ಬಂದು, "ಜನರಲ್ ಸಾಹೇಬರು ತಮ್ಮ ಭೆಟ್ಟಿ ಆಗಬೇಕು ಎಂಬುದಾಗಿ ಬಹಳ ಅಪೇಕ್ಷೆಯಿಂದ ಇದ್ದಾರೆ,, ಎಂತ ಹೇಳಿದಲ್ಲಿ,

§ ಬ ವಟ

= ಬ ದಲ್ಲಿ, ಜನರಲ್ ಸಾಹೇಬರು ಹೇಳಿದ್ದು:-- ಟೀಪು ಸುಲ್ತಾನರ ಕಡೆ ಜನರು ಅವರ ಸಂಪಾದಿಸಿದಂಥ ಒಡವೆ ಸಹ ಬಿಟ್ಟುಕೊಡುತ್ತೇವೆ; ಹೋಗಲಿ, ಆ

# ನಿರಂಜನ ವಂಶರತ್ನಾಕರ.

ಶ್ರೀಗುರು ಬಸವಲಿಂಗಾಯನಮಃ. ಶ್ರೀಮನ್ಮಹಾಶೂನ್ಯ ಸಿಂಹಾಸನಾಧೀಶ್ವರ ಜಗದ್ಗುರುಗಳಾದ ಅಲ್ಲಮಪ್ರಭು ಚನ್ನಬಸವರಾಜೇಂದ್ರ ಸ್ವಾಮಿಗಳವರ ಶಿಷ್ಯ ಪರಂಪರ ವಂಶರತ್ನಾಕರ ಪ್ರಭುವಂಶೋದ್ಭವರಾದ ಗುರುಗಳವರ ವಿವರವು.

ಶ್ರೀಮಚ್ಚಿನ್ಮೂಲಾದ್ರಿ ಸಮಸ್ತ ಪ್ರಭು ದ್ವಾರಾವತಿ ಜಟಪುರ ಶೂನ್ಯ ಸಿಂಹಾಸನ ಬೃಹನ್ಮಠದ ಮಹಾಗುರು ಸನ್ನಿಧಾನದಲ್ಲಿ ಕಲ್ಯಾಣ ಆದಿಯಾಗಿ ಜಗದ್ಗುರುಗಳಾದ ಅಲ್ಲಮಪ್ರಭು ಚನ್ನಬಸವ ರಾಜೇಂದ್ರರು ಕಲಿಯುಗದಲ್ಲಿ ನಡೆವ ರಕ್ತಾಕ್ಷಿ ಸಂವತ್ಸರ ಅಂದರೆ ನೃಪ ಶಾಲಿವಾಹನ ಶಕ ಏಳನೂರ ಏಳನೆಯ ರಕ್ತಾಕ್ಷಿ ಸಂವತ್ಸರ ಫಾಲ್ಗುಣ ಶುದ್ಧ ೧೧ ಏಕಾದಶಿ ಮಂಗಳವಾರ ಉದಯ ೩೫ ಗಳಿಗೆ ವೇಳೆಯಲ್ಲು ಶ್ರೀ ಬಸವ ರಾಜೇಂದ್ರರು ಕಲ್ಯಾಣ ಪುರವಂ ಬಿಟ್ಟು ಕೃಷ್ಣಾ ತೀರ ಕಪ್ಪಡಿ ಸಂಗಮೇಶ್ವರ ಲಿಂಗದಲ್ಲಿ ಉದ್ಭವವಾದ ನಿರಂಜನ ಜಂಗಮ ಮುಖದಿಂದ ಲಿಂಗದಲ್ಲಿ ಐಕ್ಯವಾದ ಬಳಿಕ ಶಿವಾನುಭವ ಚರಂತಿಕೆ ಪಟ್ಟಕ್ಕೆ ಕಾರಣ ಕರ್ತರಾದ ಶ್ರೀಮನ್ಮಹಾನಿರಂಜನ ಜಗದ್ಗುರು ಅಲ್ಲಮಪ್ರಭು ಚನ್ನ ಬಸವರಾಜೇಂದ್ರರ ಬಳಿವಿಡಿದು ನಡೆದು ಬಂದ ನಂತರದಲ್ಲಿ ಚತುರ್ಯುಗದಲ್ಲಿ ವೀರಶೈವ ಮತಕ್ಕೆ ಷಟ್‌ಸ್ಥಲ ಬ್ರಹ್ಮಿಯಾದ ಮೂಲ ಗುರುವು ಮೂಲ ಪ್ರಣವಸ್ವರೂಪಿಗಳಾದ ನಿರಂಜನ ಗುರುಗಳಾದಂತಹ ಶ್ರೀ ಷಣ್ಮುಖ ಸ್ವಾಮಿಗಳವರು ಹಿಂದೆ ಕೈಲಾಸದಲ್ಲಿ ಪರಶಿವನಿಗೆ ಲೋಕ ಭಾರಕರಾದ ಶೂರಪದ್ಮ ಸಿಂಹ ವಕ್ತ್ರ ತಾರಕಾದಿ ದೈತ್ಯರ ವಧ ನಿಮಿತ್ತ್ಯಾರ್ಥವಾಗಿ ಪುತ್ರನಾಗಿ ಉದ್ಭವರಾಗಲು ಇವರನ್ನು ವಿದ್ಯಾಭ್ಯಾಸಕ್ಕೆ ಬ್ರಹ್ಮ ನಾರಾಯಣರ ಬಳಿಯ ಪರಶಿವನು ಕಳುಹಲು ಅವರಿಂದಾಗದೆ ಇರುವದರಿಂದ ಪರಶಿವನೆ ಶಿಷ್ಯನಾಗಿ ಷಣ್ಮುಖನೆ ಗುರುಗಳಾಗಿ ಶಿವಾನುಭವ ಮುಂತಾದ ಮೂಲ ಪ್ರಣವದರ್ಥಂಗಳ ನಿರೂಪಿಸುವದರ ಕಾರಣವಾಗಿ ಪರಶಿವನು ಶಿವಮತ ಉದ್ಧಾರಾರ್ಥವಾಗಿ ಮೃತ್ಯು ಲೋಕದಲ್ಲಿ ಕಲ್ಯಾಣ ನಗರದಲ್ಲಿ ಅವತರಿಸಿದ ಬಸವರಾಜೇಂದ್ರರ ಸಹೋದರಿಯರಾದ ಅಕ್ಕನಾಗಲೆಯರ ಗರ್ಭದಲ್ಲಿ ಉದ್ಭವವಾಗುವದೆಂದು ಷಣ್ಮು

ಸನು ಮಾಡಿ, ಅದಕ್ಕೆ ಸೇರಿದ ಸೀಮೆಯನ್ನು ಲೂಟಾಯಿಸಿ, ಹೇರಳ ಹೆಣ್ಣು ಗಂಡು ಸೆರೆ ಹಿಡಿದು, ಮನೆಗಳಿಗೆ ಬೆಂಕಿಹಾಕಿ, ಪವುಜು ಸಮೇತ ಪಟ್ಟಣ [ಕ್ಕೆ] || ಹೋದರು.

ಆ ಬಳಿಕ ಕೆಲವು ದಿವಸ ಕಳೆದ ಮೇಲೆ, ಬೊಂಬಾಯಿ ಗೌನರ್ ರಾಬರ್ಟ್ಸ ಅಬ್ರಾಕರಂಬಿ ಸಾಹೇಬ ಬಹದ್ದರವರು ಪೌಜುಸಮೇತ [ತಲ] = ಚೇರಿಯಲ್ಲು ಇಳಕೊಂಡು, ಕಣ್ಣೂರುಬೀಬಿ ಮಾಡಿದಂಥಾ ಮೋಸದ ವಿವರ [ವನ್ನು ಕೇಳಿ, ಆ] * ಜನರ ಸ್ಥಾನವನ್ನು ತೆಗೆದುಕೊಂಡು ಸ್ಥಾನ ಭ್ರಷ್ಟತ್ವ ಮಾಡಿ ಹಿಡಿದು ಬೊಂಬಾಯಿಗೆ ಕಳುಹಿಸಬೇಕೆಂದು ನಿಶ್ಚಯಿಸಿ, ತಮ್ಮ ಪವುಜು ತೆಗೆದುಕೊಂಡು ಹೋಗಿ, ಕಣ್ಣೂರು ಬಳಿಯಲ್ಲು ಇಳಿದು, ಆ ಜನರಲ್‌ಸಾಹೇಬರೂ ರಾಜರೂ ಮಿಲಾಕತ್ತು ಆಗಬೇಕೆಂಬ ಅಪೇಕ್ಷೆಯಿಂದ [ಒಬ್ಬ] † ಸರದಾರ ಒಂದು ಕುಂಪಣಿ ಸಿಪಾಯಿಗಳ ಸಹ ಕಳುಹಿಸಿ [ಕೊಟ್ಟ ಮೇರೆ,] ± ರಾಜರವರು ಕೊಡಗಿನಿಂದ ಹೊರಟು ತಲಚೇರಿಗೆ ಹೋಗಿ ಸೇರಿದರು. ಅಲ್ಲಿಗೆ ಮುಟ್ಟುವದಕ್ಕೆ ಒಂದು ದಿವಸ ಮುಂಚಿತವಾಗಿ ಇಂಗ್ರೇಜಿಯುವರ ಪವುಜು ಕಣ್ಣೂರು ಕೋಟೆಯಲ್ಲು ಲಡಾಯಿ ಮಾಡುವಾಗ್ಗೆ, ಟೀಪೂ ಸುಲ್ತಾನರ ಕಡೆ ಆರು ಸಾವಿರ ಜನ, ಕಣ್ಣೂರು ಬೀಬಿ ಕಡೆ ನಾಲ್ಕು ಸಾವಿರ ಜನ ಮಾಪಿಳ್ಳೆಯುರು ಸಹ ಪೆಟ್ಟು ತಡೆಯಲಾರದೆ, ಸಲ್ಲಾ ಮಾಡುತ್ತೇವೆಂದು ರಾಜ §(ವಟ್ಟಣ) ನಡೆಸಿ (ದಲ್ಲಿ) = "ಕಣ್ಣೂರು ಕೋಟೆಯಲ್ಲಿ ಇರುವ ಮಾಪಿಳೆಯುರು ಬೀಬಿಯು ಸಹ ಇಂಗ್ರೇಜಿ ಬಹದ್ದರ ಸರಕಾರದ ಫೌಜಿಗೆ ದಗಾ ಮಾಡಿ ಇದ್ದಾರೆ. ಅವರು ಈ ಸ್ಥಳದಲ್ಲಿ

---

|| ಬ ದ ಕಡೆಗೆ

= ಬ ಮುಂಬಾಯಿಂದ ಹೊರಟು ಬಂದು ತಲ

* ಬ ಮೇಲೆ ಸದರೀ ಬರೆದು ಇರುವಂಥಾದ್ದು ಕೇಳಿ ಇಂಥ ಮೋಸ ಮಾಡಿದ

† ಬ ಕರಕೊಂಡು ಬರುವ ಬಗ್ಗೆ ಒಬ್ಬ

± ಬ ದಲ್ಲಿ, ಆ ಸರದಾರನು ಬಂದು, "ಜನರಲ್ ಸಾಹೇಬರು ತಮ್ಮ ಭೆಟ್ಟಿ ಆಗಬೇಕು ಎಂಬುದಾಗಿ ಬಹಳ ಅಪೇಕ್ಷೆಯಿಂದ ಇದ್ದಾರೆ,, ಎಂತ ಹೇಳಿದಲ್ಲಿ,

§ ಬ ವಟ

= ಬ ದಲ್ಲಿ, ಜನರಲ್ ಸಾಹೇಬರು ಹೇಳಿದ್ದು:--- ಟೀಪು ಸುಲ್ತಾನರ ಕಡೆ ಜನರು ಅವರ ಸಂಪಾದಿಸಿದಂಥ ಒಡವೆ ಸಹ ಬಿಟ್ಟುಕೊಡುತ್ತೇವೆ; ಹೋಗಲಿ, ಆ

# ನಿರಂಜನ ವಂಶರತ್ನಾಕರ.

ಶ್ರೀಗುರು ಬಸವಲಿಂಗಾಯನಮಃ. ಶ್ರೀಮನ್ಮಹಾಶೂನ್ಯ ಸಿಂಹಾಸನಾಧೀಶ್ವರ ಜಗದ್ಗುರುಗಳಾದ ಅಲ್ಲಮಪ್ರಭು ಚನ್ನಬಸವರಾಜೇಂದ್ರ ಸ್ವಾಮಿಗಳವರ ಶಿಷ್ಯ ಪರಂಪರ ವಂಶರತ್ನಾಕರ ಪ್ರಭುವಂಶೋದ್ಭವರಾದ ಗುರುಗಳವರ ವಿವರವು.

ಶ್ರೀಮಚ್ಛಿನ್ಮೂಲಾದ್ರಿ ಸಮಸ್ತ ಪ್ರಭು ದ್ವಾರಾವತಿ ಜಟಪುರ ಶೂನ್ಯ ಸಿಂಹಾಸನ ಬೃಹನ್ಮಠದ ಮಹಾಗುರು ಸನ್ನಿಧಾನದಲ್ಲಿ ಕಲ್ಯಾಣ ಆದಿಯಾಗಿ ಜಗದ್ಗುರುಗಳಾದ ಅಲ್ಲಮಪ್ರಭು ಚನ್ನಬಸವ ರಾಜೇಂದ್ರರು ಕಲಿಯುಗದಲ್ಲಿ ನಡೆವ ರಕ್ತಾಕ್ಷಿ ಸಂವತ್ಸರ ಅಂದರೆ ನೃಪ ಶಾಲಿವಾಹನ ಶಕ ಏಳನೂರ ಏಳನೆಯ ರಕ್ತಾಕ್ಷಿ ಸಂವತ್ಸರ ಫಾಲ್ಗುಣ ಶುದ್ಧ ೧೧ ಏಕಾದಶಿ ಮಂಗಳವಾರ ಉದಯ ೭॥ ಗಳಿಗೆ ವೇಳೆಯಲ್ಲು ಶ್ರೀ ಬಸವ ರಾಜೇಂದ್ರರು ಕಲ್ಯಾಣ ಪುರವಂ ಬಿಟ್ಟು ಕೃಷ್ಣಾ ತೀರ ಕಪ್ಪಡಿ ಸಂಗಮೇಶ್ವರ ಲಿಂಗದಲ್ಲಿ ಉದ್ಭವವಾದ ನಿರಂಜನ ಜಂಗಮ ಮುಖದಿಂದ ಲಿಂಗದಲ್ಲಿ ಐಕ್ಯವಾದ ಬಳಿಕ ಶಿವಾನುಭವ ಚರಂತಿಕೆ ಪಟ್ಟಕ್ಕೆ ಕಾರಣ ಕರ್ತರಾದ ಶ್ರೀಮನ್ಮಹಾನಿರಂಜನ ಜಗದ್ಗುರು ಅಲ್ಲಮಪ್ರಭು ಚನ್ನ ಬಸವರಾಜೇಂದ್ರರ ಬಳಿವಿಡಿದು ನಡೆದು ಬಂದ ನಂತರದಲ್ಲಿ ಚತುರ್ಯುಗದಲ್ಲಿ ವೀರಶೈವ ಮತಕ್ಕೆ ಷಟ್‌ಸ್ಥಲ ಬ್ರಹ್ಮಿಯಾದ ಮೂಲ ಗುರುವು ಮೂಲ ಪ್ರಣವಸ್ವರೂಪಿಗಳಾದ ನಿರಂಜನ ಗುರುಗಳಾದಂತಹ। ಶ್ರೀ ಷಣ್ಮುಖ ಸ್ವಾಮಿಗಳವರು ಹಿಂದೆ ಕೈಲಾಸದಲ್ಲಿ ಪರಶಿವನಿಗೆ ಲೋಕ ಭಾರಕರಾದ ಶೂರಪದ್ಮ ಸಿಂಹ ವಕ್ತ್ರ ತಾರಕಾದಿ ದೈತ್ಯರ ವಧ ನಿಮಿತ್ಯಾರ್ಥವಾಗಿ ಪುತ್ರನಾಗಿ ಉದ್ಭವರಾಗಲು ಇವರನ್ನು ವಿದ್ಯಾಭ್ಯಾಸಕ್ಕೆ ಬ್ರಹ್ಮ ನಾರಾಯಣರ ಬಳಿಯ ಪರಶಿವನು ಕಳುಹಲು ಅವರಿಂದಾಗದೆ ಇರುವದರಿಂದ ಪರಶಿವನೆ ಶಿಷ್ಯನಾಗಿ ಷಣ್ಮುಖನೆ ಗುರುಗಳಾಗಿ ಶಿವಾನುಭವ ಮುಂತಾದ ಮೂಲ ಪ್ರಣವದರ್ಥಂಗಳ ನಿರೂಪಿಸುವದರ ಕಾರಣವಾಗಿ ಪರಶಿವನು ಶಿವಮತ ಉದ್ಧಾರಾರ್ಥವಾಗಿ ಮೃತ್ಯು ಲೋಕದಲ್ಲಿ ಕಲ್ಯಾಣ ನಗರದಲ್ಲಿ ಅವತರಿಸಿದ ಬಸವರಾಜೇಂದ್ರರ ಸಹೋದರಿಯರಾದ ಅಕ್ಕನಾಗಲೆಯರ ಗರ್ಭದಲ್ಲಿ ಉದ್ಭವವಾಗುವದೆಂದು ಷಣ್ಮು

ಖನ ಕಳಿಸಿ ತಾವು ಸೊನ್ನಲಿಗೆ ಪುರದಲ್ಲಿ ಸಂಜನಿಸಿದ ಶಿವಭಕ್ತ ಮುದ್ದನಗೌಡ ಕಂಜಮುಖಿ ಸುಗ್ಗಾಯಳೆಂಬವರಿಗೆ ಅಯೋನಿಜರಾಗಿ ಜನಿಸಿ ಪ್ರಭುಸ್ವಾಮಿಗಳಿಂ ಜ್ಞಾನೋಪದೇಶವಂ ಪಡೆದು ಕಲ್ಯಾಣಪುರಕ್ಕೈದಿ ನಾವು ನಿಮ್ಮಿಂದ ಸಿದ್ಧರಾಮೇಶ್ವರನೆಂಬಭಿದಾನದಿಂದ ಗುರುದೀಕ್ಷೆಯಂ ಪತ್ತುಕೊಂಡು ಶಿವಾನುಭವವಾದ ಪ್ರಣವದ ಷಟ್ಕೃತಿಗಳು ಮುಂತಾದ ನಿರ್ಣಯಗಳನ್ನು ಕೇಳಿ ಗುರುಶಿಷ್ಯರಾದ ಕಾರಣ ಇವರಿಗೆ ಮೂಲಗುರು ನಿರಂಜನ ಜಂಗಮ ಸ್ವರೂಪರಾದ ಷಣ್ಮುಖ ಸ್ವಾಮಿಗಳವರೆ ಕಲ್ಯಾಣ ಪುರದಿ ಅವತರಿಸಿ ಚನ್ನಬಸವರಾಜೇಂದ್ರರೆಂಬ ನಾಮವಂ ತಾಳ್ದು ವೀರಶೈವ ಮತ ಉದ್ಧಾರಕರಾದ ಕಾರಣ ಮೂಲಗುರುವು ಚನ್ನಬಸವೇಶ್ವರ ಸ್ವಾಮಿಗಳವರು.

ಈ ಕುಮಾರ ಸ್ವಾಮಿಗಳವರು ಕಲ್ಯಾಣದಲ್ಲಿ ಶ್ರೀ ಬಸವರಾಜೇಂದ್ರರ ಸಹೋದರಿಯಾದ ಅಕ್ಕನಾಗಲೆಯರ ಚಿದ್ಗರ್ಭದಲ್ಲಿ ಕಕ್ಕೈಯ್ಯಗಳ ಶೇಷ ರೂಪಿನಿಂದ ಚನ್ನಬಸವರಾಜೇಂದ್ರರು ನಂದನ ನಾಮ ಸಂವತ್ಸರದ ವೈಶಾಖ ಶುದ್ಧ ಪಾಡ್ಯ ಮಂಗಳವಾರ ಕೃತ್ತಿಕ ನಕ್ಷತ್ರದಲ್ಲಿ ಅಯೋನಿಜರಾಗಿ ವಿಭೂತಿ ರುದ್ರಾಕ್ಷಿ ಇಷ್ಟಲಿಂಗ ಧಾರಕರಾಗಿ ಶಿವಮಂತ್ರ ಸ್ಮರಣೆಯೊಡನೆ ಉದ್ಭವಿಸಿ ಬಸವರಾಜೇಂದ್ರರಿಂ ಶಿವದೀಕ್ಷೆಯಂ ಪಡೆದು ಅಲ್ಲಮ ಪ್ರಭು ಸ್ವಾಮಿಗಳವರಿಂ ಸಮಸ್ತಜ್ಞಾನೋಪದೇಶವಂ ಪತ್ತುಕೊಂಡು ಬಸವೇಶ್ವರ ಮುಂತಾದ ಲಕ್ಷದ ಮೇಲೆ ತೊಂಭತ್ತಾರು ಸಾವಿರದ ಗಣ ಸಮೂಹಕ್ಕೆ ಗುರುಗಳಾಗಿ ಸಾಂಬನೆ ಶಿಷ್ಯನಾಗಿ ಬಂದ ಸಿದ್ಧರಾಮೇಶ್ವರನಿಗೆ ಗುರುದೀಕ್ಷೆಯಂಮಾಡಿ ಷಟ್‌ಸ್ಥಲ ಜ್ಞಾನ ಚಕ್ರವರ್ತಿಗಳೆಂಬಭಿಧಾನದಿಂದ ಅನೇಕ ಮಹಿಮೆಗಳ ತೋರುತ್ತ ಪರಮತವ ಜಯಿಸುತ್ತಿ ವೀರಶೈವ ಮತವನುದ್ಧಾರವ ಮಾಡುತ್ತ ಇದ್ದರು.

---

## ಅಲ್ಲಮಪ್ರಭು

ಶ್ರೀಮನ್ಮಹಾರಾಜ ನಿರಂಜನ ಜಗದ್ಗುರು ಅಲ್ಲಮ ಪ್ರಭು ಸ್ವಾಮಿಗಳು ಶೂನ್ಯ ಸಿಂಹಾಸನಾದೀಶ್ವರರಾದಂತಹ ಕಲ್ಯಾಣ ಪಟ್ಟಣದಲ್ಲಿ ಚನ್ನಬಸವರಾಜೇಂದ್ರರಾದಿ ಆಗಿ ನಡೆದು ಬಂದ ಶಿವಾನುಭವ ಚರಂತಿಗೆ ಪಟ್ಟಗಳ ವಿವರವು—ಕಲ್ಯಾಣ ಪಟ್ಟಣದಲ್ಲಿ ಸಾಂಬನಪ್ಪಣೆ ಮೇರೆಗೆ ಜೈನ ಮತೋದ್ಧಾರಕನಾದ ಬಿಜ್ಜಳನೆಂಬರಸು ಮೂರುಲಕ್ಷ ಸೈನ್ಯದಿಂದ

ಆ ಪುರಕ್ಕೆ ಅಧಿಪತಿ ಆಗಿ ರಾಜ್ಯವಾಳುತ್ತ ಇದ್ದನು. ಈ ಅರಸಿನ ಬಳಿಯು ಶ್ರೀ ಬಸವರಾಜೇಂದ್ರರು ಪ್ರಧಾನ ಪಟ್ಟಕ್ಕೆ ಅಧಿಪತಿಗಳಾಗಿ ದಿನಒಂದಕ್ಕೆ ಮೂನ್ನೂರರುವತ್ತು ಪವಾಡವನ್ನುಂಟುಮಾಡುತ್ತ ಬೇಡಿ ದಿಷ್ಟಾರ್ಥವಂ ಕೊಡುತ್ತ ಇರುವಲ್ಲಿ ಬಸವೇಶ್ವರನ ಭಕ್ತಿಯ ನೋಡ ಬೇಕೆಂದು ಸಾಕ್ಷಾತ್ ಅಲ್ಲಮಪ್ರಭು ಸ್ವಾಮಿಗಳು ಕಲ್ಯಾಣಕ್ಕೆ ದಯ ಮಾಡಿಸುವಲ್ಲಿ ಬಸವರಾಜೇಂದ್ರನು ಶೂನ್ಯಸಿಂಹಾಸನವ ರಚಿಸಿ ಅದರ ಮೇಲೆ ಪ್ರಭುಸ್ವಾಮಿಗಳ ಮೂರ್ತಗೊಳಿಸಿ ಅಷ್ಟವಿಧಾರ್ಚನೆ ಷೋಡ ಶೋಪಚಾರಂಗಳಿಂದ ಪೂಜೆಯಂಗೊಂಡು ಬಸವ ಚನ್ನಬಸವಣ್ಣ ಸಿದ್ಧ ರಾಮೇಶ್ವರ ದೇವರು ಮುಂತಾದ ಸಕಲ ಪ್ರಮಥರ ಭಕ್ತಿಗಳ ಕೈಕೊಂಡು ತಾವು ಸಕಲ ದೇಶದಲ್ಲಿ ಇರುವ ಭಕ್ತಮಹೇಶ್ವರರ ಭಕ್ತಿಗೋಸ್ಕರವಾಗಿ ಪ್ರಭುಸ್ವಾಮಿಗಳು ದೇಶಂಗಳ ಮೇಲೆ ದಯಮಾಡಿಸುವದನ್ನು ಬಸವಾದಿ ಪ್ರಮಥಗಣಂಗಳು ಸಕಲರು ತಿಳಿದುಕೊಂಡು ಪ್ರಭುಸ್ವಾಮಿಗಳು ದಯ ಮಾಡಿಸುವಾಗ್ಗೆ ಅವರ ದರ್ಶನಾಶೀರ್ವಾದವ ತೆಗೆದುಕೊಂಡು ಮುಂದೆ ನಡೆವ ಕಾರಣಾರ್ಥಗಳನ್ನು ಕೇಳಿಕೊಂಡಲ್ಲಿ ನೀವು ಸರ್ವರೂ ಷಟ್‌ಸ್ಥಲ ಬ್ರಹ್ಮಿಯಾದ ಶ್ರೀ ಚನ್ನಬಸವರಾಜೇಂದ್ರರು ನಿಮ್ಮ ಬಳಿಗೆ ಷಟ್‌ಸ್ಥಲ ಜ್ಞಾನೋಪದೇಶವಾದ ಶಿವಾನುಭವ ಶಾಸ್ತ್ರದ ಸಾರವನ್ನು ತಿಳಕೊಂಡು ನಿತ್ಯಮುಕ್ತರಾಗಿ ಈ ಕಲ್ಯಾಣ ಪಟ್ಟಣದಲ್ಲಿ ನೀವು ಸರ್ವರೂ ಇದ್ದಲ್ಲಿ ನಾವು ಈ ಹೊತ್ತಿಗೆ ೧೨ ವರುಷಕ್ಕೆ ಇಲ್ಲಿಗೆ ಬಂದು ನಿಮ್ಮಗಳಿಗೆ ಲಿಂಗಾಂ ಗೈಕ್ಯಭಾವವಂ ತಿಳಿಸಿ ಶಿವಸಾಯುಜ್ಯವೆಂಬ ನಿರ್ವಾಣ ಪದವನೀವೆವು ಎಂದು ನಿರೂಪಿಸಿ ಆಮೇಲೆ ಚೋಳದೇಶ ಕಂಚಿ ಕಾಳಹಸ್ತಿ ಚಿದಂಬರ ತಿರುವಣ್ಣಾಮಲೆ ಅರುಣಾಚಲ ಮುಂತಾದ ಅಷ್ಟಷಷ್ಟಿತೀರ್ಥಂಗಳು ಸಕಲ ದೇಶದಲ್ಲಿ ಇರುವ ಗೊಗ್ಗಯ್ಯ ಮುಂತಾದ ಸಕಲ ಭಕ್ತಗಣಂಗ ಳಿಗೆ ಜ್ಞಾನೋಪದೇಶವಂ ಮಾಡಿ ಮೋಕ್ಷಮಾರ್ಗಂಗಳಂ ಕೊಡುತ್ತ ಆ ಮೇಲೆ ಕಲ್ಯಾಣಕ್ಕೆ ದಯಮಾಡಿಸಿದಲ್ಲಿ ಬಸವಣ್ಣನವರು ಪ್ರಭುಸ್ವಾಮಿ ಗಳವರನ್ನು ಪೂಜಿಸುವದ ಕಂಡು ತಮಗೆ ಪೂಜಿಸಲಿಲ್ಲವೆಂದು ಕಲ್ಯಾ ಣದಲ್ಲಿ ಇರುವ ಕೆಲವು ಗಣಂಗಳು ತಮ್ಮ ಮಠಗಳಿಗೆ ದಯಮಾಡಿ ಸಲು ಇದ ಕಂಡು ಬಸವಣ್ಣನವರ ಮಠಕ್ಕೆ ಭೋಜನಕ್ಕೆ ಬಂದ ಲಕ್ಷದ ಮೇಲೆ ತೊಂಭತ್ತಾರು ಸಾವಿರ ಗಣಂಗಳು ಮುಂತಾದ ಸಮ ಸ್ತರು ತಮ್ಮ ವಾಸಸ್ಥಳಕ್ಕೆ ಹೋಗಲು ಇತ್ತ ನಿರಂಜನ ಗುರುಗಳಾದ ಪ್ರಭುಸ್ವಾಮಿಗಳವರಿಗೆ ಬಸವರಾಜೇಂದ್ರರು ಚನ್ನಬಸವ ಮಡಿವಾಳ

ಮಾಚಿದೇವರು ಕಿನ್ನರಿ ಬ್ರಹ್ಮಯ್ಯಗಳು ಮುಂತಾದ ಸಕಲ ಪ್ರಮಥರು ಸಹಿತವಾಗಿ ಗಣಸಮೂಹವು ಸಲಿಸದೆ ಏನೋ ಬೇಸರದಿಂ ದಯಮಾಡಿಸಿದರು, ಈಗ ಗಣ ತೃಪ್ತಿ ಹೇಗೆ ಆಗಬೇಕೆಂಬದಾಗಿ ಬಿನ್ನಪಂ ಗೈದು ಸಾಷ್ಟಾಂಗವ ಹಾಕಲು ಗಣಂಗಳಲ್ಲಿ ಇಂತಹ ಮನಸ್ಸು ಹುಟ್ಟಿದ್ದರಿಂದ ಈ ಕಲ್ಯಾಣದ ಕಡೆಭಾಗವೆಂದು ಪ್ರಭುಸ್ವಾಮಿಗಳು ತಿಳಿದುಕೊಂಡು ಗಣಸಮೂಹಕ್ಕೆ ಮಾಡಿಸಿದ ಅಡಗಿ ಪಾಕವನ್ನು ತಾವು ಒಬ್ಬರೆ ಸಲಿಸುವೆವೆಂದು ಅಪ್ಪಣೆಕೊಟ್ಟು ಲಕ್ಷದ ಮೇಲೆ ತೊಂಬತ್ತಾರು ಸಾವಿರ ಗಣಂಗಳು ಸಕಲ ಪ್ರಮಥಗಣಕ್ಕೆ ಮಾಡಿದ ಅಡಿಗೆ ಪಾಕವು ಸಾಲದೆ ಆ ಪಟ್ಟಣದಲ್ಲಿ ಇದ್ದ ಧಾನ್ಯಗಳ ಸಹವಾಗಿ ಸಲಿಸಿದ್ದು ನೋಡಿ ತಮ್ಮಿಂದ್ದ ಪದಾರ್ಥಗಳ ಭೋಜನಕ್ಕೆ ಒದಗಿಸುವದಾಗದೆ ಇರುವದರಿಂದ ಬಸವಣ್ಣ ಮುಂತಾದ ಪ್ರಮಥರು ಶರಣಾಗತರಾಗಲು ಪ್ರಭುಸ್ವಾಮಿಗಳು ತೃಪ್ತರಾಗಲು ಕಲ್ಯಾಣದಲ್ಲಿರುವ ಭಕ್ತಗಣಂಗಳು ಮುಂತಾದ ಬಸವೇಶ್ವರಾದಿ ಸಕಲ ಪ್ರಮಥರು ಪ್ರಭುದೇವರ ಮಹಿಮೆಗಳ ಕೊಂಡಾಡಿ ಅವರಿಂದ ಲಿಂಗಾಂಗೈಕ್ಯಭಾವವಂ ತಿಳಿದುಕೊಂಡು ನಿತ್ಯ ಮುಕ್ತರಾದರು. ಆ ಮೇಲೆ ಪ್ರಭುಸ್ವಾಮಿಗಳು ಅನೇಕ ಮಹಿಮೆಗಳಂ ತೋರಿ ಮುಂದೆ ಆಗುವ ಸೂಚನಾರ್ಥಗಳ ಬಸವಾದಿ ಪ್ರಮಥರ ಕರಿಸಿಕೊಂಡು ಅವರಿಗೆ ಅಪ್ಪಣೆಯಂ ಕೊಟ್ಟು ಅವರ ಮುಂತಿಟ್ಟುಕೊಂಡು ತಮ್ಮ ವಾಸದಲ್ಲಿ ಇದ್ದು ಸುವರ್ಣದ ಶೂನ್ಯಸಿಂಹಾಸನ, ಪ್ರಣವ ಶಿಖಾ ಶೈಲ, ಶಿವಾನುಭವ ಪುಸ್ತಕವಂ ಶ್ರೀ ಚನ್ನಬಸವರಾಜೇಂದ್ರರಿಗೆ ಕೊಟ್ಟು ಇವರು ನಮ್ಮ ಪ್ರಭು ವಂಶಕ್ಕೆ ಗುರುಗಳೆಂದು ಅಪ್ಪಣೆಯಂ ಕೊಟ್ಟು ಸಕಲರಿಗು ಆಶೀರ್ವಾದವಂ ಮಾಡಿ ಆ ಮೇಲೆ ಕಲ್ಯಾಣದಿಂದ ಪ್ರಭುಸ್ವಾಮಿಗಳು ಶ್ರೀಶೈಲಕ್ಕೆ ದಯಮಾಡಿಸಿ ಅಲ್ಲಿರುವ ಮಲ್ಲಿಕಾರ್ಜುನನೆಂಬ ಜ್ಯೋತಿರ್ಮಯ ಲಿಂಗ ಭ್ರಮರಾಂಬೆಯರಂ ಕಂಡು ಅದೇ ಕ್ಷೇತ್ರದಲ್ಲಿರುವ ಗೋರಕ್ಷ ಸಿದ್ಧ ಅಕ್ಕಮಹಾದೇವಿಯರು ಮುಂತಾದ ಸಕಲ ಮುನಿಜನಂಗಳಿಗೆ ಜ್ಞಾನೋಪದೇಶವಂ ಮಾಡಿ ನಿರ್ವಾಣ ಪದಂಗಳಂ ಕೊಟ್ಟು ಶ್ರೀಶೈಲವ ಕದಳಿಯ ಬನದೊಳಗಿರುವ ಮಠದಲ್ಲಿ ರಕ್ತಾಕ್ಷಿನಾಮ ಸಂವತ್ಸರದ ಪುಷ್ಯ ಶುದ್ಧ ಪಾಡ್ಯದ ಸೋಮವಾರ ಉದಯ ೨೫ ಗಳಿಗೆಗೆ ತಮ್ಮ ಗುಹೇಶ್ವರ ಲಿಂಗದಲ್ಲಿ ನಿರ್ವಯಲಾದರು. ಇವರು ಬಯ

ಲಾದ ಮಠವು ಶ್ರೀಶೈಲ ಕದಳೀ ಬನದಲ್ಲಿ ಇರುವದು. ಪಾತಾಳಗಂಗೆ ಯತಟಿಯಲ್ಲಿ ಇರುವ ಗುಡ್ಡದ ಮೇಲೆ ನಿಂತು ನೋಡಿದರೆ ಈಗ ಕಾಣುತ್ತದೆ. ಅಲ್ಲಿ ಹೋಗುವೆನೆಂದು ಹೋದರೆ ದಾರಿ ಸಿಗುವದಿಲ್ಲ.

---

## ಚನ್ನಬಸವ.

ಶ್ರೀ ಚನ್ನಬಸವದೇವರು ಎರಡನೇ ಶಿವಾನುಭವ ಪಟ್ಟಕ್ಕೆ ಕರ್ತು ಗಳಾಗಿ ಶೂನ್ಯಸಿಂಹಾಸನಕ್ಕೆ ಅಧಿಪತಿಗಳಾದ ಜಗದ್ಗುರುಗಳಾಗಿ ತಮ್ಮ ಪ್ರಭುವಂಶಕ್ಕೆ ಸೇರ್ಪಟ್ಟ ೧೨ ಸಾವಿರ ಷಟ್‌ಸ್ಥಲ ಬ್ರಹ್ಮಿಗಳಾದ ಸೊನ್ನ ಲಾಪುರದ ಸಿದ್ಧರಾಮೇಶ್ವರ ಚನ್ನಂಜಯ್ಯ ಮುಂತಾದ ಎಲ್ಲ ಪ್ರಮಥ ರಿಗೆ ಅನುಭವ ಮಂಟಪದಲ್ಲಿ ಶಿವಾನುಭವ ಶಾಸ್ತ್ರದೊಡನೆ ಶಿವಾನಂದ ಸುಖದೊಳು ಇರುವಾಗ್ಗೆ ಶ್ರೀ ಬಸವರಾಜೇಂದ್ರರು ತಾವು ಪೂರ್ವದಲ್ಲಿ ನಂದೀಶ್ವರನು ಅನುಮಿಷಯ್ಯಗಳಿಗೆ ನಗರದ ಸೀಮೆ ಉಡಗಣಿಯೆಂಬ ಉಡುತಡಿಯ ಸಮೀಪದಲ್ಲಿ ಇರುವ ಬಳ್ಳಿಗಾವಿ ಎಂಬ ಪುರದ ಗಡಿ ಭೂಮಿಯ ವನಾಂತರದಲ್ಲಿ ತಮ್ಮ ಇಷ್ಟಲಿಂಗವಂ ಕೊಟ್ಟು ಕೈಲಾಸಕ್ಕೆ ಹೋಗಿ ದ್ವಾರದೊಳಗೆ ಚಿತ್ತೈಸುವ ಸಮಯದಲ್ಲಿ ಸಿಂಹಕೇಶನೆಂಬ ದ್ವಾರ ಪಾಲಕನು ಬಂದು ನಂದೀಶ್ವರಗೆ ಭವಿ ಎಂದು ನುಡಿದು ಒಳಗೆ ಇರುವ ವರ್ತಮಾನವಂ ಸಾಂಬನು ತಿಳಿದು ದ್ವಾರದ ಬಳಿಗೆ ಬಂದು ಸಿಂಹ ಕೇಶನಿಗೆ ನೀನು ನಂದೀಶ್ವರ ದ್ವಿತೀಯ ಶಂಭುವಾದ ಸರ್ವಾಂಗಲಿಂಗಿಗೆ ಭವಿ ಎಂದು ನುಡಿದ ದೋಷದಿಂದ ಮೃತ್ಯುಲೋಕದಲ್ಲಿರುವ ಕಲ್ಯಾಣ ಪುರದರಸನಾದ ಜೈನ ಕ್ಷತ್ರಿಯನಾದ ಚಾಳುಕ್ಯನ ವಂಶದಲ್ಲಿ ಬಿಜ್ಜಳ ನೆಂಬ ನೃಪನಾಗುವದೆಂದು ಶಾಪವಂ ಕೊಡಲು ದ್ವಾರಪಾಲಕನು ಗದ ಗದ ನಡುಗಿ ಬಹು ಚಿಂತಾಕ್ರಾಂತನಾಗಿ ಸಾಂಬನಿಗೆ ನಿಶ್ಶಾಪವಂ ಕೇಳ ಕೊಂಡದ್ದಕ್ಕೆ ಕಲ್ಯಾಣದಲ್ಲಿ ನೀನು ಶಿವಶರಣರಾದ ಭಕ್ತದ್ರೋಹಂ ಮಾಡಿಸಿದ್ದರಿಂದ ಮೃತ್ಯು ಹೊಂದಿ ನಮ್ಮ ಕೈಲಾಸಕ್ಕೆ ಬಾಹುದೆಂದು ನಿಶ್ಶಾಪವಾದುದನ್ನು ಬಸವರಾಜೇಂದ್ರರು ತಮ್ಮ ದಿವ್ಯ ಜ್ಞಾನದಿಂದರಿದು ಇವುಗಳನ್ನು ಸರ್ವ ಪ್ರಮಥರಿಗೆ ತಿಳಿಸಿ ಈ ಬಿಜ್ಜಳನ ಕಾಲ ಸಮೀಪಿ ಸಿತ್ತೆಂದು ಈ ನಗರದಲ್ಲಿ ಮಹತ್ವವಾದ ಉತ್ಪಾತವು ಹೆಚ್ಚಾಗುವದೆಂದು ಕಣ್ಣಿಲಿ ನೋಡಕೂಡದೆಂದು ಶ್ರೀ ಚನ್ನಬಸವಣ್ಣನವರಿಗೆ ತಮ್ಮ ಪ್ರಧಾನ ಪಟ್ಟವಂ ನೇಮಿಸಿ ಕೊಟ್ಟು ಹಡಪದಪ್ಪಣ್ಣನವರ ಸಂಗಡ ಕೃಷ್ಣಾನದಿ

ಮಲಾಪಹಾರಿ ಎಂಬ ನದಿಗಳ ಸಂಗಮವಾದ ಕಪ್ಪಡಿ ಎಂಬುವ ಕ್ಷೇತ್ರಕ್ಕೆ ಚಿತ್ತೈಸಲು ಅಲ್ಲಿರುವ ಸಂಗಮೇಶ್ವರ ಲಿಂಗವೆ ಜಂಗಮಾಕೃತಿಯಾಗಿ ಬಂದು ಬಸವೇಶ್ವರ ದೇವರಿಗೆ ದರ್ಶನಾಶೀರ್ವಾದವ ಕೊಟ್ಟು ಕೈಲಾಸ ದ್ವಾರವೆಂಬ ಸಂಗಮೇಶ್ವರ ಲಿಂಗದಲ್ಲಿ ನಿರ್ವಯಲಾದರು. ಇವರು ಅನುಮಿಷಯ್ಯಗಳಿಗೆ ಲಿಂಗವಂ ಕೊಟ್ಟ ಸ್ಥಳ ನಗರದ ಸೀಮೆ ಸಿರಿಯಾಳಕೊಪ್ಪದ ಸಮೀಪವಾದ ಬಳ್ಳಿಗಾವಿಯಲ್ಲಿ ಲಿಂಗವ ಕೊಟ್ಟ ಸ್ಥಳಕ್ಕೆ ಅನುಮಿಷಯ್ಯನ ಕೊಪ್ಪಲು ಎಂತಲು ಬಸವೇಶ್ವರ ದೇವಸ್ಥಾನವು ಸಹಿತವಾಗಿ ಈಗ ಪ್ರಸಿದ್ಧನಾಗಿ ಇದೆ. ಈಗ ಅಲ್ಲಿ ಅನೇಕ ನಿತ್ಯವಹ ಭಕ್ತಗಣಂಗಳು ಗಣತೃಪ್ತಿ ಮಾಡುತ್ತಾರೆ. ಇದರಂತೆ ಬಸವೇಶ್ವರ ದೇವರು ಐಕ್ಯವಾದ ಕಪ್ಪಡಿ ಸಂಗಮ ಕ್ಷೇತ್ರದಲ್ಲಿ ಇವೊತ್ತಿಗು ನಿತ್ಯವಹ ಭಕ್ತಮಹೇಶ್ವರರ ಗಣತೃಪ್ತಿ ಆಗುತ್ತಿರುತ್ತದೆ. ಈ ಬಸವೇಶ್ವರ ದೇವರು ಸಂಗಮ ನಾಥನಲ್ಲಿ ಐಕ್ಯವಾದದ್ದು ಶಾಲಿವಾಹನ ಶಕ ಏಳನೂರ ಏಳನೆಯ ರಕ್ತಾಕ್ಷಿ ಸಂವತ್ಸರದ ಫಾಲ್ಗುಣ ಶುದ್ಧ ೧೧ ಮಂಗಳವಾರ ಉದಯ ೨೫ ಗಳಿಗೆಯೊಳು ಐಕ್ಯವಾದರು. ಈ ಬಸವಣ್ಣನವರು ೩೬ ವರುಷಕ್ಕೆ ಐಕ್ಯವಾದರು. ಇವರ ತರುವಾಯದಲ್ಲಿ ಬಿಜ್ಜಳರಾಯನ ಪ್ರಧಾನ ಪಟ್ಟಕ್ಕೆ ಶ್ರೀ ಚನ್ನಬಸವಣ್ಣನವರೇ ಅಧಿಪತಿಗಳಾಗಿ ಕಲ್ಯಾಣ ಪಟ್ಟಣದಲ್ಲಿ ಇರುವ ಗಣ ಸಮೂಹಕ್ಕೆ ಜಗದ್ಗುರುಗಳಾದ ಅಲ್ಲಮಪ್ರಭು ಸ್ವಾಮಿಗಳವರ ಶೂನ್ಯಸಿಂಹಾಸನಕ್ಕೆ ಕಾರಣಕರ್ತರಾಗಿ ಗುರುಲಿಂಗ ಜಂಗಮದ ದಾಸೋಹಕ್ಕೆ ದಿನಚರಿ ತೃಪ್ತಿಪಡಿಸಿ ಬೇಡಿದಿಷ್ಟಾರ್ಥಂಗಳ ಕೊಡುವುರಾಗಿ ೭೨ ಬಿರುದುಗಳಿಂದ ಉತ್ಸವಂಗೊಳ್ಳುತ್ತ ಪ್ರಧಾನತ್ವದಿಂದ ರಾಜ್ಯಕಾರ್ಯವಂ ನಡೆಸುತ್ತ ಇರಲಾಗಿ ಬಿಜ್ಜಳರಾಯನು ತನ್ನ ಕಾಲಕ್ಕೆ ಸರಿಯಾಗಿ ದುರ್ಬುದ್ಧಿ ಹುಟ್ಟಿ ಹರಳಯ್ಯ ಮಧುವರಸರೆಂಬ ಶಿವಶರಣರನ್ನು ಎಳಹೂಟೆಯಂ ಕಟ್ಟಿಸಿ ಎಳಿಸತಕ್ಕ ಪ್ರಯತ್ನವನ್ನು ಪಟ್ಟಿದ್ದರಿಂದ ಇಂತಹ ಉತ್ಪಾತವನ್ನು ಕಣ್ಣಿಂದ ನೋಡಬಾರದೆಂತ ಚನ್ನಬಸವರಾಜೇಂದ್ರರು ಈ ಕಾಲಸೂಚನೆಯನ್ನು ತಮ್ಮ ದಿವ್ಯ ಜ್ಞಾನದಿಂದ ತಿಳಿದು ಪ್ರಭುದೇವರ ಅನುಭವ ಮಂಟಪಕ್ಕೆ ಸಕಲ ಪ್ರಮಥ ಗಣಂಗಳನ್ನು ಕರಿಸಿ ಸೂಚಿಸಿ ಮುಂದಾಗುವ ಕಾಲಜ್ಞಾನ ಸೂಚನೆಯಂ ಸಿದ್ಧರಾಮೇಶ್ವರ ರುದ್ರಮುನಿ ಸ್ವಾಮಿಗಳು ಮುಂತಾದ ಗಣ ಸಮೂಹಕ್ಕೆ ಅಪ್ಪಣೆಯಂ ಕೊಟ್ಟು ಸಕಲ ಪ್ರಮಥರ ಮುಂತಿಟ್ಟುಕೊಂಡು

೧೨ಸಾವಿರ ದಂಡಿಗೆ ಅಧಿಪತಿಯಾದ ಸೈನ್ಯಾಧೀಶನಾದ ಡಿಳ್ಳಿಯಿಂದ ಬಂದ ಮಲ್ಲುಖಾನನೆಂಬ ವಜೀರನನ್ನು ಕರಿಸಿ ತಮ್ಮ ಗುರುಗಳಾದ ಅಲ್ಲಮ ಪ್ರಭು ಸ್ವಾಮಿಗಳು ತಮಗೆ ಸುವರ್ಣ ಪೀಠವಾದ ಶೂನ್ಯಸಿಂಹಾಸನ ಪ್ರಣವಶಿಖಾ ಶೈಲ ಈ ಮೂರೂ ವಸ್ತುಗಳ ಕೊಟ್ಟು ಶಕೆ ಅಂದರೆ ಶಾಲಿವಾಹನಶಕ ಏಳುನೂರಾಏಳನೆಯ ರಕ್ತಾಕ್ಷಿ ನಾಮ ಸಂವತ್ಸರದ ಕಾರ್ತೀಕ ಶುದ್ಧ ಪಾಡ್ಯದಲ್ಲಿ ಆ ವಸ್ತುಗಳ ಕೊಟ್ಟು ಇವುಗಳನ್ನು ನೀನು ಡಿಳ್ಳಿಗೆ ತೆಗೆದುಕೊಂಡು ಹೋಗುವಲ್ಲಿ ಕೆಲವು ದಿವಸದಲ್ಲಿ ನಿನಗೆ ಡಿಳ್ಳಿ ದವಲತ್ತು ಆಗಿ ಸಂಸ್ಥಾನವನ್ನು ನೀನೇ ಸುಖದಿಂದ ಆಳುವಿ, ಮುಂದೆ ನಿನ್ನ ಸಂಸ್ಥಾನವಾದ ಡಿಳ್ಳಿಗೆ ಮುಂದೆ ನಮ್ಮ ವಂಶ ಜರಾದ ಈರ್ವರು ಗಣಂಗಳು ಬಂದು ಮಹಿಮಾಪುರುಷರಾಗಿ ನಿಮ್ಮ ಪಟ್ಟದ ಸತ್ತ ಆನೆಗೆ ಜೀವವಂ ಪಡೆದು ಎಬ್ಬಿಸುತ್ತಾರೆ, ಅವರಿಗೆ ಈ ಮೂರು ವಸ್ತುಗಳ ಕೊಡುವುದೆಂದು ಅಪ್ಪಣೆಕೊಟ್ಟು ಮಲ್ಲೂಖಾನನಿಗೆ ನಾವು ನಮ್ಮ ಗಣ ಸಮೂಹ ಸಹಿತವಾಗಿ ಉಳವಿಗೆ ದಯಮಾಡಿಸು ವೆವು. ನಮ್ಮ ಬೆಂಬಲವಾಗಿ ಉಳವಿ ಸಮೀಪವಾದ ಕರಿಹೊಳೆಯ ಗಟ್ಟದ ವರೆಗು ನಿನ್ನ ದಂಡು ಸಮೇತವಾಗಿ ಬಾಹುದೆಂದು ಅಪ್ಪಣೆಯಂ ಕೊಟ್ಟು ಆ ವಜೀರನಾದ ಮಲ್ಲೂಖಾನನಿಗೆ ಉಡುಗೊರೆಯಂ ಕೊಟ್ಟು ಆಶೀರ್ವಾದವಂ ಮಾಡಿ ಕಳುಹಿಸಿಕೊಟ್ಟು ಆ ಮೇಲೆ ತಮ್ಮ ಶಿಷ್ಯರಾದ ಸೊನ್ನಲಪುರದ ಸಿದ್ಧರಾಮೇಶ್ವರ ದೇವರಿಗೆ ನೀವು ನಮ್ಮ ಸಹತ್ರಿಕರಾದ ಷಟ್‌ಸ್ಥಲ ಬ್ರಹ್ಮಿಗಳಾದ ಚನ್ನಂಜೈಯ್ಯ ಕೋಲು ಶಾಂತಯ್ಯ ಕುದುರೆ ಶಾಂತಯ್ಯಾ ಪಂಚದ ಶಾಂತಯ್ಯಾ ಮುಂತಾದ ಮುರುಸಾವಿರ ವಿರಕ್ತರಿಗೆ ಗುರುಗಳಾಗಿರುವದೆಂದು ಆಜ್ಞಾಪಿಸಿ ತಮ್ಮ ಶಿವಾನುಭವ ಚರಂತಿಗೆ ಪುಸ್ತಕವಂ ಕೊಟ್ಟು ಆಶೀರ್ವಾದವಂ ಮಾಡಿ ಆ ಮೇಲೆ ಗಣ ಪರ್ವದ ಉದ್ದಿಶ್ಯ ಹೋಗುತ್ತೇವೆ ಎಂದು ಬಿಜ್ಜಳರಾಯಗೆ ತಿಳಿಸಿ ಆ ನಂತರ ಗಣಪರ್ವವಂ ಮಾಡಿ ಮಲ್ಲೂಖಾನನ ದಂಡು ಸಮೇತವಾಗಿ ಎಲ್ಲ ಗಣತಿಂಥಿಣಿಯೊಡನೆ ಉಳವಿಗೆ ದಯಮಾಡಿಸುತ್ತಿರುವಲ್ಲಿ ಈ ಸಂಗತಿಯು ಬಿಜ್ಜಳರಾಯಗೆ ತಿಳಿದು ತನ್ನ ದಂಡು ಮಾರ್ಬಲವಂ ತೆಗೆದುಕೊಂಡು ಉಗ್ರಕೋಪದಿಂದ ಬೆನ್ನ ಹತ್ತಿ ಬರುವ ಕಾಲದಲ್ಲಿ ಹಿರಿಯ ಹೆಗ್ಗಡತಿಯು ಹೊನ್ನಮ್ಮನ ಚಾವಡಿಯ ಬಳಿಯ ಜಗದೇವ ಮಲ್ಲಿ ಬೊಮ್ಮಯ್ಯಗಳೆಂಬ ಶರಣರು ಪಂಜುಗಾರರಾಗಿ ಶಿವ ಶರಣ ದ್ರೋಹಿಯಾದ ಬಿಜ್ಜಳರಸನ ಇರಿಯುತ್ತೇವೆ ಎಂದು ಮೂರು

ವೇಳೆ ಸಾರಿ ರಕ್ತಾಕ್ಷಿನಾಮ ಸಂವತ್ಸರದ ಕಾರ್ತಿಕ ಶುದ್ಧ ಪೌರ್ಣಿಮೆ ಮಂಗಳವಾರ ನಿಶಿರಾತ್ರಿಯಲ್ಲಿ ಬಿಜ್ಜಳರಸನನ್ನು ಸಂಹರಿಸಿ ಬುಧವಾರ ಉದಯವ ಮಾಡುತ್ತ ಕಲ್ಯಾಣ ಪಟ್ಟಣವನ್ನು ಬಿಟ್ಟು ದಯಮಾಡಿಸುವ ಮಾರ್ಗದಲ್ಲಿ ತಡಗೋಡದಲ್ಲಿ ಅಳಿಯ ಬಿಜ್ಜಳನ ದಂಡು ತಡೆದ ಕಾರಣ ಆ ಸ್ಥಳದಲ್ಲಿ ತಡಗೋಡೆಂಬ ಗ್ರಾಮ ನಿರ್ಮಾಣವಾಯಿತ್ತು. ಅಲ್ಲಿಂದ ಮಾರ್ಗದಲ್ಲಿ ಗೊಡಚಿಯ ಗಿಡದ ಹುತ್ತದಲ್ಲಿ ಚಿಕ್ಕ ದೇವಾಲಯವನ್ನು ಕಟ್ಟಿ ಆ ಗುಡಿಯಲ್ಲಿ ವೀರಗಂಟೆ ಮಡಿವಾಳಯ್ಯಗಳು ತಮ್ಮ ವೀರೇಶನಂ ಸ್ಥಾಪಿಸಿ ಕಡಕೊಳ್ಳದಲ್ಲಿ ಶಿವಾರ್ಚನೆಯನ್ನು ಮಾಡಿ ಪಾದೋದಕವಂ ಮುಗಿದು ಅಲ್ಲಿಂದ ಸತ್ತಿಗೇರಿಯಲ್ಲಿ ಸತ್ತಿಗೆಯಂ ಹಿಡಿಸಿಕೊಂಡು ಮೊದಲೂರಲ್ಲಿ ಅಳಿಯ ಬಿಜ್ಜಳನ ದಂಡಿಗೂ ಶರಣರಿಗೂ ಯುದ್ಧಕ್ಕೆ ಮೊದಲಾಯಿತು. ತಲೆಯೂರಲ್ಲಿ ತಲೆಯು ಕಡಿದು ಮುರಗೋಡಲ್ಲಿ ಮುರಿದೋಡಿಸಿ ಶರಣರ ಬೆಂಬಲವಾದ ಮಲ್ಲೂಖಾನನ ದಂಡು ಕೆಂಗೇರಿಯಲ್ಲಿ ರಕ್ತಗಳಾದ ಆಯುಧಗಳನ್ನು ತೊಳೆದುಕೊಂಡು ಮೂಗಬಸ್ತಿಯಲ್ಲಿ ರವಡೆಜಾಗುಟಿಯಂ ಹೊಡಿಸಿ ಕಾದರವಳ್ಳಿಯಲ್ಲಿ ಕಾದಾಡಿ ಸಾಂಬ್ರಾಣಿಯಲ್ಲಿ ಸತ್ತಿತ್ತು, ಅಲ್ಲಿಂದ ಮುಂದಕ್ಕೆ ದಯಮಾಡಿಸುವ ಅಷ್ಟರಲ್ಲೆ ಎಲ್ಲ ಗಣಂಗಳ ಸಮೂಹವು ನಿಂತು ಅಳಿಯ ಬಿಜ್ಜಳನ ದಂಡು ಬರುತ್ತದೋ ಇಲ್ಲವೊ ಎಂದು ಹಿಂವಕ್ಕೆ ಹಣೆಯ ಮೇಲೆ ಕೈಹಚ್ಚಿ ನೋಡಿದ ಸ್ಥಲದಲ್ಲೆ ಮೇಲುಗೈ ಯಲ್ಲಾಪುರವೆಂಬ ಗ್ರಾಮ ನಿರ್ಮಾಣವಾಗಿದೆ. ಈ ಗ್ರಾಮ ಮುಂತಾದ ಮೇಲೆ ಬರೆದ ಗ್ರಾಮಗಳು ಶರಣರು ಯಾವ ಯಾವ ಕಾರ್ಯಗಳ ಮಾರ್ಗದಲ್ಲಿ ನಡೆಸಿದ್ದಾರೋ ಆ ಹೆಸರಿನ ಗ್ರಾಮಗಳು ನಿರ್ಮಾಣವಾಗಿವೆ. ಅಲ್ಲಿಂದ ಉಳವಿಗೆ ಹೋಗುವ ಮಾರ್ಗದಲ್ಲಿದ್ದ ಒಂದು ಬೆಟ್ಟದಲ್ಲಿ ಪ್ರಮಥರು ಶಿವಾರ್ಚನೆಯ ಮಾಡಿದ ಸ್ಥಳದಲ್ಲಿ ಲಕ್ಷೇಪ ಲಕ್ಷ ಮಜ್ಜನ ಷಾಲೆ ಧೂಪಾರತಿಗಳನ್ನು ಬಿಟ್ಟು ಮುಂದಕ್ಕೆ ಚಿತ್ತೈಸಿದ ಕಾರಣ ಆ ಮಜ್ಜನ ಸಾಲೆ ಧೂಪಾರತಿಗಳು ಇದ್ದ ಸ್ಥಳಕ್ಕೆ ಹುತ್ತು ಬೆಳೆದು ರಾಶಿ ತುಂಬ ಕಾಣುತ್ತವೆ. ಆ ಸ್ಥಳದಲ್ಲಿ ಧೂಪದ ಗುಡಿ ಎಂತಲು ಹುತ್ತದ ಗುಡಿ ಎಂತಲು ಹೀಗೆ ಆ ಸ್ಥಳಗಳಲ್ಲಿ ದೇವಾಲಯವು ಉಂಟಾಗಿದೆ. ಅಲ್ಲಿಂದ ಮಾರ್ಗದಿ ಕರಿಯ ಹೊಳೆಯ ಮುಂತಾದ ನದಿ ಬೆಟ್ಟಗಳು ಕಾಡು ವನಾಂತರಗಳನ್ನು ದಾಂಟಿ ದಯಮಾಡಿಸುವಲ್ಲಿ ಅಘೋರತರವಾದ ರೂಪ

ವುಳ್ಳ ಬ್ರಹ್ಮರಾಕ್ಷಸಿಯು ಬಂದು ನಿಲ್ಲಲು ಅವನ್ನು ನೋಡಿ ನೀನು ಇಲ್ಲಿ ಕಾವಲು ಇದ್ದುಕೊಂಡು ಇರುವುದೆಂದು ಅಪ್ಪಣೆಕೊಟ್ಟು ಆ ಬೆಟ್ಟವನ್ನು ಏರಬೇಕೆಂಬುವದರೊಳಗಾಗಿ ಅಲ್ಲಿಗೆ ಅಳಿಯ ಬಿಜ್ಜಳರಾಯನು ಉಗ್ರಕೋಪದಿಂದ ತನ್ನ ದಂಡು ತೆಗೆದುಕೊಂಡು ಬಂದು ರಾಕ್ಷಸಿ ಮುಂತಾದ ಮಲ್ಲೂಖಾನನ ದಂಡು ಅಲ್ಲದೆ ಶರಣರ ಕೂಡ ಸಹಿತವಾಗಿ ಯುದ್ಧವನ್ನು ಮಾಡಲು ಅಷ್ಟರೊಳಗಾಗಿ ಅಳಿಯ ಬಿಜ್ಜಳನ ದಂಡು ಇದೆ ಬೆಟ್ಟದ ಬಲಭಾಗದ ಉತ್ತರ ದಿಕ್ಕಿನ ಮಾರ್ಗವಾಗಿ ಬೆಟ್ಟವನ್ನು ಹತ್ತುತ್ತ ಇರುವಲ್ಲಿ ಆ ಪ್ರಮಥ ಗಣಂಗಳೊಡನೆ ಇರ್ದ ಕಿನ್ನರಿಯ ಬ್ರಹ್ಮಯ್ಯಗಳೆಂಬ ಶರಣರು ಇದಿರಿಗೆ ನಿಂತು ಆ ದಂಡಿನ ಸಂಗಡ ಜಗಳಮಾಡಿ ದಂಡು ಮುಂದಕ್ಕೆ ಬಾರದ ಹಾಗೆ ಆ ಗುಡ್ಡದ ಸುತ್ತು ಹೊಳೆಯು ನಿರ್ಮಿಸಿದನು. ಅದರಿಂದ ಅಳಿಯ ಬಿಜ್ಜಳನ ದಂಡು ಮುಂದಕ್ಕೆ ಹೋಗುವದಕ್ಕೆ ಆಸ್ಪದವಾಗದ ಕಾರಣ ಶರಣರ ಕೂಡ ಅಲ್ಲೇ ಯುದ್ಧವನ್ನು ಮಾಡಿದ್ದರಿಂದ ಆ ಬ್ರಹ್ಮರಾಕ್ಷಸಿಯು ಘೋರ ರೂಪಿನಿಂದ ಸಿಡಿಲಿನೋಪಾದಿಯಲ್ಲಿ ಗರ್ಜಿಸುತ್ತ ಶರಣರ ಬೆಂಬಲವಿರ್ದ ಈ ರಾಕ್ಷಸಿ ಸಹಿತವಾಗಿ ಕ್ಕೂಗಿನ ಮಾರಿ ತಂದಿಗಳು ಮಡಿವಾಳ ಮಾಚಿದೇವರು ಮುಂತಾದ ಮಲ್ಲುಖಾನನ ದಂಡು ಅಳಿಯ ಬಿಜ್ಜಳನ ಆನೆ, ಕುದುರೆ, ಕಾಲಾಳು ಮುಂತಾದ ಸೇನೆಯಂ ಮುಡಿಪಿ ಅಳಿಯ ಬಿಜ್ಜಳನ ಕೈಸೆರೆಯಲ್ಲಿ ಹಿಡಿದುಕೊಂಡು ಶರಣರೊಡನೆ ಗೂಳಿಯುದಲ್ಲಿರ್ದ ಶ್ರೀ ಚನ್ನದಂಡನಾಯಕನಿಗೆ ಒಪ್ಪಿಸಲು ಇದ ಕಂಡು ಶ್ರೀಚನ್ನಬಸವರಾಜೇಂದ್ರರ ಮಾತೆಯಾದ ಅಕ್ಕನಾಗಲಿದೇವಿಯರು ಶಿವಶರಣರಲ್ಲಿ ಇಂಥ ಶತ್ರು ಜಯಾರ್ಥವಾದ ಪ್ರಾಣಹಿಂಸೆಯು ಸಲ್ಲದು. ಈ ಅಳಿಯ ಬಿಜ್ಜಳನ ಸೆರೆಯಂ ಬಿಟ್ಟು ಆತನ ಆನೆ, ಕುದುರೆ, ಕಾಲಾಳು, ರಾವುತ ರಾಣಿಯರು, ಪ್ರಧಾನರು ಮುಂತಾದ ಮಡಿದವರಿಗೆ ಪ್ರಾಣವಂ ಕೊಟ್ಟು ರಕ್ಷಿಸಿ ಅಳಿಯ ಬಿಜ್ಜಳನಿಗೆ ಕಲ್ಯಾಣಪುರದರಸ ಬಿಜ್ಜಳನ ಪಟ್ಟವಂ ಕಟ್ಟಿ ಕಳುಹಿಸುವುದೆಂದು ಶ್ರೀ ಚನ್ನಬಸವರಾಜೇಂದ್ರರಿಗೆ ಅಪ್ಪಣೆಯಂ ಕೊಡಲು ದೇವಿಯವರ ನಿರೂಪ ಪ್ರಕಾರ ನೃಪತಿಗೆ ಶ್ರೀ ಚನ್ನಬಸವರಾಜೇಂದ್ರರು ಪಟ್ಟವಂ ಕಟ್ಟಿ ಅವನ ಆನೆ, ಕುದುರೆ, ಕಾಲಾಳು ಮಂತ್ರಿ ಸೇನಾಧಿಪರು ಮುಂತಾದ ದಂಡಿಗೆ ಪ್ರಾಣವಂ ಕೊಟ್ಟು ನೀನು ಕಲ್ಯಾಣಕ್ಕೆ ಪೋಗುವುದೆಂದು ಆಶೀರ್ವಾದವಂ ಮಾಡಲು ಅಳಿಯ ಬಿಜ್ಜಳನು ತನ್ನ ಚತುರಂಗ ಮಾರ್ಬಲವು ಬದುಕಿದ್ದುದನು ನೋಡಿ ಸಂತೋಷಿತನಾಗಿ ಶ್ರೀ ಚನ್ನ

ದಂಡೇಶನಂ ಸ್ತುತಿಸಿ, ಕೊಂಡಾಡಿ, ಶರಣಾಗತನಾಗಿ ಮುಂದೆನಗೆ ಗತಿ ಆವುದೆಂದು ನಿರೂಪಿಸುವದೆಂದು ಹೇಳಿಕೊಳ್ಳಲು ಶ್ರೀಚನ್ನದಂಡನಾಯಕರು ಅವನ ಭಾವಕ್ಕೆ ಮೆಚ್ಚಿ ನೀನು ಕಲ್ಯಾಣದರಸಾಗಿ ಸುಖದಿಂದಲ್ಲಿ ಅರುವತ್ತು ವರುಷ ಪಟ್ಟವಾಳುವಿ, ಆ ಮೇಲೆ ಹರನ ಅಪ್ಪಣೆಯಿಂ ರಾಕ್ಷಸ ಪೀತಾಂಬರರು ಮರ್ತ್ಯದಿ ಜನಿಸಿ ತುರುಕರಾಗಿ ಕಲ್ಯಾಣಕ್ಕೆ ಬಂದು ಏಳನೂರು ಮೇಲೆಪ್ಪತ್ತು ವರುಷ ಆ ಕಲ್ಯಾಣ ಪುರದರಸರಾಗಿ ಆ ದೇಶವಂ ಆಳಿ ಆ ಮೇಲೆ ಕಲ್ಯಾಣವಂ ಕೆಡಿಸಿ ಕಲಬುರಿಗೆಯಂ ಕಟ್ಟಿ ತುರಕಾಣ್ಯ ದೇಶವಾಗುವದು ಎಂದು ಅಪ್ಪಣೆಯ ಕೊಟ್ಟು ಅಳಿಯ ಬಿಜ್ಜಳರಾಯನಂ ಕಳುಹಿಸಿ ಅನಂತರ ಅಕ್ಕನಾಗಲೆ ಚನ್ನದಂಡನಾಯಕರು ಆ ಗಣ ಸಮೂಹದಲ್ಲಿರುವ ಜಗದೇವ ಮಲ್ಲಿ ಬೊಮ್ಮಣ್ಣಗಳೀರ್ವರಂ ಕರೆದು ನೀವು ಶಿವಶರಣ ಗಣಂಗಳಾದ ಕಾರಣ ನಿಮ್ಮ ಚಿತ್ತದಲ್ಲಿ ಪ್ರಾಣಹಿಂಸೆಯಾದ ಕೊಲೆಯಂ ನೆನೆಯಲಾಗದು, ನೆನೆದು ಬಿಜ್ಜಳ ರಾಯನಂ ಕೊಂದ ಕಾರಣದಿಂ ನೀವು ಈರ್ವರು ಮರ್ತ್ಯದಿ ಜನಿಸಿ ತೊರುಗಲೆಂಬ ಪುರದ ಹೊರವಳಯದಿ ಆ ಪುರದ ಸೀಮಾಂತರದಲ್ಲಿ ಪುಟ್ಟಿ ನೀವಿಬ್ಬರು ವೀರಗುಂಡ ಬ್ರಹ್ಮಯ್ಯಗಳೆಂಬ ಪೆಸರಿನಿಂದ ಅಲ್ಲಿ ಇರುವಿರಿ, ಅಗ್ಗ ಆ ಪುರದರಸು ಗಣಪತಿರಾಯನ ಅರಮನೆಯಲ್ಲಿ ಮೊರಾರಿ ಮನುಷ್ಯರೂಪಿನಿಂ ಬಂದು ದ್ರವ್ಯವಂ ಕದ್ದು ನಿಮ್ಮೀರ್ವರ ಮೊರೆ ಬೀಳಲು ಆತನಂ ನೀವು ಕೊಡದಿರಲು ನೃಪಾಲನು ನಿಮ್ಮಿಬ್ಬರನ್ನು ಶೂಲವನೇರಿಸಲು ನಿಮಗೆ ಸಾಂಬನು ಮೆಚ್ಚಿ ಪುಷ್ಪಕದಿಂ ಶಿವಪುರಕ್ಕೆ ಕರೆದು ಒಯ್ವನು ಎಂದು ಅಪ್ಪಣೆಯಂ ಕೊಟ್ಟು ಕಳುಹಿಸಲು ಆ ಪ್ರಕಾರ ಅವರಿಬ್ಬರಿಗೆ ಮೋಕ್ಷವಾದ ಸ್ಥಲವು ತೊರಗಲು ಬನ್ನೂರ ಬಳಿಯ ಮಧ್ಯದಲ್ಲಿ ಈಗ ಆ ಸ್ಥಲದಲ್ಲಿ ಅವರ ಹೆಸರಿನ ದೇವಾಲಯವೂ ಗ್ರಾಮವೂ ಇರುತ್ತವೆ. ಆ ನಂತರ ಮಡಿವಾಳಯ್ಯಗಳ ದೇವರ ಹಿಪ್ಪರಗಿ ಕಲ್ಲಿನಾಥ ಲಿಂಗದಿ ಐಕ್ಯವಾಗುವದೆಂದು ಶ್ರೀಚನ್ನದಂಡೇಶನು ಕಳುಹಿ ಇತ್ತ ಮರ್ತ್ಯಲೋಕದಿ ಇದ್ದ ಗಣವರರು ಮುಂತಾದ ವಜೀರ ಮಲ್ಲುಖಾನ ಅವನ ದಂಡು ೧೨ ಸಾವಿರ ಸೈನ್ಯಗಳ ಸಹಿತರಿಗೆ ಆಶೀರ್ವಾದವಂ ಮಾಡಿ ಕಳುಹಿ ತಮ್ಮ ಬೆಂಬಲವಾಗಿ ಬಂದ ರಾಕ್ಷಸಿಗೆ ಈ ಉಳವಿ ಕ್ಷೇತ್ರದಲ್ಲಿ ನಿನ್ನ ಪೂಜೆ ನಿನ್ನ ಉತ್ಸವ ಮೊದಲಾಗಿ, ನಮ್ಮ ರಥೋತ್ಸವವು ಕಡೆಗೆ ಆಗುವದೆಂದು ಅಪ್ಪ

ಣೆಯಂ ಕೊಟ್ಟು ಆ ಬಿನ್ನೈಸಿಕೊಂಡ ರಾಕ್ಷಸಿಗೆ ನಾವು ನಮ್ಮ ಗಣ ಸಮೂಹ ಸಹಿತವಾಗಿ ಈಗ ಸಾಂಬಲೋಕಕ್ಕೆ ದಯಮಾಡಿಸಿ ಮತ್ತೆ ಪುನಃ ಕರ್ಮ ಕಲಿ ನಾಶನಕಾಗಿ ಧರ್ಮಸ್ಥಾಪಿತಕಾಲಕ್ಕೆ ಈ ಲೋಕಕ್ಕೆ ದಯಮಾಡಿಸಿ ಬರುವೆವು, ಆ ಪರಿಯಂತರ ಈ ಕ್ಷೇತ್ರಪಾಲನಾರ್ಥವಾಗಿ ನೀನು ಇಲ್ಲಿ ಇರುವುದು, ನಾವು ಇಲ್ಲಿಗೆ ಬಂದ ನಂತರ ನಿನಗೆ ಮೋಕ್ಷವಂ ಕೊಡುವೆವು ಎಂತ ನಿರೂಪಿಸಿ ಈ ಕ್ಷೇತ್ರದಲ್ಲಿ ಪರಶು ಜನರು ಬಂದು ತಮ್ಮ ಹೇರುವ ಎತ್ತುಗಳ ಬಿಟ್ಟರೆ ನೀನು ಕಾಯ್ದುವದೆಂದು. ಬೈಲಬಸವ ನಲ್ಲಿ ಕುರುಹು ಇಟ್ಟು ಅದೇ ಸ್ಥಳದಲ್ಲಿ ಪ್ರಮಥರು ಸಲಿಸಿದ ಪರ್ಣಗಳ ದಹನವಂ ಮಾಡಿದ ಭಸ್ಮ ಬೆಳೆದಲ್ಲಿ ಆ ಭಸ್ಮವ ಶಿವಭಕ್ತರು ಧರಿಸು ವುದಕ್ಕೆ ಉಂಡಿಗಟ್ಟುವ ಉದ್ದಿಶ್ಯ ಹರಳಯ್ಯನವರ ಹೆಸರಿನ ಚಿಲು ಮೆಯಂ ತೆಗಿಸಿ ಈ ಉದಕದಿಂದಲೆ ಆ ಭಸ್ಮವ ಕಲಿಸಿದಲ್ಲಿ ಉಂಡಿ ಆಗುವದು, ಉಳಿದ ಉದಕದಿಂದ ಆಗಬಾರದೆಂದು ಕುರುಹು ಇಟ್ಟು ಅಲ್ಲಿಂದ ಉಳಿವೆಯ ಮಹಾಮನೆಗೆ ದಯಮಾಡಿಸಿ, ಆ ಗಣಸಮೂಹದಲ್ಲಿ ರೇಚಿದೇವನ ಕರಿಸಿ, ನೀನು ಕಲ್ಯಾಣದಲ್ಲಿ ಗಣತೃಪ್ತಿ ಮಾಡಿದಾಗ್ಗೆ ಎಲ್ಲ ಗಣಸಮೂಹಕ್ಕು ಬಿಳಿ ಎಲೆಯಂ ಕೊಟ್ಟು ಒಬ್ಬರಿಗೆ ಕರಿ ಎಲೆಯಂ ಕೊಟ್ಟ ಕಾರಣದಿಂ ನೀವು ಈ ದೋಷದಿಂದ ಮರ್ತ್ಯದಿ ಜನಿಸಿ ಜಂಗಮ ದಾಸೋಹದಿಂ ದೋಷವ ಕಳೆದು ಸಾಂಬಲೋಕಕ್ಕೆ ಬರುವುದೆಂದು ರೇಚಿದೇವನಂ ಪಾವುಗೆಯಂ ತರಲು ಬೈಲಬಸವನಾಲಯಕ್ಕೆ ಕಳುಹಿಸಿ, ಬರೆದ ಪತ್ರವಂ ಮಹಾಮನೆಯ ದ್ವಾರಕ್ಕೆ ಹಚ್ಚಿ ತಮ್ಮ ನಿಯಮಾಚಾ ರದ ೧೨ ಸಾವಿರ ಷಟ್‌ಸ್ಥಲ ಬ್ರಹ್ಮಿಗಳಾದ ವಿರತರು ಮುಂತಾದ ಸಕಲ ಗಣ ಸಹಿತ ಹೊನ್ನರಳಿ ಮರಕ್ಕೆ ಚಿನ್ನದುಯ್ಯಾಲೆಯಂ ಕಟ್ಟಿ ಮುಕ್ತಿದ್ವಾರವೆಂಬ ಉಳಿವೆಯ ಮಹಾಮನೆಯಲ್ಲಿ ಗಮಿಸಿದರು.

ಆನಂತರ ಪಾವುಗೆಯಂ ರೇಚಿದೇವನು ತಂದು ಮಹಾಮನೆಯಲ್ಲಿ ನೋಡಲು ಅಲ್ಲಿಯ ಪತ್ರವಂ ಓದಿ ನೋಡಿ ಚಿಂತಾಕ್ರಾಂತನಾಗಿ ಮರ್ತ್ಯದಿ ಜನಿಸಿ ಜಂಗಮ ದಾಸೋಹದಿಂದ ಮುಕ್ತನಾದನು. ಈ ಉಳವಿ ಕ್ಷೇತ್ರ ದಲ್ಲಿ ಪ್ರಮಥರು ಮುಕ್ತರಾದರು, ಎಂಬುದಕ್ಕೆ ದೃಷ್ಟಾಂತವೇನೆಂದರೆ, ಪ್ರಮಥರು ಕರಿಯ ಹೊಳೆಯ ದಾಂಟಲು ರಾಕ್ಷಸಿಯನ್ನು ಕಂಡ ಬೆಟ್ಟಕ್ಕೆ ರಕ್ಷಿ ಬೆಟ್ಟವೆಂತಲು ಪ್ರಮಥರಿಗು ಅಳಿಯ ಬಿಜ್ಜಳನ ದಂಡಿಗು ಜಗಳವಾದ ಸ್ಥಳಕ್ಕೆ ಜಗಳ ಬೆಟ್ಟವೆಂತಲು, ದಂಡು ಬಾರವಂತೆ

ಕಿನ್ನರಿಯ ಬೊಮ್ಮಯ್ಯಗಳು ಹೊಳೆಯಂ ನಿರ್ಮಿಸಿದ ಕಾರಣ ಕಿನ್ನರಿಯ ಬೊಮ್ಮಯ್ಯನ ಹೊಳೆ ಎಂತಲು, ಪ್ರಮಥರು ಕೂಡಿದ ಬೈಲಿಗೆ ಬೈಲ ಬಸವನ ಗುಡಿಯೆಂತಲು, ಉಳಿವಿಯಲ್ಲಿ ಚನ್ನಬಸವೇಶ್ವರನ ಮಠವೆಂತಲು, ಹರಳಯ್ಯನ ಚಿಲುಮೆಯು ಮಹಾಮನೆ ಗವಿಯು ಅಕ್ಕನಾಗಮ್ಮನ ಗವಿಯು ಉಳಿವಿ ವಿಭೂತಿ ರುದ್ರಾಕ್ಷಿ ಕಣಜವು ಕೈಲಾಸದ ದ್ವಾರವು ಇಂತು ಅನೇಕ ಮಹತ್ವವುಳ್ಳ ಸ್ಥಲಗಳು ಇರುವುದೆ ದೃಷ್ಟಾಂತವು. ಶ್ರೀಬಸವರಾಜೇಂದ್ರರು ಸಂಗಮನಾಥನಲ್ಲಿ ಅಡಕವಾದ ಮೂರು ತಿಂಗಳಿಗೆ ಚನ್ನಬಸವರಾಜೇಂದ್ರರು ಉಳಿವೆ ಮಹಾ ಮನೆಗೆ ದಯಮಾಡಿಸಿದರು. ಇಲ್ಲಿಗೆ ಅಲ್ಲಮ ಪ್ರಭುಸ್ವಾಮಿಗಳವರ ಹಿಡಿದು ಶಿವಾನುಭವ ಪಟ್ಟವೆರಡು.

---

## ಶಿದ್ಧರಾಮೇಶ್ವರ-

ಮೂರನೆಯ ಶಿವಾನುಭವ ಚರಂತಿಗೆ ಪಟ್ಟದವರಾದ ಸೊನ್ನಲಾಪುರದ ಸಿದ್ಧರಾಮೇಶ್ವರನು ಸೊನ್ನಲಾಪುರದಲ್ಲಿ ಕೆರೆಯಂ ರಚಿಸಿ ಗಂಗೆಯಂ ತರಿಸಿ ಶ್ರೀಶೈಲ ಮಲ್ಲಿಕಾರ್ಜುನ ಮುಂತಾದ ಅನೇಕ ಶಿವಲಿಂಗವಂ ಪ್ರತಿಷ್ಠಿಸಿ ಅನೇಕ ಮಹಿಮೆಗಳ ತೋರುತ್ತ ವೀರಶೈವ ಮತವಂ ಉದ್ಧರಿಸುತ್ತ ತಮ್ಮ ಷಟ್‌ಸ್ಥಲದ ಗಣಸಮೂಹದೊಡನೆ ಆಸ್ಥಲದಲ್ಲಿ ಬಂದ ಭಕ್ತಗಣಂಗಳಿಗೆ ಷಟ್‌ಸ್ಥಲ ಜ್ಞಾನೋಪದೇಶವಂ ಮಾಡುತ್ತ ಕೆಲವು ದಿನಗಳಲ್ಲಿದ್ದು ಆ ಮೇಲೆ ಕಲ್ಯಾಣದ ತ್ರಿಪುರಾಂತಕ ಕೆರೆಯ ತಟಿಯಲ್ಲಿ ಇರುವ ಮರಿದೇವರ ಗುಡ್ಡದಲ್ಲಿರುವ ರುದ್ರಮುನಿ ಸ್ವಾಮಿಗಳವರ ಬಳಿಗೆ ತಮ್ಮ ಗಣಸಮೂಹದೊಡನೆ ದಯಮಾಡಿಸಿ ಸ್ವಲ್ಪ ದಿವಸವಲ್ಲಿದ್ದು ಅನಂತರ ರುದ್ರಮುನಿ ಸ್ವಾಮಿಗಳವರಿಗೆ ಸೊನ್ನಲಾಪುರದ ಸಿದ್ಧರಾಮ ಸ್ವಾಮಿಗಳವರು ತಮ್ಮ ಗುರುಗಳಾದ ಶ್ರೀಚನ್ನಬಸವರಾಜದೇವರು ನಿರೂಪಿಸಿದ ಪ್ರಕಾರ ಅಪ್ಪಣೆ ಕೊಟ್ಟಿದ್ದೇನಂದರೆ— ನೀವು ಹಿಂದೆ ನಿಮ್ಮ ಪಿತೃವಾದ ರೇಣುಕರು ಈ ಮರ್ತ್ಯದಿ ಪರಮೇಶ್ವರನ ಆಜ್ಞೆಯಿಂದುದಿಸಿ ಶಿವಮತವನುದ್ಧರಿಸಿ ಅನೇಕ ಮಹಿಮೆಗಳಂ ಮಾಡಿದಲ್ಲಿ ಇವರಿಗೆ ಸಕಲ ದೇಶದರಸುಗಳು ತಮ್ಮ ತಮ್ಮ ಪುತ್ರಿಯರಂ ಕೊಟ್ಟು ವಿವಾಹ ಮಾಡಿದಲ್ಲಿ ಆ ರೇಣುಕರು ತ್ರಿಪುರಾಂಕ ಕೆರೆಯ

ಶಿವಾನುಭವ ಗ್ರಂಥಮಾಲಾ ನಂ॥ ೩೨

# ಶ್ರೀ ಚನ್ನಬಸವೇಶ್ವರನ ವಚನಗಳು.



ಸಂಪಾದಕರು.

**ರಾ॥ ಸಾ॥ ಫ. ಗು. ಹಳಕಟ್ಟಿ**
ಬಿ. ಎ. ಎಲ್. ಎಲ್. ಬಿ.

**ವಿ ಜಾ ಪು ರ .**



**ಬೆಲೆ ೧೨ ಆಣೆ.**

# ಪ್ರಸ್ತಾವನೆ.



ಚನ್ನಬಸವೇಶ್ವರನ ವಚನಗಳನ್ನು ಎರಡು ಹಸ್ತಲಿಖಿತ ಪ್ರತಿಗಳ ಸಹಾಯದಿಂದ ಸಿದ್ಧಪಡಿಸಿ ಮುದ್ರಿಸಿರುತ್ತೇವೆ. ಇವುಗಳಲ್ಲಿ ಒಂದು ಪ್ರ ು ವಿಜಾಪುರದಲ್ಲಿ ಶಿ. ಮೂ. ಸೊಪ್ಪಯ್ಯನವರ ಮಠದಲ್ಲಿ ದೊರೆ ಮತ್ತೊಂದು ಗೋಕಾವಿಯಲ್ಲಿ ಡಾ. ಎಸ್. ಸಿ. ನಂದೀಮಠ ಎಂ. ಎ. (ಪಿ. ಎಚ್. ಡಿ.) ಇವರು ದೊರಕಿಸಿ ಕಳುಹಿಸಿದ್ದು. ಎರಡೂ ಪ್ರತಿಗಳು ಅಷ್ಟು ಶುದ್ಧವಾದವುಗಳಲ್ಲ. ಇವುಗಳಲ್ಲಿ ಗೋಕಾವಿಯ ಪ್ರತಿಯು ಹೆಚ್ಚಿಗೆ ಶುದ್ಧವಾದದ್ದಿದ್ದು ಅದನ್ನೇ ಮುಖ್ಯವಾಗಿ ಅವಲಂಬಿಸಿ ಈಗಿನ ಪ್ರತಿಯನ್ನು ಸಿದ್ಧಗೊಳಿಸಿದ್ದೇವೆ. ಚನ್ನಬಸವೇಶ್ವರನ ವಚನಗಳ ಹಳೇಪ್ರತಿಗಳು ಇದ್ದವರು ಅವುಗಳನ್ನು ನಮ್ಮ ಕಡೆಗೆ ಕಳಿಸಿದಲ್ಲಿ ನಾವು ಅವರಿಗೆ ಬಹಳ ಆಭಾರಿಯಾಗುವೆವು. ಅವುಗಳ ಸಹಾಯದಿಂದ ಹೆಚ್ಚಿಗೆ ಶುದ್ಧವಾದ ಪ್ರತಿಯನ್ನು ಮುಂದೆ ಹೊರಡಿಸಲು ನಮಗೆ ಬಹಳ ಅನುಕೂಲವಾಗುವದು.

ಚನ್ನಬಸವನ ವಚನಗಳಾದರೂ ಅತ್ಯಂತ ಮಹತ್ವವಾದವುಗಳು ಇವೆ. ಇವುಗಳಲ್ಲಿ ಆಚಾರ ವಿಷಯಕವಾದ ವಚನಗಳು ಹೆಚ್ಚಾಗಿ ತೋರಿಬರುತ್ತವೆ. ವೀರಶೈವ ಆಚಾರಗಳ ಮರ್ಮಗಳನ್ನು ತಿಳಿಯಲಿಚ್ಛಿಸುವವರಿಗೆ ಇವು ಬಹಳ ಸಹಾಯಕವಾಗದೆ ಇರವು.

ಚನ್ನಬಸವೇಶ್ವರನು ಬಸವೇಶ್ವರನ ಕಾಲದಲ್ಲಿ ಅತ್ಯಂತ ಮಹತ್ವದ ಪುರುಷನಾಗಿ ಹೋಗಿರುವನು. ಅವನು ಕೇವಲ ಧಾರ್ಮಿಕ ಪ್ರಸಾರ ಕಾರ್ಯದಲ್ಲಷ್ಟೇ ಅಲ್ಲ, ಅನೇಕ ರಾಜಕೀಯ ಕಾರ್ಯಗಳಲ್ಲಿಯೂ ಬಸವೇಶ್ವರನಿಗೆ ಅತ್ಯಂತ ಸಹಾಯಕನಾಗಿ ವರ್ತಿಸಿದನು. ಅವನ ಚರಿತ್ರೆಯು ಬಹಳ ಮಹತ್ವದ್ದಾಗಿರುವದು. ಆದರೆ ಇದನ್ನೆಲ್ಲ ನಾವು ಈ ಪ್ರಸ್ತಾವನೆಯಲ್ಲಿ ಉಲ್ಲೇಖಿಸುವದು ಅಪ್ರಸ್ತುತವಾದ್ದರಿಂದ ಅದನ್ನು ಇಲ್ಲಿ ಸಮಾಲೋಚಿಸುವ ಅವಶ್ಯವಿರುವದಿಲ್ಲ.

ಚನ್ನಬಸವೇಶ್ವರನ ವಚನಗಳು ಈ ಗ್ರಂಥಗಳಲ್ಲಿರುವವಲ್ಲದೆ ಇನ್ನೂ ಅನೇಕವುಗಳು ಉಪಲಬ್ಧವಿರುತ್ತವೆ. ಅವೆಲ್ಲವುಗಳನ್ನು ಈಗಿನ ಸಂಗ್ರಹಕಾರನು ಇದರಲ್ಲಿ ಸಂಗ್ರಹಿಸಿರುವದಿಲ್ಲ ಅವನು ಈಗಿನ ಗ್ರಂಥವನ್ನು ಚನ್ನಬಸ

ವನ ಷಟ್‌ಸ್ಥಲ ವಿಚಾರಗಳನ್ನು ಅರುಹುವ ಉದ್ದೇಶದಿಂದ ಅವಶ್ಯವಿದ್ದಷ್ಟೇ ವಚನಗಳನ್ನು ಆರಿಸಿ ಗ್ರಂಥದಲ್ಲಿ ನಿರೂಪಿಸಿರುವನು. ಈ ನಿರೂಪಣೆಯು ಸರ್ವ ಮಾನ್ಯವಾಗಿರುವದರಿಂದ, ಈ ಗ್ರಂಥವನ್ನು ಇದ್ದಕ್ಕಿದ್ದ ಹಾಗೆಯೇ ನಾವು ಪ್ರಕಟಿಸಿರುತ್ತೇವೆ.

ಈ ಗ್ರಂಥವನ್ನು ಅಚ್ಚುಹಾಕುವ ಕಾರ್ಯದಲ್ಲಿ ನಮಗೆ ಅತ್ಯಂತ ಪ್ರೋತ್ಸಾಹ ಮತ್ತು ಸಹಾಯ ಮಾಡಿದಂಥವರು ಹುಬ್ಬಳ್ಳಿಯ ರಾ. ರಾ. ವಿರೂಪಾಕ್ಷಪ್ಪ ಶಿವಲಿಂಗಪ್ಪ ಪಾವಟೆ ಈ ಮಹನೀಯರಾಗಿರುವರು. ಇವರು ಷಟ್‌ಸ್ಥಲ ಶಾಸ್ತ್ರದ ಮತ್ತು ಶಿವಾನುಭವದ ಅತ್ಯಂತ ಪ್ರೇಮಿಗಳಾಗಿರುವರು. ಶಿವಾನುಭವ ಪತ್ರಿಕೆಯ ಮೊದಲಿನ ಮೂರು ಸಂಚಿಕೆಗಳು ಹೊರಟಕೂಡಲೆ ಇವರು ಕೆಳಗೆ ಕಾಣಿಸಿದಂತೆ ನಮಗೆ ಪತ್ರವನ್ನು ಬರೆದಿರುವರು. ಇದು ಅವರ ಉದಾತ್ತ ಭಾವವನ್ನು ಚನ್ನಾಗಿ ವ್ಯಕ್ತಪಡಿಸುತ್ತದೆ. ಅದು ಏನೆಂದರೆಃ— "ಈಗ ತಾವು ಬಹು ಪ್ರಯಾಸಪಟ್ಟು ನಮ್ಮ ಶರಣ ಸಮುದಾಯದ ಹಿತವಚನಗಳ ಸಾರವನ್ನೂ, ವೀರಶೈವರಲ್ಲಿ ಒಂದಾನೊಂದು ಕಾಲದಲ್ಲಿ ಬಹು ಘನತೆಗೇರಿ ರಾಜ್ಯಭಾರ ಮಾಡಿದ ಶೂರ ಸ್ತ್ರೀಪುರುಷರ ಚರಿತ್ರೆಗಳನ್ನೂ ಒಳಕೊಂಡಿರುವ ತಮ್ಮ ಸಂಪಾದಕತ್ವದಲ್ಲಿ ಹೊರಡುತ್ತಿರುವ ಶಿವಾನುಭವದ ಮೂರು ಸಂಚಿಕೆಗಳು ನನ್ನ ಕೈಸೇರಿ ನೋಡಲಾಗಿ ಆನಂದಭರಿತನಾದೆನು. ಈ ಸುಧಾರಣಾ ಕಾಲದಲ್ಲಿ ಅನೇಕವಾದ ಪತ್ರಿಕೆಗಳೂ ಮಾಸಪತ್ರಿಕೆಗಳೂ ಹೊರಡುತ್ತಲಿವೆ. ಆದರೆ ಕೇವಲ ಧಾರ್ಮಿಕ ಭಾವನೆಯುಳ್ಳಂಥ ಪತಿತರನ್ನು ಪಾವನ ಮಾಡಿದವರ ಮಹತ್ವವನ್ನು ಕೊಂಡಾಡುವಂಥ ವೀರಶೈವ ಜನಸಾಮಾನ್ಯಕ್ಕೆ ಸುಲಭವಾಗಿ ಬಹು ಬೇಗ ತಿಳಿದು ಜ್ಞಾನೋದಯವಾಗುವಂಥ ಯಾವ ಪತ್ರಿಕೆಯೂ ಇಲ್ಲೆಂದರೆ ಅತಿಶಯೋಕ್ತಿಯಾಗಲಾರದು. ಅಂಥ ದೊಡ್ಡ ಕೊರತೆಯನ್ನು ಶಿವಾನುಭವವು ದೂರಮಾಡಿರುತ್ತದೆ. ಇದು ಸಣ್ಣ ಕಾರ್ಯವಲ್ಲ.

ಸರ್ವಾಂಗ ಸುಂದರ ಸರ್ವೋತ್ಕೃಷ್ಟ ಶಿವಾನುಭವವು ಚಿರಾಯುವಾಗಿ ನಡೆಯಬೇಕಾದರೆ ದ್ರವ್ಯ ಸಹಾಯವು ಅವಶ್ಯವಾಗಿ ಬೇಕು. ಅಂಥ ಅಡಚಣಿಯು ಶಿವಾನುಭವಕ್ಕೆ ಎಂದೂ ಬರಬಾರದೆಂದು ನಮ್ಮ ಸಮಾಜದ ಮುಖ್ಯ ಗುರುಗಳು ಧನ ಸಹಾಯ ಮಾಡಿ ಮೂಲ ಭಾಂಡವಲು ಮಾಡಿಕೊಡಬೇಕೆಂದು ದಿವ್ಯ ಚಿತ್ತಕ್ಕೆ ನನ್ನ ಅರಿಕೆಯುಂಟು. ಈ ಭಂಡವಲಕ್ಕೆ ಧರ್ಮ ಕಳಕಳಿಯುಳ್ಳ ವೀರಶೈವಾಭಿಮಾನಿಗಳೆಲ್ಲರು

ಉದಾರ ಬುದ್ಧಿಯಿಂದ ಸಹಾಯ ಮಾಡಿ ಶಿವಾನುಭವವು ಸುವ್ಯವಸ್ಥಿತ ರೀತಿಯಿಂದ ಸಾಗುವಂತೆ ಮಾಡಿ ಕೀರ್ತಿಶೇಷರಾಗಬೇಕು.

ಶಿವಾನುಭವದ ಮೇಲಿನ ನನ್ನ ಅತ್ಯಂತ ಪ್ರೇಮಕ್ಕಾಗಿ ಶಿವಲೋಕವನ್ನೈದಿದ ನನ್ನ ತಂದೆ ತಾಯಿಗಳ ಉಪಕಾರ ಸ್ಮರಣಾರ್ಥಕ್ಕಾಗಿ ಬಸವಾದಿ ಪ್ರಮಥರ ಅನುಗ್ರಹದಿಂದ ಸನ್ ೧೯೧೮ ನೇ ಇಸ್ವಿಯಲ್ಲಿ ಇಂಡಿಯಾ ಪ್ರಾವಿಡೆಂಟ ಇನಶೂರನ್ಸ ಕಂಪನಿ ಕಲಕತ್ತಾ ಇವರಲ್ಲಿ ನಾನು ಉತಾರಿಸಿದ ೯೧೮೦ ನೇ ನಂಬರಿನ ಪಾಲಿಸಿ ಹಕ್ಕನ್ನು ಸಂಪೂರ್ಣವಾಗಿ ತಮ್ಮ ಶಿವಾನುಭವಕ್ಕೆ ನಿರ್ಮಲಮನಸ್ಸಿನಿಂದ ಭಕ್ತಿ ಪೂರ್ವಕವಾಗಿ ಅರ್ಪಣಮಾಡಿರುತ್ತೇನೆ. ದಯ ಮಾಡಿ ಸ್ವೀಕರಿಸಬೇಕೆಂದು ಬಹು ನಮ್ರತೆಯಿಂದ ಬೇಡಿಕೊಳ್ಳುತ್ತೇನೆ.

ಹುಬ್ಬಳ್ಳಿ — ಶರಣಸೇವಕ
ತಾ. ೧-೯-೨೬ — **ವಿರುಪಾಕ್ಷಪ್ಪ ಶಿವಲಿಂಗಪ್ಪ ಪಾವಟೆ.**

ಈ ಪ್ರಕಾರ ರಾ. ರಾ. ವಿರುಪಾಕ್ಷಪ್ಪನವರು ನಮಗೆ ಪತ್ರ ಬರೆದಿದ್ದು ಇದು ಅವರ ಉಚ್ಚ ಮತ್ತು ಉದಾರ ಅಂತಃಕರಣವನ್ನು ಚನ್ನಾಗಿ ವ್ಯಕ್ತಪಡಿಸುತ್ತದೆ. ಅವರ ಪಾಲಿಸಿಯ ಅವಧಿಯು ಹೋದ ವರ್ಷ ಮುಗಿದ ಬಳಿಕ ಇದೇ ವರ್ಷ ಫೇಬರವರಿ ತಿಂಗಳಿನಲ್ಲಿ ಅವರು ಇದರ ಸಂಬಂಧದ ೨೩೯ರೂಪಾಯಿಗಳನ್ನು ನಮ್ಮ ಕಡೆಗೆ ಕಳಿಸಿಕೊಟ್ಟರು. ಕಳಿಸಿಕೊಡುವ ಕಾಲಕ್ಕೆ ಅವರು ತಮ್ಮ ತಾಯಿತಂದೆಗಳ ಸ್ಮರಣಾರ್ಥ ಒಂದು ವಚನಗ್ರಂಥವನ್ನು ಪ್ರಸಿದ್ಧಪಡಿಸಬೇಕೆಂದು ಅಪೇಕ್ಷಿಸಿದ್ದರಿಂದ ವಚನ ಗ್ರಂಥಗಳಲ್ಲಿ ಅತ್ಯಂತ ಮಹತ್ವದ್ದಾದ ಈ ಚನ್ನಬಸವೇಶ್ವರನ ವಚನವು ಅವರ ಹೆಸರಿನಿಂದ ಈಗ ಪ್ರಸಿದ್ಧಿಸಲ್ಪಟ್ಟಿದೆ. ರಾ. ರಾ. ವಿರುಪಾಕ್ಷಪ್ಪ ಪಾವಟೆ ಇವರು ಕಳಿಸಿದ ಹಣವು ಈಗಿನ ಸಾಂಪತ್ತಿಕ ಅವನತಿಯ ಕಾಲದಲ್ಲಿ ನಮಗೆ ಬಹಳ ಸಹಾಯವನ್ನೀಯಿತು. ಇದಕ್ಕೋಸ್ಕರ ನಾವು ಅವರಿಗೆ ಅತ್ಯಂತ ಋಣಿಯಾಗಿದ್ದೇವೆ.

ರಾ. ರಾ. ವಿರುಪಾಕ್ಷಪ್ಪನವರ ಚರಿತ್ರಾಂಶಗಳನ್ನು ಇಲ್ಲಿ ಕೊಡುವದು ಅವಶ್ಯವಾಗಿರುತ್ತದೆ. ಇವರ ಮೂಲ ಗ್ರಾಮವು ಬೆಳಗಾವ ಜಿಲ್ಹಾ ಗೋಕಾಕ ತಾಲೂಕಿನಲ್ಲಿರುವ ಮಮದಾಪುರವು. ಇವರ ಅಜ್ಜಂದಿರ ಹೆಸರು ಸಂಗನಬಸವಪ್ಪನವರು. ಸಂಗನಬಸವಪ್ಪನವರಿಗೆ ದುಂಡಪ್ಪ,

ಮಾದಪ್ಪ, ಶಿವಲಿಂಗಪ್ಪ, ಮತ್ತು ರಾಚಪ್ಪ ಎಂಬ ನಾಲ್ವರು ಮಕ್ಕಳಿದ್ದು ಇವರಲ್ಲಿ ಮೂರನೆಯವರಾದ ಶಿವಲಿಂಗಪ್ಪನವರೇ ರಾ. ರಾ. ವಿರುಪಾಕ್ಷಪ್ಪನವರ ತಂದೆಯವರು. ಇವರ ಮಾತೋಶ್ರೀಯವರ ಹೆಸರು ಶಿವಲಿಂಗವ್ವನವರು. ರಾ. ರಾ. ವಿರುಪಾಕ್ಷಪ್ಪನವರು ೧೯೦೩ ನೇ ಇಸ್ವಿಯಲ್ಲಿ ವಿದ್ಯಾಭ್ಯಾಸಕ್ಕೋಸ್ಕರ ಹುಬ್ಬಳ್ಳಿಗೆ ಬಂದರು. ಆದರೆ ಅಲ್ಲಿ ಅವರಿಗೆ ವಿಶೇಷ ಸಹಾಯ ಸೌಕರ್ಯಗಳು ಸಿಗದ್ದರಿಂದ ಅವರ ಅಭ್ಯಾಸವು ಕನ್ನಡದ ಪೂರ್ತಿ ಮಾತ್ರ ಆಯಿತು. ಆದರೆ ಮುಂದೆ ಅವರು ಹುಬ್ಬಳ್ಳಿಯಲ್ಲಿಯೇ ವ್ಯವಹಾರದಲ್ಲಿ ತೊಡಗಿದ್ದರಿಂದ ಅವರಿಗೆ ಮನೆತನದ ತೊಡಕುಗಳು ದೂರಾದವು. ಮತ್ತು ಅವರ ತಂದೆತಾಯಿಗಳೇರ್ವರೂ ಹುಬ್ಬಳ್ಳಿಗೆ ಬಂದು ಇಲ್ಲಿಯೇ ಇರಹತ್ತಿದರು. ಅವರ ತಂದೆಯವರು ೧೯೧೮ನೇ ಇಸ್ವಿಯಲ್ಲಿ ತಮ್ಮ ೬೪ನೇ ವಯಸ್ಸಿನಲ್ಲಿ ಕೈಲಾಸವಾಸಿಗಳಾದರು. ತಾಯಿಯವರು ತಮ್ಮ ೫೮ನೇ ವಯಸ್ಸಿನಲ್ಲಿ ೧೯೨೫ರಲ್ಲಿ ಶಿವಾಧೀನರಾದರು. ರಾ. ರಾ. ವಿರುಪಾಕ್ಷಪ್ಪನವರಿಗೆ ಒಬ್ಬ ಹೆಣ್ಣುಮಗಳೂ ಇಬ್ಬರು ಗಂಡುಮಕ್ಕಳೂ ಇರುವರು. ಮತ್ತು ಅವರು ತಮ್ಮ ಚರಿತಾರ್ಥವನ್ನು ಸಮಾಧಾನಕರವಾಗಿ ಸಾಗಿಸುತ್ತಲಿರುವರು. ಇವರು ಶಿವಶರಣರ ವಿಚಾರಗಳಲ್ಲಿ ವಿಶೇಷ ಪ್ರೀತಿಯನ್ನು ವಹಿಸಿ ಶಿವಾನುಭವ ಕಾರ್ಯಗಳಲ್ಲಿ ಯಾವಾಗಲೂ ಉತ್ಸುಕರಾಗಿರುವರು. ಇವರು ಶಿವಾನುಭವಕ್ಕೋಸ್ಕರ ಮಾಡಿದ ಸಹಾಯಕ್ಕೋಸ್ಕರ ನಾವು ಬಹಳ ಆಭಾರಿಯಾಗಿದ್ದೇವೆ.

**ವಿಜಾಪುರ.**
ತಾ. ೧—೮—೧೯೩೨

**ಫ. ಗು. ಹಳಕಟ್ಟಿ**
ಸಂಪಾದಕ.



೫. ದೇವ ದಾನವ ಮಾನವರು ಮೊದಲಾದ ಎಲ್ಲ ಜೀವದಲ್ಲಿಯು ಹಿರಿದು ಕಿರಿದೆನ್ನದೆ ನಿದ್ರೆ ಎಂಬಾಹುತಿಯು ಬೀಸಿ ಸರಿದುಗಿಯುಲೊಡನೆ ಅರಿವು ಮರಹಾಯಿತ್ತು. ನೋಟ ಜಾರಿತ್ತು. ಬುದ್ಧಿ ತೊಡೆಯಿತ್ತು. ಜೀವ ಹಾರಿತ್ತು. ದೇಹ ಒರಗಿತ್ತು. ಹೀಗೆ ನಿಚ್ಚ ನಿಚ್ಚ ಬಾಹುದು ಹೋಹುದು ಆರು ಅರಿಯರಯ್ಯಾ! ಕೂಡಲಚನ್ನಸಂಗಮದೇವಾ ನಿಮ್ಮ ಮಾಯಾಸೂತ್ರದ ಹೊಲಬರಿತವರಪೂರ್ವ.

೬. ವಚನದ ರಚನೆಯ ಅನುಭಾವವ ಬಲ್ಲೆವೆಂಬುವರು ನೀವು ಕೇಳಿರೋ. ವಚನವಾವುದು ರಚನೆಯಾವುದು ಅನುಭಾವವಾವುದು ನೀವು ಬಲ್ಲರೆ ಹೇಳಿರೋ. ಅಲ್ಲದಿದ್ದೊಡೆ ಕೇಳಿರೋ ಆತ್ಮ ತೃಪ್ತಿಯನರಿಯಬಲ್ಲಡೆ ವಚನ. ಸ್ಥಾವರ ಜಂಗಮದಲ್ಲಿ ದಯವಾಗಿರಬಲ್ಲಡೆ ವಚನ. ಅರಿಷಡ್ವರ್ಗದಿಚ್ಛೆಗೆ ಹರಿಯದಿರಬಲ್ಲಡೆ ಅನುಭಾವ. ವೇದಶಾಸ್ತ್ರ ಪುರಾಣಾಗಮಂಗಳ ನೋಡಬಲ್ಲಾತ ಜಾಣನಲ್ಲದೆ ಅನುಭಾವಿಯಲ್ಲ. ಅದೇಕೆಂದೊಡೆ ಅವು ಬ್ರಹ್ಮನೆಂಜಲು. ಸತ್ವ ರಜ ತಮವನೊತ್ತಿ ನಿಂದಲ್ಲಿ ಸಹಜ ನೆಲೆಗೊಂಬುವುದು. ಇದನರಿಯದೆ ವೇದಾಭ್ಯಾಸವ ಬಲ್ಲೆನೆಂದು ನುಡಿವ ಗಡಣದವನು ಅನುಭಾವಿಯೇ? ಅಲ್ಲ. ಅವ ಇದಿರ ಮೆಚ್ಚಿಸಿಕೊಂಡು ತನ್ನುದರವ ಹೊರೆವ ಉದರಪೋಷಕನು. ಎನ್ನೊಡೆಯ ಕೂಡಲಚನ್ನಸಂಗಮದೇವಾ ನಿಮ್ಮನುಭಾವಿಯ ನೀವೆಂಬೆನಯ್ಯಾ.

---

ಮುಂದೆ ಶರಣಸ್ಥಲದ ನಿರ್ದೇಶ. ಇಂತೀ ತಾಮಸ ನಿರ್ದೇಶವ ಮಾಡಿದ ಶರಣನ ನಿರ್ದೇಶಸ್ಥಲ. ಆ ಸ್ಥಲದನುಭಾವದ ವಚನ.

## ಶರಣನ ನಿರ್ದೇಶಸ್ಥಲ

೧. ಲಿಂಗಗ್ರಾಹಕನಾದ ಶರಣನ ಅಂಗ ಗುಣಕ್ಕೆ ವಿರೋಧಿಯಯ್ಯಾ. ಜಂಗಮ ಗ್ರಾಹಕನಾದ ಶರಣ ತೀರ್ಥ ಪ್ರಾಣಾಭಿಮಾನಕ್ಕೆ ವಿರೋಧಿಯಯ್ಯಾ. ಪ್ರಸಾದ ಗ್ರಾಹಕನಾದ ಶರಣ ಜಿಹ್ವೇಂದ್ರಿಯದ ರುಚಿಗೆ ವಿರೋಧಿಯಯ್ಯ. ಇಂತೀ ತ್ರಿವಿಧ ಗ್ರಾಹಕನಯ್ಯಾ ನಿಮ್ಮ ನಿಜ ಶರಣ ಕೂಡಲ ಚನ್ನಸಂಗಮದೇವಾ.

೨. ಏಕೋ ವರ್ಣ ಷಟ್‌ಸ್ಥಲವೆಂದೆಂಬೆನೆ? ಪ್ರಣಮದ ದೃಷ್ಟ ಕಾಣಬಾರದು. ಅಂಗವನು ಲಿಂಗವನು ಮಂತ್ರವನು ಸಂಗ ಸಮರಸವ

ಮಾಡಿ ತೋರಿದೊಡೆ, ಒಡೆ ಎಂಬೆನು. ಅವು ಷಟ್ಸ್ಥಲವನೊಡಗೂಡಿದಲ್ಲವೆ ತೋರದಾಗಿ. ಕೂಡಲಚನ್ನಸಂಗಮದೇವಾ ಈ ನಿರ್ಣಯವನರಿದೊಡೆ, ಆನು ಷಟ್ಸ್ಥಲದ ಬ್ರಹ್ಮವೆಂಬೆನಯ್ಯ. ಮತ್ತೆ ಮತ್ತೆಯು ನೀವೆ ನೀವೆ ಎಂದು ನೆರೆ ನಂಬುವೆನಯ್ಯಾ.

೩. ಲಿಂಗವೆಂದರಿದವಂಗೆ ಹಿಂದಿಲ್ಲ. ಜಂಗಮವೆಂದರಿದವಂಗೆ ಮುಂದಿಲ್ಲ. ಇದೇ ಶಿವಾಚಾರದ ತೊಡಕು, ॥ಸಾಕ್ಷಿ॥ ಆತ್ಮ ಪ್ರಕೃತಿನಾಂ ಸ್ವಾಭಾವಯುತೇ ಎಂದುದಾಗಿ, ಇದು ಕಾರಣ ಕೂಡಲಚನ್ನಸಂಗಮದೇವನು ಮುಟ್ಟಬಾರದ ಠಾವನು ಮರೆಗೊಂಡಿರ್ಪನು.

೪. ಕಣ್ಣೊಳಗೆ ಕಣ್ಣಿರ್ದು, ಕಾಣಲರಿಯರಯ್ಯಾ! ಕಿವಿಯೊಳಗೆ ಕಿವಿ ಇರ್ದು ಕೇಳಲರಿಯರಯ್ಯಾ! ಘ್ರಾಣದೊಳಗೆ ಘ್ರಾಣವಿರ್ದು ಘ್ರಾಣಿಸಲರಿಯರಯ್ಯಾ! ಜಿಹ್ವೆಯೊಳಗೆ ಜಿಹ್ವೆ ಇರ್ದು ರುಚಿಸಲರಿಯರಯ್ಯಾ! ತ್ವಕ್ಕಿನೊಳಗೆ ತ್ವಕ್ಕಿರ್ದು ಸ್ಪರ್ಶನವ ಮಾಡಲರಿಯರಯ್ಯಾ! ಪ್ರಾಣದೊಳಗೆ ಪ್ರಾಣವಿರ್ದು ಪ್ರಾಣನ ಪರಿಯನರಿಯರಯ್ಯಾ! ಕಾಯದೊಳಗೆ ಕಾಯವಿರ್ದು ಬಿಡದು ಬೇರಾಗದು. ಕೂಡಲಚನ್ನಸಂಗಮದೇವಾ ನೀವಿಕ್ಕಿದ ಅಣಕದ ತೊಡಕಿನ ಭೇದವ ಭೇದಿಸಬಾರದಯ್ಯಾ.

೫. ಅರ್ಥೇಷಣ ಪುತ್ರೇಷಣ, ದಾರೇಷಣ ಎಂಬ ಈಷಣತ್ರಯವನೆ ಬಿಟ್ಟು ಮುಂಡೆಯ ಬೋಳಿಸಿದ ಬಳಿಕ, ಮರಳಿ ಹೊನ್ನಿಂಗೆರಗಿದೊಡೆ, ಗುರುದ್ರೋಹ. ಹೆಣ್ಣಿಂಗೆರಗಿದೊಡೆ, ಲಿಂಗದ್ರೋಹ. ಮಣ್ಣಿಂಗೆರಗಿದೊಡೆ ಜಂಗಮದ್ರೋಹ. ಆತ ಪೂರ್ವಾಚಾರ್ಯರ ಪೊರ್ದುಗೆಯೇ? ಅಲ್ಲ. ಅದೇಕೆಂದೊಡೆ, ॥ಸಾಕ್ಷಿ॥ ಸ್ಥಾವರಂ ಭಿನ್ನದೋಷಾಣಾಂ । ವ್ರತಭ್ರಷ್ಟೆ ನ ಜಂಗಮಃ । ಉಭಯೋರ್ಭಿನ್ನ ಭಾವೇನ ನಚಾರ್ಚನಂ ನಚವಂದನಂ ॥ ಎಂದುದಾಗಿ ಇದು ಕಾರಣ ಕೂಡಲ ಚನ್ನಸಂಗಮನಲ್ಲಿ ಬಸವಣ್ಣನೇ ಭಕ್ತ ಪ್ರಭುವೇ ಜಂಗಮ.

---

ಮುಂದೆ ಶರಣನ ಆಚಾರಲಿಂಗಸ್ಥಲ. ಇಂತೀ ಶರಣ ಸ್ಥಲವ ಸಂಗಂಗೊಂಡಿಪ್ಪ ಶರಣನ ಆಚಾರ ಲಿಂಗಸ್ಥಲ. ಆ ಸ್ಥಲದನುಭಾವದ ವಚನ.

## ಶರಣನ ಆಚಾರಲಿಂಗ ಸ್ಥಲ.

೧. ಭವಿಗಿಕ್ಕ ಬಾರದೆಂಬ ಶೀಲ ಸಂಬಂಧಿಗಳು ಮರಳಿಇಕ್ಕಿದೊಡೆ ಭಾಷೆಗೆ ವ್ರತಗೇಡಿ ಎಂಬುವ ಕಾಕು ಹೊಲೆಯರಿರಾ ನೀವು ಕೇಳಿರೋ. ಕಾಮ ಕ್ರೋಧ ಲೋಭ ಮೋಹ ಮದ ಮತ್ಸರವೆಂಬಾರು ಭವಿಗಳು ತಮ್ಮ ನಾವರಿಸಿಕೊಂಡಿರಲು, ಮತ್ತೆ ಭವಿಗಿಕ್ಕಬಾರದೆಂಬ ಪರಿ ಎಂತೋ? ಭವಿ ಹಿಂಗಿ ಯಂಗದ ಭವಿಯು ಕಳೆವುದು ಅಭ್ಯಾಸವಲ್ಲದೆ ನಿಜವಲ್ಲ. ಇದು ಕಾರಣ ನಮ್ಮ ಕೂಡಲ ಚನ್ನಸಂಗಯ್ಯನಲ್ಲಿ ಅಂತರಂಗದ ಭವಿಯು ಕಳೆವ ಶೀಲವಂತರಪೂರ್ವವಯ್ಯಾ. ಅಂತರಂಗ ಬಹಿರಂಗವ ಕಳೆದು ಗುರುಲಿಂಗಜಂಗಮಕ್ಕೆ ಸಕಲ ಪದಾರ್ಥ ಸಲಿಸಿ ಸಂಶಯವಳಿದಿರ ಬಲ್ಲಡೆ ಶೀಲವಂತ ಶರಣನೆಂಬೆನಯ್ಯಾ.

೨. ಘಟ ಸಂಸಾರದಲ್ಲಿ ಪಟಲ ಹರಿವುದೆ? ಜೀವ ಸಂಸಾರವಿಲ್ಲ ದನ್ನಕ್ಕರ ಭವವೆಂತು ಹರಿವುದಯ್ಯಾ? ಅಂಗಭವಿಯನು ಲಿಂಗಭವಿ ಯನು ಕಳೆದುಳಿದಲ್ಲದೆ ನಮ್ಮ ಕೂಡಲಚನ್ನಸಂಗಯ್ಯನಲ್ಲಿ ಲಿಂಗ ಬಾಹ್ಯ ವ್ರತಭ್ರಷ್ಟ ಭವಿ ಸ್ಥಾವರ ದೀಕ್ಷೆ ಹೊಂದಬಾರದು.

೩. ಶೀಲಶೀಲವೆಂದೊಡೇನು? ಭವಿ ನೋಡಿದ ಮಡಕೆಯನು ಕಳೆವುದು ಶೀಲವೇ? ಕೆರೆಭಾವಿಯು ಕಳೆವುದು ಶೀಲವೇ? ಒಸರುವ ಉದ ಕವ ತಾಹದು ಶೀಲವೇ? ಲಿಂಗಾರ್ಪಿತವ ಮಾಡಿದ ಪ್ರಸಾದವ ಭವಿ ನೋಡಲಿಕ್ಕೆ ಕೊಂಡೊಡೆ ಕಿಲ್ಬಿಷ ಭಾಷೆಗೆ ವ್ರತಗೇಡಿ. ಅಂತಲ್ಲದೆ ಕೊಳ ದಿರ್ದೊಡೆ ಪ್ರಸಾದ ದ್ರೋಹಿ. ಇದು ಕಾರಣವಾಗಿ ನಮ್ಮ ಕೂಡಲಚನ್ನ ಸಂಗಯ್ಯನಲ್ಲಿ ನಿರ್ಣಯವನರಿಯದೆ ಸಂಕಲ್ಪದಿಂದೆ ಕೆಟ್ಟಿತ್ತು ಶೀಲ.

೪. ಭಕ್ತರ ಮಠಕ್ಕೆ ಹೋಗಿ ಒಳಹೊರಗೆಂಬುದು ಶೀಲವೆ? ನಮ್ಮ ಲಿಂಗಕ್ಕೆ ಒಳ್ಳೆ ಅಗ್ಗಣಿಯ ತನ್ನಿ, ಒಳ್ಳೆ ಪುಷ್ಪವ ತನ್ನಿ, ಒಳ್ಳೆ ಓಗರವ ಮಾಡಿ ಎಂಬುದು ಶೀಲವೇ? ಅಲ್ಲಲ್ಲ. ಕೇಳಿ ಭೋ. ಏಕವಾ ಕ್ಯದ ಬೀಭತ್ಸ ಶಬ್ದ ದ್ವಿಗುಣ ತ್ರಿಗುಣ ಪಂಚಭೂತ, ಅರಿಷಡ್ವರ್ಗ, ಸಪ್ತವ್ಯಸನ, ಅಷ್ಟಮದ, ನವಗ್ರಹ, ದಶವಾಯು, ದಶೇಂದ್ರಿಯ ಇಂತಿ

ವನೆಲ್ಲವ ಕೊಂದು ತಿಂದಾತನೆ ಶೀಲವಂತ ನಮ್ಮ ಕೂಡಲಚನ್ನಸಂಗ ಮದೇವರಲ್ಲಿ.

೫. ಶೀಲವಂತನಾದೊಡೆ ಪ್ರಪಂಚ ನಾಸ್ತಿಯಾಗಿರಬೇಕು. ಸೀಮೆ ಯಾದೊಡೆ ಪಂಚೇಂದ್ರಿಯಂಗಳು ನಾಸ್ತಿಯಾಗಿರಬೇಕು. ತನ್ನ ಕರ್ತುರ ವಿನಲ್ಲಿ ಸಕಲ ಸಂಶಯ ನಾಸ್ತಿಯಾದ ಶೀಲಕ್ಕೆ ಭವಂ ನಾಸ್ತಿ ಭವಿ ನಾಸ್ತಿ ಭ್ರಮೆನಾಸ್ತಿ. ಇವು ನಾಸ್ತಿಯಾದಲ್ಲದೆ ನಮ್ಮ ಕೂಡಲಚನ್ನಸಂಗ ಯ್ಯನಲ್ಲಿ ಶೀಲವಂತನೆನಿಸಬಾರದು. ಈ ವಂಚನೆಯ ಡಂಭಕ ಅಪ ಸ್ಮಾರಿಗಳಿಗೆಂತಯ್ಯಾ?

೬. ಶೀಲವಂತರು ಶೀಲವಂತರು ನಾವಿದನರಿಯೆವಯ್ಯಾ. ಅಂಗ ನೆಯರ ಅಧರ ಪಾನ ಉದರಕ್ಕೆ ಹೊಗುವನ್ನಕ್ಕರ ಶೀಲವೆಲ್ಲಿಹದೋ? ಬಾಲರಳಿಯದೆ ಈಷಣ ತ್ರಯವೆಂಬ ಸೊಣಗಂಗಳು ಬೆಂಬತ್ತಿ ಬರುತ್ತಿ ರಲು ಶೀಲವೆಲ್ಲಿಹದೋ? ಚಿತ್ತ ಸಂಚಲವಳಿದು ಮನವು ಮಹದಲ್ಲಿ ನೆಲೆಗೊಂಡುದೇ ಶೀಲ. ಗುರು ಲಿಂಗ ಜಂಗಮವೇ ಪ್ರಾಣವೆಂಬ ಪರಮ ಪರಿಣಾಮ ನೆಲೆಗೊಂಬುದೇ ಶೀಲ. ನಮ್ಮ ಘನ ಗುರು ಜಂಗಮವೇ ಪ್ರಾಣ. ಕೂಡಲಚನ್ನಸಂಗಯ್ಯನಲ್ಲಿ ಶೀಲವಂತರು ವ್ರತಸ್ಥರು ನೇಮಸ್ತ ರೆಂಬುವರಪೂರ್ವವಯ್ಯಾ.

೭. ನದಿಯ ತಟಾಕದಲ್ಲಿ ಕನ್ನವನಿಕ್ಕಿ ಉದಕವ ತಂದು ಮಜ್ಜನಕ್ಕೆ ರೆವ ಶೀಲವಂತರು, ಸುಯಿಧಾನಿಗಳಪ್ಪರೆ? ಮದಮರಳಿಯ ಭವಿಪಾಕ ಪರಪಾಕವನೆ ಭುಂಜಿಸುವ ಉದರಪೋಷಕರೆಲ್ಲರು ಶೀಲವಂತರಪ್ಪರೆ? ಅಲ್ಲಲ್ಲವಯ್ಯಾ! ಮತ್ತೆಂತೆಂದೊಡೆ, ಅಶನವರತು ವ್ಯಸನ ಬೆಂದು ಹುಸಿ ಮಸಣಿಸಿ, ಮಹಾಲಿಂಗದ ವಿಷಯದೊಳಗೆ ತಲ್ಲೀಯವಾಗಿ ಸರ್ವಾಂ ಗವು ಸಮತೆಯಾಗಿರಬಲ್ಲಡೆ, ನಮ್ಮ ಕೂಡಲ ಚನ್ನಸಂಗಯ್ಯನಲ್ಲಿ ಅವ ರಚ್ಚ ಶೀಲವಂತರೆಂಬೆನು. ಅವರೊಕ್ಕುದ ಕೊಂಡು ಸುಖಿಯಾಗಿಪ್ಪೆನಯ್ಯಾ.

---

ಮುಂದೆ ಶರಣನ ಗುರುಲಿಂಗಸ್ಥಲ. ಇಂತೀಯಾಚಾರ ಲಿಂಗದಲ್ಲಿ ನಿರುತನಾದ ಶರಣನ ಗುರುಲಿಂಗಸ್ಥಲ. ಆ ಸ್ಥಲದನುಭಾವದ ವಚನ.

## ಶರಣನ ಗುರುಲಿಂಗಸ್ಥಲ.

೧. ಕಾಲಚಕ್ರ, ಕರ್ಮಚಕ್ರ, ನಾದಚಕ್ರ, ಬಿಂದುಚಕ್ರದೊಳಗೆ ಹುಟ್ಟದ ಯೋನಿ ಇಲ್ಲ. ಮೆಟ್ಟದ ನೆಲನಿಲ್ಲ. ಉಣ್ಣದಾಹಾರವಿಲ್ಲ. ಕಾಣದ ದುಃಖವಿಲ್ಲ. ಇಂತೀ ನಾನಾ ಜನ್ಮದಲ್ಲಿ ನುಗ್ಗು ನುರಿಯಾಗಿ ಬಂದವಂಗೆ, ಪ್ರಾಯಶ್ಚಿತ್ತವಿಲ್ಲದೆ ಗುರುವ ಮುಟ್ಟಬಹುದೆ? ಲಿಂಗವನರ್ಚಿಸಬಹುದೆ? ಪ್ರಸಾದವ ಕೊಳಬಹುದೆ? ಕೂಡಲ ಚನ್ನಸಂಗಮದೇವಾ ಈ ಹೀಗೆ ತ್ರಿಕರಣ ಶುದ್ಧವಿಲ್ಲದವಂಗೆ ಉಪದೇಶವ ಕೊಟ್ಟ ಗುರುವಿಂಗೆ ನಾಯಕ ನರಕ ತಪ್ಪದು. ಅಂತಪ್ಪ ಪಾಪಿಗೆ ಎಚ್ಚರವ ಕೊಟ್ಟಡೆಯು ಅದೆ ಸರಿ.

೨. ಗುರು ಶಿಷ್ಯ ಸಂಬಂಧವನೇನೆಂದುಪಮಿಸುವೆನಯ್ಯಾ? ಜ್ಯೋತಿಯಿಂದೊದಗಿದ ಜ್ಯೋತಿಯಂತಿರಬೇಕು. ದರ್ಪಣದೊಳಡಗಿದ ಪ್ರತಿಬಿಂಬದಂತಿರಬೇಕು. ಇದು ಕಾರಣ ಕೂಡಲ ಚನ್ನಸಂಗಯ್ಯನಲ್ಲಿ ಮರೀಚಿಕಾ ಜಲದಂತಿರಬೇಕು.

೩. ಗುರು ಬಂದ ಶಿಷ್ಯನ ಕರೆದು ತನ್ನ ಪಾದದ ಮೇಲೆ ಕೆಡಹಿಕೊಂಡಡೆ ನಾಯಕ ನರಕ. ಆವನಿಗೆ ಪ್ರಸಾದವ ತಗೆದುಕೋ ಎಂದು ನೀಡಿದೊಡೆ ಅದು ಕಿಲ್ಬಿಷವು. ಇದು ಕಾರಣ ಕೂಡಲ ಚನ್ನಸಂಗಯ್ಯನಲ್ಲಿ ಬಲ್ಲ ಮಹಾತ್ಮರೊಲ್ಲರು. ವೀರಶೈವ ಸಂಪನ್ನರಾದ ಪರಮ ಸದ್ಭಕ್ತರವರಿಂದೆ ಪಾದೋದಕ ಪ್ರಸಾದವ ಕೊಳ್ಳರು.

---

ಮುಂದೆ ಶರಣನ ಶಿವಲಿಂಗಸ್ಥಲ. ಇಂತೀ ಗುರುಲಿಂಗದಲ್ಲಿ ಆನಂದ ಭರಿತವಾದ ಶರಣನ ಶಿವಲಿಂಗಸ್ಥಲ. ಆ ಸ್ಥಲದನುಭಾವದ ವಚನ.

## ಶರಣನ ಶಿವಲಿಂಗಸ್ಥಲ.

೧. ಒಡಲ ಧರ್ಮಂಗಳು ಬಿಡದನ್ನಕ್ಕರ ಎರಡನರಿಯದ ಪೂಜೆಯ ಮಾಡಿಹೆನೆಂಬ ನರಕಿಗಳವರೆತ್ತ ಬಲ್ಲರೋ? ಉದಯದಲಾದ ಪೂಜೆಯು ಅಸ್ತಮಾನದಲ್ಲಿ ಎಂಜಲೆಂಬ ಭಂಗಿತರ ಮುಖವನೋಡಲಾಗದು. ಅಗ್ನಿ

ಎಂಜಲವನುಂಡು ಲಿಂಗದಲ್ಲಿ ಸ್ವಯವನರಸುವ ಭಂಗಿತರನೇನೆಂಬೆನಯ್ಯ ಕೂಡಲ ಚನ್ನಸಂಗಮದೇವಾ?

೨ ನಿಷ್ಠೆಯುಳ್ಳಾತಂಗೆ ನಿತ್ಯ ನೇಮದ ಹಂಗೇಕೊ? ಅರಿವುಳ್ಳಾತಂಗೆ ಅಗ್ಗವಣಿಯ ಹಂಗೇಕೋ? ಮನ ಶುದ್ಧವುಳ್ಳಾತಂಗೆ ಮಂತ್ರದ ಹಂಗೇಕೋ? ಭಾವ ಶುದ್ಧವುಳ್ಳಾತಂಗೆ ಪುಷ್ಪದ ಹಂಗೇಕೋ? ಕೂಡಲ ಚನ್ನಸಂಗಯ್ಯಾ ನಿಮ್ಮ ನರಿದಾತಂಗೆ ಇದಿರಿಟ್ಟರಿಯಬೇಕೆಂಬ ಹಂಗೇಕೊ?

೩. ಪೂಜಿಪಸುವನ್ನಕ್ಕರ ಫಲದಾಯಕ ಕಂಡಯ್ಯಾ. ಸಹಜ ಸಂಬಂಧದರಿವು ಹುಟ್ಟಿದನ್ನಕ್ಕರ ಎರಡೆನಿಸುವುದು. ಗಮನ ನಿರ್ಗಮನವಾಗಿ ಆಶೆ ಆಮಿಷವಳಿಯದನ್ನಕ್ಕರ ಲಿಂಗದ ಪೂಜೆ ಎಲ್ಲಿಹುದೋ? ಘಟದೊಳಗೆ ದಿಟವಾಗಿರ್ದ ಪಂಚಭೂತದ ಹಂಗಳಿದಲ್ಲದೆ ನಮ್ಮ ಕೂಡಲ ಚನ್ನಸಂಗಯ್ಯನ ಮುಟ್ಟಬಾರದು.

೪. ಮಾಯಾಂಗನೆಯ ಸೋಂಕಳಿದಲ್ಲದೆ ಅಂಗ ಲಿಂಗ ಸೋಂಕಲ್ಲವಯ್ಯಾ. ಘಟವು ಸ್ವಯವಾದಲ್ಲದೆ, ಕಾಂಕ್ಷೆಯಲ್ಲವಯ್ಯಾ. ನಿದ್ರೆ ಕವಿದು ಭೂಮಿಗೆ ತಲೆಯಾಗುವುದು ನಿಂದಲ್ಲದೆ ಉತ್ತಮಾಂಗ ವಲ್ಲವಯ್ಯಾ. ಜಿಹ್ವೇಂದ್ರಿಯವರತಲ್ಲದೆ ಅಮಳೋಕ್ಯವಿಲ್ಲಯ್ಯಾ. ಅನುಭಾವವರತಲ್ಲದೆ ಕಂಠವಲ್ಲವಯ್ಯಾ. ಕೈಯೊಡ್ಡಿ ಹಿಡಿವುದರತಲ್ಲದೆ ಕರಸ್ಥಲವಲ್ಲವಯ್ಯಾ. ಈ ಆರರ ಕುಳವರಿಯದಿರ್ದೊಡೆ ಮುಂದೆ ಬಾಹ ನರಕ ಹಿಂದೆ ಬಾಹದು ಕಾಣಾ ಅಯ್ಯಾ ಕೂಡಲ ಚನ್ನಸಂಗಮದೇವಾ.

---

ಮುಂದೆ ಶರಣನ ಜಂಗಮಲಿಂಗಸ್ಥಲ. ಇಂತೀ ಶಿವಲಿಂಗದಲ್ಲಿ ಅನಂದ ಸ್ವರೂಪನಾದ ಶರಣನ ಜಂಗಮಲಿಂಗಸ್ಥಲ. ಆ ಸ್ಥಲದನುಭಾವದ ವಚನ.

## ಶರಣನ ಜಂಗಮಲಿಂಗಸ್ಥಲ

೧. ತಾಳು ಬೋಳು ಕಪ್ಪರವೆಂತೆಂಬರು. ತಾಳಾವುದು ಬೋಳಾವುದು ಕಪ್ಪರವಾವುದೆಂದರಿಯರು. ಕಾಯದ ಕಳವಳದ ಗುಣವ ತಾಳಬಲ್ಲಡೆ ತಾಳು. ಸಂಸಾರ ವಿಷಯವ ಬೋಳಿಸಬಲ್ಲಡೆ ಬೋಳು. ಪರದಲ್ಲಿ ಪರಿಣಾಮಿಸಬಲ್ಲಡೆ ಕಪ್ಪರ. ಇಂತಿಲ್ಲದಿರ್ದೊಡೆ, ನಮ್ಮ ಕೂಡಲಚನ್ನಸಂಗಯ್ಯನಲ್ಲಿ ಡೊಂಬರ ಬೋಳು.

೩. ಆಚಾರವೆಂಬ ಕಪ್ಪರ ಒಂದು ವಿಚಾರವೆಂಬ ಕಪ್ಪರ ಒಂದು ಅವಿಚಾರವೆಂಬ ಕಪ್ಪರ ಒಂದು ಈ ತ್ರಿವಿಧ ಕಪ್ಪರದೊಳಗೆ ಆಚಾರ ಕಪ್ಪರವೇ ಲಾಂಛನವ ತೋರಿ ಬೇಡುವರಾಗಿ ಜಡನೆಂಬೆನಯ್ಯಾ. ವಿಚಾರ ಕಪ್ಪರವೇ ಸೊಮ್ಮು ಸಂಬಂಧವ ತೋರಿ ಬೇಡುವದಾಗಿ, ಹೆಳವನೆಂಬೆನಯ್ಯಾ. ಅವಿಚಾರ ಕಪ್ಪರವೇ ಸೊಮ್ಮು ಸಂಬಂಧದ ನೇಮ ನಿತ್ಯವೆಂಬ ನಾಮ ಸೀಮೆಯ ತೋರಿ ಬೇಡುವದಾಗಿ ನಿರುಪಾಧಿಕನೆಂಬೆನಯ್ಯಾ ಕೂಡಲಚನ್ನಸಂಗಮದೇವಾ.

೩. ಸಚರಾಚರದ ಚತುರ್ವಲಯದೊಳಗೆ ತಿರುಗುವ ವೇಷಧಾರಿಗಳನೆನಗೊಮ್ಮೆ ತೋರದಿರಾ ॥ಸಾಕ್ಷಿ॥ ಆಶಾ ಬದ್ಧತೆ ಲೋಕೇ ಕರ್ಮಾಣಾಂ ಬಹು ಚಿಂತಯೋಃ ॥ ಆಯು ಕ್ಷೀಣ ನ ಜಾನಾತಿ ವೇಣು ಸೂತ್ರ ವಿಧೀಯತೇ ॥ ಎಂದುದಾಗಿ ಆಸೆಯ ಧಿಕ್ಕರಿಸಿ ನಿರಾಶೆಯ ಪತಿಕರಿಸಿ ಸುಳಿವ ವೇಷವ ಕಂಡಡೆ, ನೀ ಸರಿ ಎಂಬೆನಯ್ಯಾ ಕೂಡಲ ಚನ್ನಸಂಗಮದೇವಾ.

೪. ತನು ಸ್ವಾಯತವಾದವರ ಸಂಗ ಸ್ವಾಯತವಂತಿಪ್ಪುದಯ್ಯಾ. ಮನ ಸ್ವಾಯತನಾದವರ ಸಂಗ ಜ್ಯೋತಿರ್ಮಯ ಲಿಂಗದಂತಿರ್ಪುದಯ್ಯಾ. ಶಬ್ದ ಸ್ವಾಯತವಾದವರಂಗ ಪೃಥ್ವಿಯಂತಿರ್ಪುದಯ್ಯ. ಈ ತ್ರಿವಿಧವು ಸ್ವಾಯತವಾದವರ ಕಂಡಡೆ, ಗುರುವೆಂಬೆ ಲಿಂಗವೆಂಬೆ ಜಂಗಮವೆಂಬೆ ನಮ್ಮ ಘನಗುರು ಕೂಡಲಚನ್ನಸಂಗಯ್ಯ ತಾನೇ ಎಂಬೆನು.

೫. ಬರಿ ಜಾಳು ಜೋಳರೆಲ್ಲ ಜಂಗಮವೆ? ವೇಷಧಾರಿಗಳೆಲ್ಲ ಜಂಗಮವೆ? ಪಾಶಬದ್ಧ ಪಶುಮತದ ವಿವರಗೇಡಿಗಳೆಲ್ಲ ಜಂಗಮವೇ? ಆಚಾರಭ್ರಷ್ಟರಾದ ಅನಾಚಾರ ಮಿಶ್ರವಾದ ಅಪಸ್ಮಾರಿಗಳೆಲ್ಲ ಜಂಗಮವೇ? ತಾನು ವಿಷಯದೊಳಗೆ ಸಿಲ್ಕಿ ಅಹಂ ನಾನು ನನ್ನದೆಂದು ಮುಂದುವರಿವವರೆಲ್ಲ ಜಂಗಮವೇ? ಲಿಂಗಾಂಗ ಸಂಗ ಸಮರಸವರಿದಾನಂದಿಸುವ ಶಿವಯೋಗೀಶ್ವರರ ನಿಲವನರಿಯದೆ ಮಿಥ್ಯವ ನುಡಿದು ಸ್ತುತಿ ನಿಂದೆಯ ಮಾಡುವವರು ಜಂಗಮವೆ? ನೀತಿಯ ನಿಜವ ಬಿಟ್ಟು ಸತ್ಯ ಸದಾಚಾರವನೊತ್ತಿ ನ್ಯಾಯವ ಮಾಡುವವರು ಜಂಗಮವೆ? ಜಂಗಮ ಜಂಗಮವೆಂದೊಡೆ ನಾಮರೂಪಿಗಳೆಲ್ಲ ಜಂಗಮವೆ? ನಾಮ ಕಲ್ಲು ಮರ ಮೊದಲಾದ ಜಿಂ ಎಂಬ ಹುಳುವಿಗುಂಟು. ನಿಜ ಜಂಗಮವೆಂತೆಂದೊಡೆ ಹೇಳಿಹೆನು ಕೇಳಿರಣ್ಣಾ. ನಿಜೈಕ್ಯನಾದ ನಿಸ್ಸೀಮನೆ ಜಂ

ಗವು. ಅರಿವು ಆಚಾರ ಸತ್ಕ್ರಿಯೆಯುಳ್ಳೊಡೆ ಜಂಗಮ. ಅಂತಪ್ಪ ಸಚ್ಚಿದಾನಂದ ನಿತ್ಯ ನಿರಂಜನ ಜಂಗಮದ ಸುಳುಹು ಪಾವನ. ಅಂತಪ್ಪ ರಹಸ್ಯ ಬ್ರಹ್ಮವ ತೋರಿಸಿ ಅವರ ಪಾದರಕ್ಷೆಯ ಕಾಯ್ವುದಕ್ಕೆ ಯೋಗ್ಯನ ಮಾಡಿರಿಸಯ್ಯಾ ಎನ್ನ ಕೂಡಲ ಚನ್ನಸಂಗಮದೇವಾ.

---

ಮುಂದೆ ಶರಣನ ಪ್ರಸಾದಲಿಂಗಸ್ಥಲ. ಇಂತೀ ಜಂಗಮಲಿಂಗದಲ್ಲಿ ಆನಂದ ಸ್ವರೂಪವಾದ ಶರಣನ ಪ್ರಸಾದಲಿಂಗಸ್ಥಲ. ಆ ಸ್ಥಲದನುಭಾವದ ವಚನ.

## ಶರಣನ ಪ್ರಸಾದಲಿಂಗಸ್ಥಲ

೧. ಓಗರವ ಪ್ರಸಾದವ ಮಾಡಕೊಂಬೆನಾಗಿ ಪ್ರಸಾದವ ಓಗರವ ಮಾಡಿಕೊಂಬೆನಾಗಿ ಆತ ಪ್ರಸಾದಿಯು ಪ್ರಸಾದಿ. ಶಬ್ದ ಸ್ಪರ್ಶ ರೂಪು ರಸ ಗಂಧ ಸಹಿತವಾಗಿ ಜಂಗಮಾರ್ಪಿತವ ಮಾಡಿಕೊಂಬನಾಗಿ, ಆತ ಜಂಗಮ ಪ್ರಸಾದಿ. ಸಪ್ತವ್ಯಸನ ಅಷ್ಟಮದ ಮೊದಲಾದ ಗುಣವನಳಿದನಾಗಿ ಆತ ಗುರುಪ್ರಸಾದಿ. ಇದು ಕಾರಣ ಕೂಡಲ ಚನ್ನಸಂಗಮದೇವಾ ನಿಮ್ಮ ಪ್ರಸಾದಿಗಳ ಪ್ರಸಾದಿಗೆ ನಮೋ ನಮೋ ಎಂಬೆನಯ್ಯಾ.

೨. ನವ ಖಂಡ ಮಂಡಲ ಹದಿನಾಲ್ಕು ಭುವನವೆಂಬುವದೊಂದು ಗ್ರಾಮ. ಪಂಚಭೂತ ಚತುಃಕರಣಂಗಳುಳ್ಳ ಕಾಯದೊಳಗೆ ಸ್ಥೂಲವಾವುದು ಸೂಕ್ಷ್ಮವಾವುದು ಬಲ್ಲರೆ ಹೇಳಿರೋ. ಕಾಲಚಕ್ರ, ಕರ್ಮಚಕ್ರ, ನಾದಚಕ್ರ, ಬಿಂದುಚಕ್ರವೆಂಬ ನಾಲ್ಕು ಚಕ್ರದೊಳಗೆ ಆವುದು ಘನವೆಂಬೆನಾವುದು ಕಿರಿದೆಂಬುದ ನೀವು ಬಲ್ಲರೆ ಹೇಳಿರೋ. ಶುದ್ಧ, ಸಿದ್ಧ ಪ್ರಸಿದ್ಧವೆಂದು ಹೆಸರಿಟ್ಟುಕೊಂಡು ನುಡಿವಿರಿ. ಓಗರವಾವ ಕಡೆಯಲು ಪ್ರಸಾದವಾವ ಕಡೆಯಲು ಇಕ್ಕಿದ ರಾಟಳ ತುಂಬುತ್ತಂ ಕೆಡಹುತ್ತಂ ಅಂತಲ್ಲದೆ ರಾಟಳ ಮುರಿದು ಸೂತ್ರ ಹರಿದು ಶೂನ್ಯವಾದೊಡೆ ನಮ್ಮ ಕೂಡಲ ಚನ್ನಸಂಗಯ್ಯನಲ್ಲಿ ಆತನೆ ಮಹಾ ಪ್ರಸಾದಿ ಎಂಬೆನು.

೩. ಅನಾದಿಯ ಸ್ಥಳಕುಳದಲ್ಲಿ ಗುರು ಸನ್ಮತವಾದ ಪ್ರಸಾದಿ. ದೇಹ ಗುಣವಳಿದು ಉದರಾಗ್ನಿ ತಲೆದೋರದಿರ್ದೊಡೆ, ಸಕಲ ಸನ್ಮತವಾದ ಪ್ರಸಾದಿ. ಮನ ಬುದ್ಧಿ ಚಿತ್ತ ಅಹಂಕಾರ ಸನ್ಮತವಾದ ಪ್ರಸಾದಿ.

ಶಬ್ದ ಸ್ಪರ್ಶ ರೂಪು ರಸ ಗಂಧವೆಂಬ ಪಂಚೇಂದ್ರಿಯವು ಸನ್ಮತವಾದ ಪ್ರಸಾದಿ, ಇದು ಕಾರಣವಾಗಿ ನಮ್ಮ ಕೂಡಲಚನ್ನಸಂಗಯ್ಯನಲ್ಲಿ ಸರ್ವ ಸನ್ಮತವಾದ ಪ್ರಸಾದಿ.

೪. ರೂಪು ವಿಕಾರಿಗಳಿಗಿನ್ನಾಗದಯ್ಯಾ. ರುಚಿ ವಿಕಾರಿಗಳಿಗಿನ್ನಾಗ ದಯ್ಯಾ. ಮನದ ರಚನೆಯ ನುಡಿವವರಿಗಿನ್ನಾಗದಯ್ಯಾ. ಈ ತ್ರಿವಿಧದ ಮೊದಲನರಿಯುದ ಅಸಂಬಂಧಿಗಳಿಗಾಗದಯ್ಯಾ. ಈ ತ್ರಿವಿಧದಲ್ಲಿ ಮೈಮ ರೆದವರಿಗೆ ನಿಮ್ಮ ಪ್ರಸಾದ ಸಾಧ್ಯವಾಗದಯ್ಯಾ ಕೂಡಲ ಚನ್ನಸಂಗಮ ದೇವಾ.

೫. ಗುರು ಮುಟ್ಟಿ ಬಂದುದು ಪ್ರಸಾದವೆಂಬೆನೆ? ಎನ್ನೆ. ಅದೇನು ಕಾರಣವೆಂದೊಡೆ ಆಶೆ ಆಮಿಷಕ್ಕೊಳಗಾದ ಕಾರಣ. ಲಿಂಗವಿಲ್ಲದ ಜಂಗಮ ಜಂಗಮವಿಲ್ಲದ ಲಿಂಗ ಲಿಂಗಜಂಗಮವೆಂಬ ಭಯವ ಕಳೆ ದುಳಿದ ಪರಮ ಪ್ರಸಾದಿಯ ತೋರಿಸಯ್ಯಾ ಎನಗೆ ಕೂಡಲಚನ್ನಸಂ ಗಮದೇವಾ.

೬. ॥ಸಾಕ್ಷಿ॥ ಉಭೌ ಕಾಮ ಉಭೌ ಭಕ್ತಿ ಉಭೌ ನಾಶ್ರಮ ನಾಶ್ರಮಃ। ಎಂದುದಾಗಿ ಉಭಯ ಲಿಂಗ ಪ್ರಸಾದವನರಿಯದೆ ಉಭ ಯಂಗಳೊಳಗಾಯಿತ್ತು. ಉಭಯ ನಾಮದ ಮೇಲೆ, ನಾಮವಾದು ದನು ದೇವ ಪೂಜಕರಿಗರಿಯಬಾರದು ಕೂಡಲ ಚನ್ನಸಂಗಯ್ಯ ನಿಮ್ಮ ಪ್ರಸಾದಿಗಲ್ಲದೆ ಮತ್ತಾರಿಗೆಯು ತಿಳಿಯದು.

೭. ಒಮ್ಮೆಯಲ್ಲದೆ ಇಮ್ಮೆಯುಂಟೆ ಪೂಜೆ? ಒಮ್ಮೆಯಲ್ಲದೆ ಇಮ್ಮೆ ಯುಂಟೆ ಅರ್ಪಿತ? ಒಮ್ಮೆಯಲ್ಲದೆ ಇಮ್ಮೆಯುಂಟೆ ಪ್ರಸಾದ? ತನುವ ರ್ಪಿತವಾದ ಬಳಿಕ ಮರಳಿ ಮರಳಿ ಅರ್ಪಿತ ಉಂಟೆ ಅಯ್ಯಾ ಕೂಡ ಲಚನ್ನಸಂಗಮದೇವಾ?

---

ಶರಣನ ಮಹಾಲಿಂಗಸ್ಥಲ. ಇಂತೀ ಪ್ರಸಾದಲಿಂಗದಲ್ಲಿ ಆನಂದ ಸ್ವರೂಪನಾದ ಶರಣನ ಮಹಾಲಿಂಗಸ್ಥಲ. ಆ ಸ್ಥಲದನುಭಾವದ ವಚನ.

## ಶರಣನ ಮಹಾಲಿಂಗಸ್ಥಲ

೧. ತ್ರಿವಿಧಕ್ಕೆ ರತಿಯಾಗಿ, ತ್ರಿವಿಧದ ನಿಜವ ತಿಳಿದು, ತ್ರಿವಿಧ ವನವಗ್ರಹಿಸಿ ತ್ರಿವಿಧ ಪದವ ಮೀರಿ ತ್ರಿವಿಧ ನಿರ್ಣಯದಲ್ಲಿ ನಿಷ್ಪತ್ತಿ ಯಾದ ಕೂಡಲಚನ್ನಸಂಗ ನಿಮ್ಮ ಶರಣ.

೨. ಓಲೆಯನಿಕ್ಕಿದ ಬಾಲೆಯ ಓಲೆಯ ಕಳೆಯದಿನ್ನೆಂತೋ? ಓಲೆ ಇರ್ದಡೆ ಯೋಗ ವ್ಯರ್ಥವಾಯಿತ್ತೆಲ್ಲರಿಗು. ಓಲೆಯು ಹೋಯಿತ್ತು. ಬಾಲೆಯು ಹೋಯಿತ್ತು. ಓಲೆಯ ಬಾಲೆಯ ಕೀಲ ಬಲ್ಲವರ ನಮ್ಮ ಕೂಡಲಚನ್ನಸಂಗಯ್ಯನೆಂಬೆನು.

೩. ಲಿಂಗ ಲಿಂಗವೆಂಬಲ್ಲಿಯೇ ತಪ್ಪಿತ್ತು. ಜಂಗಮ ಜಂಗಮವೆಂ ಬಲ್ಲಿಯೇ ತಪ್ಪಿತ್ತು. ಪ್ರಸಾದ ಪ್ರಸಾದವೆಂಬಲ್ಲಿಯೇ ತಪ್ಪಿತ್ತು. ಈ ತ್ರಿವಿಧ ಸಂಚದ ರಹಸ್ಯದ ಸಿಕ್ಷೇಪವನರಿಯದೆ ಈ ಲೋಕದಲ್ಲಿರ್ದಡೇನು? ಆ ಲೋಕದಲ್ಲಿರ್ದಡೇನು? ಮತ್ತಾ ಲೋಕದಿಂದ ಈ ಲೋಕಕ್ಕೆ ಬಂದ ಡೇನು? ಮತ್ತೆ ಹದಿನಾಲ್ಕು ಲೋಕದಲ್ಲಿ ಚರಿಸಿದಡೇನು? ಭೂ ಪ್ರದ ಕ್ಷಿಣೆಯ ಮಾಡಿದಡೇನು? ಸಂಸಾರವ ಬಿಟ್ಟಡೇನು? ನಿಸ್ಸಂಸಾರಿಯಾ ದಡೇನು? ಲಿಂಗ ಭೋಗೋಪಭೋಗಿಯಾದ ನಿಜ ಸಾರಾಯ ನಿರಾಳ ಘನ ಮಹಿಮ ಶರಣಂಗೆಣೆ ಏನಯ್ಯಾ ಕೂಡಲಚನ್ನಸಂಗಮದೇವಾ?

೪. ಸಮತೆ ಸುಯಿಧಾನದ ಶರಣಂಗೆ ಅರಿವು ಮರವೆಯುಂಟೆ? ಉಪಮೆಗೆ ಸ್ಥಲವಾದ ಶರಣಂಗೆ ಶಬ್ದ ಸಂದಣಿಯುಂಟೆ? ಅಖಂಡ ಲಿಂಗಕ್ಕೆ ಅಪ್ರಮಾಣ ಶರಣಂಗೆ ಸೀಮೆಯುಂಟೆ? ಸಂಶಯ ಸಂಕ ಲ್ಪದ ಸಂದು ಸಂಬಂಧದ ಬಂಧ ಉಂಟೆ? ಎಲೆಲೆ ಕೂಡಲ ಚನ್ನಸಂಗ ಭವವಿಲ್ಲ ಬಂಧನವಿಲ್ಲ. ಜವನಿಕೆ ಎಂಬುವುದು ಮುನ್ನಿಲ್ಲವಯ್ಯ.

೫. ಗ್ರಾಮದ ಪದಗತಿಯನರಿಯರು. ಆ ಗ್ರಾಮಕ್ಕೆ ಗುರುವಾ ವುದೆಂದರಿಯರು. ಗ್ರಾಮದ ಕಾರಣವಿದ್ದಲ್ಲಿ ನಿಶ್ಚಟವಾವುದೆಂದರಿಯರು. ಇದನರಿದು ಮರೆದು ನಿಂದೊಡೆ, ನಮ್ಮ ಕೂಡಲಚನ್ನಸಂಗಯ್ಯ ಲಿಂಗೈ ಕ್ಯವು.

೬. ಲಿಂಗಸ್ಥಲ ಲಿಂಗಸ್ಥಲದಲ್ಲಿಯೇ ನಿಂದಿತ್ತು. ಜಂಗಮಸ್ಥಲ ಜಂಗಮಸ್ಥಲದಲ್ಲಿಯೇ ನಿಂದಿತ್ತು. ಪ್ರಸಾದಸ್ಥಲ ಪ್ರಸಾದಸ್ಥಲದಲ್ಲಿಯೇ ನಿಂದಿತ್ತು ಇಂತೀ ತ್ರಿವಿಧಸ್ಥಲ ತ್ರಿವಿಧಸ್ಥಲದಲ್ಲಿಯೇ ನಿಂದಿತ್ತು. **ಕೂಡಲ** ಚನ್ನಸಂಗ ನಿಮ್ಮ ಶರಣಂಗೆ.

ಇಂತೀ ಐದಕ್ಕೆ ಸೇರಿದ ವಚನ ೨೮೧ ಕ್ಕಂ ಗ್ರಂಥ ೮೬ ಕ್ಕಂ ಮಂಗಳ ಮಹಾ ಶ್ರೀ.

# ಐಕ್ಯಸ್ಥಲ

ಐಕ್ಯತಾಮುಸನಿರಸನಸ್ಥಲ. ಆ ಸ್ಥಲದನುಭಾವದ ವಚನ.

## ಐಕ್ಯತಾಮುಸನಿರಸನ ಸ್ಥಲ

೧. ಹಸಿವರತಲ್ಲದೆ, ಪ್ರಸಾದಿಯಲ್ಲ. ತೃಷೆಯರತಲ್ಲದೆ ಪಾದೋದಕಿಯಲ್ಲ. ನಿದ್ರೆಯರತಲ್ಲದೆ ಭವ ವಿರಹಿತನಲ್ಲ. ಅನಲ ಪವನ ಗುಣ ವರತಲ್ಲದೆ ಜನನ ಮರಣ ವಿರಹಿತನಲ್ಲ. ಇದು ಕಾರಣ ಕೂಡಲ ಚನ್ನ ಸಂಗಯ್ಯನಲ್ಲಿ ಎಲ್ಲರಿಗೆಲ್ಲಿಯದೊ ಲಿಂಗೈಕ್ಯವು?

೨. ಲಿಂಗಸ್ಥಲ ನಾಸ್ತಿಯಾದಲ್ಲದೆ ಭಕ್ತನಲ್ಲ. ಜಂಗಮ ಸ್ಥಲ ನಾಸ್ತಿಯಾದಲ್ಲದೆ ಶರಣನಲ್ಲ. ಗುರುಸ್ಥಲ ನಾಸ್ತಿಯಾದಲ್ಲದೆ ಐಕ್ಯನಲ್ಲ. ಇದು ಕಾರಣ ಕೂಡಲ ಚನ್ನಸಂಗಮದೇವಾ ಭಕ್ತಿ ಕೆಟ್ಟು ಭವಿಯಾದಲ್ಲದೆ ಲಿಂಗೈಕ್ಯನಲ್ಲ.

೩. ಅಂಜಿಕೆಯುಳ್ಳನ್ನಕ್ಕರ ಪ್ರಾಣಲಿಂಗಿಯಲ್ಲ. ಎಂಜಲುಳ್ಳನ್ನಕ್ಕರ ಪ್ರಸಾದಿಯಲ್ಲ. ಸೂತಕವುಳ್ಳನ್ನಕ್ಕರ ಶರಣನಲ್ಲ. ಈ ತ್ರಿವಿಧವುಳ್ಳನ್ನಕ್ಕರ ಲಿಂಗೈಕ್ಯನಲ್ಲ ನಮ್ಮ ಕೂಡಲ ಚನ್ನಸಂಗಯ್ಯನಲ್ಲಿ.

೪. ಗುರುಲಿಂಗಜಂಗಮದೆಡೆಯಲ್ಲಿ ಹುಸಿವನ್ನಕ್ಕರ ಭಕ್ತನಲ್ಲ. ಹುರುಡುವಿಡಿದಾತ ಮಹೇಶ್ವರನಲ್ಲ. ಪದಾರ್ಥದ ಪೂರ್ವವನರಿವನ್ನಕ್ಕರ ಪ್ರಸಾದಿಯಲ್ಲ. ಕಲೆಯುಳ್ಳನ್ನಕ್ಕರ ಪ್ರಾಣಲಿಂಗಿಯಲ್ಲ. ಸತಿಯುಳ್ಳನ್ನಕ್ಕರ ಶರಣನಲ್ಲ. ಪತಿಯುಳ್ಳನ್ನಕ್ಕರ ಐಕ್ಯನಲ್ಲ. ಇಂತೀ ಷಟ್‌ಸ್ಥಲದ ಸಕೀಲವನರಿಯಬಲ್ಲಡೆ ನಮ್ಮ ಕೂಡಲ ಚನ್ನಸಂಗಯ್ಯನಲ್ಲಿ ಸದ್ಭಕ್ತರಿಗಳವಲ್ಲ ಸಹಜದೊಡೆಯರಿಗಲ್ಲದೆ.

೫. ಹೊನ್ನುಳ್ಳಾತ ಭಕ್ತನಲ್ಲ. ಹೆಣ್ಣುಳ್ಳಾತ ಶರಣನಲ್ಲ. ಮಣ್ಣುಳ್ಳಾತ ಲಿಂಗೈಕ್ಯನಲ್ಲ. ಹೊನ್ನುಜೀವ ಹೆಣ್ಣುಪ್ರಾಣ ಮಣ್ಣುದೇಹ ಹೊನ್ನು ಭವಿ ಹೆಣ್ಣು ಭವ ಮಣ್ಣು ಹಮ್ಮು ಈ ತ್ರಿವಿಧ ಸ್ಥಲವಪೂರ್ವ ನಮ್ಮ ಕೂಡಲ ಚನ್ನಸಂಗಯ್ಯನಲ್ಲಿ.

೬. ಅರುಹಿಲ್ಲದ ಕಾರಣ ಭವಕ್ಕೆ ಬಂದರು. ಅರುಹಿಲ್ಲದವಂಗೆ ಆಚಾರವಿಲ್ಲ. ಆಚಾರವಿಲ್ಲದವಂಗೆ ಗುರುವಿಲ್ಲ. ಗುರುವಿಲ್ಲದವಂಗೆ ಲಿಂಗ

ವಿಲ್ಲ. ಲಿಂಗವಿಲ್ಲದವಂಗೆ ಜಂಗಮವಿಲ್ಲ. ಜಂಗಮವಿಲ್ಲದವಂಗೆ ಪಾದ ತೀರ್ಥಪ್ರಸಾದವಿಲ್ಲ. ಪಾದ ತೀರ್ಥ ಪ್ರಸಾದವಿಲ್ಲದವಂಗೆ ಗಣತ್ವವಿಲ್ಲ. ಅರಿವು ಸಾಹಿತ್ಯ ಆಚಾರ, ಆಚಾರಸಾಹಿತ್ಯ ಗುರು, ಗುರು ಸಾಹಿತ್ಯ ಲಿಂಗ, ಲಿಂಗಸಾಹಿತ್ಯ ಜಂಗಮ, ಜಂಗಮ ಸಾಹಿತ್ಯ ಪ್ರಸಾದ, ಪ್ರಸಾದ ಸಾಹಿತ್ಯ ಗಣತ್ವ, ಇದು ಕಾರಣ ಕೂಡಲ ಚನ್ನಸಂಗಯ್ಯನಲ್ಲಿ ಇವಿಷ್ಟು ಒಂದು ಗೂಡಿದವರಲ್ಲಿ ಎಲ್ಲ ಸ್ಥಲ ಉಂಟು ಆನಿಷ್ಕಳ ಲಿಂಗೈಕ್ಯ ಆತ ಅಪೂರ್ವ.

---

ಮುಂದೆ ಐಕ್ಯನ ನಿರ್ದೇಶಸ್ಥಲ. ಆ ಸ್ಥಲದನುಭಾವದ ವಚನ.

## ಐಕ್ಯನ ನಿರ್ದೇಶಸ್ಥಲ.

೧. ಆಚಾರದರಿವು ಆಗಮವ ಕೂಡಿಕೊಂಡಿತ್ತು. ಗುರುಮಾರ್ಗದಾಚಾರದರಿವು ನೈಷ್ಠೆಯ ಕೂಡಿಕೊಂಡಿತ್ತು. ಲಿಂಗಾಚಾರದರಿವು ಕ್ರಿಯೆಯ ಕೂಡಿಕೊಂಡಿತ್ತು. ಸಮಯಾಚಾರದರಿವು ನಿಃಕ್ರಿಯೆಯ ಕೂಡಿಕೊಂಡಿತ್ತು. ಈ ಚತುರ್ವಿಧದೊಳಗೆ ಆವಂಗವು ಅಲ್ಲ. ಘನಗುರು ಕೂಡಲ ಚನ್ನ ಸಂಗಮದೇವಾ ನಿಮ್ಮ ಶರಣನ ಪರಿ ಬೆರೆ.

೨. ಭಕ್ತನಾದೊಡೆ ಕಿಂಕರ ಕಿಂಕರನಾಗಿರಬೇಕು. ಮಹೇಶ್ವರನಾದೊಡೆ ಆದಿಯನಾದಿಯನರಿದಿರಬೇಕು. ಪ್ರಸಾದಿಯಾದೊಡೆ ಒಡಲೊಳಗಣ ಮರ್ಗಣವಿರಹಿತನಾಗಿರಬೇಕು. ಪ್ರಾಣಲಿಂಗಿಯಾದೊಡೆ ಬಾಹ್ಯ ವಿಚಾರವಿಲ್ಲದಿರಬೇಕು. ಶರಣನಾದೊಡೆ ನಿಃಸಂಗಿಯಾಗಿರಬೇಕು. ಐಕ್ಯನಾದೊಡೆ ಬಯಲು ಬಯಲಾಗಿರಬೇಕು. ಇಂತೀ ಸ್ಥಲ ಭೇದವನರಿದಲ್ಲದೆ ನಮ್ಮ ಕೂಡಲ ಚನ್ನಸಂಗಯ್ಯನಲ್ಲಿ ಸುಸಂಗವೇದ್ಯನೆನಿಸಬಾರದು.

೩. ಭಕ್ತನಾದೊಡೆ ಭಕ್ತಿಸ್ಥಲವನರಿತು ಅರಿಯದಂತಿರಬೇಕು. ಮಹೇಶ್ವರನಾದೊಡೆ ನಿಷ್ಠೆಯನರಿತು ಅರಿಯದಂತಿರಬೇಕು. ಪ್ರಸಾದಿಯಾದೊಡೆ ಪ್ರಸಾದಿ ಸ್ಥಲವನರಿತು ಅರಿಯದಂತಿರಬೇಕು. ಪ್ರಾಣಲಿಂಗಿಯಾದೊಡೆ ಅಂತಃಸ್ಥಿತಿಯನರಿತು ಅರಿಯದಂತಿರಬೇಕು. ಶರಣನಾದೊಡೆ ಸತಿ ಪತಿ ಎಂದರಿತು ಅರಿಯದಂತಿರಬೇಕು. ಐಕ್ಯನಾದೊಡೆ ತಾನು ತಾನಾಗಿ ಹೆರೆ ಹಿಂಗದಂತಿರಬೇಕು. ಇಂತೀ ಷಟ್‌ಸ್ಥಲದ ನಿರ್ಣಯವ

ನಿಶ್ಚೈಸಿ ನಿರ್ಧರಿಸದೆ ನಾನು ಬಲ್ಲೆ ತಾನು ಬಲ್ಲೆನೆಂಬ ಲಜ್ಜೆಗೆಟ್ಟ ಲಾಂಛನಧಾರಿಗಳನೇನೆಂಬೆನಯ್ಯ ಕೂಡಲಚನ್ನಸಂಗಮದೇವಾ?

೪. ಲಿಂಗಸ್ಥಲವಿಲ್ಲದವರ ಭಕ್ತರೆಂಬೆ. ಗುರುಸ್ಥಲವಿಲ್ಲದವರ ಶಿಷ್ಯರೆಂಬೆ. ಪ್ರಸಾದಿಸ್ಥಲವಿಲ್ಲದವರ ಜಂಗಮವೆಂಬೆ. ಈ ತ್ರಿವಿಧ ಸ್ಥಲವಿಲ್ಲದವರ ಶರಣರೆಂಬೆ. ಇದು ಕಾರಣವಾಗಿ ಪ್ರಭುವೆ ಕೂಡಲ ಚನ್ನಸಂಗಮದೇವರಲ್ಲಿ ಭವಿ ಸಾಹಿತ್ಯವಿದ್ದಾತನ ಭಕ್ತರೆಂಬೆ ಪರಮ ಲಿಂಗೈಕ್ಯರೆಂಬೆನು.

೫. ಆದಿಯಾಧಾರವಾಗಿಹುದೆ ಘನ. ಆ ಘನ ವೇಧಿಸಿಹುದೆ ಮನ. ಆ ಮನವು ಮಹದಲ್ಲಿ ನಿಂದುದೆ ಭಕ್ತಿ. ಭಿನ್ನ ಭಾವದಿಚ್ಛೆ ತಲೆದೋರದಿಹುದೆ ಆಚಾರ. ತಟ್ಟು ಮುಟ್ಟು ತಾಗು ನಿರೋಧವಿಲ್ಲದಿಹುದೆ ಪೂಜೆ. ಆಶೆ ರೋಷವಿಲ್ಲದಿಹುದೆ ಪ್ರಸಾದ. ಕರಣ ಮಥನವಿಲ್ಲದಿಹುದೆ ಅನುಭಾವ. ಇಂತೀ ಸರ್ವಾಂಗದಲ್ಲಿ ಸರ್ವಾಚಾರ ಸನ್ನಿಹಿತವಾದ ನಿಜ ಲಿಂಗೈಕ್ಯಂಗೆ ನಮೊ ನಮೊ ಎಂಬೆನಯ್ಯಾ ಕೂಡಲಚನ್ನಸಂಗಮದೇವಾ.

೬. ಗ್ರಾಮಮಧ್ಯದ ಧವಳಾರದೊಳಗೊಂದು ಸತ್ತ ಹೆಣನಿರುತ್ತಿರಲು ಆ ಗ್ರಾಮವ ಸುತ್ತಿ ಬರುತಿರ್ದ ರಕ್ಕಸಿ ಕಂಡಳಲ್ಲ. ಈ ಗ್ರಾಮು ನನ್ನ ಕಾವಲು. ಈ ಗ್ರಾಮದಲ್ಲಿ ನಾನಿಪ್ಪೆ. ಇದಾರು ಕೊಂದವನಾರು? ಕೊಲ್ಲುವ ಮುನ್ನ ಅದು ತಾ ಸತ್ತಂದು ನನಗಿದು ಕರ ಸೋಜಿಗವೆಂದು ಈ ಸತ್ತದು ಗ್ರಾಮುವ ಕೆಡಿಸಿತ್ತು. ಇನ್ನಿದ್ದರೆ ಎನ್ನನು ಕೆಡಿಸಿತ್ತು. ಇಲ್ಲಿದ್ದವರಿಗೆಯು ಉಪಟಳ ನೋಡಾ ಎಂದು ಆ ಗ್ರಾಮುವ ಬಿಟ್ಟು ಹೋಯಿತ್ತಯ್ಯ ಕೂಡಲ ಚನ್ನಸಂಗಮದೇವಾ.

೭. ಸತ್ತ ಹೆಣನ ಹೊತ್ತವರಿಲ್ಲ. ಆಶ್ಚರ್ಯಗೊಂಡರು ನೋಡಾ. ಹೊತ್ತವರೆಲ್ಲ ಸತ್ತುದ ಕಂಡು ಮೂರ್ಛೆ ಗತವಾದರಲ್ಲ. ಸತ್ತು ಬಂದವರೆಲ್ಲ ಹೋಗಿ ಅದ ಮುಟ್ಟಲಮ್ಮರು ನೋಡಾ. ಮುಟ್ಟದೆ ಮುವ್ವರ ಎಡ್ಡಿಸಿತ್ತು. ಸತ್ತ ಪರಿಯು ನೋಡಾ. ಅದು ಕಾಡಿನಲ್ಲಿ ಅರಿಯದು. ಕಿಚ್ಚಿನಲ್ಲಿ ಬೇಯದು. ತಾ ಸತ್ತ ಪರಿಯ ನೋಡಯ್ಯ. ಕೂಡಲ ಚನ್ನಸಂಗಯ್ಯನೆಂಬ ಮನದ ನೆನಹಿನ ಚಿಂತೆ ಸತ್ತ ಪರಿಯು ನೋಡಾ.

೮. ಶರಣ ಸತ್ತರೆ ಭಕ್ತರು ಹೊತ್ತರು ಪ್ರಸಾದಿಗಳತ್ತರಲ್ಲ ಸುತ್ತಲಿರ್ದ ಜಂಗಮವೆಲ್ಲ ಕಿಚ್ಚ ಹಿಡಿದರು ಊರೊಳಗಿರ್ದವರೊಂಬತ್ತು

ಬಾಗಿಲವ ತುಂಬಿಕೊಂಡಿರ್ದರು ನೋಡಾ. ಮರಳಿ ಒಂದು ಬಾಗಿಲವ ತೆರೆದು ನೋಡಿ ಸತ್ತುದ ಕಂಡು ಅತ್ತರು. ಅತ್ತವರು ಸತ್ತರೆಂದು ಆ ಸತ್ತವರೆಲ್ಲ ಬಾಹದ ಕಂಡು ಅತ್ತವರು ಎತ್ತಲೆಯಾದರು. ನಮ್ಮ ಕೂಡಲ ಚನ್ನಸಂಗಯ್ಯ ಸತ್ತು ಸ್ವಯವಾದ.

೯. ದೃಷ್ಟ ನಷ್ಟವಾದುದಕ್ಕೇನು ದೃಷ್ಟ? ಅನುಭಾವ ನಷ್ಟವಾದುದೇ ದೃಷ್ಟ. ಆ ಅನುಭಾವ ನಷ್ಟವಾದುದಕ್ಕೇನು ದೃಷ್ಟ? ಸ್ವಯ ಪರವೆನ್ನದುದೆ ದೃಷ್ಟ. ಸ್ವಯ ಪರವೆನ್ನದುದಕ್ಕೇನು ದೃಷ್ಟ? ಕ್ಷಮೆ ದಮೆ ನಯನುಡಿ ಭಯಭಕ್ತಿ ಕರಣ ಕಿಂಕುರ್ವಾಣದಿಂದೆ ಸಹಿತವಾದುದೆ ದೃಷ್ಟ. ಕ್ಷಮೆ ದಮೆಯಾಗಿ ಸಹಿತವಾದುದಕ್ಕೇನು ದೃಷ್ಟ? ಘನಮಹಾಲಿಂಗವನಿಸುವ ಕೂಡಲ ಚನ್ನಸಂಗನೆಂದು ಎನ್ನದಿಹುದೇ ದೃಷ್ಟ.

---

ಇಂತು ಐಕ್ಯ ಸ್ಥಲವನಂಗಂಗೊಂಡಿಪ್ಪ ಸಮರಸ ಸಂಪನ್ನಂಗೆ ಸರ್ವಾಂಗವನು ಲಿಂಗವು ಹೇಗೆ ಬೆರಸಿಪ್ಪ೯ವೆಂದೊಡೆ ಮುಂದೆ ಐಕ್ಯನ ಆಚಾರಲಿಂಗಸ್ಥಲ. ಆ ಸ್ಥಲದನುಭಾವದ ವಚನ.

## ಐಕ್ಯನ ಆಚಾರಲಿಂಗಸ್ಥಲ

೧. ಆಹಾರ ನಾಸ್ತಿಯಾದುದೆ ಗುರು. ಗುರು ನಾಸ್ತಿಯಾದುದೆ ಲಿಂಗ. ಕಾಯಗುಣ ನಾಸ್ತಿಯಾದುದೆ ವಿಭೂತಿ. ಕರಣ ಗುಣ ನಾಸ್ತಿಯಾದುದೆ ರುದ್ರಾಕ್ಷಿ. ಪುರಹು ನಾಸ್ತಿಯಾದುದೆ ಮಂತ್ರ. ಇಂತೀ ಪಂಚಾಚಾರ ಪ್ರತಿಷ್ಠೆಯುಳ್ಳಾತನೆ ನಮ್ಮ ಕೂಡಲ ಚನ್ನಸಂಗಯ್ಯನಲ್ಲಿ ಸದಾಚಾರ ಸಂಪನ್ನನೆನಿಸುವನು.

---

ಮುಂದೆ ಐಕ್ಯನ ಗುರುಲಿಂಗಸ್ಥಲ. ಇಂತೀ ಆಚಾರಲಿಂಗದಲ್ಲಿ ಸಮರಸ ಸಂಪನ್ನನಾದ ಐಕ್ಯನ ಗುರುಲಿಂಗಸ್ಥಲ. ಆ ಸ್ಥಲದನುಭಾವದ ವಚನ.

## ಐಕ್ಯನ ಗುರುಲಿಂಗಸ್ಥಲ

೧. ಅರ್ಪಿತವೆಂದೊಡೆ ಅನರ್ಪಿತವಾಯಿತ್ತು. ಅನರ್ಪಿತವೆಂದೊಡೆ ಅರ್ಪಿತವಾಯಿತ್ತು. ಗುರುವೆಂದೊಡೆ ಶಿಷ್ಯನಾಯಿತ್ತು. ಶಿಷ್ಯನೆಂದೊಡೆ

ಗುರುವಾಯಿತ್ತು. ಗುರು ಶಿಷ್ಯ ಸಂಬಂಧವೆಂಬ ಪ್ರತಿಬಿಂಬದ ಭಾವವುಳ್ಳನ್ನಕ್ಕರ ಮಹಾಲಿಂಗೈಕ್ಯವೆಲ್ಲಿಯದೊ ಕೂಡಲ ಚನ್ನಸಂಗಮದೇವಾ?

೨. ಗುರು ಕಾರುಣ್ಯವ ಪಡೆದೆವೆಂಬುವರು ನೀವು ಕೇಳಿ ಭೋ. ಒಬ್ಬ ನಾದಿಹೆನೆಂಬ. ಮತ್ತೊಬ್ಬ ಒಬ್ಬ ರಿಚ್ಚೆಗಾದಿಹೆನೆಂಬ. ಇವರಿಬ್ಬರು ಪಿಂಡ ಭೋಗಿಗಳು. ಭಕ್ತಂಗೆ ಆಗೆಯು ಇಲ್ಲ, ಚಾಗೆಯು ಇಲ್ಲ, ಸರ್ವ ದ್ರವ್ಯವನು ಗುರುವಿಗೊಪ್ಪಿಸಿದನಾಗಿ. ॥ಸಾಕ್ಷಿ॥ ಗುರುದ್ರವ್ಯಾಭಿಲಾಷೇನ। ನ ಪೂಜಾಸನ ವಂಚಕಂ। ಪ್ರಚೋದ್ಯೋನಿರಾಕರಣಂ। ಬ್ರಹ್ಮ ಬ್ರಹ್ಮೇತಿ ರಾಕ್ಷಸಃ। ಎಂದುದಾಗಿ ಗುರು ದ್ರವ್ಯವನಪಹರಿಸಲಾಗದು. ಗುರುದ್ರವ್ಯವಾವುದೆಂದಡೆ ದೇಹಿಕ ದ್ರವ್ಯ ಭೌತಿಕದ್ರವ್ಯ ಆತ್ಮದ್ರವ್ಯ ಇಂದ್ರಿಯ ದ್ರವ್ಯ ಜ್ಞಾನ ದ್ರವ್ಯವೆಂಬ ಪಂಚದ್ರವ್ಯವನು ಉಭಯವಳಿದು ಷೋಡಶೋಪಚಾರದಲ್ಲರ್ಪಿಸಬಲ್ಲಡೆ ನಮ್ಮ ಕೂಡಲ ಚನ್ನಸಂಗಯ್ಯನಲ್ಲಿ ಆತನೆ ಗುರುಭಕ್ತನು.

---

ಮುಂದೆ ಐಕ್ಯನ ಶಿವಲಿಂಗಸ್ಥಲ. ಇಂತೀ ಗುರುಲಿಂಗದಲ್ಲಿ ಸಮರಸ ಸಂಪನ್ನನಾದ ಐಕ್ಯನ ಶಿವಲಿಂಗಸ್ಥಲ. ಆ ಸ್ಥಲದನುಭಾವದ ವಚನ.

## ಐಕ್ಯನ ಶಿವಲಿಂಗಸ್ಥಲ.

೧. ಲಿಂಗವೆಂದು ಪೂಜಿಸಿದೊಡೆ ಅಂಗದೊಡನುಳಿಯಿತ್ತು. ಅಂಗದೊಡನುಳಿವ ಲಿಂಗವ ಹಿಂಗಿ ಪೂಜಿಸಬೇಕು. ಹಿಂಗದ ಪೂಜೆಯನರಿದೊಡೆ ನಮ್ಮ ಕೂಡಲ ಚನ್ನಸಂಗಯ್ಯನಲ್ಲಿ ಲಿಂಗೈಕ್ಯನೆನಿಸುವನು.

೨. ಹೊತ್ತರಿಯ ಪೂಜೆ ಹಗಲಿನ ಪೂಜೆ ಎಂದು ನಿಚ್ಚ ನಿಚ್ಚ ಪೂಜೆಯ ಮಾಡಿ ಆಶ್ಚರ್ಯಗೊಂಡರೆಲ್ಲರು. ನಿರಾಳ ನಿರಂಜನ ನಿಜ ಲಿಂಗವ ಹೊತ್ತಿಗೆ ತರಲುಂಟೆ? ಹೊತ್ತನೆ ಪೂಜಿಸಿ ಹೊತ್ತನೆ ಅರ್ಚಿಸಿ ಇತ್ತಲೆಯಾದರೆಲ್ಲರು. ನಿಶ್ಚಿಂತವನರಿದ ನಿಜ ಶರಣ ಧನವಂ ಮರೆದು ಚಿತ್ತ ಸಮಾಧಾನವಾಗಿ ॥ಸಾಕ್ಷಿ॥ ದಿವಪೂಜಯೋರ್ಲಿಂಗಂ। ರಾತ್ರಿರ್ನ ಪೂಜಯತೆ ಸಂತತ ಪೂಜಯೋರ್ಲಿಂಗಂ। ದಿವಾರಾತ್ರಿ ವಿವರ್ಜಯೇತ್॥ ಎಂದುದಾಗಿ ನಮ್ಮ ಕೂಡಲ ಚನ್ನಸಂಗಯ್ಯನೆಂಬ ಲಿಂಗ ನಿಶ್ಚಿಂತ ನಿಜೈಕ್ಯವು.

೩. ಅಂಗವೆ ಲಿಂಗವೆಂಬರು. ಲಿಂಗವೆ ಅಂಗವೆಂಬರು. ಅದು ಹುಸಿ ಇದು ಹುಸಿ. ಅಂಗವೇ ಲಿಂಗವಾದೊಡೆ ಕಾಯದಲ್ಲಿ ಕಳವಳ ಉಂಟೆ? ಲಿಂಗವೆ ಅಂಗವಾದೊಡೆ ಪ್ರಳಯಕ್ಕೊಳಗಹುದೆ? ಇದು ಕಾರಣವಾಗಿ ಅಂಗ ಲಿಂಗವಲ್ಲ. ಲಿಂಗ ಅಂಗವಲ್ಲ. ಅಂಗಲಿಂಗಸಂಬಂಧದ ಸಂದಳಿವಲ್ಲ ಪ್ರಾಣಲಿಂಗ ಸಂಬಂಧಿ. ಪ್ರಾಣ ನಿಃಪ್ರಾಣವಾದಲ್ಲಿ ಲಿಂಗ ರೂಪಾಗಿ ರೂಪ ನಾಸ್ತಿಯಾದಂದು ನಮ್ಮ ಕೂಡಲ ಚನ್ನಸಂಗಯ್ಯನಲ್ಲಿ ಲಿಂಗಸಂಬಂಧಿ.

೪. ನೋಡಿಹೆನೆಂದೊಡೆ ದೃಷ್ಟಿಯು ಕೊಳ್ಳದು. ಪೂಜಿಸಿಹೆನೆಂದೊಡೆ ಪೂಜೆಯು ಕೊಳ್ಳದು. ಇನ್ನೆಂತೊ ಎಂದು ಅರಿದಿಹೆನೆಂದೊಡೆ ಏನು ಇಲ್ಲ ಮಹಾ ಘನ ದೃಷ್ಟ ನಮ್ಮ ಕೂಡಲ ಚನ್ನಸಂಗಯ್ಯನಲ್ಲಿ ಉಭಯಗೆಟ್ಟ ಲಿಂಗಾರ್ಚನೆಯು.

---

ಇಂತೀ ಶಿವಲಿಂಗದಲ್ಲಿ ಸಮರಸ ಸಂಪನ್ನನಾದ ಐಕ್ಯನ ಜಂಗಮ ಲಿಂಗಸ್ಥಲ. ಆ ಸ್ಥಲದನುಭಾವದ ವಚನ.

## ಐಕ್ಯನ ಜಂಗಮಲಿಂಗಸ್ಥಲ.

೧. ಲಿಂಗ ಮುಟ್ಟಿ ಸುಳಿದನಾಗಿ ಜಂಗಮವಲ್ಲ. ಆ ಜಂಗಮಕ್ಕೆ ಮಾಡುವಾತ ಭಕ್ತನಲ್ಲ. ಈ ಉಭಯವಳಿದುಳಿದಾತ ಜಂಗಮ. ಆ ಜಂಗಮಕ್ಕೆ ಮಾಡುವಾತ ಭಕ್ತ. ಇದು ಕಾರಣ ನಮ್ಮ ಕೂಡಲ ಚನ್ನಸಂಗಯ್ಯನಲ್ಲಿ ಉಭಯ ಕುಳವಳಿದುಳಿದ ಭಕ್ತಜಂಗಮವಪೂರ್ವವಯ್ಯಾ.

೨. ಅನ್ಯಲಿಂಗ ಅನ್ಯಲಿಂಗವೆಂದೆಂಬಿರಿ. ಅನ್ಯಲಿಂಗವಾವುದು, ತನ್ನ ಲಿಂಗವಾವುದು? ಅಂಗದ ಮೇಲೆ ಲಿಂಗವುಳ್ಳವರ ಮನೆಯಲ್ಲಿ ಸಲಿಸಲಾಗದು. ಬರುಕಾಯಿಗಳಿಗೆ ನೀಡಲಾಗದು. ಲಿಂಗಜಂಗಮದ ಪಾದೋದಕ ಪ್ರಸಾದವಿಲ್ಲದವರ ಕಂಡು ನೀಡಿ ಮಾಡುವಾತ ಭಕ್ತನಲ್ಲವಯ್ಯಾ ಕೂಡಲಚನ್ನಸಂಗಮದೇವಾ.

---

ಮುಂದೆ ಐಕ್ಯನ ಪ್ರಸಾದಲಿಂಗಸ್ಥಲ. ಇಂತೀ ಜಂಗಮ ಲಿಂಗದಲ್ಲಿ ಸಮರಸ ಸಂಪನ್ನನಾದ ಐಕ್ಯನ ಪ್ರಸಾದಲಿಂಗಸ್ಥಲ. ಆ ಸ್ಥಲದನುಭಾವದ ವಚನ.

## ಐಕ್ಯನ ಪ್ರಸಾದಲಿಂಗಸ್ಥಲ.

೧. ಜಲನಿಧಿಯ ಶಿಖರದ ನಡುವೆ ಒಂದು ವೃಕ್ಷದ ತಳದಲ್ಲಿ ಶಿವಲಿಂಗವಿಪ್ಪುದು ಕೇಳಿರಣ್ಣಾ. ಆ ದ್ರವ್ಯ ಪಾಕಂಗಳನು ತನ್ನ ಸುಖವೆಂದು ನೆನೆಯದೆ ಶಿವಸುಖವೆಂದರಿದು ಬಳಸಬಲ್ಲಡೆ ಆ ದ್ರವ್ಯಪಾಕಂಗಳು ಶುದ್ಧವಯ್ಯಾ ಕೂಡಲ ಚನ್ನ ಸಂಗಮದೇವಾ ನಿಮ್ಮ ಪ್ರಸಾದಿಗೆ.

೨. ವಿನಾಶಾದಾದ್ಯ ಸದಾ ವಿನಾಶ ವಿನೋದ ನೋಡಾ. ಭವದುತ್ಪಟದ ಶರೀರಂಗಳ ಮೋರೆಯಲ್ಲಿ ಮೋಹಿತವಿಲ್ಲದ ಪ್ರಸಾದಿ, ಶರಣವು ಸನ್ನಿಹಿತವಾದ ಪ್ರಸಾದಿ, ರಾಗ ದ್ವೇಷ ಕುಶಬ್ದವಿಲ್ಲವ ಪ್ರಸಾದಿ, ಇದು ಕಾರಣ ಕೂಡಲ ಚನ್ನಸಂಗಯ್ಯನಲ್ಲಿ ಸದಾ ಸನ್ನಿಹಿತವಾದ ಪ್ರಸಾದಿ.

೩. ಸ್ವಯ ಮಜ್ಜನ ಸ್ವಯ ಪೂಜೆ ಸ್ವಯಾರ್ಪಿತ ನಾನು ನೀನೆಂಬ ಸಂಶಯವಳಿದು ನಿಂದ ನಿಲವೆಂತಿರ್ದಿತೆಂದೊಡೆ ಪರತಂತ್ರವ ಮೀರಿ ಅಭಾವ ವಿಭಾವವಂ ಬಿಟ್ಟು ಶಶಿ ರವಿಯ ಲೋಚನನಾಗಿ ಅನರ್ಪಿತವೆ ಭುಂಜಿತವೆಂಬುವದ ಬಿಟ್ಟು ಸ್ಥೂಲ ತನು ಸೂಕ್ಷ್ಮ ತನು ಕಾರಣ ತನು ನಿತ್ಯವೆಂದರಿದು, ಕಾಯ ಜೀವ ಪ್ರಸಾದವಂ ಕೊಟ್ಟು ಸರ್ವಭಾವ ರುಚಿಪ್ರಸಾದಿ ಕೂಡಲ ಚನ್ನಸಂಗಯ್ಯನಲ್ಲಿ ಆತ ಸರ್ವಾಂಗ ಪ್ರಸಾದಿ.

೪. ಅಂಗಕ್ಕೆ ಆಚಾರವಳವಟ್ಟಲ್ಲಿ ಲಿಂಗಕ್ಕೆ ಆ ಲಿಂಗವೇ ಅರ್ಪಿತ. ಪ್ರಾಣಕ್ಕೆ ಪ್ರಸಾದ ಸಾಧ್ಯವಾದಲ್ಲಿ ಲಿಂಗಕ್ಕೆ ಆ ಮನವೇ ಅರ್ಪಿತ. ಭಾವ ಭ್ರಮೆಯನತಿಗಳೆದು ನಿರ್ಭಾವವಾದಲ್ಲಿ ಲಿಂಗಕ್ಕೆ ಆ ಭಾವವೆಯರ್ಪಿತ. ಜ್ಞಾತೃ ಜ್ಞಾನ ಜ್ಞೇಯವೆಂಬ ಸಂಪುಟವಾಗಿ ಅರಿವು ನಿಶ್ಚೈಸಿ ನಿಷ್ಪತ್ತಿಯಾಗಿ ಕುರುಹುಗೆಟ್ಟಲ್ಲಿ ಲಿಂಗಕ್ಕೆ ಆ ಅರುವೆ ಅರ್ಪಿತ. ಇಂತು ಸರ್ವಾಂಗವೆ ಅರ್ಪಿತ. ಈ ಹೀಗೆ ಅರ್ಪಿತವಾಗಿ ಲಿಂಗಕ್ಕೆ ಒಡೆತನವನಿತ್ತ ಕಾರಣ ನಮ್ಮ ಕೂಡಲ ಚನ್ನಸಂಗಯ್ಯನಲ್ಲಿ ನಾನೆಂದರಿಯದೆ ನಿಂದ ನಿಲವು ನೋಡಾ ಪ್ರಸಾದಿ.

೫. ಅಂಗ ಲೀಯ ಲಿಂಗ ಲೀಯ ಭಾವ ಲೀಯ ಸ್ವಭಾವ ಲೀಯ ಸಂಗವಾದಲ್ಲಿ ಪ್ರಸಾದಿ. ಇದು ಕಾರಣ ಕೂಡಲ ಚನ್ನ ಸಂಗಯ್ಯನಲ್ಲಿ ತಾನಾಗಿ ನಿಂದ ಪ್ರಸಾದಿ.

೬. ಪ್ರಥಮದಲ್ಲಿ ಸ್ಪರ್ಶನವೆಂಬ ಸ್ಪರ್ಶನ ಗುಣದಿಂದೆ ಆಯಿತ್ತು ಪಾದೋದಕ. ದ್ವಿತೀಯದಲ್ಲಿ ಅಂಗಗುಣವಳಿಯಿತ್ತಾಗಿ ಲಿಂಗಮುಖ ದಿಂದೆ ಬಂದುದು ಲಿಂಗೋದಕ. ತೃತೀಯದಲ್ಲಿ ಮಹಾಗಣಂಗಳ ಬರ ವಿನಲ್ಲಿ ಬಂದುದಾಗಿ ಮಜ್ಜನೋದಕ. ಚತುರ್ಥದಲ್ಲಿ ಚತುರ್ದಳ ಪದ್ಮ ವಿಕಸಿತವಾಗಿ ಪುಷ್ಪೋದಕ. ಪಂಚಮದಲ್ಲಿ ಲಿಂಗಕ್ಕೆ ಪರಮ ಪರಿಣಾ ಮವನೀವಲ್ಲಿ ಅವಧಾನೋದಕ. ಷಷ್ಠಮದಲ್ಲಿ ಲಿಂಗಾರೋಗಣೆಯ ಅವ ಸರದಲ್ಲಿ ಆಪ್ಯಾಯನೋದಕ. ಸಪ್ತಮದಲ್ಲಿ ಲಿಂಗಕ್ಕೆ ಹಸ್ತೋದಕ. ಅಷ್ಟ ಮದಲ್ಲಿ ಅಷ್ಟಾಂಗಯೋಗವಾದಲ್ಲಿ ಪರಮ ಪರಿಣಾಮೋದಕ ನವಮದಲ್ಲಿ ನಾಮ ಸೀಮೆ ಇಲ್ಲವಾಗಿ ನಿರ್ನಾಮೋದಕ. ದಶಮದಲ್ಲಿ ಹೆಸರಿಲ್ಲವಾಗಿ ನಿತ್ಯೋದಕ. ಇಂತೀ ದಶವಿಧ ಪಾದೋದಕ. ಇನ್ನು ಏಕಾದಶ ಪ್ರಸಾದ. ಪ್ರಥಮದಲ್ಲಿ ಮಹಾದೇವಂಗೆ ಮನವರ್ಪಿತ. ದ್ವಿತೀಯದಲ್ಲಿ ಮಹೇಶ್ವರಂಗೆ ವೀರಾರ್ಪಿತ. ತೃತೀಯದಲ್ಲಿ ಶಂಕರಂಗೆ ಸಮಾಧಾನಾರ್ಪಿತ. ಚತುರ್ಥ ದಲ್ಲಿ ನಿರ್ವಿಷಯಾರ್ಪಿತ. ಪಂಚಮದಲ್ಲಿ ಪಂಚವಕ್ತ್ರಾರ್ಪಿತ. ಷಷ್ಠಮ ದಲ್ಲಿ ನೈಷ್ಠೆಯಾಗಿ ನಿರೂಪಾರ್ಪಿತ. ಸಪ್ತಮದಲ್ಲಿ ಆತ್ಮಾರ್ಪಿತ. ಅಷ್ಟ ಮದಲ್ಲಿ ತನ್ನ ಮರೆದುದೆ ಮಹಾರ್ಪಿತ. ನವಮದಲ್ಲಿ ನಿಶ್ಶೂನ್ಯಾರ್ಪಿತ. ದಶಮದಲ್ಲಿ ಪರಿಣಾಮಾರ್ಪಿತ. ಏಕಾದಶದಲ್ಲಿ ಪ್ರಸಾದವ ನೋಡ ಹೋದಡೆ ತನ್ನ ನುಂಗಿತ್ತಯ್ಯಾ. ಹೇಳಬಾರದ ಘನವ ಕೇಳಬಾರ ದಾಗಿ ಕೂಡಲ ಚನ್ನಸಂಗಯ್ಯ ತಾನೆ ಬಲ್ಲ.

---

ಮುಂದೆ ಐಕ್ಯನ ಮಹಾಲಿಂಗಸ್ಥಲ. ಇಂತೀ ಪ್ರಸಾದ ಲಿಂಗದಲ್ಲಿ ಸಮರಸವಾದ ಮಹಾಲಿಂಗಸ್ಥಲ. ಆ ಸ್ಥಲದನುಭಾವದ ವಚನ.

## ಐಕ್ಯನ ಮಹಾಲಿಂಗಸ್ಥಲ.

೧. ಮಾರ್ಗ ಕ್ರಿಯಾ ಸಮಯದಲ್ಲಿ ಶಿವಭಕ್ತಿ ಸಂಪನ್ನನಾಗಿ ಮೀರಿದ ಕ್ರಿಯಾ ಸಮಯದಲ್ಲಿ ಶಿವಲಿಂಗ ಸಂಗಟ ಭಾವ ನೆಲೆಗೊಂಡಲ್ಲಿ ಮನ ಲಿಂಗಸಂಗಟ ಮನ ಲಿಂಗಲೀಯವಾದಲ್ಲಿ ತೆರಹಿಲ್ಲದೆ ಕುರುಹಳಿದ

ಲಿಂಗೈಕ್ಯ ಸುತ್ತಿರ್ದ ಪ್ರಪಂಚ ಮೆಲ್ಲಮೆಲ್ಲನೆ ಅಚ್ಚಳಿದು ಹಿಂಗಿದವು ಕೂಡಲ ಚನ್ನಸಂಗಮದೇವಾ ನಿಮ್ಮ ಲಿಂಗೈಕ್ಯಂಗೆ.

೨. ಮಂತ್ರಯೋಗ, ಹಠಯೋಗ, ಲಯಯೋಗ, ಜ್ಞಾನಯೋಗ, ಇವು ಮೊದಲಾದ ಎಲ್ಲ ಯೋಗವನರಿದು ಮರೆದು ಭಕ್ತಿಯೋಗದ ಮೇಲೆ ನಿಂದು ರಾಜಯೋಗದ ಮೇಲೆ ನಡೆವ ಶಿವಯೋಗದ ಮೇಲೆ ನುಡಿವ ॥ಸಾಕ್ಷಿ॥ ವಾಚಾತೀತ ಮನೋತೀತ ಭಾವಾತೀತಂ ಪರಂ ಶಿವಃ॥ ಸರ್ವಶೂನ್ಯ ನಿರಾಲಂಬ ನಿತ್ಯತ್ವಂ ಪರಮಂಪದಂ॥ ಎಂದುದಾಗಿ ಮಹಾ ಲಿಂಗೈಕ್ಯದ ನಿಲವನನುಮಾನಿಗಳೆತ್ತ ಬಲ್ಲರೈಯ್ಯ ಕೂಡಲ ಚನ್ನ ಸಂಗ ಮದೇವಾ?

೩. ಲೋಕ ವಿರುದ್ಧ ಭಕ್ತ ಭಕ್ತ ವಿರುದ್ಧ ಶರಣ ಶರಣ ವಿ ರುದ್ಧ ಲಿಂಗೈಕ್ಯ ಇಂತೀ ತ್ರಿವಿಧ ವಿರುದ್ಧವು ನಮ್ಮ ಕೂಡಲ ಚನ್ನ ಸಂಗಯ್ಯನಲ್ಲಿ ಲಿಂಗೈಕ್ಯವು.

೪. ಅರಿಯಲಿಲ್ಲದ ಅರಿವು, ಮರೆಯಲಿಲ್ಲದ ಮರಹು, ನೋಡ ಲಿಲ್ಲದ ನೋಟ, ಬೆರಿಸಲಿಲ್ಲದ ಬೆರಗು, ನಿಜ ನಿಂದ ನಿಲವ ನೋಡಾ ಕೂಡಲ ಚನ್ನಸಂಗಮದೇವಾ.

೫. ನೋಡಿ ನೋಟವ ಮರೆದು, ಕೂಡಿ ಕೂಟವ ಮರೆದು, ಬಯಲ ಸಮರಸಕ್ಕೆ ಮರುಳಾಯಿತ್ತಲ್ಲ. ಜೀವ ಪ್ರಾಣನ ಭೇದವಳಿದು ನಿಜವದಾಯಿತ್ತಲ್ಲ. ಅನ್ಯಚಿಂತನೆಯಳಿದು ತನ್ನ ತಾ ಮರೆಯಿತ್ತು. ಕೂಡಲಚನ್ನ ಸಂಗಮದೇವಾ ನಿನ್ನಿಂದ ನಿಂದಿತ್ತಲ್ಲ.

೬. ಸಹಜವೆನ್ನದೆ ಅಸಹಜವೆನ್ನದೆ ಅಚಳವೆನ್ನದೆ ಅದ್ವಯವೆ ನ್ನದೆ ನಿರಾಳವೆನ್ನದೆ ನಿರಂಜನವೆನ್ನದೆ ಶೂನ್ಯವೆನ್ನದೆ ನಿಃಶೂನ್ಯವೆನ್ನದೆ ಭೇದ್ಯವೆನ್ನದೆ ಅಭೇದ್ಯವೆನ್ನದೆ ವಾಚ್ಯವೆನ್ನದೆ ಅವಾಚ್ಯವೆನ್ನದೆ ತೀತನೆ ನ್ನದೆ ಅತೀತನೆನ್ನದೆ ಗೋಚರವೆನ್ನದೆ ಅಗೋಚರವೆನ್ನದೆ ಏನು ಏನು ಎನ್ನದೆ ನಿಂದುದೆ ನಮ್ಮ ಕೂಡಲ ಚನ್ನಸಂಗಯ್ಯನಲ್ಲಿ ರಹಸ್ಯವಾದ ಲಿಂಗೈಕ್ಯವು.

---

ಇಂತೀ ಐಕ್ಯನ ಸ್ಥಲ ಒಂದರಲ್ಲಿ ಷಡ್ವಿಧ ಲಿಂಗವು ಸಮರಸವನೆಯ್ದುತ್ತಿರಲು ಮುಂದೆ ನಿರವಯ ಸ್ಥಲವಾದುದು. ಆ ಸ್ಥಲವು ಸರ್ವಶೂನ್ಯವೆನಿಸಿಕೊಂಬುವುದು. ಆ ಸ್ಥಲದನುಭಾವದ ವಚನ.

## ನಿರವಯ ಸ್ಥಲ.

ಆದಿಶೂನ್ಯಂ ಮಧ್ಯಶೂನ್ಯಂ ಅಂತ್ಯಶೂನ್ಯಂ ನಿರಾಮಯಂ ಸರ್ವಶೂನ್ಯಂ ನಿರಾಕಾರಂ ನಿಃಶಬ್ದಂ ಬ್ರಹ್ಮಮುಚ್ಯತೇ॥ ಎಂದುದಾಗಿ ಆ ನಿರವಯ ಸ್ಥಲವು ಉರಿ ಉಂಡ ಕರ್ಪುರದಂತಿದ್ದಿತ್ತು. ಇಂತಿದು ನಿರವಯ ಸ್ಥಲವಯ್ಯ ಕೂಡಲಚನ್ನಸಂಗಮದೇವಾ.

೨. ಲಿಂಗಾಚಾರ ಗಣಾಚಾರ ಶಿವಾಚಾರ ಸದಾಚಾರ ಭೃತ್ಯಾಚಾರ ಈ ಪಂಚಾಚಾರವೆಂತೆಂದೊಡೆ ಲಿಂಗದ ಕಠಿಣವನರಿವುದೆ ಲಿಂಗಾಚಾರ. ಶಿವನಿಂದೆಯ ಕೇಳದುದೆ ಗಣಾಚಾರ. ಶಿವಭಕ್ತರಲ್ಲಿ ಜಾತಿವರ್ಗವ ನೋಡದೆ ಅವರೊಕ್ಕುದ ಸಲಿಸುವದೇ ಶಿವಾಚಾರ. ತನು ಮನ ಬಳಲಿಸಿ ಗುರು ಲಿಂಗ ಜಂಗಮಕ್ಕೆ ಮಾಡುವುದೆ ಸದಾಚಾರ. ಶಿವಭಕ್ತನೇ ಹಿರಿದು ನಾನೆ ಕಿರಿದೆಂದು ಭಯಭಕ್ತಿಯಲ್ಲಿ ಆಚರಿಸುವದೆ ಭೃತ್ಯಾಚಾರ. ಇಂತೀ ಪಂಚಾಚಾರವುಳ್ಳ ಪರಮ ಸದ್ಭಕ್ತರ ಒಕ್ಕು ಮಿಕ್ಕ ಪ್ರಸಾದವ ಎನಗಿಕ್ಕಿ ಸಲಹು ಬಸವಪ್ರಿಯ ಕೂಡಲಚನ್ನಸಂಗಮದೇವಾ.

ಇಂತು ಷಟ್‌ಸ್ಥಲಕ್ಕೆ ಸೇರಿದ ವಚನ ೩೯೯ಕ್ಕಂ ಗ್ರಂಥ ೯೦ಕ್ಕಂ ಮಂಗಳ ಮಹಾಶ್ರೀ.

---

ಇಂತೀ ಚನ್ನಬಸವೇಶ್ವರ ದೇವರು ನಿರೂಪಿಸಿದ ಅನುಭಾವದ ವಚನ.

೧. ಅನುಭಾವವೆಂಬುವದೆಂತೆಂದೊಡೆ ಆಚಾರ್ಯಂಗೆ ಆಚಾರ್ಯಾನುಭಾವ. ಶಿಷ್ಯಂಗೆ ಶಿಷ್ಯನನುಭಾವ. ಅದು ಕಾರಣವಾಗಿ ಅನುಭಾವ ಸ್ಥಲವೆನಿಸಿತ್ತು. ಅಂಗಸ್ಥಲಕ್ಕೆ ಲಿಂಗಸ್ಥಲಕ್ಕೆ ಭಿನ್ನವಿಟ್ಟು ಹೇಳಿ ಬಂದುದಿಲ್ಲ. ಅದೆಂತೆಂದೊಡೆ ಲಿಂಗಾಂಗಸಂಗ ಸಮರಸೈಕ್ಯದ ಸವೃದ್ಧಿಯನೆ ಬಿಚ್ಚಿ ಷಟ್‌ಸ್ಥಲವೆಂದು ಆ ಷಟ್‌ಸ್ಥಲ ಸಂಯೋಗದ ನೆಲೆಯನರಿದು ನಿರ್ಧರಿಸಿ ನಿಲಬೇಕಾಗಿ ನಾಮರೂಪು ಕ್ರಿಯಕ್ಕೆ ಮುಖವಾಯಿತ್ತೆಂದ

ರಿದು ಇದೆ ಶ್ರೀ ಮಹಾದೇಶಿಕೇಂದ್ರನ ರಹಸ್ಯ ಬ್ರಹ್ಮವೆಂದು ಹೇಳಿ ಕೊಟ್ಟು ಅನುಶ್ರುತವ ಮಾಡುವ ಉಪದೇಶವೆಂದು ಗ್ರಹಿಸುವುದು. ಇನ್ನು ಮುಂದೆ ಅನಂತ ವಚನಂಗಳಿರ್ದಡೆಯು ಇದೆ ಅನುಭಾವ ಸ್ಥಲದೊಳಗಣನುವಲ್ಲದೆ ಬೇರೊಂದು ಸ್ಥಲ ಬೇರೊಂದು ಪರಿಯಾಯವಿಲ್ಲವೆಂದರಿದು ಇಂತಪ್ಪ ಅನುಭಾವ ಸ್ಥಲವನು ಈ ಹಿಂದೆ ಹೇಳಿಬಂದ ಎಲ್ಲ ವಚನಂಗಳ ನಿರ್ಣಯವನು ಅರಿವಡೆ ಇದೆ ವಸ್ತುವೆಂದು ಇದೆ ಷಟ್‌ಸ್ಥಲದ ಮುದ್ದಿ ಎಂದು ಇದು ಕರಗ ಕಟ್ಟಿರ್ದ ಎರಕವೆಂದು ಆ ದೇಶಿಕೇಂದ್ರನೆಂಬ ಶ್ರೀ ಗುರುರಾಯನು ಶಿಷ್ಯೋತ್ತಮನಿಗೆ ಬೋಧಿಸಲು ಆಚಾರ್ಯ ನಿರೂಪಿಸಿದ ಷಟ್‌ಸ್ಥಲದ ಬ್ರಹ್ಮವನು ಮಹಾ ಪ್ರಸಾದವೆಂದು ಕೈಕೊಂಡು ಆ ಮಹಾ ಶ್ರೀ ಗುರುಲಿಂಗನೆಂಬ ಗುರುವಾಚಾರ್ಯಂಗೆ ಸಾಷ್ಟಾಂಗ ಪ್ರಣುತನಾಗಿ ಕೂಡಲ ಚನ್ನಸಂಗನ ಅನುಭಾವವೆಂಬ ಲಿಂಗಾನುಭಾವವೆಂಬ ಕರುಣಾಮೃತವನುಂಡು ಕೊಬ್ಬಿ ಹರುಷಾನಂದ ರಸವೇರಿ ಗುರುಸ್ತೋತ್ರವ ಮಾಡಿದ ಪದಂಗಳು.

ರಾಗ। ಶಾಂತಮುಲಹರಿ ॥ಪಲ್ಲ॥

ಸ್ಥಳಕುಳದೊಳಗಣ ಹೊಳಹ ತಿಳುಹಿ ಬಲು ಕಳವಳಗಳನಳಿದ ಶ್ರೀಗುರುವೆ ಸಲೆ ಬೆಳಗನು ತೋರಿದೆ ಶ್ರೀಗುರುವೆ ॥ಪದ॥

ಅಂಗಲಿಂಗವೆಂಬ ಸಮರತಿ ಹಿಂಗದಸುಖಸಂಯೋಗದ ಶರಣರ ಸಂಗನಬಸವೇಶ್ವರನನುಭಾವದ ಲಿಂಗವನು ಕರುಣಿಸಿದ ಶ್ರೀಗುರುವೆ ॥೧॥

ಎಲ್ಲಿರ್ದ ಸ್ಥಲದಲ್ಲಿಯೆ ನೀನಲ್ಲದೆ ಮತ್ತಿ। ನ್ನಿಲ್ಲವು ಹಿಂದೆಮುಂದೆಂಬುದನು ಎಲ್ಲ ಸ್ಥಲವಿಟ್ಟು ಸಂದಣಿಸಿದ ಷಟ್‌ಸ್ಥಲದಲ್ಲಿಯೆ ತೋರಿದ ಶ್ರೀಗುರುವೆ ॥೨॥

ಆವಾವ ಸ್ಥಳದೊಳಗಾವಾವದ। ನಾವರ್ಚಿಸಬೇಕೆಂಬುದನರುಹಿಯೆ। ಧಾವತಿಗೊಳಿಸದೆ ಮನಕೆ ಮಹಾಘನವೆನಿಸುವ ದೇವನ ಕರಸ್ಥಳಕೆ ತಂದಿರಿಸಿದ ಶ್ರೀಗುರುವೆ ॥೩॥

ನಿಂದ ನಿಲವಿನೊಳಗೊಂದಿದ ತಾಮಸವನು ಕೊಂದು। ಮುಂದೆ ಷಡ್ವಿಧವೆನಿಸುವ ಲಿಂಗಪೊಳು। ಸಂದಿಲ್ಲದೆ ಸರ್ವಾಂಗವೆಲ್ಲವು ಲಿಂಗವಾದಂದವನುರಿನೆರೆ ತೋರಿದ ಶ್ರೀಗುರುವೆ ॥೪॥

೧೧೧

ಆ ರಂಗಸ್ಥಲದುದ್ಯೋಗವನರುಹಿಸಿ। ಯಾರು ಲಿಂಗಾಂಗಸಂಗಂಗಳನುವನು। ತೋರಿ ಬಸವನೆ ಸಂಗ ಸದಾಶಿವನೆಂದೆನಿಸಿ। ಬೇರೆಂದೆನಿಸದೆ ಬೆರಿಸಿದಂಥ ಶ್ರೀಗುರುವೆ ॥೫॥

ಇಂತೀ ಅನುಭಾವದ ಷಟ್‌ಸ್ಥಲದ ವಚನಕ್ಕೆ ಸೇರಿಸಿದ ಗ್ರಂಥ ೧೬೫ ವಚನ ೩೨೩ಕ್ಕಂ ಅಂತು ಕೂಡಿ ೪೮೮ಕ್ಕಂ ಮಂಗಳ ಮಹಾ ಸಮಾಪ್ತ ಶಿವಾರ್ಪಣಮಸ್ತು ಸಂಪೂರ್ಣ ಮಂಗಳ ಚನ್ನಬಸವೇಶ್ವರ ದೇವರು ನಿರೂಪಿಸಿದ ಅನುಭಾವ ಷಟ್‌ಸ್ಥಲದ ವಚನ ಸಂಪೂರ್ಣ. ಮಂಗಳಮಹಾ ಶುಭಂ ಭವತು ಮಂಗಳಮಹಾ ಶ್ರೀ ಶ್ರೀ

# ಶಿವಾನುಭವ.



ಸಂಪಾದಕ

ರಾ|| ಸಾ|| ಫ. ಗು. ಹಳಕಟ್ಟಿ

ಬಿ. ಏ. ಎಲ್. ಎಲ್. ಬಿ.

ವಿಜಾಪುರ

ಸಂಪುಟ ೭ ಸಂಚಿಕೆ ೪

ಅಕ್ಟೋಬರ.

೧೯೩೨

ವಾ. ವರ್ಗಣಿ ೪-೪-೦ ]            [ ಬಿಡಿಸಂಚಿಕೆ ೦-೧೨-೦

# ವಿಷಯಾನುಕ್ರಮಣಿಕೆ.




ಇದನ್ನು ವಿಜಾಪುರದಲ್ಲಿ ಇದರ ಸಂಪಾದಕರಾದ ರಾ|| ಸಾ|| ಫ. ಗು. ಹಳಕಟ್ಟಿ ಇವರು ತಮ್ಮ ಹಿತಚಿಂತಕ ಪ್ರಿಂಟಿಂಗ ಪ್ರೆಸ್ಸಿನಲ್ಲಿ ಮುದ್ರಿಸಿದರು. ಮತ್ತು ಅವರು ವಿಜಾಪುರದಲ್ಲಿ ಉಪಲೀಬುರುಜದ ಹತ್ತರ ತಮ್ಮ ೧೬೨೦ (ಅ) ಮನೆಯಲ್ಲಿ ಪ್ರಕಟಿಸಿದರು.

# ಶಿವಾನುಭವ.

ವರ್ಷ ೭] ಅಕ್ಟೋಬರ [ಸಂಚಿಕೆ ೪

## ವೀರಶೈವ ಮತದ ಸ್ಥಾನ.

(ಲೇಖಕರು— ಶ್ರೀ ಜೀರಿಗೆ ಬಸವಲಿಂಗಪ್ಪ ರಿಟೈರಡ ಹೈಕೋರ್ಟ ಹೆಡ್‌ಟ್ರಾನ್
ಸ್ಲೇಟರ್ ಅರಳೇಪೇಟೆ ಬೆಂಗಳೂರುಸಿಟಿ.)

ವೀರಶೈವ ಮತವು ದೊಡ್ಡಮತವಾಗಿಯೇ ಇರುತ್ತದೆ ಇದು ಎಲ್ಲ ವಿಧದಲ್ಲೂ ಸ್ವಾತಂತ್ರ್ಯವುಳ್ಳದ್ದಾಗಿರುತ್ತದೆ. ಇದು ಪ್ರತ್ಯೇಕವಾದ ಷಟ್ಸ್ಥಲವೆಂಬ ಒಂದು ಸಿದ್ಧಾಂತವನ್ನುಳ್ಳುದಾಗಿರುತ್ತದೆ. ಇದು ಪ್ರತ್ಯೇಕ ಮತಕರ್ತೃವನ್ನುಂಟಾಗಿರುತ್ತದೆ. ಇದು ಲಿಂಗಧಾರಣವೆಂಬ ವಿಶೇಷ ಚಿನ್ಹವುಳ್ಳುದಾಗಿರುತ್ತದೆ. ಇದು ಸೃಷ್ಟಿಕ್ರಮವನ್ನು ಹೇಳುವದರಲ್ಲಿ ವೀರಶೈವರಿಗೆ ಶಿವಸೃಷ್ಟಿಯನ್ನೂ ಉಳಿದ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರರಿಗೆ ಬ್ರಹ್ಮಸೃಷ್ಟಿಯನ್ನೂ ಅಂದರೆ ಅಪ್ರಾಕೃತ, ಪ್ರಾಕೃತ ಸೃಷ್ಟಿಯನ್ನು ಹೇಳುವದರಿಂದ ಇದು ಬ್ರಾಹ್ಮಣರ ಚತುರ್ವರ್ಣಗಳಿಂದ ಪ್ರತ್ಯೇಕವಾದ ಮತವಾಗಿರುತ್ತದೆ. ಈ ವಿಚಾರವು ಸಿದ್ಧಾಂತಶಿಖಾಮಣಿಯಲ್ಲಿ ಹೇಳಿರುತ್ತದೆ. ಇದೂ ಅಲ್ಲದೆ ಲಿಂಗ ಧರಿಸಿದವರೆಲ್ಲ ಭಕ್ತರೆಂತಲೂ, ಲಿಂಗವಿಲ್ಲದವರೆಲ್ಲ ಭವಿಗಳೆಂತಲೂ ವಿಧಾಯಕ ಮಾಡಿರುವದರಿಂದ ಈ ಮತದ ಜನವೇ ಭಿನ್ನ ಜನಾಂಗವಾಯಿತು. ಬ್ರಾಹ್ಮಣರ ತತ್ವವು ವರ್ಣಾಶ್ರಮಗಳುಂಟು ಎಂದರೆ, ವೀರಶೈವದ ತತ್ವವು ವರ್ಣಾಶ್ರಮವಿಲ್ಲವೆಂದು ಹೇಳುತ್ತದೆ. ಬ್ರಾಹ್ಮಣರ ತತ್ವವು ಪಂಚಸೂತಕಗಳುಂಟೆಂದು ಹೇಳಿದರೆ, ವೀರಶೈವ ತತ್ವವು ಪಂಚಸೂತಕಗಳಿಲ್ಲವೆಂದು ಹೇಳುತ್ತದೆ. ಬ್ರಾಹ್ಮಣ ತತ್ವವು ಪ್ರೇತಗಳನ್ನು ದಹನಮಾಡಬೇಕೆಂದು ಹೇಳಿದರೆ, ವೀರಶೈವ ತತ್ವವು ಪ್ರೇತಗಳನ್ನು ನಿಕ್ಷೇಪ ಮಾಡಬೇಕೆಂದು ಹೇಳುತ್ತದೆ. ಬ್ರಾಹ್ಮಣ ತತ್ವವು ಶಿಖೆಯನ್ನು ಬಿಡಬೇಕೆಂದು ಹೇಳಿದರೆ, ವೀರಶೈವ

ತತ್ವವು ಮುಂಡನ ಮಾಡಬೇಕೆಂದು ಹೇಳುತ್ತದೆ. ಸರ್ವ ವಿಷಯದಲ್ಲೂ ವೀರಶೈವವು ಬ್ರಾಹ್ಮಣ ಮತದಿಂದ ಭಿನ್ನವಾಗಿರುತ್ತದೆ. ಈ ವಿಚಾರ ವೆಲ್ಲಕ್ಕೂ ವೀರಶೈವಾಗಮಗಳನ್ನೂ, ಬಸವನೇ ಮೊದಲಾದ ಶರಣರ ವಚನಗಳನ್ನೂ ಹಂಪೆಯ ಹರೀಶ್ವರ ಮೊದಲಾದವರ ಗ್ರಂಥಗಳಿಂದ ಹಿಡಿದು ಈ ವರೆಗಿನ ವೀರಶೈವ ಸ್ವತಂತ್ರ ಗ್ರಂಥಗಳನ್ನೂ ನೋಡಬೇಕು. ವೀರಶೈವವು ಬಸವೇಶನ ಕಾಲದಿಂದ ಹಿಡಿದು ಈ ವರೆಗು ತಕ್ಕಮಟ್ಟಿನ ಚರಿತ್ರವುಳ್ಳದಾಗಿರುತ್ತದೆ. ಈ ವೀರಶೈವ ಜನಾಂಗದಲ್ಲಿ ಕೆಳದಿ ಅರಸರು, ಬಿಳಿಗಿ ಅರಸರು, ಕಿತ್ತೂರು ಅರಸರು, ಕೊಡಗಿನ ಅರಸರು ಮೊದಲಾದ ರಾಜ ಮನೆತನದವರು ಆಗಿಹೋಗಿರುತ್ತಾರೆ. ಈಗಲೂ ಗೋವಾ ದೊರೆಗಳು, ಪುಂಗನೂರು ಅರಸರು, ನೆಲ್ಯಾಳದ ದೊರೆಗಳು ಮೊದಲಾದವರಿರುತ್ತಾರೆ ಈ ಮತದಲ್ಲಿ ಮೊದಲಿನಿಂದಲೂ ಅನೇಕ ಪಂಡಿತರು ಆಗಿಹೋಗಿರುತ್ತಾರೆ. ಅನೇಕ ಶೂರರೂ ಆಗಿಹೋಗಿರುತ್ತಾರೆ. ಈ ಮತದಲ್ಲಿ ಎಲ್ಲ ವಿಧದ ಉದ್ಯೋಗದವರೂ ಇರುತ್ತಾರೆ. ಈ ರೀತಿಯಾಗಿ ಸರ್ವವಿಧದಿಂದಲೂ ಈ ಮತವು ಸ್ವತಂತ್ರ ಮತವಾಗಿದ್ದಾಗ್ಯೂ ಇದು ಸುಖವಾಗಿರದೆ ಅನೇಕ ತೊಂದರೆಗಳನ್ನನುಭವಿಸುತ್ತಲಿದೆ.

ಈ ಮತದಲ್ಲಿನ ಕೆಲವು ಜನರು ಮೊದಲಿಂದಲೂ ಎಚ್ಚರಿಕೆ ತೆಗೆದುಕೊಳ್ಳದವರಾಗಿ ಹೋಗಿರುತ್ತಾರೆ. ಇಂಡಿಯಾ ದೇಶಕ್ಕೆ (*Census*) ಜನಪರಿಗಣಿತಿಯು ಮೊದಲು ಬಂದದ್ದು ಕ್ರಿ. ಶ. ೧೮೭೧ ರಲ್ಲಿ. ಆಗ್ಯೆ ಇವರು ತಮ್ಮ ಜನಾಂಗದ ನಿಜಸ್ಥಿತಿಯನ್ನೂ ಅವರ ಸ್ಥಾನವನ್ನೂ ಸರ್ಕಾರದವರಿಗೆ ಸರಿಯಾಗಿ ಹೇಳಲಿಲ್ಲ. ಸರ್ಕಾರದವರು ಈ ಮತವನ್ನು ಒಂದು ಜಾತಿಯನ್ನಾಗಿ ಪರಿಗಣಿಸಿ ಯಾವ ಯಾವ ರೀತಿಯಾಗಿಯೋ ಬರೆದುಬಿಟ್ಟರು. ಇದಕ್ಕೆ ಸರಿಯಾದ ದಾರಿಯನ್ನು ಹುಡುಕುವದಕ್ಕೆ ತೋರದೆ, ಲಿಂಗಾಯತರು ತಮ್ಮ ಮತಕರ್ತೃವಾದ ಬಸವನ ಮಾರ್ಗ ವಿರುದ್ಧವಾಗಿ ಈ ಮತದಲ್ಲಿ ಜಾತಿಗಳುಂಟೆಂದು ಸೂಚಿಸಿ ಈ ಮತದ ಸ್ವಾತಂತ್ರ್ಯಸ್ವರೂಪವೇ ಹೋಗುವದಕ್ಕೆ ಅವಕಾಶಕೊಟ್ಟು ಬರುತ ಬರುತ ಈ ಮತದಲ್ಲಿ ವಿಚ್ಛಿದ್ರ ಉಂಟಾಗಿ ಮತವೇ ದಿನಕ್ರಮದ ಮೇಲೆ ಅಂತ್ಯಕ್ಕೆ ಬರುವ ರೀತಿಗೆ ಕಂಡುಬಿಟ್ಟಿರುತ್ತಾರೆ. ಈ ಮತವು ಉಳಿಯಬೇಕಾದರೂ ಜನಪರಿಗಣಿತಿಯಿಂದಲೇ, ಹೋಗಬೇಕಾದರೂ ಜನಪರಿಗಣಿತಿಯಿಂದಲೇ. ಈ ಮತದ ಸ್ಥಾನವನ್ನು ದೃಢಪಡಿಸಿ, ಈ ಮತದ ಜನ

ಸಂಖ್ಯೆಯು ಸರಿಯಾಗಿ ಹೊರಪಡುವಂತೆ ಮಾಡದ ಹೊರತು ಈ ಮತಕ್ಕೆ ಪಟುತ್ವ ಉಂಟಾಗುವದಿಲ್ಲ.

ಸರಕಾರದವರು ಈ ವರೆಗಿನ ಸೆನ್‌ಸಸ್ಸಗಳಲ್ಲಿ ಈ ಮತವನ್ನು ಜಾತಿಯ ಕಲಮಿನಲ್ಲಿ ಹಾಕಿ, ಬರೆಯುವವರ ಅಜ್ಞತೆಯಿಂದಲೂ, ಹೇಳುವವರ ಅಜ್ಞತೆಯಿಂದಲೂ, ಲಿಂಗಾಯತರ ತಪ್ಪುತಿಳುವಳಿಕೆಯಿಂದಲೂ ಕೆಲವು ಕಡೆ ಲಿಂಗಾಯತರೆಂತಲೂ, ಕೆಲವು ಕಡೆ ಬೇರೆ ಬೇರೆ ಒಳಭೇದದ ಹೆಸರುಗಳಿಂದಲೂ ಜನಪರಿಗಣಿತಿಯಲ್ಲಿ ಬರೆಯಲ್ಪಡುವಂತೆ ಮಾಡಿ, ಈ ಮತದ ಜನಸಂಖ್ಯೆಯು ಸರಿಯಾಗಿ ಗೊತ್ತಾಗದಂತವಕಾಶವಾಗಿ, ಚಾರಿತ್ರಸಿದ್ಧವಾದ ಈ ಮತವು ಅಪ್ರಸಿದ್ಧವಾದ ನೂರು ಜಾತಿಗಳಲ್ಲಿ ಯಾವದೋ ಒಂದು ಜಾತಿಯಾಗಿ ಕಾಣಿಸುವಂತಾಗಿ ಕೇವಲ ಅನಾಮಧೇಯವಾದದ್ದಾಗುವಂತಾಯಿತು. ಪ್ರಸಿದ್ಧವಾದ ವೀರಶೈವ ಮತವೆಂಬ ಹೆಮ್ಮೆಯುಳ್ಳ ವೀರಶೈವಾಭಿಮಾನಿಗಳೆಲ್ಲರೂ ಈ ವಿಧವಾದ ಕೊರತೆಯು ಹೋಗುವದಕ್ಕೇನು ಮಾಡಬೇಕೋ ಅದನ್ನು ಇನ್ನು ಮುಂದಾದರೂ ಮಾಡುವದಕ್ಕೆ ಪ್ರಯತ್ನಮಾಡಬೇಕು.

ಇನ್ನು ಮುಂದಿನ (*Census*) ಜನಪರಿಗಣಿತಿಗಳಲ್ಲಿ ವೀರಶೈವರಾದ ನಾವು ಹೇಗೆ ಬರಿಸಬೇಕೆಂಬುದೊಂದು ದೊಡ್ಡ ವಿಚಾರವಿರುತ್ತದೆ. ನಾವು ಯಾವ ದಾರಿಯನ್ನು ಹಿಡಿಯಬೇಕು, ಈಗ ನಮ್ಮ ಜನಸಮುದಾಯಕ್ಕೆ ಉಂಟಾಗಿರುವ ಸಂಖ್ಯಾವಿಭಂಗವನ್ನು ಹೇಗೆ ತಪ್ಪಿಸಬೇಕು, ಚರಿತ್ರ ಪ್ರಸಿದ್ಧವಾದ ನಮ್ಮ ಮತಕ್ಕೆ ಸ್ವಾತಂತ್ರ್ಯಸ್ಥಾನವನ್ನು ಹೇಗೆ ಕೊಡಿಸಬೇಕು, ಈ ವಿಚಾರವನ್ನು ನಾವು ಮಾಡಬೇಕಾಗಿರುತ್ತದೆ. ಜೈನಮತ, ಬ್ರಹ್ಮಸಮಾಜಮತ, ಆರ್ಯಸಮಾಜಮತ ಈ ಮತಗಳಂತೆ ನಮ್ಮ ವೀರಶೈವ ಅಥವಾ ಲಿಂಗಾಯತ ಮತವು ಒಂದು ದೊಡ್ಡ ಮತವಾದಾಗ್ಯು ಇದು ಜನಪರಿಗಣಿತಿಯಲ್ಲಿ ಅನಂತಜಾತಿಗಳ ಮಧ್ಯೆ ಒಂದು ಜಾತಿಯಾಗಿ ಬರೆಯಲ್ಪಡುತ್ತಾ ಇದೆ. ಇದರಿಂದ ಚರಿತ್ರಾರ್ಹವಾದ ಈ ಮತದ ಗಣನೆಯೇ ತಪ್ಪಿಹೋಗಿರುತ್ತದೆ. ಇದು ಒಂದು ಮತವಾಗಿ ಸ್ವಾತಂತ್ರ್ಯ ಚಿನ್ಹವುಳ್ಳುದಾಗಿರುವದರಿಂದ ಜೈನ ಮತದಂತೆ ಒಂದು ಪ್ರತ್ಯೇಕ ಮತವಾಗಿ ಏಕೆ ಬರಿಸಲ್ಪಡಬಾರದು? ಕ್ರಿ. ಶ, ೧೯೦೧ ನೆ ವರ್ಷದ ಇಂಡಿಯಾ ದೇಶದ (*Census*) ಜನಪರಿಗಣಿತಿಯ ವರದಿಯಲ್ಲಿ ಜೈನ, ಬೌದ್ಧ, ಸಿಕ್ ಮತಗಳು ತಾತ್ವಿಕ

ದಿಂದ ಹಿಂದೂ ಮತದಿಂದ ಭಿನ್ನವಾಗಿಲ್ಲವಾದಾಗ್ಯು ಚಾರಿತ್ರ ಪ್ರಸಿದ್ಧಿಯಿಂದಲೂ, ರಾಜಕೀಯ ಪ್ರಾಮುಖ್ಯತೆಯಿಂದಲೂ ಅವುಗಳಿಗೆ ಉನ್ನತವಾದ ಪ್ರತ್ಯೇಕಸ್ಥಾನ ಕೊಡಲ್ಪಟ್ಟಿದೆ ಎಂತಲೂ, ಬಂಗಾಳ ದೇಶದ ಚೈತನ್ಯ ಸ್ವಾಮಿಯ ವೈಷ್ಣವದಂತೆಯೂ, ದಕ್ಷಿಣ ಇಂಡಿಯಾ ದೇಶದ ಲಿಂಗಾಯತ ಮತದಂತೆಯೂ ಹಿಂದುಮತದಿಂದಲೇ ತತ್ವಸಾರವನ್ನು ಎಳೆದಿರುತ್ತದೆ ಎಂತಲೂ ಬರೆಯಲ್ಪಟ್ಟಿರುತ್ತದೆ. ಆ ವರದಿಯನ್ನು ಇಲ್ಲಿ ಬರೆಯುತ್ತೇನೆ. ಹೇಗೆಂದರೆ:—

It is doubtful if Buddhism, and still more so if Jainism and Sikkbism, all of which are commonly recognized as distinct religions, ever differed from Hinduism to a greater extent than did the tenets of the earlier followers of Chaitanya in Bengal or those of the Lingayets in Bombay. The Jains, though they have their own spiritual guide, have never ceased, as the Lingayets have done to employ Brahmins in their religious ceremonies. The cardinal religious doctrines of the Sikhs are enshrined in the teaching of Baba-Nanak but the severance from Hinduism lies, not in the acceptance of Nanaks theologies, for the majority of the primitive Nanak Shahis consider themselves, and are regarded by their neighbours as Hindus, but in the open rejection of ordinary Hindu temples inculcated in the ordinances of Guru Govind. Considerations of their history and past political importance have led the elevation of Buddhism, Jainism and Sikkism to the rank of independent religions'

ಶ್ರೀ ಬಸವೇಶ್ವರನು ವೀರಶೈವದ ಕೆಲವು ತತ್ವಗಳನ್ನು ವೇದಗಳಿಂದಲೂ, ಉಪನಿಷತ್ತುಗಳಿಂದಲೂ ಎಳೆದಿದ್ದಾಗ್ಯು, ಬ್ರಾಹ್ಮಣ ಮತಕ್ಕೆ ಮುಖ್ಯವಾದ ಯಜ್ಞ ಕರ್ಮವನ್ನೂ, ಅನಂತ ದೈವಾರಾಧನೆಯನ್ನೂ ನಿರಾಕರಿಸಿರುತ್ತಾನೆ. ಬ್ರಾಹ್ಮಣರ ವರ್ಣಾಶ್ರಮವನ್ನು ಜೈನರು ಅಂಗೀಕರಿಸಿದ್ದರೂ ಅವರನ್ನು ಸ್ವಾತಂತ್ರ್ಯ ಮತದವರನ್ನಾಗಿ ಅಂಗೀಕರಿಸಿರುತ್ತಾರೆ. ವರ್ಣಾಶ್ರಮವನ್ನು ನಿರಾಕರಿಸಿರುವ ಶ್ರೀ ಬಸವ ಸ್ವಾಮಿಯ ವೀರಶೈವಕ್ಕೆ

ಏಕೆ ಸ್ವಾತಂತ್ರ್ಯಸ್ಥಾನವನ್ನು ಕೊಡಬಾರದು? ಜೈನರು ತಮ್ಮ ಗ್ರಂಥಗಳಲ್ಲಿ ಹಿಂದೂ ದೇವತೆಗಳಾದ ಸರಸ್ವತಿ ಮೊದಲಾದ ದೇವತೆಗಳನ್ನು ಸ್ತುತಿಸಿರುತ್ತಾರೆ. ಪ್ರೊ॥ ಎಚ್. ಎಚ್. ವಿಲಸನರ ಸಾಹೇಬರು ತಮ್ಮ ಹಿಂದೂ ರಿಲಿಜನ್ಸ ಎಂಬ ಪುಸ್ತಕದಲ್ಲಿ ಜೈನರು ಹಿಂದೂ ದೇವತೆಗಳನ್ನು ಗಣನೆಗೆ ತರುತ್ತಾರೆಂತಲೂ, ವೇದಗಳಿಗೆ ಮರ್ಯಾದೆಯನ್ನು ಕೊಡುತ್ತಾರೆಂತಲೂ, ಬ್ರಾಹ್ಮಣರನ್ನು ಪುರೋಹಿತರನ್ನಾಗಿ ನೇಮಿಸುತ್ತಾರೆಂತಲೂ, ಜೈನರಿಗೂ ವೈಷ್ಣವರಿಗೂ ಏನೂ ಭೇದವಿಲ್ಲವೆಂತಲೂ ಮುಂತಾಗಿ ಹೇಳಿರುತ್ತಾರೆ. ಅವರು ಹೇಳುವದೇನಂದರೆಃ—

" There is political leaning observable in their recognition of the orthodox pantheon, in deferance paid to the Vedas and to the employment of Brahmins as ministrant priests. There is no real difference between the Jains and the Vaishnavas ''

ಹೀಗಿರುವಾಗ್ಗೆ ಅನೇಕ ವಿಷಯಗಳಲ್ಲಿ ಸ್ವಾತಂತ್ರ್ಯ ಚಿನ್ಹವುಳ್ಳ ವೀರಶೈವ ಅಥವಾ ಲಿಂಗಾಯತ ಮತಕ್ಕೆ ಪರಿಗಣಿತಿಯಲ್ಲಿ ಸ್ವತಂತ್ರ ಸ್ಥಾನವನ್ನು ಕೊಡುವದು ಅತ್ಯವಶ್ಯಕವಾಗಿರುತ್ತದೆ. ಸ್ವತಂತ್ರ ಸ್ಥಾನವನ್ನು ಹೊಂದುವದರಿಂದ ಯಾವ ಲೋಪವೂ ಉಂಟಾಗುವದಿಲ್ಲ. ಹೀಗೆ ಮಾಡುವದರಿಂದ ಪರಿಗಣಿತಿಯಲ್ಲಿ ಚರಿತ್ರ ಪ್ರಸಿದ್ಧವಾದ ವೀರಶೈವ ಅಥವ ಲಿಂಗಾಯತ ಎಂಬ ಮತದ ಹೆಸರೂ, ಒಳಭೇದಗಳ ಹೆಸರುಗಳೂ ಚ್ಯುತಿಯಿಲ್ಲದೆ ಬರೆಯಲ್ಪಡುತ್ತವೆ. ಸಂಖ್ಯಾಭಂಗವೂ ಆಗುವದಿಲ್ಲ. ನಮ್ಮ ನಮ್ಮಲ್ಲಿನ ಅಂತಃ ಕದನಗಳೂ ನಿಲ್ಲುತ್ತವೆ. ಇದರ ಮೇಲೆ ವೀರಶೈವಕ್ಕೆ ಜಗದ ದೃಷ್ಟಿಗೆ ಬೀಳತಕ್ಕ ಪ್ರಶಸ್ತಿಯೂ ಬರುತ್ತದೆ. ಈಗಿನಂತೆ ಸಾವಿರಾರು ಜಾತಿಗಳ ಮಧ್ಯದಲ್ಲಿ ಒಂದು ಜಾತಿಯಾಗಿ ಪರಿಗಣಿಸಲ್ಪಡುವದರಿಂದ, ವೀರಶೈವ ಮತ ಅಥವ ಲಿಂಗಾಯತ ಮತವೆಂಬ ಹೆಸರು ಎಲ್ಲಿಯೋ ಅಡಗಿ ಹೋಗಿಬಿಡುತ್ತದೆ.

ಮೇಲ್ಕಂಡ ರೀತಿಯಲ್ಲಿ ಜೈನರಂತೆ ಹಿಂದೂಗಳಿಂದ ಭಿನ್ನರಾಗಿ ಗಣಿಸಲ್ಪಡುವದಕ್ಕೆ ಕೆಲ ಲಿಂಗಾಯತರು ಒಪ್ಪದಿರಬಹುದು. ಹಿಂದೂ ಮತದಿಂದ ದೂರವಾಗುವದಕ್ಕೆ ಭಯಪಡಬಹುದು. ಆದರಿಂದ ಬರೀ

ಭಯುವೇ ಹೊರತು ನಮ್ಮ ಮತ ತತ್ವ ಪ್ರಚಾರಕ್ಕೆ ಯಾವ ಲೋಪವೂ ಇಲ್ಲ. ಜೈನರು ಸಸ್ಯಾಹಾರಿಗಳಾಗಿ ಶುದ್ಧ ಜನಾಂಗವಾಗಿರುತ್ತಾರೆ.

ಈ ರೀತಿ ಹಿಂದೂ ಮತದಿಂದ ಪ್ರತ್ಯೇಕವಾಗಿ ಗಣಿಸಲ್ಪಡುವದಕ್ಕೆ ನಮ್ಮವರಿಗೆ ಇಷ್ಟವಿಲ್ಲದೆ ಹೋದರೆ, ಇನ್ನೊಂದು ಮಾರ್ಗವನ್ನು ಅನುಸರಿಸಬಹುದು. ಹಿಂದೂ ಮತದಲ್ಲಿದ್ದೇ, ಅದರೊಳಗೆ ಒಂದು ಪ್ರತ್ಯೇಕ ಮತದವರಾಗಿ ಗಣಿಸಲ್ಪಡುವ ಯತ್ನವನ್ನಾದರೂ ಮಾಡಬೇಕು. ಈಗಿನ ಸೆನ್‌ಸಸ್ಸುಗಳಲ್ಲಿ ಹಿಂದೂ ಮತವನ್ನು ಮೂರು ಭಾಗ ಮಾಡಿರುತ್ತಾರೆ. ಹೇಗೆಂದರೆಃ—*Brahmanic Hindus, Arya Hindus, Brakmo Hindus* ಎಂದು ಭಾಗಮಾಡಿರುತ್ತಾರೆ. ಅಂದರೆ ಬ್ರಾಹ್ಮಣ ಹಿಂದೂಗಳು, ಆರ್ಯ ಹಿಂದೂಗಳು, ಬ್ರಾಹ್ಮೋ ಹಿಂದೂಗಳು ಎಂದು ಭಾಗಮಾಡಿರುತ್ತಾರೆ. ಬ್ರಾಹ್ಮೋ ಹಿಂದೂ ಎಂಬದು ಈಚೆಗೆ ಬಂಗಾಳಾದ ರಾಯಮೋಹನ್‌ರಾಯು ಎಂಬಾತನು ಕಂಡು ಹಿಡಿದದ್ದು. ಆರ್ಯಹಿಂದೂ ಎಂಬುದು ಇನ್ನೂ ಈಚೆಗೆ ಶ್ರದ್ಧಾನಂದ ಸ್ವಾಮಿಯು ಕಂಡು ಹಿಡಿದದ್ದು. ಈ ಎರಡು ಮತಗಳು ತತ್ವಗಳನ್ನು ಉಪನಿಷತ್ತುಗಳಿಂದಲೆ ಎಳೆದಿರುತ್ತವೆ. ನಿರ್ಗುಣ ಬ್ರಹ್ಮಾರಾಧನೆಯನ್ನು ಬೋಧಿಸುತ್ತವೆ. *Monotheism* ಏಕದೇವತಾರಾಧನೆಯನ್ನು ಬೋಧಿಸುತ್ತವೆ. ಹೀಗಿರಲಿಕ್ಕಾಗಿ ಸ್ವಲ್ಪ ಹೆಚ್ಚು ಕಡಿಮೆ ಮತ್ತೊಂದು ವಿಧಾನದಿಂದ ಅದೇ ಏಕದೇವತಾರಾಧನವನ್ನೂ, ನಿರ್ಗುಣೋಪಾಸನವನ್ನೂ, ಮತ್ತು ಇತರ ಉದಾರ ತತ್ವಗಳನ್ನೂ ಬೋಧಿಸತಕ್ಕ ವೀರಶೈವ ಅಥವ ಲಿಂಗಾಯತ ಮತಕ್ಕೆ ಹಿಂದೂ ಮತದಲ್ಲೆ ಬ್ರಾಹ್ಮಣ ಹಿಂದೂ, ಆರ್ಯಹಿಂದೂ, ಬ್ರಾಹ್ಮೋಹಿಂದೂ ಎನ್ನುವಂತೆ ವೀರಶೈವ ಅಥವ ಲಿಂಗಾಯತ ಹಿಂದೂ ಎಂತ ಏಕೆ ಒಂದು ಸ್ಥಾನವನ್ನು ನಮ್ಮ ವೀರಶೈವರು ಒದಗಿಸಿಕೊಳ್ಳಬಾರದು ? ಈ ರೀತಿ ಮಾಡದೆ ಸುಮ್ಮನೆ ಬೇರೆ ವಿಧವಾದ ಯತ್ನಗಳನ್ನು ಮಾಡಿದರೆ ನಮಗೆ ಯಾವ ಗಣ್ಯತೆಯೂ ಬರುವದಿಲ್ಲ. ಮತ್ತು ನಮ್ಮ ಸಮಾಜದಲ್ಲಿ ಅಸೂಯೆಗಳುಂಟಾಗಿ ವಿಚ್ಛಿದ್ರಗಳಾಗಿ ಸಮಾಜವು ಕೆಲವು ಶತಮಾನಗಳಲ್ಲಿಯೇ ಅಂತ್ಯವಾಗುವ ಸಂಭವವಿರುತ್ತದೆ. ಎಲ್ಲ ಮಾರ್ಗಕ್ಕಿಂತಲೂ ಈ ಮಾರ್ಗವೇ ಉತ್ತಮವೆಂದು ನನಗೆ ತೋರುತ್ತದೆ. ಇದನ್ನು ಅವಲಂಬಿಸುವದಕ್ಕೆ ನಮ್ಮ ಸಮಾಜ ಪ್ರಮುಖರು ಸರ್ವ ಪ್ರಯತ್ನಮಾಡಬೇಕು. ನಮ್ಮ ವೀರಶೈವ

ಅಥವ ಲಿಂಗಾಯತ ಸಮಾಜವು ಸ್ವತಂತ್ರ ಸ್ಥಾನಕ್ಕೆ ಅರ್ಹತೆಯುಳ್ಳು ದೆಂಬುದಕ್ಕೆ ಮದ್ರಾಸಿನ ಟಾಗೋರು ಲಾ ಪ್ರೊಫೇಸರ್ ಕೆ. ಸುಬ್ರಹ್ಮಣ್ಯಮ್ ಎಮ್. ಪಿ. ಎಮ್. ಎಲ್. ರವರು ಹೀಗೆ ಬರೆದಿರುತ್ತಾರೆಃ—

*"This religion does not recognize the caste system of the Smritis. As such the community professing it has an independent social status deserving of due legal recognition."*

ಇದರ ಅರ್ಥವೇನಂದರೆಃ— "ಈ ಮತವು ಸ್ಮೃತಿಗಳ ಜಾತಿ ಪದ್ಧತಿಯನ್ನು ಅಂಗೀಕರಿಸುವದಿಲ್ಲ. ಈ ಕಾರಣದಿಂದ ತನ್ಮತಾವಲಂಬಿಯಾದ ಜನವರ್ಗವು ನ್ಯಾಯವಿಧಿ ನಿಯಮಕ್ಕೆ ಅರ್ಹತೆಯುಳ್ಳಂತ ಒಂದು ಸ್ವಾತಂತ್ರ್ಯ ಸಾಮಾಜಿಕ ಸ್ಥಿತಿಯುಳ್ಳದಾಗಿರುತ್ತದೆ." ಈ ಬಗೆಯಾಗಿ ಹಿಂದೂ ಮತದಲ್ಲೇನೆ ಒಂದು ಸ್ವಾತಂತ್ರ್ಯಸ್ಥಾನವನ್ನೂ ಕೂಡ ಪಡೆಯುವದಕ್ಕೆ ಇಷ್ಟವಿಲ್ಲವೆಂದ ಮೇಲೆ, ನಮ್ಮ ಸಮಾಜದ ಎಂದಿನ ಸ್ಥಿತಿಯಲ್ಲೇ ನಾವು ಇರಬೇಕಾಗುತ್ತದೆ.

ಈ ವರಿಗೂ (*Census*) ಜನಪರಿಗಣಿತಿಯಲ್ಲಿ ಲಿಂಗಾಯತರನ್ನು ಎಣಿಕೆ ಮಾಡುವದರಲ್ಲಿ ಅನೇಕ ತೊಂದರೆಗಳಾಗಿರುತ್ತವೆ. ಮತದ ಹೆಸರು ಸರಿಯಾಗಿ ಬೀಳುವದಿಲ್ಲ. ಒಳಭೇದಗಳ ಹೆಸರುಗಳನ್ನು ಹೇಳುವದರಲ್ಲಿ ಬೇರೆ ಬೇರೆ ಜಾತಿಗಳು ಒಂದಕ್ಕೊಂದು ಮಿಶ್ರವಾಗಿ ಬರೆಯಲ್ಪಟ್ಟು ವೀರಶೈವ ಮತದ ಸಂಖ್ಯೆಗೆ ಅನೇಕ ಬಗೆಯಲ್ಲಿ ವಿಭಂಗ ಉಂಟಾಗಿರುತ್ತದೆ. ಇದಕ್ಕೆ ಒಂದು ನಿದರ್ಶನವನ್ನು ತೆಗೆದುಕೊಳ್ಳೋಣ. ಕ್ರಿ. ಶ. ೧೯೦೧ ನೆ ಮದ್ರಾಸಿನ ಸೆನಸಸ್ಸಿನ ರಿಪೋರ್ಟನ್ನು ನೋಡಿದ್ದರಲ್ಲಿ ಈ ಕೆಳಗಣ ಅಂಶಗಳು ಕಂಡುಬರುತ್ತವೆ. ಮದ್ರಾಸು ಅಧಿಪತ್ಯದಲ್ಲಿ (*Census*) ಜನಪರಿಗಣಿತಿ ತೆಗದುಕೊಳ್ಳುವಾಗ್ಗೆ ಕೆಲರು ಒಳಭೇದಗಳನ್ನು ಹೇಳದೆ ಸುಮ್ಮನೆ ಲಿಂಗಾಯತರೆಂದು ಬರೆಸಿದರು. ಅವರೆಲ್ಲರೂ ಲಿಂಗಾಯತರ ಸಂಖ್ಯೆಗೆ ಬಿದ್ದರು. ಇನ್ನು ಲಿಂಗಧಾರಿಗಳಾದ ಕೆಲವರು ಮತದ ಹೆಸರಿಗೆ ಪ್ರಾಮುಖ್ಯತೆಯನ್ನು ಕೊಡದೆ ಒಳಭೇದದ ಹೆಸರಿಗೆ ಪ್ರಾಮುಖ್ಯತೆಯನ್ನು ಕೊಟ್ಟು ಕೆಲವರು ಜಂಗಮರು, ಕೆಲವರು ಸಾದರು, ಕೆಲವರು ಗೌಳಿಗರು, ಕೆಲವರು ಕನ್ನಡ ಬಣಜಿಗರು

ಎಂತ ಬರೆಸಿದರು. ಅವರು ಆಯಾಯ ಹೆಸರಿನ ಸಂಖ್ಯೆಗೆ ಬಿದ್ದರು. ಇದರಿಂದ ಒಟ್ಟು ವೀರಶೈವ ಅಥವ ಲಿಂಗಾಯತ ಸಂಖ್ಯೆಗೆ ಬಹಳ ಮಟ್ಟಿಗೆ ಕಮ್ಮಿ ಬಿದ್ದು ಹೋಯಿತು. ಇದೂ ಅಲ್ಲದೆ ಚರಿತ್ರ ಪ್ರಸಿದ್ಧ ವಾದ ಮತವಾವುದೋ, ಜಾತಿ ಯಾವದೋ ಗೊತ್ತಿಲ್ಲದಂತಾಯಿತು. ಉದ್ದಾಮ ತತ್ವಗಳುಳ್ಳ ಅನೇಕ ಚರಿತ್ರ ಪ್ರಸಿದ್ಧ ಮಹಾಪುರುಷರಿಂದ ಪ್ರಕಾಶಿಸುವ ನಮ್ಮ ಸಮಾಜಕ್ಕೆ ಇದರಿಂದ ಅಗಣ್ಯತೆಯಾದುದಾಯಿತು.

ನಾನು ಮೇಲೆ ಹೇಳಿದಂತೆ ಎರಡನೇ ವಿಧಾನದಿಂದ ಹಿಂದೂ ಮತದೊಳಗೇನೆ ಲಿಂಗಾಯತ ಮತವೆಂದು ಸ್ವತಂತ್ರವಾಗಿ ಬರೆಸುವ ವಿಧಾನವನ್ನು ನಾವು ಸರಕಾರವನ್ನು ಕೇಳಿ ಪಡೆಯುವದಕ್ಕೆ ನಮ್ಮ ಜನ ರಲ್ಲಿ ಏಕಮತವಿಲ್ಲದ ಪಕ್ಷಕ್ಕೆ ಅಥವ ನಮ್ಮವರ ಸರಕಾರವನ್ನು ಕೇಳಿ ದರೂ ಅವರು ನಮ್ಮ ಇಷ್ಟವನ್ನು ನಡೆಸದೇ ಹೋದರೂ, ನಾವು ಈಗಿ ರುವ ಸ್ಥಿತಿಯಲ್ಲೇ ಎಚ್ಚರಿಕೆ ತೆಗೆದುಕೊಳ್ಳುವವರಾಗಬೇಕು. ಹೇಗಂದರೆ ಯಾವಾಗ್ಯೂ ನಮ್ಮವರು ವೀರಶೈವ ಅಥವ ಲಿಂಗಾಯತ ಎಂಬ ಮತದ ಹೆಸರಿಗೆ ಪ್ರಾಮುಖ್ಯತೆಯನ್ನು ಕೊಡಬೇಕು. ಒಳಭೇದಗಳ ಹೆಸರಿಗೆ ಕೇವಲ ಅಧೀನ ಸ್ಥಾನವನ್ನು ಕೊಡಬೇಕು, ಅಥವ ಅದನ್ನು ಕೂಡಿದ ಮಟ್ಟಿಗೂ ಬಿಡುತ್ತ ಬರಬೇಕು. ಲಿಂಗವನ್ನು ಧರಿಸಿದವನಾವನೇ ಆಗಲಿ, ಆವನು ಯಾವ ಒಳಭೇದದವನೇ ಆಗಲಿ ಅವನನ್ನು ನಮ್ಮ ಸಮಾ ಜದವರು ವೀರಶೈವ ಅಥವ ಲಿಂಗಾಯತ ಎಂತ ಆನಂದದಿಂದ ಕರೆ ಯಬೇಕು. ನಮ್ಮೊಳಗೆ ಅವನೂ, ಅವನೊಳಗೆ ನಾವೂ ಏಕೀಭವಿಸಿ ಕೆಲಸ ಮಾಡಬೇಕು. ಲಿಂಗವನ್ನು ಧರಿಸಿದವನಾವನೇ ಆಗಲಿ, ಅವ ನನ್ನು ನಮ್ಮ ಸಮಾಜದವರು ಹೀನಭಾವದಿಂದ ಕಾಣಬಾರದು. ಯಾವ ದಾದರೂ ಮಹತ್ಕಾರ್ಯಗಳನ್ನು ಮಾಡಿದರೂ ಎಲ್ಲ ಬಗೆಯ ಲಿಂಗಾ ಯತರೂ ಸೇರಿಮಾಡಬೇಕು. ವೀರಶೈವ ಮತಕರ್ತನಾದ ನಮ್ಮ ಕಲ್ಯಾ ಣದ ಬಸವದಂಡಾಧೀಶನ ಲೋಕಮಾನ್ಯವಾದ ಉದಾತ್ತ ತತ್ವಗಳನ್ನು ನಮ್ಮ ಸಮಾಜದವರೆಲ್ಲರಲ್ಲೂ ಹರಡಬೇಕು. ಲಿಂಗಧಾರಿಗಳಾದವರಾ ದರೂ ನಮ್ಮ ಸಮಾಜದಿಂದ ಹೊರಕ್ಕೆ ಹೋಗುವದಕ್ಕೆ ಅವಕಾಶ ಕೊಡಬಾರದು. ನಮ್ಮ ವೀರಶೈವ ಅಥವ ಲಿಂಗಾಯತ ಮತದ ಪ್ರಾಶ ಸ್ತ್ಯವು ಪ್ರಕಾಶಿಸುವ ಹಾಗೆ ಮಾಡುವದಕ್ಕೆ ನಮ್ಮ ವಿದ್ಯಾವಂತರು ಇಂಗ್ಲಿಷಿನಲ್ಲಿ ವೀರಶೈವರ ಚರಿತ್ರೆಯನ್ನು ಬರೆಯಬೇಕು. ನಮ್ಮ ಬಸ ವಾದಿ ಪ್ರಮಥರವ ವಚನ ವಾಙ್ಮಯವನ್ನು ಇಂಗ್ಲಿಷಿನಲ್ಲಿ ಭಾಷಾಂತರ

ಮಾಡಿ ಲೋಕಪ್ರಕಾಶವಾಗುವ ಹಾಗೆ ಮಾಡಬೇಕು. ನಮ್ಮ ಸಮಾಜದ ಸರ್ವ ಜನರೂ ಅತ್ಯಂತವಾಗಿ ವೀರಶೈವ ಮತಾಭಿಮಾನವುಳ್ಳವರಾಗಿರಬೇಕು. ನಮ್ಮ ಸಮಾಜದಲ್ಲಿರುವ ಒಳಭೇದಗಳೆಲ್ಲವೂ ಒಂದು ವೃಕ್ಷದಲ್ಲಿರುವ ಅನಂತ ಕೊಂಬೆಗಳೋಪಾದಿ ಎಂದು ಅರಿಯಬೇಕು. ನಮ್ಮ ಮತದ ಪೀಠಾಧಿಕಾರಿಗಳೂ, ಗುರುಸ್ಥಾನದವರೂ, ಭಕ್ತ ಸಮುದಾಯವೂ ಎಲ್ಲರೂ ಒಬ್ಬ ತಾಯಿಯಲ್ಲಿ ಹುಟ್ಟಿದ ಮಕ್ಕಳಂತೆ ತಿಳಿದುಕೊಂಡು ಸದಾಕಾಲವೂ ವರ್ತಿಸಬೇಕು. ವಿಲಾಯತಿಗೆ ಹೋಗಿ ಇಂಗ್ಲೀಷು ಕಲಿತು ಬಂದಾಗಲೀ, ಕಾಶಿಗೆ ಹೋಗಿ ಸಂಸ್ಕೃತ ಕಲಿತುಬಂದಾಗಲೀ ನಮ್ಮ ಮತತತ್ವಕ್ಕನುಸಾರವಾಗಿ ನಡೆಯುವದನ್ನು ಬಿಡಬಾರದು. ವಿಶೇಷವಾಗಿ ನಮ್ಮ ಬಸವಾದಿ ಪ್ರಮಥರ ವಿಸ್ತಾರವಾದ ವಚನ ರಾಶಿಯನ್ನೂ ಸಿಕ್ಕತಕ್ಕ ವೀರಶಿವಾಗಮಗಳನ್ನೂ, ವೀರಶೈವ ತತ್ವಬೋಧಕಗಳಾದ ಸ್ವತಂತ್ರ ಗ್ರಂಥಗಳನ್ನೂ ಅಪಾರವಾಗಿ ಓದಬೇಕು. ವೀರಶೈವ ಸಂಬಂಧವಾಗಿ ಯಾವ ಸುಳ್ಳುಗಳನ್ನೂ ಹೇಳದೆ ಶುದ್ಧಮತಿಯುಳ್ಳವರಾಗಿರಬೇಕು.

ವೀರಶೈವ ಅಥವಾ ಲಿಂಗಾಯತ ಮತವು ಬ್ರಾಹ್ಮಣಮತದಿಂದ ವಿಭಿನ್ನವಾದುದೆಂಬದಕ್ಕೆ ಪೂರ್ವದಿಂದಲು ಬಂದ ಕೆಲವು ಗ್ರಂಥಕರ್ತರ ವಾಕ್ಯಗಳನ್ನು ಕೊಡುತ್ತೇನೆ. ಶ್ರೀ ಬಸವೇಶ್ವರ ದೇವರು ತಮ್ಮ ವಚನದಲ್ಲಿ ಹೀಗೆ ಹೇಳಿದುತ್ತಾರೆ.

"ವಿಪ್ರ ಮೊದಲು ಅಂತ್ಯಜ ಕಡೆಯಾಗಿ ಶಿವಭಕ್ತರಾದವರನೆಲ್ಲರನೊಂದೇ ಎಂಬೆ. ಹಾರುವ ಮೊದಲು ಶ್ವಪಚ ಕಡೆಯಾಗಿ ಭವಿಯಾದವರನೆಲ್ಲರನೊಂದೇ ಎಂಬೆ"

ಇದರಿಂದ ಲಿಂಗ ಧರಿಸಿದ ಶಿವಭಕ್ತರೆಲ್ಲರೂ ಒಂದು ಜನಾಂಗವಾದ ಹಾಗಾಯಿತು. ಉಳಿದವರೆಲ್ಲರೂ ಒಂದು ಬೇರೇ ಜನಾಂಗವಾಯಿತು. ಶ್ರೀ ಸಿದ್ಧರಾಮೇಶ್ವರ ದೇವರು ಲಿಂಗಪೂಜಾ ವಿಚಾರದಲ್ಲಿ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರ ಜಾತಿಗಳನ್ನು ಬೇರೆ ಹೇಳಿ, ವೀರಶೈವವನೂ ಪ್ರತ್ಯೇಕವಾಗಿ ಹೇಳುತ್ತಾರೆ. ಹೇಗೆಂದರೆಃ—

"ಅಗ್ನಿ ಲಿಂಗವ ಬ್ರಾಹ್ಮಣ ಪೂಜಿಸಿದ. ಖಡ್ಗಲಿಂಗವ ಕ್ಷತ್ರಿಯ ಪೂಜಿಸಿದ. ಧನಲಿಂಗವ ವೈಶ್ಯ ಪೂಜಿಸಿದ ಧಾನ್ಯಲಿಂಗವ ಶೂದ್ರ ಪೂಜಿಸಿದ. ಪರ್ವತಲಿಂಗವ ವೀರಶೈವ ಪೂಜಿಸಿದ"

ಸುಪ್ರಸಿದ್ಧರಾದ ಸೋಮನಾರಾಧ್ಯರು ಸಂಸ್ಕೃತದಲ್ಲಿ ಬರೆದಿರುವ ತಮ್ಮ ಸೋಮನಾಥಭಾಷ್ಯ ಅಥವಾ ಬಸವರಾಜೀಯವೆಂಬ ಗ್ರಂಥದಲ್ಲಿ ಜನವರ್ಗವನ್ನು ವಿವರಣೆ ಮಾಡುವಾಗ್ಯೆ ಮೊದಲು ಬ್ರಾಹ್ಮಣ ಕ್ಷತ್ರಿಯ ವೈಶ್ಯ ಶೂದ್ರ ವರ್ಗದವರನ್ನು ಹೇಳಿ, ಆ ಮೇಲೆ ವೀರಶೈವವನ್ನು ಪ್ರತ್ಯೇಕವಾಗಿ ಹೇಳಿರುತ್ತಾರೆ. ಅದರಲ್ಲಿನ ಭಾಗವನ್ನು ಇಲ್ಲಿ ಉದಾಹರಿಸುವದಕ್ಕೆ ಪ್ರಕೃತದಲ್ಲಿ ಆ ಗ್ರಂಥವು ನನ್ನಲ್ಲಿಲ್ಲವಾದದರಿಂದ ಅವಕಾಶವಾಗಲಿಲ್ಲ. ಕುಮಾರವ್ಯಾಸನ ಭಾರತದ ದ್ರೌಪದೀ ಸ್ವಯಂವರ ಪ್ರಕರಣದಲ್ಲಿ ಸಭೆಗೆ ಯಾರು ಯಾರು ಬಂದಿದ್ದರೆಂಬುದನ್ನು ಹೇಳುವಲ್ಲಿ ಬುದ್ಧರು ಲಿಂಗಿಗಳು ಮೊದಲಾದವರು ಬಂದಿದ್ದರೆಂದು ಬರೆಯಲ್ಪಟ್ಟಿದೆ. ಇದರಿಂದ ವೀರಶೈವವು ಒಂದು ಸ್ವತಂತ್ರ ಸಮಾಜವಾಗಿ ಪರಿಗಣಿಸಲ್ಪಟ್ಟಂತಾಯಿತು. ಆ ಗ್ರಂಥಭಾಗವನ್ನು ಇಲ್ಲಿ ಉದಾಹರಿಸುವದಕ್ಕೆ ಸದ್ಯಕ್ಕೆ ಹತ್ತಿರ ಪುಸ್ತಕವಿಲ್ಲದ್ದರಿಂದ ಅವಕಾಶವಾಗಲಿಲ್ಲ.

ಇದೂ ಅಲ್ಲದೆ ಈಗ್ಯೆ ಐವತ್ತು ವರ್ಷಗಳ ಕೆಳಗೆ ಇಂಗ್ಲಿಷು ಪಾಠಶಾಲೆಗಳಲ್ಲಿ ವಿದ್ಯಾರ್ಥಿಗಳೊಳಗೆ ಯಾರು ಯಾರು ಯಾವ ಜಾತಿಯವರೆಂದು ಗಣನೆ ಮಾಡಬೇಕಾಗಿ ಬಂದ ಸಂದರ್ಭಗಳಲ್ಲಿ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರರನ್ನು ವಿಂಗಡಿಸಿ ಆ ಮೇಲೆ ವೀರಶೈವ ವಿದ್ಯಾರ್ಥಿಗಳೆಷ್ಟೆಂಬುದನ್ನು ಕೆಲಕಾಲ ಗಣನೆಮಾಡುತ್ತಿದ್ದರು.

ಈ ಪ್ರಕಾರವಾಗಿ ಮತಕರ್ತನ ತತ್ವಗಳಿಂದಲೂ, ಮತೀಯರ ಆಚರಣೆಯಿಂದಲೂ ವೀರಶೈವವು ಹಿಂದೂಮತದಲ್ಲಿ ಬ್ರಾಹ್ಮಣರಿಂದ ಭಿನ್ನವಾದ ಒಂದು ಸ್ವತಂತ್ರ ಮತವಾಗಿ ಸ್ವಾಭಾವಿಕವಾಗಿ ಕಾಣುತ್ತದೆ.

ಇದನ್ನೆಲ್ಲಾ ಪರಿಗಣನೆ ಮಾಡಿ ವೀರಶೈವಕ್ಕೆ ಒಂದು ಸ್ವಾತಂತ್ರ್ಯ ಸ್ಥಾನವನ್ನು ಪಡೆಯುವದಕ್ಕೆ ವೀರಶೈವಾಭಿಮಾನಿಗಳು ಬಹು ಬಗೆಯಿಂದ ಯತ್ನಮಾಡಬೇಕು. ಅಂತರ್ಭೇದಗಳಿಗೂ ಸಂಖ್ಯಾನಷ್ಟಕ್ಕೂ ಅವಕಾಶಕೊಡಬಾರದು.

॥ರಗಳೆ॥

ವೀರಶೈವ ವಿಳೆಯೊಳುನ್ನತಿಯೊಳೆ ಮೆರೆಯಲೀ ॥
ವೀರಶೈವದಾಸುಯಶವು ಸತತ ಬೆಳಗಲೀ ॥೧॥
ವೀರಶೈವವೆನಲು ಮೂರು ಲೋಕವರಿಯಲೀ ॥
ವೀರಶೈವವೆನಲು ನರರು ತಲೆಯ ತೂಗಲೀ ॥೨॥

ವೀರಸುಶೈವಂ ಸ್ವತಂತ್ರತೆಯನೆ ಪಡೆಯಲೀ ॥
ವೀರತನದಿ ಮಹತ್ಕಾರ್ಯಗಳನೆ ಮಾಡಲೀ ॥೩॥
ವೀರಶೈವದೊಳಗೆ ಮಹಾಶರಣ ಜಾಲವೂ ॥
ಧಾರಿಣೀಶವರ್ಗ ಸುಘನ ಪಂಡಿತತತಿಯೂ ॥೪॥
ಬೇರೆ ಬೇರೆ ಕಾಯಕಗಳ ಮಾಳ್ಪ ಮಾನ್ಯರೂ ॥
ಸಾರಶೀಲದಿಂದೆ ನಡೆವ ಸಮಯನಿಷ್ಠರೂ ॥೫॥
ಮೂರು ಲೋಕ ಬೆಳಕಿನಿಂದ ಹೊಳೆವ ತೆರದೊಳೂ ॥
ಮೀರಿವಿಪುಲದರ್ಪದಿಂದೆ ಸತತ ಮೆರೆವರೂ ॥೬॥
ವೀರಶೈವರೇ ಸುಮುದದಿ ನೀವು ಬಿಡದಲೇ ॥
ವೀರಶೈವ ವೃದ್ಧಿಕಾರ್ಯಗಳನೆ ಮಾಡಿರೀ ॥೭॥

# ಹಂಸ

ಹಂಸರಾಜ! ಗಂಭೀರ ಜಾನ್ಹವಿಯ
ಮೌನತೆಯನೆ ತಳದೆ ಭುವನದೊಳು
ಮಿಗಿಲಾಗಿ, ನಾರಿಯರ ಗಮನದೊಳು
ಅವತರಿಸಿದಾ ನಿನ್ನ ನಡೆಯ ಬಗೆಯ.
ಅಮಲಮೂರುತಿಯೆಂದು ಮಂಜುದೇಹ—
ವನಾಂತೆ. ವಿರಹಿಣಿಯ ಪ್ರಣಯ—
ದೂತನು ಎನಿಸಿ, ನೈಷಧನ ಬಳಿಯ
ಸಾರ್ದು, ಸೃಷ್ಟಿಸಿದೆ ನಿನ್ನ ಸ್ನೇಹ.

ವಿಶ್ವಕರ್ತೃವಿನ ಅತುಲ ಘೋಷವನೆ
ಅವಧರಿಸಿ, ನಿತ್ಯ-ಋಷಿ-ಮಂದಿರದಿ
ಸ್ಥಾಪಿಸಲು ನಟನಾಗಿ ಬರುವೆಯ;
ಭಾರತಿಯ ಕಟುದಿಟವು ನಾಶವನೆ
ಪೊಂದಿಹುದು. ಓ ದ್ವಿಜನೆ. ಕಡುಜವದಿ
ಬಾರಯ್ಯ ಭಾರತಿಯ ಬಳಿಯ.

ಯಶೋದ ಕಿಶೋರ.

# ಉಪನಿಷತ್ತುಗಳು

(ಲೇಖಕ:— ರಾ|| ರಾ|| ಮಡಿವಾಳಪ್ಪಾ ಸಾಸನೂರ.)

೧

"ಉಪನಿಷತ್,, ಶಬ್ದದ ಅರ್ಥದ ಸಂಬಂಧವಾಗಿ ಪಂಡಿತರಲ್ಲಿ ಮತಭೇದವದೆ. ಉಪ-ನಿ-ಸದ್ ಧಾತುವಿನಿಂದ ಉಪನಿಷತ್ ಶಬ್ದವು ಉಂಟಾಗಿದೆ. ಉಪ— ಸಮೀಪದಲ್ಲಿ, ಸದ್- ಉಪವೇಶನ ಮಾಡುವದು. ಅತ ಏವ "ಉಪನಿಷತ್" ಶಬ್ದದ ನಿರುಕ್ತ ವಿಶೇಷವು ವಿನೀತ ಭಾವ ದಿಂದ ಶಿಷ್ಯನು ಗುರುವಿನ ಸಮೀಪದಲ್ಲಿ ವಾಸ ಮಾಡುವದು ಎಂದು ಇರುವದು.

ಯಾವ ವಿದ್ಯಾಲಾಭಕ್ಕೋಸುಗ ಶಿಷ್ಯನು ಆಚಾರ್ಯನ ಸಮೀಪಸ್ಥ ನಾಗುತ್ತಿದ್ದನೋ ಅದೇ ವಿದ್ಯೆಯು ಮುಂದೆ "ಉಪನಿಷತ್" ಶಬ್ದದಿಂದ ಪ್ರತಿ ಪಾದಿತವಾಗಹತ್ತಿತು. ಪಂಡಿತ ಮ್ಯಾಕ್ಸಮುಲರು ಉಪನಿಷತ್ ಶಬ್ದಕ್ಕೆ ಇದೇ ಅರ್ಥವನ್ನು ಗ್ರಹಣಮಾಡಿರುತ್ತಾರೆ.

ಉಪಸನ್ನ ಶಿಷ್ಯನಿಗೆ ಗುರುವು ಮಾಡುತ್ತಿದ್ದ ಉಪದೇಶವು. ಪ್ರಾಚೀನಕಾಲದಲ್ಲಿ ಗೋಪನೀಯ ರಹಸ್ಯವೆಂದು ಪ್ರಯತ್ನಪೂರ್ವಕ ವಾಗಿ ರಕ್ಷಿತವಾಗುತ್ತಿತ್ತು. ಬರಬರುತ್ತ ಈ ರಹಸ್ಯೋಪದೇಶ (ಗುಹ್ಯಾ ಆದೇಶಾಃ)ವು 'ಉಪನಿಷತ್, ಎಂಬ ಹೆಸರಿನಿಂದ ಕರೆಯಲ್ಪಡಹತ್ತಿತು- ಪಾಲ ಡ್ಯೂಸನನು, ಇದೇ ಅರ್ಥದಲ್ಲಿ ಉಪನಿಷತ್ ಶಬ್ದವನ್ನು ಗ್ರಹ ಣಮಾಡಿರುವನು.

ಶಂಕರಾಚಾರ್ಯರು 'ಸದ್' ಧಾತುವು ವಿನಾಶ, ಗತಿ ಮತ್ತು ಅವ ಸಾದನ ಎಂಬ ಅರ್ಥದಲ್ಲಿ ಪ್ರಯುಕ್ತವಾಗಿರುತ್ತದೆಂದು ವ್ಯಾಖ್ಯೆಯನ್ನು ಮಾಡಿ, 'ಉಪನಿಷತ್' ಶಬ್ದಕ್ಕೆ ಬೇರೆ ಅರ್ಥವನ್ನು ಮಾಡಿದ್ದಾರೆ. ಯಾವ ವಿದ್ಯೆಯು ತನ್ನ ಸೇವಕರ ಜನ್ಮ-ಮರಣಾದಿ ದುಃಖವನ್ನು ವಿನಷ್ಟ ಮಾಡುತ್ತದೆಯೋ, ಸಂಸಾರದ ಕಾರಣೀಭೂತವಾದ ಅವಿದ್ಯೆ ಯನ್ನು ಅವಸಾದನ ಮಾಡಿ ಬ್ರಹ್ಮಸಂಪಾದನೆಯನ್ನು ಮಾಡುತ್ತದೆಯೋ ಅದೇ 'ಉಪನಿಷತ್ತು' *

---

* ೧. ಕಠ—ತೈತ್ತಿರಿಯ—ಬೃಹದಾರಣ್ಯಕ ಮಾಂಡುಕ್ಯೋಪನಿಷತ್ತುಗಳ ಭಾಷ್ಯೋಪಕ್ರಮಣಿಕೆ.

ಉಪನಿಷತ್ತು, ಬ್ರಹ್ಮ ಅಥವಾ ಪರಮಾತ್ಮನ ಸಂಬಂಧವಾದ ವಿಷಯುವನ್ನು ಪ್ರತಿಪಾದಿಸುವದರಿಂದ ಇದಕ್ಕೆ 'ಬ್ರಹ್ಮವಿದ್ಯೆ, § ಯೆಂದು ಮತ್ತೊಂದು ಹೆಸರು.

ವೇದದಲ್ಲಿ, ಸಂಹಿತಾ-ಬ್ರಾಹ್ಮಣ-ಆರಣ್ಯಕ-ಉಪನಿಷತ್ತುಗಳೆಂದು ನಾಲ್ಕು ಭಾಗಗಳುಂಟು. ಉಪನಿಷತ್ತು ವೇದದ ಅಂತ ಅಥವಾ ಶೇಷ ಭಾಗವು. ಇದಕ್ಕೋಸುಗ ಉಪನಿಷತ್ತಿಗೆ ವೇದಾಂತವೆನ್ನುವರು. ಉಪನಿಷತ್ತಿನಲ್ಲಿ ವೇದದ ಶ್ರೇಷ್ಠ-ಸತ್ಯವು ನಿಹಿತವಾಗಿರುವದರಿಂದಲೂ ಇದಕ್ಕೆ ವೇದಾಂತವೆನ್ನುವರು.

೨

ಮುಕ್ತಿಕೋಪನಿಷತ್ತಿನಲ್ಲಿ ೧೦೮ ಉಪನಿಷತ್ತುಗಳ ಹೆಸರುಗಳು ಕಂಡುಬರುವವು. ಅವುಗಳಲ್ಲಿ ಈಶ, ಕೇನ, ಕಠ, ಪ್ರಶ್ನ, ಮುಂಡಕ, ಮಾಂಡೂಕ್ಯ, ಐತರೇಯ, ತೈತ್ತಿರೀಯ, ಛಾಂದೋಗ್ಯ, ಬೃಹದಾರಣ್ಯಕ ಶ್ವೇತಾಶ್ವತರ, ಕೌಷಿತಕೀ ಎಂಬ ಹನ್ನೆರಡು ಉಪನಿಷತ್ತುಗಳ ಪ್ರಾಚೀನತ್ವ ಮತ್ತು ಪ್ರಾಮಾಣಿಕತ್ವದ ವಿಷಯುಗಳಲ್ಲಿ ಎಲ್ಲರೂ ಏಕಮತವುಳ್ಳವರಾಗಿರುವರು. ಮೊದಲಿನ ಹತ್ತು ಉಪನಿಷತ್ತುಗಳ ಮೇಲೆ ಶಂಕರಾಚಾರ್ಯರ ಭಾಷ್ಯವದೆ.

ಕುರುಕ್ಷೇತ್ರದಿಂದ ವಾರಣಾಸಿಯು ವರೆಗಿನ ವಿಸ್ತೃತ ಪ್ರದೇಶದಲ್ಲಿ ಉಪನಿಷತ್ತಿನ ರಹಸ್ಯಗಳು ವಿಚಾರ ಮಾಡಲ್ಪಟ್ಟವು. ಪ್ರಾಚೀನತಮ ಉಪನಿಷತ್ತುಗಳು ಕ್ರಿ. ಪೂ. ೧೦೦೦—೩೦೦ ವರ್ಷಗಳಲ್ಲಿ ರಚಿತವಾಗಿರಬಹುದು. ಬುದ್ಧದೇವನು ಉಪನಿಷತ್ತುಗಳ ತತ್ವಗಳನ್ನು ಬಲ್ಲವನಾಗಿದ್ದನು. ಪ್ರಾಚೀನ ಉಪನಿಷತ್ತುಗಳಲ್ಲಿ ಕೆಲವು ಬೌದ್ಧ ಧರ್ಮದ ಅಭ್ಯುದಯದ ತರುವಾಯ ಕ್ರಿ, ಶ. ಪೂ. ೪೦೦—೩೦೦ ವರ್ಷಗಳಲ್ಲಿ ರಚಿತವಾಗಿರುತ್ತವೆ. ಎಲ್ಲಕ್ಕೂ ಮೊದಲಿನ ಉಪನಿಷತ್ತುಗಳು ಗದ್ಯದಲ್ಲಿ ರಚಿತವಾಗಿರುತ್ತವೆ. ಮತ್ತು ಐತರೇಯ, ಕೌಷೀತಕಿ, ತೈತ್ತರೀಯ, ಛಾಂದೋಗ್ಯ, ಬೃಹದಾರಣ್ಯಕ, ಕೇನೋಪನಿಷತ್ತುಗಳ ಗದ್ಯಾಂಶವು ಪೂರ್ವೋಕ್ತವಾದ ಹನ್ನೆರಡು ಉಪನಿಷತ್ತುಗಳಲ್ಲಿ ಪ್ರಾಚೀನತಮವಾಗಿದೆ.

---

§ ೨. ಈ ವಿದ್ಯೆಯು ಎಲ್ಲಕ್ಕೂ ಮೊದಲು ಬ್ರಹ್ಮನಿಂದ ಹೇಳಲ್ಪಟ್ಟಿರುತ್ತದೆಂದು ಬ್ರಹ್ಮವಿದ್ಯಾ,ಪದವಾಚ್ಯವಾಗಿದೆ. [ಮುಂಡಕ ಭಾಷ್ಯ]

ಉಪನಿಷತ್ ಸಾಹಿತ್ಯ ರಚನೆಯು ಹದಿನಾಲ್ಕು ಹದಿನೈದನೆಯ ಶತಮಾನದ ವರೆಗೆ ನಡೆಯಿತು. ಉಪನಿಷತ್ ಸಮ್ಮತವು ಅಲ್ಲದುದು ಪ್ರಾಮಾಣಿಕತ್ವವಲ್ಲವು ಎಂದು ಸಾಂಪ್ರದಾಯಿಕ ಮತವಾದದ ಪ್ರವರ್ತಕರು ತಮ್ಮ ಮತದ ಪ್ರಾಮಾಣಿಕತೆಯ ಪ್ರತಿಷ್ಠೆಗೋಸುಗ ತಾವೇ ಗ್ರಂಥ ರಚನೆಯನ್ನು ಮಾಡಿ ಉಪನಿಷತ್ ಎಂಬ ಹೆಸರಿನಿಂದ ಕರೆಯ ಹತ್ತಿದರು. ಈ ಎಲ್ಲವುಗಳಿಗೆ ಸಾಂಪ್ರದಾಯಿಕ ಉಪನಿಷತ್ತುಗಳೆಂದು ಹೆಸರು ಕೊಡಲು ಶಕ್ಯವು. ಇವುಗಳ ಪ್ರಮಾಣಿಕತೆಯನ್ನು ಯಾರೂ ಸ್ವೀಕಾರ ಮಾಡುವದಿಲ್ಲ.

ಪ್ರಾಚ್ಯ ವಿದ್ಯಾವಿಶಾರದನಾದ ವಿಂಟರನಿಟ್ಝು ಎಂಬವರು ಉಪನಿಷತ್ ಸಾಹಿತ್ಯವನ್ನು ರಚನಾಕಾಲಾನುಸಾರವಾಗಿ ನಾಲ್ಕು ಭಾಗಗಳಲ್ಲಿ ವಿಭಾಗಿಸಿರುತ್ತಾನೆ:—

ಪ್ರಥಮ ಯುಗದಲ್ಲಿ ಬೃಹದಾರಣ್ಯಕ, ಛಾಂದೋಗ್ಯ ತೈತ್ತಿರೀಯ ಐತರೇಯ, ಕೌಷೀತಕಿ, ಕೇನ. ದ್ವಿತೀಯ ಯುಗದಲ್ಲಿ ಕಠ, ಈಶ, ಶ್ವೇತಾಶ್ವತರ ಮುಂಡಕ ಮಹಾನಾರಾಯಣ.

ತೃತೀಯ ಯುಗದಲ್ಲಿ ಪ್ರಶ್ನ ಮೈತ್ರಾಯಣೀ ಮಾಂಡೂಕ್ಯ. ಚತುರ್ಥಯುಗದಲ್ಲಿ ಉಳಿದ ಉಪನಿಷತ್ತುಗಳು ರಚಿತವಾಗಿರುತ್ತವೆ.

ಪ್ರಚಲಿತ ಉಪನಿಷತ್ತುಗಳಲ್ಲಿ ಐತರೇಯ ಕೌಷೀತಕಿಗಳು ಋಗ್ವೇದದಲ್ಲಿ ಛಾಂದೋಗ್ಯ ಕೇನಗಳು ಸಾಮವೇದದಲ್ಲಿ ತೈತ್ತಿರೀಯ ಕಠ ಶ್ವೇತಾಶ್ವತರಗಳು ಕೃಷ್ಣಯಜುರ್ವೇದದಲ್ಲಿ ಈಶ ಬೃಹದಾರಣ್ಯಕಗಳು ಶುಕ್ಲ ಯಜುರ್ವೇದದಲ್ಲಿ ಮುಂಡಕ ಪ್ರಶ್ನ ಮಾಂಡೂಕ್ಯಗಳು ಅಥರ್ವವೇದದಲ್ಲಿ ಅಂತರ್ಭೂಕ್ತವಾಗಿವೆ.

೩

ಉಪನಿಷತ್ತಿನಲ್ಲಿ ನಾವು ಆರ್ಯರ ಪ್ರಾಚೀನತಮ ವಿಚಾರ ಪ್ರವಾಹದಲ್ಲಿ ಬೆರೆಯುವೆವು. ಸಂಹಿತಾ ಬ್ರಾಹ್ಮಣ ಆರಣ್ಯಕಗಳಲ್ಲಿ ಸ್ತವ-ಸ್ತುತಿ ಮತ್ತು ಧರ್ಮಾನುಷ್ಠಾನುಗತ ವಿಧಿನಿಷೇಧಗಳು ಯಥೇಷ್ಟವಾಗಿದ್ದರೂ ಅವುಗಳಲ್ಲಿ ದಾರ್ಶನಿಕತೆಯ ಆವ ಪ್ರಮಾಣವೂ ದೊರೆಯುವದಿಲ್ಲ. ಮತ್ತು ಉಪನಿಷತ್ತಿಗೆ ಅತ್ಯುತ್ತಮವಾದ ದಾರ್ಶನಿಕ ಗ್ರಂಥವೆಂದು ಗ್ರಹಿಸಿದರೆ ತಪ್ಪುಮಾಡಿದಂತಾಗುವದು. ಯಾಕಂದರೆ ಶೃಂಖಲಾ ಮತ್ತು ಪ್ರಣಾಲೀಬದ್ಧ ಭಾವದಿಂದ ವಸ್ತುವಿನ್ಯಾಸವು ದರ್ಶನದ ಪ್ರಧಾನ ಲಕ್ಷ

ಣವು. ಆದರೆ ಉಪನಿಷತ್ತಿನಲ್ಲಿ ಇದ[redacted]ಡುಬರುವದಿಲ್ಲ. ಗಭೀರ ಅಭಿನಿವೇಶ ಸಹಕಾರದೊಡನೆ ಉಪನಿಷತ್ತುಗಳನ್ನು ಅಧ್ಯಯನ ಮಾಡಲು ಇದು ತಿಳಿಯುವದು. ದರ್ಶನದ ವಿಚಾರ ಪ್ರಣಾಲಿಯನ್ನವಲಂಬಿಸಿ, ಸತ್ಯ ನಿರ್ಣಯವನ್ನು ಮಾಡುವದಕ್ಕಿಂತ ಶಾಂತಿ ಮತ್ತು ಮುಕ್ತಿಲಾಭದ ಐಕಾಂತಿಕ ಪ್ರಯಾಸದಿಂದಲೇ ಉಪನಿಷತ್ತಿನ ಉತ್ಪತ್ತಿಯಾಯಿತು. ಉಪನಿಷತ್ತಿಗೆ ಪೂರ್ಣ ದರ್ಶನವೆನ್ನದೆ ಅರ್ಧಕಾವ್ಯ ಅರ್ಧದರ್ಶನವೆಂದರೆ ಅಧಿಕತರ ಸಮೀಚೀನವಾಗುವದು

ಭಾರತೀಯ ಎಲ್ಲ ದರ್ಶನಗಳ ಮತ್ತು ಧರ್ಮಗಳ ಮೂಲಬೀಜಗಳು ಉಪನಿಷತ್ತಿನಲ್ಲಿ ನಿಹಿತವಾಗಿವೆ. ಪರಸ್ಪರ ವಿರುದ್ಧ ಮತವಾದಿಗಳಾದ ಧರ್ಮಾಚಾರ್ಯರೂ ದಾರ್ಶನಿಕರೂ ಏಕವಾಕ್ಯದಿಂದ ಉಪನಿಷತ್ತಿನ ಪ್ರಾಮಾಣಿಕತೆಯನ್ನು ಒಪ್ಪಿಕೊಳ್ಳುವರು. ತಮ್ಮಿಂದ ಪ್ರಚಾರಿತವಾದ ಮತವಾದದ ಪ್ರಮಾಣವು ಉಪನಿಷತ್ತಿನಲ್ಲಿ ವಿದ್ಯಮಾನವಾಗಿರುತ್ತದೆಂದು ಪ್ರತಿಯೊಬ್ಬರು ಅತ್ಯಂತ ಆಗ್ರಹದೊಡನೆ ಪ್ರತಿಪನ್ನ ಮಾಡಲು ಪ್ರಯತ್ನಮಾಡುತ್ತಾರೆ. ಪಂಡಿತ ಮ್ಯಾಕ್ಸಮುಲರನು ಒಂದು ಸುಂದರ ಉಪಮೆಯ ಸಹಾಯದಿಂದ ಉಪನಿಷತ್ ಸಂಬಂಧೀಯ ಈ ತಥ್ಯವನ್ನು ಪರಿಸ್ಫುಟ ಮಾಡಿರುತ್ತಾನೆ. ಗಂಗಾ ಸಿಂಧು ಬ್ರಹ್ಮಪುತ್ರ ಪ್ರಭೃತಿಗಳು ವಿಭಿನ್ನ ಪಥಗಳಲ್ಲಿ ಪ್ರವಾಹಿತವಾಗಿದ್ದರೂ ಅವೆಲ್ಲವುಗಳ ಉತ್ಪತ್ತಿಸ್ಥಲವು ಒಂದೇ ಹಿಮಾಚಲವಿದ್ದಂತೆ ಭಾರತದ ದಾರ್ಶನಿಕ ವಿಚಾರ ಪ್ರವಾಹಗಳು ಬೇರೆ ಬೇರೆ ಮಾರ್ಗಗಳಿಂದ ಹರಿದರೂ ಅವೆಲ್ಲವುಗಳ ಉತ್ಪತ್ತಿಯು ಉಪನಿಷತ್ತಿನಿಂದಲೇ ಆಗಿರುತ್ತದೆ. ಬುದ್ಧದೇವನಿಂದ ಪ್ರಚಾರಿತವಾದ ಧರ್ಮದ ಮೇಲೆಯೂ ಉಪನಿಷತ್ತಿನ ಪ್ರಭಾವವು ಪರಿಸ್ಫುಟವಾಗಿದೆ. ಉಚ್ಚಶ್ರೇಣಿಯಲ್ಲಿ ಸೀಮಾಬದ್ಧವಾಗಿದ್ದ ಉಪನಿಷದ್ಧರ್ಮವನ್ನು ಬುದ್ಧದೇವನು ಜನಸಾಮಾನ್ಯರಲ್ಲಿ ಪ್ರಚಾರಮಾಡಿದನು. ಉಪನಿಷತ್ತಿನ ಯಥಾರ್ಥ ಮರ್ಮವು ಅವಗತವಾಗುವದು ಈಗ ನಮಗೆ ಅತ್ಯಂತ ದುರೂಹ ವ್ಯಾಪಾರವಾಗಿದೆ. ನಾವು ಪ್ರಾಚೀನ ಭಾಷ್ಯಕಾರರ ವ್ಯಾಖ್ಯೆಗಳ ಸಹಾಯದಿಂದ ಉಪನಿಷತ್ತಿನ ತಾತ್ಪರ್ಯವನ್ನು ತಿಳಿಯುತ್ತೇವೆ. ಈ ಭಾಷ್ಯಕಾರರು ಒಂದೊಂದು ದಾರ್ಶನಿಕ ಮತವಾದದ ಪೋಷಕತಾಕಲ್ಪದಿಂದ ಉಪನಿಷತ್ತಿನ ವ್ಯಾಖ್ಯೆಯನ್ನು ಮಾಡಿದ್ದಾರೆ ಎಂಬದನ್ನು ಮನದಲ್ಲಿ ಇಡಬೇಕಾಗುವದು. ಅದ್ವೈತವಾದಿಯಾದ ಶಂಕ

ರಾಚಾರ್ಯರು ಉಪನಿಷತ್ತಿನೊಳಗಿಂದ ಅದ್ವೈತವಾದದ ತಥ್ಯವನ್ನು ಹೊರಗೆಡವಿದ್ದಾರೆ. ಮತ್ತು ಅವರು ಅದ್ವೈತವಾದಾತ್ಮಕ ವ್ಯಾಖ್ಯೆಯನ್ನೇ ಮಾಡಿದ್ದಾರೆ. ದ್ವೈತವಾದಿಗಳಾದ ಮಧ್ವಾಚಾರ್ಯರು ಉಪನಿಷತ್ತುಗಳಿಗೆ ದ್ವೈತವಾದಾತ್ಮಕ ವ್ಯಾಖ್ಯೆಯನ್ನು ಮಾಡಿದ್ದಾರೆ. ಮತ್ತು ವಿಶಿಷ್ಟಾದ್ವೈತವಾದದ ಆಚಾರ್ಯರು ಉಪನಿಷತ್ತಿಗೆ ವಿಶಿಷ್ಟಾದ್ವೈತವಾದದ ಪರಿಪೋಷಕರೂಪದಿಂದ ನೋಡಿದ್ದಾರೆ ±

ತಮ್ಮ ತಮ್ಮ ಮತವಾದದ ಪ್ರಮಾಣಸಂಗ್ರಹಾರ್ಥವಾಗಿ ಇವರೆಲ್ಲರು ಉಪನಿಷತ್ತಿನ ದ್ವಾರಸ್ಥರಾಗಿದ್ದಾರೆ. ಇದರಿಂದ ಪ್ರಾಚೀನ ಸಂಪ್ರದಾಯ ಪ್ರವರ್ತಕ ಆಚಾರ್ಯರು ಉಪನಿಷತ್ತಿನ ಮೇಲೆ ಪ್ರಗಾಢ ಶ್ರದ್ಧೆಯುಳ್ಳವರಾಗಿದ್ದರೆಂದು ಇದರಿಂದ ಸುಸ್ಪಷ್ಟ ಪರಿಚಯವು ಆಗುವದು. ಉಪನಿಷತ್ ಪ್ರಮಾಣಬದ್ಧವಾಗದ ವಿಚಾರವನ್ನು ಯಾರೂ ಮನ್ನಿಸುವದಿಲ್ಲವೆಂಬದನ್ನು ಅವರು ಚನ್ನಾಗಿ ಅರಿತಿದ್ದರು. ಇದರಿಂದ ಹಿಂದೂ ಸಮಾಜದ ಮೇಲೆ ಉಪನಿಷತ್ತಿನ ಪ್ರಭಾವವು ಎಷ್ಟಿರುವದೆಂಬುದು ಅನುಮಿತವಾಗುವದು. ಉಪನಿಷತ್ತಿನ ವಿಚಾರಮಾಡಿದ ಪಾಶ್ಚಾತ್ಯ ಪಂಡಿತರು ಸಹ ಉಕ್ತ ಸಾಂಪ್ರದಾಯಿಕ ವ್ಯಾಖ್ಯೆಗಳಲ್ಲಿ ಒಂದಿಲ್ಲೊಂದರ ಅನುವರ್ತನೆಯನ್ನು ಮಾಡಿದ್ದಾರೆ. ಆದರೆ ಉಪನಿಷತ್ತಿನ ಸತ್ಯವು ಆವ ವಿಶೇಷ ಸಂಪ್ರದಾಯದಿಂದ ಸೀಮಾಬದ್ಧವಾಗದಷ್ಟು ಉದಾರವೂ ಸರಳವೂ ಆಗಿರುವದು. ಸಕಲ ಸಂಪ್ರದಾಯಗಳಿಗೂ ಇವುಗಳೊಳಗಿಂದ ತಮ್ಮ ಮತವಾದದ ಸಮರ್ಥನೆಯು ದೊರೆಯಲು ಶಕ್ಯವಾಗಿರುವದು. ನಾವು ಈಗ ಉಪನಿಷತ್ ಪ್ರಚಾರಿತವಾದ ಆ ಮಹಾ ಉದಾರವೂ ವಿಶ್ವಜನೀನವೂ ಆದ ಸತ್ಯದಲ್ಲಿ ಶಿಕ್ಷಿತರಾಗಬೇಕು. ಎಲ್ಲ ಬಗೆಯ ಸಾಂಪ್ರದಾಯಿಕತೆಯ ಅಂಧ ಸಂಕೀರ್ಣತೆಯನ್ನು ಬಿಟ್ಟುಬಿಡಬೇಕು.

೪

ಋಷಿಗಳ ಮತದಲ್ಲಿ ಭಗವಂತನೇ ಸಮಸ್ತ ವಿದ್ಯೆಗಳ ಪ್ರವರ್ತಕನು. ಆವನಿಂದಲೇ ಪುರಾಣೀ ಪ್ರಜ್ಞಾ ಪ್ರಸೂತವಾಗಿರುತ್ತದೆ. ಭಗವಂ

---

± ವಿಶಿಷ್ಟಾದ್ವೈತ ಸಂಪ್ರದಾಯದ ಮುಖ್ಯ ಆಚಾರ್ಯರಾದ ರಾಮಾನುಜರು ಉಪನಿಷತ್ತಿಗೆ ಭಾಷ್ಯೆಯನ್ನು ರಚಿಸಿಲ್ಲ. ಆದರೆ ಅವರ ಶಿಷ್ಯ ಪ್ರಶಿಷ್ಯರು ಕೆಲವು ಉಪನಿಷತ್ತುಗಳಿಗೆ ಭಾಷ್ಯೆ ಅಥವಾ ಟೀಕೆಯನ್ನು ರಚಿಸಿರುತ್ತಾರೆ. ಈ ಎಲ್ಲ ಟೀಕಾಕಾರರಲ್ಲಿ ಕೂರನಾರಾಯಣ ಮತ್ತು ರಂಗರಾಮಾನುಜರ ಹೆಸರುಗಳು ಉಲ್ಲೇಖಯೋಗ್ಯವು.

ತನು ಮೊದಲು ಬ್ರಹ್ಮನನ್ನು ಹುಟ್ಟಿಸಿ, ಅವನಿಗೆ ವೇದಗಳನ್ನು ಕೊಟ್ಟನು. ಬ್ರಹ್ಮನು ಸರ್ವ ವಿದ್ಯೆಗಳ ಆಶ್ರಯವಾದ ಈ ಬ್ರಹ್ಮವಿದ್ಯೆಯನ್ನು ತನ್ನ ಜ್ಯೇಷ್ಠಪುತ್ರನಾದ ಅಥರ್ವನಿಗೆ ಕೊಟ್ಟನು. ಅಥರ್ವನು ಇದನ್ನು ಅಂಗಿರನಿಗೆ ಕೊಟ್ಟನು. ಅಂಗಿರನು ಭರದ್ವಾಜಪುತ್ರ, ಸತ್ಯಬಾಹುವಿಗೆ ಮತ್ತು ಸತ್ಯಬಾಹುವು ಅಂಗಿರನಿಗೆ ಕೊಟ್ಟನು. § ಈ ರೀತಿಯಲ್ಲಿ ಶಿಷ್ಯ-ಪ್ರಶಿಷ್ಯ ಕ್ರಮದಿಂದ ಬ್ರಹ್ಮವಿದ್ಯೆಯು ಜಗತ್ತಿನಲ್ಲಿ ಪ್ರಚಾರಿತವಾಯಿತು.

ಉಪನಿಷತ್ತುಗಳನ್ನು ವಿಚಾರ ಮಾಡಲು ಈ ಬ್ರಹ್ಮ ವಿದ್ಯೆಯ ಚರ್ಚೆಯು ಕೇವಲ ಬ್ರಾಹ್ಮಣರಲ್ಲಿಯೇ ಸೀಮಾಬದ್ಧವಾಗಿದ್ದಿಲ್ಲವೆಂದು ಕಂಡುಬರುತ್ತದೆ. ಬ್ರಾಹ್ಮಣರಿಗಿಂತ ಕ್ಷತ್ರಿಯ ರಾಜರ್ಷಿಗಳಲ್ಲಿಯೇ ಬ್ರಹ್ಮವಿದ್ಯೆಯ ವ್ಯಾಖ್ಯಾತರು ಹೆಚ್ಚು. ಗಾರ್ಬೆ, ವಿಂಟರನಿಜ್ ಪ್ರಮುಖ ಪಂಡಿತರ ಮತದಲ್ಲಿ—ಔಪನಿಷದಿಕ ಜ್ಞಾನವು ಬ್ರಾಹ್ಮಣರಿಂದಲ್ಲ, ಕ್ಷತ್ರಿಯರಿಂದಲೇ ಪ್ರಕಾಶಿತವಾಯಿತು. ಇದರ ಪ್ರಮಾಣ ಸ್ವರೂಪವಾಗಿ ಗಾರ್ಗ್ಯ ಬಾಲಾಕಿ ಮತ್ತು ಅಜಾತ ಶತ್ರು, * ಶ್ವೇತಕೇತು ಮತ್ತು ಪ್ರವಾಹಣ ಜೈವಲಿವ † ಉಪಾಖ್ಯಾನಗಳ ಉಲ್ಲೇಖ ಮಾಡಿದ್ದಾನೆ. ಆದರೆ ಈ ಎಲ್ಲ ಉಪಖ್ಯಾನಗಳನ್ನು ಸೂಕ್ಷ್ಮ ರೀತಿಯಿಂದ ಪರ್ಯಾಲೋಚನೆ ಮಾಡಲು ಆ ರೀತಿಯ ಅನುಮಾನವು ಸತ್ಯವಲ್ಲವೆಂದು ಕಂಡು ಬರುತ್ತದೆ. ಗಾರ್ಗ್ಯಬಾಲಾಕಿ ಮತ್ತು ಅಜಾತ ಶತ್ರುಗಳ ಉಪಾಖ್ಯಾನಗಳ ಕಥೆಯೇ ತಕ್ಕೊಂಡಿದೆ. ಗರ್ವೋದ್ಧತನಾದ ಬಾಲಾಕಿಯು ಕ್ಷತ್ರಿಯ ರಾಜನಾದ ಅಜಾತ ಶತ್ರುವಿಗೆ ಬ್ರಹ್ಮಸಂಬಂಧದಿಂದ ಉಪದೇಶ ಮಾಡಲು ಹೋಗಿ ಅಸಮರ್ಥನಾಗಿ ಅವನಿಂದ ಉಪದಿಷ್ಟನಾಗಲು ಇಚ್ಛಿಸುತ್ತಾನೆ. ಇದಕ್ಕೆ ಉತ್ತರವಾಗಿ ಅಜಾತ ಶತ್ರುವು ಹೇಳಿದನು—"ಪ್ರತಿಲೋಮಂ ಚೈತದ್ಯದ್ ಬ್ರಾಹ್ಮಣಃ ಕ್ಷತ್ರಿಯ ಮುಪೇಯಾದ್ ಬ್ರಹ್ಮಮೇ ವಕ್ಷ್ಯತೀತಿ,,— 'ನನಗೆ ಬ್ರಹ್ಮೋಪದೇಶ ಪ್ರದಾನ ಮಾಡ ತಕ್ಕದ್ದು ಎಂದು ಅನ್ನುವದು ಬ್ರಾಹ್ಮಣರು ಕ್ಷತ್ರಿಯರ ಹತ್ತರ ಉಪಸ್ಥಿತವಾಗುವದು ಸ್ವಾಭಾವಿಕ ನಿಯಮದ ವಿರುದ್ಧವು. ಇದರಿಂದ ಕ್ಷತ್ರಿಯರಿಗೆ ಬ್ರಾಹ್ಮಣರಿಂದ ಬ್ರಹ್ಮಜ್ಞಾನ ಸಂಪಾದನೆ ಮಾಡುವದು ಸ್ವಾಭಾ

---

§ ಮುಂಡಕ ೧ ೧ ೧ ೨

* ಬೃಹದಾರಣ್ಯಕ ೨ ೧

† ಛಾಂದೋಗ್ಯ ೫ ೩

ವಿಕವೆಂದು ಸಿದ್ಧವಾಗುವದಿಲ್ಲ. ಪ್ರಕೃತ ಪ್ರಸ್ತಾವದಲ್ಲಿ ಉಪನಿಷದಿಕ ಜ್ಞಾನ ಚರ್ಚೆಯು ಕೇವಲ ಬ್ರಾಹ್ಮಣರಲ್ಲಿಯೇ ಸೀಮಾಬದ್ಧನಾಗಿದ್ದಿಲ್ಲ. ಬ್ರಾಹ್ಮಣ, ಕ್ಷತ್ರಿಯ, ನರ, ನಾರೀ, ನಿರ್ವಿಶೇಷದಿಂದ ಎಲ್ಲರೂ ಇದರ ವಿಚಾರ ಮಾಡುತ್ತಿದ್ದರು. ಬ್ರಾಹ್ಮಣರಲ್ಲಿ ಯಾಜ್ಞವಲ್ಕ್ಯ, ಪಿಪ್ಪಲಾದ ಆರುಣಿ ಇವರು ಬ್ರಹ್ಮ ವಿದ್ಯೆಯ ಪ್ರಚಾರಕರು. ಕ್ಷತ್ರಿಯರಲ್ಲಿ ಪ್ರವಾಹಣ ಜೈವಲಿ, ವೈದೇಹ ಜನಕ, ಚಿತ್ರಗಾಗ್ರ್ಯಾಯನಿ, ಅಜಾತ ಶತ್ರು ಸನತ್‌ಕುಮಾರ ಪ್ರಭೃತಿಗಳು ಔಪನಿಷದಿಕ ಜ್ಞಾನದ ವ್ಯಾಖ್ಯಾತರು. ಬ್ರಾಹ್ಮಣರು ಅಕುಂಠಿತ ಚಿತ್ತದಿಂದ ಸಮಿತ್‌ಹಸ್ತದೊಡನೆ ಇವರ ಹತ್ತರ ಹೋಗಿ ಬ್ರಹ್ಮವಿದ್ಯಾ ಸಂಬಂಧದಿಂದ ಉಪದೇಶ ತೆಗೆದುಕೊಂಡಿದ್ದಾರೆ. "ನೀಚಾದಪ್ಯುತ್ತಮಾ ವಿದ್ಯಾ"— ನೀಚನಿಂದಾದರೂ ಉತ್ತಮ ವಿದ್ಯೆಯನ್ನು ಗ್ರಹಣ ಮಾಡತಕ್ಕದ್ದು. ಅವರು ಈ ನೀತಿಯ ಅನುಸರಣವನ್ನು ಮಾಡಲಿಕ್ಕೆ ಸ್ವಲ್ಪಾದರೂ ಎರಡು ಬಗೆಯುತ್ತಿದ್ದಿಲ್ಲ. ಆಗಿನ ಸಮಾಜದ ಈ ಉದಾರತೆಯು ವರ್ತಮಾನದಲ್ಲಿ ಸರ್ವಥಾ ಅನುಕರಣೀಯವಾಗಿರುವದು.

೫

ಉಪನಿಷತ್ತಿನ ನಾಮಾಂತರವು ರಹಸ್ಯ ವಿದ್ಯೆಯೆಂದು ಅದೆ. ವಿಶಿಷ್ಟ ಅಧಿಕಾರಿಯ ಹೊರ್ತು ಅನ್ಯ ಯಾರಿಗೂ ಇದು ಉಪದೇಶಿಸಲ್ಪಡುತ್ತಿದ್ದಿಲ್ಲ. ಮುಕ್ತಾಹಾರದ ಬೆಲೆಯನ್ನು ತಿಳಿದವನು ಅದನ್ನು ಆದರದಿಂದ ತನ್ನ ಕೊರಳಿನಲ್ಲಿ ಹಾಕಿಕೊಳ್ಳುವನು. ಮಂಗನ ಕೊರಳಲ್ಲಿ ಮುಕ್ತಾಹಾರವು ನಿರರ್ಥಕವು. ಬ್ರಹ್ಮವಾದಿಗಳಾದ ಋಷಿಗಳು ಶಿಷ್ಯರ ಬ್ರಹ್ಮವಿದ್ಯಾ ಸಂಪಾದನೆಯ ಉಪಯೋಗಿಗಳಾದ, ವಿವೇಕ, ವೈರಾಗ್ಯ, ಷಟ್ ಸಂಪತ್ತಿ (ಶಮ, ದಮ, ತಿತಿಕ್ಷೆ, ಉಪರತಿ, ಶ್ರದ್ಧೆ, ಸಮಾಧಾನ) ಮತ್ತು ಮುಮುಕ್ಷುತ್ವಗಳ ಪರೀಕ್ಷೆಯನ್ನು ಮಾಡಿ ಅವರಿಗೆ ಬ್ರಹ್ಮವಿದ್ಯೆಯ ಉಪದೇಶವನ್ನು ಮಾಡುತ್ತಿದ್ದರು.

" ಈ ಬ್ರಹ್ಮ ಜ್ಞಾನವನ್ನು ತಂದೆಯು ಹಿರಿಯ ಮಗನಿಗೆ ಅಥವಾ ಉಪಯುಕ್ತ ಶಿಷ್ಯನಿಗೆ ಹೇಳುತ್ತಿದ್ದನೇ ಹೊರತು ಅನ್ಯ ಯಾರಿಗೂ ಹೇಳುತ್ತಿದ್ದಿಲ್ಲ. ಒಂದು ವೇಳೆ ಅವನು ಈ ಸಸಾಗರ ವಿತ್ತ ಪೂರ್ಣ ಪೃಥ್ವಿಯನ್ನು ದಾನ ಮಾಡುವವನು ಆದರೂ ಅಲ್ಲ. ಅದು ಇದಕ್ಕಿಂತಲೂ ಮಹತ್ವದ್ದು ಆಗಿದೆ.

ಛಾಂದೋಗ್ಯ ೩ ೧೧ ೫ — ೬

ಭರದ್ವಾಜಪುತ್ರ ಸುಕೇಶ, ಶಿಬಿಯಪುತ್ರ-ಸತ್ಯಕಾಮ, ಸೌರ್ಯಾಯಣೀಗಾರ್ಗ್ಯ, ಅಶ್ವಲನಪುತ್ರ-ಕೌಶಲ್ಯ, ವಿದರ್ಭನಪುತ್ರ-ಭಾರ್ಗವ, ಕತ್ಯನಪುತ್ರ-ಕಬಂಧ ಇವರು ಪರಬ್ರಹ್ಮ ಸಂಬಂಧದಿಂದ ಉಪದೇಶವನ್ನು ಪಡೆಯುವದಕ್ಕೋಸುಗ ಭಗವಾನ್ ಪಿಪ್ಪಲಾದರ ಹತ್ತರ ಹೋದರು. ಋಷಿಯು ಅವರಿಗೆ ಹೇಳಿದ್ದೇನಂದರೆಃ— ನೀವು ಇಡೀ ಒಂದು ವರ್ಷದವರೆಗೆ ತಪಸ್ಸು ಬ್ರಹ್ಮಚರ್ಯ ಮತ್ತು ಶ್ರದ್ಧೆಗಳಿಂದ ಇರತಕ್ಕದ್ದು. ಅನಂತರ ನಿಮ್ಮ ಇಚ್ಛಾನುಸಾರವಾಗಿ ಪ್ರಶ್ನೆಮಾಡತಕ್ಕದ್ದು. ನಿಮಗೆ ತಿಳಿಯದಿದ್ದುದನ್ನು ಕೇಳತಕ್ಕದ್ದು.

ಪ್ರಶ್ನ ೧ ೨

ಛಾಂದೋಗ್ಯಉಪನಿಷತ್ತಿನಲ್ಲಿ ಹೇಳಿದ್ದೇನಂದರೆ, ದೇವತೆಗಳಲ್ಲಿ ಇಂದ್ರ ಮತ್ತು ಅಸುರರಲ್ಲಿ ವಿರೋಚನರು ಬ್ರಹ್ಮತತ್ವವನ್ನು ತಿಳಿಸುವದಕ್ಕೋಸ್ಕರ ಸಮಿತ್‌ಪಾಣಿಗಳಾಗಿ ಪ್ರಜಾಪತಿಯ ಸಮೀಪಕ್ಕೆ ಹೋದರು. ಇವರು ೩೨ ವರ್ಷ ಬ್ರಹ್ಮಚರ್ಯವನ್ನು ಅವಲಂಬನೆ ಮಾಡಿದ ತರುವಾಯ ಪ್ರಜಾಪತಿಯು ಇವರಿಗೆ ದೇಹಾತ್ಮವಾದವನ್ನು ಉಪದೇಶ ಮಾಡಿದನು. ವಿರೋಚನನೂ ಅದರಲ್ಲಿ ಸಂತುಷ್ಟನಾಗಿ ಹಿಂದಿರುಗಿದನು. ಆದರೆ ಇಂದ್ರನು ಇದರಲ್ಲಿ ಸಂತುಷ್ಟನಾಗದೆ ಪುನಃ ಉಚ್ಚತರ ಉಪದೇಶಕ್ಕೆ ಪ್ರಾರ್ಥನೆ ಮಾಡಿದನು. ಪ್ರಜಾಪತಿಯು ಅವನಿಗೆ ಪುನಃ ೩೨ ವರ್ಷ ಬ್ರಹ್ಮಚರ್ಯವ್ರತವನ್ನು ಪಾಲನೆ ಮಾಡಲಿಕ್ಕೆ ಅಪ್ಪಣೆ ಮಾಡಿದನು. ಈ ರೀತಿಯಾಗಿ ಬ್ರಹ್ಮಚರ್ಯಾನುಷ್ಠಾನದ ತರುವಾಯ ಪ್ರಜಾಪತಿಯು ಅವನಿಗೆ ಪುನಃ ಉಪದೇಶ ಮಾಡಿದನು. ಇಂದ್ರನು ಇವರಲ್ಲಿಯೂ ಸಂತುಷ್ಟನಾಗದೆ ಉಚ್ಚತರ ತತ್ವಕ್ಕೋಸುಗ ಉಪದೇಶವನ್ನು ಬೇಡಿದನು. ಪ್ರಜಾಪತಿಯು ಇಂದ್ರನಿಗೆ ಮತ್ತೂ ೩೨ ವರ್ಷ ಬ್ರಹ್ಮಚರ್ಯವ್ರತವನ್ನು ಪಾಲನೆ ಮಾಡಲಿಕ್ಕೆ ಅಪ್ಪಣೆ ಮಾಡಿದನು. ಆದರೆ ಇದರ ತರುವಾಯುವಲ್ಲಿ ಅವನು ಇಂದ್ರನಿಗೆ ಬ್ರಹ್ಮತತ್ವದ ಉಪದೇಶವನ್ನು ಮಾಡಲಿಲ್ಲ. ಸುದೀರ್ಘ ೧೫೦ ವರ್ಷ ಬ್ರಹ್ಮಚರ್ಯಾನುಷ್ಠಾನದ ತರುವಾಯ ಪ್ರಜಾಪತಿಯು ಇಂದ್ರನಿಗೆ ಬ್ರಹ್ಮವಿದ್ಯೆಯನ್ನು ಪ್ರದಾನ ಮಾಡಿದನು.

೬

ಆಧುನಿಕ ಜಗತ್ತಿನಲ್ಲಿ ಉಪನಿಷತ್ ಪ್ರಚಾರದ ಇತಿಹಾಸವನ್ನು ನಾವು ಸಂಕ್ಷೇಪವಾಗಿ ವಿಚಾರ ಮಾಡೋಣ. ಕ್ರಿ. ಶ. ೧೬೪೦ ರಲ್ಲಿ ಕಾಶ್ಮೀರದೊಳಗೆ ಇರುವಾಗ ಶಾಹಜಾಹಾನನ ಜ್ಯೇಷ್ಠಪುತ್ರನಾದ 'ದಾರಾ' ನು ಉಪನಿಷತ್ ಸಾಹಿತ್ಯದ ಪರಿಚಯವನ್ನು ಮಾಡಿಕೊಂಡನು. ಕಾಶಿಯಿಂದ ಪಂಡಿತರನ್ನು ಕರೆತಂದು ಅವರ ಸಹಾಯದಿಂದ ಅವನು ಸರಾಸರಿ ೫೦ ಉಪನಿಷತ್ತುಗಳನ್ನು ಫಾರ್ಸೀ ಭಾಷೆಯಲ್ಲಿ ಅನುವಾದ ಮಾಡಿದನು. ಕ್ರಿ. ಶ. ೧೬೫೭ ರಲ್ಲಿ ಈ ಅನುವಾದ ಕಾರ್ಯವು ಸಮಾಪ್ತವಾಯಿತು. ಕ್ರಿ. ಶ. ೧೭೭೫ ರಲ್ಲಿ ಪ್ರಸಿದ್ಧ ಪ್ರವಾಸಿಯೂ, ಜೆಂದ ಅವಸ್ತಾದ ಶೋಧಕನೂ ಆದ ಆಂಕ್ವೆಟಿಲ್ ಡುಪೆರಾನನು ಉಕ್ತಅನುವಾದದ ಒಂದು ಖಂಡವನ್ನು ದೊರೆಕಿಸಿ ಕ್ರಿ ಶ. ೧೮೦೧ ರಲ್ಲಿ ಲ್ಯಾಟಿನ ಭಾಷೆಯಲ್ಲಿ ಅದರ ಅನುವಾದವನ್ನು ಪ್ರಸಿದ್ಧಮಾಡಿದನು. ಈ ಅನುವಾದಕ್ಕೆ ಆಂಪ್ನೆಖಾಟ್ ಎಂಬ ಹೆಸರು. ಅನಂತರ ರಾಜಾರಾಮ ಮೋಹನರಾಯ, ಡಾ॥ ರಾಜೇಂದ್ರಲಾಲಮಿತ್ರ ರೋರ ಮತ್ತು ಮ್ಯಾಕ್ಸಮುಲ್ಲರ ಪ್ರಮುಖ ಮನೀಷಿಗಳ ಪ್ರಯತ್ನದಿಂದ ಉಪನಿಷತ್ತು ಆಧುನಿಕ ಜಗತ್ತಿನಲ್ಲಿ ಪ್ರಚಾರಿತವಾಯಿತು. ಸ್ವಾಮೀ ವಿವೇಕಾನಂದ ಮತ್ತು ಅವರ ಸಹಕರ್ಮಿಗಳು ಪ್ರತೀಚ್ಯ ದೇಶಗಳಲ್ಲಿ ಉಪನಿಷತ್ತಿನ ಧರ್ಮಕ್ಕೆ ವಿಶ್ವಜನೀನ ಧರ್ಮ ರೂಪದಿಂದ ಪ್ರಚಾರಮಾಡಿ ಬಂದಿರುತ್ತಾರೆ. ವಿಶ್ವಕವಿಯಾದ ರವೀಂದ್ರನಾಥರೂ ದೇಶದೇಶಗಳಲ್ಲಿ ಉಪನಿಷತ್ತಿನ ಶಾಶ್ವತೀ ವಾಣಿಯನ್ನು ಪ್ರಚಾರಮಾಡಿಯೇ ಈ "ಹಿಂಸೆಯ ಉನ್ಮತ್ತ" ಪೃಥ್ವಿಯಲ್ಲಿ ಶಾಂತಿಯನ್ನುಂಟು ಮಾಡುವ ಪ್ರಯತ್ನವನ್ನು ಮಾಡಿರುತ್ತಾರೆ.

ಹತ್ತೊಂಭತ್ತನೆಯ ಶತಮಾನದ ಪ್ರಥಮ ಭಾಗದಲ್ಲಿ ಉಪನಿಷತ್ತಿನ ಒಂದು ಅಸ್ಪಷ್ಟವಾದ ಅನುವಾದವನ್ನು ಓದಿ ವಿಖ್ಯಾತ ಜರ್ಮನ್ ದಾರ್ಶನಿಕನಾದ ಶೋಪೆನಹೋರನು ವಿಸ್ಮಯಾನಂದಗಳಿಂದ ಉಚ್ಛ್ವಸಿತನಾಗಿ ಹೇಳಿರುತ್ತಾನೆಃ— "ಪ್ರತಿಯೊಂದು ವಾಕ್ಯದಿಂದ ಎಂಥ ಗಂಭೀರ ಮೌಲಿಕ ಮತ್ತು ಗಾಂಭೀರ್ಯಪೂರ್ಣ ವಿಚಾರರಾಶಿ ಉದ್ಗತವಾಗಿರುತ್ತದೆ! ಇಡೀ ಗ್ರಂಥವು ಎಷ್ಟು ಉಚ್ಚ ಪವಿತ್ರ ಮತ್ತು ಐಕಾಂತಿಕ ಭಾವದಿಂದ ಅನುಪ್ರಾಣಿತವಾಗಿರುತ್ತದೆ. ಸಮಗ್ರ ಪೃಥ್ವಿಯಲ್ಲಿ ಮೂಲ ಉಪನಿಷತ್ತಿನಂತೆ, ಇಷ್ಟು ಫಲೋಪಧಾರಕವೂ, ಉಚ್ಚ ಭಾವೋದ್ದೀಪ

ಕವೂ ಆದ ಗ್ರಂಥವು ಎಲ್ಲಿಯೂ ಇಲ್ಲ. ಇದು ನನಗೆ ಜೀವನದಲ್ಲಿ ಶಾಂತಿಯನ್ನು ಕೊಡುವದು "

ಶೋಪನಹೋರನ ತರುವಾಯ ಬಹು ಪಾಶ್ಚಾತ್ಯಮನೀಷಿಗಳು ಉಪನಿಷತ್ ವಿಚಾರವನ್ನು ಮಾಡಿ ನಾನಾ ಭಾವದಲ್ಲಿ ಇದರ ಮಹಿಮೆಯನ್ನು ಹೊಗಳಿದ್ದಾರೆ. ಕೆಲಕೆಲವರು ಉಪನಿಷತ್ತಿಗೆ "ಮಾನವ ವಿಚಾರದ ಸರ್ವ ಶ್ರೇಷ್ಠ ಅವದಾನ" ವೆಂದು ವರ್ಣಿಸಿರುತ್ತಾರೆ.

ನಮ್ಮ ದೇಶದ ಶಾಸ್ತ್ರಕಾರರು ಉಪನಿಷತ್ತಿಗೆ "ಪರಾ ವಿದ್ಯಾ" ಎಂದೆನ್ನುತ್ತಾರೆ. ವೇದದ ಸಾರ ಭಾಗವೆಂದು ಇದಕ್ಕೆ "ವೇದಾಂತ" ವೆಂಬ ಹೆಸರಿನಿಂದ ಕರೆಯುತ್ತಾರೆ. ಸಮಸ್ತ ಶಾಸ್ತ್ರಗಳನ್ನು ಬಲ್ಲವನಾಗಿದ್ದರು ಸಹ ಉಪನಿಷತ್ತನ್ನು ಓದದ ಉಕ್ತ ಅಧ್ಯೇತೃವು ಶೂದ್ರನೆಂದು ತಿಳಿಯಲ್ಪಡುತ್ತಿದ್ದನು. ಅದು ಅಪಾಂಕ್ತೇಯವೆಂದು ವಿವೇಚಿತವಾಗುತ್ತಿತ್ತು. × ಸಸಾಗರಾ ವಿತ್ತಪೂರ್ಣಾ ವಸುಂಧರೆಯ ವಿನಿಮಯದಲ್ಲಿಯೂ, ಅನಧಿಕಾರಿಗೆ ಈ "ರಹಸ್ಯ ವಿದ್ಯೆಯ" ಉಪದೇಶವು ಮಾಡಲ್ಪಡುತ್ತಿದ್ದಿಲ್ಲ. ಯಾಕಂದರೆ "ಏತದೇವ ತತೋಭೂಯಃ" ಈ ಬ್ರಹ್ಮವಿಜ್ಞಾನವು ಅದಕ್ಕಿಂತಲೂ ಹೆಚ್ಚಿನದಾಗಿರುವದು. ±

ಉಪನಿಷತ್ ಪ್ರತಿಪಾದಿತ ಬ್ರಹ್ಮ ತತ್ವನು ಬೇಗನೆ ಭವಿಷ್ಯತ್ತಿನಲ್ಲಿ ಸಮಗ್ರ ಪೃಥ್ವಿಯ ಧರ್ಮವಾಗಿ ನಿಲ್ಲುವದು. ಶೋಪೆನಹೊರ ಮೊದಲಾದ ಬಹು ಮನೀಷಿಗಳು ಈ ಭವಿಷ್ಯತ್ ವಾಣಿಯನ್ನು ನುಡಿದಿರುವರು. ಭಾರತದ ಬ್ರಹ್ಮಜ್ಞಾನವು ಸಮಗ್ರ ಪೃಥ್ವಿಯ ಧರ್ಮವಾಗಿ ನಿಲ್ಲುವ ಉಪಕ್ರಮವನ್ನು ಮಾಡಿರುತ್ತದೆಂದು ಚಕ್ಷುಷ್ಮಾನ್ ವ್ಯಕ್ತಿಗೆ ಕಂಡು ಬರುವದು. ಪ್ರಾತಃ ಸೂರ್ಯನ ಅರುಣ ಕಿರಣಗಳಿಂದ ಪೂರ್ವದಿಶೆಯು ಆಲೋಕಿತವಾಗಲು ಆರಂಭವಾಗಿರುವದು ನಿಶ್ಚಯ. ಆದರೆ ಯಾವಾಗ ಆ ಸೂರ್ಯನು ಮಧ್ಯಾಹ್ನ ಗಗನದಲ್ಲಿ ಸಮುದಿತವಾಗುವನೋ ಆಗ ಅವನ ದೀಪ್ತಿಯಲ್ಲಿ ಸಮಗ್ರ ಪೃಥ್ವಿಯು ದೀಪ್ತಿಮಯವಾಗಿ ಹೋಗುವದು ಎಂದು ರವೀಂದ್ರನಾಥನು ಹೇಳುತ್ತಾನೆ.

× ಶನಉವಃ ಸಂಹಿತಾ ೩ ೮೨

± ಛಾಂದೋಗ್ಯ ೩ ೧೧ ೪—೬

ಸ್ವಾಮಿ ವಿವೇಕಾನಂದರವರು ವರ್ತಮಾನ ಭಾರತದ ಜಾತೀಯ ಜೀವನದಲ್ಲಿ ಉಪನಿಷತ್ತಿನ ಕಾರ್ಯಕಾರಿತೆಯನ್ನು ಉಚ್ಚಕಂಠದಿಂದ ಘೋಷಣೆ ಮಾಡಿರುತ್ತಾರೆ. ವಿಗತ ಸಹಸ್ರ ವರ್ಷಗಳಿಂದ ನಮ್ಮ ಜಾತೀಯ ಜೀವನದಲ್ಲಿ ಯಾವ ದೋಷ ದುರ್ಬಲತೆಗಳು ಸಂಚಿತವಾಗಿರುವವೋ, ಯಾವದರಿಂದ ನಾವು ನಿತಾಂತ ನಿರ್ವೀರ್ಯರಾಗಿರುತ್ತೇವೋ, ಏಕ ಮಾತ್ರ ಉಪನಿಷತ್ತಿನ ಮಹಾವೀರ್ಯಪ್ರದ ಸತ್ಯ ಸಮೂಹವೇ ಅವುಗಳ ದೂರೀಕರಣದಲ್ಲಿ ಸಮರ್ಥವು. "ಭಾರತೀಯ ಜೀವನದಲ್ಲಿ ವೇದಾಂತದ ಕಾರ್ಯಕಾರಿತಾ" ಎಂಬ ವಕ್ತೃತ್ವದಲ್ಲಿ ಸ್ವಾಮಿಗಳವರು ಹೇಳಿರುವರು.

"ಎಲೈ ಬಂಧುಗಳೇ, ದೇಶವಾಸಿಗಳೇ ನೀವು ಉಪನಿಷತ್ತುಗಳನ್ನು ಓದಿದಷ್ಟು ನಾನು ನಿಮಗೋಸುಗ ಅಶ್ರುವಿಸರ್ಜನೆಯನ್ನು ಮಾಡುತ್ತೇನೆ. ಉಪನಿಷದುಕ್ತ ತೇಜಸ್ವಿತೆಯೇ ವಿಶೇಷಭಾವದಿಂದ ನಮ್ಮ ಜೀವನದಲ್ಲಿ ಪರಿಣತವಾಗಿ ಮಾಡುವದು ಆವಶ್ಯಕವಾಗಿರುತ್ತದೆ. ನಮಗೆ ಶಕ್ತಿಯನ್ನು ಕೊಡುವವರು ಯಾರು?... ........ಉಪನಿಷತ್ತುಗಳು ಶಕ್ತಿಯ ಬೃಹತ್ ಆಕರ ಸ್ವರೂಪಗಳು. ಉಪನಿಷತ್ತು ಯಾವ ಶಕ್ತಿ ಸಂಚಾರದಲ್ಲಿ ಸಮರ್ಥವು. ಅದರಲ್ಲಿ ಅದು ಸಮಗ್ರ ಜಗತ್ತಿಗೆ ಪುನರುಜ್ಜೀವಿತ ಹಾಗು ಶಕ್ತಿ ಮತ್ತು ವೀರ್ಯಕಾರಿಯನ್ನು ಮಾಡಲು ಶಕ್ಯವಾಗಿರುತ್ತದೆ. ಎಲ್ಲ ಜಾತಿಯ ಎಲ್ಲ ಮತಗಳ ಎಲ್ಲ ಸಂಪ್ರದಾಯಗಳ ದುರ್ಬಲ, ದುಃಖೀ, ಪದದಲಿತ ಗಣಕ್ಕೆ ಅದು ಉಚ್ಚಸ್ವರದ ಆಹ್ವಾನ ಮಾಡಿ ತನ್ನ ಕಾಲ ಮೇಲೆ ಎದ್ದುನಿಂತು ಮುಕ್ತವಾಗಲು ಹೇಳುತ್ತದೆ. ಮುಕ್ತಿ ಅಥವಾ ಸ್ವಾಧೀನತಾ ದೈಹಿಕ ಸ್ವಾಧೀನತಾ ಮಾನಸಿಕ ಸ್ವಾಧೀನತಾ ಅಧ್ಯಾತ್ಮಿಕ ಸ್ವಾಧೀನತಾ ಇದೇ ಉಪನಿಷತ್ತಿನ ಮೂಲಮಂತ್ರ. ಜಗತ್ತಿನಲ್ಲಿ ಇದೇ ಏಕ ಮಾತ್ರ ಶಾಸ್ತ್ರವು. ಇದರಲ್ಲಿ ಉದ್ಧಾರದ ಕಥೆಯನ್ನು ಹೇಳಿಲ್ಲ. ಮುಕ್ತಿಯ ಕಥೆಯನ್ನು ಹೇಳಿದೆ. ಪ್ರಕೃತ ಬಂಧನದಿಂದ ಮುಕ್ತನಾಗು, ದುರ್ಬಲತೆಯಿಂದ ಮುಕ್ತನಾಗು."



ಕವೂ ಆದ ಗ್ರಂಥವು ಎಲ್ಲಿಯೂ ಇಲ್ಲ. ಇದು ನನಗೆ ಜೀವನದಲ್ಲಿ ಶಾಂತಿಯನ್ನು ಕೊಡುವದು"

ಶೋಪನಹೋರನ ತರುವಾಯ ಬಹು ಪಾಶ್ಚಾತ್ಯಮನೀಷಿಗಳು ಉಪನಿಷತ್ ವಿಚಾರವನ್ನು ಮಾಡಿ ನಾನಾ ಭಾವದಲ್ಲಿ ಇದರ ಮಹಿಮೆಯನ್ನು ಹೊಗಳಿದ್ದಾರೆ. ಕೆಲಕೆಲವರು ಉಪನಿಷತ್ತಿಗೆ "ಮಾನವ ವಿಚಾರದ ಸರ್ವ ಶ್ರೇಷ್ಠ ಅವದಾನ" ವೆಂದು ವರ್ಣಿಸಿರುತ್ತಾರೆ.

ನಮ್ಮ ದೇಶದ ಶಾಸ್ತ್ರಕಾರರು ಉಪನಿಷತ್ತಿಗೆ "ಪರಾ ವಿದ್ಯಾ" ಎಂದೆನ್ನುತ್ತಾರೆ. ವೇದದ ಸಾರ ಭಾಗವೆಂದು ಇದಕ್ಕೆ "ವೇದಾಂತ" ವೆಂಬ ಹೆಸರಿನಿಂದ ಕರೆಯುತ್ತಾರೆ. ಸಮಸ್ತ ಶಾಸ್ತ್ರಗಳನ್ನು ಬಲ್ಲವನಾಗಿದ್ದರು ಸಹ ಉಪನಿಷತ್ತನ್ನು ಓದದ ಉಕ್ತ ಅಧ್ಯೇತೃವು ಶೂದ್ರನೆಂದು ತಿಳಿಯಲ್ಪಡುತ್ತಿದ್ದನು. ಅದು ಅಪಾಂಕ್ತೇಯವೆಂದು ವಿವೇಚಿತವಾಗುತ್ತಿತ್ತು. × ಸಸಾಗರಾ ವಿತ್ತಪೂರ್ಣಾ ವಸುಂಧರೆಯ ವಿನಿಮಯದಲ್ಲಿಯೂ, ಅನಧಿಕಾರಿಗೆ ಈ "ರಹಸ್ಯ ವಿದ್ಯೆಯ" ಉಪದೇಶವು ಮಾಡಲ್ಪಡುತ್ತಿದ್ದಿಲ್ಲ. ಯಾಕಂದರೆ "ಏತದೇವ ತತೋಭೂಯಃ" ಈ ಬ್ರಹ್ಮವಿಜ್ಞಾನವು ಅದಕ್ಕಿಂತಲೂ ಹೆಚ್ಚಿನದಾಗಿರುವದು. ±

ಉಪನಿಷತ್ ಪ್ರತಿಪಾದಿತ ಬ್ರಹ್ಮ ತತ್ವವು ಬೇಗನೆ ಭವಿಷ್ಯತ್ತಿನಲ್ಲಿ ಸಮಗ್ರ ಪೃಥ್ವಿಯ ಧರ್ಮವಾಗಿ ನಿಲ್ಲುವದು. ಶೋಪೆನಹೊರ ಮೊದಲಾದ ಬಹು ಮನೀಷಿಗಳು ಈ ಭವಿಷ್ಯತ್ ವಾಣಿಯನ್ನು ನುಡಿದಿರುವರು. ಭಾರತದ ಬ್ರಹ್ಮಜ್ಞಾನವು ಸಮಗ್ರ ಪೃಥ್ವಿಯ ಧರ್ಮವಾಗಿ ನಿಲ್ಲುವ ಉಪಕ್ರಮವನ್ನು ಮಾಡಿರುತ್ತದೆಂದು ಚಕ್ಷುಷ್ಮಾನ್ ವ್ಯಕ್ತಿಗೆ ಕಂಡು ಬರುವದು. ಪ್ರಾತಃ ಸೂರ್ಯನ ಅರುಣ ಕಿರಣಗಳಿಂದ ಪೂರ್ವದಿಶೆಯು ಆಲೋಕಿತವಾಗಲು ಆರಂಭವಾಗಿರುವದು ನಿಶ್ಚಯ. ಆದರೆ ಯಾವಾಗ ಆ ಸೂರ್ಯನು ಮಧ್ಯಾಹ್ನ ಗಗನದಲ್ಲಿ ಸಮುದಿತವಾಗುವನೋ ಆಗ ಅವನ ದೀಪ್ತಿಯಲ್ಲಿ ಸಮಗ್ರ ಪೃಥ್ವಿಯು ದೀಪ್ತಿಮಯವಾಗಿ ಹೋಗುವದು ಎಂದು ರವೀಂದ್ರನಾಥನು ಹೇಳುತ್ತಾನೆ.

---

× ಶನಲುವಃ ಸಂಹಿತಾ ೩ ೮೨

± ಛಾಂದೋಗ್ಯ ೩ ೧೧ ೫—೬

ಸ್ವಾಮಿ ವಿವೇಕಾನಂದರವರು ವರ್ತಮಾನ ಭಾರತದ ಜಾತೀಯ ಜೀವನದಲ್ಲಿ ಉಪನಿಷತ್ತಿನ ಕಾರ್ಯಕಾರಿತೆಯನ್ನು ಉಚ್ಚಕಂಠದಿಂದ ಘೋಷಣೆ ಮಾಡಿರುತ್ತಾರೆ. ವಿಗತ ಸಹಸ್ರ ವರ್ಷಗಳಿಂದ ನಮ್ಮ ಜಾತೀಯ ಜೀವನದಲ್ಲಿ ಯಾವ ದೋಷ ದುರ್ಬಲತೆಗಳು ಸಂಚಿತವಾಗಿರುವವೋ, ಯಾವದರಿಂದ ನಾವು ನಿತಾಂತ ನಿರ್ವೀರ್ಯರಾಗಿರುತ್ತೇವೋ, ಏಕ ಮಾತ್ರ ಉಪನಿಷತ್ತಿನ ಮಹಾವೀರ್ಯಪ್ರದ ಸತ್ಯ ಸಮೂಹವೇ ಅವುಗಳ ದೂರೀಕರಣದಲ್ಲಿ ಸಮರ್ಥವು. "ಭಾರತೀಯ ಜೀವನದಲ್ಲಿ ವೇದಾಂತದ ಕಾರ್ಯಕಾರಿತಾ" ಎಂಬ ವಕ್ತೃತ್ವದಲ್ಲಿ ಸ್ವಾಮಿಗಳವರು ಹೇಳಿರುವರು.

"ಎಲೈ ಬಂಧುಗಳೇ, ದೇಶವಾಸಿಗಳೇ ನೀವು ಉಪನಿಷತ್ತುಗಳನ್ನು ಓದಿದಷ್ಟು ನಾನು ನಿಮಗೋಸುಗ ಅಶ್ರುವಿಸರ್ಜನೆಯನ್ನು ಮಾಡುತ್ತೇನೆ. ಉಪನಿಷದುಕ್ತ ತೇಜಸ್ವಿತೆಯೇ ವಿಶೇಷಭಾವದಿಂದ ನಮ್ಮ ಜೀವನದಲ್ಲಿ ಪರಿಣತವಾಗಿ ಮಾಡುವದು ಆವಶ್ಯಕವಾಗಿರುತ್ತದೆ. ನಮಗೆ ಶಕ್ತಿಯನ್ನು ಕೊಡುವವರು ಯಾರು?... ........ಉಪನಿಷತ್ತುಗಳು ಶಕ್ತಿಯ ಬೃಹತ್ ಆಕರ ಸ್ವರೂಪಗಳು. ಉಪನಿಷತ್ತು ಯಾವ ಶಕ್ತಿ ಸಂಚಾರದಲ್ಲಿ ಸಮರ್ಥವು. ಅದರಲ್ಲಿ ಅದು ಸಮಗ್ರ ಜಗತ್ತಿಗೆ ಪುನರುಜ್ಜೀವಿತ ಹಾಗು ಶಕ್ತಿ ಮತ್ತು ವೀರ್ಯಕಾರಿಯನ್ನು ಮಾಡಲು ಶಕ್ಯವಾಗಿರುತ್ತದೆ. ಎಲ್ಲ ಜಾತಿಯ ಎಲ್ಲ ಮತಗಳ ಎಲ್ಲ ಸಂಪ್ರದಾಯಗಳ ದುರ್ಬಲ, ದುಃಖೀ, ಪದದಲಿತ ಗಣಕ್ಕೆ ಅನು ಉಚ್ಚಾರದ ಆಹ್ವಾನ ಮಾಡಿ ತನ್ನ ಕಾಲ ಮೇಲೆ ಎದ್ದುನಿಂತು ಮುಕ್ತವಾಗಲು ಹೇಳುತ್ತದೆ. ಮುಕ್ತಿ ಅಥವಾ ಸ್ವಾಧೀನತಾ ದೈಹಿಕ ಸ್ವಾಧೀನತಾ ಮಾನಸಿಕ ಸ್ವಾಧೀನತಾ ಅಧ್ಯಾತ್ಮಿಕ ಸ್ವಾಧೀನತಾ ಇದೇ ಉಪನಿಷತ್ತಿನ ಮೂಲಮಂತ್ರ. ಜಗತ್ತಿನಲ್ಲಿ ಇದೇ ಏಕ ಮಾತ್ರ ಶಾಸ್ತ್ರವು. ಇದರಲ್ಲಿ ಉದ್ಧಾರದ ಕಥೆಯನ್ನು ಹೇಳಿಲ್ಲ. ಮುಕ್ತಿಯ ಕಥೆಯನ್ನು ಹೇಳಿದೆ. ಪ್ರಕೃತ ಬಂಧನದಿಂದ ಮುಕ್ತನಾಗು, ದುರ್ಬಲತೆಯಿಂದ ಮುಕ್ತನಾಗು."



## ಸಕೀಲಸಂಬಂಧದ ಪದವು.

(ಶೀ ಮೂ ಸಂಗಯ್ಯ ಗುರು ಬಸಯ್ಯ ಹಿರೇಮಠ ಇವರು ಕಳಿಸಿದ್ದು.)

ಭ್ರಾಂತಿಯು ನಳಿಯುಯ್ಯಾ। ಭವದ ಬೇರು ಕಡಿಯುಯ್ಯಾ। ಅಂತ ರಂಗದ ಆರು ಭುವದ ಅಂತಸ್ಥವ ನೀ ತಿಳಿಯುಯ್ಯಾ ॥ಪಲ್ಲ॥

ಪ್ರಥ್ವಿ, ಅಪ್, ತೇಜ, ವಾಯು, ಅಕಾಶಾತ್ಮಕ ಭೂತಗಳು। ಕ್ರಿಯಾ, ಜ್ಞಾನ, ಇಚ್ಛಾ, ಆದಿ, ಪರಶಕ್ತಿ ಚಿತ್ಶಕ್ತಿಗಳು। ಪ್ರಾಣಾಪಾನ, ವ್ಯಾನ ಉದಾನ ನಾಗ ದಶವಾಯುಗಳು। ಜಾಗ್ರಸ್ವಪ್ನ ಸುಷುಪ್ತಿ ತೂರ್ಯಾತೀತ ನಿರ್ವಯಲಾವಸ್ಥೆಗಳೂ ॥೧॥

ಬ್ರಹ್ಮ ವಿಷ್ಣು ರುದ್ರ ಈಶ್ವರ ಸದಾಶಿವ ಪರಶಿವ ತತ್ವಗಳು। ವೃತ್ತಕಟಿಯ ವರ್ತುಳ ಗೋಮುಖ ನಾಳಪೀಠಸ್ಥಾನವು। ಭಕ್ತಿ ಜ್ಞಾನ ವೈರಾಗ್ಯ ವಿರಕ್ತಿ ಮುಕ್ತಿ ದ್ರುಢಗೊತ್ತುಗಳು। ಆಧಾರ ಸ್ವಾಧಿಷ್ಠಾನ ಮಣಿಪೂರಕ ಅನಾಹತ ವಿಶುದ್ಧಿ ಆಜ್ಞಾ ಚಕ್ರಗಳೂ ॥೨॥

ನಾಲ್ಕು, ಆರು, ಹತ್ತು, ಹನ್ನೆರಡು, ಹದಿನಾರು, ಎರಡು ದಳಗಳು। ಹಳದಿ, ಬಿಳಿದು, ಕುಂಕುಮ, ಹಸರು, ಕಪ್ಪು, ಕೆಂಪು ವರ್ಣಗಳು। ಕಕಾರ ಬತ್ತೀಸ ಅಕಾರ ಷೋಡಶ ಹಂ ಕ್ಷಂ ದಳ ಐವತ್ತಕ್ಷರವು। ತಾರಕ ದಂಡಕ ಕುಂಡಲಿ ಅರ್ಧಚಂದ್ರದರ್ಪಣ ಜ್ಯೋತಿಯು ॥೩॥

ನಕಾರ ಮಕಾರ ಶಿಕಾರ ವಕಾರ ಯಕಾರ ಓಂಕಾರ ಪೀಠವು। ಆಚಾರ ಗುರು ಶಿವನೆ ಜಂಗಮ ಪ್ರಸಾದ ಮಹಾಲಿಂಗಳು। ಪೀತ ಕಪೋತ ಹರಿತ ಮಾಂಜಿಷ್ಠ ಮೌಕ್ತಿಕ ರತ್ನ ಪ್ರಭೆಗಳು। ಬಕಾರ ಸಕಾರ ವಕಾರ ಅಕಾರ ಉಕಾರ ಮಕಾರ ಮಂತ್ರಗಳು ॥೪॥

ಘ್ರಾಣ, ಜಿಹ್ವೆ, ನೇತ್ರ, ತ್ವಕ್ಕು, ಶ್ರೋತ್ರ, ಹೃದಯ ಮುಖಗಳು। ಸುಚಿತ್ತ, ಸುಬುದ್ಧಿ, ನಿರಹಂಕಾರ, ಸುಮನ, ಸದ್ಭಾವ, ಹಸ್ತಗಳು। ಶ್ರದ್ಧೆ ನೈಷ್ಠೆ ಸಾವಧಾನ ಆನಂದ ಸಮರಸ ಭಕ್ತಿಗಳು। ಗಂಧರಸವು। ರೂಪು, ಸ್ಪರ್ಶನ, ಶಬ್ದ ಪರಿಣಾಮ ಪದಾರ್ಥಗಳು ॥೫॥

ಸತ್ತು ಚಿತ್ತಾನಂದ ನಿತ್ಯ ಪರಿಪೂರ್ಣ ಅಖಂಡ ಲಕ್ಷಣವು। ಕರ್ಮ ಕರ್ತೃ ಮೂರ್ತಿ ಅಮೂರ್ತಿಶಿವ ಮಹಾಸಾದಾಖ್ಯಗಳು। ನಿವೃತ್ತಿ ಪ್ರತಿಷ್ಠೆ ವಿದ್ಯಾ ಶಾಂತಿ ಶಾಂತಾತೀತೋತ್ತರ ಕಲೆಗಳು ॥೬॥

ಪಶ್ಚಿಮ ಉತ್ತರ ದಕ್ಷಿಣ ಪೂರ್ವ ಊರ್ಧ್ವಪಾತಾಳ ದಿಕ್ಕುಗಳು। ಸದ್ಯೋಜಾತ ವಾಮದೇವ ಅಘೋರ ತತ್ಪುರುಷ ಈಶಾನ್ಯ ಗೋಪ್ಯ ಮುಖಗಳು। ಋಗ್ವೇದ ಯಜುರ್ವೇದ ಸಾಮವೇದ ಅಥರ್ವಣಜಪ ಗಾಯತ್ರಿ ವೇದಗಳು ॥೭॥

ದೇವ, ಜೀವ. ಅಂಗ, ಲಿಂಗ, ಸಂಗಸಮರಸ ಕೂಟವು। ಇಷ್ಟ, ಪ್ರಾಣ, ಭಾವ, ಸ್ಥೂಲ, ಸೂಕ್ಷ್ಮ, ಕಾರಣ ಭವದಾಟಗಳು। ಅರ್ಥ ಪ್ರಾಣಾಭಿಮಾನ ಕೊಡೆಯ ಕರ್ತೃ ಗುರುಮಾರು ದ್ರವ್ಯಗಳು ॥೮॥

ಹ್ರಕಾರ ಹ್ರಿಕಾರ ಹ್ರುಕಾರ ಹ್ರೈಕಾರ ಹ್ರೌಕಾರ ಹ್ರಃಕಾರ ಪ್ರಸಾದ ಮಂತ್ರಗಳು। ಭೋಜ್ಯ ಭಕ್ಷ್ಯ ಚೋಹ್ಯ ಲೇಹ್ಯ ಪಾನ್ಯ ತೃಪ್ತಿ ಅರ್ಪಣವು। ಶುದ್ಧ ಗುರು ಸಿದ್ಧಲಿಂಗ, ಪ್ರಸಿದ್ಧ ಜಂಗಮ ಪ್ರಸಾದವು। ಸತ್ಯಾಚಾರ, ಭೃತ್ಯಾಚಾರ, ಗಣಾಚಾರ, ಸದಾಚಾರ ಧರ್ಮಾಚಾರವು ॥೯॥

# ಹಾಗಲವಾಡಿ ಅರಸುಗಳ ವೃತ್ತಾಂತ.

(ಲೇಖಕ:—ರಾ॥ ಸಾ॥ ಫ ಗು. ಹಳಕಟ್ಟಿ ಬಿ ಎ. ಎಲ್. ಎಲ್. ಬಿ. ವಿಜಾಪುರ)

ಹಾಗಲವಾಡಿ ಸಂಸ್ಥಾನವು ಮೈಸೂರು ಸೀಮೆಯಲ್ಲಿ ತುಮಕೂರಿನ ಹತ್ತರವಿರುತ್ತದೆ. ಇದಾದರೂ ವೀರಶೈವ ಸಂಸ್ಥಾನಗಳಲ್ಲಿ ಮಹತ್ವದ್ದಾಗಿದೆ. ಈ ಸಂಸ್ಥಾನದ ಅಧಿಪತಿಗಳು ಯಾವಾಗಲೂ ಮೈಸೂರಿನ ರಾಜರಿಗೆ ಸಹಾಯಕರಾಗಿ ವರ್ತಿಸುತ್ತ ತುಮಕೂರಿನ ಪಶ್ಚಿಮಕ್ಕಿನ ದೊಡ್ಡ ಭಾಗವನ್ನು ಆಕ್ರಮಿಸಿ ಆಳುತ್ತಿದ್ದರು. ಈ ಸಂಸ್ಥಾನದ ಮೂಲ ಪುರುಷನಾದ ಯರಿಯಾದಿ ನಾಯಕನೆಂಬವನು ೧೫ ನೇ ಶತಮಾನದ ಮಧ್ಯಭಾಗದಲ್ಲಿ ಈ ಸೀಮೆಯಲ್ಲಿ ಒಂದು ಸಂಸ್ಥಾಪನೆ ಮಾಡಿದನೆಂದು ತೋರುತ್ತದೆ. ಇವನ ವಂಶಜರು ಈಗಲೂ ಸಹ ಇಲ್ಲಿ ವಾಸಿಸುತ್ತಾರೆ. ಇವರ ಕಡೆಯ ಅಧಿಪತಿಗಳು ೧೫-೨೦ ವರ್ಷಗಳ ಹಿಂದೆ ವಿಜಾಪುರಕ್ಕೆ ಬಂದಾಗ್ಗೆ ಅವರನ್ನು ನಾನು ಕಂಡಿದ್ದೆನು. ಆಗ ಇವರ ಮನೆತನದ ಪೂರ್ವೇತಿಹಾಸದ ವಿಷಯವಾಗಿ ವಿಚಾರ ಮಾಡಲಾಗಿ ಅದನ್ನು ಬರೆದಿದ್ದ ಒಂದು ಕೋರಿಕಾಗದದ ಒಂದು ಸುರುಳಿಯನ್ನು ಅವರು ನನಗೆ ತೋರಿಸಿದರು. ಅದನ್ನು ನೋಡಲಾಗಿ ಅದರಲ್ಲಿ ಈ ವಂಶದ ವರ ೩೦೦ ವರ್ಷಗಳ ಇತಿಹಾಸವು ಬರೆಯಲ್ಪಟ್ಟಿದ್ದು ನನಗೆ ಕಂಡು ಬಂದಿತು. ಈ ಇತಿಹಾಸವು ಕನ್ನಡ ಅಕ್ಷರಗಳಿಂದ ಕನ್ನಡ ಭಾಷೆಯಲ್ಲಿಯೇ ಬರೆಯಲ್ಪಟ್ಟಿತ್ತು. ಅದರ ಅಕ್ಷರಗಳು ಹೊಸಗನ್ನಡದಂತೆ ಇದ್ದರೂ ನನಗೆ ಚನ್ನಾಗಿ ಓದಲಿಕ್ಕೆ ಬಾರದ್ದರಿಂದ ಸಂಸ್ಥಾನದ ಅಧಿಪತಿಗಳೇ ಅವನ್ನು ನನಗೆ ಬಹು ಸುಲಭವಾಗಿ ಓದಿ ಹೇಳಿದರು. ಆಗ ಅವರು ಓದಿದಂತೆ ನಾನು ಅದರ ಭಾವವನ್ನು ಟಿಪ್ಪಣಿ ಮಾಡುತ್ತ ಸಾಗಿದೆನು. ಈ ಟಿಪ್ಪಣಿಗಳ ಆಧಾರದಿಂದ ನಾನು ಈ ಕೆಳಗಿನ ವಿವರಣೆಗಳನ್ನು ಬರೆದಿದ್ದೇನೆ. ಮೂಲ ಪ್ರತಿಯನ್ನು ಶೋಧಿಸಬೇಕಾದರೆ ಸಂಸ್ಥಾನದ ಅಧಿಪತಿಗಳು ಈಚೆಗೆ ತೀರಿಕೊಂಡಂತೆ ನನಗೆ ತಿಳಿಯುತ್ತದೆ. ಹಾಗಲವಾಡಿ ರಾಜ್ಯದ ಇತಿಹಾಸವು ಮೈಸೂರ ಗ್ಯಾಜಿಟನಲ್ಲಿ ಬಂದಿರುತ್ತದೆಂಬದು ನಿಜವು. ಆದರೆ ಅದು ಅತ್ಯಲ್ಪವಾಗಿರುತ್ತದೆ. ನಾನು ಇದರಲ್ಲಿ ಕೊಟ್ಟ ವಿವರಣೆಗಳು ಹೆಚ್ಚಿಗೆ ವಿಸ್ತಾರವಾಗಿರುತ್ತವೆ. ಕೆಲವು ದಿವಸಗಳಾದ ಮೇಲೆ ನಾನು ಬರೆದಿಟ್ಟ ಟಿಪ್ಪಣಿಗಳು ಕಳೆದ ಹೋಗ

ಬಹುದು. ಮತ್ತು ಮೂಲ ಇತಿಹಾಸವೂ ಈಗಿನ ಅಧಿಪತಿಗಳಲ್ಲಿ ಉಳಿದಿದಿಯೋ ಇಲ್ಲವೋ ಎಂಬದನ್ನು ಹೇಳಲಿಕ್ಕೆ ಬರುವಂತೆ ಇಲ್ಲ. ಈ ವಿಚಾರಗಳ ಮೂಲಕ ನಾನು ನನ್ನ ಟಿಪ್ಪಣೆಗಳ ಆಧಾರದಿಂದ ಇವರ ವೃತ್ತಾಂತವನ್ನು ಬರೆದು ಶಿವಾನುಭವದಲ್ಲಿ ಪ್ರಸಿದ್ಧ ಮಾಡುವದು ಉಚಿತ ತೋರಿದ್ದರಿಂದ ನಾನು ಅದನ್ನು ಇಲ್ಲಿ ಕೊಟ್ಟಿರುತ್ತೇನೆ. ಮೂಲ ಪ್ರತಿಯು ಸಿಕ್ಕಿದ್ದಕ್ಕೆ ನಾವು ಈ ಪತ್ರಿಕೆಯಲ್ಲಿ ಅತ್ಯಾನಂದದಿಂದ ಸ್ಥಳಗೊಡುವೆವು.

ಕೈಫಿಯತ್ ಚರಿತ್ರೆಯಲ್ಲಿ ಹಾಗಲವಾಡಿ ಅರಸರು "ಶ್ರೀಮಂತ ಮಹಾಶಕ್ತಾಚಾರ್ಯರಾದ ಯರಿಮಾದಿ ನಾಯಕರವರ ಸಂತತಿ" ಎಂತಲೂ ಕ್ಷತ್ರಿಯ ಸಾಲೇಂದ್ರವಂಶದವರೆಂತಲೂ ರಾಮೇಶ್ವರನ ಭಕ್ತರೆಂತಲೂ [illegible] ಹೇಳಲ್ಪಟ್ಟಿದೆ. ಆ ಮೇಲೆ ಬೇರೆ ಬೇರೆ ಅರಸರ ಚರಿತ್ರೆಗಳು ಬಂದಿವೆ.

ಯರಿಮಾದಿನಾಯಕ— (೧೪೭೮—೧೫೧೮) ಈತನು ಶಕೆ ೧೪೦೦ ಪರಾಭವ ಸಂವತ್ಸರದಲ್ಲಿ ಆನೇಸಿದರಿ ಹಿರಿಲಿಂಗದೇವರು ಎಂಬವರ ಕಡೆಗೆ ಬಂದು ಅಲ್ಲಿ ೪ ದಿನವಿದ್ದು ಈಗಿನ ಹಾಗಲವಾಡಿಯಲ್ಲಿರುವ ತೀರ್ಥರಾಮೇಶ್ವರ ದೇವಾಲಯದಲ್ಲಿ ಬಂದಿಳಿದನು. ಅಲ್ಲಿಂದ ಅವನು ವನವಾಸದುರ್ಗ ಎಂಬಲ್ಲಿಗೆ ಹೋಗಿ, ಅಲ್ಲಿಯ ಪರ್ವತ ಪ್ರದೇಶದಲ್ಲಿದ್ದುಕೊಂಡು ಜನರನ್ನು ಕಟ್ಟಿಕೊಂಡು ಅವರಿಗೆ ಅಧಿಪತಿಯಾಗಿ ಇದ್ದುಕೊಂಡು ಅಲ್ಲಿಯೇ ವಾಸಿಸುತ್ತಿದ್ದನು. ಮುಂದೆ ಕೆಲವು ದಿನಗಳ ಮೇಲೆ ಈಗಿನ ಧಾರವಾಡಜಿಲ್ಹೆ ಡಂಬಳದ ದೇಸಾಯಿಯು ರಾಮೇಶ್ವರಕ್ಕೆ ತೀರ್ಥಯಾತ್ರೆಗೆ ಹೊಂಟು ಈ ವಾನವಾಸದುರ್ಗದ ಸಮೀಪದಲ್ಲಿಂದ ಹಾಯ್ದು ಹೋಗುತ್ತಿದ್ದನು ಆಗ ಬೇಡರು ಅವನನ್ನು ಹಿಡಿದು ಯರಿಮಾದಿನಾಯಕನ ಬಳಿಗೆ ತಂದರು. ಈ ಡಂಬಳದ ದೇಸಾಯಿಯ ಹತ್ತರ ಸಾಲಿಗ್ರಾಮದ ಲಕ್ಷ್ಮೀನಾರಾಯಣನ ಮೂರ್ತಿ ಇದ್ದುದನ್ನು ಕಂಡು ಅದನ್ನು ಯರಿಮಾದಿನಾಯಕನು ಬಲಾತ್ಕಾರದಿಂದ ಕಸೆದುಕೊಂಡು ದೇಸಾಯಿಯನ್ನು ಕಳಿಸಿಕೊಟ್ಟನು. ಈ ಸಾಲಗ್ರಾಮದ ಮೇಲೆ ಯರಿಮಾದಿನಾಯಕ ವಿಶ್ವಾಸವು ಬಹಳ ಕುಳಿತಿದ್ದರಿಂದ ಅವನು ಅದನ್ನು ನಿತ್ಯ ಆಡಿನ ಹಾಲು ಮತ್ತು ಕಾಡುಗಿಡಗಳ ಎಲೆಗಳಿಂದ ಪೂಜಿಸುತ್ತಿದ್ದನು. ಅವನ ಭಕ್ತಿಗೆ ಮೆಚ್ಚಿ ಪೃಥ್ವಿಯು ಬಿಚ್ಚಿ ಬಾಯ್ದೆರೆಯಲು ಅಲ್ಲಿ ದ್ರವ್ಯವಿದ್ದುದನ್ನು ಯರಿಮಾದಿನಾಯಕನು ಕಂಡನು. ಆದರೆ ಅವನು

ಆದನ್ನು ತೆಗೆದುಕೊಳ್ಳದೆ ಅದನ್ನು ಅಲ್ಲಿಯೇ ಭೂಮಿಯಲ್ಲಿ ಹೂಳಿಟ್ಟನು. ಯರಿಮಾದಿನಾಯಕನು ಶಕೆ ೧೪೩೦ ಧಾತು ಸಂವತ್ಸರದಲ್ಲಿ ತೀರಿಕೊಂಡನು.

ಮೇಲ್ಕಂಡ ಸಂಗತಿಯಿಂದ ಈ ಯರಿಮಾದಿನಾಯಕನ ಬೇಡರು ಮೊದಲಾದ ಕಾಡು ಜನರನ್ನು ಕಟ್ಟಿಕೊಂಡು ಕಾಡಿನಲ್ಲಿಯೇ ವಾಸಿಸಿದ್ದ ಹಾಗೆ ತೋರುತ್ತದೆ.

ನೆಲ್ಲೂರನಾಯಕ— (೧೫೦೮—೧೫೪೪) ಯರಿಮಾದಿನಾಯಕನಿಗೆ ನೆಲ್ಲೂರ ನಾಯಕನೆಂಬ ಒಬ್ಬ ಮಗನಿದ್ದನು. ಈ ನೆಲ್ಲೂರ ನಾಯಕನಿಗೆ ಸಿದ್ಧೇಶ್ವರಸ್ವಾಮಿಗಳೆಂಬವರು ವಿಭೂತಿಉಂಡಿಯನ್ನು ದಯಪಾಲಿಸಿದರು. ಅದನ್ನೇ ಈತನು ನಂಬಿಕೊಂಡು ಕಾಡಿನಲ್ಲಿ ವಾಸಿಸುತ್ತಿದ್ದನು. ಆದರೆ ಮುಂದೆ ಆತನು ಯರೆಕಟ್ಟಿಎಂಬ ಗ್ರಾಮವನ್ನು ಸ್ಥಾಪಿಸಿ ಅಲ್ಲಿ ಇರತೊಡಗಿದನು. ಅವನು ಅದರ ಮತ್ತು ಅದರ ಸುತ್ತುಮುತ್ತಲಿನ ಪ್ರದೇಶದ ರಾಜನೆಂದು ತಿಳಿಯಲ್ಪಡಹತ್ತಿದನು. ಈ ಪ್ರಕಾರ ಅವನು ಶಕೆ ೧೪೭೬ ಪರಿಧಾವಿ ಸಂವತ್ಸರದ ವರೆಗೆ ಆಳಿ ಅವನು ಅದೇ ವರ್ಷ ಮರಣಹೊಂದಿದನು.

ಭೈರವನಾಯಕಃ— (೧೫೪೪—೧೫೭೮) ನೆಲ್ಲೂರ ನಾಯಕನಿಗೆ ಭೈರವನಾಯಕನೆಂಬೊಬ್ಬ ಮಗನಿದ್ದನು. ಅವನೇ ಅವನ ತರುವಾಯ ಒಡೆಯನಾಗಿ ಆಳತೊಡಗಿದನು. ಆದರೆ ಮುಂದೆ ಆತನ ಕೈಗೆ ಅವನ ತಾಯಿಯ ದ್ರವ್ಯವು ಹತ್ತಲು ಅವನು ಆದರ ಸಹಾಯದಿಂದ ಒಂದು ಚಿಕ್ಕ ಸೈನ್ಯವನ್ನು ಕೂಡಿಸಿ ಶಟ್ಟಿಕೇರಿ ಎಂಬ ಗ್ರಾಮವನ್ನು ಕೈವಶ ಮಾಡಿಕೊಂಡನು. ಇದು ಶಕೆ ೧೪೭೬ ರಲ್ಲಿ ದುರ್ಮುಖಿ ಸಂವತ್ಸರಲ್ಲಿ ವರ್ತಿಸಿತು.

ಮುಂದೆ ಅಲ್ಲಿ ರಾಜ್ಯವಾಳುತ್ತಿರಲು ಅವನು ಒಂದು ದಿವಸ ಬೇಟೆಗೆ ಹೋಗಿದ್ದನು. ದಾರಿಯಲ್ಲಿ ಒಂದು ಮೊಲವು ಒಂದು ನಾಯಿಯ ಬೆನ್ನು ಹತ್ತಿ ಅಟ್ಟಿಕೊಂಡು ಹೋಗುವದನ್ನು ಕಾಣಲು ಇದು ಗಂಡು ಮೆಟ್ಟಿನ ಸ್ಥಳವೆಂದು ತಿಳಿದು ಆ ಸ್ಥಳವು ಯಾರದೆಂದು ಪರೀಕ್ಷಿಸಲು ಅದು ಎಡಗೈ ದೊಡ್ಡನಾಗ ಚಿಕ್ಕನಾಗ ಎಂಬ ನೇಕಾರ ಹೊಲೆಜಾತಿಯವರದು ಇದ್ದಿತೆಂಬದಾಗಿ ತಿಳಿದು ಬಂದಿತು. ಆಗ ಭೈರವನಾಯಕನು ಅವರನ್ನು ಬರಮಾಡಿಕೊಂಡು ಆ ಸ್ಥಳವನ್ನು ತನಗೆ ಕ್ರಯಕ್ಕೆ

ಕೊಡಬೇಕೆಂದು ಕೇಳಲು ಅವರು ಅದಕ್ಕೆ ಒಪ್ಪಲಿಲ್ಲ. ಆದರೆ ಕಡೆಗೆ ಆ ಹೊಲೆಯರು ಈ ಸ್ಥಳವನ್ನು ತಮ್ಮ ಹೆಸರಿನಿಂದ ಕರೆಯಬೇಕು, ಮತ್ತು ತಮ್ಮ ಗುಡಿಸಲುಗಳು ಅಲ್ಲಿಯೇ ಇರಬೇಕು ಎಂಬ ಶರ್ತಿನಿಂದ ಬಹಳ ಹಣವನ್ನು ತೆಗೆದುಕೊಂಡು ವಿಕ್ರಯಿಸಿದರು. ಅಲ್ಲಿ ಭೈರವನಾಯಕನು ಚಿಗನಾಗನಹಳ್ಳಿ ಎಂಬ ಹೆಸರಿನಿಂದ ಒಂದು ಕೋಟೆಯನ್ನು ಕಟ್ಟಿಸಿದ್ದಲ್ಲದೆ ಒಂದು ಪಟ್ಟಣವನ್ನೂ ಸ್ಥಾಪಿಸಿದನು. ಮತ್ತು ಇದನ್ನೇ ಅವನು ತನ್ನ ರಾಜಧಾನಿಯನ್ನಾಗಿ ಮಾಡಿಕೊಂಡನು. ಇದು ಶಕೆ ೧೪೪೦ ರಕ್ತಾಕ್ಷಿ ಸಂವತ್ಸರ ಮಾಘ ಶುದ್ಧ ೫ ನೆಯ ದಿವಸ ಸಂಭವಿಸಿತು. ಆ ಮೇಲೆ ಭೈರವನಾಯಕನು ಕಂದುಕೇರೆ ಎಂಬ ಕೋಟೆಯನ್ನು ಕಟ್ಟಿಸಿದನು ಮತ್ತು ಹೊನವಳ್ಳಿ, ತುರುಟೆಕೆರೆ, ನುಗ್ಗೀಹಳ್ಳಿ ಎಂಬ ಗ್ರಾಮಗಳನ್ನು ಕೈವಶಮಾಡಿಕೊಂಡು ತನ್ನ ಸಾಮರ್ಥ್ಯವನ್ನು ಬಲಪಡಿಸಿಕೊಂಡು ಈ ಎಲ್ಲ ಸೀಮೆಯನ್ನು ಆಳತೊಡಗಿದನು. ಆ ಕಾಲಕ್ಕೆ ಕೆಳಗೆ ಕಾಣಿಸಿದ ಸಂಗತಿಯು ಸಂಭವಿಸಿತು.

ಒಬ್ಬ ವ್ಯಾಪಾರಸ್ಥನು ರಾಮೇಶ್ವರ ಮೂರ್ತಿಯ ಬದಿಯಿಂದ ಹಾಯ್ದು ಹೋಗುತ್ತಿರುವಾಗ್ಗೆ ಅವನು ಅದು ಒಂದು ಪೂಜ್ಯಸ್ಥಾನವೆಂಬದನ್ನು ತಿಳಿಯದೆ ಅದರ ಬದಿಗೆ ಬೇರೆ ಎರಡು ಕಲ್ಲುಗಳನ್ನು ಹೂಡಿ ಅಡಿಗೆ ಮಾಡತೊಡಗಿದನು. ಆಗ ಆ ಮೂರ್ತಿಯು ಇಬ್ಭಾಗವಾಗಲು ಸುತ್ತಲಿನ ಜನರು ಮೂರ್ಛೆ ಹೊಂದಿದರು. ಮತ್ತು ಅದರಿಂದ ಹೊರಟ ಅಗ್ನಿಯಿಂದ ಅಲ್ಲಿದ್ದ ಕಾಳುಕಡಿಗಳು ಸುಟ್ಟು ಹೋದವು. ಆಗ ಆ ಬೆಂಕಿಯನ್ನು ನಂದಿಸಲಿಕ್ಕೆ ಉದ್ಯುಕ್ತರಾಗಲು ಆಗ ಒಂದು ಧ್ವನಿಯು ಹೊರಟು ನಾನು ದೇವರಿದ್ದೇನೆ ನನಗೆ ಒಂದು ಗುಡಿಯನ್ನು ಕಟ್ಟಿಸಬೇಕೆಂದು ಎನ್ನಲು ಆ ವ್ಯಾಪಾರಸ್ಥನು ಅದಕ್ಕೆ ಒಪ್ಪಿ ನೀನು ನನ್ನ ನಷ್ಟ ಹೊಂದಿದ ಪದಾರ್ಥಗಳನ್ನು ತಿರುಗಿ ಕೊಟ್ಟಿದ್ದಾದರೆ ಗುಡಿಯನ್ನು ಕಟ್ಟಿಸುವೆನೆಂದು ಹೇಳಲು ಆಗ ಸುಟ್ಟ ಪದಾರ್ಥಗಳು ಮೊದಲಿನಂತೆಯೇ ಆಗಲು ಅಲ್ಲಿ ಒಂದು ದೇವಾಲಯವನ್ನು ಕಟ್ಟಿಸಿ ಹೊರಟು ಹೋದನು.

ಭೈರವನಾಯಕನಿಗೆ ಈ ಸುದ್ದಿ ಹತ್ತಲು ಇದು ಮಹತ್ವದ ಸ್ಥಾನವೆಂದು ನಂಬಿ ತನಗೆ ಮಕ್ಕಳಿಲ್ಲದ್ದರಿಂದ ತನಗೆ ಮಕ್ಕಳನ್ನು ಕೊಟ್ಟರೆ ಆ ದೇವತೆಗೆ ಭಕ್ತನಾಗಿ ನಡೆದುಕೊಳ್ಳುವೆನೆಂದು ಬೇಡಿಕೊಂಡನು- ಆ ಕಾಲಕ್ಕೆ ರಾಮೇಶ್ವರನು ಸಿದ್ಧೇಶ್ವರ ಸ್ವಾಮಿಗಳೆಂಬ ಓರ್ವ ಜಂಗಮ

ರೂಪವನ್ನು ಧಾರಣ ಮಾಡಿಕೊಂಡು ಬರುತ್ತಿರಲು ಒಬ್ಬ ಗೊಲ್ಲನನ್ನು ಕಂಡು ತನ್ನ ಬಾಯಲ್ಲಿಯ ತಾಂಬೂಲವನ್ನು ಅವನಿಗೆ ಕೊಟ್ಟು ಅದನ್ನು ಅರಸನ ಹೆಂಡತಿಗೆ ತಿನ್ನಲಿಕ್ಕೆ ಕೊಟ್ಟಿದ್ದಾದರೆ ಆಕೆಯು ಕೂಡಲೆ ಗರ್ಭಿಣಿಯಾಗುವಳೆಂದು ತಿಳಿಸಿದನು. ಗೊಲ್ಲನು ಸಿದ್ಧೇಶ್ವರ ಸ್ವಾಮಿಗೆ ತನ್ನ ಕುರಿಗಳನ್ನು ಕಾಯಲಿಕ್ಕೆ ಹೇಳಿ ತಾನು ಅರಸನ ಬಳಿಗೆ ಹೋದನು. ಇದನ್ನು ಅರಸನು ತಿಳಿದು ಆ ತಾಂಬೂಲವನ್ನು ತಿನ್ನಲಿಕ್ಕೆ ತನ್ನ ರಾಣಿಗೆ ಹೇಳದನು. ಆದರಿಂದ ರಾಣಿಯು ಗರ್ಭಿಣಿಯಾದಳು. ಅರಸನು ಆ ಜಂಗಮನ್ನು ಕಾಣಲಿಕ್ಕೆ ಬರಲು ಅಷ್ಟರಲ್ಲಿ ಅವನು ಅಲ್ಲಿಂದ ಅದೃಶ್ಯನಾಗಿದ್ದನು. ಆ ಜಂಗಮನು ರಾಮೇಶ್ವರನೇ ಎಂದು ಭಾವಿಸಿ ಅರಸನು ಆ ದೇವಾಲಯಕ್ಕೆ ಬಹಳ ಭಕ್ತಿಯಿಂದ ನಡೆದುಕೊಳ್ಳಹತ್ತಿದನು. ರಾಣಿಯಿಂದ ಹುಟ್ಟಿದ ಮಗನಿಗೆ ಮುದಿನಾಯಕನೆಂಬ ಹೆಸರನ್ನಿಟ್ಟನು. ರಾಜನು ಹರ್ಷಿತನಾಗಿ ಅಸಂಖ್ಯ ಬ್ರಾಹ್ಮಣರ ಭೋಜನವನ್ನು ಮಾಡಿಸಿದನು. ಆದರೆ ಮುದಿಯಪ್ಪನಾಯಕನು ಜಂಗಮನ ತಾಂಬೂಲ ಪ್ರಸಾದದಿಂದ ಉತ್ಪನ್ನನಾದ ಕಾರಣ ಹುಟ್ಟಿದ ಕೂಡಲೆ ಏನನ್ನೂ ಆಹಾರವಾಗಿ ತೆಗೆದುಕೊಳ್ಳದೆ ಹೋದನು. ಆಗ ಸಿದ್ಧೇಶ್ವರ ದೇವರು ಒಬ್ಬರ ಮೈಯಲ್ಲಿ ಬಂದು ಈ ಮಗುವಿಗೆ ಲಿಂಗಧಾರಣವನ್ನು ಮಾಡಿದ್ದಾದರೆ ಅದು ಆಹಾರವನ್ನು ಸ್ವೀಕರಿಸುವದೆಂದು ಅಪ್ಪಣೆಕೊಡಿಸಿದನು. ಆ ಪ್ರಕಾರ ಲಿಂಗಧಾರಣೆ ಆಗಲು ಮಗುವು ಕಣ್ಣು ತೆರೆದು ಆಹಾರವನ್ನು ತೆಗೆದುಕೊಳ್ಳಹತ್ತಿತು. ಮುದಿಯಪ್ಪನು ಮುಂದೆ ವೀರಶೈವ ಧರ್ಮದಂತೆ ಆಚರಿಸುತ್ತ ವೈಭವ ಸ್ಥಿತಿಗೆ ಬಂದನು. ಭೈರವ ನಾಯಕನು ಶಕೆ ೧೫೦೦ ಸರ್ವಜಿತು ಸಂವತ್ಸರದಲ್ಲಿ ತೀರಿಕೊಂಡನು.

ಮುದಿಯಪ್ಪ ನಾಯಕ (೧೫೭೮—೧೬೧೮):—ಮುದಿಯಪ್ಪ ನಾಯಕನು ರಾಜ್ಯವಾಳುತ್ತಿರಲು ಆನೇಗುಂದಿ ರಾಜಧಾನಿಯಲ್ಲಿ ಕರಿಯಪ್ಪ ನಾಯಕನೆಂಬವನಿದ್ದನು. ಈ ಕರಿಯಪ್ಪ ನಾಯಕನಿಗೆ ಚಿಕ್ಕಪ್ಪ ನಾಯಕ, ಭೋಜಯ್ಯಾ ನಾಯಕ, ನಲ್ಲೂರಿ ನಾಯಕ ಮತ್ತು ಮೂಗಿ ನಾಯಕರೆಂಬ ನಾಲ್ಕು ಜನ ಮಕ್ಕಳಿದ್ದರು. ಈ ನಾಯಕರಿಗೆ ಮುದಿಯಪ್ಪ ನಾಯಕನು ಇದ್ದ ಪ್ರದೇಶವು ಕೊಡಲ್ಪಡಲು ಕರಿಯಪ್ಪ ನಾಯಕನು ಹಾಗಲಹಳ್ಳಿಯಲ್ಲಿ, ಭೋಜಪ್ಪ ನಾಯಕನು ಹೊಸಕೇರಿಯಲ್ಲಿ, ನಲ್ಲೂರಿ ನಾಯಕನು ಅಳಲಗಟ್ಟಿದಲ್ಲಿ, ಮೂಗಿ ನಾಯಕನಿಗೆ ಕೋಟಿ, ನಿಟ್ಟೂರು,

ತ್ಯಾಗಟೂರು, ಆರಲಗೇರಿ ಈ ಸ್ಥಳಗಳು, ಈ ಪ್ರಕಾರ ಇವರು ಆಯಾ ಸ್ಥಳಗಳಲ್ಲಿ ಇರತೊಡಗಿದರು. ಮುಂದೆ ಕರಿಯಪ್ಪ ನಾಯಕನು ತೀರಿಕೊಳ್ಳಲು ಅವನ ಮಕ್ಕಳೆಲ್ಲರೂ ತಮ್ಮಷ್ಟಕ್ಕೆ ತಾವು ಸ್ವತಂತ್ರರಾಗಿ ಇರತೊಡಗಿದರು. ಈ ಸಂಧಿಯನ್ನು ಸಾಧಿಸಿ ಮುದಿಯಪ್ಪನಾಯಕನು ದಂಡೆತ್ತಿ ಹೋಗಿ ಅವರನ್ನು ಸೋಲಿಸಿ, ಹಾಗಲಹಳ್ಳಿ, ಹೊಸಕೆರೆ, ಆಳಲಗಟ್ಟೆ ಇವುಗಳನ್ನು ಆಕ್ರಮಿಸಿದರು. ಆ ಮೇಲೆ ನೊಣಬನಕೆರೆ ಎಂಬ ಸ್ಥಳಗಳನ್ನು ಆಕ್ರಮಿಸಿ ಸುತ್ತಲಿನ ಪ್ರದೇಶಗಳನ್ನೆಲ್ಲ ಕೈವಶ ಮಾಡಿಕೊಂಡರು. ಈ ಪ್ರಕಾರ ಮುದಿಯಪ್ಪನಾಯಕನು ಸುತ್ತಲಿನ ಪ್ರದೇಶವನ್ನು ತನ್ನ ರಾಜ್ಯಕ್ಕೆ ಸೇರಿಸಿಕೊಂಡು ಚಿಗನಾಯಕನ ಹಳ್ಳಿಯಲ್ಲಿ ರಾಜ್ಯವಾಳಹತ್ತಿದನು. ಆಗ ಅವನ ಆದಾಯವು ೧ ಲಕ್ಷ ರೂಪಾಯಿಯ ವರೆಗೆ ಹೋಗಿತ್ತು. ಇದು ಶಕೆ ೧೫೩೦ ನಳ ಸಂವತ್ಸರದಲ್ಲಿ ಸಂಭವಿಸಿತು.

ಮುಂದೆ ಮುದಿಯಪ್ಪನಾಯಕನು ಹಾಗಲಹಳ್ಳಿಯನ್ನು ಮೂರು ದಿಕ್ಕುಗಳಲ್ಲಿ ವಿಸ್ತಾರವಾಗಿ ಬೆಳಿಸಲು ಅನುಕೂಲ ಮಾಡಿಕೊಟ್ಟನು. ಮತ್ತು ಅದಕ್ಕೆ ಹಾಗಲವಾಡಿ ಎಂಬ ಹೆಸರನ್ನಿಟ್ಟನು. ಇದು ಶಕೆ ೧೫೩೨ ರಲ್ಲಿ ಸಂಭವಿಸಿತು.

ಮುದಿಯಪ್ಪನಾಯಕನು ಚಿಗನಾಗನಹಳ್ಳಿಯಲ್ಲಿ ಶಕೆ ೧೫೪೦ ಫಾಲ್ಗುಣ ಬಹುಳ ವದಿ ೩೦ ನೆಯ ದಿವಸ ಮರಣಹೊಂದಿದನು.

ಇಮ್ಮಡಿ ಭೈರಪ್ಪನಾಯಕಃ— (೧೬೧೮—೧೫೪೫) ಮುದಿಯಪ್ಪನಾಯಕನಿಗೆ ಇಮ್ಮಡಿ ಭೈರಪ್ಪನಾಯಕನೆಂಬ ಒಬ್ಬ ಮಗನಿದ್ದನು. ಇವನೇ ಮುಂದೆ ಈ ರಾಜ್ಯಕ್ಕೆ ಅಧಿಪತಿಯಾಗಿ ಚಿಗನಾಯಕನಹಳ್ಳಿಯಲ್ಲಿ ರಾಜ್ಯವಾಳಹತ್ತಿದನು. ಇವನ ಕಾಲಕ್ಕೆ ರಣದುಲ್ಲಾಖಾನನು ಮೈಸೂರು ದೊರೆಗಳ ಮೇಲೆ ದಂಡೆತ್ತಿ ಹೊರಟಿದ್ದನು. ಆಗ ಅವನಿಗೂ ಮೈಸೂರು ದೊರೆಗಳಿಗೂ ಕಾಳಗವಾಗಿ ಶ್ರೀರಂಗಪಟ್ಟಣದ ನೆರೆಯಲ್ಲಿ ರಣದುಲ್ಲಾಖಾನನು ಅಪಜಯಹೊಂದಿದನು. ಆಗ ರಣದುಲ್ಲಾಖಾನನು ಚಿಗನಾಯಕನಹಳ್ಳಿಗೆ ಓಡಿಬಂದು ತನಗೊಂದು ಪಲ್ಲಕ್ಕಿಯನ್ನು ಕೊಡಲು ಭೈರಪ್ಪನಾಯಕನಿಗೆ ಹೇಳಿಕಳಿಸಿದನು. ಆದರೆ ಭೈರಪ್ಪನಾಯಕನು ಮೈಸೂರು ಧೊರೆಗಳ ಕೂಡ ಮಿತ್ರತ್ವದಿಂದ ವರ್ತಿಸುತ್ತಿದ್ದುದರಿಂದ ರಣದುಲ್ಲಾಖಾನನಿಗೆ ಪಲ್ಲಕ್ಕಿಯನ್ನು ಕೊಡಲು ಅಲ್ಲಗ

ಳಿದನು. ಆಗ ರಣದುಲ್ಲಾಖಾನನು ಸಿಟ್ಟಿಗೆದ್ದು ತನ್ನ ರಾಹುತರ ಪಡೆಯೊಂದಿಗೆ ಚಿಗನಾಯಕನ ಹಳ್ಳಿಗೆ ಮುತ್ತಿಗೆ ಹಾಕಿದನು. ಆಗ ಭೈರಪ್ಪನಾಯಕನು ಜೇರಿಗೆ ಬಂದು ತನ್ನ ರಾಜ್ಯದ 2/3 ಭಾಗವನ್ನು ರಣದುಲ್ಲಾಖಾನನಿಗೆ ಕೊಟ್ಟು 1/3 ಭಾಗವನ್ನು ತಾನು ಇಟ್ಟುಕೊಳ್ಳುವೆನೆಂದು ಒಪ್ಪಂದ ಮಾಡಿಕೊಂಡನು. ಭೈರಪ್ಪನಾಯಕನು ಹಾಗಲವಾಡಿ ಕಡೆಗಿನ ಭಾಗವನ್ನು ತೆಗೆದುಕೊಂಡನು. ಮುಂದೆ ರಣದುಲ್ಲಾಖಾನನು ಶ್ರೀರಂಗ ಪಟ್ಟಣದ ಮೇಲೆ ಸಾಗಿಹೋಗಲು ಮೈಸೂರು ಅರಸನು ರಣದುಲ್ಲಾಖಾನನ ಕೂಡ ಒಪ್ಪಂದ ಮಾಡಿಕೊಂಡನು. ಈ ಕಾಲಕ್ಕೆ ಭೈರವನಾಯಕನ ರಾಜ್ಯದ ಬಹು ಭಾಗವು ಅವನ ಕೈ ತಪ್ಪಿ ಮೈಸೂರಿನ ಶವಾಯಿತು ಮುಂದೆ ಶಕೆ ೧೫೫೨ ರಲ್ಲಿ ಇಮ್ಮಡಿ ಭೈರಪ್ಪನಾಯಕನು ಹಾಗಲವಾಡಿಗೆ ಬಂದು ನನ್ನ ರಾಜ್ಯದ 1/3 ಭಾಗವನ್ನು ಹಾಗಲವಾಡಿಯಲ್ಲಿದ್ದುಕೊಂಡು ಆಳಹತ್ತಿದನು. ಈ ಪ್ರಕಾರ ಅವನು ಪ್ರಭವಸಂವತ್ಸರದಿಂದ ಜಯ ಸಂವತ್ಸರದ ವರೆಗೆ ಒಟ್ಟು ೨೭ ವರ್ಷ ರಾಜ್ಯವಾಳಿದನು.

ಚನ್ನಬಸಪ್ಪ (೧೬೪೫—೧೬೭೩):— ಇಮ್ಮಡಿ ಭೈರಪ್ಪನಾಯಕನಿಗೆ ಚನ್ನಬಸಪ್ಪನಾಯಕನೆಂಬ ಮಗನಿದ್ದನು. ಇವನೇ ಮುಂದೆ ರಾಜ್ಯವಾಳತೊಡಗಿದನು. ಚನ್ನಬಸಪ್ಪನು ೨೮ ವರ್ಷ ೧೧ ತಿಂಗಳು ರಾಜ್ಯವಾಳಿ ಸಿದ್ಧಾರ್ಥಿ ಸಂವತ್ಸರದಲ್ಲಿ ಮರಣಹೊಂದಿದನು.

ರಾಮಪ್ಪನಾಯಕ (೧೬೭೩—೧೭೦೪):— ಚನ್ನಬಸಪ್ಪನಾಯಕನಿಗೆ ರಾಮಪ್ಪ ಮತ್ತು ಸಂಗಪ್ಪ ಎಂಬ ಇಬ್ಬರು ಮಕ್ಕಳಿದ್ದರು. ಇವರಲ್ಲಿ ರಾಮಪ್ಪನಿಗೆ ಪಟ್ಟವಾಯಿತು. ಇವನು ಹಾಗಲವಾಡಿಯಲ್ಲಿ ಒಂದು ದೊಡ್ಡ ಕೆರೆಯನ್ನು ಕಟ್ಟಿಸಿದನು. ಅವನ ಹೆಂಡತಿ ಕಲ್ಲಮ್ಮವ್ವ ಎಂಬವಳು ಇದ್ದು ಅವಳು ಗಳಿಗೆ ಕೆರೆಯಲ್ಲಿಯು ಕೆರೆಯನ್ನು ಕಟ್ಟಿಸಿದಳು. ರಾಮಪ್ಪನಾಯಕನು ವಿರೋಧಿಸವಂತ್ಸರದಲ್ಲಿ ತೀರಿಕೊಂಡನು. ಅವನು ೩೧ ವರ್ಷ ರಾಜ್ಯವಾಳಿದನು.

ಚನ್ನಬಸಪ್ಪನಾಯಕಃ— (೧೭೦೪—೧೭೨೫) ರಾಮಪ್ಪನಾಯಕನಿಗೆ ಮಕ್ಕಳಿರಲಿಲ್ಲ. ಅವನ ತಮ್ಮ ಸಂಗಪ್ಪನಿಗೆ ಚನ್ನಬಸಪ್ಪನೆಂಬ ಒಬ್ಬ ಮಗನಿದ್ದನು. ಅವನೇ ಪಟ್ಟದ ಮೇಲೆ ಕೂಡ್ರಿಸಲ್ಪಟ್ಟನು. ಇವನು ಆಳುವ ಕಾಲಕ್ಕೆ ಚಿತ್ರಕಲ್ಲದುರ್ಗದ ನಾಯಕನು ಹಾಗಲವಾಡಿಯ ರಾಜ್ಯವನ್ನು ಅಭಿಯೋಗಿಸಿ ಹರತಿ ಎಂಬ ಕೋಟೆಯನ್ನು ಮುತ್ತಿದನು. ಆಗ

ಚೆನ್ನಬಸಪ್ಪನು ತನ್ನ ದಂಡಾಳುಗಳಿಂದ ಕೂಡಿಕೊಂಡು ಅಲ್ಲಿಗೆ ಹೋಗಿ ಮುತ್ತಿಗೆಯನ್ನೆಬ್ಬಿಸಿದನು. ಆದರೆ ಬಲಿಷ್ಠನಾದ ಚಿತ್ರಕಲ್ಲದುರ್ಗದ ನಾಯಕನು ಪುನಃ ಆ ಕೋಟೆಯನ್ನು ಲಗ್ಗೆ ಏರಿ ಅದನ್ನು ತೆಗೆದುಕೊಂಡನು.

ಚನ್ನಬಸವಪ್ಪನಾಯಕನು ೨೧ ವರ್ಷ ರಾಜ್ಯವಾಳಿ ಕೀಲಕಸಂವತ್ಸರದಲ್ಲಿ ತೀರಿಕೊಂಡನು.

ಮುದಿಯಪ್ಪನಾಯಕಃ — (೧೭೩೫—೧೭೪೬) ಚನ್ನಬಸಪ್ಪನಾಯಕನ ತರುವಾಯ ಅವನ ಮಗ ಮುದಿಯಪ್ಪನಾಯಕನು ಪಟ್ಟವನ್ನೇರಿ ರಾಜ್ಯವಾಳತೊಡಗಿದನು. ಈ ಮುದಿಯಪ್ಪನಾಯಕನು ಅತ್ಯಂತ ಧರ್ಮಿಷ್ಠನಾಗಿದ್ದನು. ಇವನು ಬಹಳ ಜಮೀನು ಧರ್ಮಾರ್ಥ ದಾನಕೊಟ್ಟನು. ಬನಾರಸದಲ್ಲಿ ಒಂದು ಧರ್ಮಛತ್ರವನ್ನು ಕಟ್ಟಿಸಿದನು. ಆತನು ಮುದ್ವೀರಸ್ವಾಮಿಗಳೆಂಬವರ ಕಡೆಯಿಂದ ಉಪದೇಶವನ್ನು ಹೊಂದೀಯಾವಾಗಲೂ ಧರ್ಮಕಾರ್ಯಗಳಲ್ಲಿ ಆಸಕ್ತನಾಗಿದ್ದನು. ಅವನು ಅತ್ಯಂತ ವಿದ್ವಾಂಸನಾಗಿದ್ದು ಒಂದು ಗ್ರಂಥವನ್ನು ಬರೆದಿರುವನು. ಅವನು ೨೧ ವರ್ಷ ೫ ತಿಂಗಳು ರಾಜ್ಯವಾಳಿ ವಿಭವ ಸಂವತ್ಸರದಲ್ಲಿ ತನ್ನ ಹಿರಿಯಮಗನಿಗೆ ಪಟ್ಟಗಟ್ಟಿ ರಾಜ್ಯತ್ಯಾಗವನ್ನು ಮಾಡಿದನು. ಮತ್ತು ಸಾಯುವ ವರೆಗೆ ಧರ್ಮಕಾರ್ಯಗಳಲ್ಲಿ ನಿರತನಾಗಿ ಉಳಿದನು.

ಮುದವೀರಪ್ಪನಾಯಕಃ — (೧೭೪೬—೧೭೬೦) ಮುದಿಯಪ್ಪನಾಯಕನಿಗೆ ಮುದವೀರಪ್ಪನಾಯಕ, ಮತ್ತು ಪ್ರಸನ್ನರಾಮಪ್ಪನಾಯಕ ಎಂಬ ಇಬ್ಬರು ಮಕ್ಕಳಿದ್ದರು. ಇವರಲ್ಲಿ ಮುದವೀರಪ್ಪನಾಯಕನು ರಾಜ್ಯಪಟ್ಟಾಭಿಷೇಕವನ್ನು ಹೊಂದಿದನು ಇವನು ತನ್ನ ತಂದೆಯಂತೆಯೇ ಅತ್ಯಂತ ಧರ್ಮಿಷ್ಠನಾಗಿದ್ದನು. ಇವನ ಕಾಲಕ್ಕೆ ಸಲಾಬತಜಂಗನು ಚಿತ್ರಕಲ್‌ದುರ್ಗದ ಅಧಿಪತಿಯ ರಾಜ್ಯವನ್ನು ಅಭಿಯೋಗಿಸಿದನು. ಆಗ ಮುದಿವೀರಪ್ಪನು ಅವನೊಡನೆ ಸಂಧಾನ ಮಾಡಿಕೊಂಡನು. ಆಗ ಚಿತ್ರಕಲ್ ದುರ್ಗದ ದಂಡಾಳುಗಳು ಹಾಗಲವಾಡಿಯ ಸಮೀಪದಲ್ಲಿ ಬರಲು ಅವರು ತಮ್ಮ ಮಿತ್ರದಂಡಾಳುಗಳೆಂದು ತಿಳಿದು ಐವತ್ತು ಚಕ್ಕಡಿಗಳನ್ನು ಅವರಿಗೆ ಕಳಿಸಲುದ್ಯುಕ್ತನಾದನು. ಆಗ ಸಲಾಬತಜಂಗನು ಸಿಟ್ಟಿಗೇರಿ ಪಟ್ಟಣದ ಮೇಲೆ ದಾಳಿ ಇಟ್ಟು ಖಜೀನಿಯನ್ನು ಸುಲಿದು ಆ ಸ್ಥಳವನ್ನು ಆಕ್ರಮಿಸಿ ಸೀರ್ಯದ ದಿಲಾವರಖಾನನಿಗೆ ಅದನ್ನು ಕೊಟ್ಟು ತಿರುಗಿ ಹೊರಟು ಹೋದನು.

ಆದರೆ ಆ ದಿನ ರಾತ್ರಿ ಮುದಿವೀರಪ್ಪನಾಯಕನು ಮೊಂಚಲದೊರೆ ಗ್ರಾಮದ ಚನ್ನರಾವುತನ ಕಡೆಗೆ ಓಡಿ ಹೋಗಿ ಆಶ್ರಯ ಹೊಂದಿದನು. ಅಲ್ಲಿಂದ ಅವನು ಮೂಗಿನಾಯಕನ ಕೋಟೆಗೆ ಓಡಿ ಹೋದನು. ಅಲ್ಲಿ ಅವನು ದಂಡಾಳುಗಳನ್ನು ಕೂಡಿಸಿ ಹಾಗಲವಾಡಿಯನ್ನು ಮುತ್ತಿ ಅದನ್ನು ಪುನಃ ಕೈವಶ ಮಾಡಿಕೊಂಡನು. ಮುಂದೆ ದಿಲಾವರಖಾನನು ಅವನ ಧೈರ್ಯವನ್ನು ನೋಡಿ ಅವನ ಮೇಲೆ ಏನೂ ಕೈ ಎತ್ತಲಿಲ್ಲ. ಮುಂದೆ ಮಂಡಲದೊರೆ ಎಂಬ ಗ್ರಾಮವೂ ಮುದವೀರಪ್ಪನಾಯಕನ ಕೈವಶವಾಯಿತು. ಮುದವೀರಪ್ಪನಾಯಕನು ಹದಿನಾಲ್ಕು ವರ್ಷ ಎರಡು ತಿಂಗಳು ರಾಜ್ಯವಾಳಿದನು.

ಪ್ರಸನ್ನರಾಮಪ್ಪ ಭೂಪಾಲ— ( ೧೭೬೦—೧೭೬೨ ) ಮುದಿವೀರಪ್ಪ ನಾಯಕನಿಗೆ ಪ್ರಸನ್ನರಾಮಪ್ಪನೆಂಬ ಮಗನಿದ್ದು ಅವನು ಪಟ್ಟವೇರಿದನು. ಇವನ ಕಾಲಕ್ಕೆ ಹೈದರಅಲ್ಲಿಯು ಮೈಸೂರ ರಾಜ್ಯದಲ್ಲಿ ಅತ್ಯಂತ ಪ್ರಬಲನಾಗಿದ್ದನು. ಇವನು ಇಕ್ಕೇರಿ ರಾಜ್ಯವನ್ನು ಅಭಿಯೋಗಿಸಿ ಬಿದನೂರು ಕೋಟೆಯನ್ನು ಕೈವಶ ಮಾಡಿಕೊಂಡನು. ಆ ಮೇಲೆ ಹೈದರಅಲ್ಲಿಯು ಹಾಗಲವಾಡಿಯನ್ನು ಆಕ್ರಮಿಸಲಿಕ್ಕೆ ತನ್ನ ದಂಡನ್ನು ಕಳಿಸಿದನು. ಆಗ ಅರಸನು ತನ್ನ ರಾಯಭಾರಿಗಳನ್ನು ಹೈದರ ಅಲ್ಲಿಯ ಕಡೆಗೆ ಕಳಿಸಿ ಬಹಳ ಹಣ ಕಪ್ಪ ಕೊಟ್ಟು ಒಪ್ಪಂದ ಮಾಡಿಕೊಂಡನು. ಪ್ರಸನ್ನ ರಾಮಪ್ಪನು ಎರಡು ವರ್ಷ ಎರಡು ತಿಂಗಳು ರಾಜ್ಯವಾಳಿ ತೀರಿಕೊಂಡನು.

ಚನ್ನಬಸಪ್ಪನಾಯಕ—(೧೭೬೨—೧೭೭೫) ಪ್ರಸನ್ನರಾಮಪ್ಪನ ತರುವಾಯ ಅವನ ಮಗ ಚನ್ನಬಸಪ್ಪನಾಯಕನು ಸಿಂಹಾಸನವನ್ನೇರಿದನು. ಎಲ್ಲಿಯ ವರೆಗೆ ಹಾಗಲವಾಡಿಯ ರಾಜ್ಯವು ೧ ಲಕ್ಷ ರೂಪಾಯಿಯ ಸೀಮೆಯಾಗಿತ್ತೋ ಆ ವರೆಗೆ ಅದರ ಅರಸರನ್ನು ಯಾರೂ ಕೆಣಕಲಿಕ್ಕೆ ಎದೆ ಮಾಡುತ್ತಿದ್ದಿಲ್ಲ. ಆದರೆ ಯಾವಾಗ್ಗೆ ರಣದುಲ್ಲಾಖಾನನು ಅವರ ರಾಜ್ಯದ ಬಹು ಭಾಗವನ್ನು ಆಕ್ರಮಿಸಿದನೋ ಆಗ ಅವರು ದುರ್ಬಲರಾಗಿ ಸಮೀಪದ ಅಧಿಪತಿಗಳಿಗೆ ತಮ್ಮ ರಕ್ಷಣಾರ್ಥ ಕಾಣಿಕೆಗಳನ್ನು ಕೊಡುವ ಪ್ರಸಂಗವು ಬಂದೊದಗಿತು. ಆ ಪ್ರಕಾರ ಚನ್ನಬಸಪ್ಪನಾಯನು ಮೈಸೂರ ದೊರೆಗೆ ೫೦೦ ವರಾಹಗಳನ್ನು ಸೀರ್‍ಯದ ನವಾಬನಿಗೆ ೫೦೦ ವರಾಹಗಳನ್ನು ಮತ್ತು ಮರಾಠರ ಮುರಾರಿರಾಯಯನಿಗೆ ೨೦೦ ವರಾಹಗಳನ್ನು ಕೊಡುತ್ತಬಂದನು. ಈ ಕಠಿಣ ಕಾಲದಲ್ಲಿ ಚನ್ನಬಸಪ್ಪನಾಯಕನು ತನ್ನ ರಾಜ್ಯವನ್ನು ಸಂರ

ಕ್ಷಿಸಿದ್ದಲ್ಲದೆ ಚೇಳೂರು, ಬಿದರಿ, ತುಮಕೂರು, ಕಡಪಾ ಕಂದೀಕೆರೆ, ಚಿಕ್ಕನಾಯಕನಹಳ್ಳಿ, ತುರುವೆಕೆರೆ ಈ ಗ್ರಾಮಗಳಲ್ಲಿಯುವರು ಅನೇಕ ಸಂಕಟಗಳಿಗೆ ಒಳಗಾಗಿ ರಕ್ಷಣಾರ್ಥ ಇವನ ಆಶ್ರಯ ಬಯಸಲು ಅವರನ್ನು ಸಂರಕ್ಷಿಸುತ್ತ ಬಂದನು. ಹಾಗಲವಾಡಿ ರಾಜ್ಯವು ಮೈಸೂರ ರಾಜರ ಮೇರೆಗೆ ಹೊಂದಿ ಇದ್ದು ಈ ಮೈಸೂರು ಸಂಸ್ಥಾನದಲ್ಲಿಯ ಅನೇಕರು ಕಷ್ಟನಷ್ಟಗಳಿಗೆ ಗುರಿಯಾಗಿ ಹಾಗಲವಾಡಿಗೆ ಓಡಿಬರುತ್ತಿದ್ದರು. ಅವರೆಲ್ಲರನ್ನೂ ರಾಜನು ಕಾಪಾಡುತ್ತಿದ್ದನು. ಇದರಿಂದ ಈ ರಾಜ್ಯವು "ಧರ್ಮಸಂಸ್ಥಾನ" ಎಂಬ ಹೆಸರನ್ನು ಆ ಕಾಲಕ್ಕೆ ಜನರಲ್ಲಿ ಪಡೆಯಿತು.

ಆದರೆ ಹೈದರಅಲ್ಲಿಯು ಚನ್ನಬಸಪ್ಪನಾಯಕನಿಗೆ ತೊಂದರೆ ಕೊಡುವುದನ್ನು ಬಿಡಲಿಲ್ಲ. ಅವನು ನಗರದಲ್ಲಿದ್ದಾಗ್ಗೆ ಚನ್ನಬಸಪ್ಪನನ್ನು ತನ್ನ ಕಡೆಗೆ ಕರಿಸಿಕೊಂಡು ೫೦ ಸಾವಿರ ರೂಪಾಯಿ ಕಪ್ಪವನ್ನು ಬೇಡಿದನು. ಅದಕ್ಕೆ ಚನ್ನಬಸಪ್ಪನು ೧೮ ಸಾವಿರ ರುಪಾಯಿ ಕೊಡಲು ಒಪ್ಪಿದನು, ಆದರೆ ಅಷ್ಟು ರೂಪಾಯಿಗಳನ್ನು ತತ್ಕ್ಷಣ ಕೊಡಲು ಅವನಿಗೆ ಆಗದಿರಲು ಹೈದರಅಲ್ಲಿಯು ಚನ್ನಬಸಪ್ಪನನ್ನು ತನ್ನ ರಾಜಧಾನಿಗೆ ಕಳಿಸಿಕೊಟ್ಟನು. ಚನ್ನಬಸಪ್ಪನು ಇಷ್ಟು ರೂಪಾಯಿಗಳನ್ನು ಶೇಖರಿಸಲು ನಾರಣಪ್ಪ ಎಂಬವನನ್ನು ಹಾಗಲವಾಡಿಗೆ ಕಳಿಸಿಕೊಟ್ಟನು. ಆದರೆ ಚನ್ನಬಸಪ್ಪನು ತನ್ನ ರಾಜಧಾನಿಯನ್ನು ಕಾಣದೆ ಶಕೆ ೧೬೯೭ ರಲ್ಲಿ ಶ್ರೀರಂಗ ಪಟ್ಟಣದಲ್ಲಿಯೇ ಮಡಿದನು.

ಮುದ್ರಾಜಪ್ಪನಾಯಕಃ— ಚನ್ನಬಸಪ್ಪನ ತರುವಾಯ ಮುದ್ರಾಜಪ್ಪನು ಪಟ್ಟವೇರಿದನು. ನಾರಣಪ್ಪನು ಹೈದರಅಲ್ಲಿಯ ಕೂಡ ಇವನನ್ನು ಪಟ್ಟವೇರಗೊಡಲು ಸಂಧಾನ ನಡಿಸಲು ಹೈದರ ಅಲ್ಲಿಯು ಇದಕ್ಕೆ ಒಪ್ಪಿಗೆಯನ್ನು ಕೊಟ್ಟನು. ಆದರೆ ಅವನು ಪಟ್ಟವೇರಿದ ಬಳಿಕ ಹೈದರಅಲ್ಲಿಗೆ ಕೊಡತಕ್ಕ ಕಪ್ಪವು ಸಂಸ್ಥಾನದಿಂದ ಸಲ್ಲದೆ ಹೋಯಿತು. ಆದರೆ ಅರಸನು ಇನ್ನೂ ಚಿಕ್ಕ ವಯಸ್ಸಿನವನಿದ್ದದರಿಂದ ಹೈದರಅಲ್ಲಿಯು ಅವನ ಮೇಲೆ ಆ ಕಪ್ಪವನ್ನು ಕೊಡುವ ಬಗ್ಗೆ ಒತ್ತಾಯಮಾಡಲಿಲ್ಲ. ಆದರೆ ಇದರ ಬದಲು ಅರಸನ ಕಡೆಗೆ ಭೋಗಸಮುದ್ರ, ಶಿವಪುರ, ಎಕ್ಕಲಕಟ್ಟೆ, ಇಷ್ಟು ಮಾತ್ರ ಸೀಮೆಯನ್ನು ಇಟ್ಟು ಉಳಿದ ಭಾಗವನ್ನೆಲ್ಲ ಹೈದರಲ್ಲಿಯು ತನ್ನ ರಾಜ್ಯಕ್ಕೆ ಸೇರಿಸಿಕೊಂಡನು.

ಈ ಪ್ರಕಾರ ಈ ವೃತ್ತಾಂತವಿದ್ದು ಇದನ್ನು ನಾವು ಇಲ್ಲಿ ಕೊಟ್ಟಿರುತ್ತೇವೆ. ಇದರ ಮೇಲಿಂದ ಹಾಗಲವಾಡಿ ಸಂಸ್ಥಾನವು ಬಲಾಢ್ಯ

ರಾಜರ ಮಧ್ಯದಲ್ಲಿ ಸಿಕ್ಕಿಕೊಂಡು ಪೇಚಾಡುವ ಪ್ರಸಂಗಗಳು ಆಗಿಂದಾಗ್ಗೆ ಬರುತ್ತಿದ್ದದ್ದು ತೋರಿಬರುತ್ತವೆ. ಇದಕ್ಕಾಗಿಯೇ ಹಾಗಲವಾಡಿ ಸಂಸ್ಥಾನವು ಅತ್ಯಂತ ಕಂಗೆಟ್ಟ ರಾಜ್ಯವೆಂದು ಅದರ ಪ್ರಸಿದ್ಧಿ ಇದ್ದದ್ದು ಯಥಾರ್ಥವೆಂದು ನಮಗೆ ತೋರುತ್ತದೆ. ಆದರೂ ಇಲ್ಲಿಯ ರಾಜರು ಇಂಥ ಪರಿಸ್ಥಿತಿಯಲ್ಲಿ ಅತ್ಯಂತ ಧೈರ್ಯದಿಂದ ಮತ್ತು ಚಾತುರ್ಯದಿಂದ ತಮ್ಮ ಅಸ್ತಿತ್ವವನ್ನು ಕಾಯ್ದುಕೊಂಡರು.

ಮೇಲ್ಕಂಡ ವಿವರಣೆಗಳ ಮೇಲಿಂದ ಹಾಗಲವಾಡಿ ಸಂಸ್ಥಾನವು ವಿಜಯನಗರದ ಅರಸರ ಕಾಲಕ್ಕೆ ೧೬ ನೇ ಶತಮಾನದ ಅಂತ್ಯಭಾಗದಲ್ಲಿ ಸ್ಥಾಪಿತವಾದದ್ದು ತಿಳಿದುಬರುತ್ತದೆ. ಇವರ ಆರಂಭದ ದಿಶೆಯಲ್ಲಿ ಈ ಅರಸುಗಳ ಪೂರ್ವಜರು ಹಾಗಲವಾಡಿಯ ಸಮೀಪದಲ್ಲಿರುವ ಗುಡ್ಡಗಾಡು ಪ್ರದೇಶದಲ್ಲಿ ನಿಂತುಕೊಂಡು ಮುಂದೆ ಕ್ರಮವಾಗಿ ಸುತ್ತಲಿನ ಪ್ರದೇಶವನ್ನು ಅಧೀನಮಾಡಿಕೊಳ್ಳುತ್ತ ತಮ್ಮ ರಾಜ್ಯವನ್ನು ವಿಸ್ತರಿಸಿದರು. ಮೊದಲು ಚಿಕ್ಕನಾಯಕನ ಹಳ್ಳಿಯೇ ಇವರ ರಾಜಧಾನಿಯಾಗಿತ್ತು. ಈ ಅರಸರಲ್ಲಿ ಭೈರವನಾಯಕನೂ ಅವನ ಮಗ ಮುದಿಯಪ್ಪನಾಯಕನೂ ಬಹಳ ಪ್ರಸಿದ್ಧಿಗೆ ಬಂದರು. ಮುದಿಯಪ್ಪನಾಯಕನ ಕಾಲದಲ್ಲಿ ರಾಜ್ಯವು ಬಹಳ ವಿಸ್ತಾರಗೊಂಡಿತು. ಮತ್ತು ಇವನೇ ಹಾಗಲವಾಡಿಗ್ರಾಮವನ್ನು ಬೆಳಿಸಿ ಅದನ್ನು ತನ್ನ ರಾಜಧಾನಿಯನ್ನಾಗಿ ಮಾಡಿಕೊಂಡನು.

ಆದರೆ ಮುದಿಯಪ್ಪನ ತರುವಾಯ ಅನೇಕ ಬಲಾಢ್ಯ ಎದುರಾಳಿಗಳ ಮೂಲಕ ರಾಜ್ಯದ ಬೆಳವಣಿಗೆಯು ನಿಂತುಹೋಯಿತು. ರಣದುಲ್ಲಾಖಾನನ ದಾಳಿ, ಸಿರ್ಯದ ನವಾಬನ ಮೇಲಾಟ, ಹೈದರಲ್ಲಿಯ ಮಹತ್ವಾಕಾಂಕ್ಷೆ ಮತ್ತು ಚಿತ್ರಕಲ್ಲದುರ್ಗದ ಪಾಳ್ಯಗಾರರ ಉಪಟಳ ಇವುಗಳ ಮೂಲಕ ಈ ರಾಜರಿಗೆ ಆಗಿಂದಾಗ್ಗೆ ಅನೇಕ ತೊಂದರೆಗಳು ಸಂಭವಿಸಿದವು. ಆದರೂ ಈ ಅರಸರು ತಮ್ಮ ಅಧೀನದಲ್ಲಿದ್ದ ಪ್ರಜೆಗಳ ಪರಿಪಾಲನೆಯಲ್ಲಿ ದಕ್ಷರಾಗಿ ವರ್ತಿಸುತ್ತಿದ್ದರು ಇದರಿಂದ ಇದಕ್ಕೆ ಧರ್ಮಸಂಸ್ಥಾನವೆಂಬ ಹೆಸರು ಪ್ರಾಪ್ತವಾಯಿತು. ಈ ಅರಸರು ಆರಂಭದಿಂದಲೂ ವೀರಶೈವ ಧರ್ಮಕ್ಕೆ ಮನ್ನಣೆಕೊಡುವವರಾಗಿ ಅದರಂತೆಯೇ ಆಚರಿಸುತ್ತ ಬಂದರು. ಈ ಅರಸರಲ್ಲಿ ಕೆಲವರು ಅತ್ಯಂತ ಧರ್ಮಿಷ್ಠರಾಗಿ ವರ್ತಿಸಿದರು. ೧೮ ನೇ ಶತಮಾನದ ಆರಂಭದಲ್ಲಿ ಆಳಿದ ಮುದಿ

ಯಪ್ಪನಾಯಕನು ಗ್ರಂಥಕಾರನಾಗಿ ಹೋಗಿರುವನು. ಅವನು ಯಾವ ಗ್ರಂಥವನ್ನು ಬರೆದನೋ ಎಂಬದು ನಮಗೆ ತಿಳಿಯದು. ಈ ಅರಸನು ಕಡೆಗೆ ಉಪದೇಶವನ್ನು ಹೊಂದಿ ರಾಜ್ಯಪರಿತ್ಯಾಗವನ್ನು ಮಾಡಿ ಧರ್ಮ ಕಾರ್ಯಗಳಲ್ಲಿ ಆಸಕ್ತನಾಗಿ ಕಡೆವರೆಗೆ ಉಳಿದನು. ಕಡೆಗೆ ಈ ರಾಜ್ಯವು ಹೈದರಲ್ಲಿಯ ಗ್ರಾಸಕ್ಕೆ ಭಾಜನವಾಗಿ ಬಹು ಸ್ವಲ್ಪ ಪ್ರದೇಶವನ್ನು ಉಳಿಸಿಕೊಂಡು ಬಾಳುತ್ತ ಬಂದಿತು.

## ಮೈಸೂರ ಗ್ಯಾಜೀಟಿಯರದಲ್ಲಿದ್ದ ವಿವರಣೆ.

ಈ ಅರಸುಗಳ ಬಗ್ಗೆ ಮೈಸೂರ ಗ್ಯಾಜಿಟಿಯರದಲ್ಲಿ ಕೆಳಗೆ ಕಾಣಿಸಿದ ವೃತ್ತಾಂತವು ಕೊಡಲ್ಪಟ್ಟಿದೆ. ಅದು ಏನಂದರೆ— ಹಾಗಲವಾಡಿಯ ಅಧಿಪತಿಗಳು ಚಿಕ್ಕನಾಯಕನ ಹಳ್ಳಿಯನ್ನು ಕಟ್ಟಿಸಿ ತುಮಕೂರು ಜಿಲ್ಹೆಯ ಪಶ್ಚಿಮ ದಿಕ್ಕಿನ ಬಹು ಭಾಗವನ್ನು ಆಕ್ರಮಿಸಿದರು. ಮುಂದೆ ಮೈಸೂರ ರಾಜರು ಈ ಅರಸರನ್ನು ಗೆದ್ದು ಅವರ ರಾಜ್ಯದ ದೊಡ್ಡ ಭಾಗವನ್ನು ಕೈವಶ ಮಾಡಿಕೊಂಡರು. ಹೈದರಲ್ಲಿಯು ಪ್ರಬಲನಾದ ಬಳಿಕ ಈ ಅರಸರ ಕಡೆಯಿಂದ ಅವನು ಕಪ್ಪವನ್ನು ಎತ್ತಹತ್ತಿದನು. ಮತ್ತು ಮುಂದೆ ಅವನ ಮಗನು ಅವರ ಉಳಿದ ರಾಜ್ಯವನ್ನೆಲ್ಲ ಕಸೆದುಕೊಂಡನು.

ಹಾಗಲವಾಡಿಯ ಅರಸರ ಮೂಲ ಪುರುಷನು ಎರೆಕಟ್ಟೆಯ ತಳವಾರನು. ಅವನ ಹೆಸರು ಸಾಲನಾಯಕ ಎಂದು ಇದೆ. ಈ ಸಾಲನಾಯಕನು ವಿಜಯನಗರದ ರಾಜ್ಯವು ಹಾಳಾದ ಬಳಿಕ ಪುಂಡಗಾರರನ್ನು ಕೂಡಿಸಿ ಕಂದೀಕೆರೆ ಮತ್ತು ಶಟ್ಟೀಕೆರೆ ಗ್ರಾಮಗಳನ್ನು ಹಿಡಿದುಕೊಂಡನು. ಮುಂದೆ ತಾನು ಗೆದ್ದ ಪ್ರದೇಶವು ತನಗೆ ಸಿಗಬೇಕೆಂಬ ಕರಾರಿನಿಂದ ಅವನು ಪೆನಗುಂಡಿಯ ಅರಸನಿಗೆ ತನ್ನ ದಂಡಾಳುಗಳೊಡನೆ ಹೋಗಿ ಸಹಾಯ ಮಾಡಿದನು. ಆದರೆ ಪೆನಗುಂಡಿಯ ಅರಸನು ಸೋತದ್ದರಿಂದ ಸಾಲನಾಯಿಕನು ತನಗೆ ಸಿಕ್ಕಷ್ಟು ಲೂಟಿಯನ್ನು ತೆಗೆದುಕೊಂಡು ಪಾರಾಗಿ ತಿರುಗಿ ಬಂದನು. ಅವನು ಚಿಕ್ಕನಾಯಿಕನ ಹಳ್ಳಿಯನ್ನು ತನ್ನ ರಾಜಧಾನಿಯನ್ನಾಗಿ ಮಾಡಿ ಅದಕ್ಕೆ ತನ್ನ ತಮ್ಮನ ಹೆಸರನ್ನು ಇಟ್ಟನು. ಮುಂದೆ ಅವನು ಹೊನ್ನವಳ್ಳಿ, ತುರುವೆಕೆರೆ, ಮತ್ತು ನೊಣವಿನಕೆರೆ ಎಂಬ ಗ್ರಾಮಗಳನ್ನು ಕೈವಶ ಮಾಡಿಕೊಂಡನು.

ಈ ಪ್ರಕಾರ ಒಂದೇ ಸವನೆ ಸಾಲಾಗಿ ಹೊಸ ಹೊಸ ಸೀಮೆಗಳನ್ನು ಇವನು ಸಂಪಾದಿಸಿದ್ದರಿಂದ ಇವನಿಗೆ ಸಾಲನಾಯಕನೆಂಬ ಹೆಸರು ಬಿದ್ದಿತು.

ಚಿಕ್ಕನಾಯಕನ ಹಳ್ಳಿಯ ಪ್ರದೇಶವನ್ನು ಮುಸಲ್ಮಾನರು ಮತ್ತು ಮರಾಠರು ಬೇರೆ ಬೇರೆ ಕಾಲಗಳಲ್ಲಿ ತಮ್ಮ ಅಧೀನಕ್ಕೆ ತಂದುಕೊಂಡರು. ಮತ್ತು ಕಟ್ಟಕಡೆಗೆ ಚಿಕ್ಕದೇವರಾಯನು ಈ ಪ್ರದೇಶವನ್ನೆಲ್ಲ ತನ್ನ ಕೈವಶಮಾಡಿಕೊಂಡನು.

ಈ ಪ್ರಕಾರ ಗ್ಯಾಜಿಟಿಯರದಲ್ಲಿ ವೃತ್ತಾಂತವು ಇದ್ದು ಇದು ಎಷ್ಟು ಅಪೂರ್ಣ ಮತ್ತು ತಪ್ಪು ಇರುತ್ತದೆಂಬದು ತಿಳಿದು ಬರುವದು.

ಕರ್ನಾಟಕದಲ್ಲಿ ಇತಿಹಾಸ ಪ್ರಸಿದ್ಧ ಮಹತ್ವದ ಮನೆತನಗಳು ಅನೇಕವಿದ್ದು ಅವುಗಳಲ್ಲಿ ಮನೆತನಗಳ ಇತಿಹಾಸಗಳು ಉಪಲಬ್ಧವಿರುತ್ತವೆ. ಅವುಗಳಲ್ಲಿ ವಿಶ್ವಸನೀಯ ಐತಿಹಾಸಿಕ ಸಂಗತಿಗಳು ಅನೇಕವಿರುತ್ತವೆ. ಇವುಗಳನ್ನೆಲ್ಲ ಶೋಧಿಸಿ ಪ್ರಸಿದ್ಧಪಡಿಸಿದ್ದಾದರೆ ನಮ್ಮ ಕರ್ನಾಟಕದ ಪೂರ್ವದ ಮಹತ್ವದ ರಾಜಕೀಯ ಮತ್ತು ಸಾಮಾಜಿಕ ಇತಿಹಾಸವು ಪ್ರಕಾಶಕ್ಕೆ ಬರಲು ಬಹಳ ಅನುಕೂಲವಾಗುವದು.

# ಅನುಭವ ಮಂಟಪ---ವೀರಶೈವತ್ವದ ಹೃದಯ

(ಪುಸ್ತಕ ವಿಮರ್ಶೆ.)

ಅನುಭವ ಮಂಟಪವು ಬಸವೇಶ್ವರರ ಕಾಲದಲ್ಲಿ ಕಲ್ಯಾಣಪಟ್ಟಣದಲ್ಲಿ ಸ್ಥಾಪಿತವಾಗಿದ್ದು ಅದು ದಿಗ್ದೇಶಗಳಲ್ಲಿಯ ತತ್ವಜ್ಞಾನಿಗಳನ್ನೂ, ಧಾರ್ಮಿಕ ಪುರುಷರನ್ನೂ ತನ್ನೆಡೆಗೆ ಬರಮಾಡಿಕೊಳ್ಳುವಷ್ಟು ಪ್ರಖ್ಯಾತಿಯನ್ನು ಆಗ ಹೊಂದಿತ್ತೆಂದು ತೋರುತ್ತದೆ. ಈ ಮಂಟಪದಲ್ಲಿ ನಡೆಯುತ್ತಿದ್ದ ಧಾರ್ಮಿಕ ಚರ್ಚೆಗಳನ್ನು ಕೇಳಿ ಆನಂದಿಸಲು ಕಾಶ್ಮೀರದಿಂದ ತಮಿಳು ದೇಶದ ವರೆಗಿನ ಅಸಂಖ್ಯ ಶಿವ ಶರಣರು ಕಲ್ಯಾಣಕ್ಕೆ ಬರುತ್ತಿದ್ದರು. ಈ ಸಂಗತಿಯು ಕೇವಲ ಕಾಲ್ಪನಿಕ ಕಥೆಯಾಗಿರದೆ ನಿಜವಾದದ್ದೆಂದು ತಿಳಿಯಲು ಬಲವಾದ ಕಾರಣಗಳಿವೆ. ಇದರಿಂದಲೇ ಕರ್ನಾಟಕದ ಆಗಿನ ರಾಜಧಾನಿಯಾದ ಕಲ್ಯಾಣ ಪಟ್ಟಣದಲ್ಲಿ ಒಂದು ವಿಶೇಷ ಧರ್ಮಜಾಗ್ರತಿಯು ಉತ್ಪನ್ನವಾಗಿ ಅದು ದೇಶದಲ್ಲೆಲ್ಲ ಹರವಿತು. ಆದ್ದರಿಂದ ವೀರಶೈವರಿಗೆಲ್ಲ ಅನುಭವ ಮಂಟಪದ ವಿವರಣೆಯು ಚಿತ್ತಾಕರ್ಷಕವಾಗದೆ ಇರದು. ಇದರ ನಿಜಸ್ಥಿತಿಯನ್ನು ಮತ್ತು ಸ್ವರೂಪನ್ನು ಮಿ. ಸಿ. ಫ್ಹಿ. ಉತ್ತಂಗಿ ಇವರು ಒಂದು ಚಿಕ್ಕ ಪುಸ್ತಕದಲ್ಲಿ ಇಂಗ್ಲೀಷ ಭಾಷೆಯಲ್ಲಿ ವಿವರಿಸಿರುವರು. ಅನುಭವ ಮಂಟಪವನ್ನು ಅವರು ವೀರಶೈವತ್ವದ ಹೃದಯವೆಂತಲೂ ಕರೆದಿರುವರು. ಅದು ಯಥಾರ್ಥವಾಗಿದೆ. ಯಾಕಂದರೆ ಮನುಷ್ಯನ ಶರೀರದಲ್ಲಿ ಹ್ಯಾಗೆ ಹೃದಯವು ರಕ್ತವನ್ನು ತನ್ನೆಡೆಗೆ ಬರಮಾಡಿಕೊಂಡು ಶರೀರದ ಎಲ್ಲ ಭಾಗಗಳಲ್ಲಿ ಹೊರಚಲ್ಲಿ ಅವುಗಳನ್ನು ಪೋಷಿಸುತ್ತದೋ ಅದೇ ಮೇರೆಗೆ ಬಸವೇಶ್ವರರ ಅನುಭವ ಮಂಟಪವು ಧಾರ್ಮಿಕ ಮಹಾನುಭಾವರನ್ನು ತನ್ನೆಡೆಗೆ ಬರಮಾಡಿಕೊಂಡು ವೀರಶೈವತ್ವದ ಉಚ್ಚ ವಿಚಾರಗಳನ್ನು ಪ್ರಜ್ವಲಗೊಳಿಸಿ ಅವುಗಳ ಪ್ರವಾಹಗಳನ್ನು ದೇಶ ದೇಶಗಳಲ್ಲಿ ಹರಡುವಂತೆ ಮಾಡಿತು. ಆದ್ದರಿಂದ ಅನುಭವ ಮಂಟಪವು ವೀರಶೈವ ಸಮಾಜದ ಹೃದಯವೆಂದು ಕರೆಯಬಹುದಾಗಿದೆ.

ಯಾವನಿಗಾದರೂ ತನ್ನಲ್ಲಿರುವ ಗುಣಗಳ ಮಹತ್ವವು ತನಗೆ ಅರಿಯುವದು ಕಷ್ಟ. ಆದರೆ ಈ ಗುಣಾವಗುಣಗಳು ಎರಡನೆಯವರಿಗೆ

ಬಹು ಸ್ಪಷ್ಟವಾಗಿ ತೋರಿಬರುತ್ತವೆ. ಸಮಾಜದ ಸ್ಥಿತಿಯಾದರೂ ಹೀಗೆಯೇ ಇರುತ್ತದೆ. ಆದ್ದರಿಂದ ಈ ವಿಷಯವಾಗಿ ಪರಧರ್ಮೀಯರಾದ ಮಿ. ಉತ್ತಂಗಿಯವರ ವಿವೇಚನೆಯು ವೀರಶೈವರಿಗೆ ಮಹತ್ವದ್ದಿರುತ್ತದೆ. ಮತ್ತು ಈ ಪುಟ್ಟ ಪುಸ್ತಕದಲ್ಲಿ ಅವರು ತೋರ್ಪಡಿಸಿರುವ ವಿಚಾರ ಸರಣಿಯನ್ನು ವೀರಶೈವರು ಅವಶ್ಯವಾಗಿ ಗ್ರಹಿಸತಕ್ಕುದಾಗಿದೆ.

ಮಿ. ಉತ್ತಂಗಿಯವರು ಕೆಳಗೆ ಬರೆದ ಪ್ರಕಾರ ಅನುಭವ ಮಂಟಪವನ್ನು ಕುರಿತು ವರ್ಣಿಸುವರು. ಅವರು ಅನ್ನುವದೇನಂದರೆ—ಬಸವೇಶ್ವರನು ಈ ಬಗೆಯ ಸಂಸ್ಥೆಯನ್ನು ಸ್ಥಾಪಿಸಿದ್ದರ ಉದ್ದೇಶವು ಸಾಯುತ್ತಲಿದ್ದ ಧರ್ಮದಲ್ಲಿ ಹೊಸ ಜೀವಕಳೆಯನ್ನು ತುಂಬುವದೇ ಇತ್ತು. ಇದರ ಮೂಲಕ ಬಸವೇಶ್ವರನು ಧರ್ಮಕ್ಕೆ ಹೃದಯ ಮತ್ತು ಹಸ್ತಗಳನ್ನು ಕೊಟ್ಟನೆನ್ನಬಹುದು. ಈ ಕಾಲಕ್ಕೆ ಬೌದ್ಧ ಬ್ರಾಹ್ಮಣೀ ಮತ್ತು ಜೈನ ಧರ್ಮಗಳಿದ್ದು ಅವು ಒಂದು ಕಾಲದಲ್ಲಿ ಬೌದ್ಧಿಕ ಮತ್ತು ನೈತಿಕ ಉನ್ನತಿಯನ್ನು ಮಾಡಿದವೆಂಬುವದು ನಿಜವು. ಆದರೆ ಈ ಧರ್ಮಗಳು ಬಸವೇಶ್ವರನ ಕಾಲದಲ್ಲಿ ಅವನತ ಸ್ಥಿತಿಯನ್ನು ಹೊಂದಿ ಜನರಿಗೆ ಉನ್ನತಿಯ ಮಾರ್ಗವನ್ನು ತೋರಿಸಲು ಅಸಮರ್ಥವಾಗಿದ್ದವು. ಈ ಬಗೆಯ ಸಮಾಜದ ದುಃಸ್ಥಿತಿಯನ್ನು ಹೋಗಲಾಡಿಸಲು ಬಸವೇಶ್ವರನು ಅನುಭವದ ಮೇಲೆ ಧಾರ್ಮಿಕ ತತ್ವಗಳನ್ನೂ ಬಲಿಸಿ ಧರ್ಮ ಜಾಗ್ರತಿಯನ್ನು ಉಂಟು ಮಾಡಿದನು. ಈ ಕಾರ್ಯವು ಯಾವ ಸ್ಥಾನದಲ್ಲಿ ಜರುಗುತ್ತಿತ್ತೋ ಅದು ಮಂಟಪವೆಂದು ಪ್ರಸಿದ್ಧಿಯನ್ನೂ ಹೊಂದಿತು. ಆಗಿನ ಹಿಂದೂ ಧರ್ಮವು ಒಂದೆಡೆಗೆ ಕರ್ಮಮಾರ್ಗದ ಸಂಕೋಲೆಯ ಮೂಲಕ ಮತ್ತೊಂದೆಡೆಗೆ ಕೇವಲ ತಾತ್ವಿಕ ಅವ್ಯವಹಾರ್ಯ ವಿಚಾರಗಳ ಮೂಲಕ ಕಂಗೆಟ್ಟು ಬಳಲುತ್ತಿತ್ತು. ಆದರೆ ಬಸವೇಶ್ವರನು ಈ ಸ್ಥಿತಿಯನ್ನು ಹೋಗಲಾಡಿಸಿ ಧಾರ್ಮಿಕ. ಅನುಭವ ಮತ್ತು ಶೀಲ ಇವುಗಳಿಗೆ ಮಹತ್ವದ ಸ್ಥಾನವನ್ನು ಕೊಟ್ಟು ಧರ್ಮಜಾಗ್ರತಿಯನ್ನು ಮಾಡಿದನು. ಅವನು ಧರ್ಮದ ಪ್ರಭಾವವನ್ನು ಅನುಭವದ ಮೇಲೆ ಸ್ಥಿರವಾಗಿ ನಿಲ್ಲಿಸಿದನು. ಈ ಮೇರೆಗೆ ಮಿ. ಉತ್ತಂಗಿಯವರು ಶಿವಾನುಭವ ಮಂಟಪದ ಸಾಮಾನ್ಯ ಸ್ವರೂಪವನ್ನು ವರ್ಣಿಸಿ ಚನ್ನಬಸವೇಶ್ವರನ ಈ ಕೆಳಗಿನ ವಚನವನ್ನು ಉದಹರಿಸಿದ್ದಾರೆ. ಅದು ಯಾವದೆಂದರೆ—"ಕ್ರಿಯೆಯೇ ಜ್ಞಾನ, ಜ್ಞಾನವೇ ಕ್ರಿಯೆ. ಜ್ಞಾನವೆಂದರೆ ತಿಳಿಯುವದು, ಕ್ರಿಯೆಯೆಂದರೆ ತಿಳಿದಂತೆ ಮಾಡು

ವದು ಪರಸ್ತ್ರೀ ಭೋಗಿಸಬಾರದೆಂಬುದೇ ಜ್ಞಾನ ಅದರಂತೆ ಆಚರಿಸುವದೇ ಕ್ರಿಯೆ. ಅಂತು ಆಚರಿಸದಿದ್ದರೆ ಅದೇ ಅಜ್ಞಾನ ನೋಡಾ ಕೂಡಲ ಚನ್ನಸಂಗಮದೇವಾ."

ಈ ವಾಕ್ಯದ ಮೇಲಿಂದ ವೀರಶೈವರಲ್ಲಿ ಕ್ರಿಯೆ ಮತ್ತು ಜ್ಞಾನ ಇವು ಹ್ಯಾಗೆ ಸಂಬಂಧಪಟ್ಟಿತ್ತರುವೆಂಬುದು ಬಹು ಚನ್ನಾಗಿ ಗೊತ್ತಾಗುತ್ತದೆ. ಇವು ಪರಸ್ಪರ ಭಿನ್ನವಿಲ್ಲವೆಂಬುದು ತಿಳಿಯುವದು. ವೀರಶೈವರು ಕೇವಲ ಜ್ಞಾನಕ್ಕೆ ಮಹತ್ವ ಕೊಟ್ಟಿಲ್ಲ. ಆದರೆ ಆ ಜ್ಞಾನದಂತೆ ಆಚರಿಸುವದಕ್ಕೂ ಅಷ್ಟೇ ಮಹತ್ವ ಕೊಟ್ಟಿರುವರು. ಆದ್ದರಿಂದ ಅವರ ಗ್ರಂಥಗಳು ಮನುಷ್ಯನು ತನ್ನ ಕ್ರಿಯೆಗಳನ್ನು ಹ್ಯಾಗೆ ಮಾಡಬೇಕೆಂಬುದನ್ನು ಕುರಿತು ವಿಶೇಷವಾಗಿ ಪ್ರಸ್ತಾಪಿಸುತ್ತಿವೆ. ಈ ವಿವರಣೆಗಳು ಅವರ ಷಟ್‌ಸ್ಥಲ ಮತ್ತು ಏಕೋತ್ತರ ಶತಸ್ಥಲ ಇವುಗಳಲ್ಲಿ ಬರುತ್ತವೆ. ಈ ಬಗೆಯ ಆಚಾರ ವಿಷಯಕ ಪ್ರಸ್ತಾಪಗಳು ಬಸವೇಶ್ವರನು ಸ್ಥಾಪಿಸಿದ ಅನುಭವ ಮಂಟಪದಲ್ಲಿ ಯಾವಾಗಲೂ ನಡೆಯುತ್ತಿದ್ದವು. ಮತ್ತು ಅಲ್ಲಿ ಸ್ಥಿರಪಟ್ಟ ವಿಚಾರಗಳೇ ದೇಶದಲ್ಲೆಲ್ಲ ಪ್ರಸಾರಪಡಿಸಲ್ಪಡುತ್ತಿದ್ದವು. ಈ ಪ್ರಕಾರ ಬಸವೇಶ್ವರನ ಕಾಲದಲ್ಲಿ ಅನುಭವ ಮಂಟಪದ ಮೂಲಕ ಒಂದು ಮಹತ್ತರ ಧರ್ಮಜಾಗ್ರತಿಯು ಉತ್ಪನ್ನವಾಯಿತೆಂದು ತೋರಿಬರುತ್ತದೆ.

ಮಿ. ಉತ್ತಂಗಿ ಇವರು ಅನುಭವ ಮಂಟಪವನ್ನು ಒಂದು ಸಂಸ್ಥೆ ಎಂದು ಕರೆದದ್ದು ಯಥಾರ್ಥವಿದೆ. ಸಾಂಪ್ರತಕಾಲದಲ್ಲಿ ಹ್ಯಾಗೆ ಕಮೀಟಿಗಳ ದ್ವಾರಾ ಸಾರ್ವಜನಿಕ ಕಾರ್ಯಗಳನ್ನು ನಿರ್ವಹಿಸುವ ಪದ್ಧತಿಯು ಇರುತ್ತದೋ ಅದಕ್ಕೆ ಅನುಭವಮಂಟಪದ ನಡವಳಿಕೆಗಳನ್ನು ಹೋಲಿಸಬಹುದು. ಈಗ ಹ್ಯಾಗೆ ಒಂದೇ ವಿಧ ಉದ್ದೇಶವುಳ್ಳವರು ಒಂದು ಸಂಸ್ಥೆಯನ್ನು ಸೇರಿ ಕಾರ್ಯಗಳನ್ನು ಮಾಡುತ್ತಾರೋ ಅದೇ ರೀತಿ ಬಸವೇಶ್ವರನ ಕಾಲದಲ್ಲಿ ನಡೆದಂತೆ ತೋರಿಬರುತ್ತದೆ. ಶಿವಾನುಭವ ಮಂಟಪದಲ್ಲಿ ಧರ್ಮತತ್ಪರರಾದವರೆಲ್ಲರು ಕೂಡಿಕೊಂಡು ಆಗಿಂದಾಗ್ಗೆ ವಿಷಯ ವಿವೇಚನೆಗಳನ್ನು ಮಾಡುವರು. ಆ ಸಮಯದಲ್ಲಿ ಅಲ್ಲಿ ಸೇರಿದ ಪ್ರತಿಯೊಬ್ಬನು ತನಗೆ ತೋರಿದ ಶಂಕೆಗಳನ್ನೂ ತೋಚಿದ ಪ್ರಶ್ನೆಗಳನ್ನೂ ಅಲ್ಲಿ ವಿಚಾರಣೆಗೋಸ್ಕರ ಸಭಿಕರ ಮುಂದಿಡುತ್ತಿದ್ದನು. ಆ ಮೇಲೆ ಅನೇಕ ದೃಷ್ಟಿಯಿಂದ ಅವುಗಳ ಬಗ್ಗೆ ವಾದವಿವಾದಗಳು ಜರಗುವವು. ಮತ್ತು ಕಡೆಗೆ ಒಂದು ಸರ್ವಸಮ್ಮ

ತವಾದ ಸಿದ್ಧಾಂತವನ್ನು ಹೊರಪಡುತ್ತಿದ್ದರು. ಮತ್ತು ಅದನ್ನೇ ದೇಶದೆಲ್ಲೆಲ್ಲ ಆ ಶಿವಶರಣರು ಪ್ರಚಾರಪಡಿಸುತ್ತಿದ್ದರು. ಈ ಪ್ರಚಾರಣೆಗೆ ಸುಲಭವಾಗುವ ಉದ್ದೇಶದಿಂದ ಆ ಸಿದ್ಧಾಂತಗಳನ್ನು ಅವರು ಸುಲಭ ಕನ್ನಡ ಭಾಷೆಯಲ್ಲಿ ತಮ್ಮ ತಮ್ಮ ವಿವೇಚನಾ ಪದ್ಧತಿಗನುಸಾರವಾಗಿ ವಚನಗಳ ದ್ವಾರಾ ಪ್ರಸ್ತಾಪಿಸುವರು. ಈ ಬಗೆಯಾಗಿ ಅನುಭವಮಂಟಪದಲ್ಲಿ ವಿವೇಚನೆಗಳು ಮತ್ತು ಕಾರ್ಯಗಳು ಬಸವೇಶ್ವರನ ಕಾಲದಲ್ಲಿ ನಡೆಯುತ್ತಿದ್ದವೆಂದು ತೋರುತ್ತದೆ. ಆದ್ದರಿಂದ ಮಿ. ಉತ್ತಂಗಿಯವರು ಅನುಭವಮಂಟಪಕ್ಕೆ ಒಂದು ಸಂಸ್ಥೆ ಎಂದು ಕರೆದಿದ್ದು ಯಥಾರ್ಥವಿದೆ.

ಶಿವಾನುಭವ ಮಂಟಪದಲ್ಲಿ ಜರಗುತ್ತಿದ್ದ ವಾಗ್ವಾದಗಳ ತರಹದ ಮೇಲೆ ಕೆಲವು ವಚನಗ್ರಂಥಗಳು ಹಿಂದುಗಡೆ ರಚಿಸಲ್ಪಟ್ಟಿರುತ್ತವೆ. ಇಂಥ ವಚನಗಳ ವರ್ಗದಲ್ಲಿ ಸಿದ್ಧರಾಮೇಶ್ವರನ ವಾದವಚನಗಳು (ಇವು ಎರಡು ಗ್ರಂಥಗಳಿವೆ.) ಶೂನ್ಯಸಂಪಾದನೆ ಇವುಗಳು ಬರುತ್ತವೆ. ಇವುಗಳಲ್ಲಿ ಷಟ್‌ಸ್ಥಲಶಾಸ್ತ್ರದ ಸೂಕ್ಷ್ಮ ವಿಚಾರಗಳು ಬಹು ಬಗೆಯಾಗಿ ಹೊರಪಡಿಸಲ್ಪಟ್ಟಿರುತ್ತವೆ.

ಅನೇಕರು ವೀರಶೈವ ಧರ್ಮದ ಪ್ರಸಾರವು ಬಸವೇಶ್ವರನ ಕಾಲದಲ್ಲಿ ಇಷ್ಟು ತೀವ್ರವಾಗಿ ಮತ್ತು ಬಲವಾಗಿ ಹ್ಯಾಗೆ ಇಡೀ ದೇಶದಲ್ಲಿ ಒಂದು ಸಣ್ಣ ಹಳ್ಳಿಯನ್ನು ಸಹ ಬಿಡದೆ ಪ್ರಾದುರ್ಭವಿಸಿದೆಂದು ಚಕಿತಭಾವವನ್ನು ವ್ಯಕ್ತಪಡಿಸುವದುಂಟು. ಇದು ಹ್ಯಾಗೆ ಆಗಿರಬಹುದೆಂಬ ವಿಷಯವನ್ನು ಅನುಭವ ಮಂಟಪ ಮತ್ತು ಅದು ಮಾಡುತ್ತಿದ್ದ ಕಾರ್ಯಗಳನ್ನು ನಾವು ವಿವೇಚಿಸಿದಲ್ಲಿ ಕಂಡು ಹಿಡಿಯಬಹುದಾಗಿದೆ. ಶಿವಾನುಭವ ಮಂಟಪದ ವ್ಯವಸ್ಥೆಯು ಮೂಲಕ ಬಸವೇಶ್ವರನ ಕಾಲಕ್ಕೆ ಧರ್ಮೋದ್ಧಾರಕರು ಅನೇಕರು ಉತ್ಪನ್ನವಾಗಲಿಕ್ಕೆ ಕಾರಣವಾಯಿತು. ಮತ್ತು ಅವರು ವೀರಶೈವ ಧರ್ಮವನ್ನು ಎಲ್ಲ ಕಡೆಗೆ ಮತ್ತು ಎಲ್ಲ ಸಮಾಜಗಳಲ್ಲಿ ಹಬ್ಬಿಸಿದರು. ಬೌದ್ಧ, ಇಸ್ಲಾಮಿ, ಕ್ರಿಸ್ತೀ ಧರ್ಮಗಳನ್ನು ತೆಗೆದುಕೊಂಡರೆ, ಅವು ಒಬ್ಬೊಬ್ಬನೊಬ್ಬ ವಿಭೂತಿ ಪುರುಷನಿಂದ ಉತ್ಪನ್ನವಾದದ್ದು ಕಂಡುಬರುತ್ತದೆ. ಕ್ರಿಶ್ಚನ್ ಧರ್ಮವು ಕ್ರೈಸ್ತನಿಂದ, ಬೌದ್ಧಧರ್ಮವು ಬುದ್ಧನಿಂದ ಮತ್ತು ಇಸ್ಲಾಮೀ ಧರ್ಮವು ಮಹಮ್ಮದನಿಂದ ಉದ್ಭೂತವಾದವು. ಈ ಮಹಾಪುರುಷರು ತಮ್ಮ ಅಲೌಕಿಕ ಸಾಹಸದಿಂದ ಜನರಲ್ಲಿ ಒಂದು ವಿಲಕ್ಷಣ ಕ್ರಾಂತಿಯನ್ನು ಮಾಡಿದರೂ ಅವು ಬರ

ಬರುತ್ತ ಉಚ್ಚ ಸ್ಥಿತಿಗೆ ಬಂದವು. ಈ ಸ್ಥಿತಿಯು ಬರಲಿಕ್ಕೆ ಅವುಗಳಿಗೆ ಬಹಳ ಕಾಲವು ಒಮ್ಮೊಮ್ಮೆ ಕೆಲವು ಶತಮಾನಗಳು ಸಹ ಹತ್ತಿದವು. ಆದರೆ ವೀರಶೈವ ಧರ್ಮ ಪ್ರಸಾರಕ್ಕೆ ಇಷ್ಟು ಅವಧಿಯು ಹತ್ತಿದಂತೆ ಕಂಡುಬರುವುದಿಲ್ಲ. ಬಸವೇಶ್ವರನು ಐಕ್ಯವಾದ ತರುವಾಯ ಅಥವಾ ಇದಕ್ಕೂ ಮೊದಲು ಬಹು ಸ್ವಲ್ಪಕಾಲದಲ್ಲಿಯೇ ಅದು ಇಡೀ ಕರ್ನಾಟಕವನ್ನು ವ್ಯಾಪಿಸಿತು. ಬಸವೇಶ್ವರನ ಕಾಲಕ್ಕೆ ಮತ್ತು ಅವನ ತರುವಾಯ ದೇಶದಲ್ಲಿ ಅನೇಕ ರಾಜಕೀಯ ವಿಪ್ಲವಗಳು ಉಂಟಾಗಿದ್ದರೂ ಕೂಡ ಅವು ವೀರಶೈವ ಧರ್ಮದ ಪ್ರಸಾರಕ್ಕೆ ಯಾವ ತಡೆಯನ್ನು ಮಾಡಲಾರದಾದವು. ಈ ಬಗೆಯಾಗಿ ಒಂದು ವಿಲಕ್ಷಣ ಸಾಮರ್ಥ್ಯವು ವೀರಶೈವ ಸಮಾಜದಲ್ಲಿ ಉಂಟಾಗಬೇಕಾದರೆ ವೀರಶೈವ ಧರ್ಮತತ್ವಗಳು ಜನ ಸಮುದಾಯದಲ್ಲಿ ಆಗ ಬಹು ನಿಬಿಡವಾಗಿ ಇಂಗಿಕೊಂಡಿರಬೇಕು. ಈ ಸ್ಥಿತಿಯುಂಟಾಗಲಿಕ್ಕೆ ಬಸವೇಶ್ವರನ ಅನುಭವ ಮಂಟಪವೇ ಬಹು ಮಟ್ಟಿಗೆ ಕಾರಣವಾಯಿತೆಂದು ಹೇಳಬಹುದು. ಇದರ ಮೂಲಕ ವೀರಶೈವ ಧರ್ಮದ ಉಚ್ಚ ತತ್ವಗಳು ಕೇವಲ ಬಸವೇಶ್ವರನೊಬ್ಬನಲ್ಲಷ್ಟೇ ಅಲ್ಲ, ಅವನ ಮಂಟಪದಲ್ಲಿ ಶಿಕ್ಷಣ ಹೊಂದಿದ ಶಿವಶರಣರೆಲ್ಲರಲ್ಲಿಯೂ ದೃಢಪಡಲಿಕ್ಕೆ ಕಾರಣವಾಯಿತು. ಈ ಶಿವಶರಣರು ಬಸವೇಶ್ವರನು ಗತಿಸಿಹೋದರೂ ಕೂಡ ಧರ್ಮ ಜಾಗ್ರತಿಯ ಕಾರ್ಯದಲ್ಲಿ ಎಸಗಿರಲಿಕ್ಕೆ ಬೇಕು. ಇವರು ಎಷ್ಟು ಉದ್ದೀಪ್ತ ತೇಜಃಪುಂಜ ಭಾವವುಳ್ಳವರಾಗಿದ್ದರೆಂಬದು ಅವರ ಆವೇಶಯುಕ್ತ ಸ್ಫೂರ್ತಿದಾಯಕ ವಚನಗಳೇ ಸಾರಿಹೇಳುತ್ತವೆ. ಈ ಮಹಾನುಭಾವರು ದೇಶದ ತುಂಬೆಲ್ಲ ಸಂಚರಿಸಿ ಸಮಾಜ ಜಾಗ್ರತಿಯ ಕಾರ್ಯವನ್ನು ತಮ್ಮ ತಮ್ಮ ಸಮಾಜಗಳಲ್ಲಿ ಕೈಕೊಂಡರು. ಇದರಲ್ಲಿ ಅವರಿಗೆ ಯಾವ ರಾಜಕೀಯ ಬಾಹ್ಯ ತೊಂದರೆಗಳು ಅಡ್ಡಬಾರದಾದವು. ಇದರಿಂದ ಬ್ರಾಹ್ಮಣ ಮೊದಲ್ಗೊಂಡು ಅಂತ್ಯಜವರ್ಗಗಳ ವರೆಗೂ ಧಾರ್ಮಿಕ ಉನ್ನತ ವಿಚಾರಗಳು ಆಯಾ ಸಮಾಜಗಳಲ್ಲಿ ನೆಲೆಗೊಂಡು ದೇಶದಲ್ಲೆಲ್ಲ ಒಂದು ಮಹತ್ತರ ಕ್ರಾಂತಿಯು ಉತ್ಪನ್ನವಾಯಿತು. ಇದಕ್ಕೆಲ್ಲ ಮೂಲ ಭೂತವಾದದ್ದು ಬಸವೇಶ್ವರನ ಅನುಭವ ಮಂಟಪವೇ ಎಂದು ನಿರ್ವಿವಾದವಾಗಿ ಹೇಳಬಹುದು.

ಮಿ. ಉತ್ತಂಗಿಯವರು ಅನುಭವಮಂಟಪದ ಚರ್ಚೆಗಳಲ್ಲಿ ಸೇರ್ಪಡೆಯಾದವರನ್ನು ವರ್ಣಿಸುವಾಗ ಅವರಲ್ಲಿ ಅತ್ಯಂತ ಕೀಳುಜಾತಿಯವರು ಮೊದಲ್ಗೊಂಡು ಉಚ್ಚ ವರ್ಣದವರ ವರೆಗೆ ಯಾವ ಯಾವ ಜಾತಿಯ

ವರಿದ್ದರೆಂಬದನ್ನು ವಿವರಿಸಿ, ಹೀಗೆ ಒಬ್ಬ ಮಡಿವಳ, ಸಿಂಪಿಗ, ನೇಕಾರ, ಮೇದಾರ, ಅಂಬಿಗ, ನಾಪಿತ, ಒಕ್ಕಲಿಗ, ಹೊಲೆಯ ಮುಂತಾದ ವರ್ಗಗಳಿಗೆ ಹೊಂದಿದವರು ಒತ್ತಟ್ಟಿಗೆ ಸೇರಿ ಉಚ್ಚ ವಿಚಾರವಿನಿಮಯ ಮಾಡುತ್ತಿದ್ದದ್ದನ್ನು ಸಾಂಪ್ರತ ಕಾಲದ ರಾಜಕೀಯ ಮತ್ತು ಸಾಮಾಜಿಕ ಸುಧಾರಕರು ನೋಡಿದರೆ ಅವರು ಅತ್ಯಂತ ಆನಂದಿಸಬಹುದೆಂತಲೂ ಈ ಪ್ರಕಾರ ವರ್ಣ, ಜಾತಿ, ವಯಸ್ಸು, ಉದ್ಯೋಗ ಈ ಮೊದಲಾದ ಭೇದಭಾವಗಳನ್ನು ಎಣಿಸದೆ ಏಕತ್ರ ಊಟ ಮತ್ತು ಪರಸ್ಪರ ಲಗ್ನ ವ್ಯವಹಾರಗಳನ್ನು ಸಹ ನಡಿಸಲು ಸಿದ್ಧರಾದದ್ದು ಹಿಂದುಸ್ಥಾನದ ಧಾರ್ಮಿಕ ಇತಿಹಾಸದಲ್ಲಿ ಅಪೂರ್ವವಾದುದೆಂತಲೂ ಅಂದಿರುವರು. ಬಸವೇಶ್ವರನ ಕಾಲದಲ್ಲಿ ಈ ಪ್ರಕಾರ ಸಮಾಜಸ್ಥಿತಿಯು ಉಂಟಾದದ್ದು ನಿಜವಿದೆ. ಆದರೆ ಈ ಸ್ಥಿತಿಯು ಪಾಶ್ಚಿಮಾತ್ಯ ವಿಚಾರಗಳ ಸುಳಿವು ಏನೇನೂ ಇಲ್ಲದಂಥ ಪೂರ್ವದ ಹಿಂದುಸ್ಥಾನದಲ್ಲಿ ಹ್ಯಾಗೆ ಪ್ರಾಪ್ತವಾಯಿತೆಂಬುದು ಮಾತ್ರ ಅತ್ಯಂತ ವಿಚಾರಣೀಯವಾಗಿದೆ. ಏಕೆಂದರೆ ಪಾಶ್ಚಿಮಾತ್ಯ ಶಿಕ್ಷಣವು ಸಮಾಜದಲ್ಲೆಲ್ಲ ವ್ಯಾಪಿಗೊಂಡಿರುವ ಸಾಂಪ್ರತ ಕಾಲದಲ್ಲಿ ಸಹ ಸ್ಪೃಶ್ಯಾಸ್ಪೃಶ್ಯ ಭೇದಗಳೂ ಜಾತಿಮತ್ಸರಗಳೂ ಹ್ಯಾಗೆ ಇನ್ನೂ ಹಿಂದೂ ಸಮಾಜವನ್ನು ಆತಂಕಪಡಿಸುತ್ತಲಿವೆಂಬದು ಸರ್ವಶ್ರುತವೇ ಇರುತ್ತದೆ. ಆದರೆ ಈ ಉಚ್ಚ ಸಾಮರಸ್ಯ ಸ್ಥಿತಿಯು ಬಸವೇಶ್ವರನ ಕಾಲದಲ್ಲಿ ಹ್ಯಾಗೆ ಇಷ್ಟು ತೀವ್ರವಾಗಿ ಉತ್ಪನ್ನವಾಯಿತೆಂಬದು ಹಿಂದುಸ್ತಾನದ ಧಾರ್ಮಿಕ ಇತಿಹಾಸದಲ್ಲಿ ಶೋಧಿಸತಕ್ಕ ವಿಷಯವಾಗಿರುತ್ತದೆ. ಅನೇಕರು ಇದು ಬಸವೇಶ್ವರನ ವೈಯ್ಯಕ್ತಿಕ ವರ್ಚಸ್ಸಿನ ಮೂಲಕ ಆಗಿರಬಹುದೆಂದು ಅಭಿಪ್ರಾಯಪಡುತ್ತಾರೆ. ಇನ್ನು ಕೆಲವರು ಅವನು ಅನೇಕರಿಗೆ ನಾನಾವಿಧವಾಗಿ ಮೋಹಗಳನ್ನು ಕಲ್ಪಿಸಿ ತನ್ನ ರಾಜಕೀಯ ವರ್ಚಸ್ಸಿನ ಮೂಲಕ ಧರ್ಮಪ್ರಸಾರಮಾಡಿದನೆಂದು ಅನ್ನುತ್ತಾರೆ. ಆದರೆ ಈ ಎರಡೂ ವಿಧಾನಗಳು ನಂಬಲರ್ಹವಾದವುಗಳೆಂದು ನಮಗೆ ತೋರುವುದಿಲ್ಲ. ಇಡೀ ಬಹುಜನ ಸಮಾಜದ ಜಾಗ್ರತಿಯು ಕೇವಲ ಅನೀತಿ ಅನಾಚಾರ ಮತ್ತು ಸ್ವೈರ ವೃತ್ತಿಯಿಂದ ಆದದ್ದು ಜಗತ್ತಿನ ಯಾವ ಧಾರ್ಮಿಕ ಇತಿಹಾಸದಲ್ಲಿಯೂ ಕಂಡುಬರುವದಿಲ್ಲ. ಅದರಂತೆಯೇ ಸಮಾಜಕ್ಕೆ ಪರಿಪಕ್ವ ಸ್ಥಿತಿಯು ಬಾರವ ಹೊರ್ತು ಯಾವ ಧರ್ಮಸುಧಾರಕನೂ ತನ್ನ ಸುಧಾರಣಾಕಾರ್ಯಗಳನ್ನು ನೆರವೇರಿಸಲಾರನೆಂತಲೂ ಇತಿಹಾಸದಿಂದ

ತಿಳಿದುಬರುತ್ತದೆ. ಆದ್ದರಿಂದ ಬಸವೇಶ್ವರನ ವೈಯ್ಯಕ್ತಿಕ ಸಾಮರ್ಥ್ಯ ಅಥವಾ ಸ್ವೈರವೃತ್ತಿಗೆ ಅನುಕೂಲತೆ ಇವುಗಳಾವೂ ಧರ್ಮಪ್ರಸಾರಕ್ಕೆ ಕಾರಣವಾಗಲು ಶಕ್ಯವಾಯಿತೆಂದು ಹೇಳಲಿಕ್ಕೆ ಬರಲಾರದು.

ಆದರೆ ವೀರಶೈವ ಧರ್ಮ ಪ್ರಸಾರಕ್ಕೆ ಬಸವೇಶ್ವರನ ಅನುಭವ ಮಂಟಪದ ವ್ಯವಸ್ಥೆ, ಮತ್ತು ಆದರ ಮೂಲಕ ಉಂಟಾದ ಉಚ್ಚ ವಿಚಾರ ಪರಂಪರೆಗಳು, ಇಷ್ಟೇ ಅಲ್ಲ, ಈ ವಿಚಾರಗಳನ್ನು ಪ್ರಸಾರ ಪಡಿಸಲು ಮಾಡಿದ ಪ್ರಯತ್ನಗಳು ಇವುಗಳೇ ಕಾರಣವಾದವೆಂದು ನಮಗೆ ತೋರುತ್ತದೆ. ಈ ಅನುಭವ ಮಂಟಪದ ಉಚ್ಚ ಧಾರ್ಮಿಕ ವಾತಾವರಣದ ಪ್ರಭಾವವನ್ನು ಒಳಕೊಂಡಿದ್ದ ಅಸಂಖ್ಯ ಶಿವಶರಣರು ಅದೇ ಬಗೆಯ ವಾತಾವರಣವನ್ನು ಇಡೀ ದೇಶದಲ್ಲಿ ತಮ್ಮ ವಚನವಾಙ್ಮಯದ ಮೂಲಕ ಕಲ್ಪಿಸಿದರು. ಆಗ ಮಠಗಳು ಒಂದೇ ಸವನೇ ಗ್ರಾಮಾಂತರಗಳಲ್ಲಿ ಉದ್ಭವಿಸಹತ್ತಿದವು. ಮತ್ತು ಇವುಗಳು ಧರ್ಮ ಜಾಗ್ರತಿಯನ್ನು ದೇಶದಲ್ಲಿ ದೃಢಪಡಿಸಿದವು. ಈ ಪ್ರಕಾರ ವೀರಶೈವ ಧರ್ಮವು ಕರ್ನಾಟಕದಲ್ಲೆಲ್ಲ, ಬಸವೇಶ್ವರನ ಕಾಲದಲ್ಲಿ ಮತ್ತು ಅವನ ತರುವಾಯ ಪ್ರಸಾರ ಹೊಂದಿತೆಂದು ನಮಗೆ ತೋರುತ್ತದೆ. ಇದರಲ್ಲಿ ಯಾವ ಅದ್ಭುತವಿಲ್ಲ. ಧಾರ್ಮಿಕ ನಿಷ್ಕಲಂಕ ಪ್ರೀತಿ, ಜನ ಸಮುದಾಯವನ್ನು ಉದ್ಧರಿಸುವ ಉತ್ಕಟೇಚ್ಛೆ, ಸತತ ಪ್ರಯತ್ನ, ಮಠಗಳ ಪ್ರಸಾರ ಮತ್ತು ವ್ಯವಸ್ಥೆ ಇವುಗಳೇ ವೀರಶೈವ ಧರ್ಮದ ಪ್ರಸಾರಕ್ಕೆ ಕಾರಣವಾದವು. ಇದಲ್ಲದೆ ಆಗಿನ ಶಿವಶರಣರು ಪ್ರತಿಯೊಬ್ಬನು ಮಾಡುತ್ತಿರುವ ಉದ್ಯೋಗ ಅಥವಾ ವ್ಯವಸಾಯಕ್ಕೆ ಒಂದು ವಿಶೇಷ ತರದ ಧಾರ್ಮಿಕ ಸ್ವರೂಪವನ್ನು ಕೊಟ್ಟಿರುವರು. ಇದರಿಂದಲೂ ಜಾತಿಯ ಮಹತ್ವವು ಬಹಳ ಕಡಿಮೆಯಾಗಿ ಧರ್ಮ ಪ್ರಸಾರಕ್ಕೆ ಕಾರಣವಾಯಿತು. ಅನುಭವ ಮಂಟಪದಲ್ಲಿ ಉತ್ಪನ್ನವಾದ ವಿಚಾರಗಳಲ್ಲಿ ಈ ಉದ್ಯೋಗಗಳ ಸ್ವರೂಪದ ವಿಷಯವಾಗಿ ಅವರು ಮಾಡಿದ ನಿರ್ಧಾರಗಳು ಬಹು ಮಹತ್ವವಾದವುಗಳು. ಕಾಯಕವು ಯಾವ ತರದಿದ್ದರೂ ಅದನ್ನು ಧಾರ್ಮಿಕ ಬುದ್ಧಿಯಿಂದ ಎಸಗಿದ್ದಾದರೆ ಅದು ಉಚ್ಚತಮವೆಂತಲೇ ಕಲ್ಪಿಸಲ್ಪಟ್ಟಿರುತ್ತದೆ. ಆದ್ದರಿಂದ ಅನೇಕ ಬಗೆಯ ಕಾಯಕದವರು ಅಂದರೆ ಉದ್ಯೋಗದವರು ಅನುಭವ ಮಂಟಪದಲ್ಲಿ ಸೇರಲು ಅನುಕೂಲವಾಯಿತು. ಇದರಿಂದ ಎಲ್ಲ ವರ್ಗದ ಜನರಲ್ಲಿ ಆ ಕಾಲಕ್ಕೆ ಧರ್ಮ ಜಾಗ್ರತಿಯು ನೆಲೆಗೊಂಡಿತು. ಕಾಯ

ಕಗಳ ವಿಷಯದ ಬಗ್ಗೆ ಶಿವಾನುಭವ ಪತ್ರಿಕೆಯ ೨ ನೇ ಸಂಪುಟ ೭ ಸಂಚಿಕೆಯಲ್ಲಿ ವಿಸ್ತೃತವಾದ ಒಂದು ಲೇಖವು ಬಂದಿದ್ದು ಅದನ್ನು ವಾಚಕರು ಅವಶ್ಯವಾಗಿ ಅವಲೋಕಿಸಬೇಕು.

೫. ಉತ್ತಂಗಿಯವರು ಅನುಭವ ಮಂಟಪದ ಮಂದಿರವು ಹ್ಯಾಗಿತ್ತೆಂಬುದನ್ನು ವಿವರಿಸಿ ಆವರ ಪ್ರತಿಯೊಬ್ಬ ಸಭಾಸದನಿಗೆ ಕೊರೆಯಲ್ಪಟ್ಟ ಗವಿಗಳು ಅಥವಾ ಮಂಟಪಗಳು ಇದ್ದವೆಂದು ತಮ್ಮ ಗ್ರಂಥದಲ್ಲಿ ಬರೆದಿದ್ದಾರೆ. ಕಲ್ಯಾಣ ಪಟ್ಟಣದಲ್ಲಿ ಹೀಗೆ ಕೊರೆದ ಗವಿಗಳು ಅವರಿಗೋಸ್ಕರ ಇದ್ದವೆಂಬದು ಕೇವಲ ಐತಿಹ್ಯವೇ ಹೊರ್ತು ಅವುಗಳ ನಿಜತ್ವವನ್ನು ಊಹಿಸಲಿಕ್ಕೆ ಬರಲಾರದು. ಯಾಕಂದರೆ ಗುಹೆಗಳನ್ನು ಕೊರೆಯುವದು ಅಥವಾ ಗುಡಿಗೋಪುರಗಳನ್ನು ಕಟ್ಟಿಸುವದು ಹ್ಯಾಗೆ ಬೌದ್ಧ ಜೈನರಲ್ಲಿ ರೂಢವಾಗಿತ್ತೋ ಹಾಗೆ ವೀರಶೈವ ಸಮಾಜದಲ್ಲಿ ರೂಢವಾಗಲಿಲ್ಲ. ಈ ತರದ ಗುಹೆಗಳು ಏಕಾಂತವಾಸದಲ್ಲಿ ಧ್ಯಾನ ಮಾಡಲಿಕ್ಕೆ ಅನುಕೂಲವಾದವುಗಳೆಂದು ಅವು ಮೇಲ್ಕಂಡ ಧರ್ಮೀಯರಿಂದ ರಚಿಸಲ್ಪಟ್ಟವು. ಆದರೆ ಬಸವಾದಿ ಶಿವಶರಣರು ಪ್ರತಿಪಾದಿಸಿದ ಮತ್ತು ನಡೆದ ಆಚರಣೆಗಳು ಬೇರೆ ಇದ್ದು ಗುಡಿಗೋಪುರಗಳನ್ನೂ ಗವಿಗಳನ್ನೂ ರಚಿಸುವದು ಅವರ ಪದ್ಧತಿಗೆ ಹೊರತಾದವುಗಳು. ಬಸವೇಶ್ವರನ ಕಾಲಕ್ಕೆ ಆಗಿ ಹೋದ ಶಿವಶರಣರೆಲ್ಲರೂ ಒಂದೊಂದು ಉದ್ಯೋಗದ ಮೇಲೆ ಅವಲಂಬಿಸಿಕೊಂಡು ತಮ್ಮ ತಮ್ಮ ವ್ಯವಹಾರದಲ್ಲಿ ನಿರತರಾದವರಿದ್ದರು. ಅವರು ಈ ಪ್ರಕಾರ ತಮ್ಮ ತಮ್ಮ ಕಾರ್ಯಗಳನ್ನು ಮಾಡುತ್ತಲೇ ಕೈಲಾಸವನ್ನು ಸಂಪಾದಿಸಲು ಉದ್ಯುಕ್ತರಾದವರಾಗಿದ್ದರು. ಬರೇ ಏಕಾಂತವಾಸ ಧ್ಯಾನ ಮೌನ ಜಪತಪಗಳಲ್ಲಿ ಆಸಕ್ತರಾದವರಿಂದ ಧಾರ್ಮಿಕ ಪ್ರಸಾರ ಕಾರ್ಯಗಳು ಎಂದೂ ಆಗಿರುವದಿಲ್ಲ. ಈ ಬಗೆಯ ವರ್ತನೆಯನ್ನು ವಚನಕಾರರು ಬಹಳ ಹಳಿದಿರುವದು. ಆದ್ದರಿಂದ ಬಸವೇಶ್ವರನು ಮತ್ತು ಆಗಿನ ಶಿವಶರಣರು ಕಲ್ಯಾಣದಲ್ಲಿ ಗವಿಗಳನ್ನು ಕಟ್ಟಿಸಿಕೊಂಡು ವಾಸಿಸುತ್ತಿದ್ದರೆಂದು ನಂಬಲು ಅರ್ಹವಾಗಿರುವದಿಲ್ಲ.

೬॥ ಉತ್ತಂಗಿಯವರು ವಚನಕಾರರ ಸಂಖ್ಯೆಯು ಮುನ್ನೂರು ಇದೆ ಎಂದು ತಮ್ಮ ಗ್ರಂಥದಲ್ಲಿ ಬರೆದಿರುವರು. ನಾನು ವಚನಶಾಸ್ತ್ರಸಾರದಲ್ಲಿ ಇಷ್ಟು ಜನ ವಚನಕಾರರ ಹೆಸರುಗಳನ್ನು ಕೊಟ್ಟಿದ್ದರೂ

ಕರ್ನಾಟಕದಲ್ಲಿ ಎಲ್ಲ ಕಡೆಗೆ ಇನ್ನೂ ಗ್ರಂಥ ಸಂಶೋಧನವನ್ನೂ ನಡಿಸಿದ್ದಾದರೆ ಈ ಸಂಖ್ಯೆಯು ಎಷ್ಟೋ ಮಡಿ ಹೆಚ್ಚಬಹುದೆಂದು ನನಗೆ ತೋರುತ್ತದೆ.

ವಿ. ಉತ್ತಂಗಿಯವರು ಈ ಪುಸ್ತಕದಲ್ಲಿ ವೀರಶೈವ ಸಮಾಜದ ಮತ್ತು ಧರ್ಮದ ಕೆಲವು ವಿಶಿಷ್ಟ ಧಾರ್ಮಿಕ ತತ್ವಗಳನ್ನೂ ಆಚಾರಗಳನ್ನೂ ವಿವರಿಸಿರುವರು. ಅವುಗಳನ್ನೆಲ್ಲ ನಾವು ಇಲ್ಲಿ ವಿವೇಚಿಸುವ ಅವಶ್ಯವಿಲ್ಲ. ಈ ಬಗ್ಗೆ ಅವರು ತೋರಿಸಿದ ಮುಖ್ಯ ವಿಷಯಗಳು ಯಾವವೆಂದರೆ—ಮೂರ್ತಿಪೂಜೆಯ ಬದಲು ಇಷ್ಟಲಿಂಗ ಪೂಜೆಯನ್ನು ಪ್ರಚಾರಪಡಿಸಿದ್ದು, ಲಿಂಗದೀಕ್ಷಾಪದ್ಧತಿಯನ್ನು ಆರಂಭಿಸಿದ್ದು, ಷಟಸ್ಥಲದ ಮೂಲಕ ಪುನರ್ಜನ್ಮದ ವಿಚಾರಗಳಿಗೆ ಮಹತ್ವ ಕೊಡದೆ ಇದ್ದದ್ದು, ಸ್ತ್ರೀಯರಿಗೆ ಮಹತ್ವದ ಸ್ಥಾನವನ್ನು ಕೊಟ್ಟಿದ್ದು, ವಿಚಾರ ಮತ್ತು ಆಚಾರ ಸ್ವಾತಂತ್ರ್ಯ, ಕನ್ನಡ ಭಾಷೆಗೆ ಉಂಟಾದ ಪ್ರೋತ್ಸಾಹ, ಉದ್ಯೋಗಗಳಿಗೆ ಕೊಟ್ಟ ಉಚ್ಚಧಾರ್ಮಿಕ ಸ್ಥಾನವು, ಧರ್ಮಮೂಢತೆ ಮತ್ತು ಸೂತಕಗಳನ್ನು ಹೊಡೆದೋಡಿಸಿದ್ದು. ಶಿವಾನುಭವದ ವಿಶಿಷ್ಟ ಪದ್ಧತಿ, ಜ್ಞಾನ ಭಕ್ತಿ ಮತ್ತು ಕರ್ಮಮಾರ್ಗಗಳ ವಿವಾದಗಳನ್ನು ಸಿಲ್ಲಿಸಿದ್ದು, ಪ್ರಾಪಂಚಿಕ ಕಾರ್ಯಗಳ ಮಹತ್ವ, ಅಸ್ಪೃಶ್ಯನಿವಾರಣೆ, ಇವೇ ಮೊದಲಾದ ವಿಷಯಗಳನ್ನು ಅವರು ಇದರಲ್ಲಿ ಸ್ವಲ್ಪದರಲ್ಲಿ ಉಲ್ಲೇಖಿಸಿರುವರು. ಮೇಲ್ಕಂಡ ವಿಷಯಗಳು ವೀರಶೈವ ಸಮಾಜದಲ್ಲಿ ಒಂದು ಮಹತ್ತರವಾದ ಬದಲಾವಣೆಗಳನ್ನು ಮಾಡಿರುತ್ತವೆ. ಆದರೆ ಈ ಬದಲಾವಣೆಗಳಿಗೆ ಕಾರಣೀಭೂತವಾದ ಧಾರ್ಮಿಕ ತತ್ವಗಳ ಶೋಧಮಾಡುವದು ಈ ಕಾಲಕ್ಕೆ ಮಹತ್ವದ್ದಿರುತ್ತದೆ. ವಿ. ಉತ್ತಂಗಿಯವರು ವಿವೇಚಿಸಿದ ಮೇಲ್ಕಂಡ ವಿಷಯಗಳನ್ನು ಸ್ಥೂಲ ಸ್ವರೂಪದಲ್ಲಿ ವಿವರಿಸಿರುತ್ತಾರೆ. ಆದರೆ ಅವುಗಳ ಆಂತರ್ಯ ಕಾರಣಗಳನ್ನೂ ಸ್ವರೂಪವನ್ನೂ ಕಂಡು ಹಿಡಿಯುವದು. ಬಹಳ ಅವಶ್ಯವಾಗಿದೆ. ಅವು ವಚನಶಾಸ್ತ್ರದ ಉಕ್ತಿಗಳಲ್ಲಿ ವಿವರಿಸಲ್ಪಟ್ಟಿದ್ದು ಅವು ಇನ್ನೂ ಪ್ರಕಾಶಕ್ಕೆ ಬಂದಿಲ್ಲ. ಅವುಗಳನ್ನು ಶಾಸ್ತ್ರೀಯ ರೀತ್ಯಾ ಸಂಶೋಧಿಸುವದು ಅತ್ಯಾವಶ್ಯಕವಾಗಿರುವದು. ಈಗಿನ ಕಾಲಕ್ಕೆ ಅನೇಕರು ವೀರಶೈವ ಮತದ ಸ್ವರೂಪವನ್ನು ಅರಿಯಬೇಕೆಂದಪೇಕ್ಷಿಸಿ ಶೈವಸಿದ್ಧಾಂತಿಗಳ ವಾಙ್ಮಯವನ್ನೂ ಶೈವಾಗಮಗಳನ್ನೂ ಇಲ್ಲವೆ ಬ್ರಾಹ್ಮಣ ಸಂಸ್ಕೃತಿಯ ಗ್ರಂಥಗಳನ್ನೂ ಓದಿ ಶ್ರಮಬಡುವದುಂಟು. ಆದರೆ ಈ ಶ್ರಮವು ಕಡೆಗೆ ವ್ಯರ್ಥವಾಗುವದೆಂದು ನಮ್ಮ ದೃಢವಾದ ಅಭಿಪ್ರಾಯ

ವಿದೆ. ಆದರೆ ಇವರು ೧೨–೧೩ ನೇ ಶತಮಾನಗಳಲ್ಲಿ ಉದ್ಭೂತವಾದ ವೀರಶೈವ ಕನ್ನಡ ತೆಲಗು, ತಮಿಳು ಮತ್ತು ಸಂಸ್ಕೃತ ವಾಙ್ಮಯವನ್ನು ಪರಿಶೋಧಿಸಿ ಚನ್ನಾಗಿ ಅಭ್ಯಾಸ ಮಾಡತಕ್ಕದ್ದು. ಅಂದರೆ ಮಾತ್ರ ಬಸವೇಶ್ವರನ ಅನುಭವ ಮಂಟಪದಲ್ಲಿ ಸಂಶೋಧಿತವಾದ ಶಿವಾನುಭವದ ಮಹತ್ವದ ತತ್ವಗಳು ಹೊರಪಡುವವು.

೩. ಉತ್ತಂಗಿಯವರು ಬಹಳ ಶ್ರಮವಹಿಸಿ ವೀರಶೈವ ವಾಙ್ಮಯವನ್ನು ಸಂಶೋಧಿಸಿ ಈ ಪುಟ್ಟ ಗ್ರಂಥವನ್ನು ಬರೆದದ್ದಕ್ಕೆ ನಾವು ಅವರನ್ನು ಬಹುಳವಾಗಿ ಮನ್ನಿಸುತ್ತೇವೆ. ನಮ್ಮ ವೀರಶೈವ ವಿದ್ಯಾವಂತರು ಅವರ ಅನುಕರಣವನ್ನು ಅವಶ್ಯವಾಗಿ ಮಾಡಲೆಂದು ನಾವು ಹಾರೈಸುತ್ತೇವೆ.

---

# ಸ್ತೋತ್ರ—ಸಂಗ್ರಹ.

(ಪರಿಶೋಧಕ:—ಮಾಮರ್‍ತೀಶ.)

ಈ ಮೊದಲು ಮಾಹೆ ಆಕ್ಟೋಬರ ೧೯೩೧ ಶಿವಾನುಭವ ಸಂಚಿಕೆಯಲ್ಲಿ ಸ್ತೋತ್ರ ಸಂಗ್ರಹದ ಕೆಲವು ಪದ್ಯಗಳು ಪ್ರಸಿದ್ಧಿಸಲ್ಪಟ್ಟಿವೆ. ಅವುಗಳಂತೆ ಇವು ಸಹ ನನ್ನ ಸಿತ್ರಗಳ ಸಂಗ್ರಹದಲ್ಲಿದ್ದ ಬಹು ಪ್ರೌಢವಾದ ಪದ್ಯಗಳಾಗಿವೆ. ಒಂದೊಂದು ಪದ್ಯದಲ್ಲಿ ಒಂದೊಂದು ಶಬ್ದಗಳ ಪ್ರಯೋಗವೂ ಅವುಗಳ ವಿವಿಧ ಭಾವಗರ್ಭಿತವಾದ ಅರ್ಥ ವಿಶೇಷಗಳೂ ಬಹು ಸ್ವಾರಸ್ಯಯುಕ್ತಗಳಾಗಿವೆ. ಹಾಗು ಕವಿತಾ ವನಿತೆಯ ಸೌಂದರ್ಯದ ದ್ಯೋತಕಗಳೂ ಆಗಿರುತ್ತವೆ.

ಇವುಗಳಿಂದ ಕರ್ನಾಟಕದಲ್ಲಿ ಗತಿಸಿಹೋದ ಕನ್ನಡ ಕವಿಗಳ ಯೋಗ್ಯತೆಯೂ ವಾಗ್--ವೈಖರಿಯೂ ಗೊತ್ತಾಗದೆ ಇರಲಾರದು. "ಸುದುರ್ಲಭಂ ಪ್ರಾಪ್ಯಕವಿತ್ವರತ್ನಂ" ಎಂಬ ಕವಿಕರ್ಣ ರಸಾಯನದ ವಚನಾನುಸಾರವಾಗಿ ಕವಿಗಳೂ ಕವಿತ್ವವೂ ಅಮೌಲ್ಯ ವಸ್ತುಗಳಾಗಿರುತ್ತವೆ. ಆದ್ದರಿಂದ ಭಾಷಾಜಿಜ್ಞಾಸುಗಳು ಅವಶ್ಯವಾಗಿ ಇವುಗಳ ಕಡೆಗೆ ಗಮನಿಸಬೇಕು.

ವಾರ್ಧಿಕ:—ಕಾಲ್ತಲೆಯ ತಾಳ್ದಂಗೆ ಕರಟಿಯನು ಶೀಳ್ದಂಗೆ।
ಮೇಲ್ದಲೆಯ ಪರಿದಂಗೆ ಯತಿಗೆ ದಯವರಿದಂಗೆ।
ಜೋಲ್ದಲೆಯ ಧರಿಸಿದಗೆ ದನುಜರನು ಹರಿಸಿದಗೆ ತೋಳ್ತಲೆಯ ಶೃಂಗಾರಿಗೆ॥
ಸಾಲ್ತಲೆಗಳಾರ್ಯಂಗೆ ಸರ್ವಜಗ ಪೂರ್ಯಂಗೆ।
ಮೇಲ್ತಲೆಯ ಕೀರ್ತಂಗೆ ಮೂಲೋಕ ಸಾರ್ದಂಗೆ।
ಬಾಲ್ತಲೆಯ ಪಿಡಿದಂಗೆ ಭಯವಾರ್ತೆ ವಡೆದಂಗೆ ಶೂಲ್ಧರಗೆ ನತನಪ್ಪೆನೂ ॥೧೨॥

ಟಿಪ್ಪಣೀ— ತಲೆ = ಜಲಂದರನ ಮಸ್ತಕ. ತಾಳ್ದು = ಜಂಗಿನಂತೆ ಧರಿಸಿ. ಕರಟಿ = ಗಜಾಸುರ. ಮೇಲ್+ತಲೆ = ಬ್ರಹ್ಮನ ಊರ್ಧ್ವಮಸ್ತಕ. ಯತಿ = ಉಪಮನ್ಯುಋಷಿ. ಜೋಲ್+ತಲೆ = ಜೋತಾಡುವ ತಲೆಯುಳ್ಳ ಆನೆ. ತೋಳ್ = ಬಾಹು. ಶೃಂಗಾರ = ಅಲಂಕಾರ. ಸಾಲ್+

ತಲೆ = ಸಾಲಾದ ತಲೆಗಳುಳ್ಳವ ಷಣ್ಮುಖಸ್ವಾಮಿ. ಪೂರ್ಯ = ವ್ಯಾಪಕ. ಮೇಲ್+ತಲೆ = ತ್ರಿಶೂಲಾಗ್ರದಲ್ಲಿದ್ದ ಬಾಲನಾರಾಯಣನ ತಲೆ. ಬಾಲ್+ ತಲೆಯ = ಮಹಾಶೇಷನ ಪುಚ್ಛ ಮಸ್ತಕ. ವಾರ್ತೆ = ಯಶಸ್ಸು. ಶೂಲ+ಧರ = ತ್ರಿಶೂಲಧರಶಿವ. ನತ = ನಮಸ್ಕಾರ.

ವಾರ್ಧಿಕಃ— ಘಸ್ಮರಾಹರ ಗಮನದೃಕ್ಚರಣರಾಜಿತನೆ ।
ಘಸ್ಮರಾಹರ ಗಮನ ರುಂಡಸ್ತ ಜಿನಧರನೆ ।
ಘಸ್ಮರಾಹರ ಗಮನ ಕುಣಿಪ ಶೂಲಾಂಕಿತನೆ ಘಸ್ಮರಾಸ್ತುತಿ ಪಾತ್ರನೆ ॥
ಘಸ್ಮರಾಹರ ಗಮನ ನಾತ್ಮಜನದಹಿಸಿದನೆ ।
ಘಸರಾಹರ ಗಮನನಮುರ್ದಪ್ಪಿದನುಪಮನೆ ।
ಘಸ್ಮರಾಹರ ಗಮನರಿಪುವಂದ್ಯ ಸೇವಿತನೆ ಘಸ್ಮರಾಂಕನೆ ಪಾಹಿಮಾಂ ॥೧೩॥

ಟಿಪ್ಪಣಿಃ— ಘಸ್ಮರ = ಸರ್ಪ. (ಬಹಳ ತಿನ್ನುವವ) ಆಹಾರ = ಊಟ. ಗಮನ = ಗರುಡನ ಮೇಲೆ ಆಡ್ಡಾಡುವವ (ನಾರಾಯಣ.) ದೃಕ್ = ನಯನಗಳು. ರುಂಡ = ಶಿರಸ್ಸು. ಶೂಲ = ತ್ರಿಶೂಲ. ಆತ್ಮಜನ = ವಿಷ್ಣುವಿನ ಮಗ ಮನ್ಮಥ ಗಮನನ = ನಾಗಾಂತಕನ ಮೇಲೆ ಹೋಗುತ್ತಿದ್ದ ವೃಷಕೇಶನ. ಆಮುರ್ದಪ್ಪು = ಆಲಂಗಿಸು. ರಿಪು = ವಿಷ್ಣುವಿನ ವೈರಿಗಳು (ರಾಕ್ಷಸರು.) ಅಂಕ = ಕುರುಹು. ಅಜಿನ = ಸಮ್ಮವನು.

ವಾರ್ಧಿಕಃ— ಭುವನ ಭವಭವ ವಿನುತ ಭುವನ ಭಯನಯನ ನತ ।
ಭುವನ ಭವಭವನ ಭವ ಭುವನಧರವಿದಳಪವಿ ।
ಭುವನ ಭವಸಖ ಭುವನ ಭವರಿಪುವನಲನಯನ ಗಗನ ಭುವನಾವತಂಸಾ ॥
ಭುವನಧರ ಧರಕನಕ ಭುವನಧರ ಕರವರದ ।
ಭುವನಧರ ಗಭವಶರದ ಭುವನಭವ ಶಿರಭವನ ।
ಭುವನೇಶ್ವರಿಯವದನ ಭುವನಜ ಭುವನ ನಯನ ಜಯ ಜಯಸಿದ್ಧನಂಜಾ ॥೧೪॥

ಟಿಪ್ಪಣಿಃ— ಭುವನ = ನೀರು. ಭವ = ಹುಟ್ಟಿದ (ಕಮಲ). ಭವ = ಕಮಲದಲ್ಲಿ ಹುಟ್ಟಿದ (ಬ್ರಹ್ಮ). ವಿನುತ = ಹೆಚ್ಚಾಗಿ ಕೀರ್ತಿಸಿಕೊಳ್ಳು

ವಂಥ. ನಯನ = ಕಮಲದಂತೆ ಕಣ್ಣುಳ್ಳ (ನಾರಾಯಣ). ನತ = ನಮ ಸ್ಕರಿಸಿಕೊಳ್ಳುತ್ತಿದ್ದಂಥ. ಭವನ = ಕಮಲವೇ ಮನೆಯಾಗುಳ್ಳ ಲಕ್ಷ್ಮಿ. ಭವ = ಲಕ್ಷ್ಮಿಯಲ್ಲಿ ಹುಟ್ಟಿದ ಮನ್ಮಥ ಭುವನಧರ = ಪರ್ವತ. ವಿದಳ = ಹೋಳುಮಾಡು. ಪವಿ = ವಜ್ರಾಯುಧ. ಸಖ = ಕಮಲದ ಗೆಳೆಯ (ಸೂರ್ಯ). ರಿಪು = ಕಮಲದವೈರಿ (ಚಂದ್ರ). ಅನಲ = ಬೆಂಕಿ. ನಯ ನ = ನೇತ್ರವಾಗಿಯುಳ್ಳಂಥ. ಗಗನಭುವನ = ಆಕಾಶಗಂಗೆ. ಅವತಂಸಾ= ಚನ್ನಾಗಿಕೂಡಿದಂಥ. ಭುವನ = ಚತುರ್ದಶಭೂಮಿಗಳು. ಧರ = ಧರಿಸಿ ದಂಥ ಮಹಾಶೇಷ. ಧರ = ಮಹಾಶೇಷನನ್ನು ಧರಿಸಿದಂಥ. ಕನಕಭು ವನ = ಸುವರ್ಣಭೂಮಿ. ಧರ = ಧರಿಸಿದ (ಮೇರುಪರ್ವತ). ಕರ = ಮೇರುವು ಹಸ್ತದಲ್ಲಿ ಬಿಲ್ಲಿನಂತಿರುವ. ವರ = ಇಷ್ಟಾರ್ಥ. ದ = ಕೊಡು ಭುವನಧರ = ನೀರನ್ನು ಧರಿಸಿದ್ದು ಮೇಘ. ಗ = ಮೇಗದಮೇಲೆ ಅಡ್ಡಾ ಡುವವ (ಇಂದ್ರ). ಭವ = ಇಂದ್ರನಮಗ ಅರ್ಜುನ. ಶರ = ಪಾಶುಪ ತಾಸ್ತ್ರ. ದ = ಕೊಡು. ಭುವನಭವ = ಸಮುದ್ರದಲ್ಲಿ ಹುಟ್ಟಿದ್ದು (ಚಂದ್ರ). ಶಿರ = ಮಸ್ತಕ. ಭವನ ಭುವನೇಶ್ವರಿ = ಹದಿನಾಲ್ಕುಲೋಕಗಳ ಕರ್ತಳು (ಪಾರ್ವತಿ) ವದನಭುವನಜ = ಮುಖಕಮಲ. ಭುವನನಯನ = ಜಗ ಚ್ಚಕ್ಷು

ವಾರ್ಧಿಕಃ — ಶರನಾಮ ಸುರನ ಪಾಡಗಾಯ್ದನಗವಿಲ್ಲ ॥
ಶರನಾದನುರದ ಮೇಲಿರುವಸಿರಿವರಸುತನ ।
ಶರಪಂಚ ಶರವೊಂದರಿಯೆ ಸಿರದೊಳಿರಿಸಿ ಶರಮಂಡಲದ ಶರದಲಿ ॥
ಸರಸವಾಡುವನಯ್ಯ ನಯ್ಯ ಫಲುಗುಣಗೊಲಿದು ।
ಶರವರವನಿತ್ತ ಶರಮೂಗ ಮನೆ ಧೊರೆಹಾರ ।
ಗಿರಿಸುತೆಗೆ ಅರ್ಧ ಶರೀರವನಿತ್ತ ಶಿವಗಂಗೆ ಶಿವಧರನೆ ಸಲ ಹೆಮ್ಮನೂ ॥೧೫॥

ಟಿಪ್ಪಣಿಃ— ಶರನಾಮಸುರ = ಬಾಣಾಸುರ. ಪಾಡ = ಬಾಗಿಲ. ನಗ = ಪರ್ವತ. ವಿಲ್ಲ = ಬಿಲ್ಲು. (ಧನುಸ್ಸು.) ಶರನಾದನು = ಅಂಬು ವಾದ ನಾರಾಯಣನು. ಉರ = ಎದೆ. ಸಿರಿ = ಲಕ್ಷ್ಮಿಯು. ಸುತ = ಲಕ್ಷ್ಮಿಯ ಮಗ ಮನ್ಮಥ. ಶರಪಂಚ = ಮನ್ಮಥನ ೫ ಬಾಣಗಳು. ಶರಮಂಡಲ =

ನೀರಿನ ಮಂಡಲ. (ಮೇಘ) ಶರದಲಿ = ಮೇಘ ಧ್ವನಿಯಲ್ಲಿ. ಸರಸ ಮಾಡು = ವಿನೋದವಾಡು. (ನವಿಲು) ಅಯ್ಯ = ಮಯೂರನ ಒಡೆಯ (ಷಣ್ಮುಖ.) ಅಯ್ಯ = ಷಣ್ಮುಖನ ತಂದೆ (ಶಿವ) ಫಲುಗುಣ = ಅರ್ಜುನ. ಶರ = ನೀರು. ಮೂಗ = ನಾಸಿಕ. ಮನೆ = ಮೂಗಿನಲ್ಲಿ ನೀರುಳ್ಳ ಗೊರ ಲೆಯ ಮನೆ. (ವಾಲ್ಮೀಕ). ಧೊರೆ = ಒಡೆಯ. ಕರ್ಕೋಟಕ = ಸರ್ಪ. ಹಾರ = ಸರ್ಪಿನ ಮಾಲೆ. ಗಿರಿಸುತೆ = ಪರ್ವತರಾಜನ ಮಗಳು(ಪಾರ್ವತಿ) ಶಿವ = ನಿರ್ಮಲ. ಗಂಗೆ = ದೇವಗಂಗೆ. ಶಿವ = ಮಹಾಶೇಷ. ಧರ = ಧರಿಸಿ ದವ (ಶಿವ).

ವಾರ್ಧಿಕಃ— ಪಡಲಗಾಲನ ವೈರಿ ವಾಹನವ ಮಾಡಿದನ ।
ಒಡಹುಟ್ಟಿದನ ಪಿತ್ತ ಸೋಮನಂ ಮಾವನಂ ।
ಮಡದಿ ಮಗಳಿನಯನಳಿಯನತ್ತಿಗೆಯತ್ತೆಯಾಳ್ದ ವಾಹನ ವೈರಿಗೆ ॥
ಬಿಡದೆತುತ್ತಾದವನ ಪಡೆದ ಕಂದನ ಪಡೆಯ ।
ನೊಡಗೆ ಕಾದಲು ಮಡಿದವಡಹುಟ್ಟಿದವನ ಪಟ್ಟ ।
ಪೊಡವಿಪತಿನಿನಗಾಗಲೆಂದು ಪರಕೆಯನಿತ್ತು ನೃಪನ ಸಂಮು ಖದಿ ಕುಳಿತಾ ॥೧೬॥

ಟಿಪ್ಪಣೀ— ಪಡಲಗಾಲನ = ಪೊಡೆಯುಡಿಗನ, (ಹಾವು) ವೈರಿ = ಶತ್ರು (ಮಯೂರ) ವಾಹನ = ವರೂಥ. ಮಾಡಿದನ = ವಾಹನ ಮಾಡಿಕೊಂಡಂಥ ಷಣ್ಮುಖನ. ಒಡಹುಟ್ಟಿದನು = ಒಡಹುಟ್ಟಿದವನಾದ ವಿಘ್ನೇಶ್ವರನು. ಸೋಮನಂ = ಉಮೆಯಸಹಾಯುಕ [ಶಿವನು]. ಮಾವ = ಮಾವನಾದ ದಕ್ಷಬ್ರಹ್ಮ. ಮಡದಿ = ದಕ್ಷಬ್ರಹ್ಮನ ಹೆಂಡತಿ (ವೇದವಲ್ಲಿ). ಮಗಳು = ರೋಹಿಣಿ ಎಂಬ ಮಗಳು. ಇನಯ = ರೋಹಿಣಿಯ ಗಂಡ (ಚಂದ್ರ). ಅಳಿಯ = ಚಂದ್ರ ಮಗಳ ಗಂಡ (ಮನ್ಮಥ). ಅತ್ತಿಗೆ=ಮನ್ಮಥನ ಅತ್ತಿಗೆ (ಸರಸ್ವತಿ). ಅತ್ತೆ = ಸರಸ್ವತಿಯ ಅತ್ತೆ [ಲಕ್ಷ್ಮಿಯು]. ಆಳ್ದ = ಪಾಲಿಸಿದಂಥ ನಾರಾಯಣನ. ವಾಹನ = ವಾಹನವಾದ (ಗರುಡ) ವೈರಿ = ಗರುಡನ ವೈರಿ [ಮಹಾಶೇಷ]. ಬಿಡದೆ = ಹಿಂಗದೆ. ತುತ್ತಾದವನ = ತುತ್ತಾದ [ಕವಳ] ವನು [ವಾಯುವ್ಯನು]. ಪಡೆ = ಹಡೆ. ಕಂದ = ಕುಮಾರ. (ಹನುಮಂತ). ಪಡೆಯನೊಡನೆ = ಯಜಮಾನನಾದ ರಾಮ ಚಂದ್ರನ ಸಂಗಡ. ಕಾದಲು = ಯುದ್ಧಮಾಡಲು. ಮಡಿದ = ಸತ್ತ

[ರಾವಣನ]. ಒಡಹುಟ್ಟಿದನ = ರಾವಣನ ವಡಹುಟ್ಟಿದವ [ವಿಭೀಷಣನ] ಪಟ್ಟ = ಪಟ್ಟಕ್ಕೆ [ಒಡೆತನಕ್ಕೆ]. ಪೊಡವಿಪತಿ = ಭೂಮಿಯ ಅರಸು. ಪರಕೆ = ಹರಿಕೆ [ಆಶೀರ್ವಾದ]

ವಾರ್ಧಿಕಃ—ತರುಣಿಯುಳ ಪೆಸರು ತಾರಜಿಯಾಣ್ಮನಗ್ರಜನ ।
ಪಿರಿಯುಯ್ಯನರ್ಧಾಂಗಿಯುಳ ನಾಮುದಿಟ್ಟವಣಿ ।
ತೆರೆಗರಿದು ಜಮೆಗೊಳಲು ದಶನುಮೆ ತಾರೆಯಿಂದೆಸೆವನ
ಶಿರಂಗಳೊಳಗೆ ॥
ಎರಡೆರಡನುಳಿದೊಂದನೆ ಮೂರ್ಧ್ನಿಯಂ ಪಿಡಿದು ।
ಪರಬ್ರಹ್ಮ ಪರಾತ್ಪರಮ ಪಾವನಮೂರ್ತಿ ।
ಗಿರಿರಾಜ ಪುತ್ರಿಯಾ ಮುಖಕಮಲದಿವದವನೆ ಕರಿಸುರ
ಹರಜಯಜಯಾ ॥೧೭।

ಟಿಪ್ಪಣಿಃ—ತಾರಜಿ = ನಿರ್ಮಲನಾಮವುಳ್ಳ ಸುಭದ್ರ. ಅಣ್ಮ = ಗಂಡ (ಅರ್ಜುನ). ಅಗ್ರಜ = ಅಣ್ಣ (ಧರ್ಮರಾಜ). ಪಿರಿಯುಯ್ಯಂ = ಶನಿ. ಅರ್ಧಾಂಗಿಯುಳು = ಹೆಂಡತಿಯಾದ ವಿಧಿಯು. ನಾಮ = ಹೆಸರು. ಟವಣಿ = ಲೆಖ್ಖ. ತೆರಂ = ರೀತಿ. ಅರಿ = ತಿಳಿ. ಜಮೆಗೊಳಲು = ಒಟ್ಟುಮಾಡಲು. ದಶನುಮೆತಾರೆಯಿಂದ = ಹತ್ತನೆಯ ಮಘಾನಕ್ಷತ್ರದಿಂದ. (ಮುಖದಿಂದ). ಎಸೆ = ಶೋಭಿಸು. ಶಿರಂಗಳೊಳಗೆ = ಬ್ರಹ್ಮನ ಶಿರಸ್ಸುಗಳಲ್ಲಿ. ಎರಡೆರಡಂ = ನಾಲ್ಕನ್ನು. ಉಳಿದು = ಬಿಟ್ಟು. ಒಂದನೆಮೂರ್ಧ್ನಿಯಂ = ಒಂದು ಮಸ್ತಕವನ್ನು. ಪರಬ್ರಹ್ಮ = ನಿಷ್ಕಲಬ್ರಹ್ಮ. ಪರಾತ್ಪರಮ = ಯಾವದು ಪರವೋ ಅದಕ್ಕೆ ಪರವು. ಪಾವನಮೂರ್ತಿ = ನಿರ್ಮಲಸ್ವರೂಪ. ದಿವದವನೆ = ಸೂರ್ಯಸಮಾನ. ಕರಿಸುರ = ಗಜಾಸುರ.

ಭಾಮಿನಿಃ—ಸಿಂಧು ಜನ ಸೋದರನ ತಂದೆಯ ।
ದ್ವಂದಯುಗ್ಮದ ರಾಣಿಯನುಜೆಯ ।
ನಂದನನ ನೇರಿದನ ಕಂದನ ಶಾಪದಲಿ ಜನಿಸಿ ॥
ಬಂದು ಪುರವನು ನೆಗಪಿದಾತನ ।
ಕೊಂದವನ ಭೃತ್ಯನ ಪಿತನ ಸಖ ।
ದ್ವಂದರವಿಶಶಿಗೂಡಿ ಮೆರೆವ ತ್ರಿಯಂಬಕನೆ ಸಲಹೂ ॥೧೮॥

ಟಿಪ್ಪಣಿಃ— ಸಿಂಧುಜನ = ಸಮುದ್ರದಲ್ಲಿ ಹುಟ್ಟಿದ ಚಂದ್ರ. ಸೋದರನ = ಒಡಹುಟ್ಟಿದವ ಸೂರ್ಯ. ತಂದೆ = ಜನಕ. (ಬ್ರಹ್ಮ) ದ್ವಂದಯು

ಗ್ಮದರಾಣಿ = ನಾಲ್ಕನೇ ಸ್ತ್ರೀ (ಕದ್ರು.) ಅನುಜೆ = ಕದ್ರುವಿನ ತಂಗಿ( ವಿನುತೆ) ನಂದನ = ಮಗ. ಏರಿದನ = ವಾಹನ ಮಾಡಿಕೊಂಡ ನಾರಾಯಣನ. ಕಂದನ = ಮಗ (ಬ್ರಹ್ಮ). ಪುರ = ರಜತಾದ್ರಿ. ಕೊಂದವನ = ರಾವಣನನ್ನು ಕೊಂದವ ರಾಮಚಂದ್ರ. ಭೃತ್ಯ = ರಾಮಚಂದ್ರನ ಸೇವಕ (ಹನುಮಂತ) ಪಿತ = ತಂದೆಯಾದ ವಾಯು. ಸಖ = ಗೆಳೆಯನಾದ ಅಗ್ನಿ. ದ್ವಂದ = ಎರಡು.

ಭಾಮಿನಿಃ— ತಾರಗೋಸದನಲ ದಿವಾಕರ ॥ ತಾರ = ಧ

ತಾರಪತಿಗೋಗೋಪಯಧರ ।
ತಾರಪತಿಯ ಜನದದೃಗ್ ತಾರೆಯೋಳ್ದಹಿ
ತಾರೆಶಿಖಿಧರ ತಾರೆಗಮನಸಖ ।
ತಾರೆತಾತನ ತಾರೆಯನುನಿಜ ।
ತಾರೆಗಿಟ್ಟನೆ ಸಲಹು ಪ್ರಸನ್ನೇಶ ಮ... ॥೧೯॥

ಟಿಪ್ಪಣಿಃ— ತಾರಗೋ = ರಜತಾದ್ರಿ. ಸದನ = ಮಂದಿರ. (ಮನೆ) ಅನಲ = ಅಗ್ನಿ. ದಿವಾಕರ = ಸೂರ್ಯ. ತಾರಪತಿ = ನಕ್ಷತ್ರಗಳ ಒಡೆಯ (ಚಂದ್ರ). ಗೋ = ನಯನ (ಕಣ್ಣು). ಗೋಪಯ = ದೇವಗಂಗೆ. ತಾರಪತಿ = ಲಕ್ಷ್ಮೀಪತಿ (ನಾರಾಯಣ). ಜನನ = ನಾರಾಯಣನಿಂದ ಜನಿಸಿದವ (ಮನ್ಮಥ). ದೃಗ್‌ತಾರೆ = ಹಣೆಗಣ್ಣಿನ ಅಗ್ನಿ. ತಾರೆ = ನಕ್ಷತ್ರ. ಶಿಖಿ= ಮಕುಟ. ತಾರೆ = ಕುದುರೆ. ಗಮನ = ಕುದುರೆಯಮೇಲೆ ಅಡ್ಡಾಡುವವ (ಕುಬೇರ). ತಾರೆ = ಮನ್ಮಥ ತಾತ = ತಂದೆ (ನಾರಾಯಣ). ತಾರೆ= ನೇತ್ರ. ತಾರೆ = ಪಾದ.

(ಮುಂದೆಸಾಗುವದು.)

---

## ಹೃದ್ಗತ.

(ಸಂಪಾದಕರು.)

ಶಿವಾನುಭವ ಪತ್ರಿಕೆಯು ಕೇವಲ ಜನಾಶ್ರಯದ ಮೇಲೆ ಅವಲಂಬಿಸಿರುತ್ತದೆ. ಈ ಪತ್ರಿಕೆಯ ಉದ್ದೇಶವು ವೀರಶೈವ ಸಂಸ್ಕೃತಿ ಮತ್ತು ಅದರ ಇತಿಹಾಸ ಇವುಗಳನ್ನು ಹೊರಪಡಿಸುವದು ಇರುವದರಿಂದ ಇದು ವೀರಶೈವ ಸಮಾಜದವರ ಪ್ರೋತ್ಸಾಹ ಮತ್ತು ಸಹಾಯದಮೇಲೆ ಮುಖ್ಯ

ವಾಗಿ ಅವಲಂಬಿಸಬೇಕಾಗಿರುವದು ಸ್ವಾಭಾವಿಕವಾಗಿರುತ್ತದೆ. ಈ ಪತ್ರಿಕೆಯು ಹೋದ ೬ ವರ್ಷಗಳಿಂದಲೂ ಮಾಡುತ್ತಬಂದ ಕಾರ್ಯಗಳು ಎಲ್ಲರಿಗೂ ವಿದತವೇ ಇರುತ್ತವೆ. ಈ ಅವಧಿಯಲ್ಲಿ ಅದು ವೀರಶೈವ ಧರ್ಮದ ಮಹತ್ವದ ವಾಙ್ಮಯವನ್ನು ಅನೇಕ ಗ್ರಂಥಗಳ ಮೂಲಕ ಪ್ರಕಟಪಡಿಸಿರುತ್ತದೆ. ಮತ್ತು ಅನೇಕ ವೀರಶೈವ ರಾಜಮನೆತನಗಳ ಮತ್ತು ಪ್ರಸಿದ್ಧ ಪುರುಷರ ಚರಿತ್ರೆಗಳನ್ನು ಶೋಧಿಸಿ ಜನರ ಮುಂದೆ ಇಟ್ಟಿದೆ. ಈ ಪತ್ರಿಕೆಗೆ ವೀರಶೈವ ಸಮಾಜದ ಸಹಾಯವು ಇರದ್ದರಿಂದ ...ಗೀಲೆ ಇದರ ಸ್ವರೂಪವನ್ನು ಬದಲುಮಾಡಿ ಇಡೀ ಕರ್ನಾಟಕದ ...ಕ ಮತ್ತು ಸಾಮಾಜಿಕ ಸಂಸ್ಕೃತಿಯ ಬೆಳವಣಿಗೆಯ ಸ್ವರೂಪ ಅದರ ಇತಿಹಾಸ ಇದನ್ನು ವಿಶದಪಡಿಸಬೇಕೆಂಬ ಉದ್ದೇಶದಿಂದ ಕೆಲ ಮಹನೀಯರ ಅಭಿಪ್ರಾಯವನ್ನು ನಾವು ಕೇಳಿದೆವು. ಅವುಗಳಲ್ಲಿ ರಾ. ಬ. ಆರ್. ...ಶಹಾಚಾರ್ಯರ ಅಭಿಪ್ರಾಯವು ಮಹತ್ವದ್ದಿದ್ದು ಅದನ್ನು ನಾವು ಇಲ್ಲಿ ಶಿವಾನುಭವದ ವಾಚಕರ ಮುಂದೆ ವಿಚಾರಕ್ಕೋಸ್ಕರ ಇಡುತ್ತೇವೆ.

"ನೀವು ಕೈಕೊಂಡ ಕಾರ್ಯಕ್ಕೆ ಸಹಾಯವಿಲ್ಲೆಂಬದನ್ನು ತಿಳಿದು ನನಗೆ ಅತ್ಯಂತ ಕ್ಲೇಶವಾಯಿತು. ಶಿವಾನುಭವದ ಬಗ್ಗೆ ನಿಮ್ಮ ಸಮಾಜದವರ ಸಹಾಯ ಮತ್ತು ಸಹಾನುಭೂತಿಯನ್ನು ನೀವು ಪಡೆದಿರುವಿರೆಂದು ನನಗೆ ಅನಿಸಿತ್ತು. ಈ ತರದ ಪತ್ರಿಕೆಯು ಇದ್ದದ್ದು ಒಂದೇ ಒಂದಾಗಿರುವುದರಿಂದ ವೀರಶೈವ ಸಮಾಜದ ವಾಚಕವರ್ಗವು ಮತ್ತು ಕರ್ನಾಟಕದಲ್ಲೆಲ್ಲ ಇರುವ ಅದರ ಅಸಂಖ್ಯ ಮಠಾಧಿಕಾರಿಗಳು ಅದಕ್ಕೆ ಸಹಾಯಮಾಡುವದು ಅವಶ್ಯವಿದೆ. ನಿಮ್ಮ ಪತ್ರದ ಮೇಲಿಂದ ನಿಮ್ಮ ಪತ್ರಿಕೆಯ ಯೋಗ್ಯತೆಗೆ ಅನುಸರಿಸಿ ವೀರಶೈವ ಸಮಾಜದವರು ಎಷ್ಟು ಸಹಾಯಮಾಡತಕ್ಕದ್ದೋ ಅಷ್ಟು ಸಹಾಯಮಾಡಿಲ್ಲೆಂದು ನನಗೆ ತೋರುತ್ತದೆ. ನಿಮ್ಮ ಪತ್ರಿಕೆಗೆ ಒಂದು ಬಗೆಯ ವಿಶಿಷ್ಟತ್ವವು (*individuality*) ಇದೆ. ಇದು ಒಂದು ಜಾತಿಗೆ ಸಂಬಂಧವಾದದೆಂದು ಕೆಲವರೂ ಅಂದರೂ ವೀರಶೈವ ಸಮಾಜದವರು ತಮ್ಮ ಕರ್ತವ್ಯವನ್ನು ಮಾಡುವ ವರೆಗೆ ಈ ಅದರ ಸ್ವರೂಪವನ್ನು ನೀವು ಇಡಬಹುದು. ಇದು ಶಕ್ಯವಿರದಿದ್ದರೆ ನೀವು ಸೂಚಿಸಿದ ಪ್ರಕಾರ ಕರ್ನಾಟಕದ ಎಲ್ಲ ಸಮಾಜದವರಿಗೆ ಸಂಬಂಧಪಡುವಂತೆ ಈ ಪತ್ರಿಕೆಗೆ ವಿಸ್ತೃತ ಸ್ವರೂಪವನ್ನು

ಅಸಾಧುವಾಗಿರುವ ಊಹೆಗಳಿಂದ ಹೊರಟು, ಪ್ರೌಢದೇವರಾಯನ ಕಾಲದಿಂದೀಚೆಗೆ ಇದ್ದಂಥ ಕವಿಗಳು ೧೦೧ ವೀರಶೈವ ಶರಣರಿದ್ದ ಬಗ್ಗೆ ಪದೇ ಪದೇ ಉಲ್ಲೇಖಿಸಿದ್ದರೂ, ನಮ್ಮ ದೊರೆಸ್ವಾಮಿಗಳು "ಹಂಪೆಯಲ್ಲಿ ೧೦೧ ವೀರಶೈವ ಶರಣರಿದ್ದುದಕ್ಕಾಗಲಿ ಮತ್ತಾವ ಆಧಾರವೂ ದೊರೆಯುವದಿಲ್ಲ" ಎಂದು ಬಹು ದಿಟ್ಟತನದಿಂದ ಹೇಳುವರು. ಆದರೆ ಈಗ ತಾನೆ ಅಚ್ಚಾದ ನಿರಂಜನ ವಂಶರತ್ನಾಕರದಲ್ಲಿ ± ಅಲ್ಲಮಪ್ರಭು ಸಾಂಪ್ರದಾಯಕರಾದ ೧೫ ನೆಯ ಪಟ್ಟದ ಗೋಸಲಸಿದ್ಧೇಶ್ವರಸ್ವಾಮಿಗಳು ೧೦೭ ಷಟ್ಸ್ಥಲ ಬ್ರಹ್ಮಿಗಳಾದ ವಿರಕ್ತರಿಗೆ ಅನುಗ್ರಾಹಕರಾಗಿದ್ದರೆಂದೂ, ಅವರ ತರುವಾಯ ಬಂದ ಮುಂದಿನ ಪಟ್ಟದವರಾದ ಶಂಕರೇಶ್ವರ ಸ್ವಾಮಿಗಳ ಕಾಲಕ್ಕೆ ಪ್ರೌಢದೇವರಾಯನು ಆ ವಿರಕ್ತರನ್ನು ಗುರುಗಳೊಡನೆ ತನ್ನ ರಾಜಧಾನಿಗೆ ಬರಮಾಡಿಕೊಂಡು ಅವರಿಂದ ಆಶೀರ್ವಾದಿತನಾದನೆಂದೂ ಸ್ಪಷ್ಟ ಉಲ್ಲೇಖವಿದೆ. ಇದೇ ವಿಷಯವನ್ನು ಮುಂದೆ ಗುಬ್ಬಿಯ ಮಲ್ಲಣಾರ್ಯ (ಸು ೧೫೧೩) † ಚನ್ನಬಸವಾಂಕ (ಸು ೧೫೫೦)* ಕಿಕ್ಕೆರಿಯಾರಾಧ್ಯ ನಂಜುಂಡ (ಸು ೧೫೫೦) × ಅದೃಶ್ಯಕವಿ (ಸು ೧೫೮೦)§ ವಿರೂಪಾಕ್ಷ ಪಂಡಿತ (೧೫೮೪) = ಸಿದ್ಧನಂಜೇಶ (ಸು ೧೬೫೦) ± ಶಾಂತಲಿಂಗ ದೇಶಿಕ (೧೬೭೨) || ನೋದಿಯ ರುದ್ರ (೧೬೩೭) + ಇವರು ಮೇಲೆ ಮೇಲೆ ಹೇಳಿದ್ದರೂ ಇವಾವವೂ ಆಧಾರಗಳಾಗಿ ಅವರಿಗೆ ತೋರವು. ಲಭ್ಯವಿರುವ ಈ ಸಂಗತಿಗಳನ್ನು ಬದಿಗಿಟ್ಟು ತಮ್ಮ ಅಭಿಪ್ರಾಯವನ್ನು ವ್ಯಕ್ತಗೊಳಿಸುವದು ಇದೆಂಥ ಐತಿಹಾಸಿಕ ಸಂಗತಿಗಳ ನಿರ್ಣಯವನ್ನು ಮಾಡುವ ಪದ್ಧತಿಯೋ ನಮಗೆ ತಿಳಿಯದು.

ಇನ್ನು ಕವಿಗಳ ಹಾಗು ಮಹಿಮಾಪುರುಷರ "ಸತ್ತಿಗೆ" ಶಾಸನ ಪ್ರಮಾಣವೇ ಬಲವಾದ ಪ್ರಮಾಣವೆನ್ನಬಹುದು. ಇದರೆ ಇದು ಕೇವಲ

± ಪುಟ ೩೦

† ವೀರಶೈವಾಮೃತ ಪುರಾಣ ೮

* ಕಚ ೨ ೨೩೪

× ಕಚ ೨ ೨೬೬

§ ಪ್ರೌಢರಾಯ ಕಾವ್ಯ ೧೪೨ ೩೩

= ಚ. ಬ. ಪುರಾಣ

± ಕಚ ೩೮೨

|| ಕಚ ೫೮ (ಭೈರವೇಶ್ವರ ಕಾವ್ಯದ ಕಥಾಸೂತ್ರ ರತ್ನಾಕರದಲ್ಲಿ)

+ ಕಚ ೨ ೩ ೪೦

ಐತಿಹಾಸಿಕ ಸಂಗತಿಗಳ ಹುಚ್ಚು "ವ್ಯಕ್ತಿಗಳ ಸತ್ತೆಗೆ ಶಾಸನವೇ ಪ್ರಮಾಣವಾದ ಪಕ್ಷದಲ್ಲಿ ಶಾಸನೋಕ್ತರಲ್ಲದ ಶಂಕರಾಚಾರ್ಯ ರಾಮಾನುಜಾಚಾರ್ಯಾದಿಗಳ ಸತ್ತೆಯನ್ನು ಹೇಗೆ ನಂಬುವದು?" ಬ್ರಾಹ್ಮಣಾದಿಗಳಿಗೆ ಪವಿತ್ರವಾಗಿರುವ ರಾಮಾಯಣ ಮಹಾಭಾರತಗಳ ಕಥಾನಾಯಕರ ಅಸ್ತಿತ್ವವನ್ನಾದರೂ ಹೇಗೆ ನಂಬುವದು? ನಮ್ಮ ದೊರೆಸ್ವಾಮಿಗಳು ಹೇಳುವಂತೆ "ಆವ ವಿದ್ವಾಂಸನೂ ಎಲ್ಲಾ ವೀರಶೈವ ಜೈನ ಬ್ರಾಹ್ಮಣ ಸಾಂಪ್ರದಾಯದ ಗ್ರಂಥಗಳನ್ನೂ ಅತ್ಯಂತವಾಗಿ ನಿಂದಿಸಿ ಅವುಗಳಲ್ಲಿ ದೊರೆಯಬಹುದಾದ ಸಹಾಯವನ್ನು ನಿರಾಕರಿಸಲಾರನು ‖ ಚರಿತ್ರವೆಂದು ಹೇಳಿಸಿಕೊಳ್ಳುವ ಗ್ರಂಥಗಳಲ್ಲಿಯೂ ಕೂಡ ಬೇಕಾದಷ್ಟು ದೋಷಗಳು ದೊರೆಯುತ್ತವೆ. "ಮೇಲ್ಕಂಡ ಕಥೆಯನ್ನು ಹೇಳುವ ಗ್ರಂಥಗಳಲ್ಲೆಷ್ಟೋ ವಿರೋಧಗಳೂ ಅಬದ್ಧಗಳೂ ತುಂಬಿ" ದ್ದರೆ ಎಲ್ಲ ಮತೀಯರ ಗ್ರಂಥಗಳಲ್ಲಿಯೂ ಪರಸ್ಪರ ವಿರೋಧಗಳೂ ಅಬದ್ಧಗಳೂ ತುಂಬಿವೆ. ಐತಿಹಾಸಿಕ ಭಕ್ತರು ಒಳ್ಳೇ ಪ್ರಮಾಣ್ಯವನ್ನಾಗಿ ಗಣಿಸುವ ಶಾಸನಗಳ ಹಾಡೂ ಇಂತಹದೇ! ಹೀಗಿರುವಲ್ಲಿ ಉಪಲಬ್ಧವಿರುವ ಸಾಮಗ್ರಿಗಳ ಸಹಾಯವನ್ನು ತೆಗೆದುಕೊಂಡು ಐತಿಹ್ಯಸಂಗತಿಯ ನಿರ್ಣಯವನ್ನು ಮಾಡಬೇಕಲ್ಲದೆ ಪಕ್ಷಪಾತವನ್ನಿಟ್ಟುಕೊಂಡು ನಿರ್ಣಯಿಸುವದು ಇತಿಹಾಸ ಭಕ್ತರ ಲಕ್ಷಣವಲ್ಲ. ಇಂಥಪರಿಗೆ ಐತಿಹ್ಯ ನಿರ್ಣಯವನ್ನು ಮಾಡುವದೇ ಗೊತ್ತಿಲ್ಲವೆನ್ನಬೇಕು. ಕೆಲವೊಂದು ಸಂಗತಿಯನ್ನು ಬರಹರೂಪವಾಗಿ ಸಾಧಿಸಿಕೊಳ್ಳುವದಕ್ಕೋಸ್ಕರ ಪಕ್ಷಪಾತದಿಂದ ಬರೆದ ಈ ಮಾದರಿಯ ಲೇಖಗಳಿಗೆ ಅಖಿಲ ಕರ್ನಾಟಕದ ಪುನರುಜ್ಜೀವನವೇ ಗುರಿಯುಳ್ಳ ಅಖಂಡ ಕರ್ಣಾಟಕದ ಪ್ರಮುಖ ಪತ್ರಗಳು ಆಶ್ರಯವನ್ನೇಕೆ ಕೊಡುವವೋ ನಾವು ಕಾಣೆವು.

ಚಾಮರಸ ಕುಮಾರವ್ಯಾಸರ ಬಾಂಧವ್ಯವನ್ನು ನಿರಾಕರಿಸುವದಕ್ಕೆ ಮುಂದೆ ಮಾಡುವ ಕಾರಣಗಳಲ್ಲಿ ಕುಮಾರವ್ಯಾಸನು ಸನ್ಯಾಸಿಯಾಗಿದ್ದರೂ ಇರಬಹುದು; ಚಾಮರಸನು ಜಾತ್ಯಾ ವೀರಶೈವನೇ ಆಗಿರಬೇಕು; ಕುಮಾರವ್ಯಾಸನು ಪ್ರೌಢದೇವರಾಯನ ಕಾಲದಲ್ಲಿ ಇದ್ದಿಲ್ಲ; ಇವರಿಬ್ಬರಿಗೂ ಸಮಕಾಲೀನರೂ ಅಲ್ಲ; ಎಂಬಿವೇ ಮೊದಲಾದವುಗಳು ಮುಖ್ಯವಾದವುಗಳು.

‖ ೬೭ ೩ ಕನ್ನಡ ಅವತರಣಿಕೆ ಪುಟ ೧೯

ಗ್ರಂಥಾಂತ್ಯದ ‘ ಶ್ರೀಮತ್ಕುಮಾರವ್ಯಾಸಯೋಗೀಂದ್ರ ’ ಎಂಬ ಮರ್ಯಾದಾಪುರಸ್ಸರವಾದ ಹೆಸರನ್ನು ನೋಡಿದರೆ ಇವನ ಭಕ್ತನಾವನೋ ಹೀಗೆ ಸಂಬೋಧಿಸಿದಂತೆ ತೋರುವದು ” ಎಂದು ನಮ್ಮ ದೊರೆಸ್ವಾಮಿಗಳೇ ಹೇಳಿರುವದರಿಂದ ಸ್ವತಃ ಕುಮಾರವ್ಯಾಸನು ತಾನೇ ಹೀಗೆ ಬರೆದುಕೊಂಡಿರಬಹುದೇ ? ಎಂಬ ಊಹೆಗೆ ಆಸ್ಪದವಿದೆ. ಒಂದು ವೇಳೆ ತಾನೇ ಬರೆದುಕೊಂಡನೆಂದು ತಿಳಿದರೂ ಯೋಗೀಂದ್ರ (=ಯೋಗಿಗಳಲ್ಲಿ ಶ್ರೇಷ್ಠ) ಪದವು ಜನ್ಮತಃಯೋಗಿ (=ಸನ್ಯಾಸಿ) ಎಂದು ಹೇಗೆ ಅರ್ಥವನ್ನೀಯುವದು ? ಅಲ್ಲದೆ (ಮಾಧ್ವನಿ) ವೈಷ್ಣವನಾದ ಕುಮಾರವ್ಯಾಸನೂ ಜನ್ಮತಃ ಯೋಗಿ (=ಸನ್ಯಾಸಿ) ಯಾಗಿದ್ದನೆನ್ನುವದಕ್ಕೆ ಆವ ಸಬಲ ಆಧಾರಗಳು ? ಇದಕ್ಕೆ ಶಾಸ್ತ್ರವು ಎಷ್ಟರಮಟ್ಟಿಗೆ ಅನುಕೂಲಿಸುವದು ? ಕುಮಾರವ್ಯಾಸನು ಒಂದು ವೇಳೆ ಸನ್ಯಾಸಾಶ್ರಮಿಯಾಗಿದ್ದರೆ ಗ್ರಹಸ್ಥಾಶ್ರಮದ ಸೌಖ್ಯವನ್ನು ಭೋಗಿಸಿಯೇ ಅವನು ಸನ್ಯಾಸ ದೀಕ್ಷೆಯನ್ನು ಪಡೆದಿರಬೇಕೆಂದು ನಮ್ಮ ಅಭಿಪ್ರಾಯ.

ಕುಮಾರವ್ಯಾಸ ಪದದೊಳಗಿನ ‘ಕುಮಾರ’ ಪದವೂ, “ಶುಕರೂಪನಲ್ಲದೆ ಕುಣಿಸಿ ನಗನೇ ಕವಿಕುಮಾರ ವ್ಯಾಸನುಳಿದವರ” ಎಂಬ ವಾಕ್ಯದೊಳಗಿನ “ಶುಕರೂಪ” ಪದವೂ ಯೋಗಿಂದ್ರ ಪದದಷ್ಟೇ ಭ್ರಮೆಗೊಳಿಸುವಂಥವುಗಳು.

‘ಕುಮಾರ’ ಪದವು ಸನ್ಯಾಸ ಪದವಾಚ್ಯವಾಗಲಿ, × ಪುತ್ರಪದ್ಮವಾಚ್ಯವಾಗಲಿ × ಇರದೆ, ಕುಮಾರ ವಾಲ್ಮೀಕಿಯು ನರಹರಿ ಎಂದು ಹೆಸರಿದ್ದರೂ ವಾಲ್ಮೀಕಿಯಷ್ಟು ಸಾಮರ್ಥ್ಯವುಳ್ಳ ಎರಡನೆಯ ವಾಲ್ಮೀಕಿ ಅಥವಾ ‘ವಾಲ್ಮೀಕಿಗೆ ಎರಡನೆಯವನು’ ಎಂದು ಹೇಳುವಂತೆ, ಕುಮಾರ ವ್ಯಾಸನೆಂದರೆ ವ್ಯಾಸನಷ್ಟು ಸಾಮರ್ಥ್ಯವುಳ್ಳ ಎರಡನೆಯ ವ್ಯಾಸ ಅಥವಾ ವ್ಯಾಸನಿಗೆ ಎರಡನೆಯವನೆಂಬ ಅರ್ಥದಲ್ಲಿಯೇ ಇರುವದೆಂದು ನಮ್ಮ

---

× ಈ ಸಂದರ್ಭದಲ್ಲಿ ಜಕ್ಕಣಾರ್ಯನ ಗುರುವಾದ ಕುಮಾರ ಬಂಕನಾಥ [ಸು ೧೪೩೦] ಬಾಳೇಹಳ್ಳಿಯ ಸಿಂಹಾಸನಾಧಿಪತಿಯಾದ ಕುಮಾರ ಚೆನ್ನಬಸವೇಶ್ವರ [ಸು ೧೫೫೦] ಹಾನಗಲ್ಲ ವಿರಕ್ತಮಠದ ಸ್ವಾಮಿಯಾದ ಕುಮಾರ ವಿಭು [೧೬೩೨] ಇತ್ಯಾದಿ ಹೆಸರುಗಳೊಳಗಿನ ಕುಮಾರ [=ಜನ್ಮತಃ ಬ್ರಹ್ಮಚಾರಿ] ಎಂಬ ಪದವೂ, ಕುಮಾರ ಪದ್ಮರಸನ [ಸು ೧೧೬೦] ಹೆಸರೊಳಗಿನ ಕುಮಾರ [ = ಪುತ್ರ] ಪದವೂ ಲಕ್ಷಿಸತಕ್ಕಂಥವಾಗಿವೆ.

ವಿಚಾರವು. ಹೀಗೆ ಅರ್ಥವನ್ನಿಟ್ಟು ಕೊಂಡಲ್ಲಿ "ನಿಖಿಳ ಯತಿಪತಿ ದಿವಿಜವಂದಿತನು" (ಆದಿ ೧ ೮) ಎಂದು ಕವಿಯು ಸ್ತುತಿಸುವ ಮಾತಿನಲ್ಲಿ ವಿಶೇಷಾರ್ಥವೇನೂ ದೊರೆಯದು. ಅಲ್ಲದೆ ಕುಮಾರವ್ಯಾಸನು ನಿಖಿಳ ಯತಿಪತಿಯೆಂದು ಹೇಳಲಿಕ್ಕೂ ಸಾಧ್ಯವಿಲ್ಲ.

ಕವಿಯು ಹೇಳುವ 'ಶುಕರೂಪನೆಂಬ ಹೆಸರು ವ್ಯಾಸ ಪದ ಜೋಡಣೆಯ ಮೂಲಕ ಗೌರವಾರ್ಹವಾದುದೇ ವಿನಾ ಅವನು ಶುಕಮುನಿಯಂತೆ ಸನ್ಯಾಸಾಶ್ರಮಿಯೆಂದು ಹೇಳುವದೂ ಕಷ್ಟ" *

ನಮ್ಮ ದೊರೆಸ್ವಾಮಿಗಳು ಹೇಳುವ "ಚಾಮರಸನು ಜಾತ್ಯಾ ವೀರಶೈವನಾಗಿರಬೇಕೆ"ಂಬ ಮಾತು ಅತಿ ನಿರಾಧಾರವಾದದ್ದು. 'ಶ್ಯಾಮನೆಂಬ ಹೆಸರಿನ ತದ್ಭವ ರೂಪವು × ಅಥವಾ ಅಚ್ಚೆಯ ಹೆಸರು 'ಚಾಮು' ನೆಂದಿರಬೇಕು. ಶ್ಯಾಮನೆಂಬ ಹೆಸರು ವಿಷ್ಣುಭಕ್ತರಲ್ಲಿಯೇ ಹೆಚ್ಚಾಗಿ ರೂಢಿಯಲ್ಲಿರುವದರಿಂದ ಚಾಮರಸನು ಮೊದಲು ವೈಷ್ಣವ ಬ್ರಾಹ್ಮಣನೇ ಆಗಿರಬೇಕು. ಅಲ್ಲದೆ 'ಅರಸ'ಪದವು ವೀರಶೈವೇತರ ಕವಿಗಳ ಹೆಸರಿನ ಅಂತ್ಯದಲ್ಲಿ ಇರುವದು ಹೆಚ್ಚಾಗಿ ಕಂಡು ಬರುತ್ತದೆ. 'ಅರಸ'ಪದದಲ್ಲಿ ಮುಗಿಯುವ ಹತ್ತೆಂಟು ವೀರಶೈವ ಕವಿಗಳ ಹೆಸರುಗಳು ದೊರೆತರೂ ಅವರು ಪೂರ್ವದಲ್ಲಿ ಅನ್ಯಮತೀಯರಿದ್ದು ಹಿಂದಿನಿಂದ ವೀರಶೈವವನ್ನು ಅಂಗೀಕರಿಸಿದವರಾಗಲಿ, ಅಥವಾ ಬ್ರಾಹ್ಮಣ ಆಚಾರ ಪದ್ಧತಿಗಳಿಗೇ ಪ್ರಾಧಾನ್ಯವನ್ನು ಕೊಟ್ಟ ಆರಾಧ್ಯ ವಂಶಜರಾಗಲಿ ಇರಬಹುದೆಂದು ಅವರ ಗ್ರಂಥಗಳಿಂದಲೇ ತಿಳಿದುಬರುತ್ತದೆ. ಆದ್ದರಿಂದ ಚಾಮರಸನು ಜನ್ಮತಃ

* ಈ ವಿಷಯದಲ್ಲಿ ಕುಮಾರವ್ಯಾಸನ ತಂದೆಯು ಲಕ್ಕರಸನೆಂದೂ, ಅವನು ಪ್ರೌಢದೇವರಾಯನಲ್ಲಿ ಮಂತ್ರಿಯಾಗಿದ್ದನೆಂದೂ, ಕುಮಾರವ್ಯಾಸನಿಗೆ ವೀರನಾರಾಯಣನೆಂಬ ವರವಿನಿಂದ ಇಟ್ಟ ಹೆಸರಿತ್ತೆಂದೂ, ಅವನಿಗೆ ನೀಲಪ್ಪಯ್ಯ ಚಿಕ್ಕವೀರಯ್ಯ ಎಂಬ ಇಬ್ಬರು ಮಕ್ಕಳಿದ್ದರೆಂದೂ ತಿಳಿದು ಬರುವ ಸಂಗತಿಗಳು ವಿಚಾರಾರ್ಹವಾಗಿವೆ.

× ಶಬ್ದಮಣಿದರ್ಪಣ ಸೂತ್ರ ೨೬೩ ವೃತ್ತಿ ಪರದೊಳಗಣ ಶ, ಷ, ಸುಗಳ್ಗೆ 'ಚ'ಕಾರ ಮಕ್ಕುಂ [ಕರ್ನಾಟಕ ಸಾಹಿತ್ಯ ಪರಿಷತ್ ಮುದ್ರಣ.]

ಅನ್ಯಮತೀಯನಿದ್ದು ಆ ಬಳಿಕ ಲಿಂಗಾಂಗೀ ಧರ್ಮಕ್ಕೆ ಮನಸೋತು ವೀರಶೈವ ದೀಕ್ಷೆಯನ್ನು ಕೈ ಕೊಂಡಿರಲು ಸಾಕು. †

ವೀರಶೈವ ದೀಕ್ಷೆ ಅಥವಾ ದೀಕ್ಷಾತ್ರಯಗಳನ್ನು ಹೊಂದುವ ರಹಸ್ಯವು ಗುರುಸಕೀಲಾನುಸಂಧಾನಿಗಳಲ್ಲದವರಿಗೆ ತಿಳಿಯದು. ಕಾರಣ ಸಿದ್ಧನಂಜೇಶನಾಗಲಿ (ಸು ೧೬೫೦) ಶಂಕರಕವಿಯಾಗಲಿ (ಸು ೧೭೬೩) ಹೇಳುವ ಚಾಮರಸನು ವೀರಶೈವ ದೀಕ್ಷೆಯನ್ನು ಪಡೆದ ವಿಷಯವು ನಮ್ಮ ದೊರೆಸ್ವಾಮಿಗಳಿಗೂ ಅವರಂಥವರಿಗೂ ನಿಲುಕದ್ದು.

ಕುಮಾರ ವ್ಯಾಸನು ವಿಜಯನಗರದ ಪ್ರೌಢದೇವರಾಯನ (೧೪೧೯-೧೪೪೬) ಕಾಲದಲ್ಲಿ ಇರದೆ ಅವನಿಗಿಂತಲೂ ಪೂರ್ವದಲ್ಲಿಯೇ ಇದ್ದಿರಬಹುದೆಂಬ ಬಗ್ಗೆ ದೊರೆಸ್ವಾಮಿಗಳು ಗ್ರಂಥದ ಬೇಕಾದಷ್ಟು ಅಂತಃ ಸಾಕ್ಷ್ಯ ಬಾಹ್ಯ ಸಾಕ್ಷ್ಯಗಳನ್ನು ತಂದೊಟ್ಟಿದ್ದರೂ ಅವೆಲ್ಲ ಊಹಾ ಮಾತ್ರವಾಗಿವೆಯೇ ಹೊರತು ಖಂಡಿತವಾದ ಆಧಾರಗಳಾಗಿ ಪರಿಣಮಿಸವು.

ಸಂಸ್ಕೃತದ ಭಾರತದ ಕಥೆಯನ್ನೇ ಕನ್ನಡದಲ್ಲಿ ಹೇಳಬೇಕೆಂದಿದ್ದ ಕುಮಾರವ್ಯಾಸನು ಪ್ರಸಂಗ ವಿಶೇಷವಿಲ್ಲದೆ ಕಿಷ್ಕಿಂಧಾ ರಾಜ್ಯದಲ್ಲಿ ಕಳಸಗೊಂಡ ವಿಜಯನಗರದ ಮಾತನ್ನೇಕೆತ್ತಬೇಕೊ ನಾವು ಕಾಣೆವು. ಅದೇ ಮೇರೆಗೆ ಆ ಭಾಗವು ಮ್ಲೇಂಚರಿಂದ ಆಕ್ರಾಂತವಾದ ವಿಷಯವನ್ನೂ ಅಥವಾ "೧೪ ನೆಯ ಶತಮಾನದಲ್ಲಿ ನಡೆದ ಅದ್ಭುತವಾದ ಬ್ರಾಹ್ಮಣ ವಿದ್ಯಾಪ್ರವರ್ತನೆಯ ವಿಷಯವ"ನ್ನೂ ಕುರಿತು ಸೊಲ್ಲನ್ನೆತ್ತಬೇಕಾದುದೂ ಈ ಕವಿಗೆ ನಿರ್ಬಂಧನೆಯಲ್ಲ. "ರಾಯ" ಎಂಬ ಬಿರುದು ವಿಜಯನಗರದ ಅರಸರ ಪೂರ್ವದಲ್ಲಿ ಪ್ರಚಾರವಾಗಿ ಇದ್ದರೂ, ವಿಜಯನಗರದ ಅರಸರಷ್ಟು ವೈಭವ ಸೂಚ್ಯವಾಗಿ ಅವರ ಆಳಿಕೆಯಿಂದ ಈ ವರೆಗೂ ಕರ್ನಾಟಕದಲ್ಲಿ 'ರಾಯ' ಎಂಬ ಹೆಸರು ರೂಢವಾಗಿ ಬಿಟ್ಟಿರುವದರಿಂದ, ಬಹಳವಾಗಿ ಪ್ರಚಾರದಲ್ಲಿದ್ದ ಆ "ರಾಯ"ಪದವನ್ನು ತನ್ನ ಗ್ರಂಥದಲ್ಲಿ ಮೇಲೆ ಮೇಲೆ ಪ್ರಯೋಗಿಸಿ ತನ್ನ, ಒಂದು ವೇಳೆ, ತನ್ನ ತಂದೆಯ ಆಶ್ರಯ

---

† ಚಾಮರಾಜ(೧೬೧೩-೧೬೩೦) ಚಾಮಯ್ಯಕವಿ (ಸು ೧೭೦೦) ಎಂಬ ಹೆಸರುಗಳೊಳಗಿನ 'ಚಾಮ' ಪದಗಳಂತೆಯೇ ಪ್ರಭುಲಿಂಗ ಲೀಲಾಕಾರನಾದ ಚಾಮರಸ ಅಥವಾ ಚಾಮಣ್ಣ ಅಥವಾ ಚಾಮಯ್ಯ ಹೆಸರುಗಳೊಳಗಿನ ಚಾಮ ಪದದಲ್ಲಿ ವಿಶೇಷಾರ್ಥವಾಗಿರಬೇಕು.

ದಾತರನ್ನು ಕುಮಾರವ್ಯಾಸನು ಪರೋಕ್ಷವಾಗಿ ಕೊಂಡಾಡಿರಬೇಕೆಂದೇ ನಮ್ಮ ಮತ. ಕವಿಗಳು ಅರಸರ ಅಥವಾ ತಮ್ಮ ಪೋಷಕರ ಹೆಸರನ್ನು ಕೊಂಡಾಡುವರಲ್ಲದೆ. ಕವಿಗಳೇ ಪ್ರಸಿದ್ಧಿಗೆ ತಂದ ಹೆಸರನ್ನು ತಮ ಗಂಕಿತ ಮಾಡಿಕೊಂಡ ಉದಾಹರಣೆಗಳು ಸಿಗುವದು ದುರ್ಲಭ. ಆದ್ದರಿಂದ ದೊರೆಸ್ವಾಮಿಗಳು ಹೇಳುವ "ಈ ಬಿರುದನ್ನು ಕುಮಾರವ್ಯಾಸನು ಬಹು ಪ್ರಸಿದ್ಧಿಗೆ ತಂದುದರಿಂದ ವಿಜಯನಗರದವರು ಅದನ್ನು ತಮ ಗಂಕಿತ ಮಾಡಿಕೊಂಡಿದ್ದಿರಬಹುದೆ"ಂಬ ಮಾತಿನ ಸತ್ಯತೆಯನ್ನು ವಾಙ್ಮಯಾಭ್ಯಾಸಿಗಳೇ ಕಂಡುಕೊಳ್ಳಲಿ. ಹೀಗಿರಲು ವಿಜಯನಗರದ ಅರಸರ ಕಾಲದಲ್ಲಿ ಕುಮಾರವ್ಯಾಸನು ಇದ್ದಿರಲಿಕ್ಕಿಲ್ಲವೆಂಬ ಮಾತು ಎಷ್ಟು ವಿಶ್ವಾಸಕ್ಕೆ ಪಾತ್ರವಾಗಿದೆಯೋ, ಅದೂ ವಿಚಾರಾರ್ಹವಾಗಿದೆ.

ಚಾಮರಸ-ಕುಮಾರವ್ಯಾಸರು ಒಂದೇ ಕಾಲದವರಾಗಿರಲಿಕ್ಕಿಲ್ಲವೆಂಬದನ್ನು ಸಿದ್ಧಿಸುವಲ್ಲಿ ನಮ್ಮ ದೊರೆಸ್ವಾಮಿಗಳು "ಶೈಲಿಪರಿಸ್ಥಿತಿ ಮೊದಲಾದ ಅಂಶಗಳಲ್ಲಿ ಪ್ರಭುಲಿಂಗ ಲೀಲೆಯು ಈಚಿನದೆಂದು ಹೇಳಬಹುದು. ಭಾರತದಲ್ಲಿ ಕಾಣಿಸುವ ಮರಾಠಿಯ ಸಂಪರ್ಕವು ಪ್ರಭುಲಿಂಗ ಲೀಲೆಯಲ್ಲಿಲ್ಲ. ಇದರಿಂದ ಎರಡೂ ಗ್ರಂಥಗಳೂ ಒಂದೇ ಪ್ರಾಂತದವೆಂದು ಸಹ ಹೇಳುವದು ಕಷ್ಟ. ಗ್ರಂಥಗಳಲ್ಲಿ ಪರಸ್ಪರ ಛಾಯಾನುಕರಣವಾದ ಸೂಚನೆಯಾವದೂ ಕಾಣಿಸುವದಿಲ್ಲ" ಎಂಬ ಮಾತುಗಳನ್ನು ಮುಂದೆ ಮಾಡಿರುವರು.

ಒಂದೇ ಕಾಲದ ಇಬ್ಬರು ಕವಿಗಳು ಪರಸ್ಪರ ಛಾಯಾನುಕರಣವನ್ನು ಇಟ್ಟುಕೊಳ್ಳಬೇಕೆಂಬುದು ನಿಯಮವಲ್ಲ. ಸಮಕಾಲದವರಿಗಂತೂ ಆ ತರುವಾಯ ಬಂದವರು ಈ ತರಹದ ಛಾಯಾನುಕರಣವನ್ನಿಟ್ಟುಕೊಳ್ಳುವದು ಹೆಚ್ಚು ಸಂಭವವಾದದ್ದು. ಕವಿಗಳು ಕೂಡಿಯೇ ಇದ್ದು ಒಂದೇ ಗುರುವಿನಲ್ಲಿ ಅಭ್ಯಾಸ ಮಾಡಿ ಗ್ರಂಥಗಳನ್ನು ಬರೆದಿದ್ದರೆ ಈ ತರಹದ ಛಾಯಾನುಕರಣಗಳಿಗೆ ಒಂದು ವೇಳೆ ಅವಕಾಶವಿರಬಹುದು. ಹೀಗಿದ್ದಲ್ಲಿ ಚಾಮರಸ ಕುಮಾರವ್ಯಾಸರು ಕೂಡಿಯೇ ವಿದ್ವಜ್ಜನ ಪರೀಕ್ಷೆಗಾಗಿ ಇಟ್ಟ ತಮ್ಮ ಭಾರತಗಳಲ್ಲಿ ಪರಸ್ಪರ ಛಾಯಾನುಕರಣವನ್ನು ಕಾಣುವದು ಕದಾಚಿತ್ ಶಕ್ಯವಿರಬಹುದು. ಆದರೆ ಚಾಮರಸನ ಈ ಕೃತಿಯು ನಷ್ಟವಾಗಿರದಿದ್ದರಷ್ಟೆ ಇದನ್ನು ಕಾಣುವದು ?

ಇನ್ನು ಚಾಮರಸನ ಪ್ರಭುಲಿಂಗಲೀಲೆ ಮತ್ತು ಕುಮಾರವ್ಯಾಸನ ಭಾರತ ಇವುಗಳಲ್ಲಿಯೇ ಛಾಯಾನುಕರಣವಿರಬೇಕೆಂದರೆ ಇದು ತೀರ

ಭವನಾದ ಮಾತು. ಯಾಕಂದರೆ ಕುಮಾರವ್ಯಾಸನು ಗದುಗಿನ ಪ್ರಾಂತದಲ್ಲಿ ಇದ್ದು ಭಾರತವನ್ನು ಬರೆದನು. ಚಾಮರಸನು ವಿದ್ಯಾನಗರಿಯಲ್ಲಿಯೇ ಇದ್ದು ಪ್ರಭುಲಿಂಗಲೀಲೆಯನ್ನು ರಚಿಸಿದನು. ಅವಾಗ್ಗೆ ಕನ್ನಡ ಹಾಗು ಕನ್ನಡಿಗರಿಗೆ ಕೇಂದ್ರಸ್ಥಾನವಾಗಿದ್ದ ವಿಜಯನಗರದ ಹತ್ತರ ಗದುಗಿನ ಪ್ರಾಂತದಲ್ಲಿರುವಂತೆ ಮರಾಠಿಯ ಸಂಪರ್ಕವು ಇರುವದು ಸಾಧ್ಯವಿಲ್ಲ. † ಈಗಿನಂತೆ ಆಗಿನ ಕಾಲಕ್ಕೆ ಗಡಿನಾಡುಗಳಲ್ಲಿ ಭಾಷಾಸಂಪರ್ಕವು ಇರುವದು ಸಹಜವಾದರೂ ವಿದ್ಯಾನಗರಿಯಲ್ಲಿ ಈ ತರದ ಸಂಪರ್ಕವಿರುವದು ಎಷ್ಟು ಸಾಧ್ಯವೋ ಭಾಷಾಶಾಸ್ತ್ರಾಭ್ಯಾಸಿಗಳೇ ನಿರ್ಣಯಿಸಲು ಯೋಗ್ಯರು. ಕಾರಣ ಭಾರತದಲ್ಲಿ ಕಾಣುವ ಮರಾಠಿ ಸಂಪರ್ಕವನ್ನು ಪ್ರಭುಲಿಂಗಲೀಲೆಯಲ್ಲಿ ಕಾಣುವದು ದುಸ್ತರ. ಇದಲ್ಲದೆ ಈರ್ಷಾವ್ಯಂಜಕವಾದ ಕೃತಿ ನುಡಿಸುವ ಪ್ರಸ್ತಾಪವಾದ ಬಳಿಕ ಚಾಮರಸನಿಗೆ ಕೆಡುಕೆನಿಸಿ ತನ್ನ ಕಾರ್ಯಕ್ಷೇತ್ರದ ದಿಶೆಯನ್ನು ಬದಲಿಸಬೇಕೆಂದುದ್ದೇಶಿಸಿ ಆ ಕಾಲದಲ್ಲಿ ರಾಜಸಭೆಯಲ್ಲಿ ಘನತೆಯನ್ನು ಹೊಂದಿದ ಜಕ್ಕಣಾಮಾತ್ಯನ ಆಶ್ರಯವನ್ನು ಚಾಮರಸನು ಪಡೆದಿರಬೇಕು. ಆ ಬಳಿಕ ಲಿಂಗದೀಕ್ಷೆಯನ್ನು ಹೊಂದಿ ಲಿಂಗವಂತರ ಮಧ್ಯದಲ್ಲಿ ಓಡಾಡಿ ವಚನಶಾಸ್ತ್ರದಲ್ಲಿಯ ತತ್ವಗಳನ್ನಭ್ಯಾಸಿಸಿ ತನ್ನಂಗಕ್ಕೆ ಅವುಗಳನ್ನು ಅಳವಡಿಸಿಕೊಂಡಿರಬೇಕು. ಹೀಗಿದ್ದಾಗ್ಗ ನಿತ್ಯದ ಕತೆಗಳನ್ನೊಳಕೊಂಡ ಪ್ರಭುಲಿಂಗಲೀಲೆಯನ್ನು ರಚಿಸಿದ ಚಾಮರಸನು ತನ್ನ ಮೊದಲಿನ ಗ್ರಂಥಕ್ಕೆ ಪ್ರತಿಸ್ಪರ್ಧಿಯಾಗಿ ಉಳಿದಿದ್ದ ಗ್ರಂಥದ ಛಾಯಾನುಕರಣವನ್ನು ಎಂದೂ ಮಾಡಲಾರನು. ಚಾಮರಸನು "ಕೆಟ್ಟ ಭವಿ" ಯಾಗುವಷ್ಟು ಹುಚ್ಚನಾಗಿದ್ದಿಲ್ಲ. ಅವನು ಭವಿಗಳ ಎಂಜಲವನ್ನು ತಿನ್ನುವಷ್ಟು ಪಾಮರನೂ ಅಲ್ಲ. ಅಳಿಮನದವನಂತೂ ಮುನ್ನವೇ ಅಲ್ಲ. ಈಗವನು ಶುದ್ಧ ಲಿಂಗಾಂಗಿಯು. ಆದ್ದರಿಂದಲೇ ತನ್ನ ಗ್ರಂಥದಲ್ಲಿ ಚರಿತ್ರೆಯೊಡನೆ ನಿಜ ಲಿಂಗಾಂಗೀ ತತ್ವಗಳನ್ನು ನಿರೂಪಿಸಿರುವನಲ್ಲದೆ ಛಾಯಾನುಕರಣದಗೊಂದಲಕ್ಕೆ ಬಿದ್ದಿಲ್ಲ.

---

† ದೊರೆಸ್ವಾಮಿಗಳು ಊಹಿಸಿದ ಕುಮಾರವ್ಯಾಸನ ಕಾಲವಾದ ೧೪ನೆಯ ಶತಮಾನದ ಪ್ರಾರಂಭದ ಸುಮಾರಿಗೆ ತಿರುಳುಗನ್ನಡ ನಾಡಿನಲ್ಲಿದ್ದ ಗದುಗಿನ ಪ್ರಾಂತದ ವರೆಗೂ ಮರಾಠಿ ಭಾಷೆಯ ಪ್ರಭಾವವು ಹಬ್ಬಿ ಭಾಷಾ ಸಂಪರ್ಕಕ್ಕೆ ಅವಕಾಶವನ್ನುಂಟುಮಾಡಿತ್ತೇ ಹೇಗೆಂಬದೂ ಅತ್ಯಂತ ವಿಚಾರಾರ್ಹವಾದ ವಿಷಯವು.

ಅವನ ಗ್ರಂಥವು ಭಾಷೆಯಲ್ಲಿ, ಶೈಲಿಯಲ್ಲಿ, ವಿಷಯದಲ್ಲಿ, ವಿಷಯಪ್ರತಿಪಾದನೆಯಲ್ಲಿ ಪ್ರತಿಪಾದಿತವಾದ ವಿಷಯಗಳು ಓದುಗರ ಮನಸ್ಸಿನ ಮೇಲೆ ಪರಿಣಾಮವನ್ನುಂಟುಮಾಡುವಲ್ಲಿ ಅತಿ ಮೇಲ್ತರದ್ದೆಂದು ಕಂಡುಬಂದದ್ದರಿಂದಲೇ ಪ್ರೌಢದೇವರಾಯನಿಂದ ಮೆಚ್ಚುಗೆಯನ್ನು ಪಡೆದು § ತೆಲಗು ತಮಿಳು ಭಾಷೆಗಳಿಗೆ ಪರಿವರ್ತಿಸಲ್ಪಟ್ಟಿತು. ಛಾಯಾನುಕರಣದ ಗೊಂದಲವಿದ್ದರೆ ಪಂಡಿತರಿಂದ ಇಷ್ಟೊಂದು ಮೆಚ್ಚುಗೆಗೊಳ್ಳುತ್ತಿತ್ತೇ? *

ತಾನು ಪೂರ್ವಾಶ್ರಯವನ್ನಪೇಕ್ಷಿಸದೆ ನಿತ್ಯರಾದವರ ಕತೆಗಳನ್ನೇ ಹೇಳುವೆನಲ್ಲದೆ ಅವುಗಳಿಗೆ ವ್ಯತಿರಿಕ್ತವಾದ ಕತೆಗಳನ್ನು ಹೇಳಲೂ ಬಯಸುವದಿಲ್ಲ. ಮತ್ತು ಅವುಗಳನ್ನು ಕೇಳಲೂ ಸತ್ಯಶರಣರು ಅಪೇಕ್ಷಿಸಬಾರದು ಎಂಬಂಶವನ್ನು ಹೇಳುವ

ಕಾಳಗದ ಕಥೆಯಲ್ಲ ವಿಷಯಗ
ಳೀಳಿಗೆಯ ವಿಧಿಯಲ್ಲ ಹೊಟ್ಟೆಯ
ಹೊಳಲಕೆ ಹಿಂಸೆಯನು ಮಾಡುವ ಗೊಡವೆ ತಾನಲ್ಲ॥

---

§ ಪ್ರೌಢ ದೇವರಾಯನ ಕಾವ್ಯ ಸಂಧಿ ೨೧. ಗುರುರಾಜ ಚರಿತ್ರೆ (ಶ ಚ ೨ ೫೯--೬೦) ಭೈರವೇಶ್ವರ ಕಾವ್ಯದ ಕಥಾಸೂತ್ರರತ್ನಾಕರ

* ಪ್ರಭುಲಿಂಗಲೀಲೆಯ ವಿಮರ್ಶೆಯನ್ನು ಈಗ ನಾವು ಮಾಡಬೇಕೆಂದಿರುವದಿಲ್ಲ. ಅದರ ಪ್ರಶಂಸೆಯನ್ನು ಅದು ತಾನೇ ಮಾಡಿಕೊಳ್ಳುವಂತೆ ಇರುತ್ತದೆ. ಈ ಗ್ರಂಥವನ್ನು ದೇಶಿಯ ಹಾಗು ವಿದೇಶಿಯ ಪಂಡಿತರನೇಕರು ಬಹಳವಾಗಿ ಶ್ಲಾಘಿಸಿರುವರು. ಈ ಪ್ರಸಂಗದಲ್ಲಿ ಸುಮಾರು ನೂರು ವರ್ಷಗಳ ಹಿಂದೆಯೇ ಪಾಶ್ಚಾತ್ಯ ಪಂಡಿತರೊಬ್ಬರು ಈ ಗ್ರಂಥದ ವಿಷಯವಾಗಿ ಕೊಟ್ಟ ಅಭಿಪ್ರಾಯವು ಲಕ್ಷಿಸುವಂಥದಿರುತ್ತದೆ.

"Prabhulinga Leela is far more attractive to an English reader than Dwipada Ramayana. It is not more difficult in style than the Lady of the Lake; in sweetness and purity of diction it equal Theocritus. In points of morals, it is far purer than the works which Brahmins consider sacred,"

C. P. Brown
Madras Journal of Literature and science 1836.

ಸತ್ತವರ ಕಥೆಯಲ್ಲ ಜನನದ
ಕುತ್ತದಲಿ ಕುದಿಕುದಿದು ಕರ್ಮದ
ಕತ್ತರಿಗೆ ಸಿಲುಕುವರ ಸೀಮೆಯ ಮಾತು ತಾನಲ್ಲ॥
ಹೊತ್ತು ಹೋಗದ ಪುಂಡರಾಲಸ
ಮತ್ತ ಮತಿಗಳ ಗೋಷ್ಠಿಯಲ್ಲಿದು .
ಸತ್ಯಶರಣರು ತಿಳಿವುದೀ ಪ್ರಭುಲಿಂಗ ಲೀಲೆಯಲಿ॥ ×

ಇತ್ಯಾದಿ ಪ್ರಭುಲಿಂಗ ಲೀಲೆಯ ಪ್ರಶಂಸಾಪರವಾಗಿದ್ದ ಪದ್ಯಗಳಲ್ಲಿ ತಾನು ಈ ವಿಷಯಗಳನ್ನೊಳಕೊಂಡ ಒಂದು ಗ್ರಂಥವನ್ನು ಬರೆದು ಪಶ್ಚಾತ್ತಾಪವನ್ನು ಹೊಂದಿದ ಧ್ವನಿಯನ್ನು ಕೇಳುವದಿಲ್ಲವೇ ಚಾಮರಸನು? ಹಾಗಂತೆಯೇ ಆವನು ಪೂರ್ವ ಸಂಗತಿಗಳನ್ನು ಸ್ಮರಿಸುವದೇ ಇಲ್ಲ. ಚಾಮರಸನು ಛಾಯಾನುಕರಣದ ಸೂಚನೆಯನ್ನು ಮಾಡುವದನ್ನು ಬಿಟ್ಟಿದ್ದರ ರಹಸ್ಯವು ಎಷ್ಟಿದೆ ಎಂಬದು ಈಗ ಒಡೆದು ಕಾಣಿಸುವಂತಿದೆ. ಪ್ರಭುಲಿಂಗಲೀಲೆಗಿಂತ ಪೂರ್ವದಲ್ಲಿಯೇ ರಚಿತವಾದ ಭಾಗತದಲ್ಲಿ ಈ ತರಹದ ಸೂಚನೆಯಿರುವದಂತೂ ಶಕ್ಯವೇ ಇಲ್ಲ.

"ಗುರುರಾಜ ಚರಿತ್ರೆಯ ಪ್ರಕಾರ ರಾಘವಾಂಕನೇ ಕುಮಾರವ್ಯಾಸನನ್ನು ಸೋಲಿಸಿರುವಾಗ (ಕ ಚ ೧ ೨೩೬) ಆ ಕೆಲಸಕ್ಕೆ ಚಾಮರಸನಿಗೆ ಅವಕಾಶವೇ ಇದ್ದಿರಲಾರದು." ಎಂಬ ಇನ್ನೊಂದು ವಾಕ್ಯದಿಂದ ದೊರೆಸ್ವಾಮಿಗಳು ಚಾಮರಸ ಕುಮಾರವ್ಯಾಸರು ಸಮಕಾಲೀನರಲ್ಲವೆಂದು ಸಿದ್ಧಿಸಲು ಯತ್ನಿಸುತ್ತಾರೆ. ಗುರುರಾಜ ಚರಿತ್ರೆಯಲ್ಲಿ ಈ ತೆರನಾದ ಐತಿಹ್ಯವಿದ್ದರೆ, ಅದೇ ಗುರುರಾಜ ಚರಿತ್ರೆಯಲ್ಲಿ ಚಾಮರಸನು ಪ್ರಭುಲಿಂಗ ಲೀಲೆಯನೊರೆದು ಮೆರಸಿ ಕುಮಾರವ್ಯಾಸನಿಗಾಗಿ ಇದ್ದ ಕನಕಸ್ನಾನವನ್ನು ಪರಿಹರಿಸಿದನೆಂದು ಹೇಳಿದೆ * ಒಬ್ಬ ಕವಿಯು ಪರಸ್ಪರ ವಿರೋಧವಾಗಿರುವ ಸಂಗತಿಗಳೆರಡರ ವಿಷಯವಾಗಿ ಬರೆಯುವದು ತುಸು ಸಾಮಾನ್ಯವಾದ ಮಾತೇ ಸರಿ! ಇಲ್ಲಿ ಮಾಯಾವಿಯಾದ ಆವನೊಬ್ಬನ ಕೈಚಮತ್ಕಾರವಿದ್ದಿರಲಿಕ್ಕೇಬೇಕು. ಇತರ ಸಾಧನೆಗಳಿಲ್ಲದ ಆವಾಗಿನ ಪರಿಸ್ಥಿತಿಯಲ್ಲಿ ಈ ಅಂಶಗಳನ್ನು ಓದಿಯೇ ಸುಮಾರು ನೂರು ವರ್ಷಗಳ ತರುವಾಯ ಇದ್ದ ಚೋರಬಸವ ಚರಿತ್ರೆ ಬರೆದ ಶಂಕರಕ

× ಪ್ರ ಲಿಂ ಲೀಲೆ ೧ ೧೨ ೧೩
* ಕಚ ೨ ೫೯—೬೦

ವಿಯು (ಕ್ರಿ. ಶ. ಸು. ೧೭೬೩) ಸುಮಾರು ೬೦೦ ವರ್ಷಗಳ ಹಿಂದೆ ಇದ್ದ ರಾಘವಾಂಕ ಹರೀಶ್ವರರೂ = ಸುಮಾರು ೩೦೦ ವರ್ಷಗಳ ಹಿಂದೆ ಇದ್ದ ಚಾಮರಸನೂ ಸಮಕಾಲೀನರೆಂದು ಹೇಳುತ್ತಿದ್ದರೆ ಅದು ಚೋರಬಸವ ಚರಿತ್ರಕಾರನ ದೋಷವಲ್ಲ. ಕಾಲಪುರುಷನಿಗೇ ನಾವು ಆ ದೂಷಣೆಯನ್ನು ಕೊಡಬೇಕಾದೀತು.

ಇದು ಬರಿಯ ಐತಿಹಾಸಿಕ ದೃಷ್ಟಿಯಿಂದ ಹೇಳುವ ಮಾತು. ಆದರೆ ಗುರುರೂಪದಲ್ಲಿ ಕಾರ್ಯಗೆಯ್ಯುತ್ತ ಬಂದ ಪರಾತ್ಪರ ವಸ್ತುವು ಒಂದೇ ಎಂದು ಬಗೆದು ಹರೀಶ್ವರನು ರಾಘವಾಂಕ ಚಾಮರಸರ ಉದ್ಧಾರಕ ವಸ್ತುವು ಎಂದು ತಾತ್ವಿಕ ದೃಷ್ಟಿಯಿಂದ ತಿಳಿದು, ಶಂಕರಕವಿಯು ಹೀಗೆ ಬರೆದಿದ್ದರೆ ಹೀಗೆ ಅಷ್ಟಾವರಣದ ಗುಟ್ಟನ್ನರಿತವರು ಇದನ್ನೂ ನಂಬಬೇಕಾಗುವದು. ಹರೀಶ್ವರರೆಂಬ ಹೆಸರಿನ ಗುರುಗಳನೇಕರು ಆಗಿ ಹೋಗಿದ್ದರಿಂದ ರಾಘವಾಂಕನ ಗುರುವಾದ ಹರೀಶ್ವರನ ಯೋಗ್ಯತೆಯಷ್ಟೇ ಯೋಗ್ಯತೆಯುಳ್ಳ ಆವನೊಬ್ಬ ಹರೀಶ್ವರನನ್ನು ಚಾಮರಸನು ಕಂಡು ಚೋರಬಸವಚರಿತ್ರೆಯ ಮೇರೆಗೆ ಒಂದು ವೇಳೆ ತನ್ನ ಪ್ರಭುಲಿಂಗ ಲೀಲೆಯನ್ನೊರೆದಿರಲೂ ಸಾಕು.

“ಪ್ರಭುಲಿಂಗ-ಲೀಲಾಕಾರನು ತನ್ನ ಹೆಸರನ್ನು ಹೇಳಿಲ್ಲ. ಸಿದ್ಧನಂಜೇಶನವರೆಗೂ ಮತ್ತಾರೂ ಅವನ ಹೆಸರು ಚಾಮರಸನೆಂದು ತಿಳಿಸಿಲ್ಲ” ಎಂದು ಉಲ್ಲೇಖಿಸಿ ನಮ್ಮ ದೊರೆಸ್ವಾಮಿಗಳು ಈಗ ಅಚ್ಚಾಗಿರುವ ಪ್ರಭುಲಿಂಗಲೀಲೆಯನ್ನು ಚಾಮರಸನೇ ಬರೆದನೋ ಹೇಗೆಂಬ ಭ್ರಮೆಯನ್ನುಂಟುಮಾಡಲು ಯತ್ನಿಸುವಂತೆ ತೋರುತ್ತದೆ. ಆದರೆ ನಮ್ಮ ಈ ಲೇಖಕರು ಭಾರತವನ್ನು ಗೌರವಿಸಿ ಹೇಳುವಂತೆ ತೆಲಗು, ತಮಿಳ, ಸಂಸ್ಕೃತ ಈ ಮೂರೂ ಭಾಷೆಗಳಲ್ಲಿ ಪರಿವರ್ತಿತವಾಗುವಷ್ಟು ಜನರಂಜಕವಾಗಿರುವ ಕಾವ್ಯದೃಷ್ಟಿಯಿಂದ ಕಥಾವಸ್ತು ಮತ್ತು ತತ್ವವಿವೇಚನೆಯೇ ಮೊದಲಾದ ವಿಷಯ ಮಹತ್ವದಿಂದ ಮಿಗಿಲೆನಿಸಿ ಲಿಂಗಾಂಗಿಗಳ ನಿತ್ಯಪಾರಾಯಣಕ್ಕೆ ಅನುಕೂಲವಾಗಿರುವ ಪ್ರಭುಲಿಂಗಲೀಲಾ ಗ್ರಂಥವನ್ನೂ ಮತ್ತು ಆದರ ಕರ್ತೃವನ್ನೂ ಸಿದ್ಧನಂಜೇಶನ ವರೆಗೆ ಅಂದರೆ ಸುಮಾರು ೨೩೫ ವರ್ಷಗಳ ವರೆಗೆ ಯಾರೂ ಸ್ಮರಿಸದೆ ಇರುವದು ತೀರ ಅಸಂ

= ನಿಂಜನವಂಶರತ್ನಾಕರ ಪುಟ ೧೮ ವಲ್ಲಿ ತೋರಡುವ ಇವರ ವೃಂತ್ತಾಂತದಿಂದ ಇವರು ೧೨ ನೆಯ ಶತಮಾನದಲ್ಲಿಯೇ ಇದ್ದರೊ ಹೇಗೆಂಬ ಬಗ್ಗೆ ಮತ್ತೂ ಸಂಶಯುವದೆ.

ಭವವಾದ ಸಂಗತಿಯೆಂದು ನಾವು ಹೇಳುತ್ತೇವೆ ಗೂಳೂರ ಸಿದ್ಧವೀರನ ಶಿಷ್ಯನಾದ ಹರೀಶ್ವರ ಕವಿಯು (೧೬೦೭) ತನ್ನ ಪ್ರಭುದೇವರ ಅಥವಾ ಅಲ್ಲಮನ ಚರಿತ್ರೆಯಲ್ಲಿ ಪೂರ್ವ ಕವಿಗಳ ಮಾಲಿಕೆಯಲ್ಲಿ ಚಾಮರಸನನ್ನೂ ಜಕ್ಕಣಾರ್ಯನನ್ನೂ ಸೇರಿಸಿದ್ದಾನೆ. § ೧೫೮೪ ರಲ್ಲಿದ್ದ ವಿರೂಪಾಕ್ಷ ಪಂಡಿತನು ಪೂರ್ವದ ಕವಿಗಳನ್ನು ಸ್ಮರಿಸುವಲ್ಲಿ ಚಾಮರಸನ ಹೆಸರನ್ನು ತಿಳಿಸಿದ್ದಾನೆ. † ಅವನ ಸಮಕಾಲೀನನಾಗಿಯೋ ಅಥವಾ ಸ್ವಲ್ಪ ಪೂರ್ವದಲ್ಲಿಯೋ ಇದ್ದ ಅದೃಶ್ಯಕವಿಯು (ಸು ೧೫೮೦) ಚಾಮರಸನು ಪ್ರಭುಲಿಂಗ ಲೀಲೆಯನ್ನು ಬರೆದನೆಂದು ಹೇಳುತ್ತಾನೆ. ± ಹೀಗಿರಲು ಸಿದ್ಧಸಂಜೇಶನ ವರೆಗೆ ಮತ್ತಾರೂ ಅವನ ಹೆಸರು ಚಾಮರಸನೆಂದು ತಿಳಿಸಿಲ್ಲವೆಂದರೆ - ಅದೆಂತು ವಿಶ್ವಾಸಾರ್ಹವೋ ನಾವರಿಯೆವು. ಪ್ರಭುಲಿಂಗ ಲೀಲಾಕಾರನು ಸ್ವತಃ ತನ್ನ ಹೆಸರನ್ನು ತಿಳಿಸಿಲ್ಲವೆಂದರೆ ಅದು ಲಿಂಗಾಂಗಿಯ ನಿಜ ನಡೆಯನ್ನು ಅಂಗಕ್ಕಳವಡಿಸಿಕೊಂಡ ಅವನ ವಿನೀತವೃತ್ತಿಯನ್ನೇ ವ್ಯಕ್ತಗೊಳಿಸುವದೆನ್ನಬಹುದು.

ಕುಮಾರವ್ಯಾಸ ಚಾಮರಸ ಹರೀಶ್ವರರ ಸಂಬಂಧವಾದ ಕಥೆಯನ್ನು ಸಂಪೂರ್ಣವಾಗಿ ನಿರಾಕರಿಸುವ ಪ್ರಸಂಗದಲ್ಲಿ ದೊರೆಸ್ವಾಮಿಗಳು ತಮ್ಮ ಕೈಚಮತ್ಕಾರವನ್ನಷ್ಟು ತೋರಿಸಿದರು. “ಈ ಕಥೆಯಲ್ಲಿ ಬರುವ ಹರೀಶ್ವರ ರಾಘವಾಂಕಾದಿಗಳು ವೀರಶೈವರಾದರೂ ಬಸವನ ಅನುಯಾಯಿಗಳಲ್ಲ. ಅವರು ಶೈವ ಬ್ರಾಹ್ಮಣರು. ಬಸವನಂತೆ ಸ್ಮೃತೀತಿಹಾಸಾದಿಗಳ ಪ್ರಾಮಾಣ್ಯವನ್ನೂ ಜಾತಿಧರ್ಮವನ್ನೂ ನಿರಾಕರಿಸಿದವರಲ್ಲ. ಇವರಾರೂ ಬಸವನ ಹೆಸರು ಹೇಳರು. ಆದರೆ ಮುಂದೆ ವೀರಶೈವರಲ್ಲಿ ಬಸವನ ಪ್ರಾಬಲ್ಯವು ತಾನೇ ತಾನಾಗಿ ಬಳೆದ ಮೇಲೆ ಇವರೂ ಬಸವನ ಸಹಾಯಕರೆಂಬ ಕಥೆ ಪ್ರಾರಂಭವಾಯಿತು” ಎಂದು ಹೇಳಿ “ಚಾಮರಸನ ಕಥಾನಾಯಕನಾದ ಅಲ್ಲಮನು ಹರೀಶ್ವರ ರಾಘವಾಂಕ ಬಸವನ ಸಮಕಾಲೀನನು. ಇದೇ ಕಾಲದಲ್ಲಿ ಚಾಮರಸನು ಇದ್ದನೆಂದು ಹೇಳಲಾಗುವದಿಲ್ಲ. ಬಸವನನ್ನು ಸಡ್ಡೆಮಾಡದ ಹರೀಶ್ವರಾದಿಗಳು ಅವನ ಪಕ್ಷದವನಾದ ಅಲ್ಲಮನನ್ನು ಗೌರವಿಸಲಾರರು. ಇವರಿಗೆ

---

§ ಕಚ ೨ ೩೫೧

† ಚನ್ನಬಸವ ಪುರಾಣ ೧ ೨೯

± ಪ್ರೌ. ದೇ. ರಾಯರ ಕಾವ್ಯ ಸಂಧಿ ೧ ಮುಕ್ತ್ರ ೨೧

ಚಾಮರಸನು ಪ್ರಭುಲಿಂಗಲೀಲೆಯನ್ನು ಹೇಳಿದನೆಂದರೆ ನಂಬಲಾಗುವದಿಲ್ಲ." ಇತ್ಯಾದಿಯಾಗಿ ಬರೆದಿರುವರು. ಇಲ್ಲಿ ಶಿವಶರಣರಲ್ಲಿ ಅವರಿಗೆ ಎಷ್ಟು ಆದರವಿದೆ ಎಂಬದು ವ್ಯಕ್ತವಾಗುತ್ತದೆ. ಅಲ್ಲದೆ ಭೇದೋಪಾಯದಲ್ಲಿ ಪ್ರಾವಿಣ್ಯರೆಂದೂ ವ್ಯಕ್ತವಾಗುವಂತಿದೆ. ಲಿಂಗಾಯತರ ಸದ್ಯದ ಶೋಚನೀಯ ಸ್ಥಿತಿಯನ್ನು ಸದಯಾಂತಃಕರಣ ಹೃದಯದಿಂದ ಅರಿತಿರುವ ಜನಗಳಿಗೆ ನಮ್ಮ ಲೇಖಕರು ಹೇಳುವ ಈ ಮಾತುಗಳು ಬಲು ಮರ್ಮಭೇದಕವಾದವುಗಳಾಗಿರುತ್ತವೆ. ಈ ಅವತರಣಿಕೆಯಲ್ಲಿ ದೊರೆಸ್ವಾಮಿಗಳು ವೀರಶೈವರಲ್ಲಿದ್ದ ಸದ್ಯದ ಇಬ್ಬಣವನ್ನೂ (ಅಥವಾ) ಶ್ರೀಮಾನ್ ಟೀ. ಎಸ್. ವೆಂಕಣ್ಣಯ್ಯನವರು ಎಮ್. ಎ. ಅವರು ಸೂಚಿಸುವ ಮೂರು ಬಣಗಳನ್ನೋ † ಮತ್ತು ಒಂದು ಬಣದವರು ಇನ್ನೊಂದು ಬಣದವರನ್ನು ದೂಷಿಸುತ್ತಿರುವದನ್ನೂ, ಒಂದು ಬಣದವರು ನಮ್ಮ ಲೇಖಕರು ಹೇಳುವ ಪ್ರಾಮಾಣ್ಯವನ್ನೂ ಜಾತಿಧರ್ಮವನ್ನೂ ಮಾನಿಸುತ್ತಿರುವ ವಿಷಯವನ್ನೂ ಸಂಪೂರ್ಣವಾಗಿ ಲಕ್ಷದಲ್ಲಿಟ್ಟುಕೊಂಡು ಅದನ್ನೆತ್ತಿ ಹಿಡಿದು ಆ ಬಣದವರನ್ನು ಉಬ್ಬಿಸುವ ಉದ್ದೇಶವೊಂದರಿಂದಲೇ ಹೀಗೆ ಬರೆದಿರುವರೆಂದು ಹೇಳಲು ಅಭ್ಯಂತರವಿಲ್ಲ. ಹಾಗಲ್ಲದಿದ್ದರೆ ಹರೀಶ್ವರಾದಿಗಳು "ಬಸವನಂತೆ ಸ್ಮೃತೀತಿಹಾಸಾದಿಗಳ ಪ್ರಮಾಣವನ್ನೂ ಜಾತಿಧರ್ಮವನ್ನೂ ನಿರಾಕರಿಸಿದವರಲ್ಲ." "ಬಸವನನ್ನು ಸಡ್ಡೆಮಾಡದ ಹರೀಶ್ವರಾದಿಗಳು ಅವನ ಪಕ್ಷದವನಾದ ಅಲ್ಲಮನನ್ನು ಗೌರವಿಸಲಾರರು" ಇತಾದ್ಯಿಯಾಗಿ ಒತ್ತಿ ಏಕೆ ಹೇಳಬೇಕಾಗಿತ್ತು? ದೊರೆಸ್ವಾಮಿಗಳ ಈ ತರದ ಬರಹವನ್ನು ಕುರಿತು ನಾವು ಹೆಚ್ಚಿಗೆ ಏನನ್ನೂ ಬರೆಯಲಪೇಕ್ಷಿಸುವದಿಲ್ಲ. ಆದರೆ ಶ್ರೀಮಾನ್ ವ್ಹೀ. ಬೀ. ಬಿಳೇಅಂಗಡಿ ಬಿ. ಎ. ಎಲ್. ಬಿ. ಹುಬ್ಬಳ್ಳಿ ಅವರು ಮಾಡಿಕೊಂಡ ತಮ್ಮ ಗದ್ಯ ಪ್ರಭುಲಿಂಗಲೀಲೆ (ದ್ವಿತೀಯವೃತ್ತಿ) ಯಲ್ಲಿಯ ವಿಜ್ಞಪ್ತಿಯನ್ನೂ ಅವರೇ ಬರೆದ 'ಬಸವನಿಗೆ ಬ್ರಾಹ್ಮಣ್ಯವೇಕೆ ವಿರಸವಾಯಿತು? || ಎಂಬ ಲೇಖವನ್ನೂ ನಮ್ಮ ದೊರೆಸ್ವಾಮಿಗಳ ಸಮಾಧಾನಕ್ಕಾಗಿ ಮುಂದೆ ಮಾಡುವೆವು.

ಹರೀಶ್ವರಾದಿಗಳು ಶೈವ ಬ್ರಾಹ್ಮಣರಿದ್ದು ವೀರಶೈವರಾದ ವಿಷಯವನ್ನು ನಮ್ಮ ಲೇಖಕರೇ ಒಪ್ಪಿಕೊಂಡಿರುವರು. ಕರ್ಣಾಟಕದ ದಕ್ಷಿಣ

† ಬಸವರಾಜರಗಳೆ ಪೀಠಿಕೆ ಪುಟ ೭ ೮

|| ಶಿವಾನುಭವ ತ್ರೈಮಾಸಿಕ ೭ ೨

ಭಾಗದಲ್ಲಿದ್ದುಕೊಂಡು ಅದೇ ತಾನೇ ಹೊಸಹಾದಿಯನ್ನು ಹಿಡಿದಿದ್ದ ಹರೀಶ್ವರ-ರಾಘವಾಂಕಾದಿಗಳು ವೀರಶೈವದ ಕೊರತೆಯನ್ನು ತುಂಬಿ ಕೊಂಡು, ಸರ್ವಾಂಗ ಸುಂದರ ಲಿಂಗಾಂಗೀ ಧರ್ಮದ ತತ್ವಗಳನ್ನು ಕರ್ಣಾಟಕದ ಉತ್ತರಭಾಗದಲ್ಲಿದ್ದು, ನಡೆನುಡಿಗಳಿಂದ ಪ್ರಚಾರಗೊಳಿ ಸುತ್ತಿದ್ದ ಬಸವಾದಿಗಳನ್ನು ಎಲ್ಲ ರೀತಿಯಿಂದಲೂ ಹಿಂಬಾಲಿಸಿರಲಿಕ್ಕಿಲ್ಲ. ಆದರೆ ತಮಗೆ ನಿಲುಕಲಾರದ ಆ ತತ್ವಗಳನ್ನು ಅಲ್ಲಗಳೆದಿರಲಿಕ್ಕಿಲ್ಲ. ಹಾಗಿರುತ್ತಿದ್ದರೆ ಇಷ್ಟಲಿಂಗದ ಮಹತ್ವವನ್ನು ಅವರು ಹೇಳುತ್ತಿದ್ದರೇ? ರಗಳೆ ಷಟ್ಪದಿ ಗ್ರಂಥರೂಪವಾಗಿ ಸ್ತುತಿಗಳನ್ನು ಮಾಡುತ್ತಿದ್ದರೇ? † ಒಂದು ವೇಳೆ ಶ್ರೀ ಬಸವಣ್ಣನವರ ಕಾಲಕ್ಕೆ ತುಸು ಹಿಂದೆ ಅಥವಾ ಅವರ ಸಮಕಾಲದಲ್ಲಿಯೇ ದಕ್ಷಿಣಭಾಗದಲ್ಲಿ ವೀರಶೈವ ಮತೋತ್ಕರ್ಷ ಕಾಗಿ ಹರೀಶ್ವರಾದಿಗಳು ಹೆಣಗಾಡುತ್ತಿದ್ದದ್ದಾಗಿದ್ದರೆ ಸಮಕಾಲೀನರಾ ಗಿದ್ದ ಮಾತ್ರದಿಂದ ಸ್ಮರಿಸದೆ ಇರಲಿಕ್ಕೂ ಸಾಕು.

ಚಾಮರಸ-ಕುಮಾರವ್ಯಾಸರ ವಿಷಯವಾಗಿದ್ದ ಈ ಲೇಖದಲ್ಲಿಯೇ ಶ್ರೀಮನ್ ಶ್ರೀನಿವಾಸ ಮೂರ್ತಿಗಳ ಒಂದು ಆಕ್ಷೇಪಣೆಯನ್ನೂ ವಿಚಾ ರಿಸುವದೂ ಇಲ್ಲಿ ಯಥೋಚಿತವಾದುದು.

"ಚಾಮರಸನು ಪ್ರಭುಲಿಂಗ ಲೀಲೆಯಲ್ಲಿ ಹರೀಶ್ವರಾದಿಗಳನ್ನಾಗಲಿ ಕಡೆಗೆ ವೀರಶೈವ ಉಪದೇಶವನ್ನು ಕೊಟ್ಟು ಗುರುವಾಗಿ ಏರ್ಪಟ್ಟ ಉದ್ದಾನಿಯ ವೀರೇಶನನ್ನಾಗಲಿ ಸ್ಮರಿಸದೆ ಇರುವದನ್ನು ನೋಡಿದರೆ ಕುಮಾರ ವ್ಯಾಸಾದಿಗಳ ಸಂಬಂಧವಾದ ಇತಿಹಾಸಗಳನ್ನು ನಂಬು ವದು ಕಷ್ಟವಾಗುತ್ತದೆ" × ಎಂದು ಶ್ರೀನಿವಾಸ ಮೂರ್ತಿಗಳು ಹೇಳು ನರು. ಆದರೆ ಅವರೇ ಪ್ರಭುಲಿಂಗ ಲೀಲೆಯ ವಿಷಯವಾಗಿ ಹೇಳು ವಲ್ಲಿ "ಈ ಕಾವ್ಯದಲ್ಲಿ ಕಥಾ ಭಾಗಕ್ಕೂ ವರ್ಣನಾ ಭಾಗಕ್ಕೂ ಅನು ಗುಣ್ಯವೂ, ಹೆಚ್ಚು ಶೃಂಗಾರವಿಲ್ಲದೆ ಅನ್ಯವಿಷಯ ಬಾಹುಳ್ಯವಿಲ್ಲದೆ ಕಥಾ ನಾಯಕನ ಚರಿತ್ರವನ್ನೇ ಲಕ್ಷ್ಯವಾಗಿಟ್ಟುಕೊಂಡಿರುವದು ಕಂಡು ಬರುತ್ತದೆ. ಇದರಲ್ಲಿ ಮೊದಲಿನಿಂದ ಕಡೆಯವರೆಗೂ ವಿಶಿಷ್ಟಾರ್ಥಕ್ಕೆ

† ಹಾಗಲ್ಲದಿದ್ದರೆ ಶ್ರೀಮನ್ ಟಿ. ಎಸ್. ವೆಂಕಣ್ಣಯ್ಯನವರು ಬಸವರಾಜ ರಗಳೆಗೆ ಬರೆದ ಪೀಠಿಕೆಗೆ ನಮ್ಮ ದೊರೆಸ್ವಾಮಿಗಳು ಏನೆಂದು ಉತ್ತರವನ್ನೀ ಯುವರು?

× ಹರೀಶ್ವರನ ಸ್ಥಾನ ನಿರ್ದೇಶ ಪ್ರಬುದ್ಧ ಕರ್ಣಾಟಕ ೬ ೩

ಅವಕಾಶವಿಡುವವರಿಂದ ಸೌಂದರ್ಯವನ್ನು ಹೆಚ್ಚಿಸಿರುತ್ತದೆ. ಈ ಬಗೆಯ ಕಾವ್ಯಗಳು ಕನ್ನಡ ಸಾಹಿತ್ಯದಲ್ಲಿ ಅಪೂರ್ವವೆಂದೇ ಹೇಳಬೇಕು" * ಎಂದು ಬರೆದು ಪ್ರಭುಲಿಂಗ ಲೀಲೆಯ ವೈಶಿಷ್ಟ್ಯವನ್ನು ಸೂಚಿಸಿರುವರು. ಕಥಾನಾಯಕನ ತನ್ಮೂಲಿಕ ಶಿವಶರಣರ ಚರಿತ್ರೆಗಳನ್ನೇ ಲಕ್ಷ್ಯವಾಗಿಟ್ಟು ಕೊಂಡು ಲಿಂಗಾಂಗೀ ಧರ್ಮ ತತ್ವಗಳನ್ನು ನಿರೂಪಿಸ ತೊಡಗಿದ ಚಾಮ ರಸನು ಗುರುಭಕ್ತಿ ಹೀನನೆಂದು ಹೇಳಲಾಗದು. ಆದರೆ ದೀಕ್ಷಾಗುರು ಗಳ ನಾಮಗಳನ್ನು ಮಂತ್ರಗಳೆಂದು ಭಾವಿಸಿ ಅವನ್ನು ತಮ್ಮಿಷ್ಟಕ್ಕೆ ಗೌಪ್ಯವಾಗಿಡುವ ಪರಿಪಾಠವು ಲಿಂಗಾಂಗಿಗಳಲ್ಲಿರುತ್ತದೆ. ಈ ಕಾರಣ ದಿಂದಲೇ ಚಾಮರಸನು ಒಂದು ವೇಳೆ ದೀಕ್ಷಾಗುರುವಿನ ಹೆಸರನ್ನು ಹೇಳಿರಲಿಕ್ಕಿಲ್ಲ.

ಚಾಮರಸನು ಹೇಳತೊಡಗಿದುದು ಶರಣರಿಗೆ ಪ್ರಾಣಸ್ವರೂಪನಾ ಗಿದ್ದ ಶ್ರೀಮದಲ್ಲಮನ ಚರಿತ್ರೆ. ಇಲ್ಲಿ ಶಿವಶರಣರನ್ನು ಕೊಂಡಾಡು ವದೇ ಅವನಿಗೆ ಹೆಚ್ಚು ಪ್ರಾಶಸ್ತ್ಯವು. ಅದಕ್ಕೆ ತನ್ನ ಕಾಲಕ್ಕೆ ಹಿಂದೆ ವೀರಶೈವ ಕವಿಗಳನೇಕರಿದ್ದರೂ ಆವ ಕವಿಗಳ ಹೆಸರನ್ನು ಹೇಳಿಲ್ಲ. ಆದರೆ ಶಿವಶರಣ ಸ್ತುತಿಪರವಾಗಿದ್ದ ಪದ್ಯಗಳ ಕಡೆಗೆ

ಪರಿಪರಿಯ ಶಿವಲಿಂಗ ಭಕ್ತಿಯ<br>
ಪರುಠವಿಸಿ ಕಾಲನ ನಿವಾರಿಸಿ<br>
ಹರನನೊಚ್ಚಿತಗೊಂಡ ಶಿವಶರಣರಿಗೆ ಶರಣಾರ್ಥಿ॥ §

ಎಂಬ ಭಾಗದಲ್ಲಿ ಲಿಂಗಭಕ್ತಿಯನ್ನಾಚರಿಸಿ ಹರನ ಮೆಚ್ಚುಗೆಗೆ ಪಾತ್ರ ವಾಗಿದ್ದ ಅಖಿಳ ಶಿವಶರಣರನ್ನು ಒಟ್ಟಾಗಿ ಹೊಗಳಿಬಿಟ್ಟಿರುವನು. ಇದ ರಲ್ಲಿ ತಾನು ಸ್ತುತಿಸಬೇಕೆಂದಿದ್ದ ಎಲ್ಲ ಶಿವಭಕ್ತರೂ ಬಂದು ಸಮಾ ವೇಶವಾಗಿರುವರು. ತನ್ನ ಪೂರ್ವದ ಆವ ವೀರಶೈವ ಕವಿಗಳ ಹೆಸ ರನ್ನೂ ಪ್ರತ್ಯೇಕವಾಗಿ ತಿಳಿಸದೇ ಇರುವದೊಂದು ಅವನ ಗ್ರಂಥದ ವಿಶೇಷ ಲಕ್ಷಣವೆಂದು ಹೇಳಬಹುದು.

ಲಿಂಗವಂತರ ಧರ್ಮತತ್ವಗಳೂ ಅವನ್ನು ಗ್ರಂಥಸ್ಥವಾಗಿ ಮಾಡಿದ ಶಿವಶರಣರ ಹಾಗು ಕವಿಗಳ ಚರಿತ್ರವೂ ವಿಶೇಷ ಪ್ರಕಾರದವಿರುತ್ತವೆ.

---

* ವೀರಶೈವ ಪುರಾಣಗಳು ಸಾಹಿತ್ಯಪರಿಷತ್ ಪತ್ರಿಕೆ ೮ ೨

§ ಪ್ರ. ಲಿಂ. ಲೀಲೆ ೧ ೭

ಧರ್ಮತತ್ವಗಳು ಪಿಂಡಬ್ರಹ್ಮಾಂಡಗಳ ಸಂಬಂಧವಾದ ವಿಚಾರಗಳನ್ನೊಳಕೊಂಡು ಈ ವರೆಗೂ ಗುರುತಿಸಲಾಗದ ಕಾರುಣ್ಯಸ್ಮೃತಿ ಮಾರ್ಗವನ್ನು † ಪ್ರತಿಪಾದಿಸುತ್ತವೆ. ಇವು ಬಹು ಸೂಕ್ಷ್ಮವಾಗಿದ್ದು ಪ್ರಾಕೃತರಿಗೆ *Materialists*] ಎಂದೂ ತಿಳಿಯುವು. ತರ್ಕವಿತರ್ಕಗಳಿಗೆ ಎಂದೂ ನಿಲುಕವು. ಪಿಂಡಾಂಡದಲ್ಲಿ ಅನುಭವ ಸಾಧ್ಯದಿಂದ ಒಂದು ಕಾರ್ಯಕ್ಕೆ ಹದವುಂಟಾದಲ್ಲಿ ಬ್ರಹ್ಮಾಂಡದಲ್ಲಿ ಅದರ ಸಹಜ ಸ್ವರೂಪವೂ ವ್ಯಕ್ತವಾಗುವದು. ಬ್ರಹ್ಮಾಂಡದಲ್ಲಿ ತಲೆದೋರಿದ ಒಂದು ವ್ಯತ್ಯಾಸದ ಕುರುಹು ಪಿಂಡಾಂಡದ ತನ್ನ ಅನುಭವದಿಂದ ತಿಳಿಯಲು ಸಾಧ್ಯವಾಗಿರುವದು. ಈ ತರದ ಅನುಭವ ಪರಂಪರೆಯಿಂದ ವಿಕಾಸವನ್ನು ಹೊಂದುತ್ತ ಇನ್ನುಳಿದವರ ವಿಕಾಸಕಲ್ಯಾಣಗಳಿಗೆ ತೊಡಗಿದ ಶಿವಶರಣರ ಜೀವಿತವು ಕೇವಲ ಐತಿಹಾಸಿಕ ಕಾಲಪರಿಮಿತಿಗಾಗಲಿ ಸಂಗತಿಗಳಿಗಾಗಲಿ ಒಳಗಾಗದು. ಅವರು ಕಾಲಕ್ಕೆ ಅಧೀನರಲ್ಲ. ಕಾಲವು ಅವರಾಧೀನವು. ಆವರು ಒಂದಿಲ್ಲೊಂದು ರೂಪದಿಂದ ಭೂಕೈಲಾಸವನ್ನು ಪ್ರಸ್ಥಾಪಿಸುವದಕ್ಕೋಸುಗ ಹೆಣಗುತ್ತ ಬಂದವರೇ! ಸ್ಥೂಲ ಶರೀರವನ್ನು ಬಹುದಿವಸ ಕಾಯ್ದುಕೊಳ್ಳಲೂ, ಬೇಡಾದರೆ ಸೂಕ್ಷ್ಮ ಶರೀರಗಳಿಂದ ಕಾರ್ಯಗೆಯ್ಯಲೂ, ಇಲ್ಲದೆ ಹೋದರೆ ತಮ್ಮ ಶಕ್ತಿರೂಪಗಳನ್ನು ಬೇಕಾದಲ್ಲಿ ಬೇಕಾದ ರೀತಿಯಿಂದ ತೋರ್ಪಡಿಸಲೂ ಅನುಪಮ ಸಾಮರ್ಥ್ಯವುಳ್ಳವರು. ಪುರಾತನಕಾಲದಿಂದ ಈ ವರೆಗೂ ಲೋಕಕಲ್ಯಾಣಕಾರ್ಯವನ್ನು ಮಾಡುತ್ತ ಬಂದ ಒಂದೇ ಗುರುತತ್ವವು ಅವರಲ್ಲಿ ಅಡಕವಾದದ್ದು. ಅಂತೇ ಅದು ಅಖಂಡವಾದುದು. ಈ ಗುರುತತ್ವದ ಪ್ರಭಾವವು ಲಿಂಗಭವಿಗಳಿಗೇ ಸರಿಯಾಗಿ ತಿಳಿಯದು. ಹುಟ್ಟು ಭವಿಗಳಿಗಂತೂ ತಿಳಿಯುವದು ತೀರಾ ಅಶಕ್ಯವಾದುದು. ಕಾರಣ ಯಾವದಾದರೊಂದು ನೆವದಿಂದ ಶಿವಶರಣರ ಹಾಗು ಲಿಂಗವಂತ ಮಹಿಮಾಪುರುಷರ ಮೇಲೆಯೂ ಆವರ ವಿಷಯವಾಗಿ ಇದ್ದ ಗ್ರಂಥಗಳ ಮೇಲೆಯೂ ಸಾರಾಸಾರ ವಿಚಾರಮಾಡದೆ ಕೋಟಿಕ್ರಮವನ್ನು ಮಾಡುವದು ಬಹು ವಿಘಾತಕವಾದದ್ದು. ಧರ್ಮದ ಆಧಿಕ್ಯವನ್ನು ತೋರ್ಪಡಿಸುವದಕ್ಕಾಗಿ ಆವರು ಮೆರಿಸಿದ ಪವಾ

---

† ಪಾಲ್ಕುರಿಕೆಯ ಸೋಮಾರಾಧ್ಯರ "ಭೂಲೋಕ ಚಿಂತಾರತ್ನ" ಮತ್ತು ಶ್ರೀ. ಎಚ್ ಬಿ ಕಲಬುರ್ಗಿ ಬಿ ಎ ಅವರ "ಲಿಂಗರಹಸ್ಯ" ಎಂಬ ಗ್ರಂಥಗಳನ್ನು ನೋಡು.

ಡಗಳನ್ನು ತತ್ವಮಯಾತ್ಮಕವಾಗಿದ್ದ ಅವರ ಜೀವಿತ ಚರಿತ್ರೆಯೊಡನೆ ಹೇಳುವ ಗ್ರಂಥಗಳಲ್ಲಿ ಭಕ್ತ್ಯಾತಿಶಯದಿಂದ ಕೆಲವು ಶಬ್ದಗಳು ಒಂದು ವೇಳೆ ಹೆಚ್ಚಿಗೆ ಬಿದ್ದಿರಬಹುದು. ಅಷ್ಟುಮಾತ್ರಕ್ಕೆ ಅವನ್ನು ನಿರಾಕರಿಸುವದು ತುಂಬಾ ಅಸಮಂಜಸವಾದದ್ದು. ಜೀವನಚರಿತ್ರೆಗೆ ಅವಶ್ಯವಾದ ಸಂಗತಿಗಳನ್ನು ಸಂಗ್ರಹಿಸಿ ಹೇಳುವದು ನಿಜವಾದ ಇತಿಹಾಸ ಭಕ್ತರ ಲಕ್ಷಣ. ಅದನ್ನೆಲ್ಲ ಬಿಟ್ಟುಕೊಟ್ಟು ಅವರು ಹೀಗೆ ಇದ್ದಿರಬಹುದು, ಇವರು ಹಾಗೆ ನಡೆದಿರಬಹುದು ಇತ್ಯಾದಿ ವಿಕಲ್ಪಾರ್ಥವನ್ನುಂಟುಮಾಡುವ ಮತ್ತು ಅಸಾಧುವಾದ ಊಹಾಪೋಹಗಳಿಂದ ಶಿವಶರಣರ ಹಾಗು ಅವರ ಅನುಯಾಯಿಗಳ ಜೀವಿತ ಸ್ವರೂಪವನ್ನು ಕೆಡಿಸುವದು ಎಷ್ಟು ಮಾತ್ರಕ್ಕೂ ಸರಿಯಾದುದಲ್ಲ. ಆಚಾರವಿಚಾರ ಪೂರಿತವಾದ ಇವರ ಜೀವಿತವು ಎಷ್ಟು ಸರ್ವಾಂಗಸುಂದರವಾದದ್ದೂ ಅರ್ಥಬೋಧವುಳ್ಳದ್ದೂ ಎಂಬದು ಅನುಭವವೇದ್ಯವಾಗುವ ಸಂಗತಿಯು. ಬಾಹ್ಯಸಾಧನೆಗಳಿಗೆ ಸರಿಯಾಗಿ ನಿಲುಕದು. ಈ ವಿಷಯವನ್ನು ಗೊತ್ತುಮಾಡಿಕೊಳ್ಳದೆ ಅವರ ಹಾಗು ಅವರ ಕೃತಿಗಳ ವಿಷಯವಾಗಿ ಬರೆಯುವವರು ಕುಂದನ್ನಿಟ್ಟು ನುಡಿದು ಕುದುರೆ ಕಟ್ಟಿ ಬಾಳಬೇಕೆಂಬ ಅಪೇಕ್ಷೆಗೊಳಗಾಗಬಾರದೆಂದು ನಮ್ಮ ಆಗ್ರಹದ ಸೂಚನೆಯು.

---

# ಹರಿಹರನ ರಗಳೆಗಳು.

**ಲೇಖಕ:— ರಾ॥ ಸಾ॥ ಫ. ಗು. ಹಳಕಟ್ಟಿ ಬಿ. ಎ. ಎಲ್. ಎಲ್. ಬಿ. ವಿಜಾಪುರ**

---

ನಾವು ಶಿವಾನುಭವ ಸಂಚಿಕೆಗಳಲ್ಲಿ ಹರಿಹರನ ರಗಳೆಗಳನ್ನು ಪ್ರಸಿದ್ಧಿಸುತ್ತಿದ್ದು ಇವು ಎಷ್ಟು ಮಹತ್ವವಾದವುಗಳೆಂಬದು ವಾಚಕರಿಗೆ ಕೂಡಲೆ ತಿಳಿದುಬರದೆ ಇರಲಾರದು. ವಚನಗ್ರಂಥಗಳು ಕನ್ನಡ ವಾಙ್ಮಯದಲ್ಲಿ ಹ್ಯಾಗೆ ಒಂದು ವಿಶಿಷ್ಟಸ್ಥಾನವನ್ನು ಹೊಂದಿವೆಯೋ ಹಾಗೆಯೇ ಕನ್ನಡ ಕಾವ್ಯ ಗ್ರಂಥಗಳಲ್ಲಿ ಈ ರಗಳೆಗಳು ಒಂದು ವಿಶಿಷ್ಟ ಸ್ಥಾನವನ್ನು ಹೊಂದಿವೆಂದು ಹೇಳಬಹುದು. ಈ ರಗಳೆಗಳಲ್ಲಿ ಹರಿಹರನು ರಚಿಸಿದ ರಗಳೆಗಳು ಅತ್ಯಂತ ಮಹತ್ವದವೆಂಬದು ನಿರ್ವಿವಾದವು. ನಾವು ಶಿವಾನುಭ

ವದಲ್ಲಿ ಈ ವರೆಗೆ ಪುಷ್ಪದ ರಗಳೆ, ಲಿಂಗಾರ್ಚನೆಯ ರಗಳೆ, ಮತ್ತು ಪುರಾತನರಲ್ಲಿ ಗಣಿಸಲ್ಪಟ್ಟ ತಿರುನೀಲಕಂಠ, ಕಣ್ಣಪ್ಪ, ಅನಾಯವಾರ, ಚನ್ನಯ್ಯ, ಯಳೆಯಾಂಡ ಗುಡಿಮಾರ ಇವರ ಮಹಾತ್ಮೆಗಳನ್ನು ವರ್ಣಿಸುವ ರಗಳೆಗಳನ್ನು ಪ್ರಸಿದ್ಧಿಸಿದ್ದೇವೆ. ಇವುಗಳನ್ನು ಓದಿದೊಡನೆ ನಾವು ಮೇಲೆ ಉಲ್ಲೇಖಿಸಿದ್ದರ ನಿಜತ್ವವು ವಾಚಕರಿಗೆ ಕೂಡಲೆ ಮನವರಿಕೆಯಾಗದೆ ಇರದು.

ಕರ್ನಾಟಕ ಕವಿಶ್ರೇಷ್ಠನಾದ ಹರಿಹರನು ಈ ರಗಳೆಗಳಲ್ಲಿ ತನ್ನ ಅತುಲ ಕವಿತಾಸಾಮರ್ಥ್ಯವನ್ನು ಬಹು ಚನ್ನಾಗಿ ಹೊರಗೆಡವಿರುವನು. ಅವನು ರಚಿಸಿದ ಗಿರಿಜಾಕಲ್ಯಾಣವು ಲೋಕಪ್ರಸಿದ್ಧವಾಗಿರುತ್ತದೆ. ಅದರ ರ. , ಪ್ರತಿಭೆ ಮತ್ತು ಮಾರ್ಮಿಕ ವಿವೇಚನೆಯ ಮೂಲಕ ಹರಿಹರನು ಕನ್ನಡ ಕವಿಗಳ ಮಾಲಿಕೆಯಲ್ಲಿ ಉಚ್ಚ ಸ್ಥಾನವನ್ನು ಹೊಂದಿರುವದರಲ್ಲಿ ಸಂದೇಹವಿರಲಾರದು. ಆದರೆ ಅವನು ರಚಿಸಿದ ರಗಳೆಗಳ ಮೂಲಕವಾಗಿ ಸಹ ಅವನ ಈ ಸ್ಥಾನವು ಮತ್ತಿಷ್ಟು ಬಲಪಡದೆ ಇರಲಾರದು. ಹರಿಹರನು ಒಬ್ಬ "ರಗಳೆಯ ಕವಿ" ಎಂದು ಹಿಂದಿನವರು ಅವನ ಅವಹೇಲನೆ ಮಾಡಿದ್ದರ ದಂತಕಥೆಯೊಂದುಂಟು. ಇದಕ್ಕೋಸ್ಕರ ಅವನು ಈ ಕಾವ್ಯಪದ್ಧತಿಯನ್ನು ಬಿಟ್ಟುಕೊಟ್ಟು ಗಿರಿಜಾಕಲ್ಯಾಣವನ್ನು ಬರೆದನೆಂದು ಹೇಳುವದುಂಟು. ಇದು ನಿಜವಿದ್ದರೂ ಇರಬಹುದು. ಯಾಕೆಂದರೆ ಇವನ ತರುವಾಯ ರಗಳೆಗಳನ್ನು ಯಾವ ಮಹತ್ವದ ಕವಿಯೂ ಬರೆದಿರುವದಿಲ್ಲ. ಕೆಲವುಗಳು ಉಪಲಬ್ಧವಿದ್ದರೂ ಅವು ಕೆಲವು ಮಾತ್ರವಿದ್ದು ಅವು ಅಷ್ಟು ಪ್ರಸಿದ್ಧಿಯನ್ನು ಹೊಂದಿರುವದಿಲ್ಲ. ಆದರೆ ರಗಳೆಗಳು ಇಂಥ ತ್ಯಾಜ್ಯ ಗ್ರಂಥಗಳೆಂದು ಅವು ಕಂಡುಬರುವದಿಲ್ಲ.

ಲೋಕದ ರುಚಿಯು ಕಾಲಕಾಲಕ್ಕೆ ಭಿನ್ನವಾಗುತ್ತ ಹೋಗುತ್ತದೆ. ಇದಕ್ಕನುಸರಿಸಿ ಈ ರಗಳೆಗಳ ಪದ್ಧತಿಯು ಆಧುನಿಕ ಕವಿತಾಪದ್ಧತಿಯನ್ನು ಬಹಳವಾಗಿ ಹೋಲುತ್ತಿದ್ದು ಈ ಬಗೆಯ ಕಾವ್ಯಗಳು ಈಗ ಕನ್ನಡ ನಾಡಿನಲ್ಲಿ ಮೆಲ್ಲಮೆಲ್ಲನೆ ಹೊರಬೀಳಹತ್ತಿವೆ. ಆದುದರಿಂದ ಹರಿಹರನ ರಗಳೆಗಳು ಇನ್ನು ಮೇಲೆ ಲೋಕಪ್ರಿಯವಾಗಬಹುದೆಂದು ಊಹಿಸಬಹುದಾಗಿದೆ ಈ ಕಾಲದಲ್ಲಿ ಇಂಗ್ಲಿಷ ಕಾವ್ಯಗಳಲ್ಲಿ ಕಂಡುಬರುವ ಸ್ವಾಭಾವಿಕ ವರ್ಣನೆ, ಸುಲಭ ಶೈಲಿ, ವ್ಯವಹಾರದ ಸಾರವನ್ನು

ಕಂಡುಹಿಡಿಯುವದು ಮತ್ತು ಇವುಗಳನ್ನು ವಾಡಿಕೆಯ ಭಾಷೆಯಲ್ಲಿ ತಟ್ಟನೆ ಮನಸಿನಲ್ಲಿ ಬಿಂಬಿಸುವ ಪದ್ಧತಿ ಇವೆಲ್ಲವುಗಳೂ ಹರಿಹರನ ಈ ರಗಳೆಗಳಲ್ಲಿ ತೋರಿಬರುತ್ತವೆ. ಇಷ್ಟೇ ಅಲ್ಲ ಈ ರಗಳೆಗಳು ಈ ಕಾಲಕ್ಕೆ ಇಂಥ ಕಾವ್ಯ ರಚಿಸುವವರಿಗೆ ಮಾರ್ಗದರ್ಶಕವಾಗಿವೆ ಎಂದು ಹೇಳಲೂ ಯಾವ ಪ್ರತ್ಯವಾಯವು ಇರಲಾರದು.

ಹರಿಹರನು ವೀರಶೈವ ಮತವು ಕರ್ನಾಟಕದಲ್ಲಿ ಉದ್ಭವವಾದ ಕಾಲಕ್ಕೆ ಹುಟ್ಟಿದ ಪುರಾತನ ಕವಿಯಾಗಿರುವನು. ಆ ಕಾಲಕ್ಕ ವೀರ ಶೈವ ಮತದ ನಿಜವಾದ ತೇಜಸ್ಸು ಜನಸಮುದಾಯದಲ್ಲಿ ಪ್ರಸ್ಫುರಿಸು ತ್ತಿದ್ದು ಅವರ ವಿಶ್ವಬಂಧುತ್ವದ ವಿಚಾರಗಳನ್ನು ಹರಿಹರನು ತನ್ನ ರಗ ಳೆಗಳಲ್ಲಿ ಬಹು ಚನ್ನಾಗಿ ಹೊರಗೆಡವಿರುವನು. ಅವನು ಮೊದಲು ಒಬ್ಬ ಕಾರಣಿಕನಾಗಿ ಉಪಜೀವಿಸುತ್ತಿದ್ದನು. ಆದರೆ ಹಿಂದುಗಡೆ ಅವನು ತನ್ನ ಈ ಸೇವಾವೃತ್ತಿಯನ್ನು ಬಿಟ್ಟುಕೊಟ್ಟು ಪರಿಶುದ್ಧವಾದ ಧಾರ್ಮಿ ಕವಾತಾವರಣವುಳ್ಳ ಹಂಪೆಯ ವಿರೂಪಾಕ್ಷನ ಸನ್ನಿಧಿಯಲ್ಲಿ ಕಾಲ ಕಳೆ ಯಹತ್ತಿದನು. ಈ ಪ್ರಕಾರ ಶ್ರೇಷ್ಠ ಧಾರ್ಮಿಕ ಭಾವನೆಯುಳ್ಳ ಮಹಾ ಕವಿಯಾದ ಹರಿಹರನ ಕವಿತ್ವ ಶಕ್ತಿಯನ್ನು ಗಿರಿಜಾ ಕಲ್ಯಾಣವಲ್ಲಿ ಹುಡು ಕುವದಕ್ಕಿಂತ ಅವನ ಸ್ವಾಭಾವಿಕ ಮನೋವೃತ್ತಿಗೆ ಅನುರೂಪವಾಗಿ ರುವ ಶಿವಶರಣರ ಈ ಚರಿತ್ರೆಗಳಲ್ಲಿ ಕಂಡು ಹಿಡಿಯುವದು ಯೋಗ್ಯ ವಾಗಿದೆ. ಈ ದೃಷ್ಟಿಯಿಂದ ಈ ರಗಳೆಗಳನ್ನು ಲಕ್ಷಗೊಟ್ಟು ಓದಿದರೆ ಮನಸ್ಸು ಕೂಡಲೆ ಉಚ್ಚವಾತಾವರಣದಲ್ಲಿ ಹೊಯ್ದಾಡದೆ ಇರಲಾರದು. ಇವು ಹೃದಯಕ್ಕೆ ಕೂಡಲೆ ನಾಟುತ್ತವೆ. ಆಗ ಹರಿಹರನು ನಮ್ಮನ್ನು ತನ್ನಂತೆ ಮಾಡಿಕೊಂಡು ತನ್ನೊಡನೆ ನಮ್ಮನ್ನು ಹೊಯ್ದಾಡಿಸಹತ್ತು ವನು. ಇತರ ಕಾವ್ಯಗಳು ನಮ್ಮ ವಿಚಾರಶಕ್ತಿಯನ್ನು ಪ್ರೇರಣೆಗೊ ಳಿಸಬಹುದು. ಮತ್ತು ನಮ್ಮನ್ನು ಚಕಿತಗೊಳಿಸಬಹುದು. ಆದರೆ ಹರಿ ಹರನು ಮಾತ್ರ ನಮ್ಮಲ್ಲಿ ಭಕ್ತಿರಸಭಾವವನ್ನು ಪೂರ್ಣವಾಗಿ ಬೀರಿ ಶ್ರೇಷ್ಠ ವಾದ ಮನೋಭಾವನೆಗಳನ್ನು ನಮ್ಮಲ್ಲಿ ತುಂಬಿ, ಉಚ್ಚ ವಾತಾವರ ಣದಲ್ಲಿ ಹರಿದಾಡಿಸುವನು. ಇವನ ಭಾಷೆಯು ಅತ್ಯಂತ ಸವಿಯುಳ್ಳದ್ದು ಮತ್ತು ಮೃದುವಾದದ್ದು. ಕನ್ನಡನುಡಿಯ ಸೊಂಪನ್ನು ಅರಿಯಬೇಕಾದರೆ ಕನ್ನಡಿಗರು ಹರಿಹರನ ಈ ರಗಳೆಗಳನ್ನು ಅವಶ್ಯವಾಗಿ ಓದಬೇಕು. ಇದ ರಲ್ಲಿ ಸಂಸ್ಕೃತ ಶಬ್ದಗಳ ಆಡಂಬರವು ಇರದೆ ಇವುಗಳನ್ನು ಹರಿಹರನು ಅವಶ್ಯವಿದ್ದಷ್ಟೇ ಉಪಯೋಗಿಸುತ್ತಾನೆ. ಕನ್ನಡದ ಶಬ್ದಗಳಿಗೆಯೇ

ಅವನು ಮಹತ್ವದ ಸ್ಥಾನವನ್ನು ಕೊಟ್ಟಿರುವನು. ಅವನು ಪ್ರತಿಯೊಂದು ನುಡಿಯಲ್ಲಿ ಆದಿ ಮತ್ತು ಅಂತ್ಯ ಪ್ರಾಸಗಳನ್ನು ಈ ರಗಳೆಗಳಲ್ಲಿ ಇಟ್ಟಿರುವನು. ಹೀಗಿದ್ದರೂ ಪ್ರತಿಯೊಂದು ಓಳಿಯಲ್ಲಿ ಭಾಷೆಯ ಸ್ವಾಭಾವಿಕ ಓಘಕ್ಕೆ ಅಡ್ಡಿ ಬಂದಿಲ್ಲ. ಅವುಗಳಲ್ಲಿ ಶಬ್ದಗಳ ಜಗ್ಗಾಟ ಕೃತ್ರಿಮ ವಾಕ್ಯರಚನೆ ಪ್ರಾಸಕ್ಕೋಸ್ಕರ ಶಬ್ದಗಳನ್ನು ಎತ್ತಿತ್ತಲೋ ಹಾಕಿಬಿಡುವದು ಈ ಬಗೆಯ ಪ್ರಯತ್ನಗಳಾವೂ ತೋರಿಬರುವದಿಲ್ಲ. ಇದು ಕವಿಯಲ್ಲಿರುವ ಭಾಷಾಸ್ವಾಮಿತ್ವವನ್ನು ಬಹು ಚನ್ನಾಗಿ ತೋರಿಸುತ್ತದೆ. ವಾಙ್ಮಯದೃಷ್ಟಿಯಿಂದ ಹರಿಹರನ ರಗಳೆಗಳ ವಿಷಯದಲ್ಲಿ ಇಷ್ಟುಮಾತ್ರ ಉಲ್ಲೇಖಿಸಿ ನಾವು ಅವುಗಳಲ್ಲಿರುವ ಶಿವಾನುಭವ ತತ್ವಗಳನ್ನು ವಾಚಕರ ನಿದರ್ಶನಕ್ಕೆ ತರಲು ಪ್ರಯತ್ನಿಸುತ್ತೇವೆ.

ಹರಿಹರನು ನಾವು ಮೊಲೆ ಹೇಳಿದಂತೆ ವೀರಶೈವಧರ್ಮದ ಆರಂಭಕಾಲದಲ್ಲಿ ಹುಟ್ಟಿದವನು. ಇವನ ಕಾಲದಲ್ಲಿ ಬಸವಾದಿ ಪ್ರಮುಥರ ಮತ್ತು ವಚನಕಾರರ ವಿಚಾರಗಳು ಸಮಾಜದಲ್ಲೆಲ್ಲ ಬಹಳ ಪ್ರಸಾರಗೊಂಡಿದ್ದವು. ಆದ್ದರಿಂದ ಈ ವಾಙ್ಮಯದ ವಿಚಾರಗಳು ಈ ರಗಳೆಗಳಲ್ಲಿ ಕಂಡುಬರುವದು ಸ್ವಾಭಾವಿಕವಾಗಿದೆ. ಆದರೆ ಇಂಥ ವಿಚಾರಗಳು ಈಚೆಗೆ ಉತ್ಪನ್ನವಾದ ವೀರಶೈವ ಗ್ರಂಥಕಾರರಲ್ಲಿ ಅಷ್ಟು ಸ್ಪುಟವಾಗಿ ತೋರಿಬರುವದಿಲ್ಲ. ಆಧುನಿಕ ಕಾಲದಲ್ಲಿ ಸಮಾಜದ ಸುತ್ತಲಿನ ಆಕುಂಚಿತ ವಾತಾವರಣವು ಬಸವಾದಿ ಪ್ರಮುಥರ ಕಾಲದ ಉಚ್ಚ ವಿಚಾರಗಳನ್ನು ಇತ್ತಿತ್ತ ಮಸುಳಿಸುತ್ತ ಬಂದಿರುತ್ತದೆ. ಹರಿಹರನು ವರ್ಣಿಸಲು ಕೈಕೊಂಡಿರುವ ಚರಿತ್ರೆಗಳು ತಮಿಳು ದೇಶದಲ್ಲಿ ಉತ್ಪನ್ನರಾದ ಪುರಾತನರವು ಇರುತ್ತವೆ. ಇವರು ಬಹುತರ ಎಲ್ಲರೂ ಶೈವಧರ್ಮಿಗಳು. ವೀರಶೈವರಲ್ಲ. ಆದರೂ ಕೂಡ ಹರಿಹರನು ಇವರ ಚರಿತ್ರೆಗಳಲ್ಲಿ ವೀರಶೈವಧರ್ಮದ ಹೊಳಪನ್ನುಂಟುಮಾಡಲು ಪ್ರಯತ್ನಿಸಿದ್ದಾನೆ.

ತಿರುನೀಲಕಂಠರ ಚರಿತ್ರೆಯಲ್ಲಿ ಷಟ್‌ಸ್ಥಲದಲ್ಲಿ ಎರಡನೆಯ ಸ್ಥಲವಾದ ಮಾಹೇಶ್ವರಸ್ಥಲದ ವಿಷಯಗಳು ಅತ್ಯುತ್ತಮವಾಗಿ ವರ್ಣಿಸಲ್ಪಟ್ಟಿವೆ. ಮಾಹೇಶ್ವರ ಸ್ಥಲದ ಲಕ್ಷಣವು ಒಂದು ವ್ರತವನ್ನು ಕೈಕೊಂಡು ಅದರಂತೆ ನಡೆಯುವದೇ ಇರುತ್ತದೆ. ಇದರಲ್ಲಿ ಎಂಥ ಕಷ್ಟಗಳು ಬಂದರೂ ಕೂಡ ಅವುಗಳನ್ನು ಮನುಷ್ಯನು ಸಹಿಸತಕ್ಕದ್ದು. ತಿರುನೀಲಕಂಠನು ತನ್ನ ಹೆಂಡತಿಯು ಪರಮಾತ್ಮನ ಹೆಸರಿನಿಂದ ಆಣೆಯನ್ನಿಡಲು ಅವನು

ಆ ಪ್ರಕಾರ ಬ್ರಹ್ಮಚರ್ಯ ವ್ರತದಿಂದಲೇ ವರ್ತಿಸಿದನು. ಅವನು ೯೦ ವರ್ಷಗಳ ವರೆಗೆ ಹೀಗೆ ನಡೆಯಲು ಪರಮಾತ್ಮನು ಅವನನ್ನು ಪರೀಕ್ಷಿಸಬೇಕೆಂದು ಒಂದು ವೇಷವನ್ನು ಧಾರಣ ಮಾಡಿ ಒಂದು ನೆವದಿಂದ ಅವನನ್ನು ಅನೇಕ ಬಗೆಯಾಗಿ ಹಿಂಸಿಸಿದನು. ಆದರೆ ತಿರುನೀಲಕಂಠನು ಅವುಗಳಿಗೆ ಏನೂ ಅಂಜದೆ ತನ್ನ ಸಾಧುವೃತ್ತಿಯನ್ನು ಬಿಡಲಿಲ್ಲ. ಹೀಗೆ ವರ್ತಿಸಿದ್ದರಿಂದ ಅವನು ಕಡೆಗೆ ಮೋಕ್ಷವನ್ನು ಹೊಂದಿದನು. ಈ ರಗಳೆಯಲ್ಲಿ ಪರಮಾತ್ಮನು ಹ್ಯಾಗೆ ಕಾಡುತ್ತಾನೆ, ಆ ಕಾಲಕ್ಕೆ ಮಹೇಶ್ವರನು ಹ್ಯಾಗೆ ವರ್ತಿಸಬೇಕು ಎಂಬಿವೇ ವಿಷಯಗಳನ್ನು ಬಹು ಚನ್ನಾಗಿ ಕವಿಯು ವರ್ಣಿಸಿರುತ್ತಾನೆ. ಮಾಹೇಶ್ವರ ಸ್ಥಲದಲ್ಲಿ ಬಸವೇಶ್ವರನು ಯಾವ ಬಗೆಯ ವಚನಗಳನ್ನು ಹೇಳಿರುವನೋ ಅವುಗಳ ಭಾವವು ಈ ರಗಳೆಯಲ್ಲಿ ಬಹು ಸರಸಾಗಿ ವ್ಯಕ್ತಮಾಡಲ್ಪಟ್ಟಿವೆ.

ಕಣ್ಣಪ್ಪನ ಮಹಾತ್ಮೆಯಲ್ಲಿ ಹರಿಹರನು ಕೇವಲ ಬಾಹ್ಯ ಕರ್ಮಗಗಳಲ್ಲಿ ತೊಳಲಾಡುವವರನ್ನು ಬಹು ಚನ್ನಾಗಿ ಟೀಕಿಸಿರುವನು. ವಚನಕಾರರು ಟಳ ಶೀಲಗಳನ್ನು ತಮ್ಮ ವಚನಗಳಲ್ಲಿ ಬಹಳ ಹಳಿದಿರುತ್ತಾರೆ. ಆದೇ ಪ್ರಕಾರವೇ ಹರಿಹರನು ಅವರನ್ನು ಈ ರಗಳೆಯಲ್ಲಿ ಚನ್ನಾಗಿ ದೂಷಿಸಿರುವನು. ಕಣ್ಣಪ್ಪನಿಗೆ ಯಾವ ಶಾಸ್ತ್ರವೂ ವಿಧಿವಿಧಾನಗಳೂ ಗೊತ್ತಿರಲಿಲ್ಲ. ಆದರೂ ಆತನಲ್ಲಿ ಪರಮಾತ್ಮನ ಬಗ್ಗೆ ದೃಢವಾದ ಭಕ್ತಿ ವಿಶ್ವಾಸಗಳಿದ್ದವು. ಅವುಗಳ ಮೂಲಕ ಉಂಟಾದ ಉದ್ರೇಕಗಳನ್ನು ಬಹು ಹೃದಯಂಗಮವಾಗಿ ಹರಿಹರನು ಇದರಲ್ಲಿ ವರ್ಣಿಸಿರುವನು. ಮಡಿವೈಲಿಗೆಯಿಂದ ಪೂಜೆ ಮಾಡುವ ಶಿವಬ್ರಾಹ್ಮಣನು ಮತ್ತು ಮಾಂಸಾಹಾರಿಯಾದ ಕಣ್ಣಪ್ಪನು ಇವರ ಭಾವದಲ್ಲಿ ಇರುವ ಮಹದಂತರಗಳನ್ನು ಈ ರಗಳೆಯಲ್ಲಿ ಅತ್ಯಂತ ಮನೋಹರವಾಗಿ ಕಾಣಿಸಿರುವನು.

ಆನಾಯನಾರ ಭಕ್ತರ ರಗಳೆಯಲ್ಲಿ ಹರಿಹರನು ಮಂತ್ರದ ಮಹಾತ್ಮೆಯನ್ನು ಚನ್ನಾಗಿ ವಿವರಿಸಿರುವನು. ಮಂತ್ರ ಜಪವೆಂದರೆ ಮನಸ್ಸಿಲ್ಲದೆ ಕೇವಲ ಔಪಚಾರಿಕವಾಗಿ ಉಚ್ಚರಿಸತಕ್ಕನುಡಿಗಳಲ್ಲ. ಭಕ್ತನಾದವನು ಅತ್ಯಂತ ಧ್ಯಾನ ಮನಸ್ಕವಾಗಿ ಭಕ್ತಿಭಾವದಿಂದ ಅವುಗಳನ್ನು ಉಚ್ಚರಿಸುವದು ಅವಶ್ಯವು. ಆನಾಯನಾರನು ಅಡವಿಯಲ್ಲಿ ದನಕಾಯುವ ಕಾಯಕವನ್ನು ಮಾಡುತ್ತಿದ್ದನು. ಅವನು ಕೊಳಲಿನಲ್ಲಿಯೇ ಪಂಚಾಕ್ಷರಿಯನ್ನು

ಸ್ಮರಿಸುತ್ತಿದ್ದನು. ಅವನು ಕೊಳಲು ಊದುವದನ್ನು ಕೇಳಿ ಅಡವಿಯ ಲ್ಲಿಯ ಎಲ್ಲ ಪ್ರಾಣಿಗಳು ತಮ್ಮ ಜಾತಿಧರ್ಮವನ್ನು ಮರೆತುಬಿಟ್ಟು ಪಂಚಾಕ್ಷರಿಯ ಧ್ವನಿಯನ್ನು ಕೇಳುತ್ತ ನಿಲ್ಲುವವು. ಒಂದು ಸಾರೆ ಪರಮಾತ್ಮನು ಕಕ್ಕೆಯ ಮರದ ಮೇಲೆ ನಿಂತು ಆನಾಯನಾರನಿಗೆ ಕಾಣಿ ಸಿಕೊಳ್ಳಲು ಆಯನಯನಾರನು ಆ ಮರವನ್ನೇ ಶಿವನೆಂದು ಭಾವಿಸಿ ಚಿತ್ತವಿಟ್ಟು ಪಂಚಾಕ್ಷರಿಯನ್ನು ಊದಲನುವಾದನು. ಹೀಗೆ ವರ್ತಿಸುತ್ತ ಅವನು ಶ್ರೇಷ್ಠ ಪದವಿಯನ್ನು ಹೊಂದಿದನು.

ಚನ್ನಯ್ಯನು ಚೋಳದೇಶದಲ್ಲಿಯ ಒಬ್ಬ ಅಸ್ಪೃಶ್ಯನು. ಅವನು ಹುಲ್ಲಿನ ಕಾಯಕವನ್ನು ಮಾಡುತ್ತ ಉದರನಿರ್ವಾಹ ಸಾಗಿಸುತ್ತಿದ್ದನು. ಅವನು ಗುಪ್ತದಿಂದ ತನ್ನ ಇಷ್ಟಲಿಂಗದ ಆರಾಧನೆಯನ್ನು ಮಾಡುತ್ತ ಪಂಚ ವಿಷಯಗಳನ್ನು ಶಿವನಿಗೆ ಅರ್ಪಿಸಿ ಪ್ರಸಾದರೂಪವಾಗಿ ಸ್ವೀಕರಿ ಸುವನು. ಚೋಳರಾಯನು ತನ್ನ ಪಟ್ಟಣದಲ್ಲಿರುವ ಶಿವಾಲಯಕ್ಕೆ ಹೋಗಿ ಅನೇಕ ರೀತಿಯಿಂದ ಸಡಗರದಿಂದ ಅರ್ಚನೆಯನ್ನು ಮಾಡುತ್ತ ಭಜಿ ಸುತ್ತಿದ್ದನು. ಒಂದು ದಿವಸ ಅವನ ಮನಸ್ಸಿನಲ್ಲಿ ತಾನು ಸಲ್ಲಿಸಿದ ನೈವೇದ್ಯವನ್ನು ಪರಮಾತ್ಮನು ಉಣ್ಣಲೇಬೇಕೆಂದು ಹಟ ತೊಟ್ಟು ಆತುರ ನಾಗಿ ತನ್ನನ್ನು ಘಾತಿಸಿಕೊಳ್ಳಲು ಉದ್ಯುಕ್ತನಾದನು. ಆಗ ಶಿವನು ಪ್ರತ್ಯಕ್ಷನಾಗಿ ಚೋಳನಿಗೆ ನೀನು ಸಮರ್ಪಿಸಿದ ನೈವೇದ್ಯವು ಚನ್ನನ ನೈವೇ ದ್ಯಕ್ಕೆ ಸರಿಬಾರದು, ಚನ್ನನೊಡನೆ ನಾನು ದಿನಾಲು ಉಣ್ಣುತ್ತೇನೆ ಎಂದು ಹೇಳಿ ಅದೃಶ್ಯನಾದನು. ಆಗ ಚೋಳರಾಯನು ಚನ್ನಯ್ಯನನ್ನು ಹುಡು ಕಿಸಿ ಅವನನ್ನು ಕಂಡು ಮನ್ನಣೆಯಿಂದ ಕರೆತಂದು ಸಿಂಹಾಸನದ ಮೇಲೆ ಕುಳ್ಳಿರಿಸಿ ಸತ್ಕರಿಸಿದನು. ವೀರಶೈವರಲ್ಲಿ ಅಸ್ಪೃಶ್ಯ ಭಾವವೂ ಜಾತಿ ಭೇದಗಳೂ ಇರುವದಿಲ್ಲ. ಮತ್ತು ಲಿಂಗಾರ್ಪಿತವಾದುದರಲ್ಲಿ ಭೇದಾಭೇದ ಗಳು ಇರಕೂಡದೆಂಬ ಷಟ್‌ಸ್ಥಲದ ಸಿದ್ಧಾಂತವನ್ನು ಹರಿಹರನು ಈ ರಗ ಳೆಯಲ್ಲಿ ಬಹು ಚನ್ನಾಗಿ ಉದಹರಿಸಿರುವನು.

ಇಳೆಯಾಂಡ ಗುಡಿಮಾರನ ರಗಳೆಯಲ್ಲಿ ಆತ್ಮಾರ್ಪಣದ ಭಾವವು ಬಹು ಚನ್ನಾಗಿ ಉದಹರಿಸಲ್ಪಟ್ಟಿದೆ ಇಳೆಯಾಂಡ ಗುಡಿಮಾರನು ಮೊದಲಿಗೆ ಅತ್ಯಂತ ಶ್ರೀಮಂತನು. ಆದರೆ ದಾನಧರ್ಮ ಮಾಡುವ ದರಲ್ಲಿ ಅವನು ಅತ್ಯಂತ ಬಡವನಾದನು. ಆದರೂ ಕೂಡ ಅವನಲ್ಲಿ ಯಾವ ಬಗೆಯ ಕೃಪಣತನವು ತಲೆದೋರಲಿಲ್ಲ. ಅವನು ತನ್ನ ದಾನಧರ್ಮ

ಆ ಪ್ರಕಾರ ಬ್ರಹ್ಮಚರ್ಯ ವ್ರತದಿಂದಲೇ ವರ್ತಿಸಿದನು. ಅವನು ೯೦ ವರ್ಷಗಳ ವರೆಗೆ ಹೀಗೆ ನಡೆಯಲು ಪರಮಾತ್ಮನು ಅವನನ್ನು ಪರೀಕ್ಷಿಸಬೇಕೆಂದು ಒಂದು ವೇಷವನ್ನು ಧಾರಣ ಮಾಡಿ ಒಂದು ನೆವದಿಂದ ಅವನನ್ನು ಅನೇಕ ಬಗೆಯಾಗಿ ಹಿಂಸಿಸಿದನು. ಆದರೆ ತಿರುನೀಲಕಂಠನು ಅವುಗಳಿಗೆ ಏನೂ ಅಂಜದೆ ತನ್ನ ಸಾಧುವೃತ್ತಿಯನ್ನು ಬಿಡಲಿಲ್ಲ. ಹೀಗೆ ವರ್ತಿಸಿದ್ದರಿಂದ ಅವನು ಕಡೆಗೆ ಮೋಕ್ಷವನ್ನು ಹೊಂದಿದನು. ಈ ರಗಳೆಯಲ್ಲಿ ಪರಮಾತ್ಮನು ಹ್ಯಾಗೆ ಕಾಡುತ್ತಾನೆ, ಆ ಕಾಲಕ್ಕೆ ಮಹೇಶ್ವರನು ಹ್ಯಾಗೆ ವರ್ತಿಸಬೇಕು ಎಂಬಿವೇ ವಿಷಯಗಳನ್ನು ಬಹು ಚನ್ನಾಗಿ ಕವಿಯು ವರ್ಣಿಸಿರುತ್ತಾನೆ. ಮಾಹೇಶ್ವರ ಸ್ಥಲದಲ್ಲಿ ಬಸವೇಶ್ವರನು ಯಾವ ಬಗೆಯ ವಚನಗಳನ್ನು ಹೇಳಿರುವನೋ ಅವುಗಳ ಭಾವವು ಈ ರಗಳೆಯಲ್ಲಿ ಬಹು ಸರಸಾಗಿ ವ್ಯಕ್ತಮಾಡಲ್ಪಟ್ಟಿವೆ.

ಕಣ್ಣಪ್ಪನ ಮಹಾತ್ಮೆಯಲ್ಲಿ ಹರಿಹರನು ಕೇವಲ ಬಾಹ್ಯ ಕರ್ಮಗಗಳಲ್ಲಿ ತೊಳಲಾಡುವವರನ್ನು ಬಹು ಚನ್ನಾಗಿ ಟೀಕಿಸಿರುವನು. ವಚನಕಾರರು ಒಳ ಶೀಲಗಳನ್ನು ತಮ್ಮ ವಚನಗಳಲ್ಲಿ ಬಹಳ ಹಳಿದಿರುತ್ತಾರೆ. ಅದೇ ಪ್ರಕಾರವೇ ಹರಿಹರನು ಅವರನ್ನು ಈ ರಗಳೆಯಲ್ಲಿ ಚನ್ನಾಗಿ ದೂಷಿಸಿರುವನು. ಕಣ್ಣಪ್ಪನಿಗೆ ಯಾವ ಶಾಸ್ತ್ರವೂ ವಿಧಿವಿಧಾನಗಳೂ ಗೊತ್ತಿರಲಿಲ್ಲ. ಆದರೂ ಆತನಲ್ಲಿ ಪರಮಾತ್ಮನ ಬಗ್ಗೆ ದೃಢವಾದ ಭಕ್ತಿ ವಿಶ್ವಾಸಗಳಿದ್ದವು. ಅವುಗಳ ಮೂಲಕ ಉಂಟಾದ ಉಪ್ರೇಕಗಳನ್ನು ಬಹು ಹೃದಯಂಗಮವಾಗಿ ಹರಿಹರನು ಇದರಲ್ಲಿ ವರ್ಣಿಸಿರುವನು. ಮಡಿವೈಲಿಗೆಯಿಂದ ಪೂಜೆ ಮಾಡುವ ಶಿವಬ್ರಾಹ್ಮಣನು ಮತ್ತು ಮಾಂಸಾಹಾರಿಯಾದ ಕಣ್ಣಪ್ಪನು ಇವರ ಭಾವದಲ್ಲಿ ಇರುವ ಮಹದಂತರಗಳನ್ನು ಈ ರಗಳೆಯಲ್ಲಿ ಅತ್ಯಂತ ಮನೋಹರವಾಗಿ ಕಾಣಿಸಿರುವನು.

ಅನಾಯನಾರ ಭಕ್ತರ ರಗಳೆಯಲ್ಲಿ ಹರಿಹರನು ಮಂತ್ರದ ಮಹಾತ್ಮೆಯನ್ನು ಚನ್ನಾಗಿ ವಿವರಿಸಿರುವನು. ಮಂತ್ರ ಜಪವೆಂದರೆ ಮನಸ್ಸಿಲ್ಲದೆ ಕೇವಲ ಔಪಚಾರಿಕವಾಗಿ ಉಚ್ಚರಿಸತಕ್ಕನುಡಿಗಳಲ್ಲ. ಭಕ್ತನಾದವನು ಅತ್ಯಂತ ಧ್ಯಾನ ಮನಸ್ಕವಾಗಿ ಭಕ್ತಿಭಾವದಿಂದ ಅವುಗಳನ್ನು ಉಚ್ಚರಿಸುವದು ಅವಶ್ಯವು. ಅನಾಯನಾರನು ಅಡವಿಯಲ್ಲಿ ದನಕಾಯುವ ಕಾಯಕವನ್ನು ಮಾಡುತ್ತಿದ್ದನು. ಅವನು ಕೊಳಲಿನಲ್ಲಿಯೇ ಪಂಚಾಕ್ಷರಿಯನ್ನು

ಸ್ಮರಿಸುತ್ತಿದ್ದನು. ಅವನು ಕೊಳಲು ಊದುವದನ್ನು ಕೇಳಿ ಅಡವಿಯ ಲ್ಲಿಯ ಎಲ್ಲ ಪ್ರಾಣಿಗಳು ತಮ್ಮ ಜಾತಿಧರ್ಮವನ್ನು ಮರೆತುಬಿಟ್ಟು ಪಂಚಾಕ್ಷರಿಯ ಧ್ವನಿಯನ್ನು ಕೇಳುತ್ತ ನಿಲ್ಲುವವು. ಒಂದು ಸಾರೆ ಪರಮಾತ್ಮನು ಕಕ್ಕೆಯ ಮರದ ಮೇಲೆ ನಿಂತು ಆನಾಯನಾರನಿಗೆ ಕಾಣಿ ಸಿಕೊಳ್ಳಲು ಆಯನಯನಾರನು ಆ ಮರವನ್ನೇ ಶಿವನೆಂದು ಭಾವಿಸಿ ಚಿತ್ತವಿಟ್ಟು ಪಂಚಾಕ್ಷರಿಯನ್ನು ಊವಲನುವಾವನು. ಹೀಗೆ ವರ್ತಿಸುತ್ತ ಅವನು ಶ್ರೇಷ್ಠ ಪದವಿಯನ್ನು ಹೊಂದಿದನು.

ಚನ್ನಯ್ಯನು ಚೋಳದೇಶದಲ್ಲಿಯ ಒಬ್ಬ ಅಸ್ಪೃಶ್ಯನು. ಅವನು ಹುಲ್ಲಿನ ಕಾಯಕವನ್ನು ಮಾಡುತ್ತ ಉದರನಿರ್ವಾಹ ಸಾಗಿಸುತ್ತಿದ್ದನು. ಅವನು ಗುಪ್ತದಿಂದ ತನ್ನ ಇಷ್ಟಲಿಂಗದ ಆರಾಧನೆಯನ್ನು ಮಾಡುತ್ತ ಪಂಚ ವಿಷಯಗಳನ್ನು ಶಿವನಿಗೆ ಅರ್ಪಿಸಿ ಪ್ರಸಾದರೂಪವಾಗಿ ಸ್ವೀಕರಿ ಸುವನು. ಚೋಳರಾಯನು ತನ್ನ ಪಟ್ಟಣದಲ್ಲಿರುವ ಶಿವಾಲಯಕ್ಕೆ ಹೋಗಿ ಅನೇಕ ರೀತಿಯಿಂದ ಸಡಗರದಿಂದ ಅರ್ಚನೆಯನ್ನು ಮಾಡುತ್ತ ಭಜಿ ಸುತ್ತಿದ್ದನು. ಒಂದು ದಿವಸ ಅವನ ಮನಸ್ಸಿನಲ್ಲಿ ತಾನು ಸಲ್ಲಿಸಿದ ನೈವೇದ್ಯವನ್ನು ಪರಮಾತ್ಮನು ಉಣ್ಣಲೇಬೇಕೆಂದು ಹಟ ತೊಟ್ಟು ಆತುರ ನಾಗಿ ತನ್ನನ್ನು ಘಾತಿಸಿಕೊಳ್ಳಲು ಉದ್ಯುಕ್ತನಾದನು. ಆಗ ಶಿವನು ಪ್ರತ್ಯಕ್ಷನಾಗಿ ಚೋಳನಿಗೆ ನೀನು ಸಮರ್ಪಿಸಿದ ನೈವೇದ್ಯವು ಚನ್ನನ ನೈವೇ ದ್ಯಕ್ಕೆ ಸರಿಬಾರದು, ಚನ್ನನೊಡನೆ ನಾನು ದಿನಾಲು ಉಣ್ಣುತ್ತೇನೆ ಎಂದು ಹೇಳಿ ಅದೃಶ್ಯನಾದನು. ಆಗ ಚೋಳರಾಯನು ಚನ್ನಯ್ಯನನ್ನು ಹುಡು ಕಿಸಿ ಅವನನ್ನು ಕಂಡು ಮನ್ನಣೆಯಿಂದ ಕರೆತಂದು ಸಿಂಹಾಸನದ ಮೇಲೆ ಕುಳ್ಳಿರಿಸಿ ಸತ್ಕರಿಸಿದನು. ವೀರಶೈವರಲ್ಲಿ ಅಸ್ಪೃಶ್ಯ ಭಾವವೂ ಜಾತಿ ಭೇದಗಳೂ ಇರುವದಿಲ್ಲ. ಮತ್ತು ಲಿಂಗಾರ್ಪಿತವಾದುದರಲ್ಲಿ ಭೇದಾಭೇದ ಗಳು ಇರಕೂಡದೆಂಬ ಷಟ್‌ಸ್ಥಲದ ಸಿದ್ಧಾಂತವನ್ನು ಹರಿಹರನು ಈ ರಗ ಳೆಯಲ್ಲಿ ಬಹು ಚನ್ನಾಗಿ ಉದಹರಿಸಿರುವನು.

ಇಳೆಯಾಂಡ ಗುಡಿಮಾರನ ರಗಳೆಯಲ್ಲಿ ಆತ್ಮಾರ್ಪಣದ ಭಾವವು ಬಹು ಚನ್ನಾಗಿ ಉದಹರಿಸಲ್ಪಟ್ಟಿದೆ ಇಳೆಯಾಂಡ ಗುಡಿಮಾರನು ಮೊದಲಿಗೆ ಅತ್ಯಂತ ಶ್ರೀಮಂತನು. ಆದರೆ ದಾನಧರ್ಮ ಮಾಡುವ ದರಲ್ಲಿ ಅವನು ಅತ್ಯಂತ ಬಡವನಾದನು. ಆದರೂ ಕೂಡ ಅವನಲ್ಲಿ ಯಾವ ಬಗೆಯ ಕೃಪಣತನವು ತಲೆದೋರಲಿಲ್ಲ. ಅವನು ತನ್ನ ದಾನಧರ್ಮ

ಗಳನ್ನು ಹಾಗೆಯೇ ಸಾಗಿಸಿದನು. ಒಂದು ಕಾಲದಲ್ಲಿ ಚರಭಕ್ತಿ ಕಾರ್ಯ ದಲ್ಲಿ ಅವನ ಮಗನೂ ಕೂಡ ಸರ್ಪದಷ್ಟನಾಗಿ ಮರಣ ಹೊಂದಿದನು. ಆದರೂ ಅವನು ಏನೂ ದುಃಖಿಸದೆ ತನ್ನ ಅತಿಥಿ ಸತ್ಕಾರ್ಯಗಳನ್ನು ಬಿಟ್ಟುಕೊಡಲಿಲ್ಲ. ಹೀಗೆ ಮಾಡುವಲ್ಲಿಯೇ ಅವನು ಮೋಕ್ಷ ಹೊಂದಿದನು.

ಈ ಪ್ರಕಾರ ಹರಿಹರನು ಈ ರಗಳೆಗಳಲ್ಲಿ ವೀರಶೈವ ಮತದ ತತ್ವಗಳನ್ನು ಹೆಣೆಯಲಿಕ್ಕೆ ಪ್ರಯತ್ನಿಸಿದ್ದಾನೆ. ಅವನು ತನ್ನ ಕವಿತೆಯಲ್ಲಿ ಅಲ್ಲಲ್ಲಿ ತೋರಿಸುವ ಭಾವಗಳು ಲೋಕೋತ್ತರವಾದವುಗಳು. ಇಂಥ ಈ ರಗಳೆಗಳನ್ನು ನಿತ್ಯ ಓದಿದ್ದಾದರೆ ವಾಚಕರ ಮನಸ್ಸಿನ ಮೇಲೆ ಶ್ರೇಷ್ಠತರ ಪರಿಣಾಮಗಳನ್ನು ಉಂಟುಮಾಡದೆ ಇರಲಾರವೆಂದು ಭಾವಿಸಿದ್ದೇವೆ.

---

## ಸ್ತೋತ್ರ—ಸಂಗ್ರಹ.

(ಪರಿಶೋಧಕ— ಮಾಪುರೀಶ)

(ಹಿಂದಿನಿಂದ ಮುಂದೆ ಸಾಗಿದ್ದು)

ಭಾಮಿನಿ:— ಪದ್ಮದಿವಕರ ವನಲಲೋಚನ।
ಪದ್ಮ ಪದ್ಮ ಪದ್ಮ ಮೌಲಿಯೆ ಪು।
ಪದ್ಮನಾಭನ ನೇತ್ರಪದ ಸಂಯಮಿಗಳ ಹೃದಯಾ॥
ಪದ್ಮವಾಸನೆ ಪದ್ಮರುಹಶಿರ।
ಪದ್ಮಕರ ಪದ್ಮವನು ದೇಹದಿ।
ಪದ್ಮಸಖಸುತ ಪದ್ಮಬಾಣದ ಗೆಲಿದ ಗುರುಶರಣಾ ॥೨೦॥

ಟಿಪ್ಪಣಿ:— ಪದ್ಮ = ಚಂದ್ರ. ಪದ್ಮ = ದೇವಗಂಗೆ- ಮಹಾಶೇಷ ಪದ್ಮನಾಭ = ಕಮಲದ ಹೊಕ್ಕುಳುಳ್ಳ ನಾರಾಯಣ. ಸಂಯಮಿ = ಯತಿ. ಪದ್ಮ = ಹೃತ್ಕಮಲ. ವಾಸನೆ = ಸ್ಥಾನವಾದದ್ದು. ಪದ್ಮರುಹ = ಬ್ರಹ್ಮ ಶಿರಪದ್ಮ = ಮಸ್ತಕ ಕಮಲ. ಕರಪದ್ಮ = ಹಸ್ತದಲ್ಲಿ ಇರುವ ವಿಭೂತಿ. ಪದ್ಮಸಖ = ಕಮಲಮಿತ್ರ (ಸೂರ್ಯ) ಸುತ = ಮಗನಾದ ಯಮ. ಪದ್ಮ ಬಾಣ = ಕಮಲದ ಬಾಣವುಳ್ಳವ (ಮನ್ಮಥ).

ಭಾಮಿನಿ:— ಸೋಮನಾಹರ ಶಯನ ಶತಕ್ರತು।
ಸೋಮಜಾರುಹ ನಮಿತಪಾದನೆ।
ಸೋಮಧೂಮಧ್ವಜ ಸೋಮಜಾ ಸಖ ವಿಲೋಚನನೇ॥

ಸೋಮರಿಪುಪಿತ ಸೋಮ ದಗ್ಧನೆ।
ಸೋಮಸಖಯುತಿಪ್ರೇಮನಘಹರ।
ಸೋಮಧರ ಸೋಮೇಶ ಪ್ರಸನ್ನೇಶ ರಕ್ಷಿಸುದು ॥೨೮॥

ಟಿಪ್ಪಣೀ— ಸೋಮ = ವಾಯುವ್ಯನೆ. ಆಹರ = ಊಟ. (ಅನಂತನೆಂಬ ಸರ್ಪ) ಶಯನ = ಅನಂತನ ಮೇಲೆ ಮಲಗಿದವ. [ವಿಷ್ಣು] ಕ್ರತು = ಯಜ್ಞ. ಸೋಮಜಾ = ನೀರಿನಲ್ಲಿ ಹುಟ್ಟಿದ ಕಮಲ. ರುಹ = ಕಮಲದಲ್ಲಿ ಹುಟ್ಟಿದ ಬ್ರಹ್ಮ. ಸೋಮ = ಚಂದ್ರ. ಧೂಮಧ್ವಜ = ಅಗ್ನಿ. ಸೋಮಜಾ = ನೀರಿನಲ್ಲಿ ಹುಟ್ಟಿದ ಕಮಲ, ಸಖ = ಗೆಳೆಯ [ಸೂರ್ಯ] ವಿ = ವಿಶೇಷವಾದ. ಸೋಮ = ಯಜ್ಞ. ರಿಪು = ವೈರಿ (ವೀರಭದ್ರ). ಸೋಮ = ಯಮ (ಕುಬೇರ). ಅಘ = ಪಾಪ ಸೋಮ = ಚಂದ್ರ.

ಭಾಮಿನಿ:— ಕೃಷ್ಣರುಹ ಸಂಭವನ ಶಿರಕರ।
ಕೃಷ್ಣನಣುಗನ ಸುಟ್ಟ ಜಿನಧರ।
ಕೃಷ್ಣಸುತನೊಳು ಕಾದುತಾ ವಡಿಯಾಗಿ ಕೆಡದಭವಾ॥
ಕೃಷ್ಣಗೊರಳನೆ ಕೃಷ್ಣಧರಧರ।
ಕೃಷ್ಣರುಹ ಸಖ ಕೃಷ್ಣರುಹರಿಪು।
ಕೃಷ್ಣಲೋಚನ ಕೃಷ್ಣಧರ ಪ್ರಸನ್ನ ಮುನಿ ಜಯಜಯತೂ॥೨೨॥

ಟಿಪ್ಪಣೀ:—ಕೃಷ್ಣ=ನೀರು. ರುಹ=ನೀರಿನಲ್ಲಿ ಬೆಳೆದದ್ದು. (ಕಮಲ). ಸಂಭವ=ಕಮಲದಲ್ಲಿ ಹುಟ್ಟಿದವ (ಬ್ರಹ್ಮ) ಅಣುಗ=ಮಗ. ಅಜಿನ = ಸರ್ಮ್ಮೋಹ. ಕೃಷ್ಣ = ದೇವೇಂದ್ರ. ಸುತ=ದೇವೇಂದ್ರನ ಮಗ (ಅರ್ಜುನ). ಅಭವ=ಜನನ ರಹಿತನು (ಶಿವ). ಕೃಷ್ಣಗೊರಳು = ಕರಿಗೊರಲು. ಕೃಷ್ಣ = ಕಾಳಕೂಟ. ಧರ = ಧರಿಸಿದ್ದು. (ಕರ್ಕೋಟಕ). ಧರ = ಕರ್ಕೋಟಕನನ್ನು ಧರಿಸಿದವನು. ಕೃಷ್ಣ = ನೀರು. ರುಹ = ಬೆಳೆದದ್ದು (ಕಮಲ). ಸಖ = ಕಮಲದ ಗೆಳೆಯ ಸೂರ್ಯ. ಕೃಷ್ಣರುಹರಿಪು = ಸೂರ್ಯ ಕಮಲದ ವೈರಿ ಚಂದ್ರ. ಕೃಷ್ಣ = ಅಗ್ನಿ (ದೇವಗಂಗೆ).

ಭಾಮಿನಿ:— ಕಂಸಶಿರಕರ ಕಂಸಮರ್ದನ।
ಕಂಸಮಾಲನೆ ಕಂಸಗಮನಜಿತ।
ಕಂಸರುಹರಿಪು ಕಂಸ ಕಂಸ ಕಂಸ ಜ್ಞಾನಾಂಗಾ॥

ಕಂಸವಾಹನ ಪಿತನೆ ಸಿರಿಪತಿ ।
ಕಂಸಪಾದನೆ ಕಂಸಶಗಧರ ।
ಕಂಸಶೇಖರ ತ್ರಾಹಿ ಪ್ರಸನ್ನೇಶಮದ್ಗುರುವೇ ೨೩॥

ಟಿಪ್ಪಣೆಃ— ಕಂಸ = ಬ್ರಹ್ಮ. ಕಂಸ = ಯಮ. (ಕರ್ಕೋಟಕಸರ್ಪ). ಗಿಳಿಗಮನ = ಗಿಳಿಯಮೇಲೆ ಅಡ್ಡಾಡುವವ. (ಮನ್ಮಥ). ಕಂಸರುಹ = ನೀರಿನಲ್ಲಿ ಬೆಳೆದದ್ದು. (ಸೂರ್ಯಕಮಲ) ರಿಪು = ಸೂರ್ಯಕಮಲದ ವೈರಿ (ಚಂದ್ರ). ಕಂಸ = ಸೂರ್ಯ ಅಗ್ನಿ ನೇತ್ರ. ಜ್ಞಾನ = ಮಹಾಜ್ಞಾನ. ಕಂಸ = ನವಿಲು. ವಾಹನ = ನವಿಲಿನ ವಾಹನವುಳ್ಳವ (ಷಣ್ಮುಖ). ಸಿರಿ ಪತಿ = ಲಕ್ಷ್ಮೀದೇವಿಯ ಗಂಡ (ನಾರಾಯಣ). ಕಂಸ = ಕಣ್ಣು. ಕಂಸ = ಚಂದ್ರ. ಶಗ = ಅರ್ಧ. ಕಂಸ = ದೇವಗಂಗೆ. ಶೇಖರ = ಜಡಿ.

ಭಾಮಿನಿ.— ಶಿವಪತಿಯ ಶಿರಗಡಿದು ಪಿಡಿದನೆ ।
ಶಿವಜರಿಪು ಶಿವಶಿವ ಜಟಾಧರ ।
ಶಿವಶಯನ ಶಿವರುಹ ಶಿವಜರಿಪು ನಮಿತ ಪದಕಮಲಾ॥
ಶಿವಗಮನರಿಪು ಶಿವ ಶರೀರನೆ।
ಶಿವಧನುವಿಗುರೆ ಶಿವನನಾರಿಯ।
ಶಿವಜರಿಪು ನಾಭನಕಣೆವಿಡಿದ ಶಿವಧರನೆ ಜಯತೂ ॥೨೪॥

ಟಿಪ್ಪಣೆಃ— ಶಿವಪತಿ = ಬ್ರಹ್ಮ. ಶಿವ = ನೀರು. ಜ = ನೀರಿನಲ್ಲಿ ಹುಟ್ಟಿದ್ದು [ಕಮಲ]. ರಿಪು = ಸೂರ್ಯ ಕಮಲಗಳ ವೈರಿ [ಚಂದ್ರ] ಶಿವ = ದೇವಗಂಗೆ [ಮಹಾಶೇಷ]. ಶಿವಶಯನ = ಸರ್ಪದ ಹಾಸಿಗೆಯಲ್ಲಿ ಮಲಗಿದವ [ನಾರಾಯಣ]. ಶಿವರುಹಜ = ಕಮಲದಲ್ಲಿ ಹುಟ್ಟಿದ [ಬ್ರಹ್ಮ]. ಶಿವರಿಪು = ಪರ್ವತಗಳ ವೈರಿ [ಇಂದ್ರ]. ಶಿವ = ಗಿಳಿ. ಗಮನ = ಅಡ್ಡಾಡುವವ [ಮನ್ಮಥ]. ಶಿವ = ನಿರ್ಮಲ. ಶಿವ = ಮಹಾಶೇಷ ನಾರಿಯ = ಹೆದೆ. ಶಿವಧನು = ಮೆಟ್ಟಿದ ಬಿಲ್ಲು. ನಾಭ = ಕಮಲದ ಹೊಕ್ಕಳ [ನಾರಾಯಣ]. ಕಣೆವಿಡಿದ = ಅಂಬು [ಬಾಣ]. ಸೇರಿಸಿದಂಥ.

ಭಾಮಿನಿಃ— ಗೋಪವಾಹನ ಗೋಪ, ಶಿರಕರ ।
ಗೋಪ ಶೇಖರ ಗೋಪ ಜಾಪತಿ ।
ಗೋಪ ಗೋಪದಗೋಪಘ್ನಗಧರ ಗೋಶ್ರವಣ ಕಲಿತಾ ॥

ಗೋಪ ಗೋಪ ಸುಗೋಪನ ತಪದ।
ಗೋಪ ಸುತನನ ಗೆದ್ದ ಜಿನಧರ ।
ಗೋಪ ನಿಜಧ್ವಜ ಈಗೆ ಕರುಣದಿ ಗೋಪುಟತ್ವವನೂ ॥೨೫॥

ಅನ್ವಯಃ—ಗೋಪವಾಹನ, ಗೋಪಶಿರಕರ, ಗೋಪಶೇಖರ, ಗೋಪ ಜಾಪತಿ, ಗೋಪ ಗೋ ಗೋಪದ, ಗೋಪಥಗಧರ, ಗೋ-ಶ್ರವಣಕ ಲಿತಾ, ಗೋಪ ಗೋಪ ಸುಗೋಪನತಪದ, ಗೋಪ ಸುತನನ ಗೆದ್ದ, ಅಜಿನಧರ, ಗೋಪ ನಿಜಧ್ವಜ, ಕರುಣದಿ ಗೋಪುಟತ್ವವನು ಈಗೆ.

ಟಿಪ್ಪಣಿಃ—ಗೋಪ = ವೃಷಭೇಶ್ವರ, ಬ್ರಹ್ಮ, ಚಂದ್ರ, ಪರ್ವತರಾಜ, ನಾರಾಯಣ. ಗೋ = ಕಣ್ಣು. ಗೋಪದ = ಚರಣ. ಗೋಪಥಗ = ಆಕಾಶಗಂಗೆ. ಗೋಶ್ರವಣ = ಕಣ್ಣುಗಳು ಕಿವಿಯಾಗುಳ್ಳವು (ಸರ್ಪಗಳು). ಕಲಿ = ಕೂಡು. ಗೋ = ಸ್ವರ್ಗ. ಪ = ಪತಿಯಾದವ (ಇಂದ್ರ). ಗೋ = ಸರಸ್ವತಿ. ಪ = ಪತಿಯಾದವ (ಬ್ರಹ್ಮ). ಗೋ = ಲಕ್ಷ್ಮಿ. ಪ = ಪತಿಯಾದವ (ನಾರಾಯಣ). ಸುತ = ನಾರಾಯಣನ ಮಗ (ಮನ್ಮಥ). ಅಜಿನ = ಸಂಮೋಹ. ನಿಜ = ತನ್ನ. ಧ್ವಜ = ಪತಾಕೆ. ಗೋಪುಟತ್ವ = ವಾಕ್ಪಟುತ್ವ. ಈ = ಕೊಡು.

ಭಾಮಿನಿಃ—ಹತ್ತೆರಡನೆಯ ತಾರೆ ಪೆಸರಳ ।
ಪೆತ್ತವನ ಭವನದಲಿ ತಮ್ಮಯ ।
ಮೂರ್ತಿಯ ಮುಸುಳಿಸಿ ಕಳೆದ ಭೂಪನ ಸತಿಗೆ ಅಥಯವಾ॥
ಇತ್ತವನ ಸತಿಯನುಜೆಯಣ್ಣನ ।
ಉತ್ತುಮಾಂಗದಿ ಧರಿಸಿ ವೇಣನ ।
ಮತ್ತೆ ಕರದಲಿ ಪಿಡಿದ ಮೃತ್ಯುಂಜಯನೆ ಸಲಹೆಮ್ಮ ॥೨೬॥

ಅನ್ವಯಃ— ಹತ್ತುಎರಡನೆಯ, ತಾರೆ ಪೆಸರಳ, ಪೆತ್ತವನ, ಭವನದಲಿ, ತಮ್ಮಯ ಮೂರ್ತಿ ಮುಸುಳಿಸಿ, ಕಳೆದಭೂಪನ, ಸತಿಗೆ, ಅಕ್ಷಯವಾ ಇತ್ತವನ, ಸತಿಯ, ಅನುಜೆಯ ಅಣ್ಣನ, ಉತ್ತುಮ ಅಂಗದಿ ಧರಿಸಿ, ವೇಣನ, ಮತ್ತೆ ಕರದಲಿ ಪಿಡಿದ, ಮೃತ್ಯುಂಜಯನೇ, ಎಮ್ಮ ಸಲಹು.

ಟಿಪ್ಪಣಿಃ— ತಾರೆ = ಹನ್ನೆರಡನೆಯ ನಕ್ಷತ್ರ. ಪೆಸರಳು = ಉತ್ತರಕು ಮಾರಿ ಹೆಸರುಳ್ಳವಳು. ಮೂರ್ತಿ = ಕುರುಹು. ಮುಸುಳಿಸು = ಅಡಗಿಸು. ಭೂಪ = ಅರಸು (ಧರ್ಮರಾಜ). ಸತಿ = ಹೆಂಡತಿ (ದ್ರೌಪದಿ). ಇತ್ತ

ವನು = ಕೊಟ್ಟವನು (ಕೃಷ್ಣ). ಸತಿ = ಹೆಂಡತಿ (ಲಕ್ಷ್ಮೀದೇವಿ). ಅನುಜೆ= ತಂಗಿ (ಅರುಂಧತಿಯು). ಅಣ್ಣ = ಅಣ್ಣನಾದವ ಚಂದ್ರ. ವೇಣಿ = ಜಡೆ.

ಭಾಮಿನಿ:— ರಾಶಿವಾಹನನರ್ಧಪೇಹಳೆ ।
ರಾಶಿಧ್ವಜ ನಿಜಬಾಣಪಾಂಗಳೆ ।
ರಾಶಿಕುಚವರ ಶೃಂಗಿಜಾತೆ ನಾಗಮುಖವಂತೆ ॥
ರಾಶಿಗಮದರುಣಧರೆ ಚಲುವಿನ ।
ರಾಶಿಪ್ರಾಯದ ಮಂಗಳಾಂಗಿಸು ।
ರಾಶಿಮಧ್ಯಳೆ ಸಲಹುಶಂಕರಿ ನಿಮ್ಮಣುಗನೆಂದೂ ॥೨೭॥

ಟಿಪ್ಪಣಿ:— ರಾಶಿ = ವೃಷಭರಾಶಿ. ವಾಹನ = ವೃಷಭವಾಹನ (ಶಿವ) ರಾಶಿ = ಮೀನರಾಶಿ. ಧ್ವಜ = ಮೀನಧ್ವಜವುಳ್ಳ ಮನ್ಮಥ. ಪಾಂಗಳೆ = ಕಡೆಗಣ್ಣು. ರಾಶಿ = ಕುಂಭರಾಶಿ. ಕುಚ = ಕುಂಭಕುಚ. ಶೃಂಗಿಜಾತೆ = ಪರ್ವತರಾಜನ ಮಗಳು (ಪಾರ್ವತಿ). ನಾಗಮುಖ = ವಿಘ್ನೇಶ್ವರ. ರಾಶಿ= ಮೇಷರಾಶಿ. ಗಮನ=ಮೇಷವೆಂಬ ಹಾವಿನ ಮೇಲೆ ಅಡ್ಡಾಡುವವ (ಅಗ್ನಿ). ವರುಣ = ಕೆಂಪು. ರಾಶಿ = ಕನ್ನೆರಾಶಿ. ಸು = ಒಳ್ಳೇ. ರಾಶಿ = ಸಿಂಹರಾಶಿ ಮಧ್ಯಳು = ಸಿಂಹದಂತೆ ನಡುವುಳ್ಳವಳು. ಶಂಕರಿ = ಸುಖಕರಿ (ಪಾರ್ವತಿದೇವಿ).

## ಶ್ರೀ. ವೃಷಭೇಶ್ವರ ಸ್ತೋತ್ರ.

ಭಾಮಿನಿ:— ವೃತ್ತಹರಿಳಪುಲಾಕ್ಷ ಕಮಲಜ ।
ಮತ್ತವಾರಣ ಸಿಂಹಗೋಕರ।
ವೃತ್ತಜನಸುರಸಿದ್ಧಸಾಧಕ ನಮಿತ ಪಾದಾಬ್ಜಾ॥
ವೃತ್ತಚರರಿಪು ಕಾಮಿನಿ ಕೃತ ।
ವೃತ್ತಭವಕಿರಣಾಂಕ ಮಸ್ತಕ ।
ವೃತ್ತದನುಜಜಕಂಠ ಜಲಹರಿಹರಸದೃಶ ಜಯಜ
ಯತೂ ॥೨೮॥

ಟಿಪ್ಪಣಿ:— ವೃತ್ತ = ಅಗ್ನಿ. ಮತ್ತವಾರಣ = ಮದಕುಂಭಿಗೆ. ಗೋ = ವಜ್ರಾಯುಧವು. ವೃತ್ತಜನ = ನಿಶಾಚರ [ರಾಕ್ಷಸರು]. ವೃತ್ತ ಚರ = ನಿಶಾಚರ [ರಾಕ್ಷಸ]. ರಿಪು = ರಾಕ್ಷಸರ ವೈರಿ [ನಾರಾಯಣ] ಕಾಮಿನಿಕೃತ = ಸ್ತ್ರೀಯಾಗುಳ್ಳ. ವೃತ್ತಭವ = ಸಮುದ್ರದಲ್ಲಿ ಹುಟ್ಟಿದ್ದು

ಚಂದ್ರ. ವೃತ್ತದನುಜ = ವೃತ್ತಾಸುರ. ಜ = ಮಗ ಜಲಂಧರ. ಜಲ ಹರಿ = ಜಲಚಕ್ರ.

ಭಾಮಿನಿ.— ಗೌರಿಕೋದರ ಕುದ್ರಧಾರಣ ।
ವಾರಿಜೀವಿತ ಶ್ರೇಷ್ಠ ಹುತವಹ ।
ಸೂರ್ಯಜಾಸುರ ಮಕರಕೇತನ ಮರುತಯಕ್ಷೇಶಾ॥
ಭೂರಿದಾನವ ಮುಖ್ಯನುತ ಪದ ।
ವಾರಿಜಾಂತಕ ಬಾಣಪಾವಕ ।
ತಾರಕಾಚಲ ಧಾಮ ನಿಭ ಬಸವೇಶ ಜಯಜಯತು ॥೨೯॥

ಟಿಪ್ಪಣಿಃ— ಗೌರಿಕಾ+ಉದರ = ಗೌರವರ್ಣ ಹೊಟ್ಟೆಯುಳ್ಳವ ಬ್ರಹ್ಮ. ಕುದ್ರಧಾರಣ = ನಾರಾಯಣ. ವಾರಿ = ನೀರು. [ಅಮೃತ] ಜೀವಿತ = ಬದುಕಲ್ಪಟ್ಟ (ದೇವತೆಗಳು). ಶ್ರೇಷ್ಠ = ಇಂದ್ರ. ಹುತವಹ = ಅಗ್ನಿ. ಸೂರ್ಯಜ = ಯಮ. ಅಸುರ = ನೈಋತ್ಯ. ಮಕರಕೇತನ = ವರುಣ, ಮರುತ = ವಾಯವ್ಯ. ಯಕ್ಷೇಶ = ಕುಬೇರ. ಅಂತಕ = ಯಮ ತಾರಕಾಚಲ = ರಜತಾದ್ರಿ. ಧಾಮ = ಮನೆ. ನಿಭ = ಸಮಾನ.

ಭಾಮಿನಿಃ— ಸೋಮಕರಧರ ಸೋಮಜಾಗ್ರಜ ।
ಪ್ರೇಮ ಪಿತಪಿತ ಪಿತಾತ್ಮಜ ।
ರಾಮಣೀಯಕ ಗಾನಲಲಿತ ಶ್ರವಣ ಸಂತೃಪ್ತಾ ॥
ಸೋಮ ಸನ್ನಿಭ ಗಾತ್ರಹರಿಹರ ।
ಭೀಮ ಭೀಮಜರಿಪುರಿಪೊನ್ನತ ।
ಕಾಮದಾಯಕ ನಿತ್ಯನಿಭ ಬಸವೇಶ ಜಯಜಯತು ॥೩೦॥

ಟಿಪ್ಪಣಿಃ—ಸೋಮಕರಧರ = ಚಂದ್ರಕಿರಣಧರಿಸಿದಂಥವನು (ಶಿವ). ಸೋಮ = ವಾಯವ್ಯ. ಜ = ಹುಟ್ಟಿದವ (ಭೀಮಸೇನ). ಅಗ್ರಜ = ಭೀಮ ಸೇನನ ಅಣ್ಣ (ಧರ್ಮರಾಜ). ಪಿತ = ತಂದೆಯಾದ (ಯಮ)ವನ ಪಿತ = ತಂದೆಯಾದ ಸೂರ್ಯ. ಪಿತ = ತಂದೆಯಾದ ಕಶ್ಯಪ ಬ್ರಹ್ಮ. ಪಿತ = ತಂದೆಯಾದ ಬ್ರಹ್ಮ. ಆತ್ಮ = ಮನಸ್ಸು. ಜ = ಹುಟ್ಟಿದವ ನಾರದ. ಸೋಮ = ಕರ್ಪೂರ. ಸನ್ನಿಭ = ಸಮಾನ. ಗಾತ್ರ = ಅವಯವ. ಭೀಮಜ = ಘಟೋದ್ಗಜ. ರಿಪು = ವೈರಿ [ಕರ್ಣ). ರಿಪು = ವೈರಿ [ಅರ್ಜುನ] ನಿತ್ಯ = ಶಾಶ್ವತನಾದ ಶಿವ.

ಭಾಮಿನಿಃ—ವೇದಚಂದ್ರ ಮುಖಾಬ್ಜಮಸ್ತಕ ।
ಬಾದರಾಯಣ ಬಾಹಕೃಂತನ ।
ಭೂಧರಾವರ ಜಾನನಾಬ್ಜ ಸುಗಂಧರೋ(ಲಂಬಾ ॥
ಮೇದಿನೀಧರ ತಲ್ಪ ಪೂಜಿತ ।
ಪಾದಪಂಕಜ ಕಾಲಕಂಧರ ।
ಸಾಧುಜನಸಂಪ್ರೀತ ನಿಭ ಬಸವೇಶ ಮಂತ್ರಾಹೀ ॥೩೧॥

ಟಿಪ್ಪಣಿಃ— ವೇದ = ನಾಲ್ಕು. ಚಂದ್ರ = ಒಂದು. ಬಾದರಾಯಣ = ವೇದವ್ಯಾಸ. ಕೃಂತ = ಛೇದಿಸು. ಭೂಧರಾವರಜ = ಪರ್ವತರಾಜನಮಗಳು (ಪಾರ್ವತಿ). ರೋಲಂಬ = ಸೊಕ್ಕಿದ ತುಂಬಿಗಳು. ಮೇದಿನೀಧರ ತಲ್ಪ = ಅನಂತನೆಂಬ ಸರ್ಪದ ಹಾಸಿಗೆ ಮಾಡಿಕೊಂಡ (ನಾರಾಯಣ) ಕಾಲಕಂಧರ = ಕರಿಗೊರಲನು (ನೀಲಕಂಠನು). ತ್ರಾಹಿ = ರಕ್ಷಿಸು.

ಭಾಮಿನಿಃ— ಕಮಲ ಧರಧರ ಭಜಕ ಜಯ ಜಯ ।
ಕಮಲ ಧರಧರ ದೇವ ಜಯ ಜಯ ।
ಕಮಲ ಧರಧರ ಪಾಣಿ ಜಯ ಜಯ ಭಕ್ತವತ್ಸಲನೇ ॥
ಕಮಲ ಧರಧರ ನಮಿತ ಜಯ ಜಯ ।
ಕಮಲ ಧರಧರ ರಸನ ಜಯ ಜಯ ।
ಕಮಲ ಧರಧರ ಭೂಷನಿಭ ಬಸವೇಶ ಜಯ ಜಯತೂ ॥೩೨॥

ಟಿಪ್ಪಣಿಃ— ಕಮಲ = ಭೂಮಿ. ಧರ = ಭೂಮಿಯನ್ನು ಧರಿಸಿದ್ದು (ಪರ್ವತ). ಧರ = ಪರ್ವತವನ್ನು ಧರಿಸಿದವನು (ನಾರಾಯಣ). ಕಮಲ = ಕಾಂತಿ. ಧರ = ವಿಭೂತಿಯನ್ನು ಧರಿಸು. ಕಮಲ = ಶೃಂಗಗಳನ್ನು. ಧರ = ಧರಿಸಿದ ಮುರಳಿ. ಧರ = ಮುರಳಿಯನ್ನು ಧರಿಸಿದ. ಪಾಣಿ = ಹಸ್ತ. ಕಮಲ = ನೀರು. ಧರ = ಧರಿಸಿದ ಮೇಘ. ಧರ = ಮೇಘ ಧರಿಸಿದ ಇಂದ್ರ. ಕಮಲ = ಐವತ್ತೆರಡು ಅಕ್ಷರ. ಧರ = ಅ. ಉ. ಮ. ಅಕ್ಷರ ತ್ರಯಗಳನ್ನು ಧರಿಸಿದ. ಧರ = ಓಂಕಾರ ಧರಿಸಿದ. ಕಮಲ = ನೀರು. ಧರ = ನೀರನ್ನು ಧರಿಸಿದ ಭೂಮಿ. ಧರ = ಭೂಮಿಯನ್ನು ಧರಿಸಿದ ಮಹಾ ಶೇಷ.

# ನವಲಗುಂದ ದೇಸಾಯರ ಇತಿಹಾಸವು.

ಬಾಮನಿ ರಾಜ್ಯವು ಮುರಿದು ಹೋದ ಬಳಿಕ ಅದರಲ್ಲಿ ಐದು ಭಾಗಗಳಾಗಿ ಅವುಗಳನ್ನು ಬೇರೆ ಬೇರೆ ಬಾದಶಹರು ಆಳುತ್ತಿದ್ದದ್ದು ಇತಿಹಾಸ ಪ್ರಸಿದ್ಧವೇ ಇರುತ್ತದೆ. ಈ ಬಾದಶಹರಲ್ಲಿ ವಿಜಾಪುರದ ಅಲ್ಲಿ ಆದಿಲ್‌ಶಾಹೀ ಮನೆತನದವರೇ ಬಹು ಬಲಾಢ್ಯರಾಗಿ ವಿಸ್ತಾರವಾದ ಪ್ರದೇಶವನ್ನು ಆಳಹತ್ತಿದರು. ಇವರ ರಾಜ್ಯದ ಮೇರೆಯು ಉತ್ತರಕ್ಕೆ ಪುಣೆಯಿಂದ, ದಕ್ಷಿಣಕ್ಕೆ ಮಲಪ್ರಭಾನದಿಯ ವರೆಗೆ ಮತ್ತು ಪಶ್ಚಿಮಕ್ಕೆ ಸಹ್ಯಾದ್ರಿ ಬೆಟ್ಟದಿಂದ ಪೂರ್ವಕ್ಕೆ ರಾಯಚೂರ, ಮತ್ತು ಕಲಬುರ್ಗಿಯ ವರೆಗೆ ವ್ಯಾಪಿಸಿತ್ತು. ಈ ಬಾದಶಹರು ಮುಸಲ್ಮಾನರಾಗಿದ್ದರೂ ಈ ಭಾಗದಲ್ಲಿಯ ಹಿಂದು ಜನರೊಡನೆ ಸ್ನೇಹದಿಂದ ವರ್ತಿಸಿ ಅವರಿಗೆ ಮಹತ್ವದ ಅಧಿಕಾರ ಸ್ಥಾನಗಳನ್ನೂ ಜಹಾಗೀರುಗಳನ್ನೂ ಕೊಟ್ಟಿದ್ದು ಕಂಡು ಬರುತ್ತದೆ. ಹೀಗೆ ಅವರು ನಿಯಮಿಸಿದ ಅಧಿಕಾರಿಗಳಿಗೆ ದೇಶಮುಖ ದೇಸಾಯಿ ನಾಡಗೌಡ ಎಂಬ ಹೆಸರುಗಳಿರುತ್ತವೆ. ಮತ್ತು ಇವರ ಮುಖಾಂತರವಾಗಿಯೇ ಅವರು ದೇಶದಲ್ಲಿ ಕಂದಾಯ ಎತ್ತುವದು, ಸೈನ್ಯ ಕೂಡಿಸುವದು ಈ ಮೊದಲಾದ ಕಾರ್ಯಭಾಗಗಳನ್ನು ನೆರವೇರಿಸಿಕೊಳ್ಳುತ್ತಿದ್ದರು. ಈ ದೇಸಾಯಿ, ನಾಡಗೌಡ ಮೊದಲಾದ ಅಧಿಕಾರಿಗಳಲ್ಲಿ ಅನೇಕರು ಅತ್ಯಂತ ಶೌರ್ಯವುಳ್ಳವರಾಗಿ ಬಾದಶಹರಿಗೆ ಯುದ್ಧಗಳಲ್ಲಿ ಸಹಾಯಕರಾಗಿ, ದೊಡ್ಡ ಸೀಮೆಗಳನ್ನು ಸಂಪಾದಿಸಿದ್ದು ಕಂಡುಬರುತ್ತದೆ. ಈ ಮನೆತನಗಳ ವಂಶಜರು ವಿಜಾಪುರ, ಕಲಬುರ್ಗಿ, ಬೆಳಗಾವ ಮುಂತಾದ ಜಿಲ್ಹೆಗಳಲ್ಲಿ ಈಗಲೂ ಇದ್ದು ಅವರು ವಿಸ್ತಾರವಾದ ಪ್ರದೇಶಗಳಿಗೆ ಮುಖ್ಯಸ್ಥರಾಗಿ ಅತ್ಯಂತ ಮನ್ನಣೆಯನ್ನು ಹೊಂದಿದವರಾಗಿರುವರು.

ವಿಜಾಪುರ ಬಾದಶಹರ ರಾಜ್ಯದಲ್ಲಿ ಇದ್ದ ಅನೇಕ ಪ್ರಮುಖ ದೇಸಗತಿಗಳಲ್ಲಿ ನವಲಗುಂದದ ದೇಸಾಯರು ಅತ್ಯಂತ ಪ್ರಸಿದ್ಧರಾಗಿದ್ದರು. ಇವರು ಉತ್ತರಕರ್ನಾಟಕದ ಮಧ್ಯಸೀಮೆಯಾದ ಈಗಿನ ನವಲಗುಂದ ಮತ್ತು ಸವದತ್ತಿ ತಾಲೂಕುಗಳನ್ನು ಒಂದು ಕಾಲದಲ್ಲಿ ತಮ್ಮ ಕೈವಶ ಮಾಡಿಕೊಂಡು ಬಲಾಢ್ಯರಾಗಿದ್ದರು. ಗದಗ ಮತ್ತು ಲಕ್ಷ್ಮೇಶ್ವರ ಭಾಗ

ಗಳಾದರೂ ಕೆಲವು ವರ್ಷ ಅವರ ಕೈವಶವಾಗಿದ್ದಿತು. ಇವರ ವೃತ್ತಾಂತವನ್ನು ಈಗ ಉಪಲಬ್ಧವಿದ್ದಷ್ಟರಮಟ್ಟಿಗೆ ಕೆಳಗೆ ವಿವರಿಸಿದ್ದೇವೆ.

ನವಲಗುಂದ ದೇಸಾಯರ ಮೂಲಪುರುಷನು ಈಗ ನಿಜಾಮನ ರಾಜ್ಯದಲ್ಲಿರುವ ಅವರಾದಿ ಎಂಬ ಗ್ರಾಮದಲ್ಲಿ ವಿಟ್ಟಗೌಡನೆಂಬ ಹೆಸರಿನ ಗೌಡನಾಗಿದ್ದನು. ಇವನು ಮೊದಲು ಇಬ್ರಾಹಿಮ ಆದಿಲ್‌ಶಹರ ದಂಡಿನಲ್ಲಿ ಸೇರಿ ತನ್ನ ಶೂರತನದಿಂದ ಬೆಳಕಿಗೆ ಬಂದನು. ಈ ಕಾಲದಲ್ಲಿ ಅಹಮದನಗರ ಮತ್ತು ಗೊವಳಕೊಂಡ ಬಾದಶಹರೊಡನೆ ಇಬ್ರಾಹಿಮನು ಯುದ್ಧ ಮಾಡುವ ಪ್ರಸಂಗಗಳು ಬರಲು ವಿಟ್ಟಗೌಡನು ಕೆಲ ದಂಡಾಳುಗಳನ್ನೂ ರಾಹುತರನ್ನೂ ಕೂಡಿಸಿ ಬಾದಶಹನಿಗೆ ವಿಶೇಷ ಸಹಾಯಮಾಡಿದನು. ಈ ಸಹಾಯಕ್ಕೋಸ್ಕರ ಬಾದಶಹನು ಅವನಿಗೆ ಪ್ರೀತನಾಗಿ ಈಗ ಅಥಣಿ ತಾಲೂಕಿನಲ್ಲಿರುವ ಕೋಕಟನೂರು ಪರಗಣೆಯನ್ನು ಇನಾಮಾಗಿ ಹಾಕಿಕೊಟ್ಟನು.

ಇಬ್ರಾಹಿಮ ಆದಿಲಶಾಹನ ತರುವಾಯ ಅಲ್ಲಿಆದಿಲ್‌ಶಾಹನು ಪಟ್ಟವೇರಿದನು. ಇವನ ಕಾಲಕ್ಕೆ ಮುಸಲ್ಮಾನ ಬಾದಶಹರೆಲ್ಲರೂ ಸಮ್ಮಿಲಿತರಾಗಿ ವಿಜಯನಗರದ ನರಪತಿಗಳೊಡನೆ ಯುದ್ಧ ಹೂಡಿದ್ದು ಇತಿಹಾಸಪ್ರಸಿದ್ಧವೇ ಇರುತ್ತದೆ. ಉಭಯದಳಗಳ ಮಧ್ಯದಲ್ಲಿ ತಾಳೀಕೋಟೆಯ ರಣಾಂಗಣದಲ್ಲಿ ಯುದ್ಧವೆಸಗಿತು. ಆಗ ವಿಟ್ಟಗೌಡನು ೧೦೦೦ ರಾಹುತರು ಮತ್ತು ೨೦೦೦ ಕಾಲಾಳುಗಳೊಡನೆ ಅದಿಲ್‌ಶಾಹನ ದಂಡಿನಲ್ಲಿ ಕಾದಾಡಿದ ಸಂಗತಿಯನ್ನು ಫೇರಿಸ್ತನು ತನ್ನ ಇತಿಹಾಸದಲ್ಲಿ ಉಲ್ಲೇಖಿಸಿರುವನು. ಈ ಯುದ್ಧದಲ್ಲಿ ವಿಜಯನಗರದ ರಾಜನು ಪರಾಜಿತನಾಗಿ, ಅಹಮದನಗರದ ನಿಜಾಮಶಹನ ದಂಡಾಳುಗಳ ಕೈಯಲ್ಲಿ ಅಕಸ್ಮಾತ್ತಾಗಿ ಸಿಕ್ಕಿಬಿದ್ದು, ಅವರಿಂದ ಹತನಾದನು. ಆ ಮೇಲೆ ಮುಸಲ್ಮಾನ ಬಾದಶಹರು ವಿಜಯನಗರ ರಾಜಧಾನಿಯನ್ನು ಪ್ರವೇಶಿಸಿ ಅದನ್ನು ಸಂಪೂರ್ಣವಾಗಿ ನಾಶಪಡಿಸಿದರು. ಮತ್ತು ಈ ರಾಜ್ಯವನ್ನು ಅವರು ಸಂಪೂರ್ಣವಾಗಿ ಹಾಳುಮಾಡಿಬಿಟ್ಟರು.

ಈ ಮೇರೆಗೆ ವಿಜಯನಗರದ ರಾಜ್ಯವು ಲಯವಾದ ಬಳಕ ಮುಸಲ್ಮಾನ ಬಾದಶಹರು ಅದನ್ನು ಅಭಿಯೋಗಿಸಿ, ಅದರ ಭಾಗಗಳನ್ನು ತಮ್ಮ ರಾಜ್ಯಗಳಲ್ಲಿ ಕೂಡಿಸಿಕೊಳ್ಳಹತ್ತಿದರು. ಈ ಕಾರ್ಯದಲ್ಲಿ ವಿಟ್ಟಗೌಡನು ಅಲ್ಲಿ ಆದಿಲ್‌ಶಹನಿಗೆ ಬಹಳ ಸಹಾಯಮಾಡಿದನು. ಅವನು ಬದಾಮಿ

ಯಿಂದ ಸಹ್ಯಾದ್ರಿಯ ವರೆಗೆ ಇರುವ ಸೀಮೆಯನ್ನು ಆಕ್ರಮಿಸಿ ವಿಜಾಪುರ ರಾಜ್ಯಕ್ಕೆ ಜೋಡಿಸಿದನು. ಅವನು ಮಾಡಿದ ಈ ಸಹಾಯಕ್ಕೋಸ್ಕರ ಅಲ್ಲಿಆದಿಲ್‌ಶಹನು ಅವನಿಗೆ ಅತ್ಯಂತ ಭದ್ರವಾದ ತೊರೆಗಲ್ಲು ಕೋಟಿ ಮತ್ತು ಅದರ ಸುತ್ತುಮುತ್ತಲಿನ ಸೀಮೆ ಇವುಗಳನ್ನು ಕೊಟ್ಟದ್ದಲ್ಲದೆ ಅನೇಕ ಕಿತಾಬುಗಳನ್ನೂ ಹಾಕಿಕೊಟ್ಟನು. ಈ ಕಾಲಕ್ಕೆ ವಿಟ್ಟಗೌಡನು ಅನೇಕ ಕೋಟಿಗಳನ್ನು ಕೈವಶಮಾಡಿದ್ದರಿಂದ ಅವನಿಗೆ "೫೨ಕೋಟಿಗಳನ್ನು ತೆಗೆದುಕೊಂಡವ" ಎಂಬ ಹೆಸರು ಬಂದಿತು.

ತಾಳೀಕೋಟಿಯ ಕದನವಾದ ಬಳಿಕ ವಿಜಯನಗರದ ರಾಜ್ಯದ ಯಾವ ಯಾವ ಭಾಗಗಳನ್ನು ಯಾರು ಆಕ್ರಮಣಮಾಡಿಕೊಳ್ಳಬೇಕೆಂಬ ವಿಷಯದಲ್ಲಿ ವಿಜಾಪುರ ಮತ್ತು ಅಹಮುದನಗರ ಬಾದಶಹರ ಮಧ್ಯದಲ್ಲಿ ಕಲಹಗಳು ಉತ್ಪನ್ನವಾದವು. ಈ ಕಲಹಗಳು ೧೫೭೩ ನೇ ಇಸ್ವಿಯ ವರೆಗೆ ನಡೆದು ಕಡೆಗೆ ಅವರಲ್ಲಿ ಕೆಲವು ಒಡಂಬಡಿಕೆಗಳು ಆದವು. ಆ ಪ್ರಕಾರ ವಿಜಾಪುರ ಬಾದಶಹನು ಪಶ್ಚಿಮ ಕಡೆಯ ಭಾಗವನ್ನು ಆಕ್ರಮಿಸಬೇಕೆಂದು ಗೊತ್ತಾಯಿತು. ಈ ಅವಧಿಯಲ್ಲಿ ವಿಟ್ಟಗೌಡನು ಬಾದಶಹನಿಗೆ ಅಂಕಿತನಾಗಿ ನಡೆಯುವದನ್ನು ಬಿಟ್ಟುಕೊಟ್ಟು ಸ್ವತಂತ್ರನಾಗಿ ಆಳಹತ್ತಿದನು. ಬಾದಶಹನು ಮೇಲ್ಕಂಡ ಒಪ್ಪಂದವಾದ ಬಳಿಕ ದಕ್ಷಿಣಕ್ಕೆ ಧಾರವಾಡ ಮತ್ತು ಬಂಕಾಪುರ ಕೋಟಿಗಳನ್ನು ಕೈವಶಮಾಡಿಕೊಳ್ಳಲು ತೆರಳಿದಾಗ ಅವನು ಈ ತೊರಗಲ್ಲ ಕೋಟಿಯನ್ನು ಮೊದಲು ಮುತ್ತಿ ವಿಟ್ಟಗೌಡನನ್ನು ಹಣ್ಣಿಗೆ ತರುವ ಪ್ರಸಂಗವು ಬಂದೊದಗಿತು. ಆ ಪ್ರಕಾರ ಅವನು ಈ ತೋರಗಲ್ಲು ಕೋಟಿಯನ್ನು ಏಳು ತಿಂಗಳು ವರೆಗೆ ಮುತ್ತಿ ಕೈವಶಮಾಡಿಕೊಂಡನು. ಆಗ ವಿಟ್ಟಗೌಡನು ಬಾದಶಹನಿಗೆ ಶರಣಾಗತನಾದನು. ಆದರೆ ಅಲ್ಲಿಆದಿಲ್ಲಶಹನು ಈ ತೋರಗಲ್ಲು ಪ್ರಾಂತವನ್ನು ವಿಟ್ಟಗೌಡನ ವಂಶಜರ ಕಡೆಗೆ ಹಾಗೆಯೇ ಮುಂದೆ ನಡಿಸಿದಂತೆ ಕಂಡುಬರುತ್ತದೆ.

ಲಿಂಗಪ್ಪ ದೇಸಾಯಿ:— ವಿಟ್ಟಗೌಡನ ತರುವಾಯ ಈ ಮನೆತನದಲ್ಲಿ ಪ್ರಸಿದ್ಧಿಗೆ ಬಂದವನು ಲಿಂಗಪ್ಪದೇಸಾಯಿಯು. ವಿಜಾಪುರ ಬಾದಶಹರು ಮೈಸೂರು ಸೀಮೆಯನ್ನು ಮುಂದೆ ಅಭಿಯೋಗಿಸಿದ ಕಾಲದಲ್ಲಿ ಇವನು ಅವರಿಗೆ ವಿಶೇಷ ಸಹಾಯಮಾಡಿದನು. ಅದರಿಂದ ಅವನಿಗೆ ಕೆಲವು ಗ್ರಾಮಗಳು ಉಂಬಳಿಯಾಗಿ ಹಾಕಿಕೊಡಲ್ಪಟ್ಟವು. ಇದು ೧೬೪೯ ರಲ್ಲಿ ಸಂಭವಿಸಿತು.

ಇದರ ತರುವಾಯ ೧೬೮೬ ಇಸ್ವಿಯಲ್ಲಿ ಔರಂಗಜೇಬನು ವಿಜಾಪುರ ರಾಜಧಾನಿಯನ್ನು ಮುತ್ತಿ ಅದನ್ನು ಕೈವಶಮಾಡಿಕೊಂಡನು. ಆ ಮೇಲೆ ಈ ಕರ್ನಾಟಕ ಭಾಗವು ಮೊಗಲರ ರಾಜ್ಯಕ್ಕೆ ಜೋಡಿಸಲ್ಪಟ್ಟಿತು. ಆದರೆ ಈ ಕಾಲಕ್ಕೆ ಮೊಗಲರಿಗೆ ಆಗಿಂದಾಗ್ಗೆ ಮರಾಠರ ಕೂಡ ಯುದ್ಧಮಾಡಬೇಕಾದ್ದರಿಂದಲೂ ಔರಂಗಜೇಬನು ಸತ್ತ ತರುವಾಯ ಮೊಗಲ ರಾಜ್ಯದಲ್ಲಿ ಅವ್ಯವಸ್ಥೆಯಾದ್ದರಿಂದಲೂ ಈ ಭಾಗದಲ್ಲಿದ್ದ ಚಿಕ್ಕ ಚಿಕ್ಕ ಪಾಳೆಯಗಾರರು ಸ್ವತಂತ್ರರಾಗಿ ತಮ್ಮ ತಮ್ಮ ಸೀಮೆಗಳಲ್ಲಿ ಆಳಹತ್ತಿದರು. ಇವರು ಪ್ರಸಂಗ ಬಂದ ಹಾಗೆ ತಮ್ಮ ತಮ್ಮಲ್ಲಿ ಯುದ್ಧಮಾಡಬೇಕು ಮತ್ತು ಬಲಿಷ್ಠರಾದ ರಾಜರು ದೇಶವನ್ನು ಆಕ್ರಮಿಸಿದಾಗ ಅವರಿಗೆ ಅಂಕಿತರಾಗಿ ನಡೆಯಬೇಕು ಈ ಸ್ಥಿತಿಯು ಪ್ರಾಪ್ತವಾಯಿತು.

ಚನ್ನವ್ವ ದೇಸಾಯಿಣಿಯು:— ಉತ್ತರ ಕರ್ನಾಟಕಕ್ಕೆ ಈ ಬಗೆಯ ಅನಾಯಕತನವು ಪ್ರಾಪ್ತವಾದ ಕಾಲದಲ್ಲಿ ಚನ್ನವ್ವನೆಂಬ ದೇಸಾಯಿಣಿಯು ನವಲಗುಂದದಲ್ಲಿ ಆಳುತ್ತಿದ್ದಳು. ಈಕೆಯು ಕಡೆಗೆ ನವಲಗುಂದ ಮತ್ತು ಸವದತ್ತಿಯ ಬಹು ದೊಡ್ಡ ಭಾಗಗಳು ಇದ್ದವು. ಇವಳು ಬಹು ಚತುರಳೂ ಶೂರಳೂ ಆಗಿದ್ದಳು. ಈ ದೇಸಗತಿಯಲ್ಲಿ ಖ್ಯಾತಿ ಹೊಂದಿದವರಲ್ಲಿ ಈಕೆಯು ಒಬ್ಬಳಾಗಿದ್ದಾಳೆ. ಇವಳು ಮೊಗಲಬಾದಶಹರಿಗೆ ಅನೇಕ ಸಾರೆ ಸಹಾಯಮಾಡಿದ್ದು ತಿಳಿದುಬರುತ್ತದೆ. ಇದಕ್ಕೋಸ್ಕರ ಅವರು ಇವಳಿಗೆ ಅನೇಕ ಗ್ರಾಮಗಳನ್ನು ಇನಾಮವಾಗಿ ಹಾಕಿಕೊಟ್ಟಿರುವರು. ಹೀಗೆ ಇನಾಮವಾಗಿ ಹಾಕಿಕೊಟ್ಟ ಸನದುಗಳಲ್ಲಿ ಇವಳು "ಸರದಾರರಲ್ಲಿ ಅತ್ಯುತ್ತಮಳು, ಮಾಂಡಲಿಕರಲ್ಲಿ ಶ್ರೇಷ್ಠಳು" ಎಂದು ವರ್ಣಿಸಲ್ಪಟ್ಟಿರುವಳು † ಒಬ್ಬ ಮೊಗಲಸೇನಾಪತಿಯು ಈಕೆಗೆ ಕೊಟ್ಟ ಒಂದು ಸನದಿನಲ್ಲಿ ಉಲ್ಲೇಖಿಸಿರುವದೇನೆಂದರೆ:— "ಗಡಕರಿಗಳು ಯಾವಗಲ್ಲ ಕೋಟೆಯನ್ನು ಕೈವಶಮಾಡಿಕೊಂಡಿದ್ದರು. ಆಗ ಮಾಂಡ

† ಶಿರಸಂಗೀ ದೇಸಾಯರ ವ್ಯತ್ಯುಪತ್ರದ ಖಟ್ಲೆಯು ಹೈಕೋರ್ಟಿನಲ್ಲಿ ನಡೆದಾಗ ನಾನು ಅಲ್ಲಿಯ ವಕೀಲರಿಗೆ ಸಹಾಯಕನಾಗಿ ನಿಯೋಜಿಸಲ್ಪಟ್ಟಿದ್ದೆನು. ಆಗ ಇಲ್ಲಿ ಕಾಣಿಸಿದ ಸನದುಗಳು ನನ್ನ ದೃಷ್ಟಿಗೆ ಬಿದ್ದವು. ಅವು ಮೂಲ ಫಾರ್ಸಿ ಭಾಷೆಯಲ್ಲಿ ಇದ್ದು ಅವುಗಳ ಇಂಗ್ಲಿಷ ಭಾಷಾಂತರದಲ್ಲಿ ಕೆಳಗೆ ಕಾಣಿಸಿದ ಸಂಗತಿಗಳು ತಿಳಿದು ಬಂದವು. ಇವುಗಳನ್ನೇ ನಾನು ಇಲ್ಲಿ ಕೊಟ್ಟಿದ್ದೇನೆ.

ಫ. ಗು. ಹಳಕಟ್ಟಿ ಸಂಪಾದಕ

ಲಿಕರಲ್ಲಿ ಶ್ರೇಷ್ಠವಾದ ಅವನು (ಚನ್ನವ್ವನು) ಅವರನ್ನು ಓಡಿಸಿ ಆ ಕೋಟೆಯನ್ನು ಹಿಂದಿರುಗಿ ತೆಗೆದುಕೊಂಡನು. ನಮ್ಮ ಸೈನ್ಯವು ಕರ್ವದ ಹಳ್ಳಿಯಲ್ಲಿ ಇದ್ದಾಗ್ಗೆ ಅವನು ನಮ್ಮ ಕಡೆಗೆ ಬಂದು ಒಂದು ಗ್ರಾಮುವನ್ನು ಬೇಡಿದನು. ಆದ್ದರಿಂದ ಯಾವಗಲ್ಲ ಗ್ರಾಮುವನ್ನು ಅವನಿಗೆ ಇನಾವಾಗಿ ಹಾಕಿ ಕೊಟ್ಟಿದೆ" ಮತ್ತೊಂದು ಸನದಿನಲ್ಲಿ ಈ ಪ್ರಕಾರ ಹೇಳಲ್ಪಟ್ಟಿದೆ:—"ನನ್ನ ಮಾಂಡಲಿಕರಲ್ಲಿ ಪ್ರಮುಖನಾದ ಮತ್ತು ದಯಾಶೀಲನಾದ ಚನ್ನವ್ವನಿಗೆ--ಶತ್ರುಗಳು ಕಪಟತನದಿಂದ ಹೂಲೀಗಡವನ್ನು ಕೈವಶಮಾಡಿಕೊಂಡರು. ನಾನು ನನ್ನ ಸೈನ್ಯದೊಡನೆ ಅಲ್ಲಿಗೆ ಸ್ವತಃ ಬಂದೆನು. ಆಗ ನೀನು ಒಂದು ಸೈನ್ಯವನ್ನು ಕೂಡಿಸಿ ನನ್ನ ಸಮಕ್ಷಮು ಬಂದು ಸ್ವಾಮಿಭಕ್ತಿಯುಳ್ಳ ಸೇನಾಪತಿಯು ಮಾಡತಕ್ಕಂತೆ ಕರ್ತವ್ಯಗಳನ್ನು ಮಾಡಿದ್ದರಿಂದ ಆ ಕೋಟೆಯು ಸರಕಾರದ ವಶವಾಯಿತು. ಆದ್ದರಿಂದ ನಾವು ಅತ್ಯಂತ ಪ್ರೀತರಾಗಿ ಕರೀಕಟ್ಟಿ ಗ್ರಾಮುವನ್ನು ನಿನಗೆ ಇನಾವಾಗಿ ಹಾಕಿಕೊಟ್ಟಿದ್ದೇವೆ." ಈ ಸನದುಗಳ ಮೇಲಿಂದ ಚನ್ನವ್ವನು ಯಾವ ಬಗೆಯ ಸ್ತ್ರೀಯುಳಾಗಿದ್ದಳೆಂಬದನ್ನು ಊಹಿಸಬಹುದಾಗಿದೆ. ಇವಳು ಅತ್ಯಂತ ಶೂರಪುರುಷಳಾಗಿ ತನ್ನ ಆಧಿಪತ್ಯವನ್ನು ಹೆಚ್ಚಿಸಿದಂತೆ ಕಂಡುಬರುತ್ತದೆ. ಈಕೆಯು ಸ್ತ್ರೀಯುಳಾಗಿದ್ದರೂ ಕೂಡ ಈ ಸನದುಗಳಲ್ಲಿ ಅವಳು ಪುರುಷನಂತೆ "ಅವನು" ಎಂದು ಸಂಬೋಧಿಸಲ್ಪಟ್ಟಿರುವಳು. ಇದು ಅವಳಲ್ಲಿರುವ ಶೌರ್ಯದ ದ್ಯೋತಕವಾಗಿರುತ್ತದೆ. ಶೂರಪುರುಷಳನ್ನು ಹೀಗೆ ವಿವರಿಸುವ ಪದ್ಧತಿಯೂ ಇದೆ. ಹೀಗೆ ಶೂರಳಿದ್ದಂತೆಯೇ ಅವಳು ಅತ್ಯಂತ ಧರ್ಮಿಷ್ಠಳೂ ಆಗಿದ್ದಳು. ಈ ಶಿರಸಂಗಿ ದೇಸಗತಿಯ ಗ್ರಾಮುಗಳಲ್ಲಿ ಈಕೆ ಕಟ್ಟಿಸಿದ ಕೆಲವು ಕೆರೆಗಳೂ ದೇವಾಲಯಗಳೂ ಆಕೆಯ ಹೆಸರಿನಿಂದ ಈಗಲೂ ಅಸ್ತಿತ್ವದಲ್ಲಿ ಇವೆ.

ಆದರೆ ಮೊಗಲರಾಜ್ಯವು ಈ ಭಾಗದಲ್ಲಿ ಬಹಳ ದಿವಸ ನೆಲೆಗೊಂಡು ನಿಲ್ಲಲಿಲ್ಲ. ಯಾರು ಬಲಿಷ್ಠರೋ ಅವರೇ ಇಲ್ಲಿ ರಾಜ್ಯವಾಳತೊಡಗಿದರು. ಮುಂದೆ ಸ್ವಲ್ಪ ದಿವಸಗಳಲ್ಲಿ ಸವಣೂರು ನವಾಬರು ಪ್ರಬಲರಾದರು. ಇವರು ಒಂದು ಕಾಲದಲ್ಲಿ ಇಡೀ ಧಾರವಾಡ ಜಿಲ್ಹೆಯನ್ನೂ ಬೆಳಗಾವ ಜಿಲ್ಹೆಯ ಬಹುಭಾಗವನ್ನೂ ಆಕ್ರಮಿಸಿದರು. ಆಗ ನವಲಗುಂದ ಸಂಸ್ಥಾನವು ಇವರಿಗೆ ಅಂಕಿತವಾಯಿತು. ಸವಣೂರ ಸಂಸ್ಥಾನದ ಆಧಿಪತ್ಯವು ಆಗ ಅಬ್ದುಲ್ ರೌಫಖಾನ ಎಂಬವನ ಕಡೆಗೆ ಇದ್ದು,

ಅವನು ನವಲಗುಂದ ದೇಸಾಯರ ಕಡೆಗೆ ಅವರ ಸೀಮೆಯನ್ನು ಇಟ್ಟು ಕಂದಾಯವನ್ನು ಅವರ ಮುಖಾಂತರವಾಗಿಯೇ ಎತ್ತುತ್ತಿದ್ದನು.

ಜಾಯಪ್ಪದೇಸಾಯಿಯುಃ— ಈ ಸಂಸ್ಥಾನದಲ್ಲಿ ಮುಂದೆ ಅತ್ಯಂತ ಪ್ರಸಿದ್ಧಿಗೆ ಬಂದವನು ಜಾಯಪ್ಪದೇಸಾಯಿಯು. ಇವನು ಅತ್ಯಂತ ಚತುರನೂ ಬುದ್ಧಿವಂತನೂ ಎಂದು ಹೆಸರುಪಡೆದನು. ಇವನ ಬಗ್ಗೆ ಅನೇಕ ಆಖ್ಯಾಯಿಕೆಗಳು ಈ ಸಂಸ್ಥಾನದಲ್ಲಿ ಈಗಲೂ ಇರುತ್ತವೆ. ಅವನು ಜಾಣನಿದ್ದಂತೆಯೇ ಶೂರನೂ ಆಗಿದ್ದನು. ಈ ಕಾಲದಲ್ಲಿ ಈ ಭಾಗವೆಲ್ಲ ಪೇಶ್ವೆಯವರ ಅಧೀನತೆಗೆ ಒಳಪಟ್ಟಿತ್ತು. ಪೇಶ್ವೆಯವರಿಗೂ ಕೊಲ್ಹಾಪುರದ ರಾಜರಿಗೂ ಆಗಿಂದಾಗ್ಗೆ ನಿಕರದ ಯುದ್ಧಗಳು ನಡೆಯುತ್ತಿದ್ದವು. ಈ ಕಾಲದಲ್ಲಿ ಜಾಯಪ್ಪದೇಸಾಯಿಯು ಕೊಲ್ಹಾಪುರ ರಾಜನ ಪಕ್ಷವನ್ನು ವಹಿಸಿದ್ದನು. ಮತ್ತು ಅವನು ಅವರಿಗೆ ವಿಶೇಷ ಸಹಾಯಮಾಡಿದ್ದರಿಂದ, ಈ ರಾಜನು ಪರಸಗಡ ತಾಲೂಕಿನ ಕೆಲವು ಗ್ರಾಮಗಳನ್ನು ಉಂಬಳಿಯಾಗಿ ಹಾಕಿಕೊಟ್ಟರು. ಇದು ೧೭೩೦ ರಲ್ಲಿ ವರ್ತಿಸಿತು.

ಜಾಯಪ್ಪದೇಸಾಯಿಯು ಈಗಿನ ಸವದತ್ತಿಯ ಬಹು ಭದ್ರವಾದ ಕೋಟೆಯನ್ನು ಕಟ್ಟಿಸಿದನು. (೧೭೩೪)

ಮುಂದೆ ಬಾಳಾಜೀ ಬಾಜೀರಾವ ಪೇಶ್ವೆಯು ಒಂದು ದೊಡ್ಡ ದಂಡಿನೊಡನೆ ಮೈಸೂರಿನ ವರೆಗೆ ದಕ್ಷಿಣ ದೇಶವನ್ನು ಅಭಿಯೋಗಿಸಿದನು. ಇವನ ಕಾಲಕ್ಕೆ ಉತ್ತರ ಕರ್ನಾಟಕವೆಲ್ಲ ಪೇಶ್ವೆಯವರಿಗೆ ಅಧೀನವಾಯಿತು. ಬಾಳಾಜೀ ಬಾಜೀರಾಯನು ಈ ಭಾಗದಲ್ಲಿ ಆಳುತ್ತಿದ್ದ ದೇಸಾಯರನ್ನು ಕೆಣಕದೆ ಅವರನ್ನು ಹಾಗೆಯೇ ಇಟ್ಟು ಅವರ ಮುಖಾಂತರವಾಗಿಯೇ ತನ್ನ ಕಂದಾಯವನ್ನು ವಸೂಲ ಮಾಡುವನು. ಆದರೆ ಅವನ ತರುವಾಯ ಬಂದ ಮಾಧವರಾವ ಪೇಶ್ವೆಯು ಈ ದೇಸಾಯರ ಬಲವನ್ನು ಕಡಿಮೆ ಮಾಡಲಿಕ್ಕೆ ಪ್ರಯತ್ನಿಸಹತ್ತಿದನು. ಅವನು ಅವರ ಕಡೆಗಿದ್ದ ಸರಕಾರೀ ಎಲ್ಲ ಗ್ರಾಮಗಳನ್ನು ಅವರ ಅಧೀನತೆಯಿಂದ ತಪ್ಪಿಸಿ ಸರಕಾರಕ್ಕೆ ಕೂಡಿಸಿಕೊಂಡನು. (೧೭೬೫) ಆದರೆ ಎಲ್ಲ ದೇಸಾಯರ ಸ್ವಂತದ ಇನಾಮುಗಳನ್ನು ಮತ್ತು ಅವರ ಬಿರುದುಗಳನ್ನು ಮಾತ್ರ ಪ್ರತಿಬಂಧಿಸದೆ ಅವುಗಳ ಉಪಭೋಗವನ್ನು ಅವರವರ ಕಡೆಗೆ ಇಟ್ಟನು.

೧೭೭೮ರ ಸುಮಾರಕ್ಕೆ ಉತ್ತರ ಕರ್ನಾಟಕ ಪ್ರಾಂತವೆಲ್ಲ ಹೈದರ ಅಲ್ಲಿಯ ಕೈವಶವಾಯಿತು. ಆಗ್ಗೆ ಈ ಭಾಗವನ್ನೆಲ್ಲ ನಿಜವಾಗಿ ಆಳು

ವವರು ದೇಸಗತಿಯ ಮನೆತನದವರೇ ಎಂಬದು ಕಂಡು ಬಂದು ಅವನು ಅವರ ಅಧಿಕಾರವನ್ನು ಕಡಿಮೆ ಮಾಡಲಿಕ್ಕೆ ಪ್ರಯತ್ನಿಸಹತ್ತಿದನು. ಅವನು ಮೊದಲು ಅವರ ಕಡೆಯಿಂದ ಭಾರವಾದ ಕಪ್ಪಗಳನ್ನು ಅಥವಾ ನಜರಾಣೆಗಳನ್ನು ಎತ್ತಹತ್ತಿದನು. ನವಲಗುಂದ ದೇಸಾಯರು ಒಂದು ಲಕ್ಷ ಹೊನ್ನು ಅಂದರೆ ಸುಮಾರು ೪ಲಕ್ಷ ರೂಪಾಯಿಗಳ ನಜರಾಣೆಯನ್ನು ಕೊಡಬೇಕೆಂದು ಅವನು ಗೊತ್ತುಪಡಿಸಿದನು.

ಹೈದರಲ್ಲಿಯ ತರುವಾಯ ಟೀಪು ಸುಲ್ತಾನನು ರಾಜ್ಯವನ್ನಾಳಹತ್ತಿದನು. ಆಗ ಅವನು ಈ ದೇಸಗತಿಗಳನ್ನೆಲ್ಲ ಸಂಪೂರ್ಣವಾಗಿ ನಾಶ ಮಾಡಲು ಉದ್ಯುಕ್ತನಾದನು. ಅವನು ಹೈದರಲ್ಲಿಯು ಗೊತ್ತುಪಡಿಸಿದ ನಜರಾಣೆಗಳನ್ನು ಬಹಳ ಹೆಚ್ಚಿಸಹತ್ತಿದನು. ಆ ಪ್ರಕಾರ ನವಲಗುಂದ ದೇಸಾಯಿಯ ಮೇಲೆಯೂ ಅವನು ಬಹಳ ಭಾರವಾದ ನಜರಾಣೆಯನ್ನು ಹೇರಿದನು. ಆಗ ಲಿಂಗಪ್ಪ ದೇಸಾಯಿಯು ರಾಜ್ಯಭಾರ ಮಾಡುತ್ತಿದ್ದು ಅವನು ಟೀಪುವಿನ ವಿರುದ್ಧ ದಂಗೆಯನ್ನು ಎಬ್ಬಿಸಿದನು. ಮತ್ತು ಸುತ್ತಲೂ ಬಹಳ ಹಾವಳೀ ಮಾಡಹತ್ತಿದನು. ಆಗ ಟೀಪು ಸುಲ್ತಾನನು ದೊಡ್ಡ ದಂಡನ್ನು ತೆಗೆದುಕೊಂಡು ಬರಲು ಲಿಂಗಪ್ಪ ದೇಸಾಯಿಯು ಓಡಿಹೋಗಿ ಪುಣೆಯನ್ನು ಸೇರಬೇಕಾಯಿತು. ಆಗ ಟೀಪುವು ಇವನ ಸಂಸ್ಥಾನವನ್ನೆಲ್ಲ ಕಸೆದುಕೊಂಡನು. ಈ ಕಾಲದಲ್ಲಿ ಅವನು ನರಗುಂದ ಕಿಲ್ಲೆಯನ್ನು ಸಹ ಮುತ್ತಿ ಅದನ್ನು ಕೈವಶ ಮಾಡಿಕೊಂಡನು.

ಟೀಪುವಿನ ಈ ಹಾವಳಿಯ ಮೂಲಕ ಪೇಶ್ವೆಯವರೂ ನಿಜಾಮು ಮತ್ತು ಇಂಗ್ಲಿಷರೂ ಒಂದಾಗಿ ಅವನ ಮೇಲೆ ಮೈಸೂರಿನ ೩ನೇ ಯುದ್ಧವನ್ನು ಪ್ರಾರಂಭಿಸಿದರು. ಅದರಲ್ಲಿ ಅವರು ಟೀಪೂವಿನನ್ನು ಸೋಲಿಸಿ ಶ್ರೀರಂಗಪಟ್ಟಣದ ತಹನಾಮೆಯನ್ನು ಮಾಡಿದರು. ಈ ತಹನಾಮೆಯ ಪ್ರಕಾರ ತುಂಗಭದ್ರೆಯ ಉತ್ತರ ಪ್ರದೇಶವೆಲ್ಲ ಪೇಶ್ವೆಯವರ ಕೈವಶವಾಯಿತು.

ಈ ಪ್ರಕಾರ ಈ ಭಾಗವು ಪೇಶ್ವೆಯವರ ಕೈವಶವಾಗಲು ಅವರು ನವಲಗುಂದದ ದೇಸಗತಿಯನ್ನು ಲಿಂಗಪ್ಪ ದೇಸಾಯಿಗೆ ಹಿಂದಿರುಗಿ ಕೊಡದೆ ಯುದ್ಧದ ಖರ್ಚಿಗೆಂದು ಅದನ್ನು ಅವರು ಹಿಡಿದುಕೊಂಡು

ಬಿಟ್ಟರು. ಆಗ ಲಿಂಗಪ್ಪ ದೇಸಾಯಿಯು ಅದನ್ನು ಹಿಂದಿರುಗಿ ದೊರಕಿಸಲು ಎಷ್ಟು ಪ್ರಯತ್ನ ಮಾಡಿದರೂ ಕೂಡ ಅದು ಸಫಲವಾಗದೆ ಕಡೆಗೆ ಪೇಶ್ವೆಗಳು ಅವನಿಗೆ ಪೋಟಿಗೆ ಎಂದು ಕೆಲವು ಗ್ರಾಮಗಳನ್ನು ಮಾತ್ರ ಹಾಕಿಕೊಟ್ಟರು. (೧೭೯೩)

ಮುಂದೆ ೧೭೯೮ ರ ಸುಮಾರಕ್ಕೆ ಧೋಂಡೋಪಂತ ಗೋಖಲೆ ಎಂಬವನು ಈ ಭಾಗದಲ್ಲಿ ಪೇಶ್ವೆಯವರ ಸುಭೇದಾರನಾಗಿದ್ದು ಅವನಿಗೂ ನವಲಗುಂದ ದೇಸಾಯರಿಗೂ ಮನಸ್ತಾಪಗಳು ಉಂಟಾದ್ದರಿಂದ ಧೋಂಡೋಪಂತ ಗೋಖಲೆಯು ದೇಸಾಯರ ಗ್ರಾಮಗಳಾದ ನವಲಗುಂದ ಮತ್ತು ಗದಗ ಇವುಗಳನ್ನು ಕಸೆದುಕೊಂಡು ಬಿಟ್ಟನು. ಆದರೆ ಮುಂದೆ ಧೋಂಡೋಪಂತನಿಗೂ ಕೊಲ್ಹಾಪುರದ ರಾಜನಿಗೂ ಯುದ್ಧಗಳು ಎಸಗಲು ಅವುಗಳಲ್ಲಿ ನವಲಗುಂದ ದೇಸಾಯಿಯು ಕೊಲ್ಹಾಪುರದ ರಾಜನಿಗೆ ಸಹಾಯ ಬಹಳ ಮಾಡಿದನು. ಇದರಿಂದ ಕೊಲ್ಹಾಪುರ ರಾಜನು ಈ ಎರಡೂ ಗ್ರಾಮಗಳನ್ನು ಅವನಿಗೆ ಹಿಂದಿರುಗಿ ಕೊಟ್ಟನು. ಆದರೆ ಮುಂದೆ ದೇಶದಲ್ಲಿ ಪೇಶ್ವೆಯವರ ಪ್ರಾಬಲ್ಯವಾಗಲು, ಅವರು ನವಲಗುಂದ ದೇಸಾಯರಿಗೆ ಅವರ ಮೊದಲಿನ ಸಂಪೂರ್ಣ ಆಧಿಪತ್ಯವನ್ನು ಕೊಡದೆ ಅವರಿಗೆ ಪೋಟಿಗೆಯಂತೆ ಹತ್ತು ಗ್ರಾಮಗಳನ್ನು ಮಾತ್ರ ಅವರ ಅಧೀನದಲ್ಲಿ ಇಟ್ಟನು.

೧೮೧೮ ರಲ್ಲಿ ಪೇಶ್ವೆಯವರ ರಾಜ್ಯವು ಲಯವಾಗಿ ಇಂಗ್ಲಿಷರು ಈ ಭಾಗವನ್ನೆಲ್ಲ ಆಕ್ರಮಿಸಿದರು. ಆಗ ಇಂಗ್ಲಿಷರು ನವಲಗುಂದ ದೇಸಾಯರ ಕಡೆಗಿದ್ದ ಮೊದಲಿನ ಹತ್ತು ಗ್ರಾಮಗಳನ್ನು ಮಾತ್ರ ಅವರ ಕಡೆಗೆ ಇಟ್ಟು ಅವುಗಳನ್ನು ಹಾಗೆಯೇ ನಡಿಸುತ್ತ ಬಂದರು. ಈ ಗ್ರಾಮಗಳನ್ನೇ ಕೈ. ವಾ. ಲಿಂಗಪ್ಪ ಜಾಯಪ್ಪ ದೇಸಾಯರು ತಮ್ಮ ಮರಣ ಕಾಲದಲ್ಲಿ ವೀರಶೈವರ ವಿದ್ಯಾಭಿವೃದ್ಧಿಗೋಸ್ಕರ ಮೃತ್ಯುಪತ್ರದ ಮೂಲಕ ದಾನವಾಗಿ ಅರ್ಪಿಸಿ ಕೀರ್ತಿಶೇಷರಾದರು.



# ತ್ರಿಮೂರ್ತಿಗಳು.

ವೀರಶೈವ ಧರ್ಮವು ಒಂದು ಸಂಗ್ರಾಹಕ ಧರ್ಮವಾಗಿದೆ. ಇದರಲ್ಲಿ ಪ್ರಸಾರಕ ಶಕ್ತಿ ಇದೆ. ಅದು ಭೇದಾಭೇದಗಳನ್ನು ಎಣಿಸಲಾರದು. ಮತ್ತು ಉಚ್ಚನೀಚತ್ವವನ್ನೂ ಕಲ್ಪಿಸಲಾರದು. ಎಲ್ಲವನ್ನೂ ತನ್ನೊಳಗೆ ಒಳಕೊಳ್ಳುವದು ಅದರ ಸ್ವಭಾವವಾಗಿದೆ. ಅದು ಹೀಗೆ ತನ್ನೊಳಗೆ ಎಳೆದುಕೊಂಡು ಎಲ್ಲದರಲ್ಲಿ ಸ್ವಪ್ರಕಾಶವನ್ನು ಬೀರತಕ್ಕದ್ದಾಗಿದೆ- ಇದರಿಂದಲೇ ಅದರಲ್ಲಿ ಈ ಪ್ರಸರಣ ಗುಣವು ಬಂದಿದೆ. ಈ ಅದರ ಪ್ರಸರಣ ಗುಣದ ಮೂಲಕ ಆದರಲ್ಲಿ ವಿಕಾಸಭಾವವೂ ತಲೆದೋರಿದೆ. ಯಾವ ಧರ್ಮವು ಹೀಗೆ ಇರುತ್ತದೋ ಅದರಲ್ಲಿ ಬಾಳ್ವಿಕೆಯ ಗುಣವೂ ಒಡಮೂಡುತ್ತದೆ. ವಚನಕಾರರ ವಿಚಾರಗಳ ಬಗೆಯು ಇದೇ ರೀತಿಯದಾಗಿದೆ. ಅವರ ಪ್ರತಿಯೊಂದು ವಚನದಲ್ಲಿ ಇಂಥ ಉಚ್ಚ ವಿಶಾಲ ಪ್ರಸಾರಕ ತತ್ವಗಳು ಒಡಮೂಡಿಕೊಂಡಿರುತ್ತವೆ. ಅನೇಕರು ವೀರಶೈವವೆಂದರೆ ಶಿವನೊಬ್ಬನನ್ನೇ ಪೂಜಿಸುವ ಧರ್ಮವೆಂದು ತಿಳಿಯುವದುಂಟು. ಅಂದರೆ ಇದು ವಿಷ್ಣು ಬ್ರಹ್ಮ ಮೊದಲಾದ ದೇವತೆಗಳನ್ನು ತಿರಸ್ಕರಿಸುವಂಥದೆಂಬ ಭಾವವು ಉಂಟಾಗುತ್ತದೆ. ಆದರೆ ಪ್ರಮಥರ ವಿಚಾರಗಳು ಈ ತರದವಲ್ಲ. ಅವರಲ್ಲಿ ಇಂಥ ದ್ವೇಷದ ಕಲ್ಪನೆಗಳು ಬರಲಾರವು. ಅವರು ಇಡೀ ಜಗತ್ತೆಲ್ಲ ಒಂದೇ ಒಂದು ದೈವೀಶಕ್ತಿ ಅಥವಾ ಲಿಂಗಶಕ್ತಿಯಿಂದ ಕೂಡಿಕೊಂಡಿದೆಂದು ಎಲ್ಲವನ್ನೂ ಆದರಿಸುವವರಾಗಿರುವರು. ಎಂದರೆ ಅವರು ಜಗತ್ತೆಲ್ಲ ಲಿಂಗಮಯವೆಂದು ತಿಳಿಯುತ್ತಾರೆ. ಎಲ್ಲವೂ ಪರಮಾತ್ಮನೆಂದು ಅವರ ಭಾವನೆ. ಆದ್ದರಿಂದ ಯಾವುದರಲ್ಲಿಯೂ ತ್ಯಾಜ್ಯತ್ವವು ಇರಲಾರದು. ಲಿಂಗ ಪ್ರಕಾಶದಿಂದ ಅವರು ನುಡಿಯುವವರೂ, ನೋಡುವವರೂ, ಅನುಭವಿಸುವವರೂ, ಆಗಿರುವರು. ಜಗತ್ತಿನಲ್ಲಿಯ ಪದಾರ್ಥಗಳೆಲ್ಲ ದೇವರ ದೇಣಿಗೆಗಳು, ಆದ್ದರಿಂದ ಪೂಜ್ಯವಾದವುಗಳು ಎಂಬ ಈ ಭಾವವನ್ನು ಒಬ್ಬ ವಚನಕಾರನು ಬಹು ಸುಂದರವಾಗಿ ನುಡಿದಿದ್ದಾನೆ. ಅವನು ಅನ್ನುವದೇನಂದರೆ— .

ಇಳೆ ನಿಮ್ಮ ದಾನ, ಬೆಳೆ ನಿಮ್ಮ ದಾನ, ಸುಳಿದು ಬೀಸುವ ವಾಯು ನಿಮ್ಮ ದಾನ. ನಿಮ್ಮ ದಾನವನುಂಡು ಅನ್ಯರ ಹೊಗಳುವ ಕುನ್ನಿಗಳನೇನೆಂಬೆ ರಾಮನಾಥಾ?

ಕಾಯ ನಿಮ್ಮ ದಾನ, ಜೀವ ನಿಮ್ಮ ದಾನ, ಕಾಯ ಜೀವವುಳ್ಳಲ್ಲಿಯೇ ಪೂಜಿಸದ ಅನ್ಯಾಯಿಗಳನೇನೆಂಬೆ ಹೇಳಾ ರಾಮನಾಥಾ?

ಎತ್ತು ನಿಮ್ಮ ದಾನ, ಬಿತ್ತು ನಿಮ್ಮ ದಾನ, ಸುತ್ತಿ ಹರಿವ ಸಾಗರವೆಲ್ಲ ನಿಮ್ಮ ದಾನ. ನಿಮ್ಮ ದಾನವನುಂಡು ಅನ್ಯರ ಬೊಗಳುವ ಕುನ್ನಿಗಳನ್ನೇನೆಂಬೆ ಹೇಳಾ ರಾಮನಾಥಾ?

ಇಂತೆಂದ ಭೂಮಿಯ, ಇಂತೆಂದ ಗಗನವ, ಇಂತೆಂದ ಸಪ್ತಸಾಗರವ, ಇಂತೀ ಲೋಕದೊಳಗೆ ತಿಂಥಿಣಿಯಾಗಿಪ್ಪ ಅಚಿಂತ್ಯನನಾರು ಬಲ್ಲರೈ ರಾಮನಾಥಾ?

ಈ ಪ್ರಕಾರ ಪರಮಾತ್ಮನು ನಿಬಿಡವಾಗಿ ದಟ್ಟವಾಗಿ ಜಗತ್ತಿನಲ್ಲಿ ಹೆಣೆದು ಹೋಗಿರುವನು. ಆದ್ದರಿಂದ ಜಗತ್ತಿನಲ್ಲಿ ಅವುದೂ ಕೆಟ್ಟದ್ದಲ್ಲ. ಮನುಷ್ಯನ ದೇಹ, ಜೀವ, ಇವೆಲ್ಲವೂ ಮಾಯೆ ಎಂದು ಅವುಗಳನ್ನು ಒಗೆದು ಬಿಡುವದು ತರವಲ್ಲ. ಎತ್ತು, ಬೀಜ, ನೀರು, ಭೂಮಿ, ಹವೆ, ಬೆಳೆ ಇವುಗಳಂಥ ಅಮೌಲ್ಯ ವಸ್ತುಗಳು ಯಾವವೂ ಇಲ್ಲ. ಇವುಗಳಲ್ಲಿ ಇಂಥ ಅತ್ಯುತ್ತಮತನವು ಇರಬೇಕಾದರೆ ಅವುಗಳಲ್ಲಿ ಪರಮಾತ್ಮನು ತುಂಬಿಕೊಂಡಿರಬೇಕು ಎಂದು ವಚನಕಾರರ ವಿಚಾರಗಳು. ಹೀಗೆ ವಿಚಾರಮಾಡುವವರಲ್ಲಿ ಭೇದಾಭೇದಗಳಿಗೆ ದ್ವೇಷಾಸೂಯೆಗಳಿಗೆ ಎಡೆ ಹ್ಯಾಗೆ ದೊರೆಯಬೇಕು? ಅನೇಕರು ವೀರಶೈವವೆಂದರೆ ಶಿವನೊಬ್ಬನನ್ನೇ ಪೂಜಿಸುವಂಥದೆಂದು ತಿಳಿಯುತ್ತಾರೆ. ಆದರೆ ಅವರು ಈ ಕೆಳಗಿನ ವಚನವನ್ನು ಚನ್ನಾಗಿ ವಿಚಾರಮಾಡಿ ನೋಡಬೇಕು. ಇದರಲ್ಲಿ ಎಂಥ ಶ್ರೇಷ್ಠ ಭಾವವು ತುಂಬಿವೆಂಬದು ತಿಳಿದು ಬರುವದು.

" ಗಂಗಾಧರ ಗೌರೀಶ್ವರ ದೇವರಲ್ಲ. ಶಂಕರ ಶಶಿಧರ ದೇವರಲ್ಲ. ಪಂಚಮುಖ ದಶಭುಜವನುಳ್ಳ ನಂದಿವಾಹನರು ದೇವರಲ್ಲ. ತ್ರಿಶೂಲ ಖಟ್ವಾಂಗಧರರು ದೇವರಲ್ಲ. ಬ್ರಹ್ಮಕಪಾಲ, ವಿಷ್ಣು ಕಂಕಾಳ ಪಿಡಿದಾಡುವ ಪ್ರಳಯಕಾಲದ ರುದ್ರರು ದೇವರಲ್ಲ. ನಿರಾಳ ಸ್ವಯಂಭೂ ಲಿಂಗವೇ ತಾನೆಂದರಿದಡೆ ತಾನೇ ದೇವ ನೋಡಾ ಅಪ್ರಮಾಣ ಕೂಡಲ ಸಂಗಮದೇವಾ " ಎಂದು ಒಬ್ಬ ವಚನಕಾರನು ನುಡಿದಿರುವನು.

ಈ ಪ್ರಕಾರ ವಚನಕಾರರು ಅತ್ಯಂತ ವ್ಯಾಪಕ ದೃಷ್ಟಿಯುಳ್ಳವರು. ಅವರು ಯಾವಾಗಲೂ ಅತ್ಯುತ್ತಮತನದ ಗ್ರಾಹಕರು. ಅವರಿಗೆ ತಮ್ಮ ಮತವು ಎಲ್ಲ ಧರ್ಮದ ಸಾರವೆಂದು ಹೇಳಲು ಬಲು ಅಭಿಮಾನವಿದೆ.

ಆದ್ದರಿಂದಲೇ ಎಲ್ಲ ಧರ್ಮಗಳಲ್ಲಿಯ ಹುರುಳನ್ನು ಕಂಡು ಹಿಡಿದು ತಮ್ಮ ದರಲ್ಲಿ ಹೆಣೆದುಕೊಂಡಿರುವರು. ಅವರು ದ್ವೈತ ಹೆಚ್ಚೋ, ಅದ್ವೈತ ಹೆಚ್ಚೋ ಎಂಬದನ್ನು ಪ್ರತಿಪಾದಿಸಲು ಬಯಸುವದಿಲ್ಲ. ತಮ್ಮ ಧರ್ಮವು ದ್ವೈತಾದ್ವೈತವೆಂದು ಹೇಳಿಬಿಟ್ಟರುತ್ತಾರೆ. ಚಾತುರ್ವರ್ಣಗಳಲ್ಲಿ ಯಾವ ದು ಶ್ರೇಷ್ಠವೆಂದು ಹೇಳಲು ಹೋಗುವದಿಲ್ಲ. ಈ. ತೊಂದರೆಯೇ ಅವರಿಗೆ ಬೇಡ. ಇಂಥದರಲ್ಲಿ ತೊಡಗುವದೆಂದರೆ ದ್ವೇಷವನ್ನು ಬರಮಾ ಡಿಕೊಳ್ಳುವದೇ ಸರಿ. ಆದ್ದರಿಂದ ತಾವು ವರ್ಣರಹಿತರೆಂದು ಹೇಳಿ ಕೊಂಡು ಬಿಟ್ಟಿದ್ದಾರೆ. ಯಾವ ಜಾತಿಯುವರೆಂದು ಕೇಳಿದರೆ ನಾವು ಪರ ಮಾತ್ಮನ ಜಾತಿಯುವರೆಂದು ಹೇಳುತ್ತಾರೆ. ಈ ಪ್ರಕಾರ ಭೇದಾಭೇದಗಳ ಕೋಟಲೆಯಲ್ಲಿ ತೊಳಲಾಡದೆ, ಉಚ್ಚ ವಾತಾವರಣದಲ್ಲಿ ಇವರು ಹೊಯ್ದಾಡುತ್ತಾರೆ. ಮತ್ತು ಹಾಗೆ ಆಚರಿಸುವದರಲ್ಲಿ ಆನಂದಬಡುತ್ತಾರೆ.

ಇದರಂತೆಯೇ ತ್ರಿಮೂರ್ತಿಗಳ ಸಂಬಂಧವಾಗಿಯೂ ಅವರ ವಿಚಾ ರಗಳಿವೆ. ಒಂದು ಕಾಲಕ್ಕೆ ಶಿವ ಶ್ರೇಷ್ಠನೋ ವಿಷ್ಣು ಶ್ರೇಷ್ಠನೋ ಎಂಬ ದೊಂದು ದೊಡ್ಡ ವಾದವು ಸಮಾಜದಲ್ಲಿ ಎದ್ದಂತೆ ತೋರುತ್ತದೆ. ಇದು ಇಡೀ ಕರ್ನಾಟಕ ಮತ್ತು ದಕ್ಷಿಣ ದೇಶವನ್ನು ದಿಗಿಲುಬಡಿಸಿತು. ಈ ಜಗ ಳಕ್ಕಾಗಿಯೇ ರಾಮಾನುಜನು ಚೋಳ ರಾಜ್ಯದಿಂದ ಹೊರಬೀಳಬೇಕಾ ಯಿತಂತೆ. ಶಿವ ಶ್ರೇಷ್ಠನೆಂದು ಸ್ಥಾಪಿಸಬೇಕೆಂದು ಶಿವಭಕ್ತರಾದ ಚೋಳ ರಾಜರು ವಿಷ್ಣು ಭಕ್ತರಾದ ಚಾಲುಕ್ಯರಮೇಲೆ ಯುದ್ಧ ಹೂಡುತ್ತಿದ್ದ ರಂತೆ. ಕಂಚೀ ಪಟ್ಟಣದಲ್ಲಿ ಶಿವಕಂಚಿ ವಿಷ್ಣುಕಂಚಿ ಎಂಬ ಎರಡು ಭಾಗಗಳು! ಈ ಬಗೆಯಾಗಿ ದೇವರ ಸಲುವಾಗಿ ದೊಡ್ಡ ಪಂಗಡಗಳನ್ನು ಮಾಡಿಕೊಂಡು ರಕ್ತಪಾತ ಮಾಡುವದು ನಮ್ಮ ದೇಶದಲ್ಲಿ ಒಂದು ಸಮ ಯುದಲ್ಲಿ ಇತ್ತೆಂದು ತೋರುತ್ತದೆ. ಆದರೆ ವಚನಕಾರರು ಈ ಹೊಡೆ ದಾಟವನ್ನು ಅಲ್ಲಗಳೆಯುವವರಾಗಿರುವರು. ಪರಮಾತ್ಮನೊಬ್ಬನೇ ಎಂದು ಅವರು ಸಾರಿದ್ದಾರೆ. ಉಳಿದ ದೇವತೆಗಳಿಗೆ ಒಂದೊಂದು ಸ್ಥಾನವನ್ನು ಕೊಟ್ಟು ಅವರನ್ನು ಅಲ್ಲಲ್ಲಿ ಇರಿಸಿ ಸನ್ಮಾನಿಸಿದ್ದಾರೆ. ಷಟ್‌ಸ್ಥಲದ ಮಾರ್ಗದ ಲ್ಲಿ ಈ ಬಗೆಯಾಗಿಯೇ ಈ ತೊಡಕನ್ನು ದೂರಮಾಡಿದ್ದಾರೆ. ಇದರಲ್ಲಿ ಈ ತ್ರಿಮೂರ್ತಿಗಳೆಲ್ಲರಿಗೂ ಸ್ಥಾನಗಳಿವೆ. ಆಯಾ ಸ್ಥಾನಗಳಲ್ಲಿ ಅವರು ಪೂಜ್ಯರಾಗಿರುವರು. ಈ ಪ್ರಕಾರ ಎಲ್ಲ ದೇವತೆಗಳ ಉಪಾಸಕರೆಲ್ಲರೂ ವೀರಶೈವ ಮತವನ್ನು ಸ್ವೀಕರಿಸಲಿಕ್ಕೆ ಅಣಿಮಾಡಿಕೊಂಡಿರುವರು. ಇದು ವೀರಶೈವತ್ವದಲ್ಲಿರುವ ಒಂದು ಮಾದರಿಯ ಪ್ರಸರಣ ಗುಣವು.

ಆದರೂ ಶಿವ ವಿಷ್ಣುವಿನ ಬಡಿದಾಟಗಳು ವೀರಶೈವ ವಾಙ್ಮಯ ದಲ್ಲಿ ಅಲ್ಲಲ್ಲಿ ತಲೆದೋರುತ್ತವೆ. ಈ ಬಡಿವಾಟಗಳ ಸುಳಿವು ವೀರ ಶೈವ ಪುರಾಣಗಳಲ್ಲಿ ಬಹಳ ಹೆಚ್ಚಾಗಿದೆ. ಆದರೆ ಷಟ್‌ಸ್ಥಲ ಶಾಸ್ತ್ರ ದಲ್ಲಿ ಇದಕ್ಕೆ ಇಂಬಿಲ್ಲ. ಬಸವಾದಿ ಪ್ರಮಥರು ತಮ್ಮ ವಚನಗಳಲ್ಲಿ ಇದನ್ನು ಸಮರ್ಥಿಸಿಲ್ಲ. ಆದರೆ ಅಲ್ಲಲ್ಲಿ ಈ ಜಗಳದ ವಚನಗಳು ಕಂಡುಬರುವದುಂಟು. ಆದರೆ ಅವು ಷಟ್‌ಸ್ಥಲಕ್ಕೆ ಹೊರತಾದವುಗಳು. ಅವು ಹಿಂದುಗಡೆ ಸೇರಿಸಲ್ಪಟ್ಟವೆಂದು ನಮಗೆ ತೋರುತ್ತವೆ. ಒಬ್ಬ ವಚನಕಾರನು ಈ ವಿಷಯುವನ್ನು ಕುರಿತು ಬಹು ಚನ್ನಾಗಿ ವಿವರಿಸಿ ದ್ದಾನೆ. ಅವನ ವಚನಗಳನ್ನು ಇಲ್ಲಿ ನಾವು ಕೊಡುತ್ತೇವೆ. ಅವುಗ ಳನ್ನು ನೋಡುವದರಿಂದ ನಾವು ಹೇಳುವದರ ಸತ್ಯತೆಯು ಚನ್ನಾಗಿ ನಿದರ್ಶನಕ್ಕೆ ಬರುವದು.

## ವಚನಗಳು.

ಸೃಷ್ಟಿಯನೆಲ್ಲ ಮೊಟ್ಟಿಸುವ ಬ್ರಹ್ಮನ ಶಿರವ ಚಿವುಟಿದ ಮೇಲೆ ತನ್ನ ಶಿರವ ತಾ ಹುಟ್ಟಿಸಲಿಲ್ಲವೆಂದು ಹೇಳುವಿರಿ. ಹುಟ್ಟಿಸಿದ ಮತ್ತೊಂದು ಪರಿಯಲ್ಲಿ. ಸೃಷ್ಟಿಯೊಳಗೆ ಹುಟ್ಟಿದ ಜೀವರಾಶಿಗಳನೆಲ್ಲ ರಕ್ಷಿಸುವವ ವಿಷ್ಣು ತನ್ನ ಮಗನ ಶಿರ ಹೋದ ಮೇಲೆ ತಾನು ರಕ್ಷಿಸಲಿಲ್ಲವೆಂದೆಂಬಿರಿ· ರಕ್ಷಿಸಿದ ಮತ್ತೊಂದು ಪರಿಯಲ್ಲಿ. ಅದೆಂತೆಂದೊಡೆ ಸೃಷ್ಟಿಯನೆಲ್ಲ ಹುಟ್ಟಿಸಿದ ಬ್ರಹ್ಮನ ಶಿರವ ಚಿವುಟಿದ ಈಶ್ವರನ ಕರದಲ್ಲಿ ಕಪಾಲವಾಗಿ ದೇವದಾನವ ಮಾನವರಿಗೆ ಯುದ್ಧವನು ಹಚ್ಚಿ ಕಾಡಿ ಉಂಬುವುದಕ್ಕೆ ಓಡಾಗಿ ಹುಟ್ಟಿತ್ತು ಬ್ರಹ್ಮನ ಶಿರ. ಅದು ಎಂತೆಂದೊಡೆ ಸೃಷ್ಟಿಯನೆಲ್ಲ ಹುಟ್ಟಿಸಿದ ಬ್ರಹ್ಮನ ಶಿರವ ಚಿವುಟಿದ ದೇವನ ಕರದಲ್ಲಿ ಕಪಾಲವಾಗಿ ಕೃತಯುಗ ತ್ರೇತಾಯುಗ ದ್ವಾಪರಯುಗ ಕಲಿಯುಗ ನಾಲ್ಕು ಯುಗದಲ್ಲಿ ಕಾಡಿ ಬೇಡಿ ಉಂಬುವುದಕ್ಕೆ ಓಡಾಗಿ ಹುಟ್ಟಿತ್ತು ಬ್ರಹ್ಮನ ಶಿರವು. ಅದು ಎಂತೆಂದೊಡೆ ಕೃತಯುಗದಲ್ಲಿ ಷಡು ಮುದ್ರೆಯನು ಧರಿಸಿ ಶಿವಜಂಗ ಮವೆಂದು ಹೆಸರಿಟ್ಟುಕೊಂಡು ಭಂಡರೂಪನು ತಾಳಿದ ರೇವಣಸಿದ್ಧ ನೆಂಬ ಆಚಾರ್ಯನ ಕರದಲ್ಲಿ ಕಪಾಲವಾಗಿ ಬ್ರಹ್ಮವೈಶಿಕದಲ್ಲಿ ಕಾಡಿ ಬೇಡಿ ಉಂಬುವುದಕ್ಕೆ ಓಡಾಗಿ ಹುಟ್ಟಿತ್ತು ಬ್ರಹ್ಮನ ಶಿರವು. ಸಿದ್ಧಸಾಧ ಕರನೆಲ್ಲ ಸೆರೆವಿಡಿದಿರ್ದ ಮಾಯಾಂಗನೆಯ ಮನೆಯಲ್ಲಿ ವಿಷವನುಂಡ

ದೇವನ ಕರದಲ್ಲಿ ಕಪಾಲವಾಗಿ ಪಿಶಾಚಿ ರಣಭೂತಗಳನೆಲ್ಲ ಬಿಟ್ಟು ಓಡಿಸುವುದಕ್ಕೆ ಯಂತ್ರ ತಂತ್ರ ಮಂತ್ರಕ್ಕೆ ಸಿದ್ಧಿಯಾಯಿತ್ತು ಬ್ರಹ್ಮನ ಶಿರವು. ತ್ರೇತಾಯುಗದಲ್ಲಿ ಮರುಳಸಿದ್ಧನೆಂಬ ಆಚಾರ್ಯನ ಕರದಲ್ಲಿ ಕಪಾಲವಾಗಿ ಕ್ಷಾತ್ರಧರ್ಮದಲ್ಲಿ ಬೇಡಿ ಬೇಡಿ ಉಂಬುವುದಕ್ಕೆ ಓಡಾಗಿ ಹುಟ್ಟಿತ್ತು ಬ್ರಹ್ಮನ ಶಿರವು. ದ್ವಾಪರಯುಗದಲ್ಲಿ ಸಿದ್ಧಸಾಧಕನೆಂಬ ಆಚಾರ್ಯನ ಕರದಲ್ಲಿ ಕಪಾಲವಾಗಿ ವೈಶ್ಯ ಧರ್ಮದಲ್ಲಿ ಕಾಡಿ ಬೇಡಿ ಉಂಬುವುದಕ್ಕೆ ಓಡಾಗಿ ಹುಟ್ಟಿತ್ತು ಬ್ರಹ್ಮನ ಶಿರವು. ಕಲಿಯುಗದಲ್ಲಿ ಲೋಕಪಾವನ ಮೂರ್ತಿಯೆಂಬ ಪಾಷಂಡಿಗಳ ಹೆಗಲ ಮೇಲೆ ಗುಂಡುಗಪ್ಪರವಾಗಿ ಶೂದ್ರ ಮೊದಲಾದ ಹೊಲೆ ಹದಿನೆಂಟು ಜಾತಿ ನೂರೊಂದು ಕುಲದಲ್ಲಿ ಕಾಡಿ ಬೇಡಿ ಉಂಬುವುದಕ್ಕೆ ಓಡಾಗಿ ಹುಟ್ಟಿತ್ತು ಬ್ರಹ್ಮನ ಶಿರವು. ಚಿವುಟಿದ ಮೇಲೆ ತನ್ನ ಶಿರವ ತಾನು ಹುಟ್ಟಿಸಿಕೊಳ್ಳಲಿಲ್ಲವೆಂದು ಹೇಳುವ ಹಿರಿಯತನದ ಗರ್ವರನೆಲ್ಲ ಬ್ರಹ್ಮನೇ ಹುಟ್ಟಿಸಿ ಅವರ ಹಸುವಿನ ಪ್ರೀತಿಗೆ ಬ್ರಹ್ಮನೇ ಬೋನವಾದ. ವಿಷ್ಣುವನೆ ರಕ್ಷಿಸಿ ಅವರ ತೃಷೆಯ ಪ್ರೀತಿಗೆ ತಾನೇ ಜಲವಾದನೆಂದು ಇಕ್ಕುವೆನು ಮುಂಡಿಗೆಯ. ಇದನೆತ್ತುವರುಂಟೆ ದಾಸಂಪ್ರಿಯ ರಾಮನಾಥಂ ಪ್ರಭುವೆ. ॥೧॥

ಬ್ರಹ್ಮನೇ ಘನವೆಂದು ಪೂಜೆಯ ಮಾಡುವ ಭವಿಗಳು ಒಮ್ಮೆ ನೀರೊಳು ಮುಳುಗಿ ಮುಕ್ತಿಯಿಲ್ಲದೆ ಹೋದರೆಂಬಿರಿ. ವಿಷ್ಣುವೇ ಘನವೆಂದು ಪೂಜೆಯ ಮಾಡುವ ಭವಿಗಳು ತಮ್ಮ ಭುಜವ ತಾವು ಸುಡಿಸಿಕೊಂಡು ಮುಕ್ತಿಯಿಲ್ಲದೆ ಹೋದರೆಂಬಿರಿ. ನಮ್ಮ ಶಿವನೇ ಘನವೆಂದು ಪೂಜೆಯ ಮಾಡುವ ಅಣ್ಣಗಳಿಗೆ ಕೈಲಾಸದ ಪದವಾಯಿತ್ತು ಎಂದು ಹೇಳುವ ಕುನ್ನಿಗಳು ನೀವು ಕೇಳಿರೋ. ಅದು ಎಂತೆಂದೊಡೆ ಬ್ರಹ್ಮ ವಿಷ್ಣುಗಳ ಅಧಿಕಾರವಿಡಿದು ಒಮ್ಮನವಾಗಿ ನಮ್ಮ ಶಿವನೆ ಘನವೆಂದು ಪೂಜೆಯ ಮಾಡುವ ಭಕ್ತರ ಭಕ್ತಿಭಾವಕ್ಕೆ ಮೆಚ್ಚಿ ಕೈಲಾಸಪದವು ಆಯಿತ್ತು ಕಾಣಿರೊ. ಅದು ಎಂತೆಂದೊಡೆ ಹರಿ ಎಂಬ ಜಲವ ತಂದು ಹರನ ಮಂಡೆಯ ಮೇಲೆ ಎರೆಯಲು, ಬ್ರಹ್ಮನೆಂಬ ಬೋನವ ತಂದು ನೈವೇದ್ಯವ ಹಿಡಿಯಲು ಶಿವಭಕ್ತರಿಗೆ ಪ್ರಸಾದವಾಯಿತ್ತು ಕಾಣಿರೊ. ಅದು ಎಂತೆಂದೊಡೆ ಹಸಿದು ಬಳಲಿ ಬಂದವರಿಗೆ ಹರಿಯೆಂಬ ಜಲವ ಕೊಟ್ಟು ಬ್ರಹ್ಮನೆಂಬ ಬೋನವ ನೀಡಲು ಮೂರು ಲೋಕಕ್ಕೆ ಪರಹಿತಾರ್ಥನೆಂಬ ಪ್ರಭೆ ಬೆಳಗು ತೋರಿತ್ತು ಕಾಣಿರೊ. ಅದು ಎಂತೆಂದೊಡೆ ಒಂದೇ ಏಕಮೂರ್ತಿಯು, ತ್ರಿಮೂರ್ತಿಗಳಾಗಿ ಬಂದು ಆನೆ ಮೊದಲು

ಇರುವೆ ಕಡೆ ಎಂಭತ್ತುನಾಲ್ಕು ಲಕ್ಷ ಜೀವರಾಶಿಗಳನೆಲ್ಲ ಹುಟ್ಟಿಸುವುದಕ್ಕೆ ಬ್ರಹ್ಮನೆಂಬ ಮೂರ್ತಿಯಾದ. ರಕ್ಷಿಸುವುದಕ್ಕೆ ವಿಷ್ಣುಮೂರ್ತಿಯಾದ. ಭಕ್ಷಿಸುವುದಕ್ಕೆ ರುದ್ರಮೂರ್ತಿಯಾದನೆಂದು ನಾಲ್ಕು ವೇದ, ಆರು ಶಾಸ್ತ್ರ, ಹದಿನೆಂಟು ಪುರಾಣ, ಇಪ್ಪತ್ತೆಂಟು ದಿವ್ಯಾಗಮ, ಮೂವತ್ತೆರಡು ಉಪನಿಷತ್ತು ಶಾಸ್ತ್ರಂಗಳು ಪೇಳುತ್ತಿಹವು. ಇದನು ಅರಿಯದ ಅಜ್ಞಾನಿಗಳು ಹರಿಸುರ ಬ್ರಹ್ಮಾದಿಗಳು ನಮ್ಮ ಹರನಿಗೆ ಸರಿ ಇಲ್ಲವೆಂದು ಹೇಳುವ ಕಿರುಕುಳು ಪಥದ ನರಕಿಗಳ ಹಸಿವಿನ ಪ್ರೀತಿಗೆ ಬ್ರಹ್ಮನೇ ಬೋನವಾದ. ತೃಷೆಗೆ ಹರಿಯೇ ಜಲವಾದನೆಂದು ಇಕ್ಕುವೆನು ಮುಂಡಿಗೆಯ. ಇದನೆತ್ತುವರುಂಟೇನೋ ದಾಸಂ ಪ್ರಿಯ ರಾಮನಾಥಂ ಪ್ರಭುವೇ ॥೨॥

ನಾವು ಹರನ ಭಕ್ತರು, ಹರಿಯ ಪೂಜೆಗೊಂಡು ಹರಿ ಶಬ್ದವ ನೆನೆಯಲಾಗದು ಎಂದು ಹೇಳುವ ಅಣ್ಣಗಳಿರೇ, ಹರಿಯೇ ನಿಮ್ಮ ಶಿರದಲ್ಲಿ ಶಿವಲಿಂಗವಾಗಿರ್ಪುದು. ಹರಿ ಶಬ್ದವೆ ನಿಮಗೆ ಮಂತ್ರವಾಗಿರ್ಪುದು. ಅದು ಎಂತೆಂದೊಡೆ ಹರನೆ ನಿರಾಕಾರ ಮಹಿಮೆಯಲ್ಲಿ ಹರಿಯಾದ. ಹರಿಯೇ ನಿರಾಕಾರ ಮಹಿಮೆಯಲ್ಲಿ ಬ್ರಹ್ಮನಾದ. ಮೂರು ಮೂರ್ತಿಗಳು ಒಂದುಗೂಡಲಿಕ್ಕೆ ಹರಿಹರ ದೇವರೆಂಬುವುದು ಬೆರಿಕೆಯ ಶಿವಲಿಂಗ ದೇವವಾಯಿತ್ತು ಕಾಣಿರೊ. ಹರಿಹರ ಶಬ್ದವೆ ನಿಮಗೆ ಗುರುಮಂತ್ರವಾಗಿಪ್ಪುದು. ಅದು ಎಂತೆಂದೊಡೆ ಆಕಾರ ನಿರಾಕಾರ ಏನೂ ಇಲ್ಲದಂದಿಗೆ ಓಂಕಾರವೆಂಬುವದೊಂದೇ ಅಕ್ಷರ ಹುಟ್ಟಿ ಪರಬ್ರಹ್ಮನಾದ. ಅದರ ಒಡಲೊಳಗೆ ಹುಟ್ಟಿದ ನಕಾರವೆಂಬ ಅಕ್ಷರವೆ ಬ್ರಹ್ಮನಾದ, ಮಕಾರವೆಂಬ ಅಕ್ಷರ ಹುಟ್ಟಿ ವಿಷ್ಣುವಾದ. ಶಿಕಾರವೆಂಬ ಅಕ್ಷರ ಹುಟ್ಟಿ ರುದ್ರನಾದ. ವಕಾರವೆಂಬ ಅಕ್ಷರ ಹುಟ್ಟಿ ಈಶ್ವರನಾದ. ಯಕಾರವೆಂಬ ಅಕ್ಷರ ಹುಟ್ಟಿ ಸದಾಶಿವನಾದ. ಇಂತೀ ಇವು ಆರು ಅಕ್ಷರ ಕೂಡಲಿಕ್ಕೆ ಓಂನಮಃಶಿವಾಯ ಎಂಬ ಷಡಕ್ಷರ ಗುರುಮಂತ್ರವಾಗಿರ್ಪುದು ಕಾಣಿರೋ. ಅದು ಎಂತೆಂದೊಡೆ ಹರಿಹರ ದೇವರೆಂಬ ಬೆರಿಕೆಯ ಶಿವಲಿಂಗ ದೇವರನೆ ನಿಮ್ಮ ಶಿರದಲ್ಲಿ ಕಟ್ಟಿ ಕರದಲ್ಲಿ ಹಿಡಿದುಕೊಂಡು ಹರಿಹರ ಶಬ್ದವೆಂಬ ಗುರುಮಂತ್ರವನೆ ನೆನೆನೆನೆದು ಪೂಜೆ ಮಾಡುತಿರ್ಪರು ಕಾಣರೊ. ಅದು ಎಂತೆಂದೊಡೆ ಹರಿಹರ ದೇವರೆಂಬುವ ಬೆರಿಕೆ ಶಿವಲಿಂಗ ದೇವರಿ ಕಾಲಕರ್ಮವ ಗೆಲಿದ. ಅಧ್ಯಾತ್ಮವ ತಿಳಿವಂತೆ ಸಿದ್ಧಸಾಧಕರಿಗೆಲ್ಲ ಪ್ರಾಣಲಿಂಗವಾಯಿತ್ತು ಕಾಣಿರೊ. ವೇದಾಂತವನು ಓದಿದ ಆಚಾರ ಧರ್ಮ

ವುಳ್ಳವರಿಗೆಲ್ಲ ಶಿಖೆಯಲ್ಲಿ ಪೂಜೆಯು ಮಾಡಿದರೇನಯ್ಯ? ಹರಿಹರ ದೇವರೆಂಬುವ ಬೆರಿಕೆಯು ಶಿವಲಿಂಗ ದೇವರು ಒಂದೇ ಕಾಣಿರೊ. ಸ್ಥಾವರ ಲಿಂಗವೆಂದು ಗುಡಿಯಲ್ಲಿ ಪೂಜೆಯು ಮಾಡಿದರೇನಯ್ಯ? ಹರಿಹರ ದೇವರೆಂಬುವ ಬೆರಿಕೆಯು ಶಿವಲಿಂಗದೇವರು ಒಂದೆ ಕಾಣಿರೊ. ಇಷ್ಟಲಿಂಗ ವೆಂದು ಶಿರದಲ್ಲಿ ಕಟ್ಟಿ ಕರದಲ್ಲಿ ಪೂಜೆಯು ಮಾಡಿದರೇನಯ್ಯ? ಹರಿಹರ ದೇವರೆಂಬುವ ಬೆರಿಕೆಯು ಶಿವಲಿಂಗ ದೇವರು ಒಂದೇ ಕಾಣಿರೊ. ಅದು ಎಂತೆಂದೊಡೆ ನಾವು ಹರಭಕ್ತರು ಹರಿಯು ಪೂಜೆಯು ಕೊಂಡು ಹರಿ ಶಬ್ದವ ನೆನೆಯಲಾಗದು ಎಂದು ಹೇಳುವ ಅಣ್ಣಗಳು ಹರಿಹರ ದೇವರೆಂಬುವ ಬೆರಿಕೆಯು ಶಿವಲಿಂಗದೇವರು ಹರಿ ಶಬ್ದವೆಂಬ ಗುರುಮಂತ್ರವ ನೆನೆವುತಿರ್ಪರು. ಇಂತಿವರಿಗೆ ಗುರುಮಂತ್ರವಾಗಿರ್ಪುದು ಕಾಣಿರೊ ಎಂದು ಇಕ್ಕುವೆನು ಮುಂಡಿಗೆಯು. ಇದನೆತ್ತುವರುಂಟೇ ದಾಸಂ ಪ್ರಿಯುರಾಮ ನಾಥಂ ಪ್ರಭುವೆ ॥೩॥

ಎಲ್ಲ ಪೇವರಿಗೆ ವಲ್ಲಭ ನಮ್ಮ ಏಕೋ ದೇವನೇ ದೈವವೆಂದು ಹಾಕುವಿರಿ ಮುಂಡಿಗೆಯು. ಏಕೊದೇವನೆ ದೈವ ಸಹಜ. ಏಕೋದೇವ ಮೂರು ಅಕ್ಷರ ಮೂರ್ತಿಗಳಾಗಿ ಬಂದು ಮೂರು ಲೋಕವನು ಹುಟ್ಟಿಸಿದ ಕಾಣಿರೋ. ಆನೆ ಮೊದಲು ಇರುವೆ ಕಡೆ ಎಂಬತ್ತುನಾಲ್ಕು ಲಕ್ಷ ಜೀವರಾಶಿಗಳನು ಹುಟ್ಟಿಸುವುದಕ್ಕೆ ಬ್ರಹ್ಮನೆಂಬುವ ಮೂರ್ತಿಯಾದ. ರಕ್ಷಿಸುವುದಕ್ಕೆ ವಿಷ್ಣುವೆಂಬುವ ಮೂರ್ತಿಯಾದ. ಭಕ್ಷಿಸುವುದಕ್ಕೆ ರುದ್ರನೆಂಬುವ ಮೂರ್ತಿಯಾದ. ಮೂರು ಮೂರ್ತಿಗಳು ಕೂಡಲಿಕ್ಕೆ ಈಶ್ವರನೆಂಬುವದೊಂದು ಆಕಾರಲಿಂಗ ಮೂರ್ತಿಯಾಯಿತ್ತು ಕಾಣಿರೋ. ಆ ಲಿಂಗವನು ತೆಗೆದುಕೊಂಡು ನರರು ಸುರರು ಮೂವತ್ತುಮೂರು ಕೋಟಿ ದೇವರ್ಕಗಳೆಲ್ಲರು ತಮ್ಮ ಜಾತಿ ಧರ್ಮದ ನೀತಿ ಆಚಾರದ ನಡೆನುಡಿಯನು ಅರಿತು ಪೂಜೆಯು ಮಾಡಿದರೇನಯ್ಯ? ಲಿಂಗಮಯವೆಂಬುದೊಂದೇ ಕಾಣಿರೊ. ಈ ಕಲಿಯುಗದಲ್ಲಿ ಹುಟ್ಟಿದ ಮನುಜರು ಆ ಲಿಂಗವನು ತಮ್ಮ ಶಿರವಲ್ಲಿ ಕಟ್ಟಿಕೊಂಡು ಶಿಖೆಯಲ್ಲಿ ಪೂಜೆಯು ಮಾಡಿದರೆ ಶಿಖೆಯು ಲಿಂಗವೆಂಬುವರು. ಗುಡಿಯಲ್ಲಿ ಪೂಜೆಯು ಮಾಡಿದರೆ ಸ್ಥಾವರ ಲಿಂಗವೆಂಬುವರು. ಕೊರಳಲ್ಲಿ ಇದ್ದರೆ ಇಷ್ಟಲಿಂಗವೆಂಬುವರು. ಈ ಹೀಗೆ ಬೇರೆ ಬೇರೆ ಭಿನ್ನವನು ಮಾಡಿ ನುಡಿವ ಖುಲ್ಲ ಕುಹಕ ಮರುಳ ಮನುಜರು ಮಾಡಿದ ಭಕ್ತಿ ಏನಾಯಿತ್ತು ಎಂದರೆ ತಾಯ ಗರ್ಭದಲ್ಲಿ

ಹುಟ್ಟಿ ತಾಯ ಯೋನಿಯಲ್ಲಿ ಬಂದು ತಾಯಿಯ ಭೋಗಿಸಿದಂತಾ ಯಿತ್ತು ಕಾಣಿರೋ ದಾಸಂಪ್ರಿಯರಾಮನಾಥಂ ಪ್ರಭುವೆ ॥೪||

ಹರ ಹೆಚ್ಚು ಹರಿ ಕಡಿಮೆ ಎಂದು ಜರಿದಾಡುವಂತಹ ನರಕೀಟಕರು ನೀವು ಕೇಳಿರೋ. ಹರನ ಮಗ ಹರಿಯಾದ. ಹರಿಯ ಮಗ ಬ್ರಹ್ಮನಾದ. ಇರುವೆ ಕಡೆ ಆನೆ ಮೊದಲು ಎಂಬತ್ತುನಾಲ್ಕುಲಕ್ಷ ಜೀವ ರಾಶಿಗಳೆಲ್ಲ ಬ್ರಹ್ಮನಿಂದಾದವು ಕಾಣಿರೊ. ಉಂಬಲ್ಲಿ ಉಡುವಲ್ಲಿ ಬ್ರಹ್ಮ. ಕೊಂಬಲ್ಲಿ ಕೊಡುವಲ್ಲಿ ಬ್ರಹ್ಮ. ಭಕ್ತಿ ಮಾಡುವಲ್ಲಿ ಬ್ರಹ್ಮ. ಯುಕ್ತಿ ಹೇಳುವಲ್ಲಿ ಬ್ರಹ್ಮ. ಮುಕ್ತಿಪದವ ಪಡೆವಲ್ಲಿ ಬ್ರಹ್ಮಮಯ ತಾನೆ ಆಗಿಹ ಕಾಣಿರೋ. ಹರನು ಹನ್ನೊಂದು ಅವತಾರವ ತಾಳಿ ದೇವದಾನವ ಮಾನವರನೆಲ್ಲ ಸಂಹಾರವ ಮಾಡಿ ಹರಿಯಾಗಿ ಬಂದ ಕಾಣಿರೋ. ಹರಿ ಹತ್ತವತಾರವ ತಾಳಿ ವರಾಹಕೆ ಸರಿಯಾಗಿ ಬಂದ ನರಕಾಸುರನ ಸಂಹಾರ ಮಾಡಿ ನಾರಾಯಣನಾದ ಕಾಣಿರೊ. ಹರನೇ ಗುರುವಾದ ಹರಿಯೇ ಭಕ್ತನೆಂದು ಅರಿತು ನೋಡುವ ಅಣ್ಣಗಳ ಅಂತರಂಗದಲ್ಲಿ ಹರಿಹರರು ಏಕಾಕಾರವಾಗಿರ್ಪರು ಕಾಣಿರೊ. ಹೀಗೆಂದು ನಾಲ್ಕು ವೇದ ಆರು ಶಾಸ್ತ್ರ ಇಪ್ಪತ್ತೆಂಟು ದಿವ್ಯಾಗಮ ಮೂವತ್ತೆರಡು ಉಪನಿಷತ್ತು ಶಾಸ್ತ್ರಂಗಳು ಪೇಳುತ್ತಿಹವು. ಇದನರಿತು ಅರಿಯದೆ ಹರ ಹೆಚ್ಚು ಹರಿ ಕಡಿಮೆಯೆಂದು ಜರಿದಾಡುವಂಥ ನರಕೀಟಕರ ಮಾತ ಕರ್ಣದಲ್ಲಿ ಕೇಳಲಾಗದು ಕಾಣಾ ದಾಸಂಪ್ರಿಯ ರಾಮನಾಥಂ ಪ್ರಭುವೆ ॥೫॥

ನಾವು ಹರಭಕ್ತರು ಹರಿಯ ಪೂಜೆಗೊಂಡು ಹರಿಗೆ ಶರಣೆನ್ನಲಾಗದು ಎಂದು ಹೇಳುವ ಅಣ್ಣಗಳಿರೇ, ನಿಮಗೆ ಆಧಾರವೆಂಬ ಚಕ್ರದಲ್ಲಿ ಬ್ರಹ್ಮನೆಂಬ ಪುರುಷ ಸರಸ್ವತಿ ಎಂಬ ಶಕ್ತಿ ಇವರಿಬ್ಬರು ಸತಿಪತಿಗಳಾಗಿಪ್ಪರು ಕಾಣಿರೋ. ನಿಮ್ಮ ಸ್ವಾಧಿಷ್ಠಾನವೆಂಬ ಚಕ್ರದಲ್ಲಿ ವಿಷ್ಣುವೆಂಬ ಪುರುಷ ಶ್ರೀ ಲಕ್ಷ್ಮಿ ಎಂಬ ಶಕ್ತಿ ಇವರಿಬ್ಬರು ಸತಿಪತಿಗಳಾಗಿಪ್ಪರು ಕಾಣಿರೊ. ನಿಮಗೆ ಮಣಿಪೂರಕ ಚಕ್ರದಲ್ಲಿ ರುದ್ರನೆಂಬ ಪುರುಷ ಪಾರ್ವತೀದೇವಿ ಎಂಬ ಶಕ್ತಿ ಇವರಿಬ್ಬರು ಸತಿಪತಿಗಳಾಗಿರುತ್ತಿಹರು ಕಾಣಿರೊ. ನಾವು ಹರನ ಭಕ್ತರು ಹರಿಯ ನೆನೆಯಲಾಗದು ಎಂಬುವ ಅಣ್ಣಗಳ ಅಂಗದೊಳಗೆ ಹರಿಯೇ ನೆಲೆಗೊಂಡು ಇಹನು. ಹರಗೆ ವಂದಿಸಿ ಹರಿಯ ನಿಂದಿಸುವಂಥ ಹಂದಿಗಳ ಮುಖವ ನೋಡಲಾಗದು ಕಾಣಾ ದಾಸಂಪ್ರಿಯ ರಾಮನಾಥಂ ಪ್ರಭುವೆ ॥೬॥

ಬ್ರಹ್ಮನೇ ಘವಿ ಎಂದು ಜರಿದಾಡಿದರೆನಯ್ಯಾ? ಬ್ರಹ್ಮಂಗೆ ಕುಂದಾಯಿತ್ತೆ? ಕುಂದಾಗಲಿಲ್ಲ. ಬ್ರಹ್ಮನೇ ಭವಿ ಎಂದು ಜರಿದಾಡುವ ಕುನ್ನಿಗಳ ತೃಷೆಯು ಕಳೆಯಬೇಕೆಂದು ಬ್ರಹ್ಮದೇವರೇ ಅನ್ನಪ್ರಸಾದವಾಗಿ ಬಂದ ಕಾಣಿರೊ. ವಿಷ್ಣುವೇ ಭವಿ ಎಂದು ಜರಿದಾಡಿದರೇನಯ್ಯಾ? ವಿಷ್ಣುವಿಂಗೆ ಕುಂದಾಯಿತ್ತೆ? ಕುಂದಾಗಲಿಲ್ಲ. ವಿಷ್ಣುವೇ ಭವಿ ಎಂದು ಜರಿದಾಡುವ ಕುನ್ನಿಗಳ ತೃಷೆಯು ಕಳೆಯಬೇಕೆಂದು ಹರಿ ಎಂಬ ಜಲವಾಗಿ ಬಂದ ಕಾಣಿರೋ. ಬ್ರಹ್ಮನೆಂಬ ಬೋನವನುಂಡು ಹರಿ ಎಂಬ ಜಲವನು ಭಕ್ಷಿಸಿ ಬ್ರಹ್ಮ ಭವಿ ವಿಷ್ಣು ಭವಿ ಎಂದು ಜರಿದಾಡುವಂಥ ಕುನ್ನಿಗಳು ಮಾಡಿದ ಭಕ್ತಿ ಏನಾಯಿತ್ತು ಎಂದರೆ ಬೀದಿಯೊಳಗೆ ಬಿದ್ದಿರುವ ಯಕ್ಕಡವ ಹಾದಿಯೊಳಗೆ ಹೋಗುವ ನಾಯಿ ಕಂಡುಕೊಂಡು ತಂದು ಓಡಿ ಹೋದ ಪರಿಯಾಯಿತ್ತು ಕಾಣಿರೊ. ಅದ ಕಂಡು ನಗುತಿದ್ದಾತ ದಾಸಂಪ್ರಿಯ ರಾಮನಾಥಂ ಪ್ರಭುವೆ. ॥೭॥

ಹರ ಘನವೆಂದು ಪೂಜೆಯ ಮಾಡುವ ಅಣ್ಣಗಳ ಅಂಗದೊಳ ಹೊರಗೆ ಹರಿಯೇ ನೆಲೆಗೊಂಡಿರ್ಪನಯ್ಯಾ. ಹರಿಯೇ ಘನವೆಂದು ಪೂಜೆಯ ಮಾಡುವಣ್ಣಗಳ ಅಂಗದ ಒಳಹೊರಗೆ ಹರನೇ ನೆಲೆಗೊಂಡಿರ್ಪನಯ್ಯಾ. ಅದು ಎಂತೆಂದೊಡೆ ಹರನೇ ಘನವೆಂದು ಪೂಜೆಯ ಮಾಡುವ ಅಣ್ಣಗಳ ಆಧಾರ ಚಕ್ರದಲ್ಲಿ ಬ್ರಹ್ಮ ನೆಲೆಗೊಂಡಿರ್ಪನಯ್ಯಾ. ಸ್ವಾಧಿಷ್ಠಾನ ಚಕ್ರದಲ್ಲಿ ಹರಿಯೇ ನೆಲೆಗೊಂಡಿರ್ಪನಯ್ಯಾ. ಶಿಖಾಚಕ್ರದಲ್ಲಿ ಹರನೇ ನೆಲೆಗೊಂಡಿರ್ಪನಯ್ಯಾ. ಅದೆಂತೆಂದೊಡೆ ಹರಗು ಹರಿಗು ಸರಿ ಇಲ್ಲವೆಂದು ಹೇಳುವ ಅಣ್ಣಗಳ ಶಿರದಲ್ಲಿ ಕಟ್ಟಿ ಕರದಲ್ಲಿ ಪೂಜೆಯ ಮಾಡುವ ಲಿಂಗದ ಆಧಾರಚಕ್ರವೆ ಬ್ರಹ್ಮ. ಸ್ವಾಧಿಷ್ಠಾನ ಚಕ್ರವೇ ಹರಿ, ಶಿಖಾಚಕ್ರವೇ ಹರ. ಅದು ಎಂತೆಂದೊಡೆ ನಿರಾಕಾರ ಪರಬ್ರಹ್ಮನೆಂಬ ಏಕಮೂರ್ತಿಯೇ ತ್ರಿಮೂರ್ತಿಯಾಗಿ ತ್ರಿಮೂರ್ತಿಯೇ ಏಕಮೂರ್ತಿಯಾಗಿ ಬಂದು ಹರಿಗೆ ಸರಿ ಇಲ್ಲವೆಂದು ಹೇಳುವ ಅಣ್ಣಗಳ ಅಂಗದ ಒಳಹೊರಗೆ ಪೂಜೆಗೊಂಬುವ ಪರಿ ಭೇದವನರಿಯದೆ ನರನಾಯಕ ಸುರನಾಯಕರೆಲ್ಲ ಕಾಲಚಕ್ರವೆಂಬ ಪ್ರಳಯಕ್ಕೆ ಒಳಗಾಗಿ ಹೋದರು. ಅದು ಎಂತೆಂದೊಡೆ ಹರನೇ ಘನವೆಂದು ಪೂಜೆಯ ಮಾಡುವ ವಾದಿಗಳು ಸ್ಥಿರವಿಲ್ಲದೆ ಧುರಮರಣಕ್ಕೆ ಒಳಗಾಗಿ ಎಂಬತ್ತುನಾಲ್ಕುಲಕ್ಷ ಜೀವರಾಶಿಗಳ ಯೋನಿಯಲ್ಲಿ ಹುಟ್ಟಿ ಚರಿಸಾಡುವ ಕಾಲ ಮುರಿಯಿತ್ತೆ? ಮುರಿ

ಯಲಿಲ್ಲ. ಹರಿಯೇ ಘನವೆಂದು ಪೂಜೆಯ ಮಾಡುವ ವಾದಿಗಳು ಸ್ಥಿರವಿಲ್ಲದೆ ಧುರಮರಣಕ್ಕೆ ಒಳಗಾಗಿ ಎಂಬತ್ತುನಾಲ್ಕುಲಕ್ಷ ಜೀವರಾಶಿಗಳ ಯೋನಿಯಲ್ಲಿ ಹುಟ್ಟಿ ಚರಿಸಾಡುವ ಕಾಲ ಮುರಿಯಿತ್ತೆ? ಮುರಿಯಲಿಲ್ಲ. ಅದು ಎಂತೆಂದೊಡೆ ಹರಿಹರ ಬ್ರಹ್ಮಾದಿಗಳು ಸರಿಯಲ್ಲವೆಂದು ಹೇಳುವ ಅಣ್ಣಗಳ ಸರ್ವಾಂಗದಲ್ಲಿ ಹರಿಹರ ಬ್ರಹ್ಮಾದಿಗಳು ಸ್ವನೆಲೆಗೊಂಡಿರ್ಪರಯ್ಯ. ಅದು ಎಂತೆಂದೊಡೆ ನಡುಪಾದವು ಬ್ರಹ್ಮ, ಕಣಕಾಲವು ಹರಿ, ತೊಡೆಯೇ ಹರ, ನೀಡಿ ಮಾಡುವ ಹಸ್ತವೇ ಬ್ರಹ್ಮ, ಹಸ್ತ ಕಂಬಿಯೇ ಹರಿ, ತೋಳೇ ಹರ, ನೋಡುವ ನೇತ್ರದ ಕೆಂಪೇ ಬ್ರಹ್ಮ, ಕಪ್ಪೇ ಹರಿ, ಬಿಳಿದೇ ಹರ, ಒಳಗೆ ಸುಳಿದಾಡುವ ಛಾಯಾ ಮಾಯದ ಪುರುಷನೆ ಪರಬ್ರಹ್ಮ. ಅದು ಎಂತೆಂದೊಡೆ ಹರಿಹರ ಬ್ರಹ್ಮಾದಿಗಳು ಸರಿಯಾಗಿ ಬಂದು ಎಂಬತ್ತುನಾಲ್ಕುಲಕ್ಷ ಜೀವರಾಶಿಗಳ ಡಿಂಬವೆಂಬುವ ಮನೆಯೊಳಗೆ ಪೂಜೆಗೊಂಬುವ ಭೇದವೆಂತೆಂದೊಡೆ ನಿರಾಕಾರ ಪರಬ್ರಹ್ಮವೇ ಹರನಾದ, ಹರನ ವಾಮಭಾಗವೆ ಹರಿಯಾದ. ಹರಿಯಿಂದ ಬ್ರಹ್ಮನಾದ. ಮೂರು ತ್ರಿಮೂರ್ತಿಗಳು ನಿರಾಕಾರ ಪರಬ್ರಹ್ಮನ ಗರ್ಭದಲ್ಲಿ ಹುಟ್ಟಿದ ಬ್ರಹ್ಮಬೀಜವೆಲ್ಲ ಒಂದೇ ಸರಿ ಎಂದು ಇಕ್ಕುವೆನು ಮುಂಡಿಗೆಯ. ಇದನೆತ್ತುವರುಂಟೇ ನೋಡಾ ದಾಸಂಪ್ರಿಯ ರಾಮನಾಥಂ ಪ್ರಭುವೆ ॥೮॥

---

# ಕರಣಹಸುಗೆ ಮತ್ತು ಷಟ್‌ಸ್ಥಲ.

→※·:(೦)·:※←

ವೀರಶೈವರು ಎಲ್ಲದರಲ್ಲಿ ತಮ್ಮದೊಂದು ವಿಶಿಷ್ಟತೆಯನ್ನುಂಟುಮಾಡಿಕೊಂಡಿರುವರು. ಅವರು ತಮ್ಮ ಆಚಾರದಲ್ಲಿ, ಪದ್ಧತಿಯಲ್ಲಿ, ನಡೆನುಡಿಯಲ್ಲಿ, ವಾಙ್ಮಯದಲ್ಲಿ ಒಂದೊಂದು ರೀತಿಯನ್ನು ಇಟ್ಟುಕೊಂಡಿರುವರು. ಇದು ಬೇರೆಯವರಲ್ಲಿ ಕಂಡುಬರುವದಿಲ್ಲ. ಅವರ ಧರ್ಮದಲ್ಲಿ ಬ್ರಾಹ್ಮಣರ ತತ್ವಗಳು ಅಡಕವಾಗಿವೆ. ಹಾಗೆಯೇ ದ್ರಾವಿಡ ಶೈವರ ಪದ್ಧತಿಗಳೂ ಸೇರಿವೆ. ಅಲ್ಲಲ್ಲಿ ಜೈನರ ಪದ್ಧತಿಗಳೂ ಕಾಣುತ್ತವೆ. ಹೀಗೆ ವೀರಶೈವತ್ವಕ್ಕೆ ಒಂದು ವಿಶಿಷ್ಟ ಸ್ವರೂಪು ಬಂದಿದೆ. ಹೀಗೆ ಮಾಡಿಕೊಂಡಿದ್ದು ಅದರ ಜೀವಂತತನದ ಲಕ್ಷಣವು. ಮನುಷ್ಯನು ಉಷ್ಣಪ್ರದೇಶದಲ್ಲಿ ಇರು

ವಂತೆ ಅತಿ ಚಳಿ ಪ್ರದೇಶದಲ್ಲಿಯೂ ಇರುತ್ತಾನೆ. ಯಾಕೆಂದರೆ ಆಯಾ ರೀತಿಯಾಗಿ ಜಾಣತನದಿಂದ ಪರಿಸ್ಥಿತಿಗೆ ಅನುಸರಿಸಿ ತನಗೆ ಅನುವುಮಾಡಿಕೊಳ್ಳುತ್ತಾನೆ. ಜೀವಂತ ಸಮಾಜದ ಮತ್ತು ಧರ್ಮದ ಸ್ಥಿತಿಯು ಹೀಗೆಯೇ ಇದೆ. ಪರಿಸ್ಥಿತಿಗೆ ಅನುಸರಿಸಿ ಇರುವದರಲ್ಲಿಯೇ ಅದರ ಸ್ಥಿರತೆಯು ಇರುತ್ತದೆ.

ವೀರಶೈವರಲ್ಲಿ ಷಟ್‍ಸ್ಥಲವು ಒಂದು ವಿಶಿಷ್ಟ ಪದ್ಧತಿಯಾಗಿದೆ. ಇದರ ಮೂಲತತ್ವಗಳು ಆರ್ಯಧರ್ಮದ ವಿಚಾರಗಳನ್ನು ಬಿಟ್ಟಿಲ್ಲ. ಅವುಗಳನ್ನು ಹಿಡಿದುಕೊಂಡೇ ಇರುತ್ತದೆ. ಮತ್ತು ಇದು ಮನುಷ್ಯನು ಹ್ಯಾಗೆ ಮೇಲ್ತರಗತಿಗಳನ್ನು ಹೊಂದಬೇಕೆಂಬುದನ್ನು ಸೂಚಿಸುತ್ತದೆ. ಆದರೆ ಹೀಗೆ ಇದು ಆಲೋಚಿಸಿ ಬರೇ ಮಾತನಾಡುವ ವಿಷಯವಲ್ಲ. ಅದು ನಡತೆಯ ವಿಷಯವಾಗಿದೆ. ವೀರಶೈವ ಶಿವಶರಣರು ಬರೇ ತಿಳಿದು ಜ್ಞಾನಿಗಳೆನಿಸಿಕೊಳ್ಳುವದರಲ್ಲಿ ಹೆಮ್ಮೆಬಡುವದಿಲ್ಲ. ಅವರು ಆ ಜ್ಞಾನವನ್ನು ತಮ್ಮ ನಡೆಯಲ್ಲಿ ತಂದುಕೊಳ್ಳುವದಕ್ಕೆ ಮಹತ್ವಕೊಡುತ್ತಾರೆ. ಷಟ್‍ಸ್ಥಲವು ಈ ನಡೆಯ ವಿಷಯವನ್ನೇ ಹೇಳುತ್ತದೆ. ವೀರಶೈವವು ಅನುಭವದ ವಿಷಯವಾಗಿದೆ. ಷಟ್‍ಸ್ಥಲದ ಗ್ರಂಥಗಳಲ್ಲಿ ತರ್ಕ, ವಾದ, ಊಹೆ, ಉತ್ತರಪಕ್ಷ, ಪೂರ್ವಪಕ್ಷ, ಇಂಥ ವಾದವಿವಾದ ವಿಷಯಗಳಿಗೆ ಇಂಬು ಇರುವದಿಲ್ಲ. ಆದರೆ ಮನುಷ್ಯನು ಹ್ಯಾಗೆ ನಡೆಯಬೇಕು, ಮನಸ್ಸನ್ನು ಹ್ಯಾಗೆ ಶುದ್ಧಪಡಿಸಬೇಕು, ತನ್ನಲ್ಲಿ ಪರಮಾತ್ಮನ ಗುಣಗಳನ್ನು ಹ್ಯಾಗೆ ಬರಮಾಡಿಕೊಳ್ಳಬೇಕು, ಇಂಥ ವಿಷಯಗಳೇ ಇವುಗಳಲ್ಲಿ ಇವೆ. ಬೌದ್ಧ ಧರ್ಮದಲ್ಲಿ ಮನುಷ್ಯನ ನಡೆಯ ವಿಷಯಗಳು ತುಂಬಿವೆ. ಕ್ರಿಸ್ತನಾದರೂ ಇಂಥವನ್ನೇ ಉಪದೇಶಿಸುತ್ತಾನೆ. ಬೈಬಲ್ಲ ಮತ್ತು ಧಮ್ಮಪದಗಳು ಇಂಥ ನಡೆನುಡಿಗಳ ಸಂಬಂಧವಾಗಿಯೇ ಮಹತ್ವವನ್ನು ಹೊಂದಿವೆ. ಹಾಗೆಯೇ ಶಿವಶರಣರ ವಚನಗ್ರಂಥಗಳೂ ಕೂಡ ಭಕ್ತನ ನಡೆಯ ವಿಷಯವಾಗಿ ಬಹಳ ವಿವೇಚಿಸಿ ಪ್ರಸಿದ್ಧಿಪಡೆದಿವೆ.

ಶಿವಶರಣರು ಈ ರೀತಿಯನ್ನು ಅನುಸರಿಸುವರಾದ್ದರಿಂದ ಅವರು ಮನುಷ್ಯನ ಸ್ವಭಾವವನ್ನು ಪರೀಕ್ಷಿಸಬೇಕಾಯಿತು. ಮನುಷ್ಯನ ಸ್ವಭಾವ ವರ್ಣನೆ ಎಂದರೆ ನೀತಿಶಾಸ್ತ್ರವೇ ಇರುತ್ತದೆ. ವಚನಕಾರರ ವಚನಗಳು ನೀತಿಯ ವಿವೇಚನೆಗಳಿಂದ ತುಂಬಿಹೋಗಿವೆ. ಇವುಗಳು ಒಂದಿಲ್ಲ

ಒಂದು ರೀತಿಯಿಂದ ಅಂದರೆ ಆಯಾ ಸ್ಥಳಕ್ಕೆ ಅನುಸರಿಸಿ ಈ ನೀತಿ ಯನ್ನೇ ಹೇಳುತ್ತವೆ. ಹೀಗೆ ಶಿವಶರಣರ ಉಕ್ತಿಗಳು ವ್ಯವಹಾರಿಕ ಶಾಸ್ತ್ರಗಳೆಂದು ಹೇಳಬಹುದು. ಈ ವ್ಯವಹಾರ ಶಾಸ್ತ್ರಗಳು ಒಬ್ಬರನ್ನು ಮಣ್ಣು ಮುಕ್ಕಿಸಿ ತಾವು ಮೇಲೇರುವದನ್ನು ಹೇಳುವಂಥ ಆಧುನಿಕರ ಶಾಸ್ತ್ರಗಳಂಥಲ್ಲ. ಇವು ಜಗತ್ತಿನಲ್ಲಿ ಸರಿಯಾಗಿ ನಡೆದು ಮೋಕ್ಷವನ್ನು ಹ್ಯಾಗೆ ಹೊಂದಬೇಕೆಂಬುದನ್ನು ಹೇಳುವಂಥವಿರುತ್ತವೆ.

ಅವರ ಷಟ್‌ಸ್ಥಲ ಶಾಸ್ತ್ರವು ಮನುಷ್ಯನು ಜಗತ್ತನ್ನು ಬಿಟ್ಟು ಗುಹೆಯಲ್ಲಿ ಕುಳಿತು ಏಕಾಂತದಲ್ಲಿರಬೇಕೆಂದು ಹೇಳುವದಿಲ್ಲ. ಶಿವಶರಣರು ಹೀಗೆ ಆಚರಿಸುವವರಲ್ಲ. ಅವರು ಜಗತ್ತಿನ ವ್ಯವಹಾರಗಳನ್ನು ಬಿಟ್ಟಿರುವದಿಲ್ಲ. ಶಿವಶರಣರ ರೀತಿಯನ್ನು ನೋಡಿದರೆ ಅವರು ಒಂದೊಂದು ಉದ್ಯೋಗ ವನ್ನು ಮಾಡುತ್ತ ಕಾಲಕಳೆದಿದ್ದಾರೆ. ಅವರಲ್ಲಿ ಒಬ್ಬನು ಹುಲ್ಲು ಮಾರುವವನು, ಇನ್ನೊಬ್ಬನು ಅಗಸನು, ಮತ್ತೊಬ್ಬನು ಶಿಂಪಿಗನು, ಹೀಗೆ ನಾನಾ ವಿಧ ಉದ್ಯೋಗಗಾರರಾಗಿ ವರ್ತಿಸಿರುವರು. ಷಟ್‌ಸ್ಥ ಲವು ಉದ್ಯೋಗಗಳನ್ನು ಮಾಡಬೇಡವೆಂದು ಹೇಳುವದಿಲ್ಲ. ಇದರ ಬದಲು ಉದ್ಯೋಗಗಳನ್ನು ಮಾಡಲೇಬೇಕೆಂದು ಅದು ಒತ್ತಿ ಹೇಳುತ್ತದೆ. ಹೀಗೆ ವೀರಶೈವವು ಸೋಮಾರಿಗಳ ಧರ್ಮವಾಗಿಲ್ಲ. ಅದು ಕಾರ್ಯ ತತ್ಪರರ, ಚಟುವಟಿಕೆಯುವರ ಧರ್ಮವಾಗಿದೆ.

ಆದ್ದರಿಂದ ಷಟ್‌ಸ್ಥಲವು ಮನುಷ್ಯನು ಹ್ಯಾಗೆ ಇದ್ದಾನೆ, ಅವನ ಮನಸ್ಸು, ಚಿತ್ತ, ಬುದ್ಧಿ, ಮುಂತಾದವುಗಳ ಗುಣ ಧರ್ಮಗಳಾವವು, ಅವುಗಳ ಮಾರ್ಪಾಡುಗಳಾವವು, ಅವನ ಮನಸ್ಸಿನ ಶಕ್ತಿಗಳು ಎಂತ ಹವು, ಶರೀರದ ಕಾರ್ಯಗಳಲ್ಲಿ ಅವುಗಳ ಪರಸ್ಪರ ಸಂಬಂಧವು ಹ್ಯಾಗೆ ಇದೆ ಮುಂತಾದ ಸಂಗತಿಗಳನ್ನು ವಿವೇಚಿಸುತ್ತದೆ. ಹೀಗೆ ಅದು ವಿವೇ ಚಿಸಿ, ಆಯಾ ಸ್ಥಿತಿಗಳ ಪ್ರಕಾರ ಮನುಷ್ಯನಲ್ಲಿ ಆಯಾ ಲಿಂಗ ಗುಣಗ ಳನ್ನು ಹ್ಯಾಗೆ ಬರಮಾಡಿಕೊಳ್ಳಬೇಕೆಂಬದನ್ನು ಸೂಚಿಸುತ್ತದೆ. ಷಟ್ಸ ಲದಲ್ಲಿ ಎರಡು ಭಾಗಗಳನ್ನು ಮಾಡಬಹುದು. ಒಂದು ಮನುಷ್ಯನ ಗುಣ ಮತ್ತು ಶಕ್ತಿಗಳ ಸ್ಥಿತಿಯ ನಿರೂಪಣೆ, ಮತ್ತೊಂದು ಈ ಗುಣ ಮತ್ತು ಶಕ್ತಿಗಳ ಪ್ರಕಾರ ಲಿಂಗ ಗುಣಗಳನ್ನು ಶರೀರದಲ್ಲಿ ಬರಮಾಡಿಕೊಳ್ಳುವಿಕೆ. ಈ ಮೊದಲಿನದನ್ನು ವಿವೇಚಿಸುವಂಥ ಭಾಗಕ್ಕೆ ಕರಣ ಹಸುಗೆ ಎಂಬ ಹೆಸರು ಇರುತ್ತದೆ. ಇದೇ ಷಟ್‌ಸ್ಥಲ ಶಾಸ್ತ್ರಕ್ಕೆ ತಳಹದಿ ಎಂದು ಹೇಳ

ಬಹುದು. ಇದು ತಿಳಿದಿದ್ದಾದರೆ ಷಟ್‌ಸ್ಥಲಗಳಲ್ಲಿ ಬರುವ ಅನೇಕ ಸ್ಥಳಗಳ ಪರಸ್ಪರ ಸಂಬಂಧಗಳನ್ನು ತಿಳಿಯಲು ಬಹಳ ಅನುಕೂಲವಾಗುತ್ತದೆ.

ಈ ಕರಣ ಹಸುಗೆಯಲ್ಲಿ ಕಂಡುಬರುವ ಮುಖ್ಯ ವಿಷಯಗಳು ಕೆಳಗೆ ಸ್ವಲ್ಪದರಲ್ಲಿ ಉಲ್ಲೇಖಿಸಲ್ಪಟ್ಟಿವೆ. ಇವುಗಳಲ್ಲಿ ೩೬ ತತ್ವಗಳ ವಿವರಣೆಯು ಅವಶ್ಯವಾಗಿ ಬರುತ್ತದೆ. ಈ ತತ್ವಗಳ ಮೂಲಕವಾಗಿಯೇ ಮನುಷ್ಯನು ವ್ಯವಹರಿಸುತ್ತಾನೆ. ಈ ತತ್ವಗಳು ಯಾವವೆಂದರೆ:— ಜ್ಞಾನೇಂದ್ರಿಯಗಳು ಕರ್ಮೇಂದ್ರಿಯಗಳು, ಕರಣ ಚತುಷ್ಟಯಗಳು ಪಂಚವಾಯುಗಳು, ಪಂಚವಿಷಯಗಳು, ಅಲ್ಲದೆ ಇವುಗಳಿಗೆ ಆಶ್ರಯವಾಗಿ ಅಥವಾ ಚೈತನ್ಯವಾಗಿರುವ ಆತ್ಮನು ಈ ಪ್ರಕಾರ ೨೫ ತತ್ವಗಳು ಇವೆ ಎಂದು ತಿಳಿಯಲ್ಪಟ್ಟಿದೆ. ಈ ತತ್ವಗಳ ವಿಶೇಷ ವಿವರಣೆಗಳು ಇದರಲ್ಲಿ ಕಂಡು ಬರುತ್ತವೆ. ಇವೆಲ್ಲವು ಸಾಂಖ್ಯ ಮತದ ವಿಚಾರಗಳೇ ಇವೆ. ಅಲ್ಲದೆ ಇನ್ನೂ ೧೧ ತತ್ವಗಳನ್ನು ಇವುಗಳಲ್ಲಿ ಸೇರಿಸಿ ೩೬ ತತ್ವಗಳು ಇರುತ್ತವೆಂದು ಭಾವಿಸಲ್ಪಟ್ಟಿದೆ. ಈ ೧೧ ತತ್ವಗಳು ಪರಮಾತ್ಮನಿಗೆ ಸಂಬಂಧಪಟ್ಟವುಗಳು. ಇವುಗಳಿಗೆ ಲಿಂಗ ತತ್ವಗಳೆಂತಲೂ ಹೆಸರು. ಮೊದಲಿನವುಗಳಿಗೆ ಅಂಗ ತತ್ವಗಳೆಂದು ಹೆಸರು. ಇವೆಲ್ಲ ಮನುಷ್ಯನ ವಿಶೇಷ ಶಕ್ತಿಗಳ ದ್ಯೋತಕವಾಗಿವೆ. ಈ ಎಲ್ಲ ತತ್ವಗಳ ವಿವೇಚನೆಗೆ ಮಹತ್ವದ ಸ್ಥಾನವು ಈ ಕರಣ ಹಸುಗೆಯಲ್ಲಿ ಕೊಡಲ್ಪಟ್ಟಿದೆ. ಯಾಕಂದರೆ ಮನುಷ್ಯನು ವಿಚಾರ ಮಾಡುವದು, ಕ್ರಿಯೆಗಳನ್ನು ಮಾಡುವದು ಇತ್ಯಾದಿ ಕಾರ್ಯಗಳು ಇವುಗಳ ಮೂಲಕವಾಗಿಯೇ ಅವನು ಮಾಡುತ್ತಾನೆ. ಇವುಗಳನ್ನು ಸರಿಯಾಗಿ ಇಡುವದರಿಂದಲೇ ಮನುಷ್ಯನು ವಿಕಾಸತ್ವವನ್ನು ಹೊಂದುವನು.

ಈ ತತ್ವಗಳ ತರುವಾಯ ಕರಣ ಹಸುಗೆಯಲ್ಲಿ ಶರೀರದ ರಚನೆಯು ವಿಷಯುವಾಗಿ ವಿವೇಚನೆಗಳು ಬಹಳ ಬರುವದುಂಟು. ವಚನಕಾರರು ಶರೀರವು ಸ್ಥೂಲ, ಸೂಕ್ಷ್ಮ, ಕಾರಣ ಎಂದು ಮೂರು ವಿಧವಾಗಿದೆ ಎಂದು ತಿಳಿಯುವದುಂಟು. ೩೬ ತತ್ವಗಳೆಲ್ಲವನ್ನು ಈ ಮೂರು ಶರೀರಗಳಿಗೆ ಅವರು ಸಂಬಂಧಿಸುತ್ತಾರೆ. ಈ ಶರೀರಗಳಲ್ಲದೆ ಇನ್ನೂ ಅನೇಕ ಉಪಶರೀರಗಳನ್ನು ಕಲ್ಪಿಸುವದುಂಟು. ಮೂರು ಶರೀರಗಳ ನಿಜವಾದ ಜ್ಞಾನವು ಆಗದ ಹೊರ್ತು, ಷಟ್‌ಸ್ಥಲಗಳ ವಿಚಾರವು ಸ್ಪಷ್ಟ

ವಾಗಲಾರದು. ಅವರು ಮಾಡಿರುವ ಎಲ್ಲ ಆಚಾರಣೆಗಳು ಈ ಮೂರು ಶರೀರಗಳಲ್ಲಿ ಒಂದರ ಮೇಲೆ ಪರಿಣಾಮ ಮಾಡುವಂಥವಿರುತ್ತದೆ. ಇವುಗಳನ್ನು ಆ ದೃಷ್ಟಿಯಿಂದಲೇ ಮಾಡತಕ್ಕದ್ದು. ಹೀಗೆ ಆಚರಿಸುವದೇ ಷಟ್‌ಸ್ಥಲ ವರ್ತನೆ ಎನಿಸಿಕೊಳ್ಳುತ್ತದೆ.

ಶರೀರದಲ್ಲಿಯ ವ್ಯಾಪಾರಗಳು ಅನೇಕ ಚಕ್ರಗಳ ಮೂಲಕವಾಗಿಯೂ ನಡೆಯುವದೆಂದು ಹಿಂದೂ ಶಾಸ್ತ್ರಜ್ಞರು ತಿಳಿಯುತ್ತಾರೆ. ಇದು ಯೋಗ ಶಾಸ್ತ್ರದ ಮುಖ್ಯ ವಿಷಯವಾಗಿದೆ. ಈ ಚಕ್ರಗಳ ಸ್ಥಿತಿ, ರೀತಿ, ಸ್ವರೂಪ ಮುಂತಾದವುಗಳ ವಿವರಣೆಗಳು ಕರಣಹಸುಗೆಯಲ್ಲಿ ಬರುತ್ತವೆ. ಈ ಚಕ್ರಗಳು ಆರು ಇರುತ್ತವೆ. ಈ ಆರು ಚಕ್ರಗಳ ವ್ಯಾಪಾರಗಳಿಗೂ ಷಟ್‌ಸ್ಥಲಗಳಿಗೂ ಜೋಡಣೆಯು ಮಾಡಲ್ಪಟ್ಟಿರುತ್ತದೆ. ಈ ಚಕ್ರಗಳಲ್ಲಿ ಪರಮಾತ್ಮನ ಶ್ರೇಷ್ಠ ಕಳೆಯನ್ನು ಬರಮಾಡಿಕೊಳ್ಳುವದರಿಂದಲೇ ಇವುಗಳಲ್ಲಿ ಆಯಾ ಲಿಂಗಗಳು ಉತ್ಪನ್ನವಾಗುತ್ತವೆ. ಅಲ್ಲದೆ ಇದರಲ್ಲಿ ಈ ಚಕ್ರಗಳ ವಿವರಣೆಯಲ್ಲದೆ ಅವುಗಳಿಗೆ ಸಂಬಂಧಿಸಿದ ವ್ಯಾಪಾರಗಳು, ವಾಯುಗಳು, ನಾಡಿಗಳು ಮುಂತಾದ ವಿಷಯಗಳ ವಿವೇಚನೆಯೂ ಇರುತ್ತದೆ.

ಆ ಮೇಲೆ ಮನುಷ್ಯನ ಗುಣಗಳ ಸ್ಥಿತಿಗತಿಗಳ ವಿಷಯವಾಗಿ ಬಹು ವಿಸ್ತಾರವಾದ ವಿವೇಚನೆಗಳು ಇದರಲ್ಲಿ ಬರುತ್ತವೆ. ಮನುಷ್ಯನ ಮಾನಸಿಕ ವಿಕಾರಗಳು ಯಾವವು, ಅವುಗಳು ಯಾವ ತರದವು ಅವೆ, ಉದಾಹರಣಾರ್ಥವಾಗಿ ಅವನಲ್ಲಿರುವ ಭ್ರಮೆಗಳು, ನಾನಾ ಬಗೆಯ ವ್ಯಸನಗಳು, ವಿಕಾರಗಳು, ಅಹಂಕಾರಗಳು, ದೋಷಗಳು ಮುಂತಾದವುಗಳು ವಿವೇಚಿಸಲ್ಪಡುತ್ತವೆ. ಇವುಗಳಲ್ಲಿ ವಚನಕಾರರು ನಾನಾ ವಿಧ ಭೇದ ವಿಭೇದಗಳನ್ನು ಕಲ್ಪಿಸಿ, ಅವುಗಳ ವ್ಯಾಖ್ಯೆಗಳನ್ನು ಮಾಡಿರುತ್ತಾರೆ. ಇವುಗಳ ಸವಿಸ್ತಾರ ವಿವರಣೆಗಳು ಇದರಲ್ಲಿ ಬರುತ್ತವೆ. ಇದು ಒಂದು ಬಗೆಯ ಮಾನಸ ಶಾಸ್ತ್ರವೆಂತಲೇ ಹೇಳಬಹುದು. ಪಾಶ್ಚಿಮಾತ್ಯ ತತ್ವಜ್ಞಾನಿಗಳು ಈ ವಿಷಯಕ್ಕೆ ಬಹು ಮಹತ್ವದ ಸ್ಥಾನವನ್ನು ಕೊಟ್ಟಿರುತ್ತಾರೆ. ಮತ್ತು ಅವುಗಳ ಬಗ್ಗೆ ಅವರ ವಿವೇಚನೆಗಳು ಬಹು ಸೂಕ್ಷ್ಮತರದವಿರುತ್ತವೆ. ಆದರೆ ವೀರಶೈವರು ಹಿಂದೂ ಧರ್ಮಗ್ರಂಥಗಳಲ್ಲಿ ಮುಖ್ಯವಾಗಿ ಸಾಂಖ್ಯಮತ

ಗ್ರಂಥಗಳಲ್ಲಿ ಪ್ರತಿಪಾದಿಸುವ ತತ್ವಗಳನ್ನೇ ಇದರಲ್ಲಿ ಅನುಸರಿಸಿರುವರು.

ಶಿವಶರಣರು ಈ ತಮ್ಮ ಕರಣಹಸುಗೆಯ ಗ್ರಂಥಗಳಲ್ಲಿ ತಮ್ಮ ಷಟ್‌ಸ್ಥಲಕ್ಕೆ ಎಷ್ಟು ಅವಶ್ಯವೋ ಅಷ್ಟನ್ನೇ ಗ್ರಹಿಸಿರುತ್ತಾರೆ. ಉಳಿದದ್ದಕ್ಕೆ ಅವರು ಹೆಚ್ಚಾಗಿ ಲಕ್ಷಕೊಟ್ಟಿರುವದಿಲ್ಲ. ಅಂದರೆ ಸಾಂಖ್ಯ ತತ್ವಗಳ ಸಾರವನ್ನು ಗ್ರಹಿಸಿ ಅದನ್ನು ತಮ್ಮ ಕರಣಹಸುಗೆಯಲ್ಲಿ ಕಾಣಿಸಿರುವರು.

ವೀರಶೈವರಲ್ಲಿ ಪ್ರಚಲಿತವಿರುವ ಕರಣ ಹಸುಗೆಯ ಗ್ರಂಥವು ಚನ್ನಬಸವೇಶ್ವರನಿಂದ ಮೊದಲು ಮಾಡಲ್ಪಟ್ಟಿತೆಂದು ತಿಳಿಯಲ್ಪಡುತ್ತದೆ. ಇವನೇ ಷಟ್‌ಸ್ಥಲಶಾಸ್ತ್ರವನ್ನು ಸಂಪೂರ್ಣವಾಗಿ ವಿಚಾರಮಾಡಿ ಅಸ್ತಿತ್ವಕ್ಕೆ ತಂದನೆಂದು ಒಂದು ಐತಿಹ್ಯವದೆ. ಆದರೆ ಈ ಗ್ರಂಥವು ಬಹಳ ಸಣ್ಣದು ಇದ್ದು ವಿಷಯವಿವೇಚನೆಯು ವಿಸ್ತಾರವಾಗಿಲ್ಲ. ಆದರೆ ಇದರಲ್ಲಿಯ ವಿಷಯುಗಳನ್ನು ಇನ್ನೊಬ್ಬ ಗ್ರಂಥಕಾರನು ಬಹು ವಿಸ್ತಾರವಾಗಿ ಆಧುನಿಕ ಭಾಷೆಯಲ್ಲಿ ವಿವರಿಸಿರುವನು. ಅವನ ಹೆಸರು ತಿಳಿಯುದಿಲ್ಲ. ಅವನಿಗಾದರೂ ಚನ್ನಬಸವನೆಂದು ಹೆಸರು ಇದೆ ಎಂದು ತಿಳಿಯಲ್ಪಟ್ಟಿದೆ.

ಆದರೆ ಈ ವಿಷಯುಗಳ ಬಗ್ಗೆ ಕಾಶ್ಮೀರೀ ಶೈವರೂ ದಕ್ಷಿಣದಲ್ಲಿಯ ದ್ರಾವಿಡ ಶೈವರೂ ಅನೇಕ ಗ್ರಂಥಗಳನ್ನು ಬರೆದಿರುವರು. ಅವರ ಮತ್ತು ವೀರಶೈವರ ವಿವೇಚನೆಗಳಲ್ಲಿ ಕೆಲವು ಭೇದಗಳಿದ್ದರೂ, ಮುಖ್ಯ ವಿಷಯುಗಳಲ್ಲಿ ಏಕಮತವು ಇರುತ್ತದೆ.

# ಗ್ರಂಥಪ್ರಕಟನೆಯ ಕಾರ್ಯಗಳು.

ವೀರಶೈವ ಪುರಾತನ ಗ್ರಂಥ ಸಂಶೋಧನ ಕಾರ್ಯಗಳು ಈಚೆಗೆ ಹೆಚ್ಚುತ್ತಲಿವೆ. ಇದು ಶುಭಚಿನ್ಹವೇ ಸರಿ. ಕೆಲವರು ಹಳೇ ಗ್ರಂಥಗಳ ಪಟ್ಟಿಗಳನ್ನು ಮಾಡುತ್ತಲಿರುವರು. ಇದರಿಂದ ಗ್ರಂಥಸಮೂಹವು ಎಷ್ಟು ಇದೆ ಎಂಬದನ್ನು ತಿಳಿಯಲು ಬಹು ಸಹಾಯಕವಾಗುತ್ತದೆ. ಇದರಂತೆ ಕೈಬರಹದ ಗ್ರಂಥಗಳನ್ನು ಒತ್ತಟ್ಟಿಗೆ ಶೇಖರಿಸಹತ್ತುವದೂ ಬಹು ಅವಶ್ಯವಾಗಿದೆ. ಇವುಗಳನ್ನು ಕಯ್ಯಿಂದ ಬರೆಯಿಸುವ ಕಾರ್ಯವು ಹ್ಯಾಗೆ ಮೊದಲು ನಡೆಯುತ್ತಿತ್ತೋ ಹಾಗೆ ಈಗಿನ ಮುದ್ರಣಕಲೆಯ ಕಾಲದಲ್ಲಿ ನಡೆಯುವ ಅಶಕ್ಯವು. ಆದ್ದರಿಂದ ಇವು ಇನ್ನು ಮೇಲೆ ಕ್ರಮೇಣ ನಾಶವಾಗುತ್ತ ಹೋಗುವವು. ವೀರಶೈವ ಧರ್ಮವು ಇನ್ನೂ ಅಜ್ಞಾತಾವಸ್ಥೆಯಲ್ಲಿಯೇ ಇದ್ದದರಿಂದ ಇಂಥ ಧರ್ಮಗ್ರಂಥಗಳ ಸಂಶೋಧನ ಮತ್ತು ಪ್ರಕಟನೆ ಎಷ್ಟು ಮಹತ್ವದ್ದೆಂಬದನ್ನು ನಾವು ವಿವರಿಸುವ ಅವಶ್ಯವಿಲ್ಲ.

ಈಚೆಗೆ ಕೆಲವು ಸಂಘದವರು ಮತ್ತು ಮಹನೀಯರು ಈ ಸಂಶೋಧನ ಕಾರ್ಯವನ್ನು ಕೈಕೊಂಡು ಕೆಲವು ಮಾಲೆಗಳನ್ನು ಹೊರಪಡಿಸಹತ್ತಿರುವದು ಅಭಿನಂದನೀಯವಾಗಿರುತ್ತದೆ.

ಧಾರವಾಡ ಲಿಂಗಾಯತ ವಿದ್ಯಾಭಿವೃದ್ಧಿ ಸಂಘದವರು ವಾಙ್ಮಯಶಾಖೆಯೊಂದನ್ನು ತಮ್ಮಲ್ಲಿ ಪ್ರಾರಂಭಿಸಿರುವರು. ಅವರು ಈಗ ಚನ್ನಬಸವಪುರಾಣದ ಶುದ್ಧ ಪ್ರತಿಯನ್ನು ಅಚ್ಚು ಹಾಕುವ ಕಾರ್ಯವನ್ನು ಕೈಕೊಂಡಿರುವರು. ಇಂಥ ಪುರಾಣಗ್ರಂಥಗಳು ವಾಙ್ಮಯದೃಷ್ಟಿಯಿಂದ ಅತ್ಯಂತ ಮಹತ್ವವಾದವುಗಳು. ಹೀಗೆ ಉತ್ತಮತರದ ಕಾವ್ಯಗಳನ್ನು ಇವರು ಕ್ರಮೇಣ ಅಚ್ಚುಹಾಕಬೇಕೆಂದು ಯೋಚಿಸಿರುವರು. ಅಲ್ಲದೆ ಕೈಬರಹದ ಗ್ರಂಥಗಳ ಪಟ್ಟಿಯನ್ನೂ ಸಿದ್ಧಪಡಿಸುತ್ತಲಿರುವರು.

ಹಾವೇರಿಯ ಸದ್ಧರ್ಮ ದೀಪಿಕೆ ಎಂಬ ಪತ್ರಿಕೆಯ ದ್ವಾರಾ ಸದ್ಧರ್ಮ ಗ್ರಂಥಮಾಲೆಯ ಗ್ರಂಥಗಳು ಕೆಲವು ಹೊರಪಟ್ಟಿರುತ್ತವೆ. ಇವುಗಳಲ್ಲಿ ತೋಂಟದ ಸಿದ್ಧಲಿಂಗ ಸ್ವಾಮಿಗಳವರ ವಚನವು ಮಹತ್ವದ್ದದೆ. ಅಲ್ಲದೆ ಕೆಲವು ರಗಳೆಗಳೂ ಸ್ತೋತ್ರ ಗ್ರಂಥಗಳೂ ಹೊರಪಟ್ಟಿವೆ

ಶ್ರೀ ಜಗದ್ಗುರು ಮೂರುಸಾವಿರಮಠದ ಗ್ರಂಥಮಾಲೆಯ ಮುಖಾಂತರವಾಗಿಯೂ ಕೆಲವು ಮಹತ್ವದ ಗ್ರಂಥಗಳು ಪ್ರಸಿದ್ಧವಾಗಹತ್ತಿವೆ. ಸಂಸ್ಥೆಯವರು ಸಿದ್ಧೇಶ್ವರ ವಚನ, ಮತ್ತು ಸ್ವತಂತ್ರ ಸಿದ್ಧಲಿಂಗೇಶ್ವರವಚನ ಎಂಬ ಗ್ರಂಥಗಳನ್ನು ಮುದ್ರಣಕ್ಕೆ ಕೊಟ್ಟಿರುವರು. ಕಾಡಸಿದ್ಧೇಶ್ವರ ವಚನವನ್ನೂ ಸಿದ್ಧಪಡಿಸುತ್ತಲಿರುವರು. ಅಲ್ಲದೆ ಪುರಾತನ ಗ್ರಂಥಗಳನ್ನು ಸಂಶೋಧಿಸಿ ಅವುಗಳ ಪಟ್ಟಿಯನ್ನೂ ಮಾಡುತ್ತಲಿರುವರು.

ಶ್ರೀ ಸ್ವಾಮಿ ಸಾವಂತವಾಡೀಕರ ಇವರು ಮರಾಠಿಯಲ್ಲಿ ಶಿವಾನುಭವ ಗ್ರಂಥಮಾಲೆಯಲ್ಲಿಯ ಕೆಲ ಗ್ರಂಥಗಳನ್ನು ಭಾಷಾಂತರಿಸಿ ಪ್ರಕಟಪಡಿಸಿರುವರು. ಇವರು ಈಗ ವರದಾನಿಗುಡ್ಡಮ್ಮನ ಚರಿತ್ರ ಮತ್ತು ಲಿಂಗಪೂಜೆಯ ತತ್ವಗಳು ಎಂಬ ಗ್ರಂಥಗಳನ್ನು ಭಾಷಾಂತರಿಸಿ ಮರಾಠಿಯಲ್ಲಿ ಪ್ರಸಿದ್ಧಿಸಿರುವದು.

ಶ್ರೀ ಶಿವಯೋಗಮಂದಿರದ ಪರವಾಗಿಯೂ ಕೆಲ ಗ್ರಂಥಗಳು ಪ್ರಕಟವಾಗಿರುತ್ತವೆ. ಬಸವಭಾಷ್ಯ ನೀತಿಸಂಗ್ರಹ ಶಿವಪೂಜಾವಿಧಿ ಇವುಗಳು ಈ ಮಾಲಿಕೆಯಲ್ಲಿ ಮಹತ್ವದವಾಗಿವೆ.

ಈ ಮೇರೆಗೆ ಗ್ರಂಥಪ್ರಕಟನೆಯ ಕಾರ್ಯಗಳಲ್ಲಿ ವಿಶೇಷ ಮನಸ್ಸು ಹಾಕಿ ವಾಙ್ಮಯಾಭಿವೃದ್ಧಿಯ ಕಾರ್ಯದಲ್ಲಿ ತೊಡಗಿರುವ ಮೇಲ್ಕಂಡ ಮಹನೀಯರೆಲ್ಲರಿಗೆ ಧರ್ಮಾಭಿಮಾನಿಗಳು ಸಹಾಯ ಮಾಡುವದು ಅವಶ್ಯವಿರುತ್ತದೆ.



# ಶಿವಾನುಭವಕ್ಕೆ ಸಹಾಯ.

ನಾವು ಹಿಂದಿನ ಸಂಚಿಕೆಯಲ್ಲಿ ಶಿವಾನುಭವ ಪತ್ರಿಕೆಗೆ ಸಹಾಯ ಮಾಡುವ ಕುರಿತು ವಿಜ್ಞಾಪಿಸಿಕೊಂಡಿದ್ದೆವಷ್ಟೇ. ಅದಕ್ಕೆ ಅನುಸಾರ ವಾಗಿ ಕೆಳಗೆ ಕಾಣಿಸಿದ ಮಹನೀಯರು ನಮಗೆ ಸಹಾಯಮಾಡಿ ರುವರು.

೧ ಶ್ರೀಮಂತ ದೊಡ್ಡಬಸಪ್ಪಾ ತಟ್ಟಿ. ಮು॥ ಲಕ್ಷ್ಮೇಶ್ವರ ಇವರು ೪೧ ರೂಪಾಯಿಗಳನ್ನು ನಮ್ಮ ಕಡೆಗೆ ಕಳಿಸಿರುವರು.

೨ ರಾ॥ ರಾ॥ ಮಹಾದೇವಪ್ಪಾ ಫಕೀರಪ್ಪಾ ಬಸರೀಕಟ್ಟಿ ಶಾಳಾ ಮಾಸ್ತರ ಹೆಬಸೂರು ಜಿ॥ ಧಾರವಾಡ ಇವರು ಶಿವಾನುಭವ ಗ್ರಂಥ ಮಾಲೆಯಲ್ಲಿಯ ಎಲ್ಲ ಗ್ರಂಥಗಳನ್ನು ಬೆಲೆಗೆ ತೆಗೆದುಕೊಂಡಿರುವರು.

೩ ರಾ॥ ರಾ॥ ಮಹಾರುದ್ರಪ್ಪಾ ಮಿರ್ಜಿ ಸಾ॥ ಹುಬ್ಬಳ್ಳಿ ಈ ಮಹ ನೀಯರ ಪ್ರೋತ್ಸಾಹದಿಂದ ರಾ॥ ರಾ॥ ಮಲ್ಲೇಶಪ್ಪ ಗುರುಶಾಂತಪ್ಪ ಸಾದರಹಳ್ಳಿ ಮತ್ತು ಮೂರು ಸಾವಿರದಪ್ಪಾ ಗುರುಶಾಂತಪ್ಪ ಸಾದರ ಹಳ್ಳಿ ಮು॥ ಹುಬ್ಬಳ್ಳಿ ಈ ಉಭಯ ಸಹೋದರರು ತಮ್ಮ ತಾಯಿ ಪಾರ್ವ ತೆವ್ವನವರ ನಿಧನ ಕಾಲಕ್ಕೆ ೧ ರೂಪಾಯಿ ಕಾಣಿಕೆಯನ್ನು ಕಳಿಸಿರುತ್ತಾರೆ.

ಈ ಎಲ್ಲ ಮಹನೀಯರಿಗೆ ನಾವು ಬಹಳ ಆಭಾರಿಯಾಗಿದ್ದೇವೆ.

**ಸಂಪಾದಕ.**

# ಹರಿಹರನ ರಗಳೆಗಳು.



ಸಂಪಾದಕರು:-

**ರಾ|| ಸಾ|| ಫ. ಗು. ಹಳಕಟ್ಟಿ**

ಬಿ. ಏ. ಎಲ್. ಎಲ್. ಬಿ. ವಿಜಾಪುರ.



೧೯೩೩.

# ಪ್ರಸ್ತಾವನೆ.



ಕರ್ನಾಟಕ ಕವಿಧುರಂಧರನಾದ ಹರಿಹರನು ಗಿರಿಜಾಕಲ್ಯಾಣವಲ್ಲದೆ ೬೪ ಪುರಾತನರು ಮತ್ತು ಶಿವಶರಣರು ಇವರ ಚರಿತ್ರೆಗಳನ್ನು ರಗಳೆಗಳ ರೂಪದಿಂದ ಬರೆದಿರುವನು. ಇವನ ಕೃತಿಗಳಲ್ಲಿ ಈ ರಗಳೆಗಳು ಇನ್ನೂ ಅಷ್ಟು ಪ್ರಚುರವಾಗಿರುವದಿಲ್ಲ. ಇವುಗಳಾದರೂ ಕನ್ನಡ ವಾಙ್ಮಯದಲ್ಲಿ ಅತ್ಯಂತ ಮಹತ್ವದ ಕಾವ್ಯಗಳಾಗಿವೆ. ಈಗ ಪ್ರಸಿದ್ಧವಾದ ರಗಳೆಗಳನ್ನು ಮೂರು ಹಸ್ತಲಿಖಿತ ಗ್ರಂಥಗಳ ಸಹಾಯದಿಂದ ...ಕರಿಸಿ ಇದರಲ್ಲಿ ಅಚ್ಚುಹಾಕಿದ್ದೇವೆ. ಈ ಗ್ರಂಥಗಳಲ್ಲಿ ೧ ನೆಯದು ...ೂರು ಓರಿಎಂಟಲ್ ಲೈಬ್ರರಿಯಲ್ಲಿ ದೊರಕಿದ್ದು ೨ ನೆಯದು ಕಲ್ಲಿನಾಥಾರ್ಯರು ಮು. ದಂಡಿನಶಿವರ ಜಿ॥ ತುಮಕೂರು ಇವರು ... ೩ ನೆಯದು ಶಿ॥ ಮೂ॥ ಶಿವಮೂರ್ತಿ ಶಾಸ್ತ್ರಿಗಳು ಹುಲಕಂಟಿಮಠ-ಕೀರ್ತನಕೇಸರಿ ಮು॥ ತುಮಕೂರು ಇವರು ಶೋಧಿಸಿ ಕಳುಹಿಸಿದ್ದು. ಈ ಮೂರು ಗ್ರಂಥಗಳ ಸಹಾಯದಿಂದ ಈ ರಗಳೆಗಳು ಸಿದ್ಧಗೊಳಿಸಲ್ಪಟ್ಟಿವೆ. ನಮ್ಮ ಕಡೆಗೆ ಕಳುಹಿಸಿದ್ದಕ್ಕಾಗಿ ನಾವು ಮೇಲ್ಕಂಡ ಎಲ್ಲ ಮಹನೀಯರಿಗೆ ಅತ್ಯಂತ ಆಭಾರಿಯಾಗಿರುವೆವು.

**ವಿಜಾಪುರ**
ತಾ॥ ೨೮-೧-೩೩

**ಫ. ಗು. ಹಳಕಟ್ಟಿ**
ಸಂಪಾದಕ.

# ಕಣ್ಣಪ್ಪನ ಮಹಾತ್ಮೆ

ಕಂದ॥ ಒಪ್ಪುವ ಶಿವಭಕ್ತಿ ಕಂ।
ಣಪ್ಪನನೀಧರೆಗೆ ಪೊಸತೆನಿಪ್ಪ ನನೀಶಂಗಪ್ಪುವ॥
ನೊಪ್ಪಿರೆ ಮೆರೆದಂ ದರ್ಪಕ।
ದರ್ಪಹಾರ ಹಂಪೆಯದೇವಂ॥

## ರಗಳೆ.

ಶ್ರೀ ಸದಾಶಿವನ ಭಕ್ತಿಗೆ ತವರ್ಮನೆಯುಪ್ಪ
ದೇಶ ಒಪ್ಪಿರ್ದುದು ಧರಾತಳಕೆ ಸುಖಮುಪ್ಪ
ಚೋಳಮಂಡಲವದರೊಳೆಸೆವ ಒಂದು ಪಟ್ಟಣಂ
ಕೇಳು ತಿರುಕಾಳತ್ತಿ ಎಂದೆನಿಪ ಪಟ್ಟಣಂ
ಅಲ್ಲಿಪ್ಪನೋರ್ವ ಶಬರಾದಿನಾಥಂ ನೋಡೆ
ಎಲ್ಲ ಪುಳಿಂದರ್ಗೆ ನಾಯಕಂ ತಾಂ ನೋಡೆ
ಪೆಸರೆಸೆವ ಕಣ್ಣಪ್ಪನೆಂದೆಂಬುದಾತಂಗೆ
ವಸುಧೆಯೊಳಗುಳ್ಳ ಬೇಂಟೆಗಳನರಿವಾತಂಗೆ
ಕಾರಣಿಕನೆಂದರಿಯಬಾರದಾತನ ವೇಷ
ಆರಯ್ಯೆ ಕಾರ್ಮುಗಿಲ ಮರೆಯ ಸೂರ್ಯನ ವೇಷ
ಒಂದೊಂದು ಮೃಗದ ಜನ್ಮದ ಋಷಿಗಳೆಲ್ಲರುಂ
ಬಂದಿರ್ಪರಾತನಾಡುವ ಹೊಲದೊಳೆಲ್ಲರುಂ
ಸತ್ಯಮಂ ನುಡಿವುದಂ ಕನಸಿನೊಳ್ಕಂಡರಿಯ
ಅತ್ಯಂತ ಶಿವನೆಂಬುದಂ ಮನಸಿನೊಳಗರಿಯ
ಅರಿಯನಾತಂ ಬೇರೆ ಪಿರಿಯರುಂಟೆಂಬುದಂ
ಪಸಿವಿಂಗೆ ತೆರಪಿಲ್ಲ ವಿಷಯಕ್ಕೆ ತೆರಪಿಲ್ಲ
ವ್ಯಸನಕ್ಕೆ ತೆರಪಿಲ್ಲ ಪುಸಿವುದಕೆ ತೆರಪಿಲ್ಲ
ಜಾತಿಧರ್ಮದ ಬೇಂಟೆಯೆ ತನಗೆ ಪಿರಿದಾಗೆ
ಆತುರದೊಳಿರ್ಪನಂತದು ತನಗೆ ಸೊಗಸಾಗೆ
ತನ್ನುವಂ ತಾನರಿಯನಿದಿರುವಂ ಪರಿಕಿಸಂ
ಮುನ್ನಿನಾರಾಧನೆಯ ಪರಿಯುಂ ವಿಚಾರಿಸಂ

ಇಂತಿರ್ದು ಬೇಂಟೆಗೆಂದನುವಾಗಿ ಪೊರಮಟ್ಟು
ಸಂತಸದಿ ಬರ್ಪ ಬೇಡರ ಪಡೆಯೊಳ್ಳವಟ್ಟು
ಜುಂಜುದಲೆ ಕೆಂಗಣ್ಣು ಗುಂಜಾಭರಣಮೆಸೆಯೆ
ರಂಜಿಸಲ್ತೊಟ್ಟಯುರಗುಪ್ಪಸಂ ತಾಂ ಮೆರೆಯೆ
ತಲೆಯುರದ ಕರದ ಕವಡಿಕೆಯ ದಂಡೆಗಳೆಸೆಯೆ
ನಲಿದು ಬಿಗಿದುಟ್ಟ ತೊವಲುಡಿಗೆಯೆಲುವುಗಳೆಸೆಯೆ
ಮೊಗದೊಳೊಪ್ಪುವ ವಿಭೂತಿಯ ತುಂತುರುಗಳೆಸೆಯೆ
ನೆಗೆದು ಕಟ್ಟಿದ ನೆತ್ತಿಗನ್ನಡಿ ಕರಂ ಪೊಳೆಯೆ
ನಿಡಿದಾಗಿ ಬೆನ್ನೊಳಿಳುಹಿದ ಚಮರಿಯೊಪ್ಪುತಿರೆ
ಹಿಡಿದ ಬಿಲ್ಲೆಡೆಗಯ್ಯೊಳೊಪ್ಪಿ ತೋರುತ್ತಮಿರೆ
ಕೂರಂಬುಗಳ ಹೊಗರು ಪಂಚಾಕ್ಷರಿಯನುಗುಳೆ
ಆರುತ್ತ ಪೊರಮಟ್ಟನಲ್ಲಿ ಭಿಲ್ಲರ್ಪೊಗಳೆ

ಬಂದು ತರುಗಿರಿ ಗುಲ್ಮಲತೆಗಳಿಡಿದಡವಿಯೊಳು
ನಿಂದು ಬೇಡರು ತೋಹು ಸೋಹಿನೊಳು ದರುವಿನೊಳು
ಪರಿದು ತಿರುಕಾಳತ್ತಿ ಮಲೆಯ ತಪ್ಪಲೊಳೆಲ್ಲ
ನೆರೆ ನೆಗೆದು ಸೋಳ್ಪ ಕಾರಣಿಕ ಮೃಗಮುಮನೆಲ್ಲ
ಕಂಡು ನೀಟಡಿ ಇಟ್ಟು ಕುಸಿದು ಕುಬುಟೆನೆ ಕೂಗಿ
ದಂಡೆನೋಟಂ ಶರಂ ಸಂಧಾನದೊಳು ಮುಗ್ಗಿ
ಕಿವಿಗೆ ಬಲಗೈಯ್ಯಿಂದೆ ನಾರಿಯಂ ತರುತಮಿರೆ
ತವಕಿಸುವ ಕೂರಂಬು ಬಿಡಃಬಿಡೆಂಬಂತೆ ಇರೆ
ಬಿಡುವುದೇ ತಾಗುವುದೊ ತಾಗುವುದೆ ನಡುವುದೋ
ನಡುವುದೇ ನೋಟವೋ ನೋಟವೇ ನಡುವುದೋ
ಎಂಬಂತೆ ತೊಡುವ ಬಿಡುವನುಮಾನವನುವಾಗೆ
ಇಂಬಿನಿಂ ಮೃಗಕುಳವನೆಸೆವ ಪರಿ ಪೊಸತಾಗೆ
ಎಸುತ ಬರೆ ಸಗ್ಗಕ್ಕೆ ಹಾರುತಿಪ್ಪವು ನೋಡ
ಅಸು ಪೋಪ ಪರಿ ತನಗೆ ಕಾಣಬಾರದು ನೋಡ
ಮೃಗಜಾತಿ ಭಯದಿಂದ ಓಡಲಮ್ಮವು ಕರಂ
ಬಗೆಯೊಳಗೆ ಸಂತಸಂ ಬಡುತಮಿರ್ಪವು ಕರಂ

ಕಂಡವಂ ಮರುಮೆಟ್ಟಿಮೆಟ್ಟಲೀಯದೆ ಯೆಸುತೆ
ಕಂಡವಂ ಮರುಹುಟ್ಟಿಹುಟ್ಟಲೀಯದೆ ಯೆಸುತೆ
ಕಂಡ ಮೃಗವೊಂದುವುಂ ತಪ್ಪವಾತನ ಮುಂದೆ
ಅಂಡಲೆವ ಕರ್ಮವಂ ನೀಗುತಾತನ ಮುಂದೆ
ಇಂತು ಮೃಗ ಸಂಕುಳದ ಬೇಂಟೆಗಳನಾಡುತುಂ
ಇಂತು ಶಬರರ ವೇಷದಿಂದೆ ನಲಿದಾಡುತುಂ

ಇರುತಿರುತ್ತೊಂದು ದಿವಸಂ ಬೇಂಟೆಗೆಂದಲ್ಲಿ
ಚರಿತದಿಂ ಕಣ್ಣಂದನೆಳ್ದು ಬರುತಿರ್ಪಲ್ಲಿ
ಬಲದ ಕಣ್ಪುರ್ಬು ಮೈವೆರ್ಚಿ ಕೆತ್ತುತ್ತಮಿರೆ
ನಲಿನಲಿದು ಬೇಂಟೆ ಲೇಸಪ್ಪುದೆಂದೆನುತಮಿರೆ
ಇತ್ತ ತಿರುಕಾಳತ್ತಿ ಮಲೆಯೊಳಿರ್ದೀಶ್ವರಂ
ಚಿತ್ತದೊಳ್ನೆನೆದು ಮಾಯಾಮೃಗವ ಶಂಕರಂ
ತೋರಿ ಸುಳಿದೆನ್ನತ್ತ ಕೊಂಡುಬಾರೆಂದೆನಲು
ಮೀರಿ ಗಳಗಳನಿಳಿದು ಬಂದುದಾ ಬೆಟ್ಟದೊಳು
ಬಂದು ದೂರದೊಳೆ ಕಾಣ್ಬಳಿಕೆಯೊಳ್ಸುಳಿಸುಳಿದು
ನಿಂದು ನಡೆನಡೆದು ನಲಿದಾಡುತುಂ ಹೊಳೆಹೊಳೆದು
ತೋರೆ ಬೆಂಬತ್ತಿದಂ ಮೃಗದ ಬೆಂಬಳಿವಿಡಿದು
ಮೀರಿಯುಡರ್ದೇರುತ್ತಲಿಳಿವುತ್ತೆ ನಡೆನಡೆದು
ಗಿಡುವಿನೊಳ್ಹಳ್ಳದೊಳ್ಕೊಳ್ಳದೊಳ್ಮಡುವಿನೊಳ್
ಇಡಿದಿರ್ದ ಹೊದರಿನೊಳ್ಸರವಿನೊಳ್ದರುವಿನೊಳ್
ಬೆಟ್ಟದೊಳ್ಬೀಳಗಿನೊಳ್ಕತ್ತಲಿಪ ಮೆಳೆಗಳೊಳ್
ಗಟ್ಟದೊಳ್ಗುಹೆಗಳೊಳ್ದಟ್ಟಯಿಪ ಮರಗಳೊಳ್
ಬಳ್ಳಿ ಲತೆ ಮಡು ಬಿದಿರು ಹುಲ್ಲು ಹಾವಸೆಗಳೊಳ್
ಕಲ್ಲು ಮರ ಮೊರಡಿ ಕುಳಿ ಕವರಿಡಿದ ಬೆತ್ತದೊಳ್
ಪೊಕ್ಕಲ್ಲಿ ಪೊಕ್ಕು ಪರಿದಲ್ಲಿ ಬೆನ್ನೊಳ್ಪರಿದು
ಮಿಕ್ಕಲ್ಲಿ ಮಿಕ್ಕು ನೆಗೆದಲ್ಲಿ ಒಡನೇ ನೆಗೆದು
ಮನಮುಮಂ ಕಣ್ಣುಮಂ ಮೃಗದ ಬೆಂಬಳಿಗಿತ್ತು
ತನುವುಮಂ ತವಕಮುಂ ಹಿಡಿದೆಸೆವ ಬಗೆಗಿತ್ತು

ಕಾಳತ್ತಿನಾಥನಂ ಕ್ಷಣದೊಳಗೆ ಕಾಣ್ಬಂತೆ
ಇಂತು ಬರಿವರೆ ಕೊಂಡು ಬಂದುದಾ ಮೃಗವಲ್ಲಿ
ಕಂತುಹರನಿರ್ಪ ದೇವಾಲಯದ ಮುಂದಲ್ಲಿ
ಮಾಯವಾದುದು ಮೃಗಂ ನೋಡನೋಡಲ್ಸಳಿದು

ಆಯೆಡೆಯೊಳೆಲ್ಲಿಯುಮನರಸಿ ಕಾಣದೆ ಮುಳಿದು
ಶಿವನಿಳಯದತ್ತಲೆಯ್ತಂದನಾ ಕಣ್ಣಂದ
ನವಚಿತ್ತನುರವಣಿಸಿ ತೆರೆ ತೆರೆ ಕದವನೆಂದ
ಎನ್ನವನೆ ತೆರೆ ಕದವನೆನ್ನವನೆ ತೆರೆ ಎನಲ್
ಪನ್ನಗಧರಂ ಕದಂದೆರೆಯೆ ತಾಂ ಭೋಂಕೆನಲ್

ನೋಡು ಮಾದೇವನೇ ಕೇಳು ನೀನೆನ್ನವನೆ
ನೋಡುವೆಂ ನಿನ್ನ ನನ್ನಿಗಳನಿಂದೆನ್ನವನೆ
ಹೋದ ಮೃಗಮಂ ಕಂಡೊಡೆನಗೆ ನೀನೊಳ್ಳಿದಂ
ಆದಲ್ಲಿ ಭಾಗೆಯುಂ ವಂಚಿಸೆಂ ಕೊಳ್ಳದಂ
ಎನಲಲ್ಲಿ ಶಿವಲಿಂಗದೊಳಗೆ ನಗುತೀಶ್ವರಂ
ಎನಗಿವನ ಕಡು ಮೋಹವರಿವೆನುತ ಶಂಕರಂ
ನೋಡುವೆನಿದಕೇನೆನುತ್ತೆ ಮೃಗವಂ ತೋರೆ
ನೋಡಿಕೊಂಡಾಹಾ ಎನುತ್ತೆ ನಂಬುಗೆಯೇರೆ

ಅಯ್ಯಯ್ಯ ಇಂತಪ್ಪ ನನ್ನಿಯುಂ ಕಂಡೆನೆ
ಕಯ್ಯ ಮೇಲೆ ತೋರುವಡೆಯನಂ ಕಂಡೆನೆ
ಇನ್ನಗಲೆನಿನ್ನಗಲೆನಯ್ಯಯ್ಯ ನಿನ್ನುವಂ
ಮುನ್ನವರಿಯದೆ ಕೆಟ್ಟೆನಿನಿತುವರನಿನ್ನುವಂ
ಎನಗುಳ್ಳವಂ ನೀನೆ ನಿನಗುಳ್ಳವಂ ನಾನೆ
ನಿನಗೇನುವುಂ ಕೊರತೆ ಎನ್ನವನೆಯಾಳ್ದನೆ
ಬಿಡುವನಲ್ಲಂ ನಿನ್ನನಿನಿತು ದಿಟವುಳ್ಳನಂ
ನಡೆಯಿಸಿಕೊಳಲ್ಬಲ್ಲೆ ಇಂತಪ್ಪ ಬಂಟನಂ
ಇಂದು ಮೊದಲಾಗಿಯುಗಲೆಂ ನಿನ್ನ ಹಜ್ಜೆಯುಂ
ತಂದಿಕ್ಕುವೆಂ ರಸಂ ಬಸಿವ ಪೊಸ ಮಜ್ಜೆಯುಂ

ಅಂಜದಿರ್ಬಡವಾಗದಿರ್ಚಿಂತಿಸದಿರೆಲವು
ಸಂಜೆಯಾದೊಡೆ ಯಿರಿಸಿ ಪೋಗೆ ನಿನ್ನೊಲವೊಲವು

ಎಂದು ಕುಣಿದಾಡುತುಂ ಕಂಡ ಹುಲ್ಲೆಯನೆಚ್ಚು
ತಂದಂಬು ಸಹಿತವಿದೆ ದೇವ ಹುಸಿಯೇಂ ನಚ್ಚು
ನಿನ್ನ ಮುಂದಿಟ್ಟು ಸರಿಯಾಗಿ ಹಂಚುವೆ ನೋಡ
ಎನ್ನವನೆ ಎನ್ನಲ್ಲಿ ಮಾಯೆಯಿಲ್ಲಂ ನೋಡ
ಎನುತವಂ ಸ್ನೇಹದಿಂ ಬಿರ್ಚುತಂ ಸರಿಮಾಡಿ
ನಿನಗೆ ಮನವೊಲ್ದುದಂ ಕೊಳ್ವುದೆನುತಂ ನೋಡಿ
ತಪ್ಪದೆನ್ನಾಣೆ ಸರಿ ನಿನ್ನಾಣೆ ಸರಿ ಎಂದು
ಒಪ್ಪಿಸಿಕೊಡುತ್ತಲ್ಲಿ ನುಡಿದಂ ಮನಂ ಸಂದು
ನಿನ್ನ ಭಾಗೆಯನಾರ ಕಯ್ಯೊಳ್ಕುಡೆಂ ಕುಡೆಂ
ಇನ್ನಾನೆ ಕಾಸಿ ಲೇಸಂ ಮಾಡುವೆಂ ಬಿಡೆಂ

ಎಂದೊಂದು ಚನ್ನ ಸುಂಟಿಗೆಗೋಲನಳವಡಿಸಿ
ತಂದುಕಿರ್ಚಂ ಹೊಸೆದು ಖಂಡಂಗಳಂ ಬಿಡಿಸಿ
ಕೆಂಪುಳ್ಳ ನುಣ್ಪುಳ್ಳ ಸೊಂಪುಳ್ಳ ಖಂಡಮಂ
ಇಂಪುಳ್ಳ ಕಂಪುಳ್ಳ ಹೆಂಪುಳ್ಳ ಖಂಡಮಂ
ಕಾಸುತಂ ತೆಗೆತೆಗೆದು ಪರಿಪಾಕಮಂ ಮಾಡಿ
ಲೇಸಪ್ಪ ಮೃದುವಪ್ಪ ತೆಳ್ಗಂಡಮಂ ನೋಡಿ
ನಾಲಿಗೆಯೊಳಾಯ್ದಾಯ್ದು ಕೊಂಡವಂ ಬೇರಿರಿಸಿ
ಮೇಲಪ್ಪ ಮುತ್ತುಗದ ಪತ್ತಳೆಯ ಬಾಸಣಿಸಿ

ಕೊಂಡು ಬಂದೆನ್ನವನೆಯುಣ್ಣವನೆಯುಣ್ಣವನೆ
ಅಂಡಲೆವುತೆನ್ನವನೆ ಸವಿ ನೋಡು ನೋಡುವನೆ
ಎನ್ನವನೆ ಎನ್ನಾಣೆಯುಣ್ಣವನೆ ನಿನ್ನಾಣೆ
ನಿನ್ನಾಣೆ ಸವಿಸವಿದು ನೋಡು ನೀನೆನ್ನಾಣೆ
ಎನಲಲ್ಲಿ ಶಂಕರಂ ಕೈಕೊಂಡ ಮಾಳ್ಕೆಯಿಂ
ತನತನಗೆ ಭೂತಕ್ಕೆ ಕೊಟ್ಟನೊಲ್ದರ್ಥಿಯಿಂ
ಆತುರದ ಪ್ರೇಮಮಂ ತಾನೆಯಾರೋಗಿಪಂ
ಭೂತಸಂಕುಲಕೆ ಮಾಂಸವನಿತ್ತು ತಣಿಯಿಪಂ

ಭಕ್ತನ ಮನಕ್ಕೆ ತಾನುಂಡಂತೆ ಮಾಡುತುಂ
ಭಕ್ತಿಯಿಂ ತಣಿತಣಿದು ತೇಗಿ ಕೂಗಾಡುತುಂ
ಇಂತು ಶಿವನಾರೋಗಿಸಲ್ಕಂಡು ಕಂಣ್ಣಂದ
ಅಂತಾಗಳೇ ನೋಡಿ ಬಾಡುತ್ತವಿಂತೆಂದ
ಅಡವಿಯೊಳಗನಿತು ದಿನವೋರ್ವನಿರ್ದೈ ತಂದೆ
ನಡೆ ನೋಡಿ ನೆರೆ ಸಾಗಿಸುವರಿಲ್ಲಲಾ ತಂದೆ
ಪಲವುಪಾಸದೊಳೂಟವಂ ಕಂಡೆ ಎನ್ನವನೆ
ಪಲವು ಮಾತೇನು ಸಲಹಿದಪೆ ನಾ ನಿನ್ನವನೆ
ಎಂದೆನುತ್ತಿರುಳಾಗೆ ಹುಳ್ಳಿ ಹೊರೆಯುಂ ತಂದು
ಮುಂದೆ ಹಗ್ಗಿಯನೊಟ್ಟಿ ಬೆಳಗನೆತ್ತುವೆನೆಂದು
ನಿದ್ದೆಗೆಯ್ತುಂದೆ ಇನ್ನಾವ ದುಗುಡಂಬೇಡ
ಇದ್ದಪೆಂ ಕಾಹಾಗಿ ಒಂದು ಭಯಂ ಬೇಡ

ಎಂದು ಶಿವನಂ ನಿದ್ರೆಗೈಸಿ ಮೆಲ್ಲನೆ ಬಂದು
ನಿಂದು ನಿಂದುಲಿವ ಪಕ್ಷಿಗಳನೆಬ್ಬಿಸುತಂದು
ನಿದ್ದೆಗೆಟ್ಟೊಡೆ ನಾಳೆ ಪಸಿವಿಲ್ಲದೆನ್ನವಂ
ಇದ್ದಂತೆ ಇರ್ಪನೇನುವನುಣ್ಣನೆನ್ನವಂ
ಎನುತಲ್ಲಿ ಬಂದ ಮೃಗವಂ ಚಲ್ಲ ಬಡಿವುತುಂ
ವನದ ಪಕ್ಷಿಗಳ ನುಣ್ದನಿಗಳಂ ನಿಲಿಸುತುಂ
ತಿರುಗಿ ಬಂದೊಳಪೊಕ್ಕು ನಿದ್ರೆಯುಮನಾಲಿಸುತೆ
ಇರದೆ ಪೊರಮಟ್ಟು ಮೆಲ್ಲನೆ ಪೊರಗನಾಲಿಸುತೆ
ಒಳಪೊಕ್ಕು ಮತ್ತೆ ಸುಯ್ಯಲರನಾಲಿಸುತಂದು
ತಿಳಿಯದಿನ್ನುಂ ಬಳಲ್ದಂ ನಿದ್ರೆಗೆಯ್ಯೆಂದು
ಇಂತು ಬೆಳಗಪ್ಪನ್ನೆಗಂ ಜಾಗರಂ ಮಾಡಿ
ಕಂತುಮದಹರನುಪ್ಪವಡಿಸೆ ನಲವಿಂ ನೋಡಿ
ಪಸಿದಯ್ಯ ನಿದ್ರೆ ತಿಳಿದೇಳ್ದಯ್ಯ ಎನ್ನವನೆ
ಪೊಸ ಮಾಂಸವುಂ ತರಲ್ಪೋಪೆನ್ನೆ ಎನ್ನವನೆ
ಕಡು ವೇಗದಿಂ ಬಂದಪೆಂ ನೋಡು ನಿನ್ನಾಣೆ
ತಡೆಯೆ ನಾನೊಂದೆಡೆಯೊಳುಂ ನಿಲ್ಲೆ ನಿನ್ನಾಣೆ
ಎನುತ ಸಂತಯಿಸುತುಂ ನೇಹದಿಂ ಪೊರಮಟ್ಟು

ಮನದೊಳಗೆ ದೂರಿಸುತಲೆರಡು ಮೂರಡಿ ಇಟ್ಟು
ತಿರುಗಿ ಬಂದೆನ್ನವನೆಯುಮ್ಮಳಿಸಬೇಡೆಂದು
ಚರಿತದಿಂದೀ ಬರ್ಪನೆನ್ನವನೆ ನೋಡೆಂದು
ತೆಗೆದಪ್ಪಿ ಕೊಂಡಾಡಿ ಮುಂಡಾಡಿ ಮುದ್ದಾಡಿ
ಅಗಲಲಾರದೆ ಮತ್ತೆ ಮತ್ತೆ ಹೋಗದೆ ನೋಡಿ
ಏನೆಂಬೆನಾ ಭಕ್ತನುತ್ತಮದ ಸ್ನೇಹವಂ
ಏನೆಂಬೆನಾ ಶಿವನ ಲೀಲೆಯುತ್ಸಾಹಮಂ
ನಡೆನಡೆದು ತಿರುತಿರುಗಿ ಹಿಂಬೆರಕಿನಿಂ ನಡೆದು
ದಡದಡಿಸಿ ಹೆರೆ ಹಿಂಗಲಾರದೆ ಮನಂಬಿಡಿದು
ಪಿಂತಕ್ಕೆ ಬಂದು ಕಣ್ಮರೆಯಾಗೆ ಕಣ್ಣಿಂದ
ಅಂತಾಗಳೆ ಕಂದಿ ಕುಂದಿ ಮಿಗೆ ಕಣ್ಣಿಂದ
ಆರಸುತ್ತಮಿರ್ದನಿತ್ತಲ್ಮೃಗವನೆಸಲೆಂದು

ಪೊರಮಟ್ಟುಬಂದನತ್ತಲ್ಪಾರ್ವನೊಲ್ತಂದು
ಪೂಸಿದ ವಿಭೂತಿ ರುದ್ರಾಕ್ಷಿಯೋವರಿ ಎಸೆಯೆ
ಬಾಸಣಿಸಿದಗ್ಗವಣಿ ಕೆಯ್ಯ ಕರಡಿಗೆ ಎಸೆಯೆ
ಮೆಲ್ಲಮೆಲ್ಲನೆ ಬೆಟ್ಟವೇರುತುಂ ನಡೆತಂದು
ಅಲ್ಲಿ ದೇವಾಲಯದ ಬಾಗಿಲ್ಗೆಯ್ತಂದು
ಗವಲೆತ್ತಿ ಕವಿಯೆ ಕರಣಂ ಕರಂ ಕೌರೇಳೆ
ಶಿವಶಿವ ಇದೆಲ್ಲಿಯದ್ಭುತವೆನುತೆ ಹೊಲಸೇಳೆ
ತಿರುಗಿ ಬಂದಗ್ಗಣಿಯನೊಂದು ಟಾವಿನೊಳಿರಿಸಿ
ಕರಡಿಗೆಯನಿರಿಸಿ ಪೇಸುತ್ತುಗುಳ ಕೊಕ್ಕರಿಸಿ
ಎಲ್ಲಿಯದು ಬಂದುದು ದುರಾಚಾರವೆಂದೆನುತೆ
ಎಲ್ಲಿಯ ಜಿಗುಪ್ಸೆಯಾದುದು ಶಂಕರಂಗೆನುತೆ
ಹೇಸಿ ಮೂಗನೆ ಮುಚ್ಚಿಕೊಳುತವಂ ಐತಂದು
ಆಸುರದ ಪಾಪಕರ್ಮವ ಮಾಡಿದವನೆಂದು
ಸೂನೆಗಾರನನಿಂತು ಪುಗಿಸುವರೆ ಎಲೆ ದೇವ
ಏನಯ್ಯ ಎಲ್ಲಿರ್ದೆ ಏನಾದೆ ಎಲೆ ದೇವ
ಎಂದೆನುತ ಚೋಹರಿಗೆಯಂ ಕೊಂಡು ಚೋಹರಿಸಿ
ತಂದು ಗೋಮಯವಿಕ್ಕಿ ಹೇವರಿಸಿ ಸಾರಯಿಸಿ

ಕೊಳ್ಳದೊಳು ಪೊಕ್ಕು ಮತ್ತೊಮ್ಮೆ ಪಾರ್ವಂ ಮಿಂದು
ತಳ್ಳಂಕದಿಂದ ಶಿವಶಿವ ಎನುತ್ತಂ ಬಂದು
ಕರಡಿಗೆಯನಗ್ಗವಣಿಯುಂ ಕೊಂಡು ಭರದಿಂದೆ
ಹರನಾಲಯಕ್ಕೆ ಬಂದೊಳಪೊಕ್ಕು ಭಯದಿಂದೆ
ಇಂತು ಮಾಡಿಸುವರೇ ಶುದ್ಧಾತ್ಮ ಶಿವ ಎನುತೆ
ಇಂತು ಮಾಡಿಸುವರೇ ನಿರ್ಮಳ ಪ್ರಭುವೆನುತೆ
ಮಜ್ಜನಕ್ಕೆರೆದನಾ ಕಾಳತ್ತಿಯರಸಂಗೆ
ಸಜ್ಜನ ಸ್ನೇಹ ರಸಭರಿತ ಪರಮಾತ್ಮಂಗೆ
ಬೆಲ್ಲವತ್ತಂ ಗರುಗದೆಲೆ ದೊಡ್ಡ ಪತ್ರೆಯುಂ
ಪಲ್ಲವಿಸುವುತ್ತರಣೆಯುಂ ಬಿಳಿಯ ಗರುಕೆಯುಂ
ತಂದೊಟ್ಟಿದಂ ರುದ್ರಸೂಕ್ತಮುಂ ಪೇಳುತುಂ
ನಿಂದಲ್ಲಿ ಪಲವುಂ ಜಪಂಗಳಂ ಮಾಡುತುಂ
ಧೂಪಾರತಿಯನೆತ್ತಿ ನೈವೇದ್ಯಮಂ ಕೊಟ್ಟು
ಕಾಪಾಲಿ ಶರಣೆನುತ್ತಂ ಬಂದು ಪೊಡಮಟ್ಟು
ಪುಗಿಸದಿರು ಕಂಡೆಯ್ಯ ಪಶುಕರ್ಮಕಾರನಂ
ಪುಗಿಸದಿರು ಹೇಸಿಕೆಯ ಮಾಡುವ ಕಿರಾತನಂ
ಎಂದೆನುತೆ ಪೊಡಮಟ್ಟು ಬಲಗೊಂಡು ಪಟ್ಟಿರ್ದು
ಇಂದುಶೇಖರ ಕರುಣಿಸೆಂದೆನುತೆ ನಿಂದಿರ್ದು
ಸುಖನಾಗಿ ಗರ್ಭಗೃಹದಿಂ ರಂಗಮಂಟಪದ
ಮುಖದ ಮೂರುಂ ಕದವನಿಕ್ಕುತುಂ ವಿಸ್ತರದ
ಸಂಕೊಲೆಗಳಂ ಹೂಡಿ ಬಿಯ್ಯಗಂಗಳನಿಕ್ಕಿ
ಶಂಕರಾ ಪುಗಿಸದಿರು ಇನ್ನವನೆನುತ್ತಿಕ್ಕಿ
ಪೋದನತ್ತಲು ಶಿವಬ್ರಾಹ್ಮಣಂ ತತ್ಪರಕೆ

ಆದುದಿತ್ತಲು ಬೇಡನಾಟವಂದಾ ವನಕೆ
ಹಸಿದನೆನ್ನವನೆಂದು ಮೃಗವನರಸುತೆ ಬಂದು
ಎಸಲೊಲ್ಲದವ್ವಳಿಸಿ ನಿಲ್ವನದು ಪೊಲ್ಲೆಂದು
ಬಾಡಿದ ಮೃಗಂಗಳಂ ರೋಗಂಗಳುಳ್ಳವಂ
ಬೇಡೆನ್ನವನ ಹೊಟ್ಟೆಗಾಗದೆನುತೆಸನವಂ
ಬಾಳ್ಗಿನ್ನ ಮಾದೇವ ಎನ್ನವನೆ ಎನುತಲ್ಲಿ

ಆಳ್ಗಣವನವಧಾರು ಎನ್ನೊಡೆಯನೆನುತಲ್ಲಿ
ಅಷ್ಟಾಂಗ ಪುಷ್ಟವಾಗಿರ್ದF ಮೃಗವಂ ಕಂಡು
ಅಷ್ಟವೇಷ್ಟಿತನಾಗಿ ಎಚ್ಚಂ ಮಸಂಗೊಂಡು
ನೆಲಕೆ ಬೀಳದ ಮುನ್ನ ಪರಿತಂದು ಪಿಡಿದೆತ್ತಿ
ನೆಲನನಿದು ಸೋಂಕೆ ಪೇಸುವನೊಡೆಯನೆನುತೆತ್ತಿ
ಕಲ್ಪಾಳಿ ಎಲೆಗೊಯ್ದು ಬೆಳೆದ ಹಸಲೆಯ ಮೇಲೆ
ಚಲ್ವಾಗಿ ಇಕ್ಕಿ ಮುಚ್ಚಿದನೊಂದರಿಂ ಮೇಲೆ
ಗಾಳಿ ತಾಗಿದೊಡೊಲ್ಲನೆನ್ನವಂ ಸುಖಿ ಎನುತೆ
ಬಾಳ ಚೂತದ ಕೆಳಗೆ ತಂದಿರಿಸಿ ಪಸರಿಸುತೆ
ಪುತ್ತ್ರಗದ ತಳ್ತಿಲೆಗಳಂ ಚಂದದಿಂ ಪಾಸಿ
ಬಿತ್ತರಿಸಿ ನವಖಂಡವಂ ಮಾಡುತುಂ ಕಾಸಿ
ಉಲುಹೋದಡಂತಂತೆ ಮುಚ್ಚಿ ಮರೆಮಾಡುತುಂ
ನಲಿನಲಿದು ಕಾಸಿ ಪರಿಪಾಕವಂ ಮಾಡುತುಂ
ಕಾಹೇರಿತಿದು ಸೀದುದೆಂದು ಬೇರಿರಿಸುತುಂ
ಆಹಾ ಇದೆನ್ನವಂಗೆಂದು ಮುಚ್ಚಿರಿಸುತುಂ
ಮೃದುವಪ್ಪವಂ ಕಯ್ಗಳಿಂದರಿತು ಶೋಧಿಸುತೆ
ಒದವಿ ಚೆಲ್ವಪ್ಪವಂ ಕಣ್ಗಳಿಂ ಶೋಧಿಸುತೆ
ಕಂಪುಳ್ಳವಂ ಘ್ರಾಣದಿಂದರಿದು ಶೋಧಿಸುತೆ
ಇಂಪುಳ್ಳವಂ ಜಿಹ್ವೆಯಿಂದರಿದು ಶೋಧಿಸುತೆ
ಎಂಜಲೆಂಬವರ ಬರಿ ಜಿಹ್ವೆಯುಂ ಹುಸಿಮಾಡಿ
ಸಂಜನಿತ ಕರಣಂಗಳಿಂದೆ ಶೋಧಿಸಿ ನೋಡಿ
ಸುಖಮುಖದ ಕಳಶದೊಳಗಗ್ಗಣಿಯನಾದರಿಸಿ
ನಖದಿಂದೆ ಕಾಡಮೊಲ್ಲೆಯ ಹುವ್ವನಳವಡಿಸಿ
ಉತ್ತಮಾಂಗದ ಕರಡಿಗೆಯೊಳಿರಿಸುತಂತಲ್ಲಿ
ಉತ್ತಮೋತ್ತಮ ಭಕ್ತನಳ್ಕರಿಂ ಬರುತಲ್ಲಿ
ಒಂದು ಕಯ್ಯೊಳ್ಮಿಸಲೋಗರಮುಮಂ ಪಿಡಿದು
ಒಂದು ಕಯ್ಯೊಳ್ಬಿಲ್ಲು ಬಾಣಂಗಳಂ ಪಿಡಿದು
ಮೊಗದಗ್ಗವಣಿ ಶಿರಕರಂಡಿಗೆಯ. ಪೂವೊಪ್ಪೆ
ಮೃಗದ ಮಾಂಸಂ ನವಸ್ನೇಹದೋಗರವೊಪ್ಪೆ

ಬರುತೆನ್ನವಂ ಪಸಿದನಿರಲಾರನೆನ್ನವಂ
ಪಿರಿದು ತಳ್ವಿದನೆಂದು ಕೋಪಿಸುವನೆನ್ನವಂ
ಹೊತ್ತು ಹೋಯ್ತೆಂದೆನ್ನ ಬರವನೆಳಿಸಿರ್ಪನೋ
ಹೊತ್ತಾಗಳೆವೆಂ ಪಾಪಿಯಾವೆನೆಂತಿರ್ಪನೋ
ಮಿಗೆ ಪಸಿದು ನಿಲಲಾರದಿದಿರಾಗಿ ಬರ್ಪನೋ
ಮಗನ ಬರವಂ ಕಾಣದೊಬ್ಬನೈತಪ್ಪನೋ
ಪುಲಿ ಬಂದೊಡಂಜಿ ಪೊರಮಡಲಮ್ಮದಿರ್ಪನೋ
ಉಲಿವ ಪಕ್ಷಿಗಳ ದನಿಗೇಳ್ದು ಸುರದಿರ್ಪನೋ
ಕರಡಿ ಗರ್ಜಿಸಲಂಜಿಯುಸುರಿಕ್ಕದಿರ್ಪನೋ
ಉರಗ ಸಾರಲು ಹೆದರಿ ಹೆಂಪಳಿವುತಿರ್ಪನೋ
ಬರವುಗಾಣದೆಯೊರ್ವನೇ ಯಲಸುತಿರ್ಪನೋ
ಪರಮನ ಸಮೀಪಕ್ಕೆ ಈಪೊಳ್ತು ಪೋಪೆನೋ
ತಮ್ಮವರ ನೆನೆದೆನ್ನ ಬಿಟ್ಟನೆಂದಳುವನೋ
ದುಮ್ಮಾನದಿಂದೆನ್ನ ಕೂಡೆ ಮುನಿದಿಪ್ಪನೋ
ಎಂದು ನೇಹದ ಚಿಂತೆಯಿಂ ಚಿಂತಿಸುತ ಬರಲು

ಮುಂದೆ ದೇವಾಲಯದ ಬಾಗಿಲುಗಳಿಕ್ಕಿರಲು
ಎನ್ನವನೆ ತೆರೆ ಕದವನೆಂದು ನುಡಿಯುದರಿಂದ
ಮುನ್ನವೇ ಥಣ ಥಣನೆ ತೆರೆಯೆ ಜಚ್ಚರದಿಂದ
ತೆರೆಯೆ ಬಂದೊಳಪೊಕ್ಕು ಒರ್ಬನಿದ್ರ್ದೈ ತಂದೆ
ಎನುತೆ ಪಾದುಕ ಪದದಿ ಪೂಜೆಯಂ ಪರಿಹರಿಸಿ
ಅನುನಯದಿ ಮೊಗದಗ್ಗವಣಿಯೆರೆದು ಸಡಗರಸಿ
ಮುಡಿಯೊಳಿರ್ದಲರನೊಯ್ಯನೆ ಪೂಜೆಯಂ ಮಾಡಿ
ಕಡು ನೇಹದಿಂದೆ ಪಸಿದೈ ಪಸಿದೆ ಎನೆ ನೋಡಿ
ನೇಹದೋಗರಮುಮಂ ತಂದಲ್ಲಿ ಮುಂದಿರಿಸಿ
ಓಹೋ ಹೊ ಹೊತ್ತು ಹೋಯಿತ್ತೆನುತಲಾದರಿಸಿ
ಎನ್ನವನೆ ಎನ್ನವನೆ ಪಸಿದೆಯ್ಯ ಪಸಿದೆಯ್ಯ
ಎನ್ನವನೆ ಚನ್ನವನೆ ಹೊತ್ತು ಹೋದುದೆ ಅಯ್ಯ
ಉಣ್ಣವನೆಯುಣ್ಣವನೆಯೆನ್ನವನೆಯೆನ್ನಯ್ಯ
ಬಣ್ಣಿಸುತ ಬಣ್ಣಿಸುತ ಉಣ್ಣದನೆ ದಮ್ಮಯ್ಯ

ಅರಿದೆನರಿದಿಂ ನಾಚಿ ಇರ್ದಪೆಯು ನೀನೆಂದು
ಅರಿದಂತೆ ಹಿಂದುಮುಂದಾಗಿ ನೋಡುವೆನೆಂದು
ಇರಲೀಶನೆಂದಿನಂದದಲುಂಡ ಮಾಳ್ಕೆಯಿಂ
ಪರಿಹರಿಸಿ ಭೂತಕ್ಕೆ ಕೊಟ್ಟನೊಲ್ದಳ್ತಿಯಿಂ

ಆರೋಗಿಸಲ್ತಿರುಗಿ ನೋಡೆ ಹರುಷಂದಳೆದು
ಹಾರಯಿಸಿ ದಳವೇರಿ ತೆರೆಯುನತ್ತತ್ತೆಳೆದು
ದಿಟ್ಟಿಯಾದಪುದೆಂಮ ನೋಡಿ ಥೂ ಥೂ ಎಂದು
ಕಟ್ಟಳ್ಕರಿಂದೆ ನೇಹದ ಕಾಹನಿಟ್ಟೆಂದು
ಲಿಂಗ ಪ್ರಸಾದಮಂ ಕೈಕೊಂಡು ಸವಿ ಸವಿದು
ಹಿಂಗದಾ ಸವಿಗೆ ಹಾರಯಿಸುತುಂ ಮನಮೊಸೆದು
ಉಂಡನಿಂದೆನ್ನವಂ ಬರ್ದುಕಿದೆಂ ಬರ್ದುಕಿದೆಂ
ಉಂಡನಿಂದೆನ್ನವಂ ಬಾಳ್ವೆನಾಂ ಬರ್ದುಕಿದೆಂ
ಇನ್ನಿದೇ ಬೇಂಟೆಯಾಡಿಯು ತರ್ಪೆನೆಂದೆನುತೆ
ಇನ್ನೆನಗಸಾಧ್ಯಮಪ್ಪುದದೊಂದುಮಿಲ್ಲೆನುತೆ
ಒಡೆಯನಂ ನೋಡುತಂ ಭುಜವನಪ್ಪಳಿಗೊಂಡು
ಕಡು ಮೋಹವೆತ್ತಿಕ್ಕಿಯಾಡಲ್ಮನಂಗೊಂಡು

ಬಾಗುತುಂ ಕೈಚಪ್ಪಳಿಕ್ಕುತುಂ ಬೀಗುತುಂ
ಕೂಗುತುಂ ತೊನೆಯುತೊಂದೇ ಕಾಲೊಳಾಡುತುಂ
ಉಬುಬೆಂದು ಬೊಬ್ಬಿಟ್ಟು ಕೋ ಎಂದು ಕೂಗಿಟ್ಟು
ಅಬುಬೆಂದು ನಿಂದಾರ್ದು ನಾಲ್ದೆಸೆಗೆ ಕೊಣಕಿಟ್ಟು
ಉಡುವಣಿಗಳಲ್ಲಾಡೆ ಮುಡುಹಿಕ್ಕಿ ಕೆಲೆದಾಡೆ
ಪಿಡಿದಲಗನೆತ್ತಿ ಕುಣಿಕುಣಿದೊನೆದು ಕುಣಿದಾಡಿ
ಪರಿತಂದು ಬಿಗಿಯುಪ್ಪಿಯೆಯ್ದಿಸದೆ ಬಿಸುಸುಯ್ದು
ನೆರೆವ ತವಕದಿ ವಿರಹವೇರಿ ತನ್ನಂ ಬಯ್ದು
ಮತ್ತೆ ಮತ್ತೆಳ್ದಾಡಿ ಒಲೆದಾಡಿ ಮಲೆದಾಡಿ
ಚಿತ್ತವೆಂತಿರ್ದುದಂತಭವನೊಳಗೋಲಾಡಿ
ಕರಡಿಯುಂದದೆ ಕುಪ್ಪಿ ಕುಪ್ಪಿ ಕೆಲಕೆಲದಾಡಿ
ಉರವಣಿಸಿ ಹುಲ್ಲೆಗುಂತಿಕ್ಕಿ ನೆಗೆನೆಗೆದಾಡಿ

ಬಾಯಿಂದೆ ಕೊಂಬು ಮೌರಿಯು ಕಹಳೆಗಳನೂದಿ
ಬಾಯಿಂದೆ ಕರಡೆಯುಂ ಬಾಜಿಸುತೆ ಕೊಳಲೂದಿ
ಎನ್ನವನೆ ನೋಡೆಂದು ಎತ್ತಿಕ್ಕಿಯಾಡುತುಂ
ಚನ್ನವನೆ ನೋಡೆಂದು ಸಿಳ್ಳಿಕ್ಕಿಯಾಡುತುಂ
ಮುಂದೆ ತುರುಬಂ ಕಟ್ಟಿ ದುಮ್ಮಿ ಸಲೆಯಾಡುತುಂ
ಚಂದ ಚೆಂದದ ಬೇಡರಾಟವಂ ತೋರುತುಂ
ಆಡಲರಿಯದೆ ಕಾಲ್ಗೆ ಬಂದಂತೆಯಾಡುತುಂ
ಪಾಡಲರಿಯದೆ ಎನ್ನವನೆ ಎಂದು ಪಾಡುತುಂ
ಬೆರಿಕೆ ಇಲ್ಲದ ಬಚ್ಚ ಬರಿಯ ಭಕ್ತಿಯೊಳಾಡಿ
ನೆರವಿಲ್ಲದೇಕಾಂತ ಶಾಂತ ಭಕ್ತಿಯೊಳಾಡಿ
ಇಂತು ಬೆಳಗಪ್ಪನ್ನೆಗಂ ಜಾಗರಂ ಮಾಡಿ

ಕಂತುಮದಹರನ ಕಡು ಮೋಹದೊಳಗೋಲಾಡಿ
ನಡೆತಂದು ಶಂಕರನಸಮುರ್ದಪ್ಪಿ ಕೊಂಡಾಡಿ
ಒಡೆಯನೇ ಬೇಂಬೆಯಾಡಲ್ಪೋಪೆನೆಂದಾಡಿ
ನಿನ್ನಿನಂತಲ್ಲ ತಳುವೆಂ ತಳುವೆನೆನ್ನವನೆ
ನಿನ್ನಮೋಲಾಣೆ ಬೇಗದಿ ಬರ್ಪೆನೆನ್ನವನೆ
ಎಂದಗಲಲಾರ ನಿಲಲಾರನೆನ್ನವನೆಂದು
ಮುಂದುಗೆಟ್ಟೊಂದುವಂ ನುಡಿಯಲಂಜುವನೆಂದು
ಕಣ್ತೆರೆದು ನೋಡಲಮ್ಮಂ ದಿಟ್ಟಯಕ್ಕೆಂದು
ನುಣ್ಬನಿಯೊಳಲ್ಲದುಸುರಂ ಮುಂಡೆ ನೋಗೆಂದು
ನಡೆವನೊಂದಡಿಯಿಡ ವನಗಲಲಾರದೆ ನಿಲ್ಪ
ಒಡೆಯನಂ ನೋಡಿ ಕಣ್ಬಿಡಲಾರದೆಯುಳಲ್ವ
ಜುಮ್ಮನೆ ಬೆಮರ್ತು ದಡದಡಿಸಿ ಗದ್ಗದಿಸುವಂ
ಜೊಮ್ಮಿಡುತ್ತೆನ್ನವನೆ ಎಂದು ದಡದಡಿಸುವಂ
ತಿರುಗಿ ನೋಡುತ್ತಲ್ಲಿ ಮರೆಯಾಗೆ ಬೆಚ್ಚುವಂ
ಪರಿಹರಿಸಿ ನೆರೆ ನೋಡಿ ನೋಡಿ ಮೆಯ್ಸಿಚ್ಚುವಂ
ನಡೆಯತ್ತ ಕಾಲಿತ್ತಲೇನೆಂಬೆನಾತನಂ
ಒಡಲತ್ತ ಮನವಿತ್ತಲೇನೆಂಬೆನಾತನಂ

ನೋಟವತ್ತಲ್ಕಣ್ಗಳಿತ್ತಲಿಂತಿರಲು ಪೊಸತು
ಮಾಟವತ್ತಲು ಕೂಟವಿತ್ತಲಿಂತದು ಪೊಸತು
ದಿನದಿನಕೆ ಗಳಿಗೆಗಳಿಗಿಗೆ ನೇಹವೇರುತುಂ
ತನುಮನಕೆ ತನುಕಣ್ಗೆ ಪೊಸತು ಪಲ್ಲವಿಸುತುಂ
ಪೋದನೆಂತಕ್ಕೆ ಬೇಂಟೆಗೆ ತಾನೆ ಕಣ್ಣಿಂದ
ಸಾದರಂ ಮಿಗೆ ಪೋದನತ್ತಲಾ ಕಣ್ಣಿಂದ

ಇತ್ತಲಾ ಶಿವಬ್ರಾಹ್ಮಣಂ ಮುನ್ನಿನಂದದಿಂ
ಹೊತ್ತ ಕೊಡನಗ್ಗವಣಿ ಹೂಪತ್ರಿಯೊಪ್ಪದಿಂ
ಮೆರೆವ ದೇವಾಲಯದ ಬಾಗಿಲ್ಗೆ ನಡೆತರಲು
ಹೊರಗೆ ಮುನ್ನಿಂದೆ ನಾಲ್ವಡಿ ಕುಸುರಿದರಿದಿರಲು
ಕಂಡೊಳಗೆ ಪುಗದೆ ಹೇಸುತ್ತೆ ಸಿಡಿಮಿಡಿಗೊಂಡು
ಬೆಂಡಾಗಿ ಬೇಳಾಗಿ ನೋಡಿ ಕೋಳ್ಪುದಿಗೊಂಡು
ಹೊತ್ತಗ್ಗವಣಿವೆರಸಿ ಬೆರಗಾಗಿ ನಿಂದಲ್ಲಿ
ಎತ್ತ ಹೋದ್ಯೆ ಶಿವನೆ ನಿನ್ನ ಹೊಲಬಿಲ್ಲಿಲ್ಲಿ
ಇಂತು ಮಾಡಿಸುವರೇ ಕಾಳಹಸ್ತೀಶ್ವರನೆ
ಇಂತಪ್ಪ ನಾಚಾರವೇ ಪಾರ್ವತಿ ಪ್ರಿಯನೆ
ಪ್ರಾಣಿಯಂ ಕೊಲಲೀವುದಿದು ಧರ್ಮವೇ ದೇವ
ಕಾಣನೇ ಅಡವಿಯೊಳ್ತಿರಹಿಲ್ಲವೇ ದೇವ
ಬಂದೀ ಮರುಳ್ತನಕ್ಕೆಂತರ್ಚಿಪೆಂ ದೇವ
ಇಂದು ಮೊದಲಾಗಿ ಬಾರೆಂ ಸುಳಿಯೆನೆಲೆ ದೇವ
ಕೊಲ್ವೆನವನಂ ಬಳಿಕ ಬಂದರ್ಚಿಪೆಂ ನೋಡ
ಸಾಲ್ವೆನೆನ್ನೀ ಪ್ರಾಣಮುಮನವಂಗೆಲೆ ನೋಡ
ಎಂದಿತ್ತ ಬೇರಿಳುಪಿಯಗ್ಗವಣಿ ಪತ್ರಿಯುಂ
ತಂದೊಂದರಿಂದುಡಿಗಿ ದುರ್ಗಂಧದಿಕ್ಕೆಯುಂ
ಸಾರೈಸಿ ಮಿಂದು ಮತ್ತಗ್ಗವಣಿಯುಂ ಕೊಂಡು
ದೂರಿಸುತೆ ಚಿತ್ತದೊಳು ಚಿಂತೆಯುಂ ಕೈಕೊಂಡು
ಬಂದು ಮಜ್ಜನಕೆರೆದು ದೇವಂಗೆ ಕೋಪಿಸುತೆ
ಎಂದುಮಿಂತೀ ದುರಾಚಾರವಿಲ್ಲೈ ಎನುತೆ

ಪತ್ರೆಯಿಂ ಪುಷ್ಪದಿಂ ಪೂಜೆಯಂ ಮಾಡುತಂ
ಚಿತ್ತಜಹರಂಗೆ ಧೂಪಾರತಿಯನೆತ್ತುತಂ
ಆರೋಗಿಸಲ್ಕಿತ್ತು ಕದವನಿಕ್ಕುತ್ತಲ್ಲಿ
ಮಾರಾರಿ ಮೆಚ್ಚಲವನಂ ಕೊಲ್ವೆನೆನುತಲ್ಲಿ
ಪೊರಮಟ್ಟು ಪೋದನತ್ತಲ್ಯಿವಬ್ರಾಹ್ಮಣಂ
ತೆರನರಿದು ಶಬರನಂ ಮರ್ದಿಸುವ ಕಾರಣಂ

ಇತ್ತಲಾ ಪಾರ್ವತಿ ಶಿವಂಗೆ ಬಿನ್ನಯಿಸಿದಳು
ಉತ್ತಮೋತ್ತಮ ಶಿವಾಚಾರ ಬಿನ್ನವಿಸಿದಳು
ದೇವ ತಿಳಿಯದು ನಿಮ್ಮ ಮಾಟವೆನಗೀಶ್ವರಾ
ಭಾವಿಸಲ್ಬೇರೊಂದು ಪರಿ ನೋಡೆ ಶಂಕರಾ
ಬೇಡನ ಚರಿತ್ರಮಿದು ಧರಣಿಗೆ ವಿರುದ್ಧವಿದು
ನೋಡೆ ನಿಮ್ಮಡಿಗಳ್ಗೆ ಮಿಗೆ ಸೈರಿಸಿರ್ಪುದು
ಮುಕ್ಕುಳಿಸಿದುದಕಮಂ ಮಜ್ಜನಕೆರೆದರುಂಟೆ
ಅಕ್ಕಕ್ಕು ಮುಡಿದ ಹುವ್ವಿಂ ಪೂಜಿಸಿದರುಂಟೆ
ಬರಿಮಾಂಸವಲ್ಲದರಮೇಲೆಂಜಲಿಂತುಂಟೆ
ಕರಿಗೊರಲ ನೀನೊಲ್ಡೊಡೆನಲಮ್ಮೆ ಇಂತುಂಟೆ
ಕಾಲಿಂದೆ ಪೂಜೆಯಂ ಶಿವಶಿವಾ ಎನಲಮ್ಮೆ
ಈ ಲೋಕದೊಳಗಿಲ್ಲ ನೀನೊಲ್ದಡೆನಲಮ್ಮೆ
ಇಂತಪ್ಪ ಬೇಡಂಗೆ ಮೆಯ್ಯಾನುವರೆ ದೇವ
ಇಂತಪ್ಪ ಬೇಡಂಗೆ ಕದವ ತೆರೆವರೆ ದೇವ
ಹುಟ್ಟಿದಂದಿಂ ವಿಭೂತಿಯನಿಟ್ಟು ಬಲ್ಲನೇ
ಹುಟ್ಟಿದಂದಿಂ ಶಿವಶಿವಾ ಎಂದು ಬಲ್ಲನೇ
ಎನ್ನವನೆ ಎನ್ನವನೆ ಎಂಬುದಿದು ಮಂತ್ರಮೋ
ತನ್ನಯ ವಿನೋದಂ ಶಿವಾರ್ಚನೆಗೆ ತಂತ್ರಮೋ
ಮಿಂದು ಭಸಿತವನಿಟ್ಟು ರುದ್ರಾಕ್ಷಿಯಂ ಧರಿಸಿ
ಬಂದು ಹುವ್ವಂ ಕೊಯ್ದುತಗ್ಗಣಿಯನಾದರಿಸಿ
ತಂದು ಮಜ್ಜನಕೆರೆದು ಶಿವ ಪೂಜೆಯಂ ಮಾಡಿ
ನಿಂದು ಧೂಪಾರತಿಯನೆತ್ತಿ ನಲವಿಂ ನೋಡಿ
ಉಪಹಾರವೀವುತ ನಮಸ್ಕಾರವಂ ಮಾಡಿ

ಜಪ ತಪ ಧ್ಯಾನ ಪ್ರದಕ್ಷಿಣಂಗಳ ಮಾಡಿ
ಪೂಜಿಸುವ ಪಾರ್ವಂಗೆ ಬಾಯ್ಕಿಡುಕದಿರ್ದಿಪಿರಿ
ಓಜೆಗೆಟ್ಟಾ ಲುಬ್ಧಕಂಗೆ ಕರುಣಿಸಿದಪಿರಿ
ಎಂದುಂ ಪ್ರದಕ್ಷಿಣಂ ಬಂದವಂ ಬಲ್ಲನೇ
ಎಂದುಂ ನಮಸ್ಕಾರವಂ ಮಾಡಿ ಬಲ್ಲನೇ
ಅದು ಮಾಣ್ಗೆ ಕೈ ಎತ್ತಿ ಪೊಡಮಟ್ಟು ಬಲ್ಲನೇ
ಮುದದಿಂದವಂ ಸ್ತೋತ್ರವಂ ಮಾಡಬಲ್ಲನೇ
ಆವ ಪರಿಯಿಂದೊಲ್ದಿರಭವ ನೀವಾತಂಗೆ
ಹೇವವಿಲ್ಲದ ದುಶ್ಚರಿತ್ರದ ಕಿರಾತಂಗೆ

ಎನೆ ವಿರೂಪಾಕ್ಷನಾ ಮಾತಿಂಗೆ ನಸುನಗುತೆ
ನಿನಗೆ ಪೇಳ್ದಪೆನಗಜೆ ತಿಳಿಯಕೇಳೆಂದೆನುತೆ
ಪಾರ್ವನಗ್ಗವಣಿ ತಿಳಿ ಮನ ಕದಡು ಎಲೆ ಗೌರಿ
ಪಾರ್ವನರ್ಚನೆ ಇಸಿತು ಮನವತಿ ವಿಷಂ ಗೌರಿ
ಅವನಿಟ್ಟ ಭಸಿತವವನಂ ಮುಟ್ಟದೆಲೆ ಗೌರಿ
ಅವನ ರುದ್ರಾಕ್ಷಿಯವನಂ ಪೊರ್ದದೆಲೆ ಗೌರಿ
ಬಾಯಮಂತ್ರಂ ಮನದ ಕ್ಷುದ್ರತಂತ್ರಂ ಸೂಸೆ
ಕಾಯವೇಷಂ ಮನದ ಭವಿತನವದೇಂ ಲೇಸೆ
ಎನ್ನನರ್ಚಿಸಿ ಭವಿಗೆ ಕಯ್ಯಾನುವರೆ ದೇವಿ
ಎನ್ನ ಪೊಗಳುತಲನ್ಯರಂ ಪೊಗಳ್ವರೆ ದೇವಿ
ಸತ್ಯವಿಲ್ಲದ ಪೂಜೆ ಸಸಿನವಪ್ಪುದೆ ಗೌರಿ
ನಿತ್ಯವಲ್ಲದ ಹಾಡು ಸೊಗಸಪ್ಪುದೇ ಗೌರಿ
ಮನವಿಲ್ಲದವ ಮುಟ್ಟಿ ಬಡಿವಡೆದ ತೆರನೆನಗೆ
ಮನವುಳ್ಳವಂ ಬಡಿಯೆ ಪೂಜಿಸಿದ ತೆರನೆನಗೆ
ಅರಿಯೆಯಾ ಗಿರಿಜೆ ಮುನ್ನ ಕಲ್ಲಿಂದಿಟ್ಟುದಂ
ಅರಿಯೆಯಾ ಗಿರಿಜೆ ಮುನ್ನ ಬಾಗಿಲ ಕಾಯ್ದುದಂ
ಅರಿಯಾ ಮಹಾದೇವಿಯಿಂಬಲಿಯನುಂಡುದಂ
ಅರಿಯಾ ಮಹಾದೇವಿಯುರುಳುತ್ತ ಪೋದುದಂ
ಎನ್ನ ಭಕ್ತರ್ಗೆ ಬರಿಬೋಧೆಯುಂಟೆಲೆ ಗೌರಿ

ಎನ್ನ ಭಕ್ತರ್ಗೆಯುಪಚಾರಮುಂಟಲೆ ಗೌರಿ
ಪೂಜೆಯುವರೊಂದು ದೆಸೆ ನಿಷ್ಠೆಯುವರೊಂದು ದೆಸೆ
ಓಜೆಯುವರೊಂದು ದೆಸೆ ಒಲುಮೆಯುವರೊಂದು ದೆಸೆ
ಓದಿನವರೊಂದು ದೆಸೆ ಸಾಧುಳ್ಳರೊಂದು ದೆಸ
ವೇದಿಸುವರೊಂದು ದೆಸೆ ಸಾಧಿಸುವರೊಂದು ದೆಸೆ
ಭಕ್ತಿಯುವರೊಂದು ದೆಸೆ ಮುಕ್ತಿಯುವರೊಂದು ದೆಸೆ
ಯುಕ್ತಿಯುವರೊಂದು ದೆಸೆ ಶಕ್ತಿಯುವರೊಂದು ದೆಸೆ
ಕೇಳಾ ಗಿರಿಜೆ ನೀನೆ ಎನ್ನ ಭಕ್ತನನೆಂದೆ
ಕೇಳಾ ಗಿರಿಜೆ ಬೇಡನೆಂದೆನ್ನ ಮುಂದೆಂದೆ
ಬೇಡನವನಿಂದ್ರ ರವಿ ಚಂದ್ರಾದಿ ಪದವಿಯಂ
ಬೇಡನವನಜಹರಿಗಳೆಳಸಿರ್ಪ ಪದವಿಯಂ
ಎನ್ನನಲ್ಲದೆ ಹಾಡನೆನ್ನನಲ್ಲದೆ ಬೇಡ
ಎನ್ನನಲ್ಲದೆ ನೋಡನೆನ್ನನಲ್ಲದೆ ಕೂಡ
ಆತಂಗೆಯಾನುಮೆನಗಾತನೇ ಪರಮ ಬಂಧು
ಮಾತೇನುಯುವನೆನಗೆ ನೂತನ ಸುಧಾಸಿಂಧು
ಅವನ ಕಯ್ಯೊಳ್ಪೊಲಸು ಮನದೊಳಮೃತಂ ಗೌರಿ
ಅವನ ಮುಖದೊಳು ಜಲಂ ಮನದೊಳಗ್ಗಣಿ ಗೌರಿ
ಅವನ ಮುಂಡೆಯು ಹುವ್ವು ಮನದ ಪರಿಮಳವೆನಗೆ
ಅವನ ಕಾಲಾಟವತಿ ಸ್ನೇಹದರ್ಚನೆಯೆನಗೆ
ಎನ್ನವನೆ ಎಂಬ ಸಲುಗೆಯ ನುಡಿಯೆ ಮಂತ್ರವದು
ಎನ್ನನೇ ಕೂರ್ತು ಮಾಡುವುದು ಶಿವತಂತ್ರವದು
ತೋರಿದಪೆನೊಚ್ಚಿ ಸೈರಿಸು ಎನ್ನ ಭಕ್ತನಂ
ತೋರಿದಪೆನೀಗಳೇ ನೀಂ ಪೊಗಳ್ವ ಪಾರ್ವನಂ

ಎನುತಮಿರಲೇಳನೆಯ ದಿವಸದೊಳ್ಮನವುಕ್ಕಿ
ಮನದೊಳ್ಶಿವ ಬ್ರಾಹ್ಮಣಂ ಕೋಪಮುಮನಿಕ್ಕಿ
ಹರನಿಳಯದೊಳ್ಪೊಲಸು ಮಾಡುವ ಕಿರಾತನಂ
ಅರವರಿಸದಿಂದು ಕೊಲ್ವೆಂ ಮೂರ್ಖ ಬೇಡನಂ
ಎಂದು ಮಸೆಯಿಸಿದನೊಂದಂದದ ಕಠಾರಿಯಂ
ಮಂದಮತಿ ತನ್ನ ಜಡಬುದ್ಧಿಗನುಸಾರಿಯಂ

ಕೊಂಡುಬಂದಲ್ಲಿ ಕಾಳತ್ತಿಶಿಖರವನೇರಿ
ತೊಂಡ ಬೇಡನು ಇಂತು ಮಾಡುವನೆ ಎನುತೇರಿ
ನಡೆತಂದು ದೇವಾಲಯದ ಮುಂದೆ ನಿಲಲಲ್ಲಿ
ಪೃಡನಿತ್ತ ನೆನೆದನದ್ಭುತದಃಪಾಯವನಲ್ಲಿ
ಶಿವಲಿಂಗದೊಳಗೆರಡು ಕಣ್ಣಾಳಾಕಾರಮಂ
ಶಿವನಿರಿಸಿದಂ ಪರಿಕಿಸಲ್ಕೆಂದು ಚಿತ್ತಮಂ
ಆಲಿಯೊಂದೊಡೆದಂತೆ ನೆತ್ತರೊಸರುತ್ತಿರಲ್
ಮೆಲ್ಲಮೆಲ್ಲನೆ ಶಿವಬ್ರಾಹ್ಮಣಂ ನಡೆತರಲ್
ಕಾಣುತೆ ನಮಃಶಿವಾಯೆಂತಿದದ್ಭುತವೆಂದು
ಮಾಣದಂಜುತ್ತ ಭಯಗೊಂಡು ತಾ ನೊಂದಂದು
ಅರಸಿಂಗೆ ಕೇಡಿತ್ತೊ ದೇಶಕ್ಕೆ ಪೊಲ್ಲುದೋ
ಹರನೆ ಬಲ್ಲಂ ಮಹೋತ್ಪಾತವೇನಪ್ಪದೋ
ಎಂದು ವಿಪ್ರಂ ನೋಡಲಮ್ಮದೆ ಮನಂಗುಂದಿ
ಬಂದು ಪಟ್ಟಣಕೆ ಪೇಳ್ದಂ ಕೌತುಕದೊಳೊಂದಿ
ಕೇಳ್ದು ಜನವೆಯ್ತಂದು ಕಾಣುತಲಸಾಧ್ಯಮಂ
ತಾಳ್ದು ನೋಡಲ್ಕಂಜಿಯೋಡುತ್ತ ಚೋದ್ಯಮಂ
ಅತ್ತಲಾ ಪುರಜನಂ ಪೋಗಿ ತಮ್ಮೂರೊಳಗೆ
ಮತ್ತೆಮತ್ತತಿ ಭಯಂಗೊಳುತಿರಲ್ಮನದೊಳಗೆ

ಇತ್ತಲಾ ಕಣ್ಣಂದನೊಲ್ದು ಬೇಂಟೆಯನಾಡಿ
ಹೊತ್ತ ಹೂ ಮೊಗದಗ್ಗವಣಿಯೋಗರಂಗೂಡಿ
ನಡೆತರುತೆ ಪೊತ್ತು ಪೊಯ್ತೆನ್ನವಂ ಪಸಿದನೋ
ಕಡು ವೇಗದಿಂ ಬಾರನೆಂದು ಕೋಪಿಸುವನೋ
ಎಂದುವಿಲ್ಲದ ಮನಕೆ ಮರುಕವೇಕಪ್ಪುದೋ
ಇಂದು ಮನಕಿಂತಪ್ಪುದೇಕಾಗುತಿಪ್ಪುದೋ
ಪಸಿದಿರ್ದೊಡೇಕೆ ಬಿಟ್ಟಾನೇಕೆ ಬಂದೆನೋ
ವಶವಿಲ್ಲದೀ ಬೇಂಟೆಯೊಳಗೇಕೆ ಸಂದೆನೋ
ಮೃಗ ಕುಲಂಗಳ್ಕೂಡಿ ಹೆದರಿಸುತಲಿರ್ಪವೋ
ಖಗಕುಲಂಗಳ್ಕೂಡಿಯಂಜಿಸುತಲಿರ್ಪವೋ
ಬರಬರಲ್ಕೆಡದ ಭುಜಕಣ್ಪುಬ್ಬುಗಳ್ಕೆತ್ತೆ

ಬರುತಿರ್ದನುರವಣಿಸಿ ತನ್ನ ಮನಭಯವೆತ್ತೆ
ಚಿಂತಿಸುತೆ ದೂರಿಸುತೆ ಎಂತಿರ್ಪನೋ ಎನುತೆ
ಅಂತಸ್ಥದೊಳು ಬೆದಬೆದಂ ಬೇವುತುಂ ಬರುತೆ

ಬರೆ ಮುಂದೆ ಶಿವಲಿಂಗದೊಂದು ಕಣ್ಣೊಡೆದಿರಲ್
ಪರಿದಿಳಿವ ನೆತ್ತರೋರಂತೆಯೊಸರುತ್ತಿರಲ್
ಕಂಡು ಕಣ್ಗೆಟ್ಟು ಬಾಯ್ಬಿಟ್ಟು ಕಲ್ಮರನಾಗಿ
ಕಂಡು ಮುಂಗೆಟ್ಟು ಮತಿಗೆಟ್ಟು ಬಾಳ್ಕೆಣನಾಗಿ
ಬಿಲ್ಲಂ ಬಿಸುಟು ಕಳೆದು ಮಾಂಸಂಗಳಂ ಚಲ್ಲಿ
ತಲ್ಲಣಿಸುತಗ್ಗಣಿಯಮನುಗುಳಿ ಪೂವಂ ಚಲ್ಲಿ
ತಲೆಯುಮಂ ಕಣ್ಣುಮಂ ಹೊಯ್ದುಕೊಳುತೆಯ್ತಂದು
ಎಲೆ ತಂದೆ ಎನ್ನವನೆ ಏನಾದುದೈ ಎಂದು
ಹತ್ತೆ ಸಾರ್ದೈದಿ ಕಣ್ಣೊಡೆದಿರ್ದುದಂ ಕಂಡು
ನೆತ್ತರೋರಂತೊಸರುತಿರ್ಪುದಂದಮಿಗೆ ಕಂಡು

ಕೆಟ್ಟೆ ನಾಂ ಕೆಟ್ಟೆ ನಾಂ ಬೆಂದೆ ನಾಂ ಬೆಂದೆ ನಾಂ
ದಿಟ್ಟಿ ಇಂತೇಕಾಯ್ತು ನೊಂದೆ ನಾನುರಿದೆ ನಾಂ
ಎನ್ನೊಡೆಯನೇಂ ಸೈರಿಸಲಾರ್ಪನೇಯಿದಕೆ
ಮುನ್ನವೇ ಮುಂದುದೋರಿತ್ತು ಪಾಪಿಯ ಮನಕೆ
ಎನ್ನೊಡೆಯ ಕಣ್ಣೊಡೆಯೆ ನೋಡುತಿರಲಾರ್ಪೆನೆ
ಎನ್ನವನ ಸಾರ್ದಿರದೆ ಅಗಲ್ದಾನೆ ಕೆಟ್ಟೆನೆ
ಪರಮಾಣುವೇಕೆ ಮೇರುವಿನ ಸಖ್ಯಮದೇಕೆ
ಸರಿಸಿ ಏತಕೆ ಮಹಾರ್ಣವದ ಸಖತನವೇಕೆ
ಎನಗೇಕೆ ಸಾರ್ದೆಯಾಂ ಸಾಗಿಸುವೊಡೆನ್ನಳವೆ
ಎನಗೇಕೆಯಾಳ್ತನಂ ಬೆಸ ಕೆಯ್ಯಲೆನ್ನಳವೆ
ಆನೇಕೆ ನೀನೇಕೆ ಪಾಪಿಯೆನಗಪ್ಪುದೇ
ಆನಿರೆ ಮಹಾದೇವ ನಿನಗೆ ಇಂತಪ್ಪುದೇ

ಎಂನಲ್ಲಿ ರಂಗಮುಂಟಪದಲ್ಲಿ ಪೊರಳುತುಂ
ಮುಂದುಗೆಟ್ಟರಿವುಗೆಟ್ಟಲ್ಲಲ್ಲಿ ಪೊರಳುತುಂ
ಎಂತಕ್ಕೆ ಸಂತೈಸಿಕೊಂಡು ಮೆಲ್ಲನೆ ಬಂದು

ಮುಂತೆ ಕುಳ್ಳಿರ್ದು ಮರುಗುತ್ತೆ ಬಳಲುತ್ತಂದು
ಎನ್ನಯ್ಯ ಏಸಾದುದೆನಗೆ ಹೇಳೈತಂದೆ
ಎನ್ನಯ್ಯ ಕಣ್ಣವೇದನೆ ಪಿರಿದಲಾ ತಂದೆ
ಮೃಗವೊರಿಸಿಕೊಳಲೊತ್ತಿ ಕೋಡವೊನೆ ನೆಟ್ಟಿತೋ
ಅಗಲ್ದ ಪಾಪಿಯಂನೆನ್ನನಿಂತಿರಿದು ಸುಟ್ಟಿದೋ
ಎಂದುಟ್ಟ ಸೀರೆಯಿಂದೂದುತ್ತೆಯೊತ್ತುತ್ತೆ
ಕೆಂದಳಿರ್ಗಳಿಂದೊತ್ತಿ ನೋಡುತ್ತೆ ಬಾಡ ತ್ತೆ

ಹಾ ಕಂಡೆನೊಂದುಪಾಯವನರಿದೆನಿದಕೆಂದು
ಈ ಕಣ್ಗೆ ಎನ್ನ ಕಣ್ಣಿತ್ತುನೋಡುವೆನೆಂದು
ಆಗದೊಡೆ ತಲೆಯನರಿದೊಪ್ಪಿಸುವೆನಿದಕೆಂದು
ಬೇಗದಿಂದಸುವನೊಪ್ಪಿಸುವೆನೆನುತಂ ಸಿಂದು
ಬೋಳೆಯುಂಬಂ ತೆಗೆದು ಮನದಂದು ಶಂಕಿಸದೆ
ಕಾಳತ್ತಿಯರಸನೇ ನೋಡೆಂದು ಚಿಂತಿಸದೆ
ಶಂಕಿಸದೆ ಹೆಡ್ಡಯಿಸದರವರಿಸದೊಳಗೊತ್ತಿ
ಭೋಂಕೆನಲ್ಕೊಂಟಿಯೊಡೆದಿರ್ದ ಕಣ್ಣೊಳಗೊತ್ತಿ
ನೋಡೆ ತೊಳತೊಳಗಿ ಥಳಥಳಿಸಿ ಬೆಳಬೆಳಗುತಿರೆ
ನೋಡಿ ಕಣ್ಣಿಂದನಾನಂದಮಯನಾಗುತಿರೆ
ತೊಟ್ಟನಾ ಲಿಂಗದೊಳ್ಮತ್ತೊಂದು ಕಣ್ಣೊಸರೆ
ಕಟ್ಟಳ್ಕಿರೀಕ್ಷಿಸುತೆ ಕಲಿಯಾಗಿ ತಾನರರೆ
ಇನ್ನಂಜೆನಿನ್ನಂಜೆಸಿನ್ನೊಂದು ಕಣ್ಣುಂಟು
ಎನ್ನವನೆ ಎನ್ನವನೆ ಬಳಿಕ ನೀನೆನಗುಂಟು
ಎಂದೆನುತೆ ಸದ್ಭಕ್ತಿ ಕುಶಲನಾನಂದದಿಂ
ಇಂದು ಶೇಖರನೊಡೆದ ಕಣ್ಣೋಯುದಂದದಿಂ
ಉಂಗುಟದೊಳೊತ್ತಿ ಕಣ್ಗುರುಹ ಮಾಡುತ್ತಲ್ಲಿ
ಮುಂಗುಡಿಸಿ ತನ್ನ ಮತ್ತೊಂದು ಕಣ್ದೆಗೆವಲ್ಲಿ
ಗಣಪದವಿಯುಂ ಬಯಸಿಯೊಲ್ದು ಕಣ್ಣಿಡುವಂತೆ
ತ್ರಿಣಯನಂ ಭಕ್ತಿಯಿಂ ಕಣ್ದೆರದು ನೋಳ್ಪಂತೆ
ತಂದುಂಗುಟದ ಕುರುಹಿನಿಂದಲ್ಲಿ ಕಣ್ಗೊಳಿಸಿ
ಇಂದುಧರನಿನ್ನಿರಲ್ಬಾರದೆನುತಂ ಕುರಿಸಿ

ಶಿವಲಿಂಗದಿಂ ಶಿವನ ಹಸ್ತವುದ್ಭವಿಸುತ್ತೆ
ಶಿವನಲ್ಲಿ ಕಣ್ಣಪ್ಪನೆಸೆವ ಕೈವಿಡಿದೆತ್ತೆ

ಪೂಮಳೆಗಳೆರಗಿ ದುಂದುಭಿ ಕುಲಂಗಳ್ಮೊಳಗೆ
ಕಾಮಹರ ದಶಭುಜಂ ಪಂಚವದನಂ ತೊಳಗೆ
ನಂದೀಶ ವೀರಭದ್ರಾದಿ ಗಣಸಮಿತಿ ಬರೆ
ಇಂದ್ರಾದಿ ದೇವರ್ಕಳೆಲ್ಲರುಂ ಬರುತಮಿರೆ
ಕಂಡಾ ಗಿರಿಜೆ ಎನ್ನ ನೇಹದಸುವಪ್ಪನಂ
ಇಂತಪ್ಪ ಭಕ್ತನಂ ಕಂಡು ಬಲ್ಲಾ ಗಿರಿಜೆ
ಇಂತಪ್ಪ ಭಕ್ತನಂ ಕೇಳ್ದು ಬಲ್ಲಾ ಗಿರಿಜೆ
ಎಂದು ಕಣ್ಣಪ್ಪನಂ ನೋಡಿ ಕೊಂಡಾಡುತುಂ
ಸಂದಣಿಪ ಪುಳಕದಿಂದಪ್ಪಿ ಕೊಂಡಾಡುತುಂ
ಭಾಪುರೇ ಕಣ್ಣಪ್ಪ ಪೂತುರೇ ಕಣ್ಣಪ್ಪ
ಭಾಪು ಮಝುಭಾಪು ಮಝುಪೂತುರೇ ಕಣ್ಣಪ್ಪ
ಎಲ್ಲರ್ಗೆ ಕಣ್ಣನಾನೀವೆನೆಂತದ ಮಾಣ್ದು
ಇಲ್ಲಿ ಇಂತೆನಗೆ ಕಣ್ಣಿತ್ತೆ ಭಕ್ತಿಗೆ ಪೂಣ್ದು
ಎನಗೆ ಕಣ್ಣುಂ ನೀನೆ ಎನಗೆ ಪುಣ್ಯಂ ನೀನೆ
ಎನಗೆ ಪುತ್ರಂ ನೀನೆ ಎನಗೆ ಮಿತ್ರಂ ನೀನೆ
ನಿನ್ನ ಪರಿಸಣದ ಪರಿಸಣವೆ ನೋಡಿತ್ತೆನಗೆ
ನಿನ್ನ ಮೊಗದಗ್ಗವಣಿಯೇ ಅಗ್ಗವಣಿ ಎನಗೆ
ನಡೆ ವಿಮಾನವನೇರಿಕೊಳ್ಳ ಕಣ್ಣಂದ ಎನೆ
ನುಡಿದು ಬಿನ್ನೈಸಿದಂ ಸುರರೆಲ್ಲ ಚೋದ್ಯಮೆನೆ
ದೇವ ಬೆಸಸಲ್ವೇಳ್ಕು ತನುವೆರಸಿ ಬರ್ಪೆನೇ
ಭಾವಿಪೊಡೆ ಈ ದೇಹವೆರಸಿ ಬರಲಾರ್ಪೆನೇ
ಎನಲೊಂದು ದೇಹವಿಲ್ಲಿಗೆ ಮೆರೆಯಿತಿರ್ಕೆಂದು
ಮನವೊಸೆವುತೊಂದು ನಿರ್ಮಳ ದೇಹವಂ ತಂದು
ಕಣ್ಣಪ್ಪನಂ ಪೊಗಿಸಿ ಸರ್ವ ಸಂಭ್ರಮದಿಂದೆ
ಕಣ್ಣಿತ್ತನಂ ವಿಮಾನದೊಳಿರಿಸಿ ನಲವಿಂದೆ
ನೆಗೆದನೀಶ್ವರನಂದು ಕೈಲಾಸಪುರದತ್ತ

ಬಗೆಯೊಳಾನಂದ ಪುಳಕಂಗಳಂ ಧರಿಸುತ್ತ
ಬಂದು ಕೈಲಾಸಮಂ ಪೊಕ್ಕು ಸಂತೋಷದಿಂ
ನಿಂದು ಭದ್ರಾಸನದೊಳೊಪ್ಪುತ ವಿಳಾಸದಿಂ
ಕಣ್ಣಪ್ಪನಂ ಕರೆದು ಗಣಪದವಿಯುಂ ಕೊಟ್ಟು
ಬಣ್ಣವಣ್ಣಿಗೆಯ ಪೊಸ ಬೀಳುಡಿಗೆಗಳಂ ಕೊಟ್ಟು
ಭಕ್ತರ ಸುಖಂ ತನ್ನ ಸುಖವೆನಿಸುವೀಶ್ವರಂ
ಭಕ್ತರ ಮುಖಂ ತನ್ನ ಮುಖವೆನಿಸುವೀಶ್ವರಂ
ಭಕ್ತ ಜೀವಂ ತನ್ನ ಜೀವವೆನಿಸುವ ಶಿವಂ
ಭಕ್ತಕಾಯಂ ತನ್ನ ಕಾಯವೆನಿಸುವ ಶಿವಂ
ತನ್ನ ಗಣಸಂಕುಳಕೆ ಹೇಳುತುಂ ಹಿಗ್ಗುತುಂ
ತನ್ನಾಪ್ತ ಗಣದೊಳಗೆ ಸಲಿಸಿ ಕೊಂಡಾಡುತುಂ
ದೇವಗಣ ಸಂಕುಳದೊಳಪ್ರತಿಮನೊಪ್ಪಿದಂ
ದೇವಗಣ ನಿವಹದೊಳಗಿಂದುಧರನೊಪ್ಪಿದಂ
ಕಮಳನಯನಾಕ್ಷಿಪೂಜಿತಪಾದನೊಪ್ಪಿದಂ
ಕಮಲಭವ ಪಂಚಶಿರಚ್ಛೇದನೊಪ್ಪಿದಂ
ಅಮಮ ಪುರಮಥನನಘವನದಾವನೊಪ್ಪಿದಂ
ವಿಮಲಚಿದ್ಘನನಧ್ವರಧ್ವಂಸಿಯೊಪ್ಪಿದಂ
ಅಮಮ ತ್ರೈಲೋಕ್ಯರಕ್ಷಾದಕ್ಷನೊಪ್ಪಿದಂ
ಅಮಮ ಹಂಪೆಯ ವಿರೂಪಾಕ್ಷನಿಂತೊಪ್ಪಿದಂ

ಕಂದ॥ ಮೂರುಂ ಕಣ್ಣಿಂದದರಿಂ ।
ಬೇರೊಲ್ದಿನಗಭವಭಕ್ತಿನಯನಮನಿತ್ತು ॥
ಮೂರಾದಾಕಣ್ಣಪ್ಪನನಿವನೆ ।
ಕರುಣಿಸುದು ಹಂಪೆಯ ವಿರೂಪಾಕ್ಷಾ ॥

**ಸಮಾಪ್ತ.**

# ಆನಾಯನಾರ ಭಕ್ತರ ಮಹಾತ್ಮೆ

**ಕಂದ** ॥ ಆನಾಯನಾರನಪ್ರತಿ ।
ಮಾನಂದಾಶ್ಚರ್ಯ ಸರ್ವಗುಣಯುತಭಕ್ತ ॥
ಧ್ಯಾನಂ ಪ್ರತ್ಯಕ್ಷಂಮಿಗೆ ।
ತಾನೊಲವಿಂ ಮೆರೆದ ನಮ್ಮ ಹಂಪೆಯರಾಯಂ ॥

**ರಗಳೆ.**

ಶ್ರೀವಸುಮತೀಮಣಿಯೆಸಿಪ ಚೋಳನಾಡೊಳಗೆ
ಭಾವಿಸಲ್ಮಂಗಳವೆನಿಪ್ಪ ಪುರವದರೊಳಗೆ
ಆನೈನಾರೆಂಬ ಭಕ್ತನಿರ್ಪಂ ನೋಡ
ಏನೆಂಬೆನಾತನಿರವತಿ ವಿಚಿತ್ರಂ ನೋಡ
ಕಾರಣಕೆ ಕಾರಣಿಕನಾಗಿ ತಾ ಪುಟ್ಟಿದಂ
ಮುರಾರಿ ಬೆಸಸೆ ಪಂಚಾಕ್ಷರಿಗೆ ಪುಟ್ಟಿದಂ
ಪುಟ್ಟಿದಂದಿಂದೆ ಪಂಚಾಕ್ಷರಿ ಜಪಂ ತನಗೆ
ದಟ್ಟಡಿ ಇಡುತ್ತೆ ಪಂಚಾಕ್ಷರಿ ಜಪಂ ತನಗೆ
ಬಳೆವಲ್ಲಿ ಇಂತಿವೆ ಬಳೆಯಿಸಿದವಾತನಂ
ಸುಳಿವಲ್ಲಿ ಪಂಚಾಕ್ಷರಿಯೆ ಸುಳಿಸಿತಾತನಂ
ಇಂತು ಪಂಚಾಕ್ಷರಿಯೆ ಬಾಯ್ಬೆಣ್ಣೆ ಎನೆ ಬಳೆದು
ಸಂತತಂ ಪಂಚಾಕ್ಷರಿಯೆ ನಾಲಗೆಗೆ ಸವಿದು
ಉದಯ ಸಮಯದೊಳೆದ್ದು ದೇವಾಲಯಕೆ ಬಂದು
ಮದನಾರಿ ಶರಣೆನುತ ಕೆಯ್ಮುಗಿವುತುಂ ನಿಂದು
ಅನವರತವೈದಕ್ಕರವನೆಯುಚ್ಚರಿಸುತುಂ

ನೆನೆವುತಿರಲೊಂದುಪಾಯುವನಲ್ಲಿ ನೋಡುತುಂ
ಇರೆ ಶಿವಂ ಪ್ರೇರಿಸಿದನಾತನ ಮನಕ್ಕಂದು
ಪುರದ ಗೋವೃಂದಮಂ ಕಾವುದೇ ಲೇಸೆಂದು
ನಿಶ್ಚೈಸಿ ನೆನೆಯುತನುನಯದಿಂದೆ ಪೊರಮಟ್ಟು

ನಿಶ್ಚಿಂತ ಚಿತ್ತನಾನಂದವಮಂ ಮುಂತಿಟ್ಟು
ಒಂದೊಂದು ಗೋಜನ್ಮದಾ ಋಷಿಗಳೆಲ್ಲರುಂ
ಬಂದೂರ ಜೀವದನವಾಗಿರಲ್ಕೆಲ್ಲರುಂ
ಊರದನವೆಲ್ಲವುಂ ತಾನೊಂದುಗೂಡುತುಂ
ದೂರಕ್ಕೆ ಪೊರಮಟ್ಟುಕೊಂಡು ಬಂದಾಡುತುಂ
ಪರಿದು ಮೇಗೆಂದು ಹುಲ್ಲುಳ್ಳ ಹೊಲದೊಳ್ಡೆದು
ಪರಿಪರಿಯ ಹುಲ್ಲುದಂಡೆಗಳ ನಲವಿಂ ತಳೆದು
ತಂದ ಕಟ್ಟೋಗರವನುಂಡು ಕಯ್ಯ ತೊಳೆದು
ಬಂದೊಂದು ನೆಳಲ ಹಸಲೆಯ ಮೇಲೆ ನಲಿನಲಿದು
ತಪ್ಪುಗಾಲಿಕ್ಕಿ ತ್ರಿಭಂಗಿಯಿಂದಂ ನಿಂದು
ಒಪ್ಪುತಿರ್ಪೊಂದು ಪೊಸ ಕೊಳಲಂ ಕೊಳುತ್ತಂದು
ಪಂಚಾಕ್ಷರಿಯ ಫಲವನೊಪ್ಪಿ ಸವಿದಂದದಿಂ
ಪಂಚವಕ್ತ್ರನ ಕಿವಿಗೆ ಸವಿಯನೀವಂದದಿಂ
ಅಧರದೊಳ್ತಂದಿಳುಪಿದಂ ಕೊಳಲನೊಪ್ಪದಿಂ
ಮಧುರಾಕ್ಷರಂಗಳಂ ಸವಿವ ಸಮುರಾಗದಿಂ
ಹೆಲ್ಲವಣೆ ಹೆಕ್ಕಳಂಗೊಂಡು ವನದೊಳ್ತೀವೆ
ಎಲ್ಲ ಮೃಗಂಗಳುಂ ಮೇಯುದೆ ಕಿವಿಯನೋವೆ
ಭಕ್ತಿಯಿಂ ಮರೆದೂದುತಲೆ ಸುಗತಿಗಳುಮಾಗೆ
ಯುಕ್ತಿಯಿಂ ಭರತಶಾಸ್ತ್ರಕ್ಕೆ ದಿಕ್ಕುಗಳಾಗೆ
ಹೊಳೆ ಪಹಣೆಯೊಳ್ಬೆರಸಿ ಪಹಣೆ ತಿರುವಿನೊಳಳಿಯೆ
ಸುಳಿಸುಳಿದು ತಿರುಪು ಪೊಂಪುಳಿಯೊಳಡಗುತೆ ಹೊಳೆಯೆ
ಬಣಿತೆ ಗಮಕಮನುಗುಳೆ ಗಮಕವರಿದಂತೊಡರೆ
ಅಣಕ ನಯದೊಳ್ಮೊಳೆಯೆ ನಯವಿಂಪಿನೊಳಗಡರೆ
ಅವು ಬೆಡಂಗಂ ಬೆರೆಯೆ ಬೆಡಗು ಕಾಲಂ ಕೊನರೆ
ನವರೀತಿಯೊಡ್ಡಯಿಸೆಯೊಡ್ಡವಣೆ ಮೇಲಡರೆ
ಪೊಸದೇಸಿ ಪಜ್ಜಳಿಸೆ ಪಜ್ಜಳಂ ಪಲ್ಲವಿಸೆ
ಮಿಸುಕುತಿರಲನುಜಾಯಿ ಹೂಂಕಾರ ವೊತ್ತರಿಸೆ
ನುಣ್ಪು ನುಸುಳದೆ ಪೊಣ್ಮೆ ಕಮ್ಮವಣೆಗೆಡೆಗುಡಲು
ತಣ್ಪುಸೊಂಪಿನೊಳೊಂದಿ ಕಾಳಾಸಕೆಡೆಗುಡಲು

ಕಾಂತಿ ಕವಲೇರಿ ಸರಿಯೊಳ್ಪಂಜಳಮನುಗುಳೆ
ಶಾಂತಿರಾಗಂ ರಸದ ಸೋಪಾನದೊಳ್ನೆಗಳೆ
ರಾಗ ರಸದೊಳಗೆ ಪಂಚಾಕ್ಷರಿಗಳೇಳುತಿರೆ
ನಾಗಾಭರಣನೆಲ್ಲವಂ ಒರೆದು ಕೇಳುತಿರೆ
ವದನದೊಳ್ವೇಣುವಿನೊಳ್ಳೈದಕ್ಕರಂಗಳಿರೆ
ಹೃದಯದೊಳಗುಸುರೊಳಗೆ ಶಂಕರಂ ಸಿಲ್ಕುತಿರೆ
ಪಂಚಮುಖದೊಳಗೆಲ್ಲ ಕೊಳಲದನಿ ತೊಳಗುತಿರೆ
ಪಂಚಾಕ್ಷರಿಗೆ ನಾದ ಮೂರ್ತಿಯಿಗೆ ಸೋಲುತಿರೆ

ಬಾರಿಸುವ ಕೊಳಲ ದನಿಗೆಯ್ತಂದು ಗೋಕುಲಂ
ಮೇರೆಗೆಟ್ಟರಿವುಗೆಟ್ಟಿಂ ಸಲೆ ನಿರಾಕುಳಂ
ಎಳಲ್ವ ಕಿವಿ ಮುಗಿದ ಕಣ್ಣೆತ್ತಿದ ಮುಖಂ ಮೆರೆಯೆ
ಇಳಿದ ಕಟವಾಯ್ ಹೊಸ ನೊರೆ ಗರುಂಕೆಗಳೆಸೆಯೆ
ಜೊಮ್ಮಿಸುತೆ ಜೋಲುತ್ತೆಯೊಂದ ನೊಂದಂನೆಮ್ಮಿ
ಸುಮ್ಮಾನವೇರಿ ಮೆಯ್ಮಿರಿ ಸುಖಮಂ ಹೊಮ್ಮಿ
ಆನಾಯನಾರ ಹೆಗಲೊಳ್ಮೊಗವನಿಟ್ಟು ಕೆಲ
ಆನಾಯನಾರ ತೋಳೊಳ್ಮೊಗವನಿಟ್ಟು ಕೆಲ
ಇಂತು ಗೋಕುಲವೆಲ್ಲ ಮರೆದು ಕೇಳುತ್ತಮಿರೆ
ಮುಂತೆ ಬಗೆಗೆಟ್ಟು ಪಗೆಗೆಟ್ಟು ಮೃಗನಿಚಯಮಿರೆ
ಪುಲಿಯು ಕೊರಲೊಳು ಕೊಟ್ಟನಿಟ್ಟು ಕಣ್ಣಂ ಮುಚ್ಚಿ
ನಲಿದು ಕೇಳ್ವುವು ಮರೆದು ಪುಲ್ಲೆದನಿಯಂ ಮೆಚ್ಚಿ
ಮುಂಗುಲಿಯು ಮೇಲೆ ಹೆಡೆಯಿಟ್ಟು ಕೇಳ್ವಹಿಗಳಿಂ
ಸಂಗಡಿಸುವಹಿಯು ಹೆಡೆಗೆಡೆಗುಡುವ ಶಿಖಿಗಳಿಂ
ಗಿಳಿಯಂಚೆ ಕೋಕಿಲೆಗಳೆಳಸಿ ಕೇಳ್ವುವು ನೋಡ
ಅಳಿಕುಳಂ ತರುಗಿರಿಗಳೆಳಸಿ ಕೇಳ್ವುವು ನೋಡ

ಇಂತು ಸಚರಾಚರಂಗಳ್ಮರೆಯೆ ಕೊಳಲೂದಿ
ಸಂತತಂ ಪುಳಕದಿಂ ಪಲ್ಲವಿಸಿ ಕೊಳಲೂದಿ
ಬಯ್ಗಾಗೆ ಗೋವೆಲ್ಲವುಂ ಕೂಡಿ ಹೊಡೆತಂದು
ಮೆಯ್ಗರೆದು ಭಕ್ತಿ ತೋರದ ತೆರದೆ ನಡೆತಂದು

ತನ್ನ ಗೋವಂ ಕಾವ ಇದಿರ·ಗೋವಂ ಸೋವ
ಉನ್ನತ ಯಶಂ ಜಿತೇಂದ್ರಿಯನಾಗುತುಂ ಕಾವ
ಅವರಿಚ್ಛೆ ತಾನಲ್ಲ ತನ್ನಿಚ್ಛೆ ಗೋವಾಗಿ
ಭವನಿಚ್ಛೆ ತಾನಾಗಿ ತನ್ನಿಚ್ಛೆ ಭವನಾಗಿ
ಪಂಚಾಕ್ಷರಿಗಳಲ್ಲಿ ತೀವಿ ಕೊಳಲೂದುತುಂ
ಪಂಚವದನಂಗಳೊಳ್ಪೊಕ್ಕು ಕೊಳಲೂದುತುಂ

ಈ ತೆರಂ ಪಲವು ಸಂವತ್ಸರಂ ನಡೆಯುತಿರೆ
ಭೂತಳದೊಳೇಕಾಂತ ಭಕ್ತಿ ದಳವೇರುತಿರೆ
ಈ ಶರಣನಂ ಮೆರೆಯಬೇಕೆಂದು ಶಂಕರಂ
ಭಾಸುರಂ ಮಿಗೆ ಬಂದನಾ ವನಕೆ ಶಶಿಧರಂ
ಬಂದೊಂದು ಪೂತ ಕಕ್ಕೆಯ ಮೇಲೆ ನಿಂದಿರಲು
ನಿಂದು ನಲವಿಂ ಸ್ಥಾಣು ತರುವಿನೊಳಗೊಪ್ಪಿರಲು

ಆನಾಯನಾರಿತ್ತಲೂರಿಂದೆ ಪೊರಮಟ್ಟು
ನಾನಾ ವಿನೋದಂಗಳಂ ಶಿವಾರ್ಚನೆಗಿಟ್ಟು
ಎಂದಿನಂದದೆ ಗೋಕುಲಂಗಳಂ ಬಳಿಗೊಂಡು
ಬಂದೊಂದು ನೆಳಲೊಳಗೆ ನಿಂದು ಕೊಳಲಂ ಕೊಂಡು
ಪಂಚಾಕ್ಷರಿಯನೂದಲನುವಾಗಿಸುತ್ತಿರಲು

ಪಂಚಮುಖನಲ್ಲಿ ಕಕ್ಕೆಯ ಮರದ ಮೇಲಿರಲು
ಕಕ್ಕೆ ಸದ್ಭಕ್ತನ ಸುಖಕ್ಕೆ ನೆಲೆಯಾಗಿರಲು
ಕಕ್ಕೆ ಭಕ್ತನ ಸಮ್ಮುಖಕ್ಕೆ ಶಿವನಂತೆ ನಿಲೆ
ಕಕ್ಕೆ ರುದ್ರನ ರೂಪವ ಕಕ್ಕೆ ಸಮನಾಗಿರಲು
ಕಕ್ಕೆ ಶರ್ವನ ನಾಟಕಕ್ಕೆ ನಂಟಾಗಿರಲು
ಹೊನ್ನತರು ಪೂತಂತೆ ಹೊಂಬಣ್ಣವಾಗಿರಲು
ತನ್ನ ಕಣ್ಣಿಂ ಮನಕ್ಕಂ ಬೆಳಬೆಳಗುತಿರಲು
ಕಂಡು ಕುಣಿದಾಡುತುಂ ಕೊಳಲೂದುತುಂ ಬರುತೆ
ಹಿಂಡೇಳ್ದ ಪುಳಕಂಗಳೊಟ್ಟಿಲೇರಲ್ಬರುತೆ

ಪರಮ ಪಂಚಾಕ್ಷರಂಗಳನೂದುತುಂ ಬರುತೆ
ಹರನ ಗಣಪದವಿಯಂ ಕೊಳಲೂದುತುಂ ಬರುತೆ
ಶಿವನ ಸದ್ಭಕ್ತಿಯುಂ ಕೊಳಲೂದುತುಂ ಬರುತೆ
ಶಿವನ ಸರ್ವಸ್ವಮುಂ ಕೊಳಲೂದುತುಂ ಬರುತೆ
ಇರ್ದ ಮರನಂ ಶಿವಂ ಬೆರಸು ಹೃದಯದೊಳಿರಿಸಿ
ಸಾರ್ದು ಕಣ್ಮುಚ್ಚಿ ಕರಣಂಗಳಂ ಸಂವರಿಸಿ
ಶಿವ ಸ್ವರೂಪಂ ತನ್ನ ಹೃತ್ಕಮಲದೊಳಗಿರಿಸಿ
ಭವನ ಮೂರ್ತಿಯನಪ್ಪಿ ಮಿಕ್ಕು ಚಿತ್ತಂ ಬೆರಸಿ
ಮರದ ಮುಂದಡ್ಡನುಂ ತಿಗಟನುಂ ಪರಿದಾಡಿ
ಹರಿಸದಿಂ ಪಂಚಾಕ್ಷರಿಯನೂದಿ ಕೂಗಾಡಿ
ತಾನೆ ಕೊಳಲೂದಿ ತಾನೇ ಹಿಗ್ಗಿ ಹೆಚ್ಚುತುಂ
ನಾನಾ ರಸಂಗಳಂ ಸವಿಸವಿದು ಪೊಂಗುತುಂ
ಹೊರಗನಾಲಿಸದೆಯುರಿದೊಲಿದಂತೆಯಾಡುತುಂ
ತೆರಹುಗಾಣದೆ ಜಾನಿಸುತ್ತೆ ಕೊಳಲೂದುತುಂ
ಜಾನಿಸುವ ಸುಖದೊಳೆಚ್ಚರನೊಲ್ಲದಾಡುತುಂ
ಜಾನಿಸುವ ಸುಖಕೆ ಕಣ್ಮುಚ್ಚಿ ಮರೆದಾಡುತುಂ

ಇರಲಾತನೊಳಗಿರ್ದ ತನ್ನ ಮೂರ್ತಿಯ ನೆನೆದು
ಹರನಕ್ಕಂಪಲಾಕರುಷಿಸಲ್ಕಡೆತಂದು
ಧ್ಯಾನಿಸುವ ಶಿವ ಮೂರ್ತಿಯೊಳಗೆ ಬಂದೊಂದಿರಲು
ಧ್ಯಾನವಳಿದೊಳಗರಸುತಲ್ಲಿಲ್ಲದಿರುತಿರಲು
ಕಣ್ದೆರೆಯೆ ಮರನಳಿದು ಶಿವನುಳಿದು ಮುಂದೆ ನಿಲೆ

ನುಣ್ದನಿಗಳಿಂದಿತ್ತ ಬಾ ಮಗನೆನುತ್ತೆ ಸಲೆ
ಮನವಾರೆ ನೆನೆವಗಂ ಕಣ್ಣಾರೆ ಕಾಣುತುಂ
ತನುವಾರೆ ಸೋಂಕಿ ಕಯ್ಯಾರೆ ಬಿಗಿದಪ್ಪುತುಂ
ದೇವ ಇಂತೀ ಅಡವಿಗೇಕೆ ಬಂದೈ ತಂದೆ
ದೇವ ಹುಲಿ ಕರಡಿ ಮೊದಲಾದವುಂಟಿಲೆ ತಂದೆ
ಕೈಲಾಸಮುಂ ಬಿಟ್ಟು ಕರುಣಮುಂ ಮುಂದಿಟ್ಟು
ಶೈಲಜೆಯನಿರಿಸಿ ತನುವಂ ಮನಕ್ಕೆಡೆಗೊಟ್ಟು

ಎನಗೋಸುಗಂ ಮರದ ಮೇಲೆ ನಿಂದ್ಯೈ ತಂದೆ
ಎನಗೋಸುಗಂ ವಿಂಧ್ಯದೊಳಗೆ ಬಂದ್ಯೈ ತಂದೆ
ನಿನಗಿಸಿತವಸ್ತ್ರಿಯಂ ಮಾಡಿತೆನ್ನಯ ಭಕ್ತಿ
ನಿನಗಿನಿತು ಬೆಟ್ಟಿತಂ ಮಾಡಿತೆನ್ನಯ ಭಕ್ತಿ
ಎಂದು ಶಂಕರನ ಪದಯುಗಳವುಂ ಪಿಡಿದಿರಲ್

ಇಂದುಧರನೆತ್ತಿ ತಳ್ಕೈಸಿ ಹಿಗ್ಗುತ್ತಿರಲ್
ಪೂಮಳೆಗಳೆರಗಿದವು ದುಂದುಭಿಗಳುಣ್ಮಿದವು
ಸೋಮಧರನೆಂಬ ಬಿರುದಿನ ಕಹಳೆ ಮೊಳಗಿದವು
ಆಗಳಾ ಜೀವದನಜನ್ಮಂಗಳೆಲ್ಲುಳಿದು
ಬೇಗದಿಂ ಋಷಿವೇಷಮಂ ತನತನಗೆ ತಳೆದು
ವೇದವರಿಯದ ನಿಮ್ಮನರಿದೆವ್ಯೆ ಭಕ್ತನಿಂ
ವಾದವರಿಯದ ನಿಮ್ಮನೆಯ್ದಿದವು ಭಕ್ತನಿಂ
ಗೋಜನ್ಮಮಂ ಕಳಿದೆವೀ ನಿಮ್ಮ ಭಕ್ತನಿಂ
ಗೋಜಾತಮುಂ ಮಾಣ್ದುದಭವ ನಿಜ ಭಕ್ತನಿಂ
ಎಂದುರೆ ಪೊಗಳ್ವ ಋಷಿಜನಕ್ಕಭಯಮಂ ಕೊಟ್ಟು
ಮುಂದೆ ನಿಂದಾನಾಯನಾರ್ಗೆ ಹರುಷಂ ಬಟ್ಟು
ಇಂತೆಲ್ಲವಂ ಮರೆದು ಕೊಳಲೂದಿದವರುಂಟೆ
ಸಂತತಂ ಪಂಚಾಕ್ಷರಿಯ ಸವಿದರಿಂತುಂಟೆ
ಮರದ ಮೇಲಾನಿರಲ್ಕರಿದು ಪೊಲ್ದವರುಂಟೆ
ತರುವಿನೊಳಗಿರ್ದೆನ್ನನರಿದು ನೆನೆದವರುಂಟೆ
ನೋಡಯ್ಯ ನಂದೀಶ ನೋಡಯ್ಯ ಭಕ್ತನಂ
ನೋಡೆಂದು ತೋರುತ್ತೆ ಸದ್ಭಕ್ತಿಯುಕ್ತನಂ
ಸುರುಚಿರ ವಿಮಾನದೊಳಗಿರಿಸುತುಂ ನಡೆತಂದು
ಪುರಹರಂ ಕೈಲಾಸದೊಳಗೆ ತಾಂ ಪುಗುತಂದು
ತಾರಾದ್ರಿ ಶಿಖರದರಮನೆಯನೊಲವಿಂ ಪೊಕ್ಕು
ಚಾರುತರ ರತ್ನ ಸಿಂಹಾಸನದೊಳಂ ಪೊಕ್ಕು
ಮದನಾರಿ ಕುಳ್ಳಿರ್ದು ಪಾರ್ವತಿಗೆ ತೋರುತುಂ
ಪದವುಳ ಗಣಂಗಳ್ಗೆ ಹರುಷದಿಂ ಬೆಸಸುತುಂ
ಕೊಳಲೊಳಗೆ ಸಿಲ್ಕಿಕೊಂಡಿರ್ದೆನಾನಿನ್ನೆಗಂ

ಕೊಳಲದನಿಗೆಳಸಿಕೊಂಡಿರ್ದೆನಾನಿನ್ನೆಗಂ
ಹೊಸಪರಿಯ ಭಕ್ತಿಯಂ ಕಂಡೆವಾವೆಂದೆನುತೆ
ಹಸನಾದ ಸುಖಮಂ ಕಂಡೆವೆಂದೆನುತೆ
ಆನಾಯನಾರ್ಗೆ ಗಣಪದವಿಯಂ ಸಲಿಸುತುಂ
ನಾನಾಗಣ ವ್ರಾತದೊಡನೆ ಕೂಡಿರಿಸುತುಂ
ನೆನೆವರ ನಿಧಾನನೊಪ್ಪಿದನೀಶನೊಪ್ಪಿದಂ
ನೆನೆವರ ಮನೋರಥ ಸುಧಾವರುಷನೊಪ್ಪಿದಂ
ನೋಳ್ಪ ಭಕ್ತರ ಕಣ್ಣಪುಣ್ಯ ನಿಧಿಯೊಪ್ಪಿದಂ
ಬೇಳ್ಪ ಶರಣರ ಸುಖದ ಸುರಧೇನುವೊಪ್ಪಿದಂ
ಅರ್ಚಿಸುವ ಸದ್ಭಕ್ತರಾಯು ಸಿರಿಯೊಪ್ಪಿದಂ
ಮಚ್ಚಿ ಮರೆಯದ ಶರಣರಚ್ಚಸುಖನೊಪ್ಪಿದಂ
ಭಕ್ತ ಜನವನ ಕಮಲ ವಿಮಲಾರ್ಕನೊಪ್ಪಿದಂ
ಭಕ್ತ ನಿಧಿ ಹಂಪೆಯ ವಿರೂಪಾಕ್ಷನೊಪ್ಪಿದಂ

ಕಂದ॥ ನಾನಾ ದೇವಕಿರೀಟವಿ । ತಾನಪದಾಂಭೋಜ
ನೊಲ್ದು ಸದ್ಭಕ್ತಿಯ ನೆನಗಾ । ನಾಯನರಸು
ತಾನೆಂ । ದಾನತ ನಿಧಿಕುಡುಗೆ ಹಂಪೆಯ ವಿರೂಪಾಕ್ಷಂ ॥

**ಸಮಾಪ್ತ.**

# ಚನ್ನಯ್ಯಗಳ ಮಹಾತ್ಮೆ

ಸನ್ನುತಾಗಮನಿಕರ ತಲ್ಲಣಂಗೊಳೆ ತನ್ನ। ಜಿಹ್ವೆಯೊಳು ಸವಿದು ಪನ್ನಂಗಧರಗಿತ್ತ ಚನ್ನಯ್ಯ ನೆನ್ನಯ್ಯನೆಂಬೆ॥

ವೃತ್ತಃ—ವೇದದ ಡಂಗುರಂ ಹೆದರಿ ಸೈವೆರಗಾದವು ಶಾಸ್ತ್ರಸಂಭ್ರಮಂ। ಪೋದವು ನಿಚ್ಚಲೋದುವ ಪುರಾಣದ ಮಾತಿನ ಮಾಲೆಗಳೆಂಬುವೆಲ್ಲ ಹಾ। ಳಾದವು ಜಪ ತಪ ನೇಮ ಸಂಧ್ಯಾ ಸಮಾಧಿಗಳೆಂಬವೆಲ್ಲ ನುಚ್ಚು ನೂ। ರಾದವು ಹಂಪೆಯಾಳ್ದವರ ಚನ್ನನ ಕೂಡೊಲಿದುಂಡ ಕಾರಣಂ॥

## ರಗಳೆ.

ಶ್ರೀ ಶಿವನ ಸೆಜ್ಜೆ ಎನಿಸುವ ಚೋಳ ದೇಶವದು
ಈಶ ಭಕ್ತಪ್ರಜಕೆ ನಿಜ ಸುಖಾವಾಸವದು
ಆ ದೇಶಮಂ ಪೊಗಳ್ವೊಡೆನ್ನಳವೆ ಸುರರಳವೆ
ವೇದಮಯುವಭವಮಯುವಾದುದಕೆ ಪಡಿಯೊಳನೆ
ಶರ್ವಂಗೆ ಶಂಭುವಿಂಗಭವಂಗೆ ವಿಭವಂಗೆ
ಸರ್ವಜ್ಞ ನಿಧಿಗೆ ಗಣನಾಥಂಗಜಾತಂಗೆ
ತಿಲಕವದು ಪುಳಕವದು ಕಲಶವದು ವಿಳಸವದು
ಲಲಿತವದು ಫಲಿತವದು ಲಾಭವದು ಶೋಭೆಯದು
ಭವನವದು ಶಿವಭವನ ಊರೆಲ್ಲ ಶಿವಪುರಂ
ವಿವಿಧ ಜನವೆಲ್ಲ ಶಿವಭಕ್ತರ್ನಿರಂತರಂ
ಬೆಳೆಯಿಲ್ಲದೆಡೆಯಿಲ್ಲ ಜನವಿಲ್ಲದೂರಿಲ್ಲ
ನೆಳಲ ತಂಪಿಲ್ಲದಿಂಪಿಲ್ಲದಾರವೆಯಿಲ್ಲ
ಕಾವೇರಿ ಸೋಂಕಿದರ ಪಾಪಮಂ ಸೋವೇರಿ
ಕಾವೇರಿ ಸಕಲ ಸಸ್ಯಾದಿಗಳ ಕಾವೇರಿ
ಹರಿದಳಾ ದೇಶದೊಳ್ಹರ ಭಕ್ತಿ ರಸದಂತೆ
ಧರಣೀತಳಕ್ಕಮೃತ ವಿಮಳ ವಾರುಧಿಯಂತೆ
ಜಪವಲ್ಲಿ ತಪವಲ್ಲಿ ಫಲವಲ್ಲಿ ಚಲುವಲ್ಲಿ

ಜಪದರ್ಥವೆನಿಪ ಶಿವನಲ್ಲಿ ಶಂಕರನಲ್ಲಿ
ತರು ಕಲ್ಪತರು ಧೇನು ಕಾಮಧೇನುಗಳಲ್ಲಿ
ಗಿರಿ ಹೇಮಗಿರಿ ನಿಕರ ಸರ್ವ ಸುಖವಂತಲ್ಲಿ

ಇಂತಪ್ಪ ದೇಶಮಂ ಪಾಲಿಸುವ ಭೂಮಿಪಂ
ಸಂತತಂ ಕರಿಕಾಲ ಚೋಳನೆಂಬಾ ನೃಪಂ
ಹರಭಕ್ತ ಗುರುಭಕ್ತ ಚರಭಕ್ತನಾಗಿರುತ
ಪರಮ ಭಕ್ತಂ ಸತ್ಯಶೀಲನುನ್ನತಕರಂ

ಆ ಚೋಳರಾಯನೊಪ್ಪುವ ರಾಜಧಾನಿಯೊಳ್
ವಾಚಾಮಗೋಚರವೆನಿಪ್ಪನಂತವನಿಯೊಳ್
ಜಾತಿ ಮಾದರ ಚನ್ನನೆಂಬ ನಾಮಂ ತನಗೆ
ಓತಿರ್ಪುದನ್ವರ್ಥವಾಗಿ ಮೆರೆದೂರ್ವರೆಗೆ
ಇರ್ದು ಶಂಕರನ ಗುಪ್ತಾರಾಧನೆಗೆ ಮೆಚ್ಚಿ
ಸಾರ್ದು ಶಿವಭಕ್ತಿಯಂ ಬೀರಿದಿಚ್ಚೆಗೆ ಮೆಚ್ಚಿ
ಭಕ್ತಚೋಳನ ತುರಂಗಂ ಬರ್ದುಕಬೇಕೆಂದು
ಯುಕ್ತಿಯಿಂದೀಶಭಕ್ತನ ಸಲಹಬೇಕೆಂದು
ಕಂಪಣದ ಹುಲ್ಲಕಾಯಕವನೇ ಮರೆಮಾಡಿ
ಪೆಂಪಿಂದ ಶಿವನನರ್ಚಿಸುತಿಪ್ಪನೊಡಗೂಡಿ
ಲಿಂಗಾಭಿಮಾನಿ ಲಿಂಗಪ್ರಾಣಿ ಶಾಶ್ವತಂ
ಲಿಂಗಾನುಭಾವಿ ಲಿಂಗೈಕ್ಯನತ್ಯೂರ್ಜಿತಂ
ಗಿರಿಜೇಶನಾಪ್ತನತಿಗುಪ್ತಮಾಹೇಶ್ವರಂ
ಪೆರರರಿಯರೀಶನರಿದಿರ್ಪ ಭಕ್ತ್ಯಾತುರಂ
ಒಳಗೆ ಭಕ್ತಿಯ ಗುಂಪು ಹೊರಗೆ ಜಾತಿಯ ಸೊಂಪು
ಒಳಗೆ ಮುಕ್ತಿಯ ನುಂಪು ಹೊರಗೆ ಜನ್ಮದ ಪೆಂಪು
ತಾನಾಗಿ ಮುಗಿಲಮರೆ ಇಂದು ಮಂಡಲದಂತೆ
ಏನೆಂಬೆನುದಕದೊಳಗಣ ಕಮಲದಳದಂತೆ
ತಿಲದ ತೈಲದ ತೆರದೆ ಕಾಷ್ಠದಗ್ನಿಯ ತೆರದೆ
ನೆಲದ ಮರೆಯೊಳಗೆ ತೋರುವ ನಿಧಾನದ ತೆರದೆ

ಪೆರರರಿಯದಂತೊಳಗೆ ಲಿಂಗಾರ್ಚನೆಯೊಳಿರ್ಪ
ಅರಿವಂತೆ ಹೊರಗೆ ಕುಲಧರ್ಮ ಕರ್ಮದೊಳಿರ್ಪ
ಆತನ ಶಿವಾರ್ಚನೆಯನೆಣಿಸಲೆನ್ನಳವಲ್ಲ
ಭೂತೇಶ್ವರಂಗೆ ಕೌತುಕ ಉಳಿದವರ್ಗಳವಲ್ಲ

ಉದಯ ಸಮಯದೊಳೆದ್ದು ಕಾನನಕೆ ನಡೆತರುತೆ
ಪದೆದು ಶಿವನಿತ್ತ ಕಾಯಕವನೊಲಿದೆಡೆಗೊಳುತೆ
ಕಂಡ ಚೆಲ್ವಕ್ಷಿಮುಖದಿಂದೆ ಲಿಂಗಾರ್ಪಿತಂ
ಕೊಂಡ ನಾಲಿಗೆಯ ರುಚಿಯಿಂದಲರ್ಪಿತಂ
ಕೇಳ್ದ ಸವಿ ನುಡಿ ಕಿವಿಯ ಮುಖದಿಂದಲರ್ಪಿತಂ
ತಾಳ್ದ ಗಂಧಂ ನಾಸಿಕದ ಮುಖದೊಳರ್ಪಿತಂ
ಸೋಂಕಿದ ಮೃದು ದ್ರವ್ಯವಂಗದಿಂದರ್ಪಿತಂ
ಮುಂಕೊಳಿಸಿ ನೆನೆದ ರುಚಿ ಮನದಿಂದವರ್ಪಿತಂ
ಆಗುತಿರೆ ನಡೆತಂದು ಕಾಂತಾರದೊಳ್ಪೊಕ್ಕು
ರಾಗದಿಂ ನಿರ್ಮಳ ನದೀ ತೀರದೊಳ್ಪೊಕ್ಕು
ಮಗ ಮಗಿಪ ಮಲ್ಲಿಗೆಯ ಮಂಟಪದ ತಳದೊಳಗೆ
ಸೊಗಯಿಸುವ ನುಳ್ಳೊಳಗನುಗುಳ್ವ ತಣ್ಣೆಳಲೊಳಗೆ
ನುಣ್ಮಳಲ ದಿಂಟೆಯೊಳ್ತಳಿರ ಹಸೆಯಂ ಹಾಸಿ
ಕಣ್ಮನವನಭವನತ್ತಲ್ನಲಿದು ಕೈವೀಸಿ
ಬಾರಯ್ಯ ಬಾರ ಶಿವಭಕ್ತೈಕ ಬಂಧುವೇ
ಬಾರಯ್ಯ ಬಾರ ಕಾರುಣ್ಯರಸ ಸಿಂಧುವೇ
ಗುರುವೆ ವರ ಗುರುವೆ ಸದ್ಗುರುವೆ ಗುರುಲಿಂಗವೇ
ಭರದಲರ್ಚಿಪ ಜನದ ಮನದ ಸರ್ವಾಂಗವೇ
ಎಂದು ಪುಳಕ ಪ್ರತತಿ ನೆರೆವುತಿರೆ ಕರೆವುತಿರೆ
ಬಂದ ಪುಷ್ಪಾಂಬುಗಳ್ಸುರಿವುತಿರೆ ಪರಿವುತಿರೆ
ಸೆಜ್ಜೆಯೊಳಗಿರ್ದ ಶಿವಲಿಂಗವಂ ಪೊಂಗುವಂ
ಸಜ್ಜನ ಸ್ನೇಹ ರಸ ಸಂಗವಂ ಲಿಂಗವಂ
ತೆಗೆದು ಕರತಳದಿ ತಳಿಯಗ್ಗಣಿಯನೆರೆವುತುಂ
ಸೊಗಯಿಸುತ್ತಿರೆ ಮತ್ತೆ ಮತ್ತೆ ಕರೆದೋವುತುಂ
ತಂದು ಸಿಂಹಾಸನದ ಮೇಲೆ ಬಿಜಯಂಗೈಸಿ

ಸಂದಣಿಪ ನೇಹದಿಂ ಪೂರೈಸಿ ಹಾರೈಸಿ
ಪರಿಮಳದ ತಿರುಳೆನಿಪ ಮೊಲ್ಲೆ ಮಲ್ಲಿಗೆಗಳಂ
ಹರವರಿಯ ಕಂಪಿಡುವ ಸಂಪಿಗೆಯರಲ್ಗಳಂ
ಮರುಗ ದವನಂ ಪಚ್ಚೆ ಪಡ್ಡಳಿಯ ಪೂಗಳಂ
ಸುರಗಿಸುರಹೊನ್ನೆ ಚಂಗಣಿಗಿಲೆಯ ಪೂಗಳಂ
ಕಮಲದರಲ್ಗಳು ಸೇವಂತಿಗೆ ಪುಷ್ಪಗಳ ವಹಿಸಿ
ಕ್ರಮದಿಂದ ಹೊಂಗೇದಗೆಯ ಕಿರುವೆಸಳ ನಿಲಿಸಿ
ಸಂಗಡಿಸಿ ಸಿಂಗರಿಸಿ ಹೊಂಗಿ ಹೊರೆಯೇರುತುಂ
ಲಿಂಗಪೂಜೆಗಳೊಳಗೆ ಮನವಿಟ್ಟು ಮೀರುತುಂ
ಅಡಿಗಡಿಗೆ ನೋಡಿ ಮಾತಾಡಿ ಮೈವೆರ್ಚುತುಂ
ಹಾಡಿ ತಣಿವುತೆ ಮತ್ತೆ ಮತ್ತೆ ಮಿಗೆ ಕೊರ್ಬುತುಂ
ಪುಳುಕಿಸುತೆ ಪುಟವೇರಿ ತವಕಿಸುತೆ ಮದವೇರಿ
ಎಳಸುತಂ ದಳವೇರಿ ಬಳಸುತಂ ಬಲ್ಪೇರಿ
ನುಡಿಯುತುಂ ಗದುಗದಿಸಿ ಬೆಮರುತುಂ ಸಡಗರಿಸಿ
ನಡೆವುತುಂ ಡೆಂಡಣಿಸಿ ಬೀಳುತುಂ ತರಹರಿಸಿ
ಮೆಲ್ಲನೆಚ್ಚತ್ತು ಶಿವಲಿಂಗಮಂ ನಡೆ ನೋಡಿ
ಲಲ್ಲೆಗರೆವುತ್ತೆ ಪರಮ ಸ್ನೇಹವಂ ಮಾಡಿ
ಹಸಿದಯ್ಯ ಎನ್ನ ಜೀವದ ಜೀವವೇ ಎಂದು
ಉಸಿರ ಸಂತೈಸುತೋವುತ್ತೆ ಹತ್ತಿರೆ ಬಂದು
ಜಂಬೂಫಳಂ ಚೂತಫಳವನೊಲವಿಂ ಕರಂ
ಇಂಬಿನಲ್ಲಾರೋಗಿಸಲ್ಕೊಟ್ಟನಂತರಂ
ತೂಪಿರಿದು ಕಾಪಿಟ್ಟು ಕಣ್ಗಳೊಳಗೊತ್ತುತುಂ
ಭಾಪು ಭಾಗ್ಯವೆ ಎಂದು ಕೊಂಡಾಡಿ ಹೆಚ್ಚುತುಂ
ಕರುಣ ಪ್ರಸಾದಮಂ ಪ್ರೀತಿಯಂ ಕೈಕೊಂಡು
ಹರನ ಕಾರುಣ್ಯಮಂ ತಾನೊಚ್ಚತಂಗೊಂಡು

ಬಂದು ತೃಣಜಾಲಮಂ ಕೊಯ್ದೆತ್ತಿನೊಳ್ಪೇರಿ
ಸಂದಣಿಪ ಪುಳಕಮಂ ತನ್ನ ಮೆಯ್ಯೊಳ್ಪೇರಿ
ನಡೆತಂದು ಚೋಳನ ತುರಂಗ ಸಿಳಯದ ಮುಂದೆ

ಒಡನೆಯುವರುಪಾಧಿಯೊಳು ನೂಂಕುತ ಭರದಿಂದೆ
ಬಳಲುತುಂ ಬಂದು ನಿಜ ನಿಳಯದೊಳ್ಕುಳ್ಳಿರ್ದ್ದ

ತೊಳತೊಳಿಪ ಶಿವಲಿಂಗದತ್ತ ಚಿತ್ತಂ ಸಾರ್ದು
ಇರೆ ಬೋನವುಂ ಹಿಡಿದವರಲ್ಲಿ ತನ್ನರಸಿಯುರ್
ಹರನಿತ್ತುದಂ ಭಕ್ತಿಯಿಂದೆ ಕಡು ಬಡವೆಯುರ್
ಪಿಡಿಯೊಳುಳ್ಳುದನಮೃತ ಸಮಾನವುಂ ಮಾಡಿ
ತಡೆಯದೆ ಶಿವಂಗೆ ಸುಖದಿಂದರ್ಪಿತಂ ಮಾಡಿ
ಲಿಂಗಪ್ರಸಾದವುಂ ಪ್ರೀತಿಯಿಂ ಕೈಕೊಂಡು
ಜಂಗಮುನಿಧಾನನಿರ್ಪಂ ಸುಖಮನೆಡೆಗೊಂಡು
ಅತಿಭಕ್ತನತಿಗುಪ್ತನತಿ ಮಾನಿಯತಿ ಮೌನಿ
ಅತಿಯಾಪ್ತನತಿ ಯುಕ್ತನುರುತರ ಶಿವಧ್ಯಾನಿ
ಅರುವರಿಯರು ಭಕ್ತನೆಂದು ಚನ್ನಯ್ಯನಂ
ಮಾರಾರಿಯರಿದಿರ್ಪ ಭಕ್ತಿಸಂಪನ್ನನಂ

ಈ ತೆರದೊಳರುವತ್ತು ವತ್ಸರಂ ನಡೆಯುತಿರೆ
ಭೂತಳದೊಳತಿಗುಪ್ತ ಭಕ್ತಿಯಿಂ ಮೆರೆವುತಿರೆ
ಹರನೊಲ್ದು ಚನ್ನನಂ ಮೆರೆವೆನೀ ಧರೆಗೆಂದು
ಪುರಹರಂ ಸಂತಸಂಬಡುತಿರುತ್ತಿರಲಂದು

ಒಂದು ದಿನವೆಂದಿನಂದದಲಿ ಹೊಲನಂ ಪೊಕ್ಕು
ಇಂದುಧರ ಪೂಜೆಯುಂ ಮಾಡಿ ಹರುಷಂಮಿಕ್ಕು
ಆಡಿ ಹಾಡುತ್ತಲ್ಲಿ ಬಯ್ಗಿವರ ಮಿರುತಿರ್ದು
ನೋಡಿ ಭೋಂಕೆನೆ ಕಾಣುತೆಳ್ಚತ್ತು ಒಳಸಾರ್ದು
ಬೇಗದಿಂ ಪುಲ್ಹೊಯ್ದು ಬೈಲನೊಳ್ ಪೊರೆ ಹೇರಿ
ಲಾಗದಿಂ ಗಳಗಳನೆ ನಡೆತರುತ್ತಂ ಮೀರಿ
ಕಂಪಣದ ತಾಣದೊಳ್ಹುಲ್ಲನೊಲವಿಂ ನೂಂಕಿ
ಸೊಂಪೇರಿ ಚಿತ್ತಜಾರಿಯ ಚಿತ್ತವುಂ ಸೋಂಕಿ
ಮನೆಗೆ ಬಂದನುಮಿಸುತೆ ಕುಳಿರ್ದು ನೆನೆವುತಿರೆ
ವನಿತೆ ತಂದಂಬಕಳವುಂ ಮೆಲ್ಲನಿಳಿಪುತಿರೆ

ಉಪ್ಪುಗಾಯುಂ ಕೆಲದೊಳೊಪ್ಪಿ ಬಡಿಸುತ್ತಲಿರೆ
ಕಪ್ಪುರದೊಳಗೆ ಶಾಕಪಾಕಂಗಳೆಸೆಯುತಿರೆ
ಲಿಂಗಾರ್ಪಿತಂ ಮಾಡಿ ಚನ್ನಯ್ಯನೊಲವಿಂದೆ
ಅಂಗೈಸಿ ಲಿಂಗ ಪ್ರಸಾದಕ್ಕೆ ನಲವಿಂದೆ
ಮನವಿಟ್ಟು ಕಯ್ಯಿಟ್ಟು ಮೊಗೆದನಾನಂದದಿಂ
ಮನವೊಲ್ದು ಭಕ್ತಿರಸಮುಂ ಮೊಗೆವ ಚಂದದಿಂ
ಮೊಗೆದು ಕೈಕೊಳ್ವಲ್ಲಿ ಸವಿಜಿಹ್ವೆಯುಂ ಮುತ್ತೆ
ಬಗೆಯೊಳೈವಾರ್ಪಿತಂ ಒಡನೊಡನೆ ಬೆಂಬತ್ತೆ
ಮಧುರಾಮ್ಲರುಚಿಯು ಸುಖ ಶಿವಲಿಂಗಮುಂ ತಾಗೆ
ಸುಧೆಯು ಕಡು ಸವಿಯಿಂದೆ ನೂರ್ಮಡಿಸಿ ಸವಿಯಾಗೆ
ಸವಿದು ತಣಿವೆಯ್ದಿ ಸಲೆ ಗುರುಮೂರ್ತಿಯುರವಣಿಸಿ
ಸವಿಸಹಿತವಂಬಕಳವೆಲ್ಲವಂ ಲವಲವಿಸಿ
ಕೊಂಡನೇನೆಂಬೆನಾಂ ಚನ್ನಯ್ಯನೊಂದಾಗಿ
ಉಂಡನಭವಂ ಸ್ವರ್ಗ ಮರ್ತ್ಯಕ್ಕೆ ಪೊಸತಾಗಿ
ಒಂದು ಸುರಿಯೊಳಗೆ ಕೈವಂದುದೇ ಶಿವಪದಂ
ಮುಂದೆ ಸವಿದರ್ಪಿಸುವುದಕ್ಕಿಲ್ಲ ಘನಪದಂ
ಎಂದಂಜಿಕೊಂಡನಾ ಶಿವನಂಬಕಳಮುಮಂ
ಅಂದು ಶಿವನೊಡನುಂಡ ಚನ್ನನಂದುತ್ತಮಂ
ಭಾಪು ಭಾಗ್ಯವೆ ಚನ್ನನಿಂದಧಿಕರಿನ್ನುಂಟೆ
ಭಾಪು ಪುಣ್ಯವೆ ಶಿವನ ಕಾರುಣ್ಯವಿನಿತುಂಟೆ
ಇಂತು ಶಿವನುಂ ಚನ್ನನುಂ ತಣಿವುತಿರಲಿತ್ತ

ಸಂತ ಸುಖದಿಂದೆ ಭಾಸ್ಕರನುದಯುವಾಗುತ್ತೆ
ಇರೆ ನಿತ್ಯನೇಮಕ್ಕೆ ಚೋಳರಾಯುಂ ಬಂದು
ಹರನಾಲಯುಂ ಪೊಕ್ಕು ಕೈಮುಗಿವುತುಂ, ನಿಂದು
ಶಶಿಧರನ ವಾಮ ಭಾಗದೊಳಂದು ಕುಳ್ಳಿರ್ದು
ಪಶುಪತಿಯೆ ಶರಣೆಂದು ಸಂತಸದೆ ಕುಳ್ಳಿರ್ದು
ಆಗಮ ಸ್ಥಾನಂಗಳೊಳ್ವಿಭೂತಿಯನಿಟ್ಟು
ರಾಗದಿಂ ಪಂಚವಖನಲ್ಲಿ ಚಿತ್ತಂ ನಟ್ಟು

ರುದ್ರಾಕ್ಷಿಯುಂ ತಾಳ್ದು ಚೋಳನಾನಂದದಿಂ
ರುದ್ರನಂ ನೋಡಿ ಹೊಗಳುತ್ತುಮಾನಂದದಿಂ
ದರುಶನ ಸ್ಪರುಶನಂಗಳನಕ್ಕರಿಂ ಮಾಡಿ
ಹರುಷದಿಂ ಶಿವನ ಪ್ರಸಾದಂಗಳಂ ಸೂಡಿ
ಭರದಿಂ ಪ್ರದಕ್ಷಿಣ ನಮಸ್ಕಾರಮಂ ಮಾಡಿ
ಪುರಹರನನಿಂದುಧರನಂ ನೇಹದಿಂ ನೋಡಿ
ನವವಸ್ತ್ರಮುಂ ನೂತನ ರತ್ನಂಗಳಂ ತರಿಸಿ
ನವನವಾಭರಣದಿಂ ಪೂಜೆಯುನಲಂಕರಿಸಿ
ಆಡುತುಂ ಸುಖವೇರಿ ಹಾಡುತುಂ ಮುದವೇರಿ
ನೋಡುತುಂ ನಲವೇರಿ ಮಾಡುತುಂ ದಳವೇರಿ
ಸುಖದೊಳಿರ್ಪನಿತಕ್ಕೆ ಸವೆದು ಬಂದುದು ಬೋನ
ಅಖಿಳ ರುಚಿನಿಜಯು ವಿಳಸಿತ ಶಾಕ ಸಂತಾನ
ಒಯ್ಯಾರದಿಂದ ಬರೆ ಭಕ್ತಚೋಳಂ ಕಂಡು
ಕಾಯಮುಂ ಪುಳಕಮುಂ ಮುಸುಕಿ ಚಿತ್ತಂಗೊಂಡು
ರನ್ನ ದಡ್ಡಣಿಗೆಗಳ ಮೇಲೆ ಬೆಳಗಂ ಕರೆವ
ಮುನ್ನೂರು ಹೊನ್ನ ಹರಿವಾಣಂಗಳಿಂ ಮೆರೆವ
ಕೆಲವಟ್ಟಲುವನಿರಿಸಿ ನಲಿನಲಿದು ಸಡಗರಿಸಿ
ಒಲವೆ ಎನ್ನಯ ಬಲವೆ ಫಲವೆ ಎಂದುಣಬಡಿಸಿ
ದೇವಾನ್ನ ದಿವ್ಯಾನ್ನವಮೃತಾನ್ನವಂ ಬಡಿಸಿ
ಓವಿ ಸವಿಸಾಲಿಡುವ ಶಾಕಂಗಳಂ ಬಡಿಸಿ
ಹಪ್ಪಳಂ ಚೆಲುಪಾಲ ಘಟ್ಟಿಗಳನಲ್ಲಿರಿಸಿ
ತುಪ್ಪಮುಂ ಕೆನೆವೊಸಸರ್ಕ್ಕರೆಯುನಲ್ಲಿರಿಸಿ
ಬಡಿಸಿ ಹೆರೆ ಸಾರುತುಂ ಜವನಿಕೆಯುನೋಸರಿಸಿ
ಮೃಡನೆಯಾರೋಗಿಸೆಂದೊಲವಿಂ ನಮಸ್ಕರಿಸಿ
ಜವನಿಕೆಗೆ ಕಿವಿಗೊಟ್ಟು ನೃಪನಾಲಿಸುತ್ತುಮಿರೆ
ಸವಿವದನಿಗಳನೆಂದಿನಂತೆ ಹಾರುತ್ತುಮಿರೆ
ಹರನಲ್ಲಿ ಏನುವಂ ಮುಟ್ಟದಾರೈಸದಿರೆ
ಪರಿಕಿಸದೆ ಲೆಕ್ಕಿಸದೆ ಕಂಪಿಸದೆ ಸುಮ್ಮನಿರೆ
ತೊಟ್ಟನಾ ಜವನಿಕೆಯನೋಸರಿಸಿ ಕಾಣುತುಂ
ಕೆಟ್ಟೆನಿಂತೇಕಾಯ್ತೆನುತ್ತೆಯುರವಣಿಸುತುಂ

ಕೆಳ್ತಲಗನೆತ್ತಿಕೊಂಡಮವು ಕೊರಲಿಗೆ ಹೂಡೆ
ತಳ್ತು ಹೂಡುತ್ತುವಿರೆ ಶಂಕರಂ ತಾ ನೋಡಿ

ಓಹೋ ವಿಚಾರವಿಲ್ಲದೆ ಇಂತು ಮಾಳ್ಪರೆ
ಆಹಾಹ ನಿನ್ನರಸುತನವೆನಗೆ ಮಾಳ್ಪರೆ
ಕಂಡಯ್ಯ ಚೋಳ ನಿನಗಿನಿತು ಸೈರಣೆಯಿಲ್ಲ
ಉಂಡೆವಾ ಚನ್ನನೊಡನೆಮಗಿಂದು ಪಸಿವಿಲ್ಲ
ಪೂತು ಮಾದರ ಚನ್ನನೊಡನುಂಡೆವೆಲೆ ಚೋಳ
ಕೂತು ಮಾದರ ಚನ್ನನೊಡನುಂಡೆವೆಲೆ ಚೋಳ
ಕೇಳಂಬಕಳದ ಸವಿಯುದನೇನನೆಂದಪೆಂ
ಚೋಳಾದಿಗಳ್ಪಡೆಯುರದನೆಂತು ಬಣ್ಣಿಪೆಂ
ಪಾಕದಿಂದಪ್ಪ ವಸ್ತುಗಳದಕೆ ಪಡಿಯಿಲ್ಲ
ಲೋಕದೊಳ್ಪ್ಕಾಣೆನಾಂ ಪೇಳ್ವೊಡಂ ಪ್ರತಿಯಿಲ್ಲ
ದೇವಾನ್ನ ದಿವ್ಯಾನ್ನವೆಂಬುದಂನೇಳಿಪುದು
ಭಾವಿಸುವೊಡಿನ್ನದಂ ಪೆಸರಿಡಲ್ಕೇನರಿದು
ಕ್ಷೀರ ಮಧುಗಳ ರುಚಿಯುದಕ್ಕೆ ಕೇಳ್ಸರಿಯುಲ್ಲ
ಹಾರಯಿಸಿ ಸವಿಯುಳ್ಳ ಸಕ್ಕರೆಯುಮೆಣೆಯುಲ್ಲ
ಎಂದು ಶಿವನಾ ಲಿಂಗದೊಳ್ಪೊಕ್ಕನಾ ಕ್ಷಣಂ
ನಿಂದು ಚೋಳಂ ಕೌತುಕಂಬಟ್ಟನಾಕ್ಷಣಂ

ಬೆರಗಾಗಿ ಬೆಂಡಾಗಿ ಚನ್ನನಂ ಚಿಂತಿಸುತೆ
ಕರೆಗೊರಲನಿಂತುಂಬನೇ ಎಂದು ಮರಡಿಸುತೆ
ಪರಮನಿಗೆಯುಣಲಿತ್ತ ಶರಣನಂ ನೋಡುವೆಂ
ಹರುಷದಿಂದಾನವನ ಚರಣಮಂ ಸೂಡುವೆಂ
ನಡೆ ಯೆನುತೆ ಪೊರಮಟ್ಟನಲ್ಲಿ ಚೋಳೋರ್ವಿಪಂ
ನಡೆತರ್ಪ ಪರಿಜನ ಸ್ತೋಮದಿಂ ಭೂಮಿಪಂ
ನಡೆದರಿಯುದಚ್ಚ ಸುಖಿ ಕಾಲ್ನಡೆಯೊಳೈತರುತೆ
ಎಡಬಲದ ಮುಕುಟ ವರ್ಧನರೊಳಗೆ ನಡೆತರುತೆ
ಚನ್ನನಂ ನೋಡುವಾತುರ ಚಿತ್ತದೊಳ್ಪವಿದು
ತನ್ನ ಮನದೊಳಗೆ ಚನ್ನನ ಮೂರ್ತಿ ಇಡಿದಿಡಿದು
ನಿಂದವರಂ ನೆರೆದರಂ ಚನ್ನನಂ ಕೇಳುತುಂ

ಬಂದರಂ ಸಾರ್ದರಂ ಚನ್ನನಂ ಕೇಳುತುಂ
ಸಕಲಗುಣ ಜಲಧಿ ಚನ್ನಯ್ಯನಂ ಕಂಡಿರೇ
ಅಕಳಂಕ ಚರಿತ ಚನ್ನಯ್ಯನಂ ಕಂಡಿರೇ
ಎನ್ನಗತಿ ಎನ್ನಮತಿ ಚನ್ನನಂ ಕಂಡಿರೇ
ಎನ್ನ ನಿಧಿ ಎನ್ನ ಸುಧೆ ಚನ್ನನಂ ಕಂಡಿರೇ
ಶಿವನ ಸದ್ಭಕ್ತನಂ ಚನ್ನನಂ ಕಂಡಿರೇ
ಶಿವನಂತರಂಗದೊಳಭಿನ್ನನಂ ಚನ್ನನಂ
ಗುರುಲಿಂಗದೊಡನುಂಡ ಚನ್ನನಂ ಕಾಣಿರೇ
ಪುರಹರಂಗುಣಲಿತ್ತ ಚನ್ನನಂ ತೋರಿರೇ
ನಲಿದು ಹರನೊಡನೆ ರಂಜಿಸುವನಂ ತೋರಿರೇ
ಸಲೆದುರಿತ ಕುಲವ ಭಂಜಿಸುವನಂ ಕಾಣಿರೇ
ಹರಿಯಜರ ಪದವಿಗಳನೇಳಿಸುವ ಚನ್ನನಂ
ಧರಣಿಯುಂ ಶಾಂತಿಯುಂ ಪಾಲಿಸುವ ಚನ್ನನಂ
ತೋರಿರೇ ಚಂದ್ರಮೌಲಿಯ ಭಕ್ತ ಚನ್ನನಂ
ತೋರಿರೇ ಷಡ್ವರ್ಗ ಕರ್ಣನಂ ಚನ್ನನಂ
ಚನ್ನನಂ ತೋರಿ ಎನ್ನಂ ಕಾಯ್ದುಕೊಳ್ಳಿರೇ
ಚನ್ನಯ್ಯನೆನ್ನಯ್ಯನಿರ್ದೆಡೆಯನರುಪಿರೇ
ಚನ್ನಯ್ಯನಿರ್ಪ ಗುಡಿ ಇದೆ ಎಂದು ತೋರಿರೇ
ಚನ್ನಯ್ಯ ಭಕ್ತನೆನ್ನಯ್ಯನಂ ತೋರಿರೇ
ಅಯ್ಯೋ ಮಹಾದೇವ ಆಪೊಳ್ತು ಕಾಣ್ಬೆನೇ
ಅಯ್ಯೋ ಪದದ್ವಯವನೆಂದಪ್ಪಿಕೊಳ್ವೆನೇ
ಎಂದಲ್ಲಿ ಚಿತ್ತದನುತಾಪದಿಂ ಪೊರಳುತುಂ
ಅಂದಲ್ಲಿ ದೆಸೆವೆಸೆಗೆ ಚಾರರಂ ಕಳಿಪುತುಂ
ಇರೆ ಮುಂದೆ ಪಡಿಯರರ್ಪರಿದರಸುತಲಿ ಬಂದು
ಹಿರಿಯ ಕೇರಿಯನುರವಣಿಸಿ ಪೊಕ್ಕು ನಡೆತಂದು
ಚನ್ನನೆಂಬನ ನಿಳಯವಾವುದೆಂದರಸುತಿರೆ
ಚನ್ನಯ್ಯನಿರ್ಪ ಗುಡಿಯಿದೆ ಎಂದು ತೋರುತಿರೆ

ಒಳಗೆ ಚನ್ನಯ್ಯನತಿ ಕಂದುತುಂ ಕುಂದುತುಂ
ತಿಳಿವಳಿದುದೇನೆನುತೆ ನೋಡುತುಂ ಬಾಡುತುಂ

ಅರಮನೆಯ ಚಾರರೇ ತಾನೇಕೆ ಶಂಕರಾ
ಅರಸನೇಕೆನ್ನ ಮನೆಯೇಕೆ ಶಶಿಶೇಖರಾ
ಭಕ್ತನೆಂದರಿಯದಿರ್ದೊಡೆ ಲೇಸು ಬದುಕುವೆಂ
ಭಕ್ತನೆಂದರಿದ ಬಳಿಕಾನೆಂತು ಬದುಕುವೆಂ
ಶಿವ ಶಿವ ಮಹಾದೇವ ಶಿವಕೆ ಏನಪ್ಪುದೋ
ಶಿವನೆ ಬಲ್ಲಂ ವಿಚಾರಿಪೊಡೆ ಏನಪ್ಪುದೋ
ಅವಿಚಾರದಿಂದಿಂತು ಮಾಳ್ಪರೇ ಶಂಕರಾ
ಭವನೆಬಲ್ಲಂ ಇಂತು ಮಾಳ್ಪರೇ ಪುರಹರಾ
ಎಂದು ಚನ್ನಯ್ಯ ಮನದೊಳ್ನೊಂದು ನುಡಿವುತಿರೆ
ಮಂದಮತಿಯಾದನಿನ್ನೇವೆನೆಂದೆನುತುಮಿರೆ

ಎನುತುಮಿರೆ ಬಂದು ಗುಡಿಲಂ ಸುತ್ತಿ ಮುತ್ತುತಂ
ತನತನಗೆ ಜಯಜಯಾ ಎಂದು ಕೈಮುಗಿವುತಂ
ಇರೆ ಚೋಳರಾಯನತಿ ಭಕ್ತಿಯಿಂ ಬರುತಿರ್ದ
ಅರರೆ ಸರ್ವಜ್ಞನಿ ಸತ್ಯನಿಧಿ ಬರುತಿರ್ದ
ಎಡಬಲದೊಳುಘ್ಘಡಿಪ ರಾಜಪುತ್ರರ ನಡುವೆ
ಗಡಣದಿಂ ಬರುತಿರ್ದ ಚೋಳ ಗೋವರ ನಡುವೆ
ಗಳಗಳನೆ ನಡೆತರುತೆ ಚನ್ನಯ್ಯನಂ ಕಂಡು
ಬಳಸಿ ಗಣಪದವಿ ಬಂದೆಳಸಿರ್ಪನಂ ಕಂಡು
ಭಕ್ತಿ ಗುಡಿಸಿರ್ದಗುಡಿಸಲೊಳಿರ್ಪನಂ ಕಂಡು
ಮುಕ್ತಿ ಮೂವಡಿಸಿ ಮುಂದಡಸಿರ್ದನಂ ಕಂಡು
ಪುಳುಕಿಸುತೆ ಪುಟವೇರುತುಬ್ಬೇತುಂ ಕೊಬ್ಬೇತುಂ
ಇಳಿವಶ್ರು ಜಲದಿಂದೆ ಮೂಡುತುಂ ಮುಳುಗುತುಂ
ಎನ್ನೊಡೆಯನಿದನಿದನೆ ಚನ್ನಯ್ಯನೆಂದೆನುತೆ
ಎನ್ನ ಸುಧೆ ಇದನಿದನೆ ಚನ್ನಯ್ಯನೆಂದೆನುತೆ
ಎನ್ನ ಗತಿ ಇದನಿದನೆ ಚನ್ನಯ್ಯನೆಂದೆನುತೆ
ಎನ್ನ ಮತಿ ಇದನಿದನೆ ಚನ್ನಯ್ಯನೆಂದೆನುತೆ
ಇಳುಪಿದಂ ಸರ್ವಾಂಗಮಂ ಚನ್ನನಂಘ್ರಿಯೊಳ್
ತೊಳತೊಳಗೆ ಮಣಿಮಕುಟಕಾಂತಿಪದ ಭೂಮಿಯೊಳ್

ಪಾದರಜವುಂ ಕಣ್ಗಳೊಳಗೊತ್ತಿ ತಣಿಯದಿರೆ
ಪಾದವುಂ ಬಲ್ಪಿಡಿದು ಬಿಡೆನೆಂದು ಹೆಣಗುತಿರೆ

ಏನಯ್ಯ ಚೋಳನೃಪ ನೀನಿಂತು ಬರ್ಪರೇ
ಭಾನುಕುಲ ದರ್ಪಣನೆ ನೀನಿಂತು ಬರ್ಪರೇ
ಎನ್ನ ಕುಲವುಂ ನೋಡದಿಂತು ಬರ್ಪರೆ ಚೋಳ
ಎನ್ನ ಜಾತಿಯನರಿಯದಿಂತು ಮಾಳ್ಪರೆ ಚೋಳ
ರಾಜ್ಯಾಂತರಂ ನರಕವೆಂಬುದಿಲ್ಲದ ಚೋಳ
ಪೂಜ್ಯನವುರಾಳಿಯೊಳಗೆನಿಸಿ ಬರ್ದುಕುವ ಚೋಳ
ಎನುತೆ ಗದ್ಗದಿಸಿ ಕಂಪಿಸಿ ಕಾಲ ಬಿಡು ಚೋಳ
ನಿನಗೆ ನಿನ್ನಾಣೆ ಎನ್ನಾಣೆ ಬಿಡುಬಿಡು ಚೋಳ

ಎನೆ ದೇವ ದೇವನೊಲ್ದನ ಕುಲಂ ಸತ್ಕುಲಂ
ಘನಮಹಿಮನೊಲ್ದ ಜಾತಿಯೇ ಜಾತಿ ನಿರ್ಮಲಂ
ಶರ್ವನೊಡನುಂಡ ನಿಮ್ಮಯ ಜಾತಿಗಾಂ ಸರಿಯೆ
ಸರ್ವಜ್ಞ ನಿಮ್ಮ ಕೆರವಿಂಗೆನ್ನ ಶಿರ ಸರಿಯೆ
ಬಿಡೆನಯ್ಯ ನಿಮ್ಮ ಪದವಂ ಬಿಟ್ಟು ಬಾಳ್ವೆನೇ
ಮೃಡಮೂರ್ತಿಯಂ ಬಿಟ್ಟು ಸಂಸೃತಿಯೊಳಾಳ್ವೆನೇ
ಪಲವು ಮಾತೇಕೆ ಶಿವನಲ್ಲಿಗೈತನ್ನಿರೇ
ಕುಲಗೋತ್ರದಿರವನೀಶ್ವರನೊಡನೆ ಪೇಳಿರೇ

ನಡೆಯಿಮೆಂದಲ್ಲಿ ಗಜಮಸ್ತಕವನೇರಿಸುತೆ
ಗುಡಿಗಟ್ಟಿಪೇಳೆಂದು ಪುರದೊಳಗೆ ಸಾರಿಸುತೆ
ಮುಂದೆ ತುರಗವನೇರಿ ಕೆಲ ಬಲಕೆ ತೋರುತುಂ
ಮಂದೈಪ ಪುಳಕದಿಂ ಬೆಳೆದು ದಳವೇರುತುಂ
ಚನ್ನಯ್ಯನಂ ನೋಡಿ ನೋಡಿ ಕೆಯ್ಮುಗಿವುತುಂ
ಉನ್ನತಂ ಜ್ಞಾನಿ ಚೋಳಂ ಹೆಚ್ಚಿ ಹಿಗ್ಗುತುಂ
ನಡೆತಂದು ಮೃಡನಾಲಯದ ಮುಂದೆ ನಿಂದಿರ್ದು
ಕಡುನೇಹದಿಂ ಗಜದ ಮುಗ್ಗುಲತ್ತಂ ಸಾರ್ದು
ಆನೆಯಿಂದಿಳಪಿ ಮೆಲ್ಲನೆ ಬಂದು ಕಯ್ಗೊಟ್ಟು
ದಾನನಿಧಿ ಚನ್ನಂ ಸಂತಸದೆ ಮುಂದಿಟ್ಟು

ಒಡಗೊಂಡು ಬಂದೊಳಗೆ ಶಿವಲಿಂಗಮಂ ತೋರಿ
ಮೃಡನೊಡನೆ ತಾರ್ಕಣೆಯ ಕೊಡುತ ಚೋಳಂ ತೋರಿ
ಭಕ್ತಜನ ಕಲಹ ಲೀಲಾ ಲೋಲನಂ ತೋರಿ
ಭಕ್ತಜನ ವನಧಿ ವರ್ಧನ ಚಂದ್ರನಂ ತೋರಿ

ಕಂಡು ಚನ್ನಯ್ಯನಭವಂಗೆ ನೆರೆ ಮುಳಿವುತುಂ
ಕಂಡಯ್ಯ ನೀನಿಂತು ದೂರುವರೆ ಪೇಳುತುಂ
ಚೋಳನಿಂ ಪಿಡಿಸಿ ತರಿಸಲ್ತಪ್ಪು ಮಾಡಿದೆನೆ
ಪೇಳಯ್ಯ ನಿಮ್ಮಲ್ಲಿ ಪದವಿಯಂ ಬೇಡಿದೆನೆ
ಅರಿಯದಂಬಲಿಯನರ್ಪಿಸಿದೊಡಿಂತಿರಿವರೇ
ಹೆರೆ ಸೂಡಿದನೆ ತೋರಿ ಮಾರಿ ನೆರೆ ದೂರುವರೆ
ಮೇದಿನಿಗೆ ಬೀರಿ ಗರುವಾಯಿತೆನ್ನಯ ಭಕ್ತಿ
ವಾದಕ್ಕೆ ಹರಲೆಯಂ ತಂದಿಕ್ಕಿತೀ ಭಕ್ತಿ
ಇನ್ನಿಳೆಯೊಳಿರೆನೆನುತ್ತತಿಭಾಷೆಯಂ ಮಾಡೆ
ಚನ್ನಯ್ಯನಂದಲಗ ಕಿಳ್ತು ಕೊರಳೊಳ್ಪೂಡೆ

ಶಿವಲಿಂಗದಿಂದೆ ಶಿವ ಬಂದು ಕರವಂ ಪಿಡಿದು
ಅವಿಚಾರದಿಂದಿಂತು ಮಾಳ್ಪರೇ ನೀನರಿದು
ಮರೆದು ಚೋಳಂಗೆ ಪೇಳ್ದೊಡೆ ಕೋಪವಿನಿತೇಕೆ
ಅರಿಯದೆಂದೆನು ಚನ್ನ ಸೈರಿಸಾಸುರವೇಕೆ
ನೋಡಯ್ಯ ಚೋಳ ಗುಪ್ತ್ಯಾರ್ಚನೆಯ ಮಾನಿಯಂ
ಆಡಂಬರವನುಳಿದ ಭಕ್ತಿಯಭಿಮಾನಿಯಂ
ಭಾಪು ಮಾದರ ಚನ್ನ ಪೂತು ಮಾದರ ಚನ್ನ
ಸೋಪಾಧಿಕಂ ಪುಗದ ಶೈವ ಮಾದರ ಚನ್ನ
ಗುಪ್ತಪೂಜೆಯ ಚನ್ನ ಗುರುತರಾಜ್ಞೆಯ ಚನ್ನ
ಆಪ್ತಗುಣನಿಧಿ ಚನ್ನ ಎನ್ನ ಭಕ್ತಿಯ ಚನ್ನ

ಎಂದು ಕೊಂಡಾಡುತಿರೆ ಪೂಮಳೆಗಳೆರಗಿದವು
ನಿಂದು ದುಂದುಭಿ ಕಹಳೆ ಗಗನದೊಳು ಮೊಳಗಿದವು
ನಂದೀಶ್ವರಾದಿ ಗಣ ಸಂದೋಹದೊಡನೊಡನೆ
ಬಂದುದಾಗಳೆ ಪುಷ್ಪಕಂ ಕಾಂತಿಯೊಡನೊಡನೆ

ಬಂದುಪುಷ್ಪಕದೊಳಗೆ ಚನ್ನನಂ ಕುಳ್ಳಿರಿಸಿ
ಇಂದುಧರನಾನಂದದಿಂದೆ ನಭಕವತರಿಸಿ
ಚೋಳನಂ ಬೀಳ್ಕೊಟ್ಟು ನೆಗೆದನಾಕಾಶಕ್ಕೆ
ಶೂಲಧರನಹಿ ಕಟಕನೆಯ್ದಿದಂ ನಿಮಿಷಕ್ಕೆ
ಕೈಲಾಸಮಂ ಪೊಕ್ಕು ಸಿಂಹಾಸನವನೇರಿ
ಶೈಲಜೆಗೆ ಚನ್ನನಂ ಸಂತೋಷದಿಂ ತೋರಿ
ಚನ್ನಂಗೆ ಗಣಪದವಿಯಂ ಕೊಟ್ಟು ರಾಗದಿಂ
ಚನ್ನಯ್ಯನಂ ಹರುಷದಿಂದಿರಿಸಿ ರಾಗದಿಂ
ಪನ್ನಗಾಭರಣನೊಪ್ಪಿದನಖಿಳನೊಪ್ಪಿದಂ
ಉನ್ನತೈಶ್ವರ್ಯ ಘನಸಿದ್ಧಿ ಶಂಭು ವೊಪ್ಪಿದಂ
ಗುರುವೊಪ್ಪಿದಂ ಉರುತರಜ್ಞಾನಿಯೊಪ್ಪಿದಂ
ಪರಮನೊಪ್ಪಿದನತುಳವರ ಹಸ್ತನೊಪ್ಪಿದಂ
ಕುಲತಿಲಕನೊಪ್ಪಿದಂ ಕುಲಹೀನನೊಪ್ಪಿದಂ
ಹೊಲೆಗಲಸಿ ಭಕ್ತರೊಳ್ನೆಲಸಿರ್ಪನೊಪ್ಪಿದಂ
ಉಲಿವ ವೇದಂಗಳ ಶಿಖಾರತ್ನನೊಪ್ಪಿದಂ
ಸಲೆ ಪೊಗಳ್ವ ಶರಣರ ಸುಖಾಂಬೋಧಿಯೊಪ್ಪಿದಂ
ಚನ್ನನ ಮಹಾನಿಧಿ ಮಹಾದಾನಿಯೊಪ್ಪಿದಂ
ಚನ್ನ ಹಂಪೆಯ ವಿರೂಪಾಕ್ಷನಿಂತೊಪ್ಪಿದಂ

ಕಂದ॥ ಚನ್ನನ ನಿಧಿ ಚನ್ನನ ಸುಧೆ
ಚನ್ನನ ಸಕಳಾಯು ಚನ್ನನಮೃತಸಮುದ್ರಂ ॥
ಚನ್ನಂ ರಕ್ಷಿಸುಗೆನ್ನಂ
ಚನ್ನನ ಸುತನೆಂದು ಹಂಪೆಯ ವಿರೂಪಾಕ್ಷಂ

**ಸಮಾಪ್ತ.**



# ಯಿಳೆಯಾಂಡ ಗುಡಿಮಾರರ ಮಹಾತ್ಮೆ

**ಕಂದ**|| ಇಂದುಧರ ನಿನ್ನ ಬೆರಸಿ ।
ದಂದಿನ ಇಳೆಯಾಂಡ ಗುಡಿಮಾರರ ಚರಿತೆಯ ।
ಸಂದಣಿಪ ಮಧುರ ವಚನಂಗ ।
ಳಿಂದೊರವೆಂ ಕೇಳಯ್ಯ ಹಂಪೆಯ ವಿರೂಪಾಕ್ಷಾ ॥

**ರಗಳೆ.**

ಶ್ರೀ ಶಿವನ ಸೆಜ್ಜೆಯೆನಿಸುವ ಚೋಳ ದೇಶದೊಳ್
ಭಾಸುರವೆನಿಸಿ ಮೆರೆವುದೊಂದು ಪುರವೊಪ್ಪದೊಳ್
ಯಿಳೆಯಾಂಡ ಗುಡಿಯೆಂಬುದದರೊಳನುರಾಗದಿಂ
ಯಿಳೆಯಾಂಡ ಗುಡಿಮಾರನಾರೆಂಬ ನಾಮದಿಂ
ಎಸೆದಿರ್ಪನೊರ್ವ ಭಕ್ತಂ ಶಿವನ ಕುಡಿಮಗಂ
ವಸುಧೆಗೊಪ್ಪುವ ಮಹಾದೇವನೊಕ್ಕಲ ಮಗಂ
ಇಂತಿರಲ್ಕಿವಭಕ್ತಿ ಚಿತ್ತದೊಳ್ನಳಿನಳಿಸೆ
ಸಂತತಂ ಹರನೊಲವು ಕರುಣದೊಳ್ಪಲ್ಲವಿಸೆ
ಸಮಚಿತ್ತವೆಂಬ ಭೂಮಿಯನೆ ಹಸನಾಗಿರಿಸಿ
ಅಮರ್ದ ಶಂಕರನ ನೆನಹೆಂಬ ನೇಗಿಲನಿರಿಸಿ
ಅರಿಷಟ್ಕವುಂ ತಂದು ಹೊಡುವೆತ್ತಂ ಮಾಡಿ
ಹರಿವ ಮನವಂ ಕಟ್ಟಿ ಹಿಡಿವ ಹಗ್ಗಂ ಮಾಡಿ
ಗರ್ವಿಸುವಹಂಕಾರವುಮನಚ್ಚುವಂ ಮಾಡಿ
ಸರ್ವೇಶನಿಷ್ಠೆಯಂ ತಳಿವ ಬೀಜಂ ಮಾಡಿ
ಸುರುಚಿರ ಶಿವಜ್ಞಾನ ಸಸಿಗಳಂಕುರಿಸುತಿರೆ
ಹರನ ಪರಮಾನಂದರಸದ ಮಳೆ ಕರೆವುತಿರೆ
ಬಿತ್ತಿ ಬೆಳೆವಂ ಶಿವನ ಸದ್ಭಕ್ತಿ ಸಸಿಗಳಂ
ಕಿತ್ತು ಕಳೆವಂ ಕ್ಷುತ್ಪಿಪಾಸಾದಿ ಕಳೆಗಳಂ

ಇಂತೊಳಗೆ ಭವನ ಭಕ್ತ್ಯಾರಂಭಮಂ ಮಾಳ್ಪ
ಅಂತೆಲ್ಲರರಿಯೆ ಹೊರಗಾರಂಬಮಂ ಮಾಳ್ಪ

ಏನೆಂಬೆನತಿಭಕ್ತಿ ಸಸಿಯು ಬೆಳೆ ಸಿರಿವಂತ
ಆನಂದದಿಂ ಶರಣತತಿಗೀವ ಮತಿವಂತ
ಎನಿತು ಭಕ್ತರ್ಬಂದೊಡನಿತು ಹೊರೆಯೇರುವಂ
ಮನದೊಳಗೆ ಹೆಚ್ಚಿ ಕಿಂಕರತೆಯುಂ ತೋರುವಂ
ಧರೆಯೆನಿತು ಉಂಟೆನಿತು ಭೂಮಿಯಾತಂಗುಂಟು
ಹರನ ಕರುಣಂ ಆತನಲ್ಲಿ ಪಿರಿದಾಗುಂಟು
ಅದರೊಳಾದ ಬೆಳಸನೀವ ಶರಣರ ಬಂಟ
ಮದಮುಖಮದೊಂದಿಲ್ಲದೀವ ಭಕ್ತರ ನಂಟ
ಒಳ್ಳಿತಂ ಸೊಗಸಿತಂ ಶಿವನ ಭಕ್ತರ್ಗೀವ
ಉಳ್ಳ ದ್ರವ್ಯಂಗಳಂ ಭುವನ ಭಕ್ತರ್ಗೀವ
ಎಲ್ಲ ತೇಜಂಗಳಂ ಶರಣತತಿಗೀವುತಂ
ಎಲ್ಲ ಮಾನ್ಯಂಗಳಂ ಭಕ್ತರ್ಗೆ ಸಾರ್ಚುತಂ
ಬಿಟ್ಟಿ ಬೆಸನಂ ಶಿವನ ಭಕ್ತರ್ಗೆ ಮಾಡುವಂ
ಕೊಟ್ಟು ತಣಿವಿಲ್ಲದನುತಾಪದಿಂ ಬಾಡುವಂ
ಇಂತು ಜಂಗಮಕೆ ಮಾಳ್ಪುದು ಕರಂ ಪಿರಿದಾಗೆ

ಸಂತತಂ ಭಕ್ತಕುಲವರಿದು ಸಂತಸಮಾಗೆ
ನೆರೆಯುತೊಡಗಿತು ಹರನ ಶರಣಕುಲವಳ್ತಿಯಿಂ
ಬರುತಮಿರ್ದುದು ಭೂತಳದ ಭಕ್ತರೊಲ್ಮೆಯಿಂ
ಮೀರಿದಪ್ಪಿದ ವಾರ್ಧಿಯೆಂತಂತೆ ಕವಿವುತಿರೆ
ಧೀರನೋಸರಿಸದೆ ಮಹಾಗಣಂ ಪೊಗಳುತಿರೆ
ತನ್ನರ್ಥವುಂ ತೀರೆ ಭಕ್ತರ್ಗೆ ನೆರೆ ಮಾಡಿ
ಇನ್ನುಳ್ಳುದೇನೆಂದು ನೆನೆದು ಭಕ್ತಂ ನೋಡಿ
ಮಾರಿ ಶರಣರ್ಗಿತ್ತನುಳ್ಳನಿತು ಭೂಮಿಯುಂ
ಬೀರುತಿರ್ದಂ ಶರಣ ಜನರ ಮನದೀಪ್ಸೆಯುಂ
ಎನಿತೆನಿತು ಭೂಮಿ ಕ್ರಮದಿಂ ಮಾರಿಕಿರಿದಾಗೆ
ಅನಿತನಿತು ತನ್ನಯ ಮನಂ ಪೆರ್ಚಿ ಪಿರಿದಾಗೆ
ಇತ್ತನೆಲ್ಲಾ ಭೂಮಿಯುಂ ಮಾರಿ ಭಕ್ತರ್ಗೇ

ಚಿತ್ತದೊಳ್ಹಿಗ್ಗಿ ಹೆಚ್ಚುತ್ತೆ ಶಿವನಣುಗರ್ಗೆ
ಕುಡುತಮಿರೆ ಭೂಮಿ ತೀರ್ದೊಡೆ ತೀರಲೇನೆಂದು
ಕಡುಹಾಗಿ ತೋಟವಂ ಮಾರತೊಡಗಿದನಂದು
ಅದು ತೀರೆ ತನ್ನ ಮನೆಯೊಳಗರ್ಥವಂ ಮಾರಿ
ಸದಮಳ ಶಿವಾರ್ಚಕರ್ಗಿತ್ತನುತ್ಸಹವೇರಿ
ಇಂತು ಕುಡುತಿರೆ ಮಿಕ್ಕುದಂತೊಂದು ತೋಲ್ನೆಲಂ
ಸಂತತಂ ಶಿವಭಕ್ತಿ ಬೀಜ ಬಿತ್ತುವ ನೆಲಂ
ಆ ನೆಲದೊಳುಳ್ಳುದೊಮ್ಮನ ಬೀಜಮಂ ತಳೆದು
ಏನಾದುದಂ ಕೊಂಡು ಬಂದು ಹರುಷಂದಳೆದು
ಅಲ್ಲಿ ಭಕ್ತರ್ಬಂದೊಡುಳ್ಳುದಂ ಹಂಚಿಕ್ಕಿ
ಸಲ್ಲೀಲೆ ಹೆಚ್ಚಿ ಪರಮಾನಂದದಿಂದುಕ್ಕಿ
ಮತ್ತೆ ಶರಣರ್ಬಂದೊಡುಟ್ಟುದಂ ಹೊದೆದುದಂ
ಉತ್ತಮ ಶಿವಾಚಾರಿ ಕೊಟ್ಟಿರ್ಸನಿರ್ದಾನಂ
ಸತಿಗೊಂದು ಕಪ್ಪಟಂ ತನಗೊಂದು ಕೋವಣಂ
ಸುತನೆನಿಸುವಾತಂಗೆ ಮತ್ತೊಂದು ಕೋವಣಂ
ಮೂವರುಂ ನಿಂದಿರ್ಪರನಿತು ಮನೆ ತಮಗುಳಿಯೆ
ಈವಡಂತೇನುಮಿಲ್ಲದೆ ನಿಜದ ಮನ ಉಳಿಯೆ
ಆದರೊಳಗೆ ಯಿಳೆಯಾಂಡ ಕುಡುತುಮಿರ್ದಂ ನೋಡ
ಮದನಹರಭಕ್ತರ್ಗೆ ಕುಡುತಮಿರ್ದಂ ನೋಡ
ಇನಿತುಳಿಯೆ ಭಕ್ತರ್ಗೆ ಮಾಡುತಿರ್ಪಂ ನೋಡ
ಅನಿತನಿತು ಭಕ್ತಿ ಹೆಚ್ಚುತ್ತಮಿರ್ಪುದು ನೋಡ
ಅನಿತವಸ್ತೆಯೊಳಿರ್ಪ ಸುಮ್ಮನಿರ್ದನೆ ನೋಡ
ಅನುಪಮದ ಭಕ್ತಂಗೆ ಲೀಲೆ ಮಿಕ್ಕುದು ನೋಡ
ಧನವಿಲ್ಲದೊಡೆ ಏನು ಧಾನ್ಯವಿಲ್ಲದೊಡೇನು
ಮನೆಯಿಲ್ಲದೊಡೆ ಏನು ಏನುವಿಲ್ಲದೊಡೇನು
ತನುವಿರ್ಪುದು ತನುವಿನೊಳಗರ್ಥವಿತ್ತಪೇಂ
ಮನವಿರ್ಪುದು ಮನದೊಳರ್ಥವುಂ ಇತ್ತಪೇಂ
ಹರಣವಿಡೆ ಹರಣದೊಳಗರ್ಥವುಂ ಕೊಟ್ಟಪೇಂ
ಎರಡು ಕಣ್ಣಿವೆ ಎರಡರೊಳಗೊಂದ ಕೊಟ್ಟಪೇಂ

ಇಂತು ಶರಣಗ್ರೀವ ಚಿಂತೆಯಂ ಚಿಂತಿಸುತೆ
ಮುಂತೆ ತನಗೇನಾದುದಂ ಕುಡಲ್ಚಿಂತಿಸುತೆ

ಇಂತು ತೊಂಬತ್ತೈದು ಬರಿಸಂಬರಂ ಮಾಡಿ
ಚಿಂತಿಸಿದನೀಶ್ವರಂ ತನ್ನೊಳೊಂದಂ ನೋಡಿ
ಈ ಭಕ್ತನಾ ಮನವನೊರೆದು ನೋಡುವೆನೆಂದು
ವೈಭವಂ ಮಿಗೆ ನೋಡಿಕೊಂಡು ಪೋಗುವೆನೆಂದು
ಅಳವಡಿಸಿಕೊಂಡನೊಲ್ದಂತೊಂದು ಚೋಹಮಂ
ಇಳೆಗೆ ಮಿಗೆ ಪೊಸುತೆನಿಪ ಶತವೃದ್ಧಭಾವಮಂ
ಶಿರದ ನೆರೆ ಮೆಯ್ಯ ತೆರೆ ಕರದ ಕೋಲಿಂದೆಸೆದು
ಸುರುಳ್ದ ತನು ಕೂತ ಬೆನ್ನೋಲ್ದ ಪುರ್ಬಿಂದೆಸೆದು
ಚೋಳದೇಶ ಪ್ರಾಂತಮಂ ಹರ್ಷದಿಂ ಪೊಕ್ಕು
ಶೂಲಿಭಕ್ತನ ಮನವ ನೋಡಲ್ಕನಂ ಮಿಕ್ಕು

ಯಿಳೆಯಾಂಡಗುಡಿಯು ಹತ್ತಿರ್ನಟ್ಟಿರುಳ್ಬಂದು
ಜಲದಂಗಳಂ ನೆನದನದ್ಭುತಂ ಮಿಗಿಲಂದು
ನೆನೆಯೆ ತುಂಬಿದವು ನಭವಂ ಮೇಘಸಂಕುಳಂ
ತನತನಗೆ ತೀವಿ ತೀಡಿತ್ತು ನೀರದ ಬಳಂ
ಗಗನಂ ಘನೀಭೂತವಾದುದೆಂಬಂದದಿಂ
ಮಿಗೆ ತೀವಿ ಸೂಸಿತ್ತು ಸಲಿಲಮುತ್ಸಾಹದಿಂ
ಮಳೆಗರೆದುದಾಗಸಂ ಜಲವಾದುದೆಂಬಂತೆ
ಇಳೆ ಜಲದ ಮೇಲೆ ತೇಂಕಾಡಿದುದು ಎಂಬಂತೆ
ಬಂದ ಮಳೆಯೊಳ್ಕವಿದ ಕಳ್ತಲೆ ಕರಂ ಪೆರ್ಚ್ಚಿ
ಸಂದಣಿಸಿ ದಿಙ್ಮುಖಂಗೆಡಿಸಿ ಜಗಮಂ ಮುಚ್ಚಿ
ಮಿಂಚುವೆಳಗುಚ್ಚಳಿಸಿದಂತೆ ದಟ್ಟೈಸಿ ಬರೆ
ಸಂಚಳಿಪ ಮನಮನಿಕ್ಕಲ್ತೆರಪನೀಯದಿರೆ

ಇಂತಿಡಿದ ಕಳ್ತಲೆಯೊಳಭವನೂರಂ ಪೊಕ್ಕು
ಕಂತುಹರ ತುಂತುರೊಳ್ನಡುಗುತೂರಂ ಪೊಕ್ಕು
ಯಿಳೆಯಾಂಡಗುಡಿಯುಮಾರನ ಮನೆಗೆ ನಡೆತಂದು

ಚಳಿ ಹತ್ತಿ ಮಳೆಯೊಳಗೆ ಘಾಸಿಯಾಗುತೆ ಬಂದು
ನಡುಗಿ ಪಲ್ಪರೆಗುಟ್ಟಿ ಬಾಗಿಲೊಳ್ನಿಂದಿರಲ್
ಕಡು ಸೀತದಿಂದಳ್ಕಿ ಬಳ್ಕುತುಂ ಬಂದಿರಲ್

ಒಳಗೆ ಚಳಿ ಹತ್ತಿ ಯಿಳೆಯಾಂಡ ಗುಡಿಮಾರಸಿರೆ
ಬಳಲುತುಂ ಮೂರುನಾಲ್ಕುಪವಾಸದಿಂದಲಿರೆ
ಹಾಸಲುಂ ಹೊದೆಯಲುಂ ಹರನ ನಾಮಂ ತನಗೆ
ಆಸುರದ ಚಳಿಗೆ ಮರೆ ಈಶ ನಾಮವೆ ತನಗೆ
ಒಳಗೆ ಭಾಳೇಕ್ಷಣನ ನಾಮ ತೀವಿರೆ ಕರಂ
ಚಳಿ ಹೊದ್ದದಂತಿರ್ದನಭವಭಕ್ತಂ ಕರಂ
ಇರಲವರ ಮನೆಯ ಬಾಗಿಲ ಹತ್ತೆ ಸಾರುತುಂ

ಹರಹರ ನಮಃಶಿವಾಯೆಂಬ ದನಿದೋರುತುಂ
ಇರೆ ಕೇಳುತಿಳೆಯಾಂಡಗುಡಿಮಾರನಾರೆಂದು
ಕರ ಬಳಲ್ದಿಲೆಲೆ ಎನ್ನಾಳ್ದರ ಧ್ವನಿ ಎಂದು
ಕೆಟ್ಟೆ ಕಳ್ತಲೆಯೊಳೆಯ್ತುಪ್ಪರೇ ಎಲೆ ದೇವ
ನಟ್ಟಿರುಳ್ಮಳೆಯೊಳೆಯ್ತುಪ್ಪರೇ ಎಲೆ ದೇವ
ಬಂದು ಗಳಗಳನೆ ಕದವಂ ತೆರೆದು ಕಾಣುತುಂ
ಬಂದು ಚರಣದ ಮೇಲೆ ಬೀಳ್ದು ಭಯುವೇರುತುಂ
ಇರೆ ಕರಂ ನಡು ನಡುಗಿ ಚಳಿ ಹೊಡೆದುದೆಲೆ ಮಗನೆ
ಹರಣಮಂ ಹತ್ತಿತ್ತು ಸೀತ ಹೂ ಹೂ ಮಗನೆ
ನಿಲಲಾರೆ ನಿನ್ನೆಂತು ಕೈಕಾಲ್ಸುರುಳ್ದಪವು
ಪಲವು ಮಾತೇನವಯವಂಗಳೆಲ್ಲರಳ್ದಪವು
ತನು ಒಡೆದಪುದು ಚಳಿಗೆ ಮನ ಸೀಳ್ದಪುದು ಚಳಿಗೆ

ಎನೆ ಕೇಳ್ದು ಭಯಭಕ್ತಿಯಿಂ ನಡುಗಿ ಬಂದೊಳಗೆ
ಇರ್ಬರಿಪ್ಪೆಡೆಯ ಮಾಳಿಗೆಯ ಜಂತೆಯನುರ್ಚಿ
ಒರ್ಬನಂ ಕುಳ್ಳಿರಿಸಲಭವ ತಾಂ ವ್ಯೆಯ್ವೆರ್ಚಿ
ಪಟು ಮಾಡಿದಂ ಬೆಂಕಿಯುಂ ಶಿವನ ಚಳಿಗೆಂದು
ನಟಿಸುತಿರ್ಪಂ ಪರಮನತುಳ ಸೀತಮನಂದು

ತೊಡೆಗಳಂ ತೋಳ್ಗಳಂ ಚರಣದ್ವಯಂಗಳಂ
ನಡು ಬೆನ್ನುರಸ್ಥಳಂ ವದನವಿರ್ಬದಿಗಳಂ
ಸೀತಮಿರದಂತೆ ಮೆಲ್ಲನೆ ಕಾಸಿಯೊತ್ತುತಿರೆ
ಭೂತೇಶ್ವರಂ ನೋಡಿ ಕೌತುಕಂಬಡುತಮಿರೆ
ಎನಿತನಿತು ಚಳಿ ಹೋಗಲನಿತಸಿತು ಪಸಿವಡಸೆ
ಅನುಮಿಸುತೆ ಪಸಿದೆ ಪಸಿದೇಂ ಎಂದು ಲವಲವಿಸೆ

ಕೇಳುತಿಳಿಯಾಂಡಗುಡಿಮಾರನಾರುಮ್ಮಳಿಸಿ
ಬೇಳಾಗಿ ಮೂರುಪಾಸದೊಳಿರ್ದು ಬೆಬ್ಬಳಿಸಿ
ಇಂತು ತಮ್ಮರಸಿಯರ ಮೊಗಂ ನೋಡುತ್ತಲಿರೆ
ಚಿಂತಿಸಿದಳೊಂದು ತೆರನಂ ಶಿವಂ ಮೆಚ್ಚುತಿರೆ
ಮೊನ್ನೆ ಬಿತ್ತಿರ್ದ ಮೊಳೆವಿತ್ತನೆತ್ತಿಯೆ ತಂದು
ಪನ್ನಗಾಭರಣಂಗೆ ಪಸಿವನಾರಿಪುದೆಂದು
ಅರುಪೆ ಹರುಷಂದಳೆದು ಪರಮಭಕ್ತಂ ಮೆಚ್ಚಿ
ಪೊರಮಟ್ಟನೊಲ್ದು ಮಧ್ಯಮ ರಾತ್ರಿಯೊಳ್ಪೆಚ್ಚಿ

ಮತ್ತೆ ಮಳೆ ಪಿರಿದಾಗೆ ಮತ್ತೆ ಚಳಿ ಪಿರಿದಾಗೆ
ಮತ್ತೆ ಕಳ್ತಲೆ ಸುತ್ತಿ ಮುತ್ತಿಯುನ್ನತವಾಗೆ
ಬರುತಿರ್ದನಪ್ರತಿಮ ಶಿವಭಕ್ತನುರವಣಿಸಿ
ಪುರದ ಹೊಲಗಳ ದಾಂಟಿ ಕಳ್ತಲೆಯನುತ್ತರಿಸಿ
ಹಳ್ಳಂಗಳಂ ಕೆರೆಗಳಂ ತೊರೆಗಳಂ ದಾಂಟಿ
ಕೊಳ್ಳಂಗಳಂ ಕೊಳಗಳಂ ಲಂಘಿಸುತೆ ದಾಂಟಿ
ಹೋಗಿ ಗರ್ದೆಯೊಳಿರ್ದ ಮೊಳೆವಿತ್ತನೆತ್ತಿದಂ
ರಾಗದಿಂ ತಂದವಂ ಗೂಡೆಯೊಳಗಿಕ್ಕಿದಂ
ತಿರುಗಿ ಬರುತಿರ್ದಂ ಹರಂ ಹಸಿದನೆಂದೆನುತೆ
ಉರವಣಿಸಿ ಬರುತುಂ ಬಳಲ್ದನೀಶ್ವರನೆನುತೆ

ಬಂದು ತಮ್ಮರಸಿಯರ ಮುಂದಿಳುಪಿ ನಲಿನಲಿದು
ತಂದೆ ಮೊಳೆವಿತ್ತನಾನಂದದಿಂದಂ ಹುರಿದು
ಅಮೃತಾನ್ನವೆನಿಪ ಓಗರವ ನಲವಿಂ ಮಾಡಿ
ಸವಿದ ಕೀರೆಯ ತಂದು ಮೇಲೋಗರಂ ಮಾಡಿ

ಅನುಮಿಸುತೆ ಭಕ್ತನಾರೋಗಣೆಗೆ ಎಡೆಮಾಡಿ
ತನಯುನಂ ಕದಳೀದಳಕ್ಕೆ ಕಳುಪಲ್ಕೋಡಿ
ನಿಂದಿರ್ದ ಬಾಳೆಯೆಲೆಯುಂ ಕೊಯ್ದು ತರಲಲ್ಲಿ
ಇಂದುಧರನಾಜ್ಞೆಯಿಂದುರಗಂ ಪಿಡಿಯಲಲ್ಲಿ
ಮರೆದೊರಗಿದಂತಲ್ಲಿ ದೀರ್ಘನಿದ್ರೆಯೊಳಿರಲ್
ಪೊರಗೆ ಶಶಿಧರನತ್ತ ಪಸಿದೆನೆಂದೆನುತಿರಲ್
ತಡೆದನೆಂದಿಳೆಯಾಂಡಗುಡಿಮಾರನೆಯ್ತಂದು
ಪಿಡಿದುರಗಪಿಂ ಮಡಿದ ಮಗನನೀಕ್ಷಿಸುತಂದು

ಇದನರಿದೊಡೀತನುಣಲೊಲ್ಲನೇವೇಳುವೇಂ
ಇದನರುಪದುಣಲಿಕ್ಕಿ ಸಂತಸಂ ಮಾಡುವೇಂ
ಎಂದೆಲೆಗಳಂ ಕೊಯ್ದು ತಂದು ಭಕ್ತನ ಮುಂಪೆ
ಚಂದಚಂದದೊಳು ಪಾಸುತ್ತೆ ಸಂತಸದಿಂದೆ
ತಿಳಿನೀರ್ಗಳಂ ತಳಿದು ತೊಳಪ ಓಗರವಿಕ್ಕಿ
ಎಳೆಯ ಕೀರೆಯ ಸಮೆದ ಮೇಲೋಗರವನಿಕ್ಕಿ
ಆರಯ್ಯುವುದು ಸದಾಶಿವ ಕರುಣದಿಂದೆನುತೆ
ಹಾರಯ್ಸುತುಂ ಶಂಭುವೆ ಕರುಣಿಸು ಎಂದೆನುತೆ
ಪುರಹರಂ ಬೆಸಸುತ್ತಲಾಪೂರ್ಬರುಣ್ಣೆವೆನೆ
ಹರಭಕ್ತರ ಸಹಪಙ್ತಿಯುಲುಣ್ಣವೇಳ್ಕುಮೆನೆ
ತಂದೆ ಮಕ್ಕಳೆಲ್ಲರ್ಕುಳ್ಳಿರ್ಪುದೆನೆ ಕೇಳ್ದು

ನೊಂದು ಹರನುಣಲೊಲ್ಲನಿನ್ನೇವೆನೆನುತೇಳ್ದು
ಮಗನಳಿದುದಂ ಅರುಪಬಾರದೇವೇಂ ಶಿವನೆ
ಮಗನಿಲ್ಲದಿರ್ದೊಡುಣಲೊಲ್ಲನೇವೇಂ ಭವನೆ
ಕರೆದು ನೋಡುವೆನೇಳದಿರ್ದೊಡಿಂದಭವಂಗೆ
ಶಿರವನೊಪ್ಪಿಸುವೆನುಣಲೊಲ್ಲದ ಮಹೇಶಂಗೆ
ಎನುತೆ ನಡೆತಂದು ತತ್ಸುತನ ಹತ್ತಿರೆ ನಿಂದು
ತನುಜನೇಳ್ಮಗನೆ ಹರನುಣಲೊಲ್ಲನೇಳೆಂದು
ಕರೆಯಲಾಗಳೆ ನಿದ್ರೆ ತಿಳಿದೇಳ್ವರಂದದಿಂ
ಚರಿತದಿಂದೇಳ್ದ ಮಗನಂ ಕೊಂಡು ರಾಗದಿಂ
ಬರೆ ಜಗಜ್ಜ್ಯೋತಿರ್ಮಯಂ ಬೆಳಗುತಿರಲೊಳಗೆ

ಪುರಹರಂ ವೃದ್ಧವೇಷವನಿಳುಹಿ ತೊಳತೊಳಗೆ
ಜಡೆ ಚಂದ್ರಕಳೆ ನೊಸಲಕಣ್ಣಾಗಕುಂಡಲಂ
ತೊಡಿಗೆಯುಹಿ ಕರೆಗೊರಲ್ಮೆಸುಪ ಮುಖಮಂಡಲಂ
ದಶಭುಜಂ ಡಮರುಗ ತ್ರಿಶೂಲಂ ಗಜಾಜಿನಂ
ದಿಸೆವೆಸೆಯ ಬೆಳಪ ಪುಲಿದೊವಲು ಪಂಚಾನನಂ
ತಾನೊಪ್ಪಿ ರವಿಕೋಟಿತೇಜಮಂ ಮುಸುಳಿಸುತೆ
ನಾನಾ ಸುಧಾಕರ ಪ್ರಭೆಗಳಂ ರಂಜಿಸುತೆ

ಇರೆ ಕಾಣುತಿಳೆಯಾಂಡಗುಡಿಮಾರರೆಯ್ತಂದು
ಚರಣತಳದೊಳ್ಬಿದ್ದು ನೆರೆ ಪುಳುಕಿಸುತ್ತಂದು
ದೇವಾ ಜರಾಜೀರ್ಣ ವೇಷಮಂ ಕೆಯ್ಕೊಂಡು
ದೇವಾ ಮಳೆಯೊಳ್ಚಳಿಯೊಳೆನ್ನ ಮನಂಗೊಂಡು
ಬಪ್ಪುದೇ ಇಂತಿರುಳು ಕರುಣಿ ಕರುಣಿಗಳರಸ
ಒಪ್ಪವಾಯ್ತೆನ್ನ ಮಾಟಂ ಹೈಮವತಿಯರಸ
ಚಳಿ ಹತ್ತಿತೇ ಪತ್ತಿತೇ ತಂದೆ ಹೇಳಯ್ಯ
ಮಳೆಯೊಳಗೆ ತನು ನೆನೆದು ಕೊರಗಿತೇ ಹೇಳಯ್ಯ

ಎನುತಿರೆ ಗಣೇಶ್ವರರ್ನಡೆತಂದರುರವಣಿಸಿ
ತಮ ತಮಗೆ ಶಿವನನರಸುತ್ತಲ್ಲಿ ಸಂದಣಿಸಿ
ನಂದೀಶ ವೀರಭದ್ರಾದಿ ಗಣಸಂಕುಳಂ
ಬಂದು ರುದ್ರಂಗೆರಗಿ ನಿಂದಿರೆ ನಿರಾಕುಳಂ
ಕಂಡು ಶಿವನೆಂದನೆಲೆ ನಂದೀಶ ಕೇಳಯ್ಯ
ಕಂಡೆನಿಲ್ಲಿಂತಪ್ಪ ನೇಹಮಂ ಪೊಸತಯ್ಯ
ಈ ಮಳೆಯೊಳೀ ಚಳಿಯೊಳಿಂತು ಪೋದವರುಂಟೆ
ಏಮಾತೊ ಮೊಳೆವಿತ್ತನೆತ್ತಿ ತಂದವರುಂಟೆ
ಮಗನ ಸಾವಂ ನೋಡನುಣಲಿಕ್ಕಿದವರುಂಟೆ
ಜಗದೊಳಗೆ ವಾಂಛಿತವನುಳಿದು ಮಾಳ್ಪವರುಂಟೆ
ಎಂದು ಕೊಂಡಾಡುತಿರೆ ಪೂಮಳೆಗಳೆರಗಿದವು
ಅಂದು ನಾಕದ ದುಂದುಭಿಸ್ವನಂ ಮೊಳಗಿದವು

ಆಗಳಾ ಯಿಳೆಯಾಂಡಗುಡಿಮಾರನಭವಂಗೆ
ಹೋಗಲೀವೆನೆ ದೇವನಾರೋಗಿಸಿಂದಿಂಗೆ
ಎನೆ ನಸುನಗುತೆ ಭಕ್ತನಿಚ್ಛೆಯಂ ನೆರೆ ಸಲಿಸಿ
ವನಿತೆ ಪಾರ್ವತಿದೇವಿ ಗಣಸಂಕುಳಂವೆರಸಿ
ಆರೈಸಿದಂ ಕರುಣದಿಂದ ಶಶಿಶೇಖರಂ
ಹಾರೈಸಿ ಮೊಳೆವಿತ್ತನೋಗರವನೀಶ್ವರಂ
ಆ ಸಮಯದೊಳ್ಗಂಡಹೆಂಡಿರ್ಗೆ ತನಯಂಗೆ
ಭಾಸುರದ ಪುಷ್ಪಕಂಗಳು ಬಂದವನುವಿಂಗೆ
ಬರಲವರನಾ ಪುಷ್ಪಕಂಗಳೊಳಗಿರಿಸುತುಂ
ಹರುಷದಿಂ ದೇವ ದುಂದುಭಿಗಳಂ ಹೊಯ್ಸುತುಂ
ಕರೆದು ತುಂಬುರ ನಾರದರನೊಲ್ದು ಪಾಡಿಸುತೆ
ಬರಿಸಿ ವರ ಚಂಡಕೀರ್ತಿಗಳಿಂದ ಪೊಗಳಿಸುತೆ
ಕೈಲಾಸಪುರಕೆ ಕೊಂಡೊಯ್ದನುತ್ಸಾಹದಿಂ
ಶೈಲಜಾಪತಿ ಕರುಣ ಉಬ್ಬರಿಸಿ ನೇಹದಿಂ
ಕೊಂಡೊಯ್ದು ಗಣಪದವಿಯೊಳಗವರನೊಲ್ದಿರಿಸಿ
ಖಂಡೇಂದುಮೌಳಿ ತನ್ನಯ ಕರುಣದೊಳಗಿರಿಸಿ
ತಾನಾದಿಮಧ್ಯಾಂತಶೂನ್ಯನಿಂತೊಪ್ಪಿದಂ
ನಾನಾಶರಣವೃಂದಮಾನ್ಯನಿಂತೊಪ್ಪಿದಂ
ಶರಣ ಜನ ಹೃದಯ ಮಧ್ಯಜ್ಯೋತಿಯೊಪ್ಪಿದಂ
ನಿರುಪಾಧಿಕಪ್ರಮೋದಾಂಬೋಧಿಯೊಪ್ಪಿದಂ
ಸತ್ವಾದಿಗುಣಭರಾರ್ಜಿತರೂಪನೊಪ್ಪಿದಂ
ತತ್ವನಿಧಿ ಹಂಪೆಯ ವಿರೂಪಾಕ್ಷನೊಪ್ಪಿದಂ

ಕಂದ॥ ಮೃಡನಿಂ ಮೆರೆದಿಳೆಯಾಂಡ ।
ಗುರ್ಡಿಮಾರರ ಕಂದನೆಂದು ಸದ್ಭಕ್ತಿಯನಿತ್ತೆಡೆ ॥
ವಿಡದೆ ಕರುಣಿಸುದುನೀಂ ।
ಕಡೆಗಣಿಸದೆ ದೇವ ಹಂಪೆಯ ವಿರೂಪಾಕ್ಷಾ ॥

**ಸಮಾಪ್ತ.**

---

ಶಿವಾನುಭವ ಗ್ರಂಥಮಾಲಾ ನಂ|| ೩೩

# ನಿರಂಜನ ವಂಶರತ್ನಾಕರ.



ಸಂಪಾದಕರು.

**ರಾ|| ಸಾ|| ಫ. ಗು ಹಳಕಟ್ಟಿ.**

ಬಿ. ಏ ಎಲ್. ಎಲ್. ಬಿ. ವಿಜಾಪುರ.



೧೯೩೨

**ಬೆಲೆ ೮ ಆಣೆ.**

# ಪ್ರಸ್ತಾವನೆ.



ನಿರಂಜನ ವಂಶರತ್ನಾಕರವು ನಮಗೆ ದೊರೆತ ಒಂದು ಹಸ್ತಲಿಖಿತ ಪ್ರತಿಯ ಸಹಾಯದಿಂದ ಮುದ್ರಿಸಿದ್ದೇವೆ. ಈ ಪ್ರತಿಯು ಅಪೂರ್ಣವಾಗಿದ್ದದರಿಂದ ನಾವು ಅಷ್ಟನ್ನೇ ಮುದ್ರಣಗೊಳಿಸಬೇಕಾಯಿತು. ಪೂರ್ಣ ಪ್ರತಿಯು ಯಾರಲ್ಲಾದರೂ ಇದ್ದರೆ, ಅದನ್ನು ಅವರು ನಮ್ಮ ಕಡೆಗೆ ಕಳಿಸಿಕೊಟ್ಟಲ್ಲಿ ಅವರಿಗೆ ನಾವು ಬಹಳ ಆಭಾರಿಯಾಗುವೆವು. ಮತ್ತು ಈ ಗಂಥವನ್ನು ನಾವು ಪೂರ್ತಿಯಾಗಿ ಮುದ್ರಣಗೊಳಿಸುವೆವು.

[illegible] ಗ್ರಂಥದಲ್ಲಿ ಅನೇಕ ಐತಿಹಾಸಿಕ ವಿಷಯಗಳು ಉಲ್ಲೇಖಿಸಲ್ಪಟ್ಟಿದ್ದು ತೋರಿಬರುತ್ತದೆ. ಗ್ರಂಥಕರ್ತನು ಈ ಗ್ರಂಥವನ್ನು ಬರೆಯುವಲ್ಲಿ ಬಹಳ ಸಂಶೋಧನಮಾಡಿ ಬರೆದಿರುವನೆಂಬದು ನಿರ್ವಿವಾದವಾದದ್ದು. ಅವನು ಇದರಲ್ಲಿ ಬರೇ ಅದ್ಭುತ ಸಂಗತಿಗಳನ್ನು ವರ್ಣಿಸುವದನ್ನು ಬಿಟ್ಟುಕೊಟ್ಟು ನಿಜವಾಗಿ ವರ್ತಿಸಿದ ಐತಿಹಾಸಿಕ ಸಂಗತಿಗಳನ್ನು ವಿಶೇಷವಾಗಿ ಸಂಗ್ರಹಿಸಲು ಯತ್ನಿಸಿದ್ದು ತೋರಿಬರುತ್ತಿದೆ. ಈ ಗ್ರಂಥದ ಮೇಲಿಂದ ಮೊದಲಿನ ಮಠಾಧಿಪತಿಗಳು ವೀರಶೈವ ಮತಪ್ರಸಾರದ ಸಲುವಾಗಿ ಎಷ್ಟು ಮಹತ್ತರವಾದ ಪ್ರಯತ್ನಗಳನ್ನು ಮಾಡುತ್ತ ಬಂದರೆಂಬದು ಬಹಳ ಚನ್ನಾಗಿ ಗೊತ್ತಾಗುತ್ತದೆ. ಈ ದೃಷ್ಟಿಯಿಂದ ಈ ಗ್ರಂಥವು ಬಹಳ ಮಹತ್ವದ್ದಿರುತ್ತದೆ. ಈ ಗ್ರಂಥವನ್ನು ಸಂಪೂರ್ಣವಾಗಿ ಮುದ್ರಣಗೊಳಿಸುವ ಸುಸಂಧಿಯು ಬೇಗನೆ ಬರಲೆಂದು ಹಾರೈಸುತ್ತೇವೆ.

ವಿಜಾಪುರ
೩—೧೨—೩೨

**ಫ. ಗು. ಹಳಕಟ್ಟಿ.**
ಸಂಪಾದಕ.



ಮುತಿಂಟ್ಟುಕೊಂಡು ಅವರಿಗೆ ಅಪ್ಪಣೆ ಕೊಟ್ಟಿದ್ದೇನೆಂದರೆ ಶ್ರೀಮನ್ಮಹಾರಾಜ ನಿರಂಜನ ಶೂನ್ಯಸಿಂಹಾಸನಾಧೀಶ್ವರ ಜಗದ್ಗುರು ಅಲ್ಲಮಪ್ರಭು ಚನ್ನಬಸವರಾಜೇಂದ್ರ ಮಹಾಸ್ವಾಮಿಗಳವರ ಸೂತ್ರವಿಡಿದು ಶ್ರೀ ಚನ್ನಬಸವೇಶ್ವರನು ಸಿದ್ಧರಾಮಸ್ವಾಮಿಗಳವರಿಗೆ ಬೋಧಿಸಿದ ಶಿವಾನುಭವ ಪುಸ್ತಕದ ಸೂತ್ರವಿಡಿದು ಶಿಖಾಶೈಲವಿಲ್ಲದೆ ಸೊನ್ನಲಾಪುರದ ಸಿದ್ಧರಾಮಸ್ವಾಮಿಗಳವರ ಬಳಿವಿಡಿದು ಕಡೆಗೆ ನಮ್ಮ ತನಕ ಶಿವಾನುಭವ ಚರಂತಿಗೆ ಪಟ್ಟವು ಇಪ್ಪತ್ತುಮೂರು ಪಟ್ಟವಾದವು. ನಮ್ಮ ಗುರುನಾಜ್ಞೆ ಪ್ರಕಾರ ಡಿಳ್ಳಿಯಲ್ಲಿ ಈ ಮುರುಗಾರಾಜೇಂದ್ರ ಸ್ವಾಮಿಗಳವರಿಗೆ ಶಿಖಾಪಟ್ಟದ ಪ್ರಭುಚನ್ನಬಸವರಾಜೇಂದ್ರರ ತರುವಾಯದಲ್ಲಿ ಒಂದನೆಯ ಶಿಖಾಪಟ್ಟವನ್ನು ಮಾಡಿದ ನಂತರ ಕಟ್ಟಿಗೆಹಳ್ಳಿಸ್ವಾಮಿಗಳವರ ಈಚೆಗೆ ಆ ಮುರಿಗಾಸ್ವಾಮಿಗಳು ನಾವು ಉಭಯತರು ಷಟ್‌ಸ್ಥಲಕ್ಕೆ ಅಧಿಪತಿಗಳಾಗಿ ದೇಶ ಮಧ್ಯದಲ್ಲಿರುವ ಮೂರುಸಾವಿರ ವಿರಕ್ತರಿಗು ಏಳುನೂರು ಬುಡಕಟ್ಟಿನ ಚರಮೂರ್ತಿಗಳಿಗು ಗುರುಗಳಾಗಿ ಇವರುಗಳ ಕಡೆಯಿಂದ ಈ ವರೆವಿಗು ಕಾಣಿಕೆಗಳನ್ನು ತೆಗೆದುಕೊಂಡೆವು. ಇದಲ್ಲದೆ ಆ ಬುಡಕಟ್ಟಿನ ಚರಮೂರ್ತಿಗಳಲ್ಲಿಯೆ ಆಗಲಿ ಅಥವ ವಿರಕ್ತರಲ್ಲಿಯೆ ಆಗಲಿ ಇವರು ಚರಂತಿಗೆಯನ್ನು ಮಾಡಿದರೆ ಕಾಣಿಕೆ ನೂರು ರುಪಾಯಿ ತಕ್ಕೊಳ್ಳುವೆವು. ಶಾಸ್ತ್ರಸಂಪಾದಿಸಿ ಸ್ಥಲ ಕೂಡಿಸಿ ವಿರಕ್ತ್ಯಾಶ್ರಮವನ್ನು ಕೊಟ್ಟಲ್ಲಿ ಐವತ್ತು ರುಪಾಯಿ ಕಾಣಿಕೆಯನ್ನು ತಗೆದುಕೊಳ್ಳುವೆವು. ಇದಲ್ಲದೆ ದೇಶಂಗಳಲ್ಲಿರುವ ಭಕ್ತಗಣಂಗಳಿಂದ ದೀಪಾರಾಧನೆ ಕಾಣಿಕೆ ಆಚಾರ ವಿಚಾರದಿಂದ ಬಂದ ಕಾಣಿಕೆ ಮುಂತಾದ ದ್ರವ್ಯಂಗಳಿಂದ ನಮ್ಮ ಸಂಸ್ಥಾನದ ವೆಚ್ಚ ಸರಿಯಾಗಿ ನಡಿಸುತ್ತ ಗಣಸಮೂಹದೊಡನೆ ಲಿಂಗಪೂಜೆ ಜಂಗಮ ದಾಸೋಹನನ್ನು ಮಾಡುತ್ತ, ಇತ್ತಲು ನಾವು ೧೧ ಚರಂತಿಗೆ ಕೊಟ್ಟು ಇದ್ದೇವೆ. ಈ ಮುರಿಗಾಸ್ವಾಮಿಗಳವರು ೪೦ ಚರಂತಿಗೆ ಕೊಟ್ಟು ಇದ್ದಾರೆ. ಅಂತು ಕೂಡಿ ನಮ್ಮ ಉಭಯತರಿಂದ ೫೧ ಚರಂತಿಗೆ ಕೊಟ್ಟು ಇದ್ದೇವೆ. ಹಿಂದೆ ನಮ್ಮ ಗುರುಗಳಾದ ತೋಂಟದಾರ್ಯ ಸ್ವಾಮಿಗಳವರು ಮಾಡಿದ ಏಳುನೂರು ಚರಂತಿಗೆ ನಮ್ಮ ಉಭಯತರಿಂದ ಆದ ಚರಂತಿಗೆ ೫೧ ಅಂತು ಕೂಡಿ ಏಳುನೂರು ಐವತ್ತೊಂದು ಚರಮೂರ್ತಿಗಳು ಗುರುಗಳಾಗಿ ಇಂದಿನ ವರೆಗೆ ನಮ್ಮ ಉಭಯತರೊಳಗೆ ಶಿಖಾಪಟ್ಟವೆಂತಲೂ ಶಿವಾನುಭವ ಚರಂತಿಗೆ ಪಟ್ಟವೆಂತಲು ಈ ಎರಡು ಪ್ರಕಾರವಿದ್ದರೂ ಭೇದವಿಲ್ಲದೆ ಇದ್ದ

ಕಾರಣ ಎಲ್ಲ ಮರ್ಯಾದೆಗಳಿಂದಲು ಸರಿಯಾಗಿ ನಡೆಯುತ್ತ ಬಂದಿತು. ಇನ್ನು ಮೇಲೆ ಎಲ್ಲ ಭಾರವು ಈ ಇಮ್ಮಡಿ ಮುರಿಗಾರಾಜೇಂದ್ರ ಸ್ವಾಮಿಗಳವರನ್ನೇ ಕೂಡಿ ಇದೆ. ನಮಗೆ ಸಾಂಬನ ಅಪ್ಪಣೆ ಆದ್ದರಿಂದ ಇವೊತ್ತಿಗೆ ೮ ದಿವಸದಲ್ಲಿ ಸೋಮವಾರ ಉದಯ.ದಲ್ಲಿ ಕೈಲಾಸವಾಸಿಗಳಾಗುವೆವೆಂದು ಅಪ್ಪಣೆಯನ್ನು ಕೊಟ್ಟು ಅಲ್ಲಿಯ ತನಕ ಪ್ರಭುಲಿಂಗಲೀಲಾ ವಿಲಾಸನನ್ನು ಓದಿಸಿ ಶ್ರವಣ ಗೊಳಿಸುವುದು ಆ ಪರಿಯಂತರ ನಿತ್ಯ ಪೂಜಾಗಣಾರಾಧನೆ ಆಗುವುದೆಂದು ಮುರಿಗಾ ಸ್ವಾಮಿಗಳು ಮುಂತಾದ ಸಕಲರಿಗು ಸೂಚಿಸಲು ಸರ್ವರು ಆದನ್ನು ಕೇಳಿ ಮಹಾಸ್ವಾಮಿಗಳವರು ತಮ್ಮ ಇಚ್ಛೆ ಇದ್ದಂತೆ ನಡಿಸಿಕೊಡುತ್ತೇವೆ, ಮುಂದೆ ತಮ್ಮ ಶಿವಾನುಭವ ಚರಂತಿಗೆ ಪಟ್ಟವನ್ನು ಮಾಡಿ ನಮ್ಮಗಳ ಕೈಯ್ಯಲ್ಲಿ ಕೊಟ್ಟು ದಯಮಾಡಿಸಿದಲ್ಲಿ ಆ ಸ್ವಾಮಿಗಳವರನ್ನು ತಮ್ಮಂತೆ ಕಂಡು ನಡೆದುಕೊಳ್ಳುತ್ತೇವೆ, ಎಂದು ಅವರು ಹೇಳಿಕೊಳ್ಳಲು ಆ ತತ್‌ಕ್ಷಣವೆ ತಮ್ಮ ಶಿವಾನುಭವ ಚರಂತಿಗೆ ಪಟ್ಟವನ್ನು ಶ್ರೀ ವಾಚ್ಯದ ಕುಮಾರ ದೇಶಿಕೇಂದ್ರ ಸ್ವಾಮಿಗಳವರಿಗೆ ಮಾಡಿ ಅದೇ ಗ್ರಾಮದಲ್ಲಿ ನಿರ್ವಯಲಾದರು. ಇವರ ತೊರಗದ್ದಿಗೆ ಸೋದೆ ಸೀಮೆಯಲ್ಲಿ ಇರುವ ಇಸಳೂರು ಕೆರೆಯ ತಟಿಯಲ್ಲಿ ಧರ್ಮಾ ನದಿಯು ಉದ್ಭವವಾದ ಕೂಪದ ಹತ್ತಿರದಲ್ಲಿ ಇರುವ ಬ್ಯಾಣದ ಬೈಲು ಸ್ಥಳಕ್ಕೆ ಲಿಂಗಮುದ್ರೆ ಶಿಲೆಗಳನ್ನು ಸ್ಥಾಪನಂಗೈದು ಆ ಸ್ಥಳದಲ್ಲಿ ಸಮಾಧಿಯನ್ನು ಮಾಡಿಸಿ ಸ್ವಾಮಿಗಳವರನ್ನು ಉತ್ಸಹದೊಡನೆ ನೆರವಣಿಗೆಯಿಂ ಮಾಡಿ ಸಂಸ್ಕರಿಸಿ ಮಠವನ್ನು ಕಟ್ಟಿಸಿ ಗದ್ದಿಗೆಯನ್ನು ಸ್ಥಾಪನಂಗೈದರು. ಇವರ ತೋರಗದ್ದಿಗೆ ಇಸಳೂರಲ್ಲಿ ಇರುತ್ತದೆ. ಆ ಬಳಿಕ ಸಕಲ ಗುರು ಚರ ಮೂರ್ತಿಗಳು ಮುಂತಾದ ದೇವ ಭಕ್ತರು ಕೂಡಿ ಶ್ರೀ ಮುರಿಗಾರಾಜೇಂದ್ರ ಸ್ವಾಮಿಗಳವರು ಕಾರಣತ್ವಕ್ಕೆ ಗುರುಗಳು ಕಾರ್ಯತ್ವಕ್ಕೆ ಶ್ರೀ ಕುಮಾರ ದೇಶಿಕೇಂದ್ರ ಸ್ವಾಮಿಗಳವರೇ ಗುರುಗಳೆಂದು ಸ್ವಾದಿ ಧೊರೆಗಳು ಮುಂತಾದ ಸೀಮೆ ಗೌಡರು ಆ ಗುರು ಚರಮೂರ್ತಿಗಳು ಶೆಟ್ಟರು ದೈವದವರು ಸಹವಾಗಿ ನಿಯಮಿಸಿ ಕೊಟ್ಟು ಕುಮಾರ ಸ್ವಾಮಿಗಳವರಿಗೆ ಮುರಿಗಾಸ್ವಾಮಿಗಳು ಮುಂತಾದ ಸಕಲ ಗುರು ಚರಮೂರ್ತಿಗಳು ಆಹೇರು ಮುಂತಾದ ಸಕಲ ಮರ್ಯಾದೆಗಳಂ ಕೊಟ್ಟು ಶ್ರೀ ಮುರಿಗಾರಾಜೇಂದ್ರ ಸ್ವಾಮಿಗಳವರ ಸರಿಯಾಗಿ ಸಿಂಹಾಸನಾರೂಢರಂ

ಮಾಡಿಸಿ ಆಂದೋಳಿಕ ಮುಂತಾದ ೭೨ ಬಿರುದುಗಳ ಸಮೇತವಾಗಿ ಉತ್ಸಹಂಗೊಳಿಸಿ ಮಹಾಗಣಾರಾಧನೆಯಂ ಮಾಡಿಸಿದ ಬಳಿಕ ಸಕಲ ದೇವಭಕ್ತರು ಕಾಣಿಕೆಯಂ ಒಪ್ಪಿಸಿ ಉಭಯ......................

ಸೂಚನೆಃ— ನಮ್ಮ ಹತ್ತರವಿದ್ದ ಪ್ರತಿಯು ಇಲ್ಲಿಗೆ ಮುಗಿದದ್ದರಿಂದ ಇಷ್ಟನ್ನೇ ನಾವು ಇಲ್ಲಿ ಅಚ್ಚುಹಾಕಿದ್ದೇವೆ.



ಇರುವದಕ್ಕೆ ಯೋಗ್ಯರಲ್ಲ. ಅವರ ಸಂಗಡ ನಾವು ಸಲ್ಲಾ ಮಾಡಲಿಕ್ಕೆ ಇಲ್ಲ. ಟೀಪೂಸುಲ್ತಾನರ ಕಡೆಯುವರು ಸಂಪಾದಿಸಿದಂತಾ ಒಡವೆ ಆ ಜನರು ಸಹ ಬಿಟ್ಟುಕೊಡುತ್ತೇವೆ. ಈ ಬೀಬಿಯೂ ಮಾಪಿಳೆಯುರೂ ಸಹ ಬೊಂಬಾಯಿಗೆ ಹಿಡಿದು ಕಳುಹಿಸಿಕೊಡುತ್ತೇವೆ"— ಎಂದು ಜನರಲ್ ಸಾಹೇಬರು ಹೇಳಿದ್ದರಿಂದ, ಆ ಬೀಬಿಯೂ ಆ ಮಾಪಿಳ್ಳೆಯರು ಸಹ ಯೋಚಿಸಿದ್ದು:— "ಟೀಪೂ ಸುಲ್ತಾನರ ಕಡೆ ಜನರು ಸಲ್ಲಾ ಮಾಡಿಕೊಂಡು, ಕೋಟೆ ಇಳಿದು ಪಟ್ಟಣಕ್ಕೆ ಹೋಗುತ್ತಾರೆ. ನಮ್ಮ ಮಾಪಿಳೆಯುರಿಗೆ ಜೀವಿಸುವುದಕ್ಕೆ ಬಿಡರು. ಮಾಪಿಳ್ಳೆಯರು ಯಾವತ್ತನ್ನು ಇಂಗ್ರೇಜಿಯುವರು ಕೊಂದು ಹಾಕಿಯಾರು. ಮಲ್ಯಾಳದಲ್ಲಿ ಇರುವಂಥ ಅರಸುಗಳು ನಾಯುಮಾರರು ಮುಂತಾಗಿ ಶತ್ರುಗಳು ಆಗಿ ಇದ್ದಾರೆ. ಕೊಡಗಿನ ದೊರೆಗಳು ಈಗ ತಲಚೇರಿಗೆ ಬಂದು ಇದ್ದಾರೆ. ಪ್ರಾಕು ಅವರ ಹಿರಿಯುವರ ದಿವಸದಲ್ಲಿ ಅವರ ಕಡೆ ದಳವಾಯಿಗೆ ನಾವು ಉಪಕಾರ ಮಾಡಿ ಇದ್ದೇವೆ. ಈ ವೇಳೆಯುಲ್ಲಿ ನಾವು ಹೇಳಿಕೊಂಡರೆ ನಮ್ಮ(ನ್ನು) ಉಳಿಸಿಕೊಳ್ಳುವದಕ್ಕೆ ಅವರಿಂದ ಆಗುವಷ್ಟು ಉಪಕಾರ ಮಾಡಿಯಾರು"— ಎಂದು ಯೋಚಿಸಿ, ಆ ಬೀಬಿಯು ತನ್ನ ಮಗನನ್ನು ರಾತ್ರೆ ವೇಳೆ ಕಳ್ಳಮಾರ್ಗದಲ್ಲಿ ದೋಣಿ ಹತ್ತಿಸಿ ಕಾರೇಕಾರ ಕುಂಞಪಕ್ಕಿ ಎಂಬವನ ಕೂಡಲಿಟ್ಟು, ಕಳುಹಿಸಿಕೊಟ್ಟು "ಇಷ್ಟು ದಿವಸ ನಮ್ಮ ಮಗನಾಗಿ ಇದ್ದ(ನು). ಈಗ ತಮ್ಮ ಮಡಲಿಗೆ ಹಾಕಿದೇನೆ. ತಾವು ಆರೈಕೆಮಾಡಿ [ಕೊಂಡು ಕೀರ್ತಿ ಸಂಪಾದಿಸಿಕೊಳ್ಳಬೇಕೆ"ಂದು]+ ಕೊಡಗಿನ ರಾಜರ ಬಳಿಗೆ ಹೇಳಿ ಕಳುಹಿಸಿಕೊಟ್ಟ ಪ್ರಯುಕ್ತ §[ರಾಜರು ಸಮ್ಮತಿಪಟ್ಟು, ಪ್ರತ್ಯುಪ

---

\+ ಬ ಕೊಂಡರೆ ಕೀರ್ತಿ ತಮ್ಮದು ಇದೆ' ಎಂಬುದಾಗಿ ಆ ಕುಂಞಪಕ್ಕಿ ಸಂಗಡ ಬಾಯಿಮಾತಿನಿಂದ ಹೇಳಿ,

§ ಬ ಅವನು ಅದೇ ಮೇರೆ ಆ ಬೀಬೀ ಮಗನನ್ನು ಕರೆದುಕೊಂಡು ತಲಚೇರಿಗೆ ಬಂದು, ಮೂಸೆ ಬೇಹಾರಿಯುನ್ನು ಕೂಡಿಕೊಂಡು, ವೀರರಾಜೇಂದ್ರ ಒಡೆಯುರವರು ಇಳಿದು ಇದ್ದ ಹಯಾಜನ ಮನೆಗೆ ಬಂದು, ಆ ಬೀಬಿ ಹೇಳಿದ ವಿವರ ಯಾವತ್ತು ಹೇಳಿಕೊಂಡಲ್ಲಿ, ಪ್ರಾಕು ನಮ್ಮ ಹಿರಿಯುವರ ಕಾಲದಲ್ಲಿ ದಳವಾಯಿಗೆ ಇವರು ಉಪಕಾರ ಮಾಡಿ ಯಿದ್ದಾರೆ ಯೆಂಬದನ್ನು ಗ್ರಹಿಸಿ, ಅದಕ್ಕೆ ಪ್ರತಿ ಉಪಕಾರ ಮಾಡಬೇಕೆಂಬದಾಗಿ ಅ ಬೆಳಿಗ್ಗೆಯೇ ಬೀಬೀ ಮಗನನ್ನು ಕರಕೊಂಡು ಹೋಗಿ, ಈ ಬೀಬೀ ವೃತ್ತಾಂತ ಯಾವತ್ತು ಚೀಫ್ ರಾಬರ್ಟ್ ಟಲೇರು ಸಾಹೇಬರವರ ಸಂಗಡ ಹೇಳಿದ್ದಲ್ಲಿ, ಅವರು ಈ ಮಾತ(ನ್ನು) ಕೇಳಿ—" ಕಣ್ಣಾನೂರ

ಕಾರ ಮಾಡಬೇಕೆಂದು ಯೋಚಿಸಿ, ಬೀಬಿಮಗ(ನ)ನ್ನು ಕರಕೊಂಡು ಛೀಫ್ ರಾಬರ್ಟ್ಸ ಟಿಲೇರಿ ಸಾಹೇಬರನ್ನೂ ಕರಕೊಂಡು, ಮೇಜರ್ ಜನರಲ್ ರಾಬರ್ಟ್ಸ ಅಬರಕರಂಬಿ ಸಾಹೇಬರವರ ಭೇಟಿ ಮಾಡಿ, ರಾಜರು] ಬೀಬಿ ಮಗನ ಕೈಹಿಡಿದು ಜನರಲ್ ಸಾಹೇಬರವರ ಕೈಲಿ ಕೊಟ್ಟು,—"ನಮ್ಮ ಮೇಲೆ ಮೆಹರ್ಬಾನಿಗಿ ದೃಷ್ಟಿ ಮಡಗಿ, ಈ ಮಗುವಿನ ಮಾನ ಪ್ರಾಣವುಳಿಸಿ ರಕ್ಷಣ್ಯ ಮಾಡಬೇಕು"— ಎಂಬದಾಗಿ ಜಾಹೀರು ಮಾಡಿದಲ್ಲಿ, ಜನರಲ್ ಸಾಹೇಬರು ತಿಳಿಯದೆ, ರಾಜರ ಮಾತಿನ ಮೇಲೆ ಆದೀತು ಯೆಂತ ಒಪ್ಪಿಕೊಂಡು ಆ ಬಳಿಕ—"ಈ ಮಗು ಯಾರದು?"—ಎಂಬದಾಗಿ ರಾಬರ್ಟ್ಸ ಟಿಲೇರಿಸಾಹೇಬರನ್ನು ಕೇಳಿದಲ್ಲಿ, "ಇವನು ಕಣ್ಣೂರು ಬೀಬಿ ಮಗ. ರಾತ್ರೆ ವೇಳೆಯಲ್ಲಿ ಕಾಣದ ಹಾಗೆ ದೋಣಿ ಹತ್ತಿಸಿ ಮಹಾರಾಜರ ಬಳಿಗೆ ಕಳುಹಿಸಿ ಇದ್ದಾಳೆ"— ಎಂದು ಹೇಳಿದಲ್ಲಿ, ಜನರಲ್ ಸಾಹೇಬರು *

---

(೭೩ ನೇ ಪುಟದ ಟೀಪು ಮುಂದೆ ಸಾಗಿದ್ದು)

ಬೀಬಿಯು ಇಂಗ್ರೇಜಿಯವರಿಗೆ ನಂಬಿಕೆ ದಗಾ ಮಾಡಿಯಿದ್ದಾರೆ. ಆದದರಿಂದ ಅವಳ ಸಂಗಡ ನಾವು ಸಲ್ಲಾ ಮಾಡಲಿಕ್ಕೆ ಇಲ್ಲ. ಅವಳ ಮಾತಾಗಿ ನಾವು ಜನರಲ್ ಸಾಹೇಬರವರಿಗೆ ಹೇಳುವದಕ್ಕೂ ಶಕ್ಯವಿಲ್ಲ.—" ಎಂಬದಾಗಿ ಹೇಳಿದರು. ಆ ಮಾತಿಗೆ ಮಹಾರಾಜರವರು ಹೇಳಿದ್ದು:—"ಹಾಗಾದರೆ ನಾವು ಈ ಬೀಬಿ ಮಗನನ್ನು ಕರಕೊಂಡು ಜನರಲ್ ಸಾಹೇಬರವರ ಭೇಟಿ ಆಗುವ ಬಗ್ಗೆ ಹೋಗುತ್ತೇವೆ. ನಮ್ಮ ಸಂಗಡ ನೀವು ಬರಬೇಕು"—ಎಂಬದಾಗಿ ಹೇಳಿದಲ್ಲಿ, ಆ ಮಾತಿಗೆ ಆ ಸರದಾರರು ಒಪ್ಪಿಕೊಂಡು, ಅದೇ ಮೇರೆ ರಾಜರವರು ಆ ಸರದಾರರು ಸಹ, ಬೀಬಿ ಮಗನನ್ನು ಕರಕೊಂಡು ತಲಚೇರಿಯಿಂದ ಹೊರಟು, ಪತ್ತೇಮಾರಿ ಮೇಲೆ ಸವಾರಿ ಆಗಿ, ಇಂಗ್ರೇಜ ಬಹಾದ್ದರ ಲಷ್ಕರಿನ ಸಮೀಪ ಇಳಿದು, ಮೇಜರ್ ಜನರಲ್ ರಾಬರ್ಟ ಅಬರ್ಕರಂಬಿ ಸಾಹೇಬ ಬಹದ್ದರವರ ಭೆಟ್ಟಿ ಆಗಿ, ವೀರರಾಜೇಂದ್ರ ಒಡೆಯರವರು, ಆ

* ಬ ಮನಸ್ಸಿನಲ್ಲಿ ಬಹಳ ದ್ವೇಷಪಟ್ಟು— "ಕಣ್ಣೂರವರು ಕಂಪನಿ ಸರಕಾರದ ಸಾಹೇಬ ಜನರಿಗೆ ಮೋಸಮಾಡಿ ಇದ್ದಾರೆ. ಅದಕ್ಕೆ ತಕ್ಕ ಶಿಕ್ಷೆ ಮಾಡತಕ್ಕವರು ಆಗಿಯಿದೆ. ಇಂಥಾ ದುಷ್ಟ ಜನರ ಮೇಲೆ ಮೆಹರ್ಬಾನಗಿ ಮಾಡಬಾರದು" ಎಂಬದಾಗಿ ಹೇಳಿದ್ದಲ್ಲಿ, "ಇದು ಒಂದಾವರ್ತಿಗೆ ನಮ್ಮ ಮೇಲಣ ಮಿತ್ರವಾತ್ಸಲ್ಯದಿಂದ ಈ ಮಗುವಿನ ಮೇಲೆ ದಯವಿಟ್ಟು, ಈ ಮಗುವನ್ನು ಕಣ್ಣೂರ ಸಂಸ್ಥಾನದಲ್ಲಿ ನಿಲ್ಲಿಸಬೇಕು. ಈ ಉಪಕಾರ ನಮ್ಮ ಮೇಲೆ ಮಾಡಿದ ಹಾಗೆ ಆದೀತು"— ಎಂಬದಾಗಿ ವೀರರಾಜೇಂದ್ರ ಒಡೆಯರವರು ಬಹಳ ಬಗೆಯಿಂದ ಹೇಳಿಕೊಂಡದರಿಂದ, ಜನರಲ್ ಸಾಹೇಬರವರು ಒಡಂಬಟ್ಟು

ಕೇಳಿ ಬಹಳ ಯೋಚನೆ ಮಾಡಿ,—"ಒಳ್ಳೇದು, ಎಂದು ರಾಜರಿಗೆ ಭರವಸೆ ಕೊಟ್ಟ ಮೇಲೆ ಪುನಃ ತಕರಾರು ಮಾಡಬಾರದು ಎಂದು] ಈ ಕಣ್ಣಾರು ಬೀಬಿ ತನ್ನ ಮಗನನ್ನ ನಿಮ್ಮ ಕೈಲಿ ಕೊಟ್ಟು ಇದ್ದಾಳೆ. ನೀವು ನಮ್ಮ ಕೈಲಿ ತಂದು ಕೊಟ್ಟಿರಿ. ಪುನಃ ನಿಮ್ಮ ಕೈಲಿ ನಾವು ಕೊಡುತ್ತೇವೆ. † [ರಾಬರ್ಟ್ಸು ಟಿಲೇರಿ ಸಾಹೇಬರ(ನ್ನು) ಕರೆದುಕೊಂಡು ಕೊಣ್ಣಾರಿಗೆ ಹೋಗಿ, "ಇದುವರೆಗೆ ಕುಂಪಣಿ ಸರಕಾರದ ಮೇಲೆ ಜಗಳಮಾಡಿ ದಗ ಮಾಡಿದಂಥಾದ್ದನ್ನು ಜನರಲ್ ಸಾಹೇಬರು ಮಾಫು ಮಾಡಿ ಇದ್ದಾರೆ. ಇನ್ನು ಮುಂದೆ ಈ ಮೇರೆ ನೀಚ ಬುದ್ಧಿ ಮಾಡದೆ ಯೋಗ್ಯರಾಗಿ ಇರಬೇಕೆಂ" ದು ಬೀಬಿಗೆ ಹೇಳಿ, ಅವಳ ಮಗುವ (ನ್ನು) ಅವಳಿಗೆ ಕೊಟ್ಟು ಬರುವದು"— ಎಂದು ಹೇಳಿ ರಾಜರಿಗೆ ಹುಕ್ಕುಂ ಕೊಡಿಸಿದ್ದರಿಂದ, ರಾಜರು ಬಂದು ಬೀಬಿಗೆ ಬುದ್ಧಿ ಹೇಳಿ, ಯಥಾ ಪ್ರಕಾರ ಇಟ್ಟು, ಕವಲ್ ಮಾಡಿಕೊಂಡು ಬಂದರು] ಆ ಬಳಿಕ ಕಣ್ಣಾರು ಕೋಟೇಲಿ ಇದ್ದ ಟೀಪೂಸುಲ್ತಾನರ ಕಡೆ ಜನಗಳ ಬಿಟ್ಟು ಕಳುಹಿಸಿಕೊಟ್ಟರು.

ಆ ಮೇಲೆ—"ಇನ್ನು ಮುಂದೆ ತಮಗೂ ನಮಗೂ ದೊಡ್ಡ ಶತ್ರುವಾದ ಟೀಪೂ ಸುಲ್ತಾನರ * [ಮೇಲೆ ಲಡಾಯಿ ಮಾಡಬೇಕೆಂದು] ಇಂಗ್ರೇಜಿ

---

† ಬ ತಾವು ಅದೇ ಮೇರೆಗೆ ಕಣ್ಣಾರ ಕೋಟೆ ಒಳಗೆ ಹೋಗಿ, ಈ ಮಗುವನ್ನು ಬೀಬಿ ಕೈಗೆ ಕೊಟ್ಟು, ಸಲ್ಲಾಮಾಡಿ, ಈ ವರೀ ಪರ್ಯಂತರಕ್ಕೆ ನೀನು ಮಾಡಿದಂಥಾ ದ್ರೋಹವನ್ನು ಇಂಗ್ರೇಜಿ ಕಂಪನಿ ಸರಕಾರದಿಂದ ಮಾಫು ಮಾಡಿಸಿ ಇದ್ದಾರೆ. ಇನ್ನು ಮುಂದೆ ಇಂಥಾ ಅನ್ಯಾಯ ಮಾಡಿದ್ದುಂಟಾದರೆ ಮಾಫು ಆಗಲಿಕ್ಕಿಲ್ಲ. ತಕ್ಕ ಶಿಕ್ಷೆ ಆದೀತು ಯೆಂತ ಹೇಳಬೇಕು'' ಎಂಬದಾಗಿ ಹೇಳಿ, ಆ ಬಳಿಕ ಆ ಜನರಲ್ ಸಾಹೇಬರವರು ಮಹಾರಾಜರವರ ಸಂಗಡ ರಾಬರ್ಟ್ಸ ಟಲಿಗು ಸಾಹೇಬರನ್ನು ಮೆಸ್ತರ ತೇಂಡಿಹಾರು ಸಾಹೇಬರನ್ನು ಸಾಮುವೆಲ್ ಉಲುಸೇನ್ ಸಾಹೇಬರನ್ನು ಮುಂತಾದ ಸರದಾರರ ಕೂಡಲಿಟ್ಟು ಕಣ್ಣಾರ ಕೋಟೆಗೆ ಕಳುಹಿದರಿಂದ, ಅದೇ ಮೇರೆ ಮಹಾರಾಜರವರು ಆ ಸರದಾರರು ಇಂಗ್ರೇಜಿ ಝೂಂಡೆ ಸಹ ಆ ಕಣ್ಣಾರ ಕೋಟೆ ಒಳಗೆ ಹೋಗಿ, ಕುಂಪನಿ ಸರಕಾರದ ಝೂಂಡೆಯನ್ನು ಕೋಟೆಯ ಮೇಲೆ ನಿಲ್ಲಿಸಿ, ಜನರಲ್‌ಸಾಹೇಬರವರು ಹೇಳಿದ ಮೇರೆ ಬೀಬಿ ಮಗನನ್ನು ಬೀಬಿಗೆ ಕೊಟ್ಟು, ಯಾವತ್ತು ವಿವರವನ್ನು ಹೇಳಿ, ಚನ್ನಾಗಿ ಸಮಾಧಾಯಿಸಿ, ಆ ಬಳಿಕ ತಿರುಗಿ ಬಂದು, ಅಲ್ಲಿನ ವೃತ್ತಾಂತ ಯಾವತ್ತು ಜನರಲ್ ಸಾಹೇಬರವರ ಸಂಗಡ ಹೇಳಿದಲ್ಲಿ, ಆ ಮಾತ(ನ್ನು) ಕೇಳಿ ಜನರಲ ಸಾಹೇಬರವರು ಬಹಳ ಸಂತೋಷಪಟ್ಟು 'ನೀವು ಮಾಡಿದ ಕೆಲಸವೆಲ್ಲ ಒಳ್ಳೆಯದೇ ಸರಿ' ಎಂಬದಾಗಿ ಹೇಳಿ.

* ಬ ನಿಗ್ರಹಿಸುವ ಬಗ್ಗೆ ತಯಾರಾಗ ಬೇಕು. ಈಗ

ಲಸ್ಕರ್ ಶ್ರೀರಂಗಣ ಪಟ್ಟಣಕ್ಕೆ ಹೋಗುವಂತಾ ಗಟ್ಟದ ಮಾರ್ಗ × [ಕ್ಕೆ ಹೇರಾಳ ದಂಡು ಬಿಟ್ಟು ಇಷ್ಟ ಗಟ್ಟದ ಸರಹದ್ದು] ಯಾವತ್ತಾ ಟೀಪೂ ಸುಲ್ತಾನ ¶ [ರಿಗೆ ಸೇರಿ ಯಿದೆ.] ಆದ್ದರಿಂದ ಇಂಗ್ರೇಜಿ ದಂಡು ಕೊಡಗಿನ ಸೀಮೆಗಾಗಿ ಸಾಗಿ ಹೋಗತಕ್ಕ ಬಗ್ಗೆ ಯಾವ ಕಡೆ ಸರಾಗವೆಂದು ನೋಡತಕ್ಕ ಬಗ್ಗೆ ಒಬ್ಬ ಸರದಾರನ(ನ್ನು) ತಮ್ಮ ಬಳಿಗೆ ಸ್ವಲ್ಪ ದಿವಸದಲ್ಲಿ ಕಳುಹಿಸುತ್ತೇವೆ. ಅವನು ಪಸಂದು ಮಾಡಿದ ಮಾರ್ಗವನ್ನು ತಾವು ಸಮ್ಮತಿಪಟ್ಟು, ದಂಡು ಸಾಗಿ ಬರುವ ಹಾಗೆ ದುರುಸ್ತು ಮಾಡಿಸಬೇಕು"—ಎಂಬುದಾಗಿ ವೀರರಾಜೇಂದ್ರ ಒಡೆಯರ ಸಂಗಡ ಹೇಳಿದಲ್ಲಿ, ಆ ಮಾತಿಗೆ ಒಪ್ಪಿಕೊಂಡು, ಕೊಡಗಿನ ರಾಜ್ಯಕ್ಕೆ ಬಂದರು. ಇದೇ ಸಮಯದಲ್ಲಿ ಕರ್ನಲ್ ಹಾಟ್ಲಿ ಸಾಹೇಬರವರು ಪವುಜು ಸಮೇತ ಕಲ್ಲೀಕೋಟೆಗೆ ಬಂದು, ಅಲ್ಲಿ ಇದ್ದಂತಾ ಟೀಪೂ ಸುಲ್ತಾನರ ಪವುಜು ಯಾವತ್ತನ್ನೂ ನಿಗ್ರಹಿಸಿ, ಆ ಕೋಟೆಯನ್ನು ತೆಗೆದುಕೊಂಡು, ಅಲ್ಲಿಂದ ಕಣ್ಣೂರಿಗೆ ಬಂದು ಆ ಜನರಲ್ ಸಾಹೇಬರವರ ದಂಡಿಗೆ ಕೂಡಿದರು.

ಆ ಬಳಿಕ ಕೆಲವು ದಿವಸದಲ್ಲಿ ಮಾರ್ಗಗಳ(ನ್ನು) ನೋಡುವ ಬಗ್ಗೆ ಕಾಪ್ತಿನ್ ರಸಲ್ ಸಾಹೇಬರವರು ಬಂದು ದೊರೆಗಳ ಭೇಟಿಯಾಗಿ,—" ಇಂಗ್ರೇಜ್ ಬಾಹದ್ದರ ಸರಕಾರದ ಪವುಜು ಬರತಕ್ಕ ಬಗ್ಗೆ ಹೆಗ್ಗಳದ ಗಟ್ಟದ ಮಾರ್ಗವನ್ನು ದುರಸ್ತು ಮಾಡಿಸಿಕೊಡಬೇಕು. ಅದೇ ಮಾರ್ಗವಾಗಿ ದಂಡು ಬಂದ ಮೇಲೆ ದಂಡಿಗೆ ಬೇಕಾದ ಸರಂಜಾಮು ತಮ್ಮ ಮುಖಾಂತರ ಕೊಡಿಸಿಕೊಟ್ಟು ಸಹಾಯ ಮಾಡಬೇಕು"—ಎಂಬದಾಗಿ ಹೇಳಿದಲ್ಲಿ, ವೀರರಾಜೇಂದ್ರ ಒಡೆಯರವರು ಆ ಮಾತಿಗೆ ಒಪ್ಪಿ ಒಡಂಬಟ್ಟು, ಕಾಪ್ತಿನ್ ರಸಲ್ ಸಾಹೇಬರನ್ನು ಮೂರು ದಿವಸ ಪರಿಯಂತರ ತಮ್ಮ ಬಳಿಯಲ್ಲಿ ಮಡಗಿಕೊಂಡು, ಇಂಗ್ರೇಜಿ ಬಹದ್ದರ ಪವುಜು ಸಮೇತ ಜನರಲ್ ಸಾಹೇಬರನ್ನು ಕರೆದುಕೊಂಡು ಬರುವ ಬಗ್ಗೆ ಆ ಕಾಪ್ತನ್ ಸಾಹೇಬರನ್ನು ಪುನಃ ಲಸ್ಕರಿಗೆ ಕಳುಹಿಸಿಕೊಟ್ಟು, ಮಹಾರಾಜರವರು—"ಲಸ್ಕರಿಗೆ ಬೇಕಾದ ಸಮಾನು ಜಮಾಯಿಸುವ ಬಗ್ಗೆ ಕೊಡಗಿನ ಸೀಮೆ ಒಳಗೆ ಟೀಪೂ ಸುಲ್ತಾನರು ನುಗ್ಗಿ ಲೂಟೈಸಿ ಹೈರಾನು ಮಾಡಿ ಇದ್ದಾರೆ. ಇಂತಹ ಹೈರಾನು ಸೀಮೆಯಲ್ಲಿ ಯಾವ

× ಬ. ಪ್ರತಿಯಲ್ಲಿ ಈ ಶಬ್ದಗಳಿಲ್ಲ.

‖ ಬ. ರ ತಾಲೋಕಿನ ಒಳಗೆ ಇದೆ. ಆ ಗಟ್ಟಗಳಲ್ಲಿ ಹೇರಳ ಮಂದಿಯಿಟ್ಟು ಬಂದೋಬಸ್ತು ಮಾಡಿ ಇದ್ದಾರೆ.

ಮೇರೆ ರಾತೀಪಿನ ಸರಂಜಾಮು ಸಿಕ್ಕೀತು? ಎರಡನೆಯದು,—ಅರಮನೆ
= [ಜಕ್ಕೆರಿ] ಇರುವಂತಾದ್ದು ಕಂಡು ಇದೆ. ಯಾವತ್ತೂ ಒಡವೆ ವಸ್ತ
ಹಣ ಕಾಸು ಮುಂತಾಗಿ ಟೀಪೂ ಸುಲ್ತಾನರ ಲೂಟಿಗೆ ಸಿಕ್ಕಿ ಹೋಯಿತು.
ಮೂರನೆಯದು — ತಮ್ಮ ಸೀಮೆ ಹೈರಾನು ಆದಾಗ್ಯೂ ಸ್ನೇಹಿತರ ಸೀಮೆ
ಯಿಂದ ತರಿಸಿಕೊಟ್ಟೇವು ಎಂದರೆ, ಕೊಡಗಿನ ಸೀಮೆ ಸುತ್ತ ಇರುವ
ಸೀಮೆ ಯಾವತ್ತೂ ಟೀಪೂ ಸುಲ್ತಾನರದು ಹೊರತು ಒಬ್ಬ ದೋಸ್ತ
ರದೂ ಕಾಣುವುದಿಲ್ಲ. ಆ ಕಡೆಯಿಂದ ಈ ಸೀಮೆಗೆ ಈ ಕಡೆಯಿಂದ
ಆ ಸೀಮೆಗೆ ಒಬ್ಬರೂ ಹೋಗಿ ಬರುವುದಕ್ಕಿಲ್ಲ. ಈ ಮೂರು ವಿಧ
ದಿಂದ ವಿಚಾರಿಸಿ ನೋಡಿದಾಗ್ಯೂ ಮಾರ್ಗ ತೋರಲಿಲ್ಲ. ಕಡೆಗೆ ಈಗ
ಇಂಗ್ರೇಜಿ ಕುಂಪಣಿ ಸರಕಾರವೂ ನಮ್ಮ ಸರ್ಕಾರವೂ ಸ್ನೇಹ
ಮಿತ್ರತ್ವದಿಂದ ಸೂರ್ಯಚಂದ್ರರು ಇರುವ ಪರಿಯಂತರ ನಡೆದು ಬರುವ
ಬಗ್ಗೆ ಹೊಸ ನೂತನವಾಗಿ ಆಣೆ ಭಾಷೆಯಿಂದ ಕರಾರು ಆಗಿಯಿದೆ.
ಇದಲ್ಲದೆ, ಇಂಗ್ರೇಜ ಸರ್ಕಾರದ ಜಯಪ್ರದದ ಲಷ್ಕರು ದೊಡ್ಡದು
ಷಮಾನ್ ಟೀಪೂಸುಲ್ತಾನರ ಸಂಗಡ ಲಡಾಯಿ ಮಾಡುವ ಬಗ್ಗೆ ಇದೇ
ಕೊಡಗಿನ ಸೀಮೆ ಮಾರ್ಗವಾಗಿ ಬರುತ್ತ ಇದೆ. ಇಂತ ಸಮಯದಲ್ಲಿ
ರಾತೀಪು ಮುಂತಾದ ಸರಂಜಾಮು ನಮ್ಮಿಂದ ಆಗುವಷ್ಟು ಸಹಾಯ ಮಾಡ
ದಿದ್ದರೆ ಸ್ನೇಹಕ್ಕೆ ವಿಹಿತವಾಗಿ ಕಾಣದು.”— ಎಂತ ಗ್ರಹಿಸಿ, ಕೆಲವು
ಬೇಹಿನ ಜನರನ್ನು ಟೀಪೂಸುಲ್ತಾನರ ಸೀಮೆ ಒಳಗೆ ಕಳುಹಿಸಿ, ಗಾಡಿ
ಸಾಗಿಸುವಂತ ಎತ್ತುಗಳು, ಸಾಮಾನು, ಸರಂಜಾಮು ಮುಂತಾಗಿ ಇರು
ವಂತ ಸ್ಥಳ ಗೊತ್ತುಹತ್ತಿಸಿ, ಆ ಜಾಗಕ್ಕೆ ಲಡಾಯಿ ಮಾಡುವಂತ
ಜನರನ್ನು ಆಯುಧಪಾಣಿ ಸಮೇತ ಕಳುಹಿಸಿ, ದುಸಮಾನರ ಕಡೆ ಜನರ
ಸಂಗಡ ಯುದ್ಧಮುಖದಲ್ಲಿ ಪ್ರಾಣ ವೆಚ್ಚಮಾಡಿಸಿ, ಕೆಲವು ಸಾಮಾನು,
೧೫೦೦ ಪರಿಯಂತರ ಎತ್ತುಗಳು ಸಹ ಸಂಪಾದಿಸಿ ತರಿಸಿ, ಈ ವಿವರ
ವನ್ನು ತಲಚೇರಿ ರಾಬರ್ಟ್ಸ ಟಿಲೇರಿ ಸಾಹೇಬರವರಿಗೆ ಕಾಗದ ಬರೆದು
ಕಳುಹಿಸಿದಲ್ಲಿ, “ಆ ಸರಂಜಾಮು ಯಾವತ್ತೂ ದಂಡು ಇಲ್ಲಿಂದ ಕೊಡ
ಗಿಗೆ ಬಂದ ಮೇಲೆ ಕೊಡಿಸಬೇಕು. ಈಗಲೇ ಲಷ್ಕರು ಕೂಚಾಗಿ ಬರು
ತ್ತದೆ. ಗಾಡಿ ಎಳೆಯುವ ಬಗ್ಗೆ ಎತ್ತುಗಳು ಅಗತ್ಯ ಬೇಕಾಗಿ ಇರು
ವದರಿಂದ ಆ ಎತ್ತುಗಳ(ನ್ನು) ತರುವ ಬಗ್ಗೆ ಕೆಲವು ಜನರನ್ನು ಕಳು
ಹಿಸಿ ಇದ್ದೇವೆ. ಅವರ ತಾಬೆಯಲ್ಲಿ ಕೊಟ್ಟು ಕಳುಹಿಸಬೇಕು”—ಎಂಬು

---

= ಬ ಜಕೀರ

ದಾಗಿ ಜವಾಬು ಬರೆಸಿ ಕಳುಹಿಸಿದ್ದರಿಂದ, ಆದೇ ಮೇರೆ ಮಹಾರಾಜರು ಒಳ್ಳೇ ಗಟ್ಟಿ ಭದ್ರವಾದ ಸಾವಿರದನೂರಹನ್ನೊಂದು ಎತ್ತು ಆದು, ಆ ಮನುಷ್ಯರ ವಶಕ್ಕೆ ಕೊಟ್ಟು ತಲಚೇರಿ ಇಂಗ್ರೇಜಿ ಕುಂಪನಿ ಸರಕಾರಕ್ಕೆ ಕಳುಹಿಸಿಕೊಟ್ಟರು. ಉಳಿಕೆ ರಾತೀಪಿನ ಸರಂಜಾಮು ಲಷ್ಕರಿಗೆ ತೆಗೆದು ಕೊಡತಕ್ಕ ಬಗ್ಗೆ ಪ್ರಯತ್ನಪಟ್ಟು ಜಮಾಯಿಸುತ್ತ ಇದ್ದರು.

ಅಷ್ಟರಲ್ಲಿ ಮಡಿಕೇರಿ ಕೋಟೆಯಲ್ಲಿ ಇದ್ದ ಮಂದಿಗೆ ರಸ್ತು ತೀರಿ ಹೋಗಿ ಲಾಚಾರಾಗಿ— " ತಮ್ಮ ತಮ್ಮ ಒಡವೆ ಸಹಿತ ಪ್ರಾಣದಿಂದ ಬಿಟ್ಟುಕೊಟ್ಟರೆ ಹೋದೇವು "— ಎಂಬದಾಗಿ × [ಜಾಫರಲ್ಲಿ] ಬೇಗು ಕಿಲ್ಲೇದಾರನ ಸಂಗಡ ಹೇಳಿದ್ದರಿಂದ, ಆ ಕಿಲ್ಲೇದಾರನು ನಾಲ್ಕು ಜನವನ್ನೂ ಒಂದು ಬಿಳೀ ಬಾವಟ ಸಹ ಸಲ್ಲಾ ಮಾಡುವ ಬಗ್ಗೆ ನಾಲ್ಕುನಾಡು ಅರಮನೆಗೆ ದೊರೆಗಳ ಬಳಿಗೆ ಕಳುಹಿಸಿದಲ್ಲಿ ಈ ವಿವರವನ್ನು ಕೇಳಿ ರಾಜರು ಅಲ್ಲಿಂದ ಹೊರಟು ಬಂದು ಮಡಿಕೇರಿ ಹಳೇ ಕೋಟೆಯಲ್ಲು ಇಳಕೊಂಡು ಆ ಕಿಲ್ಲೇದಾರನನ್ನು ತಮ್ಮ ಬಳಿಗೆ ಕರೆಕಳುಹಿಸಿ— "ಕೋಟೆ ಒಳಗೆ ಇರುವಂತಾದ್ದು ಟೇಪೂಸುಲ್ತಾನರ ಸರಕಾರದ ಸಾಮಾನು ಯಾವತ್ತೂ ವಂಚಿಸದೆ ನಮ್ಮ ಸರಕಾರಕ್ಕೆ ಒಪ್ಪಿಸಿ, ನೀನು ನಿನ್ನ ಮಂದಿ ಸಹ ನಿಮ್ಮ ನಿಮ್ಮ ಮನೆವಾರ್ತೆ ಒಡವೆ ಏನು ಇದ್ದಾಗ್ಗೂ ತೆಗೆದುಕೊಂಡು ಹೋಗಿ "— ಎಂದು ಅಪ್ಪಣೆ ಕೊಟ್ಟಲ್ಲಿ ಆ ಕಿಲ್ಲೇದಾರನು ಸಂತೋಷಪಟ್ಟು ಒಪ್ಪಿಕೊಂಡು, ಐನೂರು ಜನ ಕೊಡಗರನ್ನು ಕರೆದುಕೊಂಡುಹೋಗಿ ಆ ಕೋಟೆ ಒಳಗೆ ಇದ್ದ ತನ್ನ ಠಾಣ್ಯದ ಮಂದಿಯನ್ನು ಹೊರಗೆ ಕಳುಹಿಸಿ, ಅವರ ಬದಲಿಗೆ ಆ ಕೊಡಗು ಮಂದಿಯನ್ನು ನಿಲ್ಲಿಸಿ * [ಈ ದೊರೆಗಳ] ಜಾಂಡೆ ಕೋಟೆ ಮೇಲೆ ನಿಲ್ಲಿಸಿ, ಆ ಕೋಟೆಯ ಬಾಗಿಲು ಬೀಗ ಮುದ್ರೆಯನ್ನು ಖಜಾನೆ, ಪಿರಂಗಿ, ಮದ್ದುಗುಂಡು ಮುಂತಾದ ಟೇಪೂಸುಲ್ತಾನರ ಸಾಮಾನು ಇದ್ದುದು ಯಾವತ್ತೂ ದೊರೆಗಳಿಗೆ ಒಪ್ಪಿಸಿದನು. ಆ ಮಾರಣೇ ದಿವಸ ಬೆಳಿಗ್ಗೆ ರಾಜರ ಖಾಸಾ ಸವಾರಿಯು ಆ ಕೋಟೆಗೆ ಹೋಗುವಾಗ್ಗೆ, ಮಾರ್ಗದಲ್ಲಿ, ಟೇಪೂ ಸುಲ್ತಾನರ ಕಡೆ ಠಾಣ್ಯದ ಮಂದಿ ಯಾವತ್ತೂ ಬಹಳ ದೈನ್ಯೋಕ್ತಿಯಿಂದ—" ನಮಗೆ ಮೂರುತಿಂಗಳಿಂದ ಟೇಪೂಸುಲ್ತಾನರ

---

× ಬ. ಜಾಫರ್‌ಅಲೀ

* ಬ. ವೀರರಾಜೇಂದ್ರ ಒಡೆಯರವರ ಕಡೆ

ಸರಕಾರದಿಂದ ಸಂಬಳ ಸಿಕ್ಕಲಿಲ್ಲ. = [ನಮ್ಮ] ಖರ್ಚಿಗೆ ಕೊಟ್ಟು ರಕ್ಷಣ್ಯಮಾಡಬೇಕು"— ಎಂಬದಾಗಿ ಅರಿಕೆ ಮಾಡಿಕೊಂಡದ್ದರಿಂದ, " ನಿಮ್ಮ ಕಿಲ್ಲೇದಾರನನ್ನು ಕಳುಹಿಸಿದರೆ ನಿಮ್ಮ ಖರ್ಚಿನ ಬಗ್ಗೆ ಹಣ ಕಳುಹಿಸಬಹುದು"— ಎಂಬದಾಗಿ ಅಪ್ಪಣೆಕೊಟ್ಟು, ಕೊಡಗಿನ ಸಂಸ್ಥಾನದ ಹುಕ್ಕುಮತ್ತಿನ ಜಾಗವಾದ ಆ ಕೋಟೆ ಒಳಗೆ ಹೋಗಿ ಆ ಕಿಲ್ಲೇದಾರನ ಸಂಗಡ— "ನಿನ್ನ ಕಡೆ ಮಂದಿಗೆ ಖರ್ಚಿಗೆ ಇಲ್ಲದೆ ಕಷ್ಟಪಡುತ್ತಾರೆ. ಆದ್ದರಿಂದ ಒಂದು ಸಾವಿರ ವರಹವನ್ನು ಇನಾಮು ಆಗಿ ಕೊಡಿಸುತ್ತೇವೆ. ಅದನ್ನು ಹಂಚಿಕೊಡು; ಇದಲ್ಲದೆ ನಿಮ್ಮ ಸಂಗಡ ವೈಗಾವಲಿಗೆ ಕೊಡಗಿನ ಸರಹದ್ದು ಮುಳ್ಳುಸೋಗೆ ಪರಿಯಂತರ ಕೆಲವು ಮಂದಿಯನ್ನು ಕೊಡುತ್ತೇವೆ"— ಎಂಬದಾಗಿ ಅಪ್ಪಣೆ ಕೊಟ್ಟು, ಆದೇ ಮೇರೆ ಒಂದು ಸಾವಿರ ವರಹವನ್ನು ಆ ಕಿಲ್ಲೇದಾರನ ಕೈಯ ಕೊಟ್ಟಲ್ಲಿ, ಅವನು ಆ ಜನಕ್ಕೆ ಹಂಚಿಕೊಟ್ಟು ರಾಜರ ಸನ್ನಿಧಾನದಿಂದ ಅಪ್ಪಣೆ ತೆಗೆದುಕೊಂಡು, ವೈಗಾವಲಿನ ಮಂದಿ ಸಹ ಕೂಡಿಕೊಂಡು, ಪಟ್ಟಣಕ್ಕೆ ಹೋದನು. ಆ ಬಳಿಕ ಮಹಾರಾಜರು ಆ ಕೋಟೆ ಬಂದೋಬಸ್ತು ಮಾಡಿಸಿಕೊಂಡು ನಾಲ್ಕುನಾಡು ಅರಮನೆಯಲ್ಲು ಇರುತ್ತಿದ್ದರು.

ಇತ್ತಲಾಗಿ ಮೇಜರ್ ಜನರಲ್ ರಾಬರ್ಟು ಅಬ್ರಕರಂಬಿ ಸಾಹೇಬ ಬಹದೂರರವರು ಪವುಜು ಸಮೇತ ಬಂದು, ಹೆಗ್ಗಳದ ಗಟ್ಟದ ಮೈದಾನದಲ್ಲಿ ಇಳಕೊಂಡು—"ನಾವು ನಮ್ಮ ದಂಡು ಸಮೇತ ನಿಮ್ಮ ಕೊಡಗಿನ ಸೀಮೆಗೆ ಬಂದು ಇಳಿದು ಇದ್ದೇವೆ. ತಮ್ಮ ಭೇಟಿ ಆಗಬೇಕೆಂಬ ಅಪೇಕ್ಷೆ ಇದೆ"— ಎಂದು ಕಾಗದ ಬರೆದು ಕಳುಹಿಸಿದ್ದರಿಂದ, ಮಹಾರಾಜರು ಅರಮನೆಯಿಂದ ಹೊರಟು ಆ ದಂಡಿಗೆ ಹೋಗಿ ಆ ಜನರಲ್ ಸಾಹೇಬರ ಮುಲಾಕತ್ ಆಗಿ, ಅತಿ ಸಂತೋಷಪಟ್ಟು, ದಂಡಿಗೆ ಬೇಕಾದ ಸಾಮಾನು ತಮ್ಮಲ್ಲಿ ಕೂಡಿಸಿ ಇಟ್ಟಂತಾದ್ದನ್ನು ಕೊಡಿಸಿ, ಮತ್ತು ಸಾಮಾನು ಸರಂಜಾಮು ಟೀಪೂ ಸುಲ್ತಾನರ ಸೀಮೆಯಿಂದ ತರಿಸಿ ದಂಡಿಗೆ ಕೊಡಿಸುತ್ತ ಇದ್ದರು. ಹೀಗೆ ಇರುವಾಗ್ಗೆ, ಮದರಾಶಿನಿಂದ ಜನರಲ್ ಮೇಡಸ್ ಸಾಹೇಬರವರು ಪವುಜು ಸಮೇತ ಶ್ರೀರಂಗಪಟ್ಟಣದ ಕೋಟೆ ತೆಗೆದುಕೊಳ್ಳಬೇಕೆಂಬದಾಗಿ ಹೊರಟು, ದಿಂಡುಕಲ್ಲು

= ಬ ನಮ್ಮ ಕುಟುಂಬ ಮಕ್ಕಳು ಯಾವತ್ತು ಖರ್ಚಿಗೆ ಇಲ್ಲದೆ, ಹೈರಾಣು ಆಗುತ್ತದೆ. ತಮ್ಮ ಸನ್ನಿಧಾನದಿಂದ

ಮಾರ್ಗವಾಗಿ ಬಂದು, ಕೊಯಮುತ್ತೂರಲ್ಲು ಇಳಕೊಂಡರು. ಈ ಸಮಾಚಾರ ಟೀಪೂಸುಲ್ತಾನರು ಕೇಳಿ ತಮ್ಮ ದಂಡು ತೆಗೆದುಕೊಂಡು, ಪಟ್ಟಣದಿಂದ ಹೊರಟು ಸತ್ಯಮಂಗಲಕ್ಕೆ ಬಂದು, ಮೇಂಡಸ್ ಸಾಹೇಬರ ಸಂಗಡ ಲಡಾಯಿವಾದಲ್ಲಿ, ಅದೇ ಲಡಾಯಿದಲ್ಲಿ ಟೀಪೂಸುಲ್ತಾನರ ಭಾವಮೈದನನಾದ ಬುರಾನುದ್ದೀನರು ಬಿದ್ದುಹೋದರು. ಕಡೆಗೆ ಟೀಪೂಸುಲ್ತಾನರ ದಂಡು ಇಂಗ್ರೇಜಿ ಬಾಹದರವರ ಪವುಜಿನ ಸಂಗಡ ಮುಖ ಸಂಧಿಸಿ ಜಗಳ ಮಾಡಲಾರದೆ ಮುಂದೆ ಗಿಡ ಗುಡ್ಡೆ ಆಶ್ರಯಃ ಹಿಡಿದು = [ಇಂತಾ] ಅಯೋಗ್ಯದ ಹರಕತ್ತು ಮಾಡುವದಕ್ಕೆ ಪ್ರಾರಂಭಿಸಿದರು.

ಅಷ್ಟರಲ್ಲಿ ಬಂಗಾಳದ ಲಾರ್ಡು ಕಾರ್ನವಾಲಿಸ್ ಸಾಹೇಬ ಬಹದ್ದರವರು ಭಾರಿ ಪವುಜು ಸಮೇತ ಮದರಾಸಿನ ಕಡೆಗೆ ಬಂದು ಇಳಿದರು. [ಈಗ ಬರು] ± ವಂತ ಧಂಡಿನ ಸಮಾಚಾರ ಟೀಪೂಸುಲ್ತಾನರು ಕೇಳಿ, ಕೃಷ್ಣಗಿರಿ ಗಟ್ಟ ಇಳಿದು, ಆರ್ಕಾಟು ಸೀಮೆಗೆ ಹೋದರು. ಅವರ ಬೆನ್ನು ಹಿಂದೆ ಜನರಲ್ ಮೇಂಡಸ್ ಸಾಹೇಬರು ಪವುಜು ಸಮೇತ ಇದೇ ಗಟ್ಟ ಇಳಿದು, ಬಂಗಾಳದ ಲಾರ್ಡು ಕಾರ್ನವಾಲಿಸ್ ಸಾಹೇಬರ ಪವುಜಿನ ಸಂಗಡ ಕೂಡಿ, ಒಟ್ಟಾಗಿ ಗಟ್ಟ ಹತ್ತಿ ಬಂದು, ಬೆಂಗಳೂರು ಮೊಕ್ಕಾಮಿನಲ್ಲಿ ಇಳಕೊಂಡರು. ಟೀಪೂಸುಲ್ತಾನರು ತಮ್ಮ ಪವುಜು ಸಮೇತ ಬಂದು ಅದೇ ಬೆಂಗಳೂರಲ್ಲಿ ಒಂದು ಕಡೆ ಇಳಕೊಂಡರು. ಆ ಬಳಿಕ ಇಂಗ್ರೇಜಿ ಬಹದ್ದರವರ ಪವುಜು ಮೂರ್ಚೆ ಹಾಕಿ ಫಿರಂಗಿ ಏರಿಸಿ, ಆ ಬೆಂಗಳೂರು ಕೋಟೆಯನ್ನು ಫಿರಂಗಿ ಗುಂಡಿನಿಂದ ಕೆಡವಿ, ಏಳು ದಿವಸದಲ್ಲಿ ಹಲ್ಲಾ ಹತ್ತಿ, ಆ ಕೋಟೆಯನ್ನು ತಮ್ಮ ಕೈವಶಮಾಡಿಕೊಂಡರು. ಟೀಪೂಸುಲ್ತಾನರು ಎಲ್ಲಾ ಬಗೆಯಲ್ಲೂ ಲಾಚಾರಿಯಾಗಿ, ಮತ್ತು ಬೊಂಬಾಯಿ ಲಷ್ಕರ್ ಕೊಡಗಿನ ಮಾರ್ಗನಾಗಿ ಬರುವದ(ನ್ನು) ಕೇಳಿ, ತಮ್ಮ ಪವುಜು ತೆಗೆದುಕೊಂಡು ಇಂಗ್ರೇಜಿ ಪವುಜು ಬರುವದಕ್ಕಿಂತ ಮುಂದಾಗಿ ಶ್ರೀರಂಗಪಟ್ಟಣಕ್ಕೆ ಬಂದು, ಪಿರಿಯಾಪಟ್ಟಣಕ್ಕೆ ತಮ್ಮ ಕಡೆ ಒಬ್ಬ ಸರದಾರನ (ನ್ನು) ಕೆಲವು ಪವುಜು ಸಹ ಕಳುಹಿಸಿ, ಅದರ ಒಳಗೆ ಇರುವಂಥ ಜನವನ್ನು ಹೊರಡಿಸಿ,

---

= ಬ ಇಂಗ್ರೇಜಿ ಬಹದ್ದೂರವರ ಫವುಜಿಗೆ ರಸದು ಬರುವಂಥಾ ಮಾರ್ಗಗಳ ಕಟ್ಟಿ ಇಂತಾ

± ಬ ಈ ಗಾಬರಿ ಆಗು

# ಶಿವಾನುಭವ.

## ದ್ವೈಮಾಸಿಕವು.




ಸಂಪಾದಕ

ರಾ|| ಸಾ|| ಫ. ಗು. ಹಳಕಟ್ಟಿ

ಬಿ. ಎ. ಎಲ್. ಎಲ್. ಬಿ.



ವಿಜಾಪುರ

ಸಂಪುಟ ೭ ಸಂಚಿಕೆ ೬

ಫೇಬ್ರುವರಿ

೧೯೩೩

ವಾ. ವರ್ಗಣಿ ೪-೪-೦ ] [ ಬಿಡಿಸಂಚಿಕೆ ೦-೧೨ ೦

# ವಿಷಯಾನುಕ್ರಮಣಿಕೆ-




ಇದನ್ನು ವಿಜಾಪುರದಲ್ಲಿ ಇದರ ಸಂಪಾದಕರಾದ ರಾ|| ಸಾ|| ಫ. ಗು. ಹಳಕಟ್ಟಿ ಇವರು ತಮ್ಮ ಹಿತಚಿಂತಕ ಪ್ರಿಂಟಿಂಗ ಪ್ರೆಸ್ಸಿನಲ್ಲಿ ಮುದ್ರಿಸಿದರು. ಮತ್ತು ಅವರು ವಿಜಾಪುರದಲ್ಲಿ ಉಪಲೀಬುರುಜದ ಹತ್ತರ ತಮ್ಮ ೧೬೨೦ (ಅ) ಮನೆಯಲ್ಲಿ ಪ್ರಕಟಿಸಿದರು.

# ಶಿವಾನುಭವ.

ವರ್ಷ ೭] ಫೇಬ್ರುವರಿ. ೧೯೩೩ [ಸಂಚಿಕೆ ೬

## ಕುರುಂಬೆಟ್ಟದ ಶಿಲಾಶಾಸನವು. †

(ಲೇಖಕ:—ಡಾ॥ ಎಸ್. ಸಿ. ನಂದಿಮಠ ಎಮ್. ಎ. ಪಿ. ಎಚ್. ಡಿ. ಬೆಳಗಾವ)

ಕುರುಂಬೆಟ್ಟವೆಂಬುದು ಗೋಕಾಕ ತಾಲೂಕದಲ್ಲಿಯ ಊರುಗಳಲ್ಲಿ ಬಲುಮಟ್ಟಿಗೆ ದೊಡ್ಡದು. ಇದು ಗೋಕಾಕದಿಂದ ಆಗ್ನೇಯ ದಿಕ್ಕಿಗೆ ಸುಮಾರು ೮ ಮೈಲು ಅಂತರದ ಮೇಲಿದೆ. ಜನಸಂಖ್ಯೆಯು ಸುಮಾರು ಐದಾರು ಸಾವಿರದ ವರೆಗಿದೆ. ಈ ಊರ ಪ್ರಾಚೀನ ಹೆಸರು ಕುರುಂಬೆಟ್ಟವೆಂಬುದು ಈ ಶಿಲಾಶಾಸನದಿಂದ ಸ್ಪಷ್ಟವಾಗುವದು. ಈಗಲೂ ಕೂಡ ಈ ಊರಿಗೆ ಕುರುಬೆಟ್ಟವೆಂದೇ ಕರೆಯುವದುಂಟು. ಗೋಕಾಕದ ಸಮೀ

† ಈ ಶಿಲಾಶಾಸನವನ್ನು ನಾನು ವಿಲಾಯತಿಗೆ ಹೋಗುವದಕ್ಕಿಂತ ಮೊದಲು ಓದಿ
ಪ್ರಸಿದ್ಧಿಸಲು ಸಿದ್ಧ ಮಾಡಿಕೊಂಡಿಟ್ಟಿದ್ದೆನು. ಆವದಾದರೊಂದು ಆಂಗ್ಲ ಪತ್ರಿಕೆಯಲ್ಲಿ
ಪ್ರಸಿದ್ಧಿಸಬೇಕೆಂದು ಆಶಿಸಿದ್ದೆನು. ಇಂಗ್ಲಡಕ್ಕೆ ಹೋದ ಕೂಡಲೇ ಅಲ್ಲಿಯ ಪ್ರಸಿದ್ಧ
ವಿದ್ವಾಂಸರಾದ ಡಾ| ಬಾರ್ನೆಟ್ಟರವರಿಗೆ ತೋರಿಸಿದೆನು. ಅವರು ಇದನ್ನು ನೋಡಿ ತಮ್ಮ
ಕೋಣೆಯೊಳಗೆ ಹೋಗಿ ಒಂದು ಎಪಿಗ್ರಾಫಿಕಾ ಇಂಡಿಕಾ ಜಾನೇವರಿ ೧೯೨೮ ರ ಸಂಚಿ
ಕೆಯನ್ನು ನನ್ನ ಕೈಯಲ್ಲಿ ಕೊಟ್ಟರು. ಅವನ್ನು ತೆಗೆದು ನೋಡಲು ಅದರಲ್ಲಿ ಈ ಶಿಲಾಶಾ
ಸನದ ಬಗ್ಗೆ ಲೇಖವು ಡಾ| ಬಾರ್ನೆಟ್ಟರವರಿಂದಲೇ ಪ್ರಸಿದ್ಧಿಸಲ್ಪಟ್ಟಿತ್ತು. ಅವರು ಅದನ್ನು
ಡಾ| ಫ್ಲೀಟರವರ ಮುದ್ರಣದಿಂದ ತಯಾರಿಸಿದ್ದರು. ಆದುದರಿಂದ ಇದನ್ನು ಪ್ರಸಿದ್ಧಿಸು
ವದು ಅಷ್ಟಕ್ಕೇ ನಿಂತಿತು. ಈಗ ಕನ್ನಡಿಗರನೇಕರಿಗೆ ಇದರ ಮಹತ್ವವು ಗೊತ್ತಾಗಲೆಂದೂ
ಇವರಲ್ಲಿ ಧಾರ್ಮಿಕ ಸಾಮಾಜಿಕ ಐತಿಹಾಸಿಕ ವಿಷಯಗಳಿರುವದರಿಂದಲೂ ಇವನ್ನು ಶಿವಾ
ನುಭವದಲ್ಲಿ ಮುದ್ರಿಸಲಾಯಿತು. ಶಿಲಾಶಾಸನದ ಮೂಲವನ್ನು ಅನೇಕ ಕಡೆಗೆ ಡಾ|
ಬಾರ್ನೆಟ್ಟರವರ ಮೂಲದಿಂದ ತಿದ್ದಲಾಗಿದೆ. ಡಾ| ಫ್ಲೀಟರವರು ಮುದ್ರಣ ತೆಗೆದು
ಕೊಂಡಾಗಿನಕ್ಕಿಂತ ಈಗ ಶಾಸನವು ಬಹಳ ಕೆಟ್ಟದೆಯಾದುದರಿಂದ ಡಾ| ಬಾರ್ನೆಟ್ಟರವರ
ಮೂಲವು ಬಹಳ ಉಪಯೋಗಕ್ಕೆ ಬಿದ್ದಿತು. ಆದುದರಿಂದ ಇವರಿಗೆ ಋಣಿಯಾಗಿರುವೆನು.

ಪದಲ್ಲಿ ಕುರುಬೆಟ್ಟವೆಂಬ ಹೆಸರಿನ ಮತ್ತೊಂದು ಊರಿರುವುದರಿಂದ ಇವೆರಡನ್ನು ವಿಂಗಡಿಸುವುದಕ್ಕಾಗಿ ಊರ ಸವಿೀಪದಲ್ಲಿ ಸಿಂದೀ ಗಿಡಗಳ ಬನಗಳಿರುವುದರಿಂದ ಒಂದಕ್ಕೆ ಸಿಂದೀ ಕುರಬೆಟ್ಟವೆಂದೂ, ಪ್ರಾಚೀನ ಕಾಲದ ಕಲ್ಲುಗಚ್ಚುಗಳಿಂದ ಕಟ್ಟಿದ ಗುಡಿಗಳು ಮತ್ತು ಕಿಲ್ಲೆಯು ಇರುವುದರಿಂದ ಮತ್ತೊಂದಕ್ಕೆ ಗಚ್ಚಿನ ಕುರುಬೆಟ್ಟವೆಂದೂ ವಾಡಿಕೆಯಲ್ಲಿ ಕರೆಯುವದುಂಟು. ಈ ಶಿಲಾಶಾಸನವಿದ್ದ ಊರು ಗಚ್ಚಿನ ಕುರುಬೆಟ್ಟವೆಂಬುದು. ಇತ್ತಿತ್ತಲಾಗಿ ಕೆಲ ಅಕ್ಷರಜ್ಞರು ಈ ಊರಿಗೆ ಮಮುದಾಪುರವೆಂದು ಕರೆಯುಹತ್ತಿರುವರು. ಸರಕಾರಿ ಕಾಗದ ಪತ್ರಗಳಲ್ಲಿ ಇದಕ್ಕೆ ಮಮುದಾಪುರವೆಂದೇ ಈಗ ಉಲ್ಲೇಖವಿರುವುದು. ಅಕ್ಷರಜ್ಞರ ಹೊರತು ಈ ಊರವರಿಗಾಗಲೀ ನೆರೆಹೊರೆಯ ಊರವರಿಗಾಗಲೀ ಮಮುದಾಪುರವೆಂದರೆ ಅರ್ಥವಾಗುವದಿಲ್ಲ. ಇದು ಲೇಖಕನಿಗೆ ಸ್ವತಃ ಅನುಭವಕ್ಕೆ ಬಂದಿದೆ. ಪ್ರಾಚೀನತಮವಾದ ಹೆಸರನ್ನು ಪುನಃ ಪ್ರಚಾರದಲ್ಲಿ ತರುವುದು ಅಕ್ಷರಜ್ಞರಿಗೆ ಭೂಷಣವೆಂಬುದನ್ನು ಹೇಳಬೇಕಾಗಿಲ್ಲ.

ಈ ಊರಲ್ಲಿ ಈಗಲೂ ಉತ್ತಮ ಸ್ಥಿತಿಯಲ್ಲಿರುವ ಕಿಲ್ಲೆಯೂ, ಒಂದು ಪ್ರಾಚೀನ ಗುಡಿಯೂ ಇರುವವು. ಇವಲ್ಲದೆ ಮತ್ತೆ ಒಂದೆರಡು ಹಳೇ ಗುಡಿಗಳ ಅವಶೇಷಗಳಿರುವವು. ಎಲ್ಲ ಗುಡಿಗಳು ಸಣ್ಣಾಗಿ ಹೊಡೆದ ಕಲ್ಲು ಬಂಡೆಗಳಿಂದ ಕಟ್ಟಿದಂಥವು. ಶಿಲ್ಪ ಕಲೆಯು ಅಷ್ಟೇನೂ ಹೇಳತಕ್ಕಂಥದಿಲ್ಲ. ಉತ್ತಮ ಸ್ಥಿತಿಯಲ್ಲಿದ್ದ ಗುಡಿಯನ್ನು ಏಳುಕೋಣೆಯ ಬಸವೇಶ್ವರ ಗುಡಿಯೆಂದು ಕರೆಯುವರು. ಗುಡಿಯ ಆಕೃತಿಯು ಹೊಯ್ಸಳ ಕಾಲದ ಗುಡಿಗಳನ್ನು ಹೋಲುವುದು. ಪಶ್ಚಿಮ ದಿಕ್ಕಿಗೆ ಮುಖವಾಗಿರುವುದು. ಬಾಗಿಲವನ್ನು ಪ್ರವೇಶಿಸಿದ ಕೂಡಲೇ ಬಲಕ್ಕೆ ಗರ್ಭಗುಡಿಗೆ ಎದುರಾಗಿರುವ ಗೋಡೆಯಲ್ಲಿ ಈ ಶಿಲಾಶಾಸನವನ್ನು ಹಾಕಿರುವರು. ಶಿಲಾಶಾಸನದ ಅಳತೆಃ---ಎತ್ತರ ಸುಮಾರು ೪ ಫೂಟು. ಅಗಲು ೨ ಫೂಟು ೮ ಇಂಚುಗಳು. ಅಕ್ಷರಗಳು ಉತ್ತಮ. ಆದರೆ ನೆಲಕ್ಕೆ ಹೊಂದಿ ಶಾಸನವಿರುವುದರಿಂದ ಹುಡುಗರು ಆಟಕ್ಕಾಗಿ ಬಹಳ ಅಕ್ಷರಗಳನ್ನು ಕೆಡಿಸಿರುವರು. ಭಾವಿಕರು ಇದು ದೇವರೆಂದು ತಿಳಿದು ಎಣ್ಣೆ ಮಜ್ಜನ ಮಾಡಿಸಿ ಉಳಿದ ಹಲವಕ್ಷರಗಳನ್ನು ಕೆಡಿಸಿರುವರು ಮೊದಲಿನ ಸಾಲಿನಲ್ಲಿ ಅಕ್ಷರಗಳು ಸುಂದರವೂ ದೊಡ್ಡವೂ ಆಗಿರುವವು. ಅಕ್ಷರಗಳ ಎತ್ತರ ಅರ್ಧ ಇಂಚು. ಬರಬರುತ್ತ ಸಣ್ಣಾಗಿ ಮೂರ ಎಂಟಾಂಶಕ್ಕೆ ಬಂದಿರುವವು. ಕೆಲವು

ಕಡೆಯಲ್ಲಿ ಅಕ್ಷರದ ತುದಿಯು ಮೇಲಿರುವ ಮಣಿತವು ಉಕಾರ ಚಿನ್ಹೆವನ್ನು ತೋರಿಸುವಂತಿದೆ. ಈಗ ಪ್ರಚಾರದಲ್ಲಿರುವ 'ಉ' ಕಾರವು ಆಗ ಅದೇ ಪ್ರಚಾರದಲ್ಲಿ ಬರಹತ್ತಿದಂತೆ ತೋರುವದು. ಉದಾ:— ಕೊಟ್ಟಿರ್ ಅಥವಾ ಕೊಟ್ಟರು. ಆದಿಸೆಟ್ಟಿಯರ್ ಅಥವಾ ಆದಿಸೆಟ್ಟಿಯರು. "ವ" "ಮ" ಅಕ್ಷರಗಳನ್ನು ಪುರಾತನ ಪದ್ಧತಿಯಂತೆ ಬರದಿರುವದರಿಂದ ಎರಡೂ ಪ್ರಕಾರದ ಅಕ್ಷರಗಳು ರೂಢಿಯಲ್ಲಿದ್ದಂತೆ ಕಂಡುಬರುವುದು. ಇವು ಮತ್ತು ಇಂಥ ಉದಾಹರಣೆಗಳು ಹೊಸಗನ್ನಡದ ಕಾಲವನ್ನು ನಿರ್ಣಯಿಸಲು ಒಳ್ಳೇ ಅನುಕೂಲವಾದುವು. ಭಾಷೆಯು ಸಾಲು ೧ ರಿಂದ ೪೬ ರ ವರೆಗೆ ಸಂಸ್ಕೃತ ಪದ್ಯ. ಪದ್ಯಗಳು ಬಹಳ ಉತ್ತಮ "ಸರಳ" ಮತ್ತು ಕಾವ್ಯಮಯವಾಗಿವೆ. ಉಳಿದ ಭಾಗ ಅಂದರೆ ಸಾಲು ೪೭ ರಿಂದ ೬೬ ವರೆಗೆ ಕನ್ನಡ ಗದ್ಯ. "ರ್" ಕಾರದ ಹಿಂದಿನ ವ್ಯಂಜನವು ಬಹುತರ ದ್ವಿತ್ವವಾಗಿದೆ. ಉದಾ ವರ್ತ್ತಮಾನೇ ವಕಾರಕ್ಕೆ ಬದಲಾಗಿ ಬಕಾರ ಬಂದಿದೆ. ಉದಾ:—ಸರ್ಬ್ಬ

ಶಿಲಾಶಾಸನದ ವಿಷಯ:—ಶಿವ ಚಂದ್ರಶೇಖರ [ಪ. ೧] ವರಾಹ ರೂಪೀ ವಿಷ್ಣು [ಪ. ೨] ಶಿವಪಾರ್ವತಿ [ಪ. ೩] ಇವರನ್ನು ಸ್ತುತಿಸಿದ ನಂತರ ಸಮುದ್ರ ಮೇರು ಜಂಭೂದ್ವೀಪ [ಪ. ೪] ಭರತ ವರ್ಷ ಕುಂತಲ ರಾಜ್ಯ ಅದರೊಳಗಿನ ಕೂಂಡಿದೇಶ [ಪ. ೫] ಅದರ ಮೂವತ್ತರೊಳಗಿನ ದೇಶಭಾಷೆಯಲ್ಲಿ ಕುರುಂಬೆಟ್ಟವೆಂದು ಕರೆಯಲ್ಪಡುವ ಪಟ್ಟಣ [ಪ. ೭] ಇವುಗಳನ್ನು ವರ್ಣಿಸಿದ ನಂತರ ಯಾದವ ವಂಶವನ್ನೂ ಅದರ ಮೂಲ ಪುರುಷನಾದ ಭಿಲ್ಲಮ [ಪ. ೮]; ಅವನ ಮಗ ೧ ನೇ ಜೈತುಗಿ, ಅವನ ಮಗ, ಭೋಜ, ಅರ್ಜುನ, ಗುರ್ಜರ, ಮಗಧ, ಚೋಳ, ಗೌಡ, ತುರಗ ಪತಿ ಮೊದಲಾದವರನ್ನು ಗೆದ್ದ [ಪ. ೧೦] ಸಿಂಹಣ [ಪ. ೯]; ಅವನ ಮಗ ೨ ನೇಯ ಜೈತುಗಿ [ಪ. ೧೧]; ಅವನ ಮಗ, ವೈರಿಗಳನ್ನು ಜಯಿಸಿ ವೇದ ಮತ್ತು ವೈದಿಕ ಧರ್ಮಗಳನ್ನು ಪ್ರತಿಷ್ಠಾಪಿಸಿದ [ಪ. ೧೨, ೧೩] ಮತ್ತು ತನ್ನ ತಮ್ಮನೂ ಯುವರಾಜನೂ ಆದ ಮಹಾದೇವನಿಂದೊಡಗೂಡಿದ ಕನ್ನರ, ಇವರೆಲ್ಲರ ವರ್ಣನೆಯಿದೆ [ಪ. ೧೪] ಆ ನಂತರ ಕನ್ನರನ ಬಿರುದಾವಳಿಗಳನ್ನೂ, ಆತನು ಮಾಳವ, ಗುರ್ಜರ, ತೈಲಂಗ ಮೊದಲಾದ ದೇಶಗಳನ್ನು ಗೆದ್ದನೆಂಬುದನ್ನೂ ಮತ್ತು ದೇವಗಿರಿಯಲ್ಲಿ ರಾಜ್ಯವಾಳುತ್ತಿದ್ದನೆಂಬುದನ್ನೂ ಗದ್ಯದಲ್ಲಿ ಉಲ್ಲೇಖಿಸಲಾಗಿದೆ. [ಸಾಲು ೧೮—೨೦]

ಅನಂತರ ಆತನ ಅಧಿಕಾರಿಗಳ ಉಲ್ಲೇಖವಿದೆ. ಆತನ ಪ್ರಧಾನನೂ ಚಿಕ್ಕದೇವನ ಮಗನೂ ಆದ ಬೀಚನು ತನ್ನ ಅರಸನಿಗೋಸುಗ ಆ ಸೇತು ಹಿಮಾಚಲ ಭೂಮಿಯನ್ನು ಗೆದ್ದು ಕನ್ನರನ ರಾಜ್ಯದ ಅರ್ಧ ಭಾಗವನ್ನು ಆಳುತ್ತಿದ್ದನು. ಆತನ ಹಿರೇ ಮಗನು ಮಲ್ಲನು [ಪ. ೧೫,-೧೬] ಮಲ್ಲನ ಮಗನು ಪಾಂಡ್ಯ, ಕೊಂಕಣ, ಕಾವೇರಿಯ ಸುತ್ತುಮುತ್ತಲಿನ ಪ್ರದೇಶ ಗಳನ್ನು ಗೆದ್ದ ಚಾಮುಂಡನು [ಪ. ೧೭, ೧೮] ಚಾಮುಂಡನ ಗುರುವು ವಾಗೀಶ್ವರ. ಹೆಂಡತಿ ಲಕ್ಕಾದೇವಿ (ಪ. ೧೯, ೨೦) ಆತನು ಅನೇಕ ಶಿವ ಪ್ರತಿಮೆಗಳನ್ನು ಸ್ಥಾಪಿಸಿದನು. [ಪ. ೨೧] ಅನಂತರ ಚಾಮುಂಡನ ವರ್ಣನೆಯು ಗದ್ಯದಲ್ಲಿದೆ. [ಸಾಲು ೩೦ ರಿಂದ ೩೮ ವರೆಗೆ] ಈ ವರ್ಣ ನೆಯಲ್ಲಿಯ ಮುಖ್ಯ ವಿಷಯಗಳುಃ—ಚಾಮುಂಡನು ಹೊಯ್ಸಳ ಚಕ್ರವ ರ್ತಿಯಾದ ಸೋಮೇಶ್ವರನ ಗರ್ವವನ್ನು ನಾಶಮಾಡಿದನು. ನೀಲಲಿಂಗ ವನ್ನು ಪ್ರತಿಷ್ಠಾಪಿಸಿದನು. ಕುಂಬಿಟ್ಟದ ತ್ರಿಕೂಟ ಪ್ರಾಸಾದದಲ್ಲಿ ತನ್ನ ತಂದೆಯಾದ ಮಲ್ಲಿನಾಥನ ಮತ್ತು ಬಂಧುವಾದ ಆದಿಸೆಟ್ಟಿಯ ಹೆಸ ರಿನಿಂದ ಎರಡು ಶಿವಲಿಂಗಗಳನ್ನೂ ಒಂದು ಮಾಧವನ ಪ್ರತಿಮೆಯನ್ನೂ ಸ್ಥಾಪಿಸಿ ಆಚಾರ್ಯರಾದ ವಿಮಲ ಶಿವದೇಶಿಕರ ವಶಕ್ಕೆ ಕೊಟ್ಟನು. ನಂತರ ವಿಮಲ ಶಿವನ ವಂಶಾವಳಿ [ಪ. ೨೩ ರಿಂದ ೨೭] ಅದು ಹೀಗಿದೆ. ಕೈಲಾಸ ನಿವಾಸಿಯಾದ ಪಶುಪತಿಯ ಶಿಷ್ಯನಾದ ದುರ್ವಾಸನಿಂದ ಭೂಮಿ ಯಲ್ಲಿ ಅವತರಿಸಿದ ಲಕ್ಷಾಧ್ಯಾನ [ಯ?] ವೆಂದು ಪ್ರಸಿದ್ಧವಾದ ವಂಶದಲ್ಲಿ ಅವತರಿಸಿದವನು ಶೈವಾನ್ವಯ ದೇಶಿಕನಾದ ವಿಮಳನು. ಆತನ ಸಂತಾ ನಸರೋಜ ಭಾಸ್ಕರನು ತ್ರ್ಯಂಬ ಕೇಶನು (ಪ. ೨೩) ಆತನಿಂದ ಶಿವಭೋ ಧಕ ಚಕ್ರವರ್ತಿಯೂ, ಕ್ಷ್ಮಾಚಕ್ರವರ್ತಿ ಮುಕುಟಾರ್ಚಿತ ಪಾದಪದ್ಮನೂ ತ್ರೈವಾಗಮಾಂಬುನಿಧಿಗೆ ಚಂದ್ರನೂ ಆದ ಭೂಶಂಕರನಾದನು. (ಪ. ೨೪) ಆತನ ಶಿಷ್ಯನು ವಿಮಳಶಿವನು (ಪ. ೨೫) ಆತನ ವರ್ಣನೆ (ಪ. ೨೬-೨೭ ಗದ್ಯ ಸಾಲು ೪೩ ರಿಂದ ೪೫) ವಿಮಳ ಶಿವನಿಗೆ ದಾನಕೊಟ್ಟ ಉಲ್ಲೇಖ (ಪ. ೨೮) ಅನಂತರ ಮಠಕ್ಕೆ ಬಿಟ್ಟದತ್ತಿಗಳ ಉಲ್ಲೇಖ (ಸಾಲು ೪೭ರಿಂದ ೬೬ ರ ವರೆಗೆ.)

ಶಿಲಾಶಾಸನದಕಾಲಃ—ಈ ಶಿಲಾಶಾಸನದಲ್ಲಿ ಎರಡು ಸಾರೆ ವರ್ಷಗಳನ್ನು ಬರೆದಿರುವರು. ಸಾಲು ೩೫-೩೬ ರಲ್ಲಿ ಶಕೆ ೧೧೭೨ ಸಾಧಾ ರಣ ಸಂವತ್ಸರ ವೈಶಾಖ ಕೃ. ೩ ಶನಿವಾರ ಇದು ಸರಿಯದೆ ಇದಕ್ಕೆ

ಸರಿಯಾದ ಇಂಗ್ಲಿಷ ಕಾಲವು ಇಸ್ವಿ ೧೨೫೦ ಎಪ್ರಿಲ ೨೨ ನೇ ತಾರೀಖು ಶುಕ್ರವಾರ. ಸಾಲು ೪೭ ರಲ್ಲಿ ಶಕೆ ೧೧೬೭ ವಿಶ್ವಾವಸು ಸಂವತ್ಸರ ಪುಷ್ಯ ಬಹುಳ ಲ ಸೋಮವಾರ ಉತ್ತರಾಯಣ ಸಂಕ್ರಾಂತಿ. ಇದು ಸರಿಹೋಗುವದಿಲ್ಲವೆಂದು ಡಾ. ಬಾರ್ನೆಟ್ಟರವರನ್ನುವರು ಇದಕ್ಕೆ ಸರಿಯಾದ ಇಸ್ವಿ ೧೨೪೫ ಡಿಸೆಂಬರ ೨೫ ನೇ ತಾರೀಖು ಸೋಮವಾರ.

ಶಿಲಾಶಾಸನದ ಮಹತ್ವವುಃ— ಈ ಶಿಲಾಶಾಸನವು ಹದಿಮೂರನೇಯ ಶತಮಾನದ ಉತ್ತರಕರ್ನಾಟಕದಲ್ಲಿಯ (೧) ಐತಿಹಾಸಿಕ (೨) ಧಾರ್ಮಿಕ ಮತ್ತು (೩) ಸಾಮಾಜಿಕ ಪರಿಸ್ಥಿತಿಗಳ ಮೇಲೆ ಒಳ್ಳೇ ಬೆಳಕನ್ನು ಕೆಡಹುವದು. ಆದುದರಿಂದಲೇ ಇದರ ಮಹತ್ವವು ಬಹಳವಾಗಿರುವದೆಂದು ಧಾರಾಳವಾಗಿ ಹೇಳಬಹುದು.

೧. ಕಲಚೂರ್ಯರ ರಾಜ್ಯವು ನಿಂತಮೇಲೆ ಉತ್ತರದಿಂದ **ದೇವ**ಗಿರಿಯ ಯಾದವರೂ ದಕ್ಷಿಣದಿಂದ ದ್ವಾರಸಮುದ್ರದ ಬಲ್ಲಾಳರೂ ಚಲುಕ್ಯರ ರಾಜ್ಯವನ್ನು ಆಕ್ರಮಿಸಹತ್ತಿದರು. ದೇವಗಿರಿಯ ಯಾದವರ ಸತ್ತೆಯು ಸಿಂಘಣ (ಕ್ರಿ. ಶ. ೧೨೧೦-೧೨೪೭) ನ ಕಾಲದಲ್ಲಿ ಪರಮಾವಧಿಯನ್ನು ಮುಟ್ಟಿ ಬರಬರುತ್ತ ಇಳಿಯಹತ್ತಿ ರಾಮಚಂದ್ರ (ಕ್ರಿ. ಶ. ೧೨೭೧-೧೩೦೯-೧೦) ನ ಕಾಲದಲ್ಲಿ ಮುಸಲ್ಮಾನರ ತುತ್ತಾಯಿತು. ಈ ಶಾಸನದ ಕಾಲಕ್ಕೆ ಸಿಂಘಣನ ಮೊಮ್ಮಗನಾದ ಕೃಷ್ಣ, ಕಂಧರ, ಕನ್ಹರ (ಕ್ರಿ. ಶ. ೧೨೪೭-೧೨೬೦) ನೆಂಬವನು ಸಿಂಹಾಸನದ ಮೇಲಿದ್ದನು. ಈ ಕಾಲದಲ್ಲಿ ಬಹುತರ ಉತ್ತರಕರ್ನಾಟಕದ ಎಲ್ಲ ಭಾಗವು ಅಂದರೆ ಈಗಿನ ಬೆಳಗಾವಿ, ವಿಜಾಪೂರ, ಧಾರವಾಡ ಮತ್ತು ಮೈಸೂರ ನಿಜಾಮ ಸಂಸ್ಥಾನಗಳ ಕೆಲವು ಭಾಗವು ಯಾದವರ ವಶದಲ್ಲಿತ್ತು. ಈ ಎಲ್ಲ ಭಾಗವನ್ನು ಕನ್ಹರನ ಹೆಸರಿನಿಂದ ಆತನ ಮಹಾಮಾತ್ಯನಾದ ಚಾವುಂಡರಾಯ ಅಥವಾ ಚೌಡಿಸೆಟ್ಟಿಯೆಂಬವನು ಆಳುತ್ತಿದ್ದನು. ಈ ಶಾಸನದಲ್ಲಿ ಈತನು ಕನ್ಹರನಿಗಾಗಿ ಪಾಂಡ್ಯ, ಕೊಂಕಣ, ಕಾವೇರಿಯ ಸುತ್ತುಮುತ್ತಲಿನ ಪ್ರದೇಶಗಳನ್ನು ಗೆದ್ದು, ಹೊಯ್ಸಳ ಸೋಮೇಶ್ವರನನ್ನು ಸೋಲಿಸಿ ಕನ್ಹರನ ರಾಜ್ಯದ ಬಹುಭಾಗವನ್ನು ಆಳುತ್ತಿದ್ದನು. ಕನ್ಹರನ ರಾಜ್ಯದ ದಕ್ಷಿಣಭಾಗವನ್ನೆಲ್ಲ ಈತನೇ ಅರಸನಂತೆ ಆಳುತ್ತಿದ್ದನೆಂದು ಊಹಿಸಬಹುದು. ಕ್ರಿ. ಶ. ೧೨೬೦ ರ ಸುಮಾರಕ್ಕೆ ಹುಟ್ಟಿದ ಅರ್ಜುನವಾಡದ ಶಿಲಾಶಾಸನದಲ್ಲಿ ನಾಗರಸನೂ ಚೌಡಿಸೆಟ್ಟಿಯೂ ರಾಜ್ಯಭಾರವನ್ನು ಮಾಡು

ತ್ತಿದ್ದಂತೆ ಉಲ್ಲೇಖವಿದೆ. ಚೌಡಸೆಟ್ಟಿಯು ಒಳ್ಳೇ ಧಾರ್ಮಿಕ ಬುದ್ಧಿಯವನಿದ್ದಂತೆ ತೋರುವುದು. ಈತನ ಶಿಲಾಶಾಸನಗಳು ವಿಪುಲವಾಗಿ ದೂರೆಯುವವು. ಈತನು ಒಳ್ಳೇ ನಿಷ್ಠಾವಂತನಾದ ಶೈವನಿದ್ದನೆಂಬುದು ೨೮ ನೇ ಸಾಲಿನಲ್ಲಿರುವ "ಶಿವಾಂಘ್ರಿದ್ವಯಾಂಭೋಜಪೂಜಃ" ಎಂಬುವುದರಿಂದ ವ್ಯಕ್ತವಾಗುವುದು. ೨ ನೇ ಸಾಲಿನಲ್ಲಿರುವ "ಶ್ರೀ ಸೋಮನಾಥಃ ಸ್ವಕುಲಾಧಿದೇವಶ್ಚಾಮುಂಡದಂಡಾಧಿಪತಿಸ್ಸಧನ್ಯಃ" ಎಂಬುವುದರಿಂದ ಈತನ ಕುಲದೈವವು ಸೋಮನಾಥನೆಂಬುದು. ಅರ್ಜುನವಾಡದ ಶಿಲಾಶಾಸನದಿಂದ ಈತನು ಪುಲಿಗೆರೆಯಲ್ಲಿದ್ದಂತೆ ತಿಳಿಯುವುದರಿಂದ ಈ ಸೋಮನಾಥನು ಪುಲಿಗೆರೆಯ ಸೋಮೇಶ್ವರನೇ ಇರಬೇಕು. ಚೌಡಿಸೆಟ್ಟಿಯ ತಂದೆಯಾದ ಮಲ್ಲಿಸೆಟ್ಟಿಯು ಸೋಮೇಶ್ವರ ದೇವರಿಗೆ ಬೆಳಗಾವಿಯ ಹತ್ತಿರುವ ಹಿರೇಬಾಗೆವಾಡಿಯನ್ನೂ, ತಾಂಬ್ರಪುರಿ (ಸಾಂಬರಗಿ?) ಯನ್ನು ದತ್ತಿಯಾಗಿ ಕೊಟ್ಟಂತೆ ಶಿಲಾಶಾಸನಗಳಲ್ಲಿ ಉಲ್ಲೇಖವಿದೆ. ಚೌಡಿಸೆಟ್ಟಿಯ ಗುರುವು ವಾಗೀಶ್ವರನು. ಈತನು ಶಿವಾಗಮಜ್ಞಾನನಿಪುಣನು. ಚೌಡಿಸೆಟ್ಟಿಯ ವಂಶಾವಳಿಯು ಹೀಗದೆ.




೨. ಕರ್ನಾಟಕದ ಮುಖ್ಯ ಧರ್ಮಗಳಲ್ಲೊಂದಾದ ಶೈವಧರ್ಮದ ಇತಿಹಾಸದ ಬಗ್ಗೆ ಈ ಶಿಲಾಶಾಸನದಿಂದ ಒಂದು ಅತಿ ಮಹತ್ವದ ಸಂಗತಿಯು ತಿಳಿಯುವದು. ಆದುದರಿಂದಲೇ ಈ ಶಾಸನವನ್ನು ಎಲ್ಲರ ದೃಷ್ಟಿಗೆ ತರುವುದು ಅವಶ್ಯಕವೆನ್ನಿಸಿತು. ಕರ್ಣಾಟಕದ ಇತಿಹಾಸಜ್ಞರಿಗೂ ಶಾಸನಾನ್ವೇಷಿಗಳಿಗೂ ಇಲ್ಲಿ ಕಾಳಾಮುಖ ಮತ್ತು ಪಾಶುಪತಗಳೆಂಬ ಮುಖ್ಯ ಶೈವಪಂಥಗಳು ಮನೆಮಾಡಿಕೊಂಡಿದ್ದುವೆಂಬುದು

ತಿಳಿದ ಸಂಗತಿಯೇ! ಆದರೆ ಈ ಶಿಲಾಶಾಸನದಿಂದ ನಮಗೆ ಶೈವಪಂಥಗಳಲ್ಲಿ ಅತಿ ಮಹತ್ವವಾದ ಮತ್ತೊಂದು ಪಂಥವು ಸುಮಾರು ೧೨ ಮತ್ತು ೧೩ ನೇ ಶತಮಾನಗಳಲ್ಲಿ ಇಲ್ಲಿ ನೆಲಸಿತ್ತೆಂದು ಸ್ಪಷ್ಟವಾಗುವುದು. ಅದಾವುದೆಂದರೆ ಕಾಶ್ಮೀರ ಶೈವಪಂಥವು. ಈ ಶಾಸನದಲ್ಲಿ ಸಾಲು ೩೮ ರಿಂದ ೪೩ ರ ವರೆಗೆ ಹೇಳಿದ ವಿಮಳಶಿವನ ವಂಶಾವಳಿಯನ್ನು ಕಾಶ್ಮೀರ ಶೈವಪಂಥದ ಅಂಗವಾದ ಪ್ರತ್ಯಭಿಜ್ಞಾಶಾಸ್ತ್ರದ ಉತ್ಪಾದಕನಾದ ಸಿದ್ಧ ಸೋಮಾನಂದನು ತನ್ನ ಶಿವದೃಷ್ಟಿವೃತ್ತಿಯಲ್ಲಿ ಹೇಳಿದ ಆತನ ವಂಶಾವಳಿಗೆ ಸರಿಹೋಲಿಸಿ ನೋಡಬಹುದು. ಅದು ಹೀಗದೆ:—

ಶೈವಾದೀನಿ ರಹಸ್ಯಾನಿ ಪೂರ್ವಮಾಸನ್ಮಹಾತ್ಮನಾಮ್ ।
ಋಷೀಣಾಂ ವಕ್ತ್ರಕುಹರೇ ತೇಷ್ವೇವಾನುಗ್ರಹ ಕ್ರಿಯಾ ॥
ಕಲಾಪ್ರವೃತ್ತೇ ಯಾತೇಷು ತೇಷು ದುರ್ಗಮಗೋಚರಮ್ ।
ಕಲೌಪಿ ಗ್ರಾಮಪ್ರಮುಖಚ್ಛಿನ್ನೇ ಶಿವಶಾಸನೇ ॥
ಕೈಲಾಸಾದ್ರೌಭ್ರಮನ್ ದೇವೋ ಮೂರ್ತ್ಯಾಶ್ರೀಕಂಠರೂಪಯಾ ।
ಅನುಗ್ರಹಾಯಾವತೀರ್ಣಶ್ಚೋದಯಾಮಾಸ ಭೂತಲೇ ॥
ಮುನಿಂ ದುರ್ವಾಸಸಂ ನಾಮ ಭಗವಾನೂರ್ಧ್ವರೇತಸಂ ।
ನೋಚ್ಛಿದ್ಯತೇಯಥಾ ಶಾಸ್ತ್ರಂ ರಹಸ್ಯಂ ಕುರು ತಾದೃಶಮ್ ॥
ತತಃ ಸ ಭಗವಾನ್ ದೇವಾದೇಶಂ ಪ್ರಾಪ್ಯ ಯತ್ನವಾನ್ ।
ಸಸರ್ಜ ಮಾನಸಂ ಪುತ್ರಂ ತ್ರ್ಯಂಬಕಾದಿತ್ಯನಾಮಕಂ ॥
ತಸ್ಮಿನ್ ಸಂಕ್ರಾಮಯಾಮಾಸ ರಹಸ್ಯಾನಿ ಸಮಂತತಃ ।
ಸೋಪಿ ಗತ್ವಾಗುಹಾಂ ಸಮ್ಯಕ್ ತ್ರ್ಯಂಬಕಾಖ್ಯಾಸ್ತತಃ ಪರಮ್ ॥
ಜ್ಞಾನಮಭ್ಯಾಸಕಾಷ್ಠಾಂ ತನ್ನೀತವಾನ್ ಸ ಗುಹಾಂತರೇ ।
ತನ್ನಾಮ್ನಾ ಚಿಹ್ನಿತಾ ಸಾಪಿ ಗುಹಾ ಖ್ಯಾತಾತ್ರ ಭೂತಲೇ ॥
ಸತತ್ರಜ್ಞಾನ ಸಂಸಿದ್ಧ್ಯಾ ಸಸರ್ಜ ಮನಸಾ ಸುತಮ್ ।
ಖಸ್ಯೋತ್ಪತನ ಸಂಸಿದ್ಧಸ್ತತ್ಪುತ್ರೋಪಿ ಯಥಾತಥಾ ॥
ಸಿದ್ಧಸ್ತದ್ವತ್ಸುತೋತ್ಪತ್ತ್ಯಾ ಸಿದ್ಧಾಏವ ಚತುರ್ದಶ ।
ಯಾವತ್ಪಂ ಚದಶಃ ಪುತ್ರಃ ಸರ್ವಶಾಸ್ತ್ರವಿಶಾರದಃ ॥
ಸಕದಾಚಿದ್ರಾಗವಶಾತ್ ಕುತಶ್ಚಿದ್ಬ್ರಾಹ್ಮಣಾತ್ಸ್ವಯಂ
ಬ್ರಾಹ್ಮಣೀಮಾನಯಾಮಾಸ ತತೋಜಾತಸ್ತಥಾವಿಧಃ ॥
ತನಯಃ ಸ ಚ ಕಾಲೇನ ಕಸ್ಮೀರೇಷ್ವಾಗತೋ ಭ್ರಮನ್ ।

ನಾಮ್ನಾ ಸ ಸಂಗಮಾದಿತ್ಯೋ ವರ್ಷಾದಿತ್ಯಸ್ತು ತತ್ಸುತಃ ॥
ತಸ್ಯಾಪ್ಯ ಭೂತ್ಸಭಗವಾನ್ ಅರುಣಾದಿತ್ಯ ಸಂಜ್ಞಕಃ
ಆನಂದ ಸಂಜ್ಞಕಸ್ತಸ್ಮಾತ್ಸು ಬಭೂವ ತಥಾವಿಧಃ ॥
ತಸ್ಮಾದಸ್ಮಿ ಸಮುದ್ಭೂತಃ ಸೋಮಾನಂದಾಖ್ಯ ಈದೃಶಃ ।

ಸಾರಾಂಶಃ— ಮೊದಲು ಶೈವ ಮೊದಲಾದ ಶಾಸ್ತ್ರಗಳು ಋಷಿಗಳ ಮುಖಗಳಲ್ಲಿ ಇದ್ದುವು. ಕಲಿಯುಗವು ಪ್ರಾಪ್ತವಾದ ನಂತರ ಅವು ದುರ್ಗಮವಾಗಹತ್ತಿದುವು. ಆದುದರಿಂದ ಶಿವಶಾಸನವು ಛಿನ್ನವಾಯಿತು. ಕೈಲಾಸಗಿರಿಯಲ್ಲಿ ಶ್ರೀಕಂಠರೂಪದಿಂದ ಸಂಚರಿಸುವ ಶಿವನು ಅನುಗ್ರಹ ಮಾಡಬೇಕೆಂದುದ್ದೇಶಿಸಿ ಊರ್ಧ್ವರೇತಸ್ಸುಳ್ಳ ಭಗವಾನ್ ದುರ್ವಾಸನನ್ನು ಭೂಮಿಗೆ ಕಳುಹಿಸಿ ಶಾಸ್ತ್ರೋದ್ಧಾರ ಮಾಡಬೇಕೆಂದು ಆಜ್ಞಾಪಿಸಿದನು. ಅನಂತರ ಭಗವಾನ್ ದುರ್ವಾಸನು ಭಗವಂತನ ಆಜ್ಞೆಯಿಂದ ತ್ರ್ಯಂಬಕನೆಂಬ ಮಾನಸ ಪುತ್ರನನ್ನು ನಿರ್ಮಿಸಿ ಆತನಿಗೆ ಸರ್ವ ಶೈವ ಶಾಸ್ತ್ರಗಳನ್ನು ಉಪದೇಶಿಸಿದನು. ಆತನು ತ್ರ್ಯಂಬಕವೆಂಬ ಹೆಸರಿನ ಗುಹೆಯೊಳಗೆ ಸರ್ವ ಶಾಸ್ತ್ರಗಳನ್ನು ಸಿದ್ಧಿಸಿಕೊಂಡನು. ಆತನು ತಪಸ್ಸು ಮಾಡಿದ ಗುಹೆಗೆ ಈಗಲೂ ತ್ರ್ಯಂಬಕ ಗುಹೆಯೆಂದು ಕರೆಯುವರು. ತ್ರ್ಯಂಬಕನೂ ಮಾನಸ ಪುತ್ರನನ್ನು ನಿರ್ಮಿಸಿ ಆತನಿಗೆ ಶಾಸ್ತ್ರರಹಸ್ಯಗಳನ್ನು ತಿಳಿಸಿದನು. ಇದೇ ಪ್ರಕಾರ ಈತನ ಸಂತತಿಯವರು ಹದಿನೈದು ತಲೆಗಳ ವರೆಗೆ ಮಾನಸ ಪುತ್ರರನ್ನು ನಿರ್ಮಿಸಿ ಶಾಸ್ತ್ರಗಳನ್ನು ಕೊಡುತ್ತಾಹೋದರು. ಹದಿನೈದನೇ ತಲೆಯವನು ಓರ್ವ ಬ್ರಾಹ್ಮಣ ಕನ್ನಿಕೆಯನ್ನು ಮೋಹಿಸಿ ಅವಳನ್ನು ಮದುವೆಯಾದನು. ಅಂದಿನಿಂದ ಮಾನಸ ಪುತ್ರರನ್ನು ನಿರ್ಮಿಸುವದು ಬಂದಾಯಿತು. ಈ ವಂಶದವನೋರ್ವನು ಪರ್ಯಟನ ಮಾಡುತ್ತ ಕಾಶ್ಮೀರದೇಶಕ್ಕೆ ಬಂದನು. ಆತನ ಹೆಸರು ಸಂಗಮಾದಿತ್ಯನೆಂಬುದು. ಆತನ ಮಗನು ವರ್ಷಾದಿತ್ಯನು. ಆತನಿಗೆ ಅರುಣಾದಿತ್ಯನೆಂಬ ಮಗನಾದನು. ಆತನಿಗೆ ಆನಂದನೆಂಬವನು, ಅವನಿಂದುತ್ಪನ್ನನಾದವನು ನಾನು ಸೋಮಾನಂದನು.

ತಂತ್ರಾಲೋಕದ ಟೀಕೆಯಲ್ಲಿ ಇದೇ ವಿಷಯವೇ ಸ್ವಲ್ಪ ವ್ಯತ್ಯಾಸದಿಂದ ಹೇಳಲ್ಪಟ್ಟಿದೆ. ಅದು ಹೀಗಿದೆ.

ಇತ್ಥಂ ವ್ಯುಚ್ಛಿನ್ನೇ ಶಿವಶಾಸನೇ ಕದಾಚಿ ತ್ಕೈಲಾಸಗಿರೌ ಪರಿಭ್ರಮನ್ ಶ್ರೀಕಂಠಮೂರ್ತಿಃ ಶಿವೋ ವಿಚ್ಛಿನ್ನಸ್ಯ ನಿಖಿಲಶೈವಶಾಸ್ತ್ರೋಪನಿಷ

ತ್ಸಾರ ಭೂತಸ್ಯ ಷಡರ್ಧಕ್ರಮ (ತ್ರಿಕಮತ) ವಿಜ್ಞಾನಸ್ಯ ಪ್ರಚಾರಾರ್ಥಂ ದುರ್ವಾಸಸಂ ಮುನಿಮಜಿಜ್ಞಪತ್ । ಸ ಮುನಿಃ ಮಾನಸಾನ್ ಸಿದ್ಧಾನ್ (ತ್ರ್ಯಂಬಕ-ಆಮರ್ದಕ-ಶ್ರೀನಾಥಾಖ್ಯಾನ್) ಅದ್ವಯ-ದ್ವಯ-ದ್ವಯಾದ್ವಯ ಮತವ್ಯಾಖ್ಯಾತೄನ್ ಮಠಿಕಾಸು ತತ್ಸಂಪ್ರದಾಯ ಮಾರ್ಗಂ ಪ್ರಚಾರ ಯಿತುಂ ನ್ಯಾಯುಂಕ್ತ । ತೇಷು ಮತೇಷು ಪ್ರಶಸ್ತಂ ಅದ್ವಯಾರ್ಥ ವಿಷಯಕಂ ತ್ರಿಕಾಖ್ಯಮತಂ ತ್ರ್ಯಂಬಕ ಸಂಪ್ರದಾಯಕಂ ಸರ್ವಶ್ರೇಷ್ಠಂ ಪ್ರಶಸ್ಯತೇ ॥

ಸಾರಾಂಶಃ— ಈ ಪ್ರಕಾರ ಶಿವಶಾಸ್ತ್ರಗಳು ವಿಚ್ಛಿನ್ನವಾಗಲು ಒಂದಾ ನೊಂದು ಸಮಯದಲ್ಲಿ ಶ್ರೀಕಂಠರೂಪದಿಂದ ಶಿವನು ಕೈಲಾಸಗಿರಿಯಲ್ಲಿ ಸಂಚರಿಸುತ್ತಿರಲು ವಿಚ್ಛಿನ್ನವಾದ ಸರ್ವ ಶಾಸ್ತ್ರಗಳ ಮತ್ತು ಉಪನಿಷತ್ತು ಗಳ ಸಾರಭೂತವಾದ ತ್ರಿಕಮತದ ಪ್ರಚಾರಕ್ಕಾಗಿ ದುರ್ವಾಸಮುನಿಗೆ ಆಜ್ಞೆಮಾಡಿದನು. ಆತನು ತ್ರ್ಯಂಬಕ ಆಮರ್ದಕ ಶ್ರೀನಾಥರೆಂಬ ಮೂವರು ಸಿದ್ಧಿಸಂಪನ್ನರಾದ ಮಾನಸ ಪುತ್ರರನ್ನು ನಿರ್ಮಿಸಿ ಅವರಿಂದ ದ್ವಯ, ದ್ವಯಾದ್ವಯ, ಅದ್ವಯ ಮತಗಳ ಉಪದೇಶಕರನ್ನು ಮಠಗ ಳಲ್ಲಿ ಸ್ಥಾಪಿಸಿ, ಆಯಾ ಸಂಪ್ರದಾಯಗಳನ್ನು ಪ್ರಸಾರಪಡಿಸಬೇಕೆಂದು ಆಜ್ಞೆಮಾಡಿದನು. ಇವುಗಳಲ್ಲಿ ಪ್ರಶಸ್ತವಾದುದು ಅದ್ವಯಯುಕ್ತವಾದ ತ್ರ್ಯಂಬಕ ಸಾಂಪ್ರದಾಯದ ತ್ರಿಕಮತವು.

ಸಾಲು ೨೮ ರಲ್ಲಿ "ಲಕ್ಷ್ಮಾಧ್ಯಾನ" ವೆಂಬುದು ಶಿಲಾಶಾಸನ ಬರೆ ದವನ ಹಸ್ತದೋಷವಿರಬಹುದು. ಅದು "ಲಕ್ಷ್ಮಾಧ್ಯಾಯ" ವೆಂದಿರ ಬೇಕು. ಲಕ್ಷ್ಮಾಧ್ಯಾಯ ವಂಶಕ್ಕೆ ಸೇರಿದ ಅನೇಕ ಶೈವಾಚಾರ್ಯರ ಗ್ರಂಥಗಳು ಉಪಲಬ್ಧವಿವೆ. ಮೃಗೇಂದ್ರಾಗಮ ತತ್ವಪ್ರಕಾಶಿಕಾ ಮೊದ ಲಾದವುಗಳಿಗೆ ಟೀಕೆಯನ್ನು ಬರೆದ ಅಘೋರಶಿವಾಚಾರ್ಯನು ಲಕ್ಷ್ಮಾ ಧ್ಯಾಯ ವಂಶಕ್ಕೆ ಸೇರಿದವನು. ಲಕ್ಷ್ಮಾಧ್ಯಾಯ ಸಂತಾನದ ಮಠಗಳು ತಮಿಳುದೇಶದಲ್ಲಿ ಅನೇಕವಿವೆ. ಅತಿ ಪ್ರಖ್ಯಾತನಾದ ಸಾಕ್ಷಾತ್ಪರಶಿವನ ಅವತಾರವೆಂದು ಗಣಿಸಲ್ಪಟ್ಟ ಮತ್ತು ಪ್ರತಾಪಶಾಲಿಯಾದ ಗಣಪತಿ ಮಹಾರಾಜ, ಆತನ ಪ್ರೀತಿಯ ಮಗಳಾದ ರುದ್ರಾಂಬಿಕೆ, ಆಕೆಯ ಸಾಕುಮಗ ರುದ್ರಪ್ರತಾಪ ಮೊದಲಾದವರಿಗೆ ದೀಕ್ಷಾ ಮತ್ತು ಮೋಕ್ಷ ಗುರುವಾದ ವಿಶ್ವೇಶ್ವರ ಶಿವನೂ ಈ ವಂಶದವನೇ. ಮಲಕಾಪುರ ಶಿಲಾ ಶಾಸನದಲ್ಲಿ ವಿಶ್ವೇಶ್ವರನ ಪೂರ್ವ ವೃತ್ತವನ್ನು ಹೇಳುವಾಗ ಈ ವಂಶಕೆ

ಲಕ್ಷಾಧ್ಯಾಯುವೆಂದು ಕರೆಯುವ ಕಾರಣವನ್ನು ಹೇಳಿದಂತಾಗಿದೆ. ಅದೇ ಸಂದರ್ಭ:—

ಚೇದಿರಾಜ್ಯವನ್ನಾಳುತ್ತಿದ್ದ ಕಲಚುರಿ ವಂಶದ ೨ನೇ ಯುವರಾಜದೇವನು ಒಂಬತ್ತು ಲಕ್ಷದ ತನ್ನ ರಾಜ್ಯದೊಳಗಿನ ಮೂರುಲಕ್ಷ ಊರುಗಳನ್ನು ತನ್ನ ಗುರುವಾದ ಸದ್ಭಾವಶಂಭುವಿಗೆ ಗುರುದಕ್ಷಿಣೆಯನ್ನಾಗಿ ಕೊಟ್ಟನು. ಸದ್ಭಾವಶಂಭುವು ಅಲ್ಲೇ ಮಠವನ್ನು ಸ್ಥಾಪಿಸಿ ಬಂದ ಉತ್ಪನ್ನವನ್ನೆಲ್ಲ ವಿದ್ಯಾ ಮತ್ತು ಮಠದ ಉಳಿದ ಖರ್ಚಿಗಾಗಿ ಉಪಯೋಗಿಸುತ್ತಿದ್ದನು. ಇಂಥ ದೊಡ್ಡ ಉತ್ಪನ್ನವನ್ನು ಖರ್ಚುಮಾಡುವುದರಿಂದ ಅನೇಕ ವಿದ್ಯಾರ್ಥಿಗಳು ಮಠದಲ್ಲಿ ನೆರೆಯುತ್ತಿರಬಹುದು. ಅವರೆಲ್ಲರಿಗೆ ಅಧ್ಯಯನವನ್ನು ಮಾಡಿಸುವುದರಿಂದ ಲಕ್ಷಾಧ್ಯಾಯುವೆಂದು ಹೆಸರಾಗಿರಬಹುದು. ವಿಶ್ವೇಶ್ವರ ಶಿವನೂ ಒಂದು ವಿಶ್ವವಿದ್ಯಾಲಯುವನ್ನೇ ಸ್ಥಾಪಿಸಿದ್ದನು. ಅದರ ಮುಖ್ಯಾಂಗಗಳು ಧರ್ಮ, ಆಚಾರ, ತತ್ವಜ್ಞಾನ ಮತ್ತು ವೈದ್ಯಕಿಯೆಂಬವುಗಳಿದ್ದವೆಂಬುದು ಮಲಕಾಪೂರ ಶಿಲಾಶಾಸನದಿಂದ ತಿಳಿಯುವುದು. ಆದುದರಿಂದ ಈ ಸಂತತಿಯುವರಿಗೆ ಲಕ್ಷಾಧ್ಯಾಯು ಸಂತತಿಯುವರೆಂದು ಅಂದಿರಬಹುದು. ವಿಮಳಶಿವನೂ ಈ ವಂಶಕ್ಕೆ ಸೇರಿದವನು. ಆದುದರಿಂದ ಈತನಿಗೂ ಲಕ್ಷಾಧ್ಯಾಯುಸಂತತಿಯುವನೆಂದು ಅಂದಿರಬಹುದು. ವಿಮಳಶಿವನು ದುರ್ವಾಸನ ಸಂತತಿಗೆ ಸೇರಿದವರು. ದುರ್ವಾಸನ ಸಂತತಿಗೆ ಸೇರಿದ ಆಚಾರ್ಯರು ಬಲು ವಿಖ್ಯಾತರಾದವರು. ಮತ್ತು ಹಿಂದುಸ್ಥಾನದ ಬಹುತರ ಎಲ್ಲ ಭಾಗಗಳಲ್ಲಿ ಮಠಗಳನ್ನು ಸ್ಥಾಪಿಸಿ, ಅಲ್ಲಿಯು ರಾಜರಿಂದ ಪೂಜೆಗೊಂಡು ಶೈವಧರ್ಮ ಪ್ರಸಾರಮಾಡಿದವರು. ಸುಮಾರು ಎಂಟನೆಯು ಶತಮಾನಕ್ಕೂ ಪೂರ್ವದಲ್ಲಿ ದುರ್ವಾಸನ ಸಂತತಿಗೆ ಸೇರಿದ ಓರ್ವ ಆಚಾರ್ಯನು 'ಕದಂಬಗುಹ' ಎಂಬಲ್ಲಿ ಮಠವನ್ನು ಸ್ಥಾಪಿಸಿದನು. ಇದೇ ವಂಶದವರಿಂದ ಬರಬರುತ್ತ ಶಂಖಮಠಿಕಾ, ತೇರಾಂಬಿ ಮತ್ತು ಆಮರ್ದಕ ಮಠಗಳು ಸ್ಥಾಪಿಸಲ್ಪಟ್ಟವು- ಸುಮಾರು ೯ನೆಯು ಶತಮಾನಕ್ಕೂ ಪೂರ್ವದಲ್ಲಿ ಈ ವಂಶದ ಪುರಂದರನೆಂಬ ಸ್ವಾಮಿಗೆ ಉತ್ತರದ ಚಾಳುಕ್ಯವಂಶದ ದೊರೆಯಾದ ಅವಂತಿವರ್ಮನು ಗುರುದಕ್ಷಿಣೆಯಾಗಿ ಮತ್ತಮಯೂರವೆಂಬ ಪಟ್ಟಣವನ್ನು ಧಾರೆಯೆರೆದನು. ಈ ಪುರಂದರನ, ಸಂತತಿಯುವರು ಬಲು ಪ್ರಖ್ಯಾತರು. ಮತ್ತು ಸಾಹಸಿಗಳು. ಇವರು ತಮ್ಮ

ಅಧ್ಯಾತ್ಮಿಕ ಸತ್ತೆಯನ್ನು ಮಧ್ಯಹಿಂದುಸ್ತಾನದೊಳಗಿನ ಅಂದರೆ ಕಾಠೇವಾಡದಿಂದ ಮಗಧ ದೇಶದ ವರೆಗೆ ಉತ್ತರಕ್ಕೂ ಕೊಂಕಣದ ವರೆಗೆ ದಕ್ಷಿಣಕ್ಕೂ ಇರುವ ದೇಶಗಳಲ್ಲಿ ಆ ಕಾಲದ ರಾಜಮನೆತನಗಳ ಮೇಲೆಲ್ಲ ಕೂಡ್ರಿಸಿದ್ದರು. ಈ ಚಾಳುಕ್ಯವಂಶದ ಆವಂತಿವರ್ಮನ ಮಗಳೇ ಕಲಚುರಿವಂಶದ ಯುವರಾಜನ ಹೆಂಡತಿಯೂ ಲಕ್ಷ್ಮಣದೇವನ ತಾಯಿಯೂ ಆಗಿದ್ದಳು. ಈ ಲಕ್ಷ್ಮಣದೇವನ ಮಗಳೇ ಕಲ್ಯಾಣದ ಚಾಳುಕ್ಯವಂಶದ ವಿಕ್ರಮನ ಹೆಂಡತಿಯಾದ ಬೊಂಥಾದೇವಿ. ಈ ವಂಶದ ಶೈವಾಚಾರ್ಯರಿಗೆ ಅರಮನೆಯ ಬೆಂಬಲವಿದ್ದಿತೆಂಬುದು ಸ್ಪಷ್ಟವಾಗುವುದು. ಗುಜರಾಥದಲ್ಲಿಯೂ ಈ ಸಂತತಿಗೆ ಸೇರಿದ ಶೈವಾಚಾರ್ಯರ ಮಠಗಳಿದ್ದವೆಂಬುದೂ ಅಲ್ಲಿಯ ಸಾರ್ವಭೌಮರು ಅವರ ಶಿಷ್ಯಕೋಟಿಗೆ ಸೇರಿದ್ದರೆಂಬುದೂ ಗ್ರಂಥಗಳ ಮತ್ತು ಶಿಲಾಶಾಸನಗಳ ಆಧಾರದಿಂದ ಸ್ಪಷ್ಟವಾಗುವುದು. ಅಂದಮೇಲೆ ದುರ್ವಾಸನ ಸಂತತಿಗೆ ಸೇರಿದ ಶೈವಾಚಾರ್ಯರು ಕಾಶ್ಮೀರ, ಮಧ್ಯಹಿಂದುಸ್ತಾನ, ಬಂಗಾಲ, ಗುಜರಾಥ, ಕೊಂಕಣ, ತೆಲಗು, ತಮಿಳು ನಾಡುಗಳಲ್ಲಿ ಮಠಗಳನ್ನು ಸ್ಥಾಪಿಸಿ ಶೈವಧರ್ಮಪ್ರಸಾರ ಮಾಡಿದರೆಂದು ಕಂಡುಬರುವುದು. ನಮ್ಮ ಕರ್ಣಾಟಕದಲ್ಲಿ ಶೈವಧರ್ಮಕ್ಕೆ ಸೇರಿದ ಪಂಥಗಳಲ್ಲಿ ಕಾಳಾಮುಖ ಅಥವಾ ಲಾಕುಳ ಪಾಶುಪತ ಮೊದಲಾದವು ಇದ್ದುವೆಂಬುದು ಶಿಲಾಶಾಸನಗಳಿಂದ ಸ್ಪಷ್ಟವಾಗಿಯೇ ಇದೆ. ಆದರೆ ಕಾಶ್ಮೀರ ಅದ್ವೈತ ಶೈವ ಪಂಥದ ಬಗ್ಗೆ ಉಲ್ಲೇಖವಿದ್ದ ಶಿಲಾಶಾಸನಗಳು ನನ್ನ ದೃಷ್ಟಿಗೆ ಬಿದ್ದಿದ್ದಿಲ್ಲ. ಇದೇ ಮೊದಲನೆಯದೆನ್ನಬಹುದು. ವೀರಶೈವ ಧರ್ಮದ ಇತಿಹಾಸವನ್ನು ಶೋಧಿಸುವಾಗ ಪ್ರಚಲಿತವಾದ ಶೈವ ಪಂಥಗಳ ಇತಿಹಾಸ ಮತ್ತು ತತ್ವಜ್ಞಾನವನ್ನು ಕಂಡುಕೊಳ್ಳುವುದು ಅತ್ಯಗತ್ಯ. ಅಂತೇ ಈ ಶಿಲಾಶಾಸನದ ಮಹತ್ವವು.

ಕರ್ಣಾಟಕದಲ್ಲಿ 'ಬಣಜಿಗ' ಶಬ್ದವು ಅಪರಿಚಿತವಾದುದಲ್ಲ. ವೀರಶೈವರ ಒಂದು ಮುಖ್ಯವಾದ ಪಂಗಡಕ್ಕೆ ಬಣಜಿಗರೆನ್ನುವರು. ಕನ್ನಡ ಶಾಸನಗಳಲ್ಲಿ "ಬಣಂಜ" ಶಬ್ದವು ವಿಪುಲವಾಗಿ ದೊರೆಯುವದು. ಸಾಮಾನ್ಯವಾಗಿ ಬಣಜಿಗರೆಂದರೆ ವ್ಯಾಪಾರಿಗಳೆಂದು ಅರ್ಥ. ವಣಿಜ್ ಶಬ್ದದ ತದ್ಭವವು ಬಣಜುನೆಂಬುದು. ಇವರ ಸತ್ತೆಯು ರಾಜರುಗಳ ಮೇಲೆ ಬಹಳವಾಗಿರುತ್ತಿತ್ತು. ಏಕೆಂದರೆ ವ್ಯಾಪಾರಿಗಳೇ ದೇಶಕ್ಕೆ

ಬೇಕಾಗುವ ಸಾಹಿತ್ಯಗಳನ್ನು ಪೂರೈಸುವವರೂ ರಾಜನ ಬೊಕ್ಕಸವನ್ನು ತುಂಬುವವರು. ಅಲ್ಲಲ್ಲಿ ಬಣಜಿಗರ ಸಂಘಗಳಿರುತ್ತಿದ್ದವು. ಆಯಾ ಸಂಘಗಳ ನಿರ್ಣಯಗಳನ್ನು ಅಲ್ಲಗಳೆಯುವದು ಆವ ರಾಜನಿಗೂ ಸಾಧ್ಯವಿದ್ದಿಲ್ಲ. ಇಂಥ ಒಂದು ಮಹತ್ವದ ಸಂಘವು ನಮ್ಮೀ ಕರ್ನಾಟಕದಲ್ಲಿತ್ತು. ನಮ್ಮ ಕನ್ನಡ ಮತ್ತು ಸಂಸ್ಕೃತ ಶಿಲಾಶಾಸನಗಳಿಂದ ಹಿಂದುಸ್ತಾನದಲ್ಲಿ ಎರಡೇ ಸಂಘಗಳಿದ್ದಂತೆ ತೋರುವದು. ಒಂದು ನಮ್ಮ ಐಹೊಳೆಯಲ್ಲಿದ್ದುದು. ಮತ್ತೊಂದು ಅಹಿಚ್ಛತ್ರದಲ್ಲಿದ್ದುದು. ಅಹಿಚ್ಛತ್ರವೆಂಬುದು ಪಂಜಾಬದಲ್ಲಿದೆ. ಉಳಿದ ಎಲ್ಲ ವ್ಯಾಪಾರಿ ಸಂಘಗಳು ಇವುಗಳ ಶಾಖೆಗಳು. ನಮ್ಮ ಅನೇಕ ಶಾಸನಗಳಲ್ಲಿ ಅಯ್ಯಾಹೊಳೆಯ ಐನೂರ್ವರು ಸ್ವಾಮಿಗಳು ಧರ್ಮವನ್ನು ಪ್ರತಿಪಾಲಿಸುವರೆಂದು ಉಲ್ಲೇಖವು ದೊರೆಯುವದು. ರಾಜರು ಸ್ಥಿರವಾದವರಲ್ಲ. ರಾಜ್ಯವೂ ಸ್ಥಿರವಾದುದಲ್ಲ. ದಾನಕೊಡುವವರ ಇಚ್ಛೆಯು ಕೊಟ್ಟ ದಾನವು ಸ್ಥಿರವಾಗಿ ನಡೆಯಬೇಕೆಂದಿರುವದು ಸ್ವಾಭಾವಿಕವು. ಆದುದರಿಂದ ಹೆಚ್ಚು ಸ್ಥಿರವಾಗಿರುವ ಸಂಸ್ಥೆಗಳ ಕಡೆಗೆ ದಾನದ ಆಸ್ತಿಯನ್ನು ಒಪ್ಪಿಸುವದು ಸ್ವಾಭಾವಿಕವು. ಬಣಜಿಗರ ಸಂಘವು ಹೆಚ್ಚು ಸ್ಥಿರವಾದುದೆನ್ನಬಹುದು ಏಕೆಂದರೆ ಯಾವ ರಾಜನಿಗೂ ಬಣಜಿಗರ ಸಹಾಯವು ಬೇಕೇಬೇಕು. ಅವರ ಸಹಾಯವೂ ಸಹಾನುಭೂತಿಯೂ ತಪ್ಪಿದರೆ ಆತನ ಬೊಕ್ಕಸವು ಬರಿದಾಗುವದು. ಆದುದರಿಂದ ರಾಜ್ಯವು ಆವನದೇ ಇರಲಿ, ರಾಜನು ಆವನೇ ಇರಲಿ, ಬಣಜಿಗರ ಸಂಘದ ಸತ್ತೆಯು ರಾಜ್ಯದ ಮತ್ತು ರಾಜನ ಮೇಲೆ ಇರುತ್ತಿತ್ತು. ಅಂತೇ ದಾತೃಗಳು ತಮ್ಮ ದಾನದ ಆಸ್ತಿಯನ್ನು ಐನೂರ್ವರು ಸ್ವಾಮಿಗಳ ನೇತೃತ್ವದ ಕೆಳಗೆ ಇಡುತ್ತಿದ್ದರು. ಈ ಶಿಲಾಶಾಸನದಲ್ಲಿ ಸಾಲ ೫೬ ರಿಂದ ೬೦ ವರೆಗೆ ಅಯ್ಯಾಹೊಳೆಯ ಐನೂರ್ವರು ಸ್ವಾಮಿಗಳ ಬಿರುದುಗಳ ಪ್ರಶಸ್ತಿಯದೆ.

ಬಣಜಿಗರು ಅಪ್ರತ್ಯಕ್ಷರೀತಿಯಿಂದ ರಾಜ್ಯಕಾರಣಗಳಲ್ಲಿ ಭಾಗ ತೆಗೆದುಕೊಳ್ಳುತ್ತಿದ್ದರೂ, ಪ್ರತ್ಯಕ್ಷ ರೀತಿಯಿಂದ ರಾಜ್ಯವಾಳಿದ ಉದಾಹರಣೆಗಳು ಕಡಿಮೆಯೆಂದು ಹೇಳಬಹುದು. ಅವರದು ಮುಖ್ಯವಾಗಿ ವ್ಯಾಪಾರವು. ಇನ್ನಿತರ ವಿಷಯಗಳ ಕಡೆಗೆ ಲಕ್ಷಹಾಕತಕ್ಕವರಲ್ಲ. ಯಾರಾದರೂ ಪ್ರಸಂಗವಶದಿಂದ ರಾಜರಾದರೆ ತಾವು ಬಣಜಗರೆಂದು ಹೇಳಿಕೊಂಡ ಉದಾಹರಣೆಗಳು ದೊರೆಯುವದಿಲ್ಲ. ಆದರೆ ಈ ಶಿಲಾಶಾಸನ

ದಲ್ಲಿ ಇದರ ಬಗ್ಗೆ ಅಪವಾದವು ದೊರೆಯುವದು. ಈ ಶಿಲಾಶಾಸನದ ಬರಿಸಿದವನು ಬಣಜಿಗರವನಾದ ಚಾವುಂಡರಾಯನು. ಈತನಿಗೆ ಚೌಡಿ ಸೆಟ್ಟಿಯೆಂದೂ ಕರೆಯುತ್ತಿದ್ದರು. ಈತನ ಮನೆತನವು ಸೆಟ್ಟರದು. ಈತನ ತಂದೆಯು ಮಲ್ಲಿಸೆಟ್ಟಿ, ಅಣ್ಣನು ಆದಿಸೆಟ್ಟಿ. ಈತನು ಮಹಾವೀರನು. ಪಾಂಡ್ಯ, ಕೊಂಕಣ, ಕಾವೇರಿಯ ಬಹುಭಾಗವನ್ನು ಗೆದ್ದವನು. ಹೊಯ್ಸಳ ಸೋಮೇಶ್ವರನನ್ನು ಸೋಲಿಸಿದವನು. ಕನ್ನರನ ರಾಜ್ಯದ ಬಹುಭಾಗವನ್ನು ಆಳುತ್ತಿದ್ದವನು. ಆದರೂ ತಾನು ಶ್ರೇಷ್ಠಿ (ಸೆಟ್ಟಿ) ಯೆಂದು ಹೇಳಿಕೊಳ್ಳುವದನ್ನು ಮರೆತಿಲ್ಲ. ಶ್ರೇಷ್ಠಿ ಗಂಧವಾರಣಃ, ರಾಯ ಶ್ರೇಷ್ಠಿ, ಎಂಬ ಅಂಕಿತಗಳು ಶಿಲಾಶಾಸನದಲ್ಲಿ ಅವೆ. ಇನ್ನಿತರ ಮಹ ತ್ವದ ವಿಷಯಗಳಲ್ಲಿ "ವಾಮನಮುದ್ರೆಯ ನಾಲ್ಕಂ ಕಲ್ಲು" [ಸಾಲ ೫೦] ಎಂಬುದೊಂದು. ಶೈವರು ತಮ್ಮ ಮಠಗಳಿಗೆ ಲಿಂಗಮುದ್ರೆಯನ್ನು ಹಾಕು ವಂತೆ ವೈಷ್ಣವರು ವಾಮನಮುದ್ರೆಯ ಕಲ್ಲುಗಳನ್ನು ನಡಿಸುತ್ತಿದ್ದರೆಂ ಬಂತೆ ತೋರುವದು. ಕುರುಬೆಟ್ಟವು ಅನಾದಿಯ ಬಣಂಜು ಪಟ್ಟಣವು.

## ಶಿಲಾಶಾಸನದ ಮೂಲವು.

೧. (ಅನುಷ್ಟುಪ್) ಓಂನಮಃ ಶಿವಾಯ ॥ ನಮಸ್ತುಂಗ ಶಿರಶ್ಚುಂಬಿ ಚಂದ್ರಚಾಮರಚಾರವೇ । ತ್ರೈಳೋಕ್ಯನಗರಾರಂಭ ಮೂಲಸ್ತಂಭಾಯ ಶಂಭವೇ ॥ (೧)

೨. (ಶಿಖರಿಣಿ) ಸ್ಥಿರಾಯದ್ದಂಷ್ಟ್ರಾಗ್ರೇ ನಿವಸತಿ ತದೀಯ ದ್ಯುತಿ ಚಯೋ ಹಿರಣ್ಯಾಕ್ಷಸ್ಪರ್ಶಪ್ರಭವ ದುರಿತಧ್ವಂಸನಧಿಯಾ । ವಿ.........

೩. ವಿಯದ್ಗಂಗಾಪೂರೇ ಧೃವಮಿವ ವಿಗಾಹಂ ವಿದಧತಿ ಹರಿಃ ಕ್ರೋಡಕ್ರೀಡಃ ಸ ಜಯತಿ ಯತಿಸ್ತುತ್ಯವಿಭವಃ । (೨)
(ಶಿಖರಿಣಿ) ಜಯತ್ಯಾಕಲ್ಪ ಶ್ರೀಕಳಿತ ಕಮನೀಯಾವೃತಕರ

೪. ಪ್ರಭಾನಿತ್ಯ ಪ್ರೇಮಪ್ರಣಯಗಿರಿಜಾಶಂಕರಯತಿಃ । ನಿಜಶ್ರೀ ಪಾದಾಬ್ಜ ಪ್ರಣತಜನತಾರ್ತಿಪ್ರಮಥನಂ ಜಗತ್ಪ್ರಾದುರ್ಭಾವ ಪ್ರಥಮ ಮಿ

೫ ಥುನಂ ಪುಣ್ಯಕಥನಂ ॥ (೩)
(ಸ್ರಗ್ಧರಾ) ಅಸ್ತಿ ಶ್ರೀಮಾನುದನ್ವಾನ್ ಬಹಿರಿವಪರಿಖಾಸ್ಥೂಳವೇಳಾ-ಚ ಳಸ್ಯ ಪ್ರಾಕಾರಾಕಾರಧಾಮ್ನೋ ಭುವನಪುರಭುವ ಸರ್ಬ್ಬಲೋ ।

೬. ಕೋತ್ತಮಾಯಾಃ । ತನ್ಮಧ್ಯೇ ಭಾತಿ ಮೇರುರ್ನಿರುಪಮ ಸುಮನೋಹರ್ಮ್ಯ ಸಾಧರ್ಮ್ಯ ಚಾರುದ್ವೀಪಸ್ತದ್ದಕ್ಷಿಣಾಶಾಮಧಿವಸತಿ ಪುರಾಜಾತ ಜಂಬೂಸಮಾನಃ ॥ (೪)

೭. (ಸ್ರಗ್ಧರಾ) ತಜ್ಜಂಬೂದ್ವೀಪಮಧ್ಯೇ ವಿಳಸತಿ ಭರತ ಕ್ಷೇತ್ರ ಮಾನಂದಪಾತ್ರಂ ತತ್ರಾಸ್ತೆ ಕುಂತಳೋರ್ಬೀ ಜನಜನಿತಯಶಃಶ್ರೀ ಸುಖಾಗಾರ-ಗುರ್ಬಿ। ತಸ್ಮಿನ್ ಸುಮೇರು ಲಕ್ಷ್ಮಿ

ಸಾಲು ೧. ಓಂ ನಮಃ ಶಿವಾಯ। ನಮಸ್ತುಂಗ ಶಿರಶ್ಚುಂಬಿ ಚಂದ್ರ ಚಾಮರಚಾರವೇ॥ ತ್ರೈಳೋಕ್ಯನಗರಾರಂಭ ಮೂಲಸ್ತಂಭಾಯ ಶಂಭವೇ

ಸಾಲು ೨-೩ ಸ್ಥಿರಾಯದ್ದಂಷ್ಟ್ರಾಗ್ರೇನಿವಸತಿ ತದೀಯ ದ್ಯುತಿಚಯೋ ಹಿರಣ್ಯಾಕ್ಷ ಸ್ಪರ್ಶಪ್ರಭವ ದುರಿತ ಧ್ವಂಸನಧಿಯಾ॥ ವಿಯದ್ಗಂಗಾ ಪೂರ್ವೇ ಧೃವಮಿವ ವಿಗಾಹಂ ವಿದಧತಿ। ಹರಿಃ ಕ್ರೋಡಕ್ರೀಡಃ ಸಜಯತಿ ಯತಿ ಸ್ತುತ್ಯವಿಭವಃ

ಸಾಲು ೩-೫ ಜಯತ್ಯಕಲ್ಪ ಶ್ರೀ ಕಳಿತಕಮನೀಯಾವೃತ ಕರ। ಪ್ರಭಾನಿತ್ಯ ಪ್ರೇಮಪ್ರಣಯ ಗಿರಿಜಾ ಶಂಕರ ಯುತಿಃ॥ ನಿಜ ಶ್ರೀಪಾದಾಬ್ಜ ಪ್ರಣತ ಜನತಾರ್ತ್ತಿ ಪ್ರಮಥನಂ। ಜಗತ್ಪ್ರಾದುರ್ಭಾವ ಪ್ರಥಮ ಮಿಥುನಂ ಪುಣ್ಯಕಥನಂ॥

ಸಾಲು ೫-೬ ಅಸ್ತಿ ಶ್ರೀಮಾನುದನ್ವಾನ್ಬಹಿರಿವ ಪರಿಖಾಸ್ಥೂಳ ವೇಳಾಚಳಸ್ಯ। ಪ್ರಾಕಾರಾಕಾರ ಧಾಮ್ನೋಭುವನ ಪುರಭುವಃ ಸರ್ಬಲೋಕೋತ್ತಮಾಯಾಃ॥ ತನ್ಮಧ್ಯೇಭಾತಿ ಮೇರುರ್ನಿರುಪಮಸುಮನೋ ಹರ್ಮ್ಯ ಸಾಧರ್ಮ್ಯಚಾರು ದ್ವೀಪಸ್ತದ್ದಕ್ಷಿಣಾಶಾಮಧಿ ವಸತಿ ಪುರಾಜಾತ ಜಂಬೂ ಸಮಾನಃ॥

ಸಾಲು ೭-೮ ತಜ್ಜಂಬೂದ್ವೀಪ ಮಧ್ಯೇವಿಳಸತಿ ಭರತ ಕ್ಷೇತ್ರ ಮಾನಂದ ಪಾತ್ರಂ। ತತ್ರಾಸ್ತೇ ಕುಂತಳೋರ್ಬೀ ಜನಜನಿತ ಯಶಶ್ರೀ ಸುಖಾಗಾರ ಗುರ್ಬಿ॥ ತಸ್ಮಿನ್ಸುಸ್ಮೇರ ಲಕ್ಷ್ಮೀ ಮುದಿತ ಜನಪದಾಗಣ್ಯ ಪುಣ್ಯೈಕ ಕೋಶಃ। ಸಂಪತ್ಸಂಪೂರಿತಾಶಃಸ ಜಯತಿ ಜಗತಿ ಮಂಡನಂ ಕೂಂಡಿಕ ದೇಶಃ॥

ಸಾಲು ೮-೧೦ ದೇಶೇ ತತ್ರಚಕಾಸ್ತಿ ವಾಸ್ತವ ಜನ ಶ್ರೀವರ್ತ್ತನಂ ಪಟ್ಟಣಂ। ಪೂರ್ಣಾನೇಕ ತಟಾಕ ಕೂಪ ಸರಸಿ ಸಂಪತ್ತಿ ಶೋಭಾಸ್ಪದಂ॥ ಯತ್ಸರ್ಬತ್ರ ಲತಾಂತ ಪಲ್ಲವ ಫಲ ಕ್ಷೋಣೀಜ ರಮ್ಯೋರ್ಬರಾ। ತ್ರಿಂಶದ್ಗ್ರಾಮವರಾದಿ.. ಗಿರಿನಾಮ ಶ್ರೀಮತಾಮಾಶ್ರಯಃ॥

ಸಾಲು ೧೦-೧೧ ತದಿಹ ಕುರುಂಬೆಟ್ಟವಿತಿಖ್ಯಾತಂ ಲೋಕಭಾಷಮಾನಗರಂ। ಯತ್ರಸುರಾಲಯ ಕಳಶೈಃಸಾರ್ಧಂ ಸಂದಿಷ್ಯತೇ ... ರಾಜಾವಳಿಃ॥

ಸಾಲು ೧೧-೧೨ ಮುದಿತಮುದಿತಮಾಸೀತ್ಸಾರ್ಥಿವಾನಾಂ ಕುಲಾನಾಂ। ಯದುರು ಯದುಕುಲಂ ತತ್ಕೃಷ್ಣಜನ್ಮಾಭಿರಾಮಂ॥ ನೃಪತಿರಜನಿತತ್ರ ಕ್ಸಾತಧರ್ಮ್ಯೈಕಧಾಮಾ। ... ರ ವಿತರಣರಾಮೋ ಭಿಲ್ಲಮ ಸಾರ್ವಭೌಮಃ॥

ಸಾಲು ೧೨-೧೩ ತಸ್ಯಾಭೂತ್ತನಯಃ ಸಮಗ್ರವಿನಯಃ ಶ್ರೀ ಜೈತುಗೀಕ್ಷ್ಮಾಪತಿಃ। ಸುಸ್ವಾಯತ್ತ ಚತುಃಸಮುದ್ರರಶನಾಲಂಕಾರ ಭೂಮಂಡಲಃ॥ ತತ್ಪುತ್ರಃ ಕೃತ ಶಾರ್ಙ್ಗಪಾಣಿಚರಣಾಂಭೋಜಾತಪೂಜಾಫಲಂ। ಭೋಜೇರಾಜಸಮಾಜ ಪೂಜಿತ ಮಹಾಸಿಂಹಾಸನಂ ಸಿಂಹಣಃ॥

ಸಾಲು ೧೩-೧೫ ಅಪಿಚ। ಭೋಜಾಂಭೋಜಾತ ರಾಜೋರ್ಜುನವನ ಪರಶುರ್ಗ್ಗುರ್ಜ್ಜರ... ದಭ್ರ। ಭ್ರಾತಪ್ರೋಚ್ಚಂಡವಾತೋ ಮಗಧನಗಪವಿಶ್ಚೋಳಪಾಳಸ್ತ್ಯರಾಮಃ॥ ಗೌಡ ಕ್ಷ್ವೇಡೋದು ಚೂಡಸ್ತುರಾಗ ಪತಿಸತಿ ನವ್ಯವೈಧವ್ಯದಾತಾ॥ಬಲ್ಲಾಳಸ್ಥೂಳಕುಳಪ್ರಪತನತಟಿನೀ ಪೂರರಂಹೋ...ಹಃ॥

ಸಾಲು ೧೫ ತತ್ಪುತ್ರೋಧವಳಚ್ಛತ್ರಚ್ಛಾಯಾ ವಿಶ್ರಾಂತಭೂತಳಃ। ಜೈತುಗೀಕ್ಷ್ಮಾಪತಿಶ್ಚಕ್ರೇ ಪ್ರತಾಪಂ ಹೃದಯೇದ್ವಿಷಾಂ॥

ಸಾಲು ೧೫-೧೬ ಧತ್ತೇಸ್ಯಾಸಕ ದುಂದುಭೇರಿವ ಸುತೋಯಶ್ಚಕ್ರವರ್ತಿಶ್ರಿಯಂ।... ಕೃಷ್ಣ ಇವಾತಿ ನಿರ್ಮಳ ಮಳಂಕುರ್ಬ್ಬನ್ಯಾದೂನಾಂ ಕುಲಂ॥ ಲೀಲೋನ್ಮೀಳಿತ ರಾಷ್ಟ್ರಕಂಟಕ ಚಮೂಚಕ್ರಂ ಮಹೀಂ ಪಾಲಯನ್॥ ವೇದೋದ್ಧಾರ ಪರಃ ಸಕನ್ನರ ಇತಿಖ್ಯಾತೋಜಗತ್ಯಾಂ॥

ಸಾಲು ೧೭ ಅಪಿಚ। ಆಶೀಃ ಪರಭೂಸುರಕರ ಶೇಷಾಕ್ಷತ ಶೈಳಪರಿಸರೀಯಸ್ಯ। ಪ್ರಸರಂತಿ ದಾನಧಾರಾ ಜಲಜನಿತಾ ನೂತನಾನದ್ಯಃ॥

ಸಾಲು ೧೭-೧೮ ಯಥಾರಾಮಸ್ಯ ಸೌಮಿತ್ರಿರ್ಯಥಾ ಧರ್ಮಸ್ಯ ಫಲ್ಗುಣಃ। ಯುವರಾಜೋನು ಜಸ್ತಸ್ಯ ಮಹಾದೇವಸ್ತಥಾಭವತ್॥

ಸಾಲು ೧೮-೨೦ ಸ್ವಸ್ತಿಶ್ರೀ ಪೃಥ್ವೀವಲ್ಲಭ ಮಹಾರಾಜಾಧಿರಾಜಃ ಪರಮೇಶ್ವರೋ ದ್ವಾರಾವತೀ ಪುರವರಾಧೀಶ್ವರೋ ವಿಷ್ಣುವಂ ಶೋದ್ಭವೋ ಯಾದವ ಕುಳಕಮಳಕಳಿಕಾ ವಿಕಾಸ ಭಾಸ್ಕರೋರಿರಾಯ ಜಗಜ್ಝಂಪೋ ಮಾಳವರಾಯ ಮದನ ತ್ರಿಣೇತ್ರೋ ಗುರ್ಜ್ಜರ ವಾರಣಾಂಕುಶಸ್ತೈಲಂಗರಾಯ ಸ್ಥಾಪನಾಚಾರ್ಯರಾಯನಾರಾಯಣಃ ಸಕಳಕಳಾಪಾರಾಯಣ ಇತ್ಯಾದಿ ನಾಮಾವಳಿ ವಿರಾಜಮಾನ ಭುಜಬಳಪ್ರೌಢ ಪ್ರತಾಪ ಚಕ್ರವರ್ತಿ

ಶ್ರೀ ಕನ್ನರ ಮಹೇಶ್ವರೋ ದೇವಗಿರಿ ಸ್ಕಂಧಾವಾರೇ ಸುಖಸಂಕಥಾವಿನೋದವಾಚಂದ್ರಾರ್ಕತಾರಂ ರಾಜ್ಯಂ ಕರೋತಿ॥ ತತ್ಪಾದ ಪದ್ಮೋಪಜೀವಿ

ಸಾಲು ೨೧-೨೨ ಶ್ರೀಮಾನುತ್ಸಾಹ ಧೀಮಾನಭವದಭಿಮತಶ್ಚಿಕ್ಕದೇವಾತ್ಮಜಾತಃ। ಖ್ಯಾತಃ ಪಂಚಾಂಗ ಮಂತ್ರಸ್ಥಿತಿ ನಿರುಪಮಶಕ್ತಿತ್ರಯೋದಾತ್ತಜಿತ್ತಃ॥ ಶ್ರೀಬೀಚಃ ಸಿದ್ಧವಾಚಃ ಪ್ರತಿಸೃಪರಥಿನೀಧ್ವಂಸ ಗಂಧದ್ವಿಪೇಂದ್ರಃ। ...ಪ್ರಾಜ್ಯರಾಜ್ಯೋನ್ನತಿಕರಣಪಟುಃ ಪ್ರೇಷಣಾವಾತಜಾತಃ।

ಸಾಲು ೨೨-೨೩ ಆ ಸೇತೋರಾಹಿಮಾದ್ರೇ ಭುವಮವಿಚಳಿತಂ ಕನ್ನರೋರ್ಬ್ಬೀಶ್ವರಸ್ಯ। ಸ್ವಾಯತ್ತೀಕೃತ್ಯಲಭ್ಧ್ವಾನ್ವಭವದಭಿಮತಂ ಸತ್ಯರಾಜ್ಯಾರ್ಧಪೋಷಃ॥... ಜೇಷ್ಠೋ ಗರಿಷ್ಠಃ ಸಕಲಗುಣಗಣೈರ್ಮಲ್ಲೋತ್ಫಲ್ಲಕೀರ್ತಿ। ಜ್ಯೋತ್ಸ್ನಾ ಸಂಪಾದಿತ ಶ್ರೀಕಳಿತಕುವಳಯೋಭೂದಸೌಭೂತಳೇಂದುಃ॥

ಸಾಲು ೨೩-೨೪ ಪಾಂಡ್ಯಧ್ವಂಸ ಪ್ರಚಂಡೋ ಮಳಯಮದನಕೃತ್ಕೊಂಕಣಾಂತಕ ದಂಡಃ। ಕಾವೇರೀತೀರ ದುರ್ಗಾಧಿಪವಿಪುಳಶಿರಃ ಕರ್ತ್ತನಕ್ರೂರಕಾಂಡಃ॥ ದಂಡಾಧೀಶಪ್ರಕಾಂಡಃ ಸಕಳಜನಮನೋಹಾರಿ ವಿದ್ಯಾಕರಂಡ। ಶ್ಚಾಮುಂಡಸ್ತಸ್ಯಸೂನುರ್ಜಗತಿ ಜಗದಭಿಷ್ಟಾರ್ಥಕೃದ್ದಾನಶೌಂಡಃ।

ಸಾಲು ೨೪-೨೬ ಅಪಿಚ। ಉದ್ಯವ್ಯೋದ್ಯಮ್ಯಭೂಯಃ ಪ್ರತಿನೃಪಧರಣೀಮಂಡಳೋಪರ್ಯಶೇಷಾ। ನಾಕ್ರಮ್ಯಾಕ್ರಮ್ಯ ದೇಶಾನ್ಗಜತುರಗಮಹಾರತ್ನಸೂತಿಪ್ರದೇಶಾನ್॥ ಆದಾಯಾದಾಯುಚ..... ನಮಭಿಲಷಿತಂ ಕನ್ನರೋರ್ಬ್ಬೀಶಲಕ್ಷ್ಮೀ। ಮಾನಂದ್ಯಾನಂದ್ಯ ಭಾಗ್ಯಂಸುಚಿರಮನುಭವತ್ಯೇಷಚಾಮುಂಡರಾಜಃ॥

ಸಾಲು ೨೬-೨೭ ವಾಗೀಶ್ವರೋ ಗುರುರ್ಯಸ್ಯ ಮುನೀಂದ್ರಃ ಶಿವಾಗಮಜ್ಞಾನವಿಶುದ್ಧಚೇತಃ। ಶ್ರೀ ಸೋಮನಾಥಃ ಸ್ವಕುಲಾಧಿದೇವಶ್ಚಾಮುಂಡದಂಡಾಧಿಪತಿಸ್ಸಧನ್ಯಃ॥

ಸಾಲು ೨೭-೨೮ ರೂಪಸೌಂದರ್ಯ ಸೌಭಾಗ್ಯ ಲಾವಣ್ಯಾಗುಣಭೂಷಣಾ। ಲಕ್ಕಾದೇವಿ ಸತಿರ್ಯಸ್ಯ ಲಕ್ಷ್ಮೀರಿವ ಮುರದ್ವಿಷಃ॥

ಸಾಲು ೨೮-೨೯ ಸೋಯಂ ಚಾಮುಂಡರಾಜಃ ಸುಜನಜನಮನೋವಾಂಛಿತಾಮರ್ತ್ಯಭೂಜಃ। ಸಂಪನ್ನಾಷ್ಟಾಂಗ ಭಕ್ತಿಕ್ರಮವಿಹಿತಶಿವಾಂಘ್ರಿದ್ವಯಾಂಭೋಜಪೂಜಃ॥ ನಿರ್ಮ್ಮಾಯಾನೇಕ ಧರ್ಮ್ಮಾನ್ಜಗತಿ

ಯಶಃ ಪುಣ್ಯಲಕ್ಷ್ಮ್ಯಸ್ಸಮೇತಃ। ಪ್ರಾಸಾದಾನಿ ಪ್ರಭೂತಾನ್ಯಸೌ ನಗರ ಮಸೌ ದೇವತಾನಾಂ ವಿಧತ್ತೇ ॥

ಸಾಲು ೨೯-೩೦ ರಾಮೋದಾಶರಥಿರ್ಯಥಾಕಿಳತಥಾ ತೀರ್ಥೇಷು ನಾನಾನದೀ। ತೀರೇಷು......ಪತ್ತನೇಷು ಪರಿತೋಲಿಂಗಾನಿ ಭೂಮಂಡಳೇ ॥ ಶುಭ್ರಾಭ್ರಂ ಕಷಕೂಟಕೋಟಿಷು ಮುನಿಶ್ರೇಷ್ಠೈಃ ಪ್ರತಿಷ್ಠಾಪಯ। ತ್ಯುದ್ಯತ್ಕೀರ್ತಿಲತಾಂಕುರೇಷ್ವಿವಕೃತೀ ಚಾಮುಂಡದಂಡಾಧಿಪಃ ॥

ಸಾಲು ೩೦-೩೮ ಸ್ವಸ್ತಿ ಸಮಸ್ತ ವಿಸ್ತಾರಲಕ್ಷ್ಮಿ ಸಂತೋಷಿತ ಜಗಜ್ಜನ ಹೃದಯಃ ಶರಣಾಗತ ಪ್ರತ್ಯರ್ಥಿ ಪಾರ್ಥಿವ ಸದಯಃ ಸಮದ ಹೊಯ್ಸಳ ಚಕ್ರವರ್ತಿ ಸೋಮೇಶ್ವರ ಮದಸಿವಾರಣೋ ರಾಯಶ್ರೇಷ್ಠಿ ಗಂಧವಾರಣಃ ಸದುಃಸಹ ನಿಜಪ್ರತಾಪಾತಿಶಯ ಭಾನುಮಾನ್‌ಪ್ರೇಷಣಾ ಹನುಮಾನ್ ಚತುರುಪಾಯ ಚತುರಾನನಃ ಪಂಚಾಂಗಮಂತ್ರ ಪಂಚಾನನಃ ಷಾಡ್ಗುಣ್ಯ ಷಡಾನನಃ ಶ್ರೀ ಸೋಮನಾಥ ದೇವರ ಚರಣಾರಾಧನ ಪವಿತ್ರೀಕೃತ ಕರಸರೋರುಹಃ ಸಕಲ ಸಜ್ಜನ ಕಲ್ಪರುಹೋ ಲಕ್ಷ್ಮೀದೇವಿ ಮನಸ್ಸಮ್ಮೋಹನ ಮಕರಕೇತುಃ ಶೌರ್ಯ್ಯ ಕಪಿಕೇತುಃ ಶ್ರೀಮನ್ಮಹಾಪ್ರಧಾನ ಸರ್ವ್ವಾಧಿಕಾರಿ ಚಾಮುಂಡ ದಂಡಾಧಿಪಃ ಸ್ವಕೀಯ ಯಶೋಧವಳ ಪ್ರಾಸಾದ ಮಧ್ಯೇಗಗನ ಮಹಾನೀಲಲಿಂಗಂ ಪ್ರತಿಷ್ಠಾಪ್ಯ ತಸ್ಮಿನ್ನನಾದೌ ಕುಬ್ಬುಂಬೆಟ್ಟ ಪತ್ತನೇ ತ್ರಿಕೂಟ ಪ್ರಾಸಾದೇ ಸ್ವಸ್ಯಪಿತು ರ್ಮಲ್ಲಿನಾಥಸ್ಯನಾಮ್ನಾ ಭ್ರಾತುರ್ದೇವ ಶ್ರೇಷ್ಠಿನೋ ನಾಮ್ನಾ ಚ ದ್ವಾಸಪ್ತತಿ ಶತೋತ್ತರ ಸಹಸ್ರ ಸಂಖ್ಯಾಮತೀತೇ ಶಕಸಂವತ್ಸರೇ ಸಾಧಾರಣವತ್ಸರೇ ವರ್ತ್ತಮಾನೇ ವೈಶಾಖಮಾಸಸ್ಯ ಕೃಷ್ಣಪಕ್ಷಪಂಚಮ್ಯಾಂ ಶನೈಶ್ವರವಾರೇ ಶಿವಲಿಂಗದ್ವಯಂ ಮಾಧವಪ್ರತಿಮಾಂ ಚ ಪ್ರತಿಷ್ಠಾಪ್ಯ ಹುಲಿಗೆರೇನಗರೇ ಸುಖಸಮಾವಾಸಂ ಕೃತ್ವಾ ಧರ್ಮಾರ್ಥಕಾಮಾನ್ಯಥಾಕಾಲಮನು ಸರನ್ ತದ್ಧರ್ಮ್ಮಸ್ಥಾನಂ ಲೋಕೋತ್ತಮಸ್ಯ ತಪೋಧನಸ್ಯ ಹಸ್ತೇ ಸಮರ್ಪಯಿತವ್ಯಮಿತಿ ಧಿಯಂ ಕೃತ್ವಾ।

ಸಾಲು ೩೮-೩೯ ಶ್ರೀ ಕೈಳಾಸನಿವಾಸಿನಃ ಪಶುಪತೇಃ ಶಿಷ್ಯೇಣ ದುರ್ವಾಸಸಾ। ಮೇದಿನ್ಯಾಮವತಾರಿತೇತಿವಿಮಳಃ ಶೈವಾನ್ವಯೇ.ದೇಶಿಕಃ ॥ ಲಕ್ಷ್ಮಾಧ್ಯಾನ (ಯ?) ಪದೇನ ವಿಶ್ವವಿದಿತೋ ಜಜ್ಞೇಜಗದ್ವಂದಿತ। ಸ್ತತ್ಸಂತಾನ ಸರೋಜಭಾನುರಭವಚ್ಛ್ರೀತ್ರ್ಯಂಬಕೇಶೋಗುರುಃ ॥

ಸಾಲು ೩೯-೪೦ ತಸ್ಮಾತ್ಪ್ರಸನ್ನ ಶಿವಬೋಧಕ ಚಕ್ರವರ್ತಿ। ಕ್ಷ್ಮಾಭೃ ಚಕ್ರವರ್ತಿ ಮುಕುಟಾರ್ಚ್ಚಿತ ಪಾದಪದ್ಮಃ॥ ಶೈವಾಗಮಾಂಬುನಿಧಿ ಶಿತ ಕರೋ ಬಭೂವ। ಭೂಶಂಕರಃ ಪ್ರಶಮಿತಾನತ ಜನ್ಮಭೀತಿಃ॥

ಸಾಲು ೪೦-೪೧ ನಿಖಿಳನಿಗಮ ವಿದ್ಯಾವಾರಿಧಿಸ್ತಸ್ಯಶಿಷ್ಯೋ॥ ವಿಮಳ ಶಿವಮುನೀಂದ್ರೋವರ್ತ್ತತೇಸಾಮವೇದೀ॥ ನೃಪತಿ ಮುಕುಟ ಚೂಡಾ ಚುಂಬಿತಾಂಘ್ರಿಸ್ತಪೋನಿಧಿ। ದ್ರಾವಿಡ ವಿಷಯಜನ್ಮಾನಮ್ರಜನ್ಮಾಪ ಹಾರೀ॥

ಸಾಲು ೪೧-೪೨ ವಾದಿವಾಗ್ಮಿಕವಿದಂತಿಕೇಸರಿಶ್ಶೈವಶಾಸನಪಯೋಧಿ ಚಂದ್ರಮಾಃ। ಕೀರ್ತ್ತಿಕಂದಳಿತ ವಿಶ್ವದಿಙ್ಮುಖೋ ಮೋದತೇ ವಿಮಳ ಶಂಭುದೇಶಿಕಃ॥

ಸಾಲು ೪೨-೪೩ ಸಹೃದಯ ಹೃದಯ ಸರೋಜಂ ಪ್ರವಿಶ್ಯಪುಳ ಕಾನಿಜನಯತಿ ತದಂಗೇ। ವಿಮಳಶಿವಸೂಕ್ತಿಲಕ್ಷ್ಮೀ ಸಾಹಿತ್ಯಕಳಾವಿ ಳಾಸ ನಿಜಭೂಷಾ॥

ಸಾಲು ೪೩-೪೬ ಸ್ವಸ್ತಿ ಯಮನಿಯಮಾಸನ ಪ್ರಾಣಾಯಾಮ ಪ್ರತ್ಯಾಹಾರ ಧಾರಣಾಧ್ಯಾನ ಸಮಾಧಿಸಂಪನ್ನ ಪರಮಭಟ್ಟಾರಕ ಶಿವಾ ಚಾರ್ಯ್ಯ ನಿಖಿಳನಿಗಮವಿದ್ಯಾ ಮಹಾರ್ಣ್ಣವ ಕರ್ಣ್ಣಧಾರ ವಾದಿವಾ ಗ್ಮಿಕವಿ ಚಕ್ರವರ್ತ್ತಿ ಮಾಳವೇಂದ್ರ ಪ್ರಮುಖ ಚಕ್ರವರ್ತ್ತಿ ಚಕ್ರವಾಳ ಕಿರೀಟಕೋಟಿಕ್ರೀಡಾ ದುರ್ಲ್ಲಳಿತ ಪದಾಂಭೋರುಹಃ ಪ್ರಬಳತಪಃ ಪ್ರ ಕರ್ಷಪ್ರಶಮಿತ ಪ್ರಣತ ದುರಿತ ನಿವಹಃ ಮಹಾದೇಶಿಕೋ ವಿಮಳಶಿವ ಮುನೀಂದ್ರಃ ಸಕಳಭೂತಳೇ ತಪೋವಿದ್ಯಾವಿಭವೈರ್ನಿರುಪಮ ಇತಿ ನಿಶ್ಚಿತ್ಯತಸ್ಮೈ ಶ್ರೀ ವಿಮಲಶಿವಾಯ ದಂಡನಾಥಶ್ಚಾಮುಂಡಃ ಕ್ರಮಯುಗ ಯೋರ್ನ್ನಿಪತ್ಯ ಭಕ್ತ್ಯಾಸ್ಥಾನಂ ತತ್ಪರಮಮುದಾದ್ವಿತೀರ್ಣ್ಣಧಾರೋ ನಿಬಾ ಧಂ ಸಕಳನೃಪೈಶ್ಚ ವಂದನೀಯಂ।

ಸಾಲು ೪೭-೫೫ ಶ್ರೀ ಸ್ವಸ್ತಿ ಶ್ರೀ ಶಕವರ್ಷ ೧೧೬೭ ನೇಯ ವಿಶ್ವಾ ವಸು ಸಂವತ್ಸರದ ಪುಷ್ಯ ಬಹುಳ ೮ ಸೋ. ಉತ್ತರಾಯಣ ಸಂಕ್ರ ಮಣ ಪುಣ್ಯದಿನದಲು ಆದಿಸೆಟ್ಟಿಯ ತಂದೆಯಪ್ಪ ಶ್ರೀಮನ್ಮಹಾಪ್ರಧಾನಂ ಮಲ್ಲಿಸೆಟ್ಟಿಯರು ಮುನ್ನಂ ಶ್ರೀ ಮದನಾದಿಯ ಬಣಂಜುಪಟ್ಟಣಂ ಕುರುಂ ಬೆಟ್ಟದಲು ಶ್ರೀಮನ್ಮಹಾಪ್ರಭು ಮೂಲಿಗ ಹೊಲ್ಲಿಗಾವುಂಡ ಮುಖ್ಯವಾಗಿ

ಮೂಲಸ್ಥಾನಾಚಾರ್ಯ್ಯರ ಸಮಸ್ತ ಶಾಸನಿಗರ ಮುಂದಿಟ್ಟುಕೊಂಡು ಮಾಡಿದ ಬ್ರಹ್ಮಾಪುರಿಯ ಹನ್ನೆರಡು ವೃತ್ತಿಯ ಬ್ರಾಹ್ಮಣರ್ಗ್ಗೆ ಧಾರಾಪೂರ್ಬಕವಾಗಿ ಕೊಟ್ಟ ವಾಮನಮುದ್ರೆಯ ನಾಲ್ಕುಂ ಕಲ್ಲೊಳಗಣ ನಿವೇಶನದೊಳಗೆ ತಮ್ಮ ಹನ್ನೆರಡು ಮನೆಯಿಂ ಮಾಡಲು...ಕ್ಕಂ ಬಟ್ಟೆಗೆಂದು ರಾಜಹಸ್ತದ ಇಕ್ಕೈವರೆಯಿಂ ಕಳದು ಉಳಿದ ನಿವೇಶನವಂ ಆ ಬ್ರಾಹ್ಮಣರು ಆ ಮಲ್ಲೇಶ್ವರ ದೇವೇಶ್ವರ ಮಾಧವ ದೇವರ್ಗ್ಗೆ ಕೊಟ್ಟರು। ಮತ್ತಮಾ ದೇವರಾಚಾರ್ಯ್ಯರ ಮಠಕ್ಕೆ ಆ ಶಾಸನಿಗರು ಆ ಬ್ರಹ್ಮಾಪುರಿಯ ದೇವಾಲಯದ ಪೌಳಿಯ ನೀಳದ। ೨೫ ಹಸ್ತದ ಅಗಳದ। ನಿವೇಶನವಂ ಪೌಳಿವಿಡಿದು ತೆಂಕದೆಸೆಯಲು ಕೊಟ್ಟರು। ಮತ್ತಮಾ ಬ್ರಹ್ಮಾಪುರಿಯ ಪಡುವಲು ದಾರಿಯಿಂ ತೆಂಕಲು ಆ ದೇವರ್ಗ್ಗೆಯಂಗಡಿಗೆ ಲಿಂಗಮುದ್ರೆಯ ಕಲ್ಲನಡಿಸಿಕೊಟ್ಟರ್। ಮತ್ತಮಾ ದೇವರ್ಗ್ಗೆ ಆ ಶಾಸನಿಗರು......ಮೂಡಲು ಬಾಗವಾಡಿಯ ಬಟ್ಟೆಯಿಂ ಪಡುವಲು ಕೊಟ್ಟ ತೊಟ ೧ ಆ ಮಠಕ್ಕೆ ತೋಟ ೧ ಬಣಬೆಗೆ ಕೊಟ್ಟ ನಿವೇಶನ ೧ ಮತ್ತಮಾ ಶಾಸನಿಗರು ದೇವರ್ಗ್ಗೆ ಕೊಟ್ಟ ಗ......

ಸಾಲು ೫೭-೬೬ ಸ್ವಸ್ತಿ ಸಮಸ್ತಭುವನವಿಖ್ಯಾತ ಪಂಚಶತವೀರಶಾಸನಲಬ್ಧಾನೇಕ ಗುಣಗಣಾಳಂಕೃತ ಸತ್ಯಶೌಚಾಚಾರ ಚರಿತ್ರನಯವಿನಯ ವಿಜ್ಞಾನ ವೀರಾವತಾರ ವೀರಬಣಂಜು ಸಮಯಧರ್ಮ್ಮಪ್ರತಿಪಾಳನ ವಿಶುದ್ಧ-ಗುಡ್ಡಧ್ವಜ ವಿರಾಜಿತಾನೂನ ಸಾಹಸೋತ್ತುಂಗರುಂ ಪುಣ್ಯಪ್ರಸಂಗರುಂ। ಅಘುಪಟ್ಟಿ ಗುರೂತ್ಪತ್ತಿ ಬಲದೇವ ವಾಸುದೇವ ಖಂಡಳಿ ಮೂಲಭದ್ರ ವಂಶೋದ್ಭವರುಂ। ಆಹಿಚ್ಛತ್ರಪುರೀಲಲನಾಲಲಾಟ ತಿಳಕರುಂ। ಹರಿವಿರಿಂಚಿ ಪಂಚಾನನ ಜಿನೇಂದ್ರ ಪೂಜಾನಿರತರುಂ ಶ್ರೀಪದ್ಮಾವತೀದೇವೀ ಲಬ್ಧವರ ಪ್ರಸಾದರುಂ ವೀರನಾರಾಯಣದೇವ ಚರಣಸ್ಮರಣ ಪರಿಣತಾಂತಃಕರಣರುಮಪ್ಪ ಶ್ರೀಮದಯ್ಯಾವಳೆಯ ಅಯ್ನೂರ್ಬ್ಬಸ್ವಾಮಿಗಳು ಮುಖ್ಯವಾಗಿ ಸಮಸ್ತ ಮುಮ್ಮುರಿ ದಂಡಂಗಳುಂ ಏಳುವರೆ ಹನ್ನೊಂದುವರೆಯ ಉಭಯ ನಾನಾದೇಸಿಗಳುಂ ಚತುಃಸಮುದ್ರಮುದ್ರಿತಮಪ್ಪ ಭೂಮಂಡಳದ ಸಕಲಸಾಮ್ಯವಂತರುಂ ಸಮಯಚಕ್ರವರ್ತ್ತಿ ಕಲಿದೇವಸೆಟ್ಟಿಯರುಂ ಕೂಂಡಿ ಮೂರುಂಸಾಸಿರದ ಕುರುಂಬೆಟ್ಟಕಂಪಣದ ವೊದಲ ಅಸಾದಿಯ ಬಣಂಜುವಟ್ಟಣಂ ಕುರುಂಬೆಟ್ಟದಯ...... ವಜ್ರಬೈಸಣಿಗೆಯಾಗಿ ಕುಳ್ಳಿದ್ದು ತಮ್ಮ ಸಮಯಾಚಾರವ

ತೇಜವುನುದ್ಧರಿಸುವ ರಾಯಶ್ರೇಷ್ಠಿಯಪ್ಪ ಚಾವುುಂಡರಾಜವಮಾಡಿಸಿದ ತ್ರಿಕೂಟ ಪ್ರಾಸಾದಕ್ಕೆ ಆ ಸ್ಥಳದ ನೂರುಂಬಲದ ಗಾವುಂಡುಗಳುಂ ಸಾವ್ಯ ವಂತರುವುಂ ವುುಂಡಿಟ್ಟುಕೊಂಡು ಏಳುವರೆ ಹನ್ನೊಂದುವರೆಯ ಒಳಗೆ ಜಲಮಾರ್ಗ್ಗ ಪಾದಮಾರ್ಗ್ಗದಲು ಆನೆ ಮಾಣಿಕವ ಹೇರಿದಡಂ ಸುಂಕ ವಿಲ್ಲೆಂದು ಕೊಟ್ಟ ಪರಿಹಾರದೆತ್ತುಕೋಣ ಮೂವತ್ತು ಇಪ್ಪತ್ತು ಕಾಕ ತಿಯ ಬಾಡದಲು ಶ್ರೀ ಮಲ್ಲೇಶ್ವರ ದೇವರ ನಿವೇದ್ಯಕ್ಕೆ ಕೊಟ್ಟಗದ್ದೆ ಪನ್ನೆರಡು ಮತ್ತರು ಕುರುಂಬೆಟ್ಟದ ಮೂಲಿಗ ಹೊಲ್ಲಿಗೌಡ ಶ್ರೀ ಮಲ್ಲೇಶ್ವರ ದೇವರ ನಂದಾದೀವಿಗೆಗೆ ತಮ್ಮ ಮಾನ್ಯದೊಳಗೆ ಕೊಟ್ಟ ಹರಳ ಕೆಯ್ಯಕಂಭ ೧೦೦ ಬಣಜಿ ೧ ನಾಗರಸರು ಕಪಿಲಭವದೇವರಿಗೆ ಭಿಕ್ಷೆಯಕೆ ನೂತಿಯಲಿ ಕೊಟ್ಟ ಕಂಭ ೨೦೦

## ಸಂಸ್ಕೃತ ಭಾಗದ ಕನ್ನಡ ಅನುವಾದವು.

ಸಾಲು ೧ ಓಂ ಶಿವನಿಗೆ ನಮಸ್ಕಾರವು ಮೂರು ಲೋಕಗಳೆಂಬ ಪಟ್ಟಣಗಳ ಆರಂಭಕ್ಕೆ ಮೂಲಸ್ತಂಭನೂ ಎತ್ತರವಾದ ಶಿರಸ್ಸನ್ನು ಚುಂಬಿಸುವ ಚಂದ್ರನೆಂಬ ಚಾಮರದಿಂದ ಶೋಭಿಸುವವನೂ ಆದ ಶಂಭುವಿಗೆ ನಮಸ್ಕಾರವು.

ಸಾಲು ೨-೩ ಯಾವನ ದಾಡೆಗಳ ಮೇಲೆ ಕೋರೆ ಹಲ್ಲಿನ ಪ್ರಕಾಶವು ಸ್ಥಿರವಾಗಿರುವದೋ, ಯಾವನು ಹಿರಣ್ಯಾಕ್ಷನ ಮುಟ್ಟುವಿಕೆಯಿಂದುಂಟಾದ ಪಾಪವನ್ನು ತೊಳಕೊಳ್ಳಬೇಕೆಂಬ ಬುದ್ಧಿಯಿಂದ ತುಂಬಾ ತುಂಬಿದ ಆಕಾಶಗಂಗೆಯ ಪ್ರವಾಹದಲ್ಲಿ ವಿಹರಿಸುವನೋ ಅಂಥ ವರಾಹರೂಪಿಯಾದ ಮತ್ತು ಯತಿಗಳಿಂದ ಸ್ತುತಿಸಲ್ಪಡುವ ವೈಭವವುಳ್ಳ ವಿಷ್ಣುವಿಗೆ ಜಯವಾಗಲಿ.

ಸಾಲು ೪-೫ ಕಲ್ಪಪರ್ಯಂತರವೂ ಲಕ್ಷ್ಮಿಯಿಂದೊಡಗೂಡಿದ ಆಲ್ಹಾದಕರವಾದ ಚಂದ್ರನಿಂದ ಯುಕ್ತವಾದ, ನಿತ್ಯಪ್ರೇಮಪ್ರಣಯದ ಮೂರ್ತಿಗಳಾದ, ತಮ್ಮ ಶ್ರೀಪಾದಗಳಿಗೆ ಎರಗಿದ ಜನರ ತಾಪತ್ರಯವನ್ನು ನಾಶಮಾಡುವಂಥ ಮತ್ತು ವಿಶ್ವದ ಉತ್ಪತ್ತಿಗೆ ಕಾರಣರಾದ ಪುಣ್ಯಕರ ಜೋಡಾದ ಗಿರಿಜಾಶಂಕರ ಸಂಯೋಗವು ಜಯವನ್ನೀಯಲಿ.

ಸಾಲು ೫-೬ ವಿಶ್ವದಲ್ಲೆಲ್ಲ ಅತ್ಯುತ್ತಮವಾದ ಭೂಲೋಕವೆಂಬ ಪಟ್ಟಣದ ಸುತ್ತು ಗೋಡೆಯೋಪಾದಿಯಲ್ಲಿರುವ ದೊಡ್ಡ ದೊಡ್ಡ ಪರ್ವತ

ಪ್ರಾಯವಾದ ತೆರೆಗಳ ಆಚೆಗೆ ಕಂದಕದಂತೆ ಒಪ್ಪುವ ಮಹಾಸಾಗರವುಂಟು. ಆ ಭೂಲೋಕದ ಮಧ್ಯದಲ್ಲಿ ಯಾವದಕ್ಕೂ ಹೋಲಿಸಲು ಬಾರದಂಥ ಅತಿ ಸುಂದರವಾದ ದೇವತೆಗಳ ಅರಮನೆಯಂತಿರುವ ಮೇರು ಪರ್ವತವು ಶೋಭಿಸುವದು. ಅದರ ದಕ್ಷಿಣದಿಕ್ಕಿಗೆ ಆಕೃತಿಯಲ್ಲಿ ಹಳೇ ನೀರಲಗಿಡವನ್ನು ಹೋಲುವಂಥ ಒಂದು ಸುಂದರವಾದ ದ್ವೀಪವುಂಟು

ಸಾಲು ೭-೮ ಆ ಜಂಬೂದ್ವೀಪದ ಮಧ್ಯದಲ್ಲಿ ಆನಂದಕ್ಕೆ ಆಗರವಾದ ಭಾರತವು ಶೋಭಿಸುವದು. ಅಲ್ಲಿ ಸುಖವನ್ನು ಹೆಚ್ಚಿಸುವಂಥ ಮತ್ತು ಸಕಲಸಂಪತ್ತಿನಿಂದೊಡಗೂಡಿದ ಮನೆಗಳುಳ್ಳ ಕುಂತಳವೆಂಬ ದೇಶವುಂಟು. ಅಲ್ಲಿರುವ ಎಲ್ಲ ದೇಶಗಳ ಪುಣ್ಯವನ್ನು ಒಟ್ಟುಗೂಡಿಸಿ ಇಟ್ಟಸ್ಥಾನವೋ ಎನೋ ಎಂಬುವಂಥ ಜಗತ್ತಿಗೆ ಮಂಡನಪ್ರಾಯವಾದ ದಿಗಂತಖ್ಯಾತ ಸಂಪತ್ತುಳ್ಳ ಕೂಂಡಿದೇಶಕ್ಕೆ ಜಯವಾಗಲಿ.

ಸಾಲು ೮-೧೦ ಆ ದೇಶದಲ್ಲಿ ನಿವಾಸಿಗಳ ಐಶ್ವರ್ಯದ ಆಗರವಾದ ಅನೇಕ ತುಂಬಿದ ಕೆರೆ ಬಾವಿ ಸರೋವರಗಳಿಂದ ಶೋಭಿಸುವ, ಸುತ್ತಲೂ ಬಳ್ಳಿ ಎಲೆ ಹಣ್ಣುಗಳಿಂದ ತುಂಬಿದ ಗಿಡಗಳಿಂದ ರಮ್ಯವಾದ ಶ್ರೀಮಂತರಿಗೆ ಸ್ಥಾನವಾದ, ಮೂವತ್ತು ಊರುಗಳಲ್ಲಿ ಮೊದಲನೆಯದಾದ...... ಗಿರಿಯೆಂಬ ಹೆಸರುಳ್ಳ ಊರು ಉಂಟು.

ಸಾಲು ೧೦-೧೧ ಆ ಊರಿಗೆ ದೇಶಭಾಷೆಯಲ್ಲಿ ಕುರುಬೆಟ್ಟವೆಂದು ಹೆಸರುಂಟು. ಅದರಲ್ಲಿ ......ಸುರಾಲಯಗಳ ಕಲಶಗಳೆಂದು ಭ್ರಾಂತಿಯನ್ನು ಹುಟ್ಟಿಸುವವು.

ಸಾಲು ೧೧-೧೨ ಅರಸುಗಳ ಕುಲಕ್ಕೆ ಆಲ್ಹಾದಕರವಾದ ಯಾದವ ವಂಶವು ಕೃಷ್ಣನ ಹುಟ್ಟುವಿಕೆಯಿಂದ ಹೆಚ್ಚು ಶೋಭಾಯಮಾನವಾಯಿತು. ಆ ವಂಶದಲ್ಲಿ ಕ್ಷತ್ರಧರ್ಮಕ್ಕೆ ಆಗರನೂ ಸಮರಾಂಗಣವನ್ನು ದಾಟುವುದರಲ್ಲಿ ರಾಮನೂ ಆದ ಭಿಲ್ಲಮನೆಂಬ ಸಾರ್ವಭೌಮನು ಹುಟ್ಟಿದನು.

ಸಾಲು ೧೨-೧೩ ಅವನ ಮಗನು ವಿನಯಶೀಲನಾದ ಜೈತುಗಿ ಭೂಪಾಲನು. ಇವನು ನಾಲ್ಕು ಸಮುದ್ರದಿಂದ ಬಳಿಸಲ್ಪಟ್ಟ ಭೂಮಂಡಲವನ್ನು ಸ್ವಾಧೀನಪಡಿಸಿಕೊಂಡವನು. ಇವನ ಮಗನು ವಿಷ್ಣುಪಾದ ಕವಲಗಳ ಪೂಜಾಫಲದಿಂದುಂಟಾದ ಮತ್ತು ಅರಸರುಗಳ ಸಮೂಹದಿಂದ ಪೂಜಿಸಲ್ಪಡುವ ಮಹಾಸಿಂಹಾಸನವನ್ನು ಏರಿದ ಸಿಂಹಣನು

ಸಾಲು ೧೩-೧೫ ಈ ಸಿಂಹಣನು ಭೋಜನೆಂಬ ಕಮಲಕ್ಕೆ ಚಂದ್ರನಾದವನು. ಅರ್ಜುನನೆಂಬ ವನಕ್ಕೆ ಕೊಡಲಿಯಾದವನು, ಗುರ್ಜರರೆಂಬ ಮೇಘಗಳಿಗೆ ಬಿರುಗಾಳಿ ಸ್ವರೂಪನು, ಮಗಧವೆಂಬ ಪರ್ವತಕ್ಕೆ ವಜ್ರಾಯುಧಸ್ವರೂಪನು, ಚೋಳರೆಂಬ ರಾವಣನಿಗೆ ರಾಮನಾದವನು. ಗೌಡರೆಂಬ ವಿಷಕ್ಕೆ ಶಿವನಾದವನು, ತುರಗಪತಿಯ ಹೆಂಡರಿಗೆ ಹೊಸ ವೈಧವ್ಯವನ್ನುಂಟುಮಾಡುವವನು, ಬಲ್ಲಾಳನೆಂಬ ನದಿಯ ದಂಡೆಯ ಮೇಲಿರುವ ದೊಡ್ಡ ಗಿಡವನ್ನು ಬೇರು ಸಹಿತ ಕೆಡಹುವ ಪ್ರವಾಹ ಸ್ವರೂಪನು.

ಸಾಲು ೧೫. ಅವನ ಮಗನು ಶ್ವೇತಛತ್ರದ ನೆರಳಲ್ಲಿ ವಿಶ್ರಾಂತಿಯನ್ನು ಹೊಂದುವ ಭೂಮಿಯುಳ್ಳ ಮತ್ತು ವೈರಿಗಳ ಹೃದಯದಲ್ಲಿ ಬಹಳವಾದ ತಾಪವನ್ನುಂಟುಮಾಡುವ ಜೈತುಗಿ ಭೂಪಾಲನು.

ಸಾಲು ೧೫-೧೬. ಆತನ ಮಗನು ಜಗತ್ತಿನಲ್ಲಿ ಪ್ರಸಿದ್ಧನಾದ ಕನ್ನರನು. ಇವನು ಶ್ರೀಕೃಷ್ಣನಂತೆ ವೇದೋದ್ಧಾರಪರನೂ ನಿರ್ಮಲವಾದ ಯಾದವ ವಂಶಕ್ಕೆ ಅಲಂಕಾರಪ್ರಾಯನೂ ಆಗಿರುವನು. ಲೀಲೆಯಿಂದಲೇ ರಾಷ್ಟ್ರಕ್ಕೆ ಕಂಟಕವಾದ ಚಮೂ ಚಕ್ರವನ್ನು ನಾಶಮಾಡಿ ಭೂಮಿಯನ್ನು ರಕ್ಷಿಸುವವನು.

ಸಾಲು ೧೭ ಇವನು ದಾನ ಕೊಟ್ಟು ಬಿಟ್ಟ ಧಾರೆಗಳ ನೀರಿನಿಂದ ಹುಟ್ಟಿದ ಹೊಸ ನದಿಗಳು ಬ್ರಾಹ್ಮಣರ ಆಶೀರ್ವಾದದ ಅಕ್ಷತೆಗಳ ಪರ್ವತಗಳೊಳಗಿಂದ ಹರಿಯುತ್ತವೆ.

ಸಾಲು ೧೭-೧೮ ರಾಮನಿಗೆ ಹೇಗೆ ಲಕ್ಷ್ಮಣನೋ, ಧರ್ಮನಿಗೆ ಹೇಗೆ ಅರ್ಜುನನೋ ಹಾಗೆ ಯುವರಾಜನಾದ ಮಹಾದೇವನು ಈತನಿಗೆ ತಮ್ಮನಾಗಿದ್ದನು.

ಸಾಲು ೧೮-೨೦ ಕನ್ನರನ ಬಿರುದಾವಳಿ ಕನ್ನರನು ಸುಖದಿಂದ ದೇವಗಿರಿ ರಾಜಧಾನಿಯಲ್ಲಿ ರಾಜ್ಯವಾಳುತ್ತಿದ್ದನು.

ಸಾಲು ೨೧-೨೨ ಉತ್ಸಾಹ ಬುದ್ಧಿ ಮೊದಲಾದವುಗಳಿಂದೊಡಗೂಡಿದ ಚಿಕ್ಕದೇವನ ಯೋಗ್ಯಪುತ್ರನು ಪ್ರಸಿದ್ಧನಾದ ಬೀಚನೆಂಬವನು. ಆತನು ಪಂಚಾಂಗ ಮಂತ್ರಗಳಲ್ಲಿಯೂ ಅದನುಪಮವಾ ಶಕ್ತಿತ್ರಯಗಳಲ್ಲಿಯೂ ಉದಾತ್ತ ಚಿತ್ತನು. ವಾಕ್ಸಿದ್ಧಿಯುಳ್ಳವನು. ವೈರಿಗಳ ದಂಡನ್ನು

ನಾಶ ಮಾಡುವದರಲ್ಲಿ ಗಂಧ ದ್ವೀಪಕ್ಕೆ ಸರಿಯಾದವನು. ಪೂರ್ವರಾಜ್ಯದುನ್ನತಿಯನ್ನು ಮಾಡುವುದರಲ್ಲಿ ನಿಪುಣನು. ಪ್ರೇಕ್ಷಣಾವಾತಜಾತನು.

ಸಾಲು ೨೨-೨೩ ಹಿಮಾಲಯದಿಂದ ರಾಮೇಶ್ವರದ ವರೆಗಿರುವ ಎಲ್ಲ ಭೂಮಿಯನ್ನು ಕನ್ನರ ಸಾರ್ವಭೌಮನಿಗಾಗಿ ಗೆದ್ದು ಸ್ವಾಧೀನಪಡಿಸಿಕೊಂಡು ಆತನ ಅಭಿಮತದಂತೆ ಆತನ ಅರ್ಧರಾಜ್ಯವನ್ನು ಅನುಭವಿಸುವವನು. ಬೀಚನ ಮಗನಾದ ಮಲ್ಲನು ಹಿರಿಯನು ದೊಡ್ಡವನು. ಎಲ್ಲ ಗುಣಗಳಿಂದ ಕೂಡಿಕೊಂಡವನು. ಆತನು ತನ್ನ ಕೀರ್ತಿಯೆಂಬ ಕುವಲಯವನ್ನು ಅರಳಿಸುವ ಬೆಳದಿಂಗಳಿಂದೊಡಗೂಡಿದ ಭೂಲೋಕದ ಚಂದ್ರನು.

ಸಾಲು ೨೩-೨೫ ಪಾಂಡ್ಯರನ್ನು ನಾಶ ಮಾಡಿದವನೂ, ಮಲಯಾಳರಿಗೆ ವೈರಿಯೂ, ಕೊಂಕಣಿಗರಿಗೆ ಯಮನ ದಂಡಕ್ಕೆ ಸರಿಯಾದವನೂ, ಕಾವೇರಿಯ ಮೇಲಿರುವ ದುರ್ಗಗಳ ಒಡೆಯರ ಶಿರವನ್ನು ಕತ್ತರಿಸುವವನೂ, ವಿದ್ಯಾಕರಂಡನೂ, ಆದ ಚಾಮುಂಡನು ಆತನ ಮಗನು ಚಾಮುಂಡನು ಬಲು ದಾನಶಾಲಿಯು. ಜಗತ್ತಿನೊಳಗಿನ ಜನರ ಅಭೀಷ್ಟವನ್ನು ಪೂರೈಸುವದರಲ್ಲಿ ದಕ್ಷನು.

ಸಾಲು ೨೫-೨೬ ಈ ಚಾಮುಂಡರಾಜನು ವೈರಿ ರಾಜರ ಮಂಡಲಗಳನ್ನು ಪುನಃ ಪುನಃ ಮುರಿದು ಅವರ ದೇಶ ಗಜ ಕುದುರೆ ಮಹಾರತ್ನ ಮೊದಲಾದವುಗಳುಳ್ಳ ಪ್ರದೇಶಗಳನ್ನು ಆಕ್ರಮಿಸಿ ಅವುಗಳೊಳಗಿನ ಉತ್ಪನ್ನವನ್ನು ದೊರಕಿಸಿ ಕನ್ನರರಾಜ್ಯಲಕ್ಷ್ಮಿಯನ್ನು ಆನಂದಿಸಿ ಅಭಿಲಷಿತವಾದ ಭಾಗ್ಯವನ್ನು ಚಿರಕಾಲ ಅನುಭವಿಸುವನು.

ಸಾಲು ೨೬-೨೭ ಯಾವನಿಗೆ ಶಿವಾಗಮ ಜ್ಞಾನದಿಂದ ಪವಿತ್ರವಾದ ಚೇತಸ್ಸುಳ್ಳ ವಾಗೀಶ್ವರ ಮುನೀಂದ್ರನೇ ಗುರುವಾಗಿರುವನೋ ಯಾವನ ಸ್ವಕುಲದ ಅಧಿದೇವತೆಯು ಸೋಮನಾಥನೋ ಅಂಥ ಚಾಮುಂಡ ದಂಡಾಧಿಪನೇ ಧನ್ಯನು.

ಸಾಲು ೨೭-೨೮ ವಿಷ್ಣುವಿಗೆ ಹೇಗೆ ಲಕ್ಷ್ಮಿಯೋ ಹಾಗೆ ರೂಪ, ಸೌಂದರ್ಯ, ಸೌಭಾಗ್ಯ ಲಾವಣ್ಯ, ಗುಣ ಮೊದಲಾದವುಗಳೇ ಭೂಷಣಗಳಾದ ಲಕ್ಕಾದೇವಿಯು ಆತನ ಸತಿಯು.

ಸಾಲು ೨೮ ೨೯ ಸಜ್ಜನರ ಇಷ್ಟಾರ್ಥವನ್ನು ಪೂರೈಸುವದರಲ್ಲಿ ಕಲ್ಪತರುವನ್ನು ಹೋಲುವವನೂ, ಅಷ್ಟಾಂಗಭಕ್ತಿಕ್ರಮವಿಹಿತ ಶಿವಪಾದಕಮಲಪೂಜಕನೂ ಆದ ಆ ಚಾಮುಂಡ ರಾಜನು ಅನೇಕ ಧರ್ಮ ಕೃತಿಗಳನ್ನು ಮಾಡಿ ಜಗತ್ತಿನಲ್ಲಿ ಕೀರ್ತಿಯನ್ನೂ ಪುಣ್ಯವನ್ನೂ ಹೊಂದಿ ಅನೇಕ ಆರಮನೆಗಳನ್ನೂ ದೇವಾಲಯಗಳನ್ನೂ ಪಟ್ಟಣದ ಸುತ್ತುಮುತ್ತ ಕಟ್ಟಿಸಿದನು.

ಸಾಲು ೨೯-೩೦ ದಶರಥನ ಮಗನಾದ ರಾಮನು ನಾನಾ ತೀರ್ಥ ಕ್ಷೇತ್ರಗಳಲ್ಲಿ ಲಿಂಗಗಳನ್ನು ಸ್ಥಾಪಿಸಿದಂತೆ ಚಾಮುಂಡನು ತನ್ನ ಬೆಳೆಯುವ ಕೀರ್ತಿಲತೆಯ ಅಂಕುರದ ತುದಿಯಂತೆ ಇರ್ಪ ಶುಭ್ರಾಭ್ರಂಕಂಷಕೂಟಕೋಟಿಗಳಲ್ಲಿ ಲಿಂಗಗಳನ್ನು ಶ್ರೇಷ್ಠರಾದ ಮುನಿಗಳಿಂದ ಸ್ಥಾಪಿಸಿದನು.

ಸಾಲು. ೩೦-೩೮ ಸ್ವಸ್ತಿ ಸಮಸ್ತ ವಿಸ್ತಾರವಾದ ಲಕ್ಷ್ಮಿಯಿಂದ ಜಗತ್ತಿನ ಜನರನ್ನು ಸಂತೋಷಪಡಿಸುವವನೂ, ಶರಣಾಗತರಾಗಿ ಬಂದ ವೈರಿಭೂಪಾಲರಿಗೆ ದಯವನ್ನು ತೋರಿಸುವವನೂ, ಗರ್ವಿಷ್ಠನಾದ ಹೊಯ್ಸಳ ಚಕ್ರವರ್ತಿ ಸೋಮೇಶ್ವರನ ಮದವನ್ನು ನಿವಾರಿಸುವವನೂ, ರಾಜಶ್ರೇಷ್ಠಿಯೂ, ಸಹಿಸಲಸಾಧ್ಯವಾದ ಪ್ರತಾಪವನ್ನು ಹರಡಿಸುವ ಸೂರ್ಯನೂ, ಒಡೆಯನು ಹೇಳಿದ ಕೆಲಸವನ್ನು ಮಾಡುವುದರಲ್ಲಿ ಹನುಮಂತನೂ, ನಾಲ್ಕು ಉಪಾಯಗಳಲ್ಲಿ ಬ್ರಹ್ಮನಿಗೆ ಸಮಾನನೂ, ಪಂಚಾಂಗ ಮಂತ್ರಗಳಲ್ಲಿ ಪಂಚಾನನಿಗೆ ಸಮಾನನೂ, ಷಡ್ಗುಣಗಳಲ್ಲಿ ಷಡಾನನಿಗೆ ಸಮಾನನೂ, ಶ್ರೀಸೋಮನಾಥ ದೇವರ ಚರಣಕಮಲಗಳನ್ನು ತೊಳೆಯುವದರಿಂದ ಪವಿತ್ರವಾದ ಕೈಗಳುಳ್ಳವನೂ, ಸಕಲ ಸಜ್ಜನರಿಗೆ ಕಲ್ಪವೃಕ್ಷಸ್ವರೂಪನೂ, ಲಕ್ಷ್ಮಿದೇವಿಯ ಮನಸ್ಸನ್ನು ಮೋಹಿಸುವದರಲ್ಲಿ ಕಾಮನೂ, ಕಾರ್ಯದಲ್ಲಿ ಅರ್ಜುನನೂ ಇದ ಶ್ರೀಮನ್ಮಹಾಪ್ರಧಾನಿ ಸರ್ವಾಧಿಕಾರಿ ಚಾಮುಂಡ ದಂಡಾಧಿಪನು ತನ್ನ ಕೀರ್ತಿಯಂತೆ ಶುಭ್ರವಾದ ಅರಮನೆಯ ಮಧ್ಯದಲ್ಲಿ ಗಗನಮಹಾನೀಲ ಲಿಂಗವನ್ನು ಪ್ರತಿಷ್ಠಾಪಿಸಿ ಅನಾದಿಯಿಂದ ಬಂದ ಪಟ್ಟಣವಾದ ಕುರುಂಬೆಟ್ಟದ ತ್ರಿಕೂಟಪ್ರಸಾದದಲ್ಲಿ ತನ್ನ ತಂದೆಯಾದ ಮಲ್ಲಿನಾಥನ ಮತ್ತು ಅಣ್ಣನಾದ ದೇವಶ್ರೇಷ್ಠಿಯ ಹೆಸರಿನಿಂದ ಶಕ ಒಂದು ಸಾವಿರದ ಎಪ್ಪತ್ತೆರಡನೇಯ ಸಾಧಾರಣ ಸಂವತ್ಸರದ ವೈಶಾಖ ಮಾಸದ ಕೃಷ್ಣಪಕ್ಷದ ಐದನೇಯ ದಿನ ಶನಿವಾರ ಎರಡು

ಶಿವಲಿಂಗಗಳನ್ನೂ ಒಂದು ಮಾಧವನ ಪ್ರತಿಮೆಯನ್ನೂ ಪ್ರತಿಷ್ಠಾಪಿಸಿ ಪುಲಿಗೆರೆ ನಗರದಲ್ಲಿ ಸುಖವಾಗಿದ್ದು ಧರ್ಮಾರ್ಥ ಕಾಮವನ್ನು ಯಥಾ ಕಾಲಮನುಸರಿಸುತ್ತಿದ್ದು ಆ ಧರ್ಮಸ್ಥಾನವನ್ನು ಲೋಕೋತ್ತಮನಾದ ತಪೋಧನನ ಕೈಯಲ್ಲಿ ಒಪ್ಪಿಸಬೇಕೆಂದು ಮನಸ್ಸು ಮಾಡಿ.

ಸಾಲು ೩೮-೩೯ ಕೈಲಾಸನಿವಾಸಿಯಾದ ಶ್ರೀ ಪಶುಪತಿಯ ಶಿಷ್ಯನಾದ ದುರ್ವಾಸನಿಂದ ಭೂಮಿಯಲ್ಲಿ ಸ್ಥಾಪಿಸಲ್ಪಟ್ಟ ಶೈವಾನ್ವಯದಲ್ಲಿ ಲಕ್ಷ್ಯಾಧ್ಯಾನಪದದಿಂದ ವಿಶ್ವವಿದಿತನೂ ಜಗದ್ವಂದ್ಯನೂ ಆದ ವಿಮಳ ದೇಶಿಕನು ಹುಟ್ಟಿದನು. ಆತನ ಸಂತಾನವೆಂಬ ಕಮಲವನ್ನು ಅರಳಿಸುವದರಲ್ಲಿ ಸೂರ್ಯನಾದ ತ್ರ್ಯಂಬಕೇಶ ಗುರುವು ಆದನು.

ಸಾಲು. ೩೯-೪೦ ಅವನಿಂದ ಪ್ರಸನ್ನ ಶಿವಬೋಧಕ ಚಕ್ರವರ್ತಿಯೂ ಭೂಮಂಡಳದ ಚಕ್ರವರ್ತಿಗಳ ಮುಕುಟಾರ್ಚಿತ ಪಾದಪದ್ಮನೂ, ಶೈವಾಗಮವೆಂಬ ಸಮುದ್ರಕ್ಕೆ ಚಂದ್ರನೂ, ನಮಿಸಿದವರ ಜನ್ಮಭೀತಿಯನ್ನು ಹೋಗಲಾಡಿಸುವವನೂ, ಆದ ಭೂಶಂಕರನು ಉದ್ಭವಿಸಿದನು.

ಸಾಲು ೪೦-೪೧ ನಿಖಿಳ ನಿಗಮಾಂತ ವಿದ್ಯೆಗೆ ಸಮುದ್ರಸ್ವರೂಪನಾದ ವಿಮಳಶಿವ ಮುನೀಂದ್ರನು ಅವನ ಶಿಷ್ಯನು. ಆತನು ಸಾಮವೇದದಲ್ಲಿ ನಿಪುಣನೂ, ನೃಪತಿಗಳ ಮುಕುಟ ಚೂಡಾಚುಂಬಿತಾಂಘ್ರಿಗಳುಳ್ಳವನೂ, ತಪೋನಿಧಿಯೂ, ದ್ರವಿಡ ದೇಶದಲ್ಲಿ ಹುಟ್ಟಿದವನೂ, ನಮಸ್ಕರಿಸಿದವರ ಜನ್ಮವನ್ನು ಇಲ್ಲದಂತೆ ಮಾಡುವವನೂ, ಆಗಿದ್ದನು.

ಸಾಲು ೪೧-೪೨ ವಾದಿವಾಗ್ಮಿ ಕವಿಗಳೆಂಬ ಆನೆಗಳಿಗೆ ಸಿಂಹಸ್ವರೂಪನೂ, ಶೈವಶಾಸನವೆಂಬ ಸಮುದ್ರಕ್ಕೆ ಚಂದ್ರಸ್ವರೂಪನೂ, ಕೀರ್ತಿಲತೆಯಿಂದ ಎಲ್ಲ ದಿಕ್ಕುಗಳನ್ನು ಮುಚ್ಚಿದವನೂ, ಇದ ವಿಮಳ ಶಂಭುದೇಶಿಕನು ಸಂತೋಷದಿಂದಿರುವನು.

ಸಾಲು ೪೨-೪೩ ವಿಮಲಶಿವನ ಸೂಕ್ತಿಲಕ್ಷ್ಮಿಯು ಸಾಹಿತ್ಯಕಲಾ ವಿಲಾಸಗಳೆಂಬ ಆಭರಣಗಳಿಂದ ಅಲಂಕರಿಸಲ್ಪಟ್ಟು ಮಿತ್ರನ ಹೃದಯ ಕಮಲವನ್ನು ಪ್ರವೇಶಿಸಿ ಆತನ ಅಂಗದಲ್ಲಿ ರೋಮಾಂಚನವನ್ನುಂಟು ಮಾಡುವಳು.

ಸಾಲು ೪೩-೪೬ ಸ್ವಸ್ತಿ ಯಮನಿಯಮಾಸನಪ್ರಾಣಾಯಾಮ ಪ್ರತ್ಯಾಹಾರ ಧಾರಣಾಧ್ಯಾನ ಸಮಾಧಿ ಸಂಪನ್ನನೂ, ಪರಮಭಟ್ಟಾರಕನೂ,

ಶಿವಾಚಾರ್ಯನೂ, ನಿಖಿಳನಿಗಮವಿದ್ಯೆಯೆಂಬ ಸಮುದ್ರಕ್ಕೆ ಹಡಗಸ್ವರೂಪನೂ, ವಾದಿವಾಗ್ಮಿ ಕವಿಗಳಿಗೆ ಚಕ್ರವರ್ತಿಯೂ, ಮಾಳವ ಮೊದಲಾದ ದೇಶಗಳ ಚಕ್ರವರ್ತಿಗಳ ಕಿರೀಟಗಳ ಕ್ರೀಡೆಗೆ ಅಸಾಧ್ಯವಾದ ಪಾದಕಮಲಗಳುಳ್ಳವನೂ, ಪ್ರಬಲವಾದ ತಪಃಪ್ರಭಾವದಿಂದ ನಮುಸ್ಕರಿಸಿದವರ ಪಾಪವನ್ನು ಹೋಗಲಾಡಿಸುವವನೂ, ಮಹಾದೇಶಿಕನೂ, ಆದ ವಿಮಲಶಿವಮುನೀಂದ್ರನು ಸಕಲ ಭೂತಲದಲ್ಲಿ ತಪಸ್ಸು ವಿದ್ಯಾ ವಿಭವ ಮೊದಲಾದವುಗಳಲ್ಲಿ ಸರಿಯಿಲ್ಲದವನೆಂದು ನಿಶ್ಚೈಸಿ ಅವನಿಗೆ ದಂಡನಾಥ ಚಾಮುಂಡನು ಭಕ್ತಿಯಿಂದ ದೊಡ್ಡದಾದ ಆಸ್ಥಾನವನ್ನು ಧಾರೆಯೆರೆದು ಕೊಟ್ಟನು. ಅದು ಎಲ್ಲ ರಾಜರಿಂದಲೂ ವಂದನೀಯವಾದುದು.

(ಮುಂದಿನ ಭಾಗವು ಕನ್ನಡದಲ್ಲಿದೆ.)

---

# ಓಂ ಶಾಂತಿ !

(ಲೇಖಕ.— ಆನಂದಕವಿ ಕುರುಗುಂದ)

ಅತ್ಯಂತ ಸಿಟ್ಟುಳ್ಳ ಒಂದು ವ್ಯಕ್ತಿಯು ಸಿಟ್ಟಿನಿಂ ಸಿಡಿಮಿಡಿಗೊಳ್ಳುತ್ತಿರುವದಂ ನೋಡಿ ಶಾಂತಿಯು ಸಂಬಂಧದಿಂದ ಉಂಟಾದ ವಿಚಾರವು.

(೧)

ಶಾಂತಿಭಕ್ತ.— ಓಂ ಶಾಂತಿ! ಏನು ಚಿತ್ರಮಿದು!
ನೀನೆ ತಾಂ ದೇವನೋ!
ದೇವ ತಾಂ ನಿನ್ನೊಳಿರುವನೋ!
ನನ್ನಿಯೊಳು ನೀನಿರುವಿಯೋ!
ನೀನೆ ತಾಂ ನನ್ನಿಯೋ!
ಅಹುದಹುದು! ಏನು ಚಿತ್ರಮಿದು!
ಅರಿಯಲ್ಕೆ ಅರಿದು! ಅರಿದು!

(೨)

ಒಂದೆ ಮನದಿಂದೆ ದೇವನಂ ನೆನೆಯುತಿರೆ.
ಬಂದು ನೀನೆನ್ನ ಪ್ರೇಮದಿಂ ಮುದ್ದಿಸುವೆ.

ಅಹುದಹುದು! ನೀನೆ ಶಾಂ ದೇವನೆಂದರಿತೆ!
ಅಲ್ಲದೊಡೆ ದೇವನಂ ನೆನೆಯುತಿರೆ
ನೀನೆ ನನ್ನೆಡೆಗೆ ಬರಲು ಕಾರಣವು ಏನಿಹುದು।

(೩)

ಹಿಂದೆ ಸಂಸಾರ ತಾಪದಿಂ ಬೆಂದುಬೆಂಡಾದ
ಮುನಿಮಾನವಾದಿಗಳು ಕಾನನವ ಸೇರಿ
ಅನವರತ ದೇವನಂ ನೆನೆಯುತಿರೆ
"ಓಂ ಶಾಂತಿ! ಓಂ ಶಾಂತಿ! ಓಂ ಶಾಂತಿ!"
ಎಂದು ಕನವರಿಸುತಿರುವದಂ ಓದಿಯರಿತಿರುವೆ
ಇಂದು ನೀಂ ಪ್ರತ್ಯಕ್ಷ ಪ್ರೀತಿಸುವದರಿತು
ಸಚ್ಚಿದಾನಂದ ದೇವರೇ ನೀನೆಂದು ನಾನರಿತೆ

(೪)

ಸಿಟ್ಟನಿಂ ಕುರುಡಾಗಿ ಮದವೆತ್ತ ಪ್ರಾಣಿಗಳ್
ಸಿಡಿಮಿಡಿಯುಗೊಳ್ಳುತ್ತ ಸಂಕಟವಪಡುತಿಹವು
ಶಿವಶಿವಾ! ಶಾಂತಿಯೇ! ಅವರನ್ನು ಪ್ರೀತಿಸದೆ
ನನ್ನೆಡೆಗೆ ನೀಂ ಬಂದೆ ಪಕ್ಷಪಾತವು ಅಕಟಾ!
ನಿನ್ನೊಳಿರುವದಿದು ಒಳಿತೇ! ಓಂ ಶಾಂತಿಯೇ!

(೫)

ಶಾಂತಿದೇವಿ.—  ಓ! ಎನ್ನ ಪ್ರೀತಿಯ ಭಕ್ತ!
ಪ್ರೀತಿಸುವರಂ ಪ್ರೀತಿಸುವೆ
ನೆನೆವರಂ ನೆನೆಯುತಿಹೆ
ಸೇವಕರಂ ಸೇವಿಸುವೆ
ನಿನ್ನೊಳೆನಿತುಂ ಪಕ್ಷಪಾತವಿಲ್ಲ!
ಅನವರತ ಭಕ್ತರಾಧೀನದಲ್ಲಿರ್ಪೆಂ
ಸ್ವಾತಂತ್ರ್ಯವುಮೆನಗಿಲ್ಲ!
ಕಾರಣವು ಹೀಗಿರಲು
ಅಪವಾದವುಂ ನೀನೆನಗೆ ಕೊಡಬಹುದೆ!

(೬)

ಶಾಂತಿಭಕ್ತ— ಹಾಯ್! ಹಾಯ್! ದೇವಿ!
ತಪ್ಪು ನನ್ನದು ಕ್ಷಮಿಸು!

ಓಂ ಶಾಂತಿ! ಶಾಂತಿ!
ಬಾ! ಬಾರೆ! ಮಾತೆ!
ಪುನೀತೆ! ಲೋಕವಿಖ್ಯಾತೆ!
ದೇವಿ! ನಮೋ! ನಮೋ!
ನಿನ್ನ ಚರಣಾರವಿಂದಕ್ಕೆ
ಹಾಡು! ಹಾಡು! ಪ್ರೇಮವನು
ಬೀರು! ಬೀರು! ಕಾರುಣ್ಯವನು!
ತೋರು! ತೋರು! ನಲ್ಮೆಯನು!
ಓಂ ಶಾಂತಿ! ದೇವಿ! ಶರಣು! ಶರಣು!

---

## ಕೊಲ್ಲಿಪಾಕಿ.

ಕೊಲ್ಲಿಪಾಕಿಯು ಶ್ರೀ ರೇವಣಸಿದ್ಧೇಶ್ವರನ ಉಗಮಸ್ಥಾನವೆಂದು ಪ್ರತೀತಿ ಇರುತ್ತದೆ. ಇಲ್ಲಿಯ ಸೋಮೇಶ್ವರಲಿಂಗದಲ್ಲಿಯೇ ಈ ಮಹಾಪುರುಷನು ಉದ್ಭವಿಸಿದನೆಂದು ವೀರಶೈವ ಗ್ರಂಥಗಳಲ್ಲಿ ಉಲ್ಲೇಖವಿರುತ್ತದೆ. ಕೊಲ್ಲಿಪಾಕಿಯು ಓರಂಗಲ್ಲು ಬಿಜವಾಡಕ್ಕೆ ಹೋಗುವ ಲೈನದಾರಿಯಲ್ಲಿ ಆಲೇರು ಎಂಬ ಸ್ಟೇಶನವಿದ್ದು ಅಲ್ಲಿಂದ ಈ ಗ್ರಾಮವು ಳ ಮೈಲು ಅಂತರದಲ್ಲಿ ಇದೆ. ಈ ಗ್ರಾಮದ ವಿವರಣೆಯನ್ನು ವೇ|| ಮೂ|| ಶ್ರೀ ಚಂದ್ರಶೇಖರ ಶಾಸ್ತ್ರಿಗಳು ವ್ಯಾಕರಣತೀರ್ಥ ಪ್ರಿನ್ಸಿಪಾಲ ಶ್ರೀ ಜಗದ್ಗುರು ಗಂಗಾಧರ ಸಂಸ್ಕೃತಕಾಲೇಜ ಹುಬ್ಬಳ್ಳಿ ಇವರು ಆ ಗ್ರಾಮವನ್ನು ಸಮಕ್ಷಮ ನೋಡಿ ಶಿವಾನುಭವಕ್ಕೋಸ್ಕರ ಬರೆದ ಲೇಖವು ಈ ಪತ್ರಿಕೆಯ ೨ ನೇಸಂಪುಟವಲ್ಲಿ ಬಂದಿರುತ್ತದೆ. ಆದರೆ ಇದರ ವರ್ಣನೆಯು ನಿಜಾಮಹೈದ್ರಾಬಾದಿನಲ್ಲಿಯ "ಪ್ರಾಚೀನವಸ್ತು ಸಂಶೋಧಕಸಂಘ" ದಿಂದ ಪ್ರಕಟವಾಗುವ ಪತ್ರಿಕೆಯಲ್ಲಿಯೂ ಬಂದಿದ್ದು ಅದನ್ನು ನಾವು ಇಲ್ಲಿ ಕೊಡುತ್ತೇವೆ.

ಈ ಗ್ರಾಮವು ಒಂದು ಮಹತ್ವದ ಕ್ಷೇತ್ರವಾಗಿದ್ದು ಒಂದು ಕಾಲಕ್ಕೆ ಶಿವಕ್ಷೇತ್ರವೂ ಮತ್ತೊಂದು ಕಾಲಕ್ಕೆ ಜಿನಕ್ಷೇತ್ರವೂ ಹಾಗೆಯೇ ವಿಷ್ಣುಕ್ಷೇತ್ರವೂ ಆಗಿತ್ತೆಂದು ತೋರುತ್ತದೆ. ಚಾಲುಕ್ಯ ಚಕ್ರವರ್ತಿಯಾದ ೬ ನೇ ವಿಕ್ರಮನ

ಅಧೀನಕ್ಕೆ ಒಳಪಟ್ಟ ೭ ಸಾವಿರ ಗ್ರಾಮಗಳುಳ್ಳ ಒಂದು ಪ್ರಾಂತದ ರಾಜಧಾನಿಯು ಆಗಿತ್ತು. ಇದು ಪಶ್ಚಿಮ ಚಾಲುಕ್ಯರೂ ಚೋಳರೂ ಇವರ ನಡುವೆ ಆದ ಯುದ್ಧಗಳಲ್ಲಿ ಭಯಾನಕ ರಣಭೂಮಿಯೂ ಆಗಿತ್ತು. ಈ ಗ್ರಾಮದಲ್ಲಿ ಅಲ್ಲಲ್ಲಿಗೆ ಭಗ್ನವಾದ ಶಿಲಾಮಯ ಕಂಭಗಳೂ ದೇವತಾಮೂರ್ತಿಗಳೂ ಲಿಂಗಗಳೂ ನಂದಿಗಳೂ ದೊರೆಯುತ್ತವೆ.

ಈ ಗ್ರಾಮದ ಉತ್ತರ-ಪಶ್ಚಿಮ ಮೂಲೆಗೆ ಶ್ರೀಸೋಮೇಶ್ವರನ ಗುಡಿ ಇರುತ್ತದೆ. ಈ ಗುಡಿಯ ಪೂರ್ವದಿಕ್ಕಿಗೆ ಒಂದು ಮಹಾದ್ವಾರವಿರುತ್ತದೆ. ಗುಡಿಯ ಮುಂದೆ ಬೈಲಂಗಳವಿದ್ದು ಅದರ ಮಧ್ಯಭಾಗದಲ್ಲಿ ಒಂದು ಧ್ವಜಸ್ತಂಭವಿರುತ್ತದೆ; ಸ್ತಂಭದ ಮೇಲ್ಭಾಗದಲ್ಲಿ ನಂದಿಯ ಮಂಟಪವಿರುತ್ತದೆ. ಅಂಗಳದ ದಕ್ಷಿಣೋತ್ತರ ದಿಕ್ಕುಗಳಲ್ಲಿ ಕಂಬಗಳುಳ್ಳ ಕಟ್ಟೆಗಳಿರುತ್ತವೆ. ಈ ಕಟ್ಟೆಗಳ ಮೇಲೆ ಅಲ್ಲಲ್ಲಿ ಲಿಂಗಗಳು ಪ್ರತಿಷ್ಠಿಸಲ್ಪಟ್ಟಿರುವವು. ಉತ್ತರದಿಕ್ಕಿನ ಕಟ್ಟೆಯ ಒಂದು ಭಾಗಕ್ಕೆ ವಜ್ರಾಸನವನ್ನು ಹಾಕಿಕೊಂಡು ಕೂತ ಒಂದು ಸ್ತ್ರೀದೇವತಾಮೂರ್ತಿಯಿರುವದು. ಇದರ ಮುಂಭಾಗದಲ್ಲಿ ಒಂದು ಶಿಲಾಮಯ ಚಕ್ರವಿದ್ದು ಅದರ ಎರಡೂ ಪಾರ್ಶ್ವಗಳು ಚಿಗರೆ-ಸಿಂಹಗಳಿಂದ ಅಲಂಕರಿಸಲ್ಪಟ್ಟಿರುತ್ತವೆ. ಗರ್ಭಗುಡಿಯು ಸಣ್ಣದಿದ್ದು ಅದರಲ್ಲಿಯ ಲಿಂಗವಂತೂ ಬಹಳೇ ಮಟ್ಟಾಗಿರುತ್ತದೆ. ಈ ಲಿಂಗವು 'ಸ್ವಯಂಭು' ಯೆಂದು ಭಾವಿಕರ ನಂಬಿಗೆಯುಂಟು.

ಈ ಗುಡಿಯ ಹತ್ತರ ಮತ್ತೊಂದು ದೇವಾಲಯವಿದ್ದು ಅದಕ್ಕೆ ಕೋಟಿಲಿಂಗನ ಗುಡಿಯೆಂದೆನ್ನುತ್ತಾರೆ. ಇದರಲ್ಲಿಯ ಲಿಂಗವು ೧ ಫೂಟು ೪॥ ಇಂಚು ಎತ್ತರವಾಗಿಯೂ ೩ ಫೂಟು ೧೧ ಇಂಚು ಪರಿಘವುಳ್ಳದ್ದಾಗಿಯೂ ಇರುತ್ತದೆ. ಲಿಂಗವನ್ನು ಹೆಡೇ ತೆಗೆದ ನಾಗರಹಾವು ಸುತ್ತಿರುತ್ತದೆ. ಈ ಲಿಂಗದ ವಿಶೇಷವೇನಂದರೆ:— ಇದರ ಮೈಮೇಲೆಲ್ಲ ಸರಿಯಾಗಿ ಒಂದುಸಾವಿರ ಲಿಂಗಗಳು ಇರುತ್ತವೆ. ಇದಕ್ಕಾಗಿಯೇ ಈ ಗುಡಿಗೆ ಕೋಟಿಲಿಂಗನ ಗುಡಿಯೆನ್ನುತ್ತಿರಬಹುದು. ಮಹಾಲಿಂಗದ ಪ್ರಮಾಣವನ್ನೂ ಚಿಕ್ಕಲಿಂಗಗಳ ಪ್ರಮಾಣವನ್ನೂ ಚನ್ನಾಗಿ ಪರೀಕ್ಷಿಸಿ ನೋಡಿದರೆ ಲಿಂಗವನ್ನು ಮಾಡಿದವನು ಗಣಿತಶಾಸ್ತ್ರದಲ್ಲಿ ಅತುಲಪಾಂಡಿತ್ಯವನ್ನು ದೊರಕಿಸಿದ್ದನೆಂದು ತೋರುತ್ತದೆ.

ಸೋಮೇಶ್ವರ ಗುಡಿಯು ಹೊರಬದಿಯಲ್ಲಿ ಪ್ರತಾಪರುದ್ರ ಗುಡಿಯಿರುತ್ತದೆ. ಇದೂ ಶಿವಾಲಯವೇ. ಇದರಲ್ಲಿಯು ಕಲ್ಲಿನ ಕೆಲಸವು ಅತಿ ಪ್ರೇಕ್ಷಣೀಯವಾಗಿರುತ್ತದೆ. ಮಹಾದ್ವಾರದಲ್ಲಿರುವ ದ್ವಾರಪಾಲಕರ ಮೂರ್ತಿಯನ್ನು ಹೊಡೆದವನ ಶಿಲ್ಪಕಲಾಪ್ರವೀಣತೆಯನ್ನು ಎಷ್ಟು ಹೊಗಳಿದರೂ ಸಾಲದು.

ಈ ಗುಡಿಯಿಂದ ಸ್ವಲ್ಪ ಅಂತರದಲ್ಲಿ ಒಂದು ಮಣ್ಣಿನ ದಿಬ್ಬದ ಮೇಲೆ ಭವ್ಯವಾದ ಮೂರು ಪಾದಗಳು ಕಣ್ಣಿಗೆ ಬೀಳುತ್ತವೆ. ಇವುಗಳಲ್ಲಿ ಎರಡು ಬಲಪಾದಗಳು ಇರುತ್ತವೆ; ಇವು ಯಾವ ಮೂರ್ತಿಯ ಪಾದಗಳೋ, ಮೂರು ಪಾದಗಳು ಒಂದೇ ಸ್ಥಾನದಲ್ಲಿ ಯಾಕೆ ಇರುವವೋ ತಿಳಿಯುವದಿಲ್ಲ.

ಈ ಗ್ರಾಮದಲ್ಲಿ ಒಂದು ಜೈನ ಬಸ್ತಿಯಿರುತ್ತದೆ. ಅದನ್ನು ಒಬ್ಬ ಸಾವಕಾರನು ಸಂಪೂರ್ಣವಾಗಿ ಜೀರ್ಣೋದ್ಧಾರ ಮಾಡಿದ್ದಾನೆ. ಇದರಲ್ಲಿ ಆದಿನಾಥ, ಮಹಾವೀರ, ಮತ್ತು ನೇಮಿನಾಥ ಹೀಗೆ ಮೂರು ತೀರ್ಥಂಕರರ ಮೂರ್ತಿಗಳುಂಟು.

ಇಲ್ಲಿ ಒಂದು ಹನುಮಂತದೇವರ ಗುಡಿಯಿರುತ್ತದೆ. ಈ ಗುಡಿಯು ಒಂದು ಮೂಲೆಯಲ್ಲಿ ವಿಷ್ಣುವಿನ ಒಂದು ಒಳ್ಳೇ ಮನೋಹರ ಮೂರ್ತಿಯು ದೊರೆತಿರುತ್ತದೆ. ಈ ಗ್ರಾಮದ ಮಧ್ಯಭಾಗದಲ್ಲಿ ವೀರನಾರಾಯಣ ಸ್ವಾಮಿಯ ಗುಡಿಯಿರುತ್ತದೆ. ಇದರ ಮಹಾದ್ವಾರವು ಪೂರ್ವ ದಿಕ್ಕಿಗೆ ಇರದೆ ಉತ್ತರದಿಕ್ಕಿಗೆ ಇರುತ್ತದೆ. ಕಾರಣವು ತಿಳಿಯದು. ಗುಡಿಯು ಮುಂಭಾಗದಲ್ಲಿ ಒಂದು ದೊಡ್ಡ ಧ್ವಜಸ್ತಂಭವಿರುತ್ತದೆ ನಾರಾಯಣ ಮೂರ್ತಿಯು ಬಹು ಸುಲಕ್ಷಣವಾಗಿರುತ್ತದೆ. ಇದಕ್ಕೆ ಪ್ರಭಾವಳಿಯಿದ್ದು ಅದರಲ್ಲಿ ದಶಾವತಾರಗಳು ಬಹು ಸೂಕ್ಷ್ಮವಾಗಿಯೂ ಸರಸಾಗಿಯೂ ಕೊರೆಯಲ್ಪಟ್ಟಿವೆ. ದೇವಾಲಯದಲ್ಲಿ ೧೧ ನೇ ಶತಮಾನದಿಂದ ಶಿಲಾಲೇಖಗಳು ದೊರೆಯುತ್ತವೆ. ಇಲ್ಲಿ ಒಂದು ಮನೆಯ ಹಿತ್ತಲಲ್ಲಿ ಕೋದಂಡರಾಮನ ಮೂರ್ತಿಯು ಸಿಕ್ಕಿರುತ್ತದೆ. ಮೂರ್ತಿಯ ಬಲಗೈಯಲ್ಲಿ ಚಕ್ರವೂ ಎಡಗೈಯಲ್ಲಿ ಶಂಖವೂ ಇರುತ್ತವೆ. ಊರಲ್ಲಿ ಬೇರೆ ಆಯಾ ಮತಸ್ಥರ ಇಪ್ಪತ್ತೆರಡು ಮಠಗಳು ಇದ್ದು ಅವುಗಳನ್ನು ಪ್ರಾಚೀನ ಗುಡಿಗಳ ಕಲ್ಲುಗಳಿಂದ ಕಟ್ಟಿರುತ್ತಾರೆ.

ಇಲ್ಲಿಯ ಪ್ರತಿಯೊಂದು ದೇವಾಲಯದಲ್ಲಿ ಎರಡು ಮೂರು ಶಿಲಾ ಶಾಸನಗಳು ದೊರೆಯುತ್ತವೆ. ಅವುಗಳ ಆಧಾರದಿಂದ ಈ ಪಟ್ಟಣದ ಪ್ರಾಚೀನ ಇತಿಹಾಸವು ತಿಳಿದುಬರುವದೇನೆಂದರೆ:—

ಕ್ರಿ. ಶಕದ ೧೦೧೮ ರ ಸುಮಾರಕ್ಕೆ ಈ ಪಟ್ಟಣವು ಪಶ್ಚಿಮಚಾಲುಕ್ಯರ ಆಧೀನದಲ್ಲಿತ್ತು. ಆ ಕಾಲಕ್ಕೆ ರಾಜೇಂದ್ರ ಚೋಳನು ಈ ಪಟ್ಟಣದ ಮೇಲೆ ಸಾಗಿ ಮುತ್ತಿದನು. ಕೋಟೆಯು ಕೈವಶವಾಗಲಿಲ್ಲ. ಆ ಮೇಲೆ ಚೋಳರಾಜನು ಸುಳ್ಳಿ ಎಂಬ ಕಂಟಿಗಳನ್ನು ಕೋಟೆಯ ಸುತ್ತ ಇಟ್ಟು ಕೋಟೆಯನ್ನು ಸುಟ್ಟನು. ಕ್ರಿ. ಶಕದ ೧೦೩೩—೩೪ ರ ಕಾಲಕ್ಕೆ ಪಶ್ಚಿಮ ಚಾಳುಕ್ಯ ರಾಜನಾದ ಜಗದೇಕಮಲ್ಲನು (೨ ನೆಯ ಜಯಸಿಂಹ) ಈ ಪಟ್ಟಣವನ್ನು ಕೆಲಕಾಲ ತನ್ನ ರಾಜಧಾನಿಯಾಗಿ ಮಾಡಿಕೊಂಡು ಅಲ್ಲಿ ವಾಸಿಸುತ್ತಿದ್ದನು.

ಪುನಃ ಕ್ರಿ. ಶಕದ ೧೦೪೬ ರಲ್ಲಿ ಚೋಳರಾಜನಾದ ರಾಜಾಧಿರಾಜನು ಚಾಳುಕ್ಯ ೧ ನೆಯ ಸೋಮೇಶ್ವರನಕೂಡ ಯುದ್ಧವನ್ನು ಹೂಡಿ ಈ ಪಟ್ಟಣವನ್ನು ಸುಟ್ಟು ಬೂದಿಮಾಡಿದನು. ಆ ಮೇಲೆ ಕೆಲವು ವರುಷಗಳ ವರೆಗೆ ಚೋಳರ ಮಾಂಡಲಿಕನಾದ ನಂಬಯ್ಯನು ಕೊಲ್ಲಿಪಾಕಪುರಾಧೀಶ ಎಂಬ ಬಿರುದನ್ನು ಧರಿಸಿ ೬೦೦೦ ಹಳ್ಳಿಗಳುಳ್ಳ ಪ್ರಾಂತದ ರಾಜಧಾನಿಯಾದ ಈ ಪಟ್ಟಣವನ್ನು ಆಳುತ್ತಿದ್ದನು.

ಇಲ್ಲಿಯ ಜೈನಬಸ್ತಿಯಲ್ಲಿ ಚಾಳುಕ್ಯಭೂಪಾಲನಾದ ೧ ನೆಯ ಸೋಮೇಶ್ವರನ ಕಾಲದ (೧೦೬೭—೬೮) ಒಂದು ಜಿನಶಾಸನವು ದೊರೆತಿರುತ್ತದೆ.

ಕ್ರಿ. ಶಕದ ೧೦೭೬ ರಲ್ಲಿ ಸಿಂಹಾಸನವನ್ನು ಏರಿದ ಚಾಳುಕ್ಯ ೬ ನೆಯ ವಿಕ್ರಮನ ಆಡಳಿತಕ್ಕೆ ಈ ಪಟ್ಟಣವು ಒಳಪಟ್ಟಿತ್ತು. ಇವನ ಮಗನು ಈ ಪ್ರಾಂತದ ಅಧಿಪತಿಯಾಗಿ ಇದೇ ಪಟ್ಟಣದಲ್ಲಿ ವಾಸಿಸುತ್ತಿದ್ದನು. ಇವನ ಕಾಲದಲ್ಲಿ ಸ್ವಯಂಭು ಸೋಮೇಶ್ವರದೇವರು ಲಿಂಗಭೋಗಕ್ಕಾಗಿಯೂ, ಪೂಜಾನೈವೇದ್ಯಕ್ಕಾಗಿಯೂ ಅನೇಕರ ಭೂಮಿಯನ್ನು ದತ್ತಿಯಾಗಿ ಕೊಟ್ಟಂತೆ ಶಿಲಾಶಾಸನಗಳ ಮೇಲಿಂದ ತಿಳಿಯಬರುತ್ತದೆ.

ವೀರನಾರಾಯಣ ಅಥವಾ ಜಗದ್ದೇವನಾರಾಯಣ ದೇವರ ಗುಡಿಯಲ್ಲಿ ಮೂರು ಶಿಲಾಲೇಖಗಳು ಇರುತ್ತವೆ. ೧ ನೆಯದು ಕ್ರಿ ಶಕದ

೧೧೦೫—೬ ನೆಯ ಇಸವಿಯದು. ೨ ನೆಯದು ಕ್ರಿ. ಶ. ೧೧೦೭—೮ ಇಸವಿಯದು. ೩ ನೆಯದು ೧೧೧೦—೧೧ ನೆಯ ವರುಷದ್ದು. ಇದು ಇತಿಹಾಸದ ದೃಷ್ಟ್ಯಾ ಒಳ್ಳೆ ಮಹತ್ವವುಳ್ಳದ್ದಿರುತ್ತದೆ. ಈ ಕಾಲಕ್ಕೆ ಚಾಲುಕ್ಯ ೬ ನೆಯ ವಿಕ್ರಮನ ಮಗನಾದ ಶ್ರೀ ಮಹಾಮಂಡಲೇಶ್ವರ ಸೋಮೇಶ್ವರ ದೇವನು ಕೊಲ್ಲಿಪಾಕಿಯ ಅಧಿಪತಿಯಿದ್ದನೆಂದು ಇದರಲ್ಲಿ ಉಲ್ಲೇಖವಿರುತ್ತದೆ. ಮತ್ತು ಈ ಚಾಳುಕ್ಯರ ರಾಜಧಾನಿಯು ಈ ಕಾಲಕ್ಕೆ ಕಲ್ಯಾಣವಿರದೆ ಮಾನ್ಯಖೇಡ ನಗರವಿತ್ತೆಂದೂ ಹಾಗೂ ದಕ್ಷಿಣಾಪಥದಲ್ಲಿ ಚಾಳುಕ್ಯ ರಾಜ್ಯವನ್ನು ಪ್ರತಿಷ್ಠಾಪನೆ ಮಾಡಿದ ತೈಲಪನಿಂದ(ಕ್ರಿ. ಶ. ೯೭೬) ಕಡೆಯವರೆಗೆ ಚಾಳುಕ್ಯ ರಾಜವಂಶಾವಳಿಯು ಗೊತ್ತಾಗುತ್ತದೆ. ಜೈನರ ಗುಡಿಯಲ್ಲಿಯ ಶಿಲಾಶಾಸನದ ಆಧಾರದಿಂದ ಈ ಪಟ್ಟಣವು ೧೨ ನೆಯ ಶತಮಾನದ ಉತ್ತರಭಾಗದಿಂದ ೧೪ ನೆಯ ಶತಮಾನದ ಆದಿಯ ವರೆಗೆ ವಾರಂಗಳದ ಕಾಕತೀಯರ ವಶದಲ್ಲಿತ್ತೆಂದೂ, ಈ ಕಾಕತೀಯರು ರಾಷ್ಟ್ರಕೂಟರ ಮಾಂಡಲಿಕರಿದ್ದರೆಂದೂ ತಿಳಿಯಬರುತ್ತದೆ. ಬ್ರಿಟಿಶ ಮ್ಯೂಜಿಯಮದಲ್ಲಿಯ ಒಂದು ತಾಮ್ರ ಶಾಸನದಿಂದ ಕಾಕತೀಯರ ತರುವಾಯ ತಾಳೀಕೋಟಿ ಕಾಳಗದ ವರೆಗೆ ಈ ಪಟ್ಟಣವು ವಿಜಯನಗರದ ರಾಜರ ವಶದಲ್ಲಿತ್ತು. ಆ ಮೇಲೆ ಈ ಪಟ್ಟಣವು ಮುಸಲ್ಮಾನರ ಕೈವಶವಾಗಿ ಈಗ್ಯೂ ಒಬ್ಬ ಮುಸಲ್ಮಾನ ಜಹಾಗೀರದಾರರ ಅಧೀನದಲ್ಲಿರುತ್ತದೆ. ಈ ಪ್ರಕಾರ ರಾಜಕೀಯ ದೃಷ್ಟಿಯಿಂದಲೂ, ಜೈನ, ವೀರಶೈವ, ವೈಷ್ಣವ ಧರ್ಮದೃಷ್ಟಿಯಿಂದಲೂ ಈ ಸ್ಥಾನವು ಅತ್ಯಂತ ಮಹತ್ವದ್ದಾಗಿದೆ.

ಬೊಮ್ಮರಸಕವಿಯು ತನ್ನ ರೇವಣಸಿದ್ಧೇಶ್ವರ ಪುರಾಣದಲ್ಲಿ ಈ ಪಟ್ಟಣವನ್ನು ಕೆಳಗೆ ಬರೆದ ಪ್ರಕಾರ ವರ್ಣಿಸಿದ್ದಾನೆ.

ಆ ರಾಜ್ಯಮಧ್ಯದೊಳ್ಸೇತುರಾಮೇಶ್ವರಂ ।
ವಾರಣಾಸೀಪುರಂ ಕಾಂಚೀಮಹಾನಗರಿ ।
ಸೌರಾಷ್ಟ್ರವರುಣಗಿರಿ ತಿರುಕಾಳಹಸ್ತಿ ಕೇದಾರ ಮಂದರಪರ್ವತ ॥
ತಾರಾದ್ರಿ ಮುಖ್ಯವಾದಗಣಿತಶಿವಕ್ಷೇತ್ರ ।
ದೋರಣದೊಳತುಳವೆಂದೆನಿಪ ಜಸಮಂ ಪೆತ್ತು ।
ರಾರಾಜಿಪುದು ಕೊಲ್ಲಿಪಾಕಿಯೆಂದೆಂಬ ಪುರಿ ನಿಜವಿಭವಜಿತಸುರಪುರಿ ॥

ಪರಿವೇಷ್ಟಿಸಿದ್ದಾರ್ಗರಂಗಳಿಂ ಸಾಲ್ಗೊಂಡ ।
ಕೆರೆತೊರೆಗಳೆಡೆಯೊಳುರೆ ಬೆಳೆದಿರ್ದ ಪುಷ್ಪಮಂ ।

ಜರಿ ಬಳ್ಳಿಮಲ್ಲಿಗೆ ಮನಃಪ್ರಿಯ್ಯ ಕೊನೆವಾಳೆ ರಾಜಾನ್ನಗಂಧಶಾಳಿ ॥
ಕರಿಯಕೇಸರಿ ಬಿಳಿಯಕೇಸರಿಯೆನಿಪ್ಪ ಪರಿ।
ಪರಿಯ ಗದ್ದೆಗಳಿರದೆ ಶೋಭಿಪುದು ತನ್ಮಹಾ।
ಪುರವರಾಂಗನೆಯ ನೂಪುರ ಚತುರ್ದಶ ಭುವನವಿಲಸಿತ ಮಹಾಗೋಪುರ॥

ಸೋಮೇಶನೆನಿಸಿಕೊಂಡೆನ್ನ ಸುತೆಯಂ ಧಾರು।
ಣೀಮಧ್ಯದೊಳ್ಪ್ರಕಾಶದಿನುಂಟುಮಾಡಿದಡೆ
ಯೀಮಹಾಕ್ಷೇತ್ರವಿದನಾಂ ಸುತ್ತುವರಲೀಕ್ಷಿಸುವೆನುನಲಿವಿಂದೆನುತ್ತೆ ॥
ಹೈಮಾಚಲಂ ಬಂದು ಬಳಸಿ ನೆಲಸಿರ್ದ ಪಾಂ।
ಗೋಮಹಾದೇವೆನಲು ಬೆಳ್ಪಿಡಿದ ನಿರ್ಮಳ ಶಿ।
ಲಾಮಯ ಪ್ರಾಕಾರ ವರಲಕ್ಷ್ಮಿಯಿಟ್ಟಿಕ್ಕಸರದಂತಿರೊಪ್ಪಿರ್ದುದು ॥

ಅರುಚಿರದುಪಲ ಕೋಟಾವಳಯದೊಳಗೆ ಧವ।
ಳಾರ ಭುವನೇಶ್ವರಂಗಳ ಭದ್ರಮುಂಟಪದ।
ಸೇರುವೆಗಳಿಂ ರತ್ನಕನಕ ಪರಿಮಳವಸ್ತು ವಸ್ತ್ರತಾಂಬೂಲಮುಖ್ಯ ॥
ಸಾರವಿವಿಧ ದ್ರವ್ಯದಂಗಡಿಯ ಗಡಣದಿಂ।
ರಾರಾಜಿಪುದು ಕೊಲ್ಲಿಪಾಕಿಯೆಂದೆಂಬ ಪೊಳ್ದ।
ಲೋರಂತೆ ಶಿವತೀರ್ಥನಿವಹದಿಂ ದಿವ್ಯಲಿಂಗಂಗಳಿಂ ಸೊಂಪುವಡೆದು॥

---

# ಪ್ರಭುದೇವರು ಬಸವನನ್ನು ಸ್ತುತಿಸಿದ್ದು.

(ಲೇಖಕರು— ಬ್ಯಾಳಿ ಕಲ್ಯಾಣಪ್ಪನವರು ಬಿ. ಏ.)

ಶ್ರೀಬಸವನು ಸಕಲರಿಗೂ ಪರಮಪೂಜ್ಯನು. ಜಗತ್ತಿಗೆ ತನ್ನ ದಿವ್ಯ ಭಕ್ತಿಯ ಪ್ರಭೆಯಿಂದ ಮಹದುಪಕಾರ ಮಾಡಿದ ವಿಭೂತಿಯು. ಆತನ ಮೃದುವಚನಂಗಳು ಯಾವತ್ತರಿಗೂ ಸುಧಾರಸ. ಬಸವನಿಂದ ವೀರಶೈವ ಧರ್ಮವೂ, ವೀರಶೈವ ಸಮಾಜವೂ, ವೀರಶೈವ ಮತತತ್ವಗಳೂ ಬೆಳಕಿಗೆ ಬಂದು ಜಗತ್ತಿಗೇನೇ ತಮ್ಮ ಶ್ರೇಷ್ಠತೆಯನ್ನು ತೋರಿಸಲುನುವಾಗಿವೆ. ಹೀಗಿದ್ದಮೇಲೆ ಬಸವನನ್ನು ಹೊಗಳುವದೂ ಪೂಜಿಸುವದೂ ಸಕಲರಿಗೂ ಶ್ರೇಯಸ್ಕರವಾಗಿಲ್ಲವೇ?

ಮಹನೀಯರು ಹಾಕಿಕೊಟ್ಟ ಪಾಠವನ್ನೇ ಸಾಮಾನ್ಯರು ಕಲಿಯು ವರು. "ಯದ್ಯದಾಚರತಿ ಶ್ರೇಷ್ಠಃ ತತ್ತದೇವೇತರೇ ಜನಾಃ" ಎಂದು ಗೀತಾವಾಕ್ಯವು ಸಾರುತ್ತದೆ. ಅನೇಕ ಶಿವಶರಣರು ಶ್ರೀ ಬಸವೇಶ್ವರನನ್ನು ಬಹು ಕೊಂಡಾಡಿ ಆತನ ಬಗ್ಗೆ ತಮ್ಮ ಪ್ರೇಮಭಕ್ತಿಗಳನ್ನು ವ್ಯಕ್ತಗೊಳಿಸಿರುವರು. ಶ್ರೀ ಪ್ರಭುದೇವರು ಬಸವನನ್ನು ಎಷ್ಟು ಬಗೆಯಿಂದ ಸ್ತುತಿಸಿರುವರು ಎಂಬುವದನ್ನು ನೆನಪಿಗೆ ತಂದರೆ ಎಲ್ಲರಲ್ಲಿ ಬಸವನ ಬಗ್ಗೆ ಯಾವ ತರಹದ ಪೂಜಾದರಗಳಿರಬೇಕೆಂಬುದು ಸ್ಪಷ್ಟವಾಗುತ್ತದೆ. ಇವರು ಕೂಡ ಭಕ್ತಾಗ್ರೇಸರನಾದ ಬಸವನೊಡನೆ ಎಷ್ಟು ನಿರ್ಮಲಾಂತಃಕರಣ ಭಕ್ತಿಗಳಿಂದ ನಡೆದುಕೊಳ್ಳುತ್ತಿದ್ದರೆಂಬದು ಈ ಕೆಳಗಿನ ವಚನದಿಂದ ಚೆನ್ನಾಗಿ ವಿದಿತವಾಗುತ್ತದೆ.

ಬಸವಣ್ಣಾ ನಿನ್ನ ಕಂಡು ಕಂಡು ಎನ್ನ ತನು ಬಯಲಾಯಿತ್ತು ಬಸವಣ್ಣಾ ನಿನ್ನ ಮುಟ್ಟಿ ಮುಟ್ಟಿ ಎನ್ನ ಕ್ರಿಯೆ ಬಯಲಾಯಿತ್ತು ಬಸವಣ್ಣಾ ನಿನ್ನ ನೆನೆನೆನೆದು ಎನ್ನ ಮನ ಬಯಲಾಯಿತ್ತು ಬಸವಣ್ಣಾ ನಿನ್ನ ಮಹಾನುಭಾವವ ಕೇಳಿ ಕೇಳಿ ಎನ್ನ ಭವ ನಾಸ್ತಿಯಾಯಿತ್ತು ನಮ್ಮ ಗುಹೇಶ್ವರಲಿಂಗದೊಳಗೆ ನೀನಜಾತನೆಂಬುದ ನೆಲೆ ಮಾಡಿ ಭವಪಾಶಂಗಳ ಹರಿದಿಪ್ಪೆನಾಗಿ ನಿನ್ನ ಸನ್ನಿಧಿಯಿಂದ ನಾನು ಬದುಕಿದೆನು.

ಶ್ರೀ ಪ್ರಭುದೇವರು ಅನಿಮಿಷ ದೃಷ್ಟಿಯಿಂದ ಲಿಂಗನಿರೀಕ್ಷಣೆಮಾಡುವಂತೆ ಬಸವಣ್ಣನನ್ನು ಕಂಗಳ ಆನಂದವು ಉಕ್ಕೇರುವಂತೆ ನೋಡಿ ನೋಡಿ ಆ ಬಸವನ ಮೂರ್ತಿಯು ತಮ್ಮ ಕಣ್ಣುಗಳಲ್ಲಿಯೂ ಮನದಲ್ಲಿಯೂ ದೇಹದ ಪ್ರತಿಯೊಂದು ಅವಯುವದಲ್ಲಿಯೂ ರೋಮರೋಮಾದಿಗಳಲ್ಲಿಯೂ ವ್ಯಾಪಿಸಿಬಿಟ್ಟದ್ದರಿಂದ ಅವರು ತಮ್ಮ ದೇಹದ ಮೇಲಿನ ಪರಿವೆಯನ್ನು ತೊರೆದವರಾಗಿದ್ದರು. ಬಸವಣ್ಣನವರ ಶಿವಾನುಭವ ವಚನಗಳನ್ನು ಕೇಳಿ ಕೇಳಿ ತಮಗೆ ಪುನಃ ಭವದಲ್ಲಿ ಹುಟ್ಟಿ ಬರುವ ಪ್ರಸಂಗವು ಬರುವದಿಲ್ಲವೆಂದು ಅವರು ನಂಬಿದ್ದರು. ಅಂದರೆ ಬಸವನ ವಚನಗಳು ಕೈವಲ್ಯಮೋಕ್ಷವನ್ನೀಯುವಂಥವುಗಳೆಂಬುದೇ ಅವರ ದೃಢವಿಶ್ವಾಸ. ಸಾಕ್ಷಾತ್ ಲಿಂಗವೇ ಬಸವ, ಬಸವನೇ ಲಿಂಗ ಎಂಬುವದನ್ನು ಪ್ರಭುದೇವರು ಮನದಟ್ಟಾಗಿಟ್ಟುಕೊಂಡಿದ್ದರು. ನೋಡಿರಿ! ಬಸವನ ಬಗ್ಗೆ ಪ್ರಭುದೇವರ ಭಕ್ತಿಯೆಷ್ಟು? ನಿಷ್ಠೆಯೆಷ್ಟು? ಶ್ರದ್ಧೆಯೆಷ್ಟು?

ಅದೇ ಪ್ರಭುದೇವರು ಬಸವೇಶ್ವರನ ಭಕ್ತಿಯನ್ನು ನೋಡಿ ನಿಬ್ಬೆರಗಾಗಿ ಪ್ರಸನ್ನವಾಣಿಯಿಂದ ಅಪ್ಪಣೆ ಕೊಡಿಸಿರುವದೇನಂದರೆ "ನಿತ್ಯಬಸವಣ್ಣ ನಿರಂಜನಬಸವಣ್ಣ, ಸಚ್ಚಿದಾನಂದ ಬಸವಣ್ಣ, ನಿತ್ಯಪರಿಪೂರ್ಣ ಬಸವಣ್ಣ, ಅಖಂಡಪಿಂಡ ಬಸವಣ್ಣ, ಶಿವಾಚಾರ ಚಕ್ರವರ್ತಿ ಬಸವಣ್ಣ, ಸರ್ವಾಚಾರಸಂಪನ್ನ ಬಸವಣ್ಣ, ಷಟ್‌ಸ್ಥಲ ಬ್ರಹ್ಮರೂಪ ಬಸವಣ್ಣ, ಸರ್ವಾಂಗಲಿಂಗ ಮೂರ್ತಿಬಸವಣ್ಣ, ಸ್ವಾನುಭವಸಾರೋದ್ಧಾರ ಬಸವಣ್ಣ, ಆರೂಢ ದಾಸೋಹಿ ಬಸವಣ್ಣ, ನಿಸ್ಸಂಗನಿಜರೂಪು ಬಸವಣ್ಣ, ಶಿವಸಮಯಪ್ರತಿಷ್ಠಾಚಾರ್ಯ ಬಸವಣ್ಣ" ಇದಲ್ಲದೆ ಈ ಕೆಳಗಿನ ೫ ವಚನಗಳಿಂದ ಶ್ರೀ ಪ್ರಭುದೇವರು ಬಸವನ ಬಗ್ಗೆ ಎಂಥ ಉದಾತ್ತ ಭಾವನೆಯುಳ್ಳವರಾಗಿದ್ದರೆಂಬುವದು ಸ್ಪಷ್ಟವಾಗುತ್ತದೆ.

೧ ಆಯತದಲ್ಲಿ ಪೂರ್ವಾಚಾರಿಯಕಂಡೆ, ಸ್ವಾಯತದಲ್ಲಿ ಪೂರ್ವಾಚಾರಿಯಕಂಡೆ, ಸನ್ನಿಹಿತದಲ್ಲಿ ಪೂರ್ವಾಚಾರಿಯಕಂಡೆ, ಗುಹೇಶ್ವರಲಿಂಗದಲ್ಲಿ ಪರಮಪೂರ್ವಾಚಾರಿ ಸಂಗನಬಸವಣ್ಣನ ಶ್ರೀಪಾದಕ್ಕೆ ನಮೋ ನಮೋ ಎಂಬೆನಯ್ಯಾ.

ಬಸವಣ್ಣನವರ ಆಚಾರದ ಮುಂದೆ ಮತ್ತಾರ ಆಚಾರವೂ ಇಲ್ಲ ಎಂಬುದೇ ಇದರರ್ಥ.

೨ ಗುರುಸ್ಥಲ, ಲಿಂಗಸ್ಥಲ, ಜಂಗಮಸ್ಥಲ, ಪ್ರಸಾದಸ್ಥಲವಡಗಿ ಕರಸ್ಥಲವಿನ್ನಾರಿಗೆ ಸಾರಿತ್ತು? ನಿರ್ವಂಚಕತ್ವದ ನಿತ್ಯ ನಿಜಸ್ಥಲವಾದ ಭಕ್ತಿಸ್ಥಲವಿನ್ನಾರಿಗೆ ಸಾರಿತ್ತು ಬಸವಣ್ಣಂಗಲ್ಲದೆ? ಗುಹೇಶ್ವರಾ ನಿಮ್ಮ ಶರಣ ಸಂಗನಬಸವಣ್ಣನ ಮರೆಹೊಕ್ಕು ನಾನು ಬದುಕಿದೆನು.

ಸಕಲ ಸ್ಥಳಕುಳಂಗಳು ಬಸವಣ್ಣನವರಿಗಲ್ಲದೆ ಮತ್ತಾರಿಗೂ ಅಳವಡುವದಿಲ್ಲವೆಂಬುದೇ ಈ ವಚನದ ಅರ್ಥವು.

೩ ಕುಲದೊಳಗೆ ಹುಟ್ಟಿ ಕುಲವ ಬೆರಸದೆ ತನ್ನ ನಿಲವು ಬಲಿದಿಪ್ಪವರಾರು ಹೇಳಾ? ಹಬ್ಬಿದ ಮೂರು ಬೆಟ್ಟಕ್ಕೆ ತನ್ನ ಮನವ ಹಬ್ಬಲೀಯದೆ ಲಿಂಗಜಂಗಮಕ್ಕೆ ಸವಿಸಿ ಸ್ವಯಲಿಂಗವಪ್ಪವರಿನ್ನಾರು ಹೇಳಾ? ಸ್ವಯೋಲಿಂಗ, ಸ್ವಯೋಶರಣ, ಸ್ವಯೋಭೋಗವೆಂಬುದಾಗಿ ಗುಹೇಶ್ವರಾ ನಿಮ್ಮ ಶರಣ ಸಂಗನಬಸವಣ್ಣಂಗೆ ನಮೋ ನಮೋ ಎಂಬೆನು.

ಕುಲಾಭಿಮಾನವನ್ನು ತೊರೆದು ಜಂಗಮದ ಅಭಿಮಾನ ಹಿಡಿದು ಸ್ವಯಂಲಿಂಗವಾದ ದೃಢತೆಯು ಬಸವಣ್ಣನವರ ಹೊರತು ಮತ್ತಾರಿಗೂ ಸಾಧ್ಯವಿಲ್ಲವೆಂಬುದೇ ಇದರರ್ಥವು.

೪ ತನುವ ಗೆಲಲರಿಯದೆ, ಮನವ ಗೆಲಲರಿಯದೆ ಧನವ ಗೆಲಲರಿಯದೆ ಭ್ರಮೆಗೊಂಡಿತ್ತು ಲೋಕವೆಲ್ಲವು. ತನುವ ದಾಸೋಹಕ್ಕೆ ಸವಿಸಿ ಮನವ ಲಿಂಗಧ್ಯಾನದಲ್ಲಿ ಸವಿಸಿ ಧನವ ಜಂಗಮದಲ್ಲಿ ಸವಿಸಿ ಗೆಲಬಲ್ಲರೆ ಸಂಗನಬಸವಣ್ಣನಲ್ಲದೆ ಮತ್ತಾರನು ಕಾಣೆ. ಗುಹೇಶ್ವರಾ ನಿಮ್ಮ ಶರಣ ಸಂಗನಬಸವಣ್ಣಂಗೆ ನಮೋ ನಮೋ ಎನುತಿರ್ದೆನು.

ಗುರುಲಿಂಗಜಂಗಮಕ್ಕೆ ತನುಮನಧನಗಳನ್ನು ಸಮರ್ಪಿಸಬೇಕೆಂಬ ಉದಾತ್ತ ತತ್ವವನ್ನು ಆಚರಣೆಯಲ್ಲಿ ತಂದುತೋರಿಸಿದವರು ಬಸವಣ್ಣನವರಲ್ಲದೆ ಮತ್ತಾರೂ ಅಲ್ಲ ಎಂಬರ್ಥವನ್ನು ಈ ವಚನವು ಹೇಳುತ್ತದೆ.

(೫) ಬಯಲ ಮೂರ್ತಿಯಗೊಳಿಸಿದನೊಬ್ಬ ಶರಣ. ಆ ಮೂರ್ತಿಯಲ್ಲಿ ಭಕ್ತಿಸ್ವಾಯತವ ಮಾಡಿದನೊಬ್ಬ ಶರಣ. ಆ ಭಕ್ತಿಯನೇ ಸುಜ್ಞಾನ ಮುಖವ ಮಾಡಿದನೊಬ್ಬ ಶರಣ. ಆ ಸುಜ್ಞಾನವನು ಲಿಂಗಮುಖವಾಗಿ ಧರಿಸಿದನೊಬ್ಬ ಶರಣ. ಆ ಲಿಂಗವನು ಸರ್ವಾಂಗದಲ್ಲಿ ವೇಧಿಸಿಕೊಂಡನೊಬ್ಬ ಶರಣ. ಆ ಸರ್ವಾಂಗವನೆ ನಿರ್ವಾಣ ಸಮಾಧಿಯಲ್ಲಿ ನಿಲಿಸಿದನೊಬ್ಬ ಶರಣ. ನಾನು ನಿರ್ವಾಣದಲ್ಲಿ ನಿಂದು ಅಗಮ್ಯನಾದೆನೆಂದರೆ ಭಕ್ತಿಕಂಪಿತನೆನಿಸಿ ಎನ್ನ ತನ್ನಲ್ಲಿಗೆ ಬರಿಸಿಕೊಂಡನೊಬ್ಬ ಶರಣ ಗುಹೇಶ್ವರಾ ನಿಮ್ಮ ಶರಣ ಸಂಗನಬಸವಣ್ಣನ ಶ್ರೀಪಾದವ ಕಂಡು ಶರಣೆಂದು ಬದುಕಿದೆನು.

ಶ್ರೀಬಸವಣ್ಣನು ಭಕ್ತಿ ಜ್ಞಾನಗಳ ರಹಸ್ಯವನ್ನರಿತು ಆಚರಿಸಿ ತನ್ನ ಸಾನುಕಂಪಿತಭಕ್ತಿಯಿಂದ ಜಂಗಮವು ತನ್ನೆಡೆಗೆ ತಾನೇ ಬರುವಂತೆ ಮಾಡುತ್ತಿದ್ದನೆಂಬುದೇ ಈ ವಚನದ ತಾತ್ಪರ್ಯ.

ಪ್ರಭುದೇವರು ತಮ್ಮ ವಚನಗಳ ಕೊನೆಯಲ್ಲಿ ‘ ಸಂಗನಬಸವಣ್ಣನ ಶ್ರೀಪಾದಕ್ಕೆ ನಮೋ ನಮೋ ಎಂಬೆನಯ್ಯ ’ ಗುಹೇಶ್ವರಾ ನಿಮ್ಮ ಶರಣ ಸಂಗನಬಸವಣ್ಣನ ಮರೆಹೊಕ್ಕು ನಾನು ಬದುಕಿದೆನಯ್ಯ ಈ ಮೊದಲಾದ ಭಕ್ತಿಪುರಸ್ಸರವಾದ ಉದ್ಗಾರಗಳು ಕಂಡುಬರುವದರಿಂದ

ಪ್ರಭುದೇವರ ಕಣ್ಣಲ್ಲಿ ಬಸವಣ್ಣನು ಎಂಥ ದಿವ್ಯ ವ್ಯಕ್ತಿಯಾಗಿರಬೇಕೆಂಬುದು ಸ್ಪಷ್ಟವಾಗುತ್ತದೆ.

ಭಕ್ತಿಯ ಮುಂದೆ ವೈರಾಗ್ಯವಲ್ಲ, ಜ್ಞಾನವಲ್ಲ, ಯೋಗವಲ್ಲ, ಕರ್ಮವಲ್ಲ, ಯಾವದೂ ಅಲ್ಲ. ಇವೆಲ್ಲವುಗಳು ಭಕ್ತಿಗೇನೇ ಶರಣು ಹೋಗುತ್ತವೆ. ಭಕ್ತಿಯಲ್ಲಿ ಅಂಥ ಚೈತನ್ಯವೂ, ಆಕರ್ಷಣ ಶಕ್ತಿಯೂ, ಪ್ರೇಮಾತಿಶಯವೂ ನೆಲೆಗೊಂಡಿರುತ್ತವೆ. ಪ್ರಭುದೇವರು ಮಹಾವೈರಾಗ್ಯಶಾಲಿಗಳು. ಮಾಯಾಕೋಲಾಹಲನೆಂಬ ಬಿರುದು ಧರಿಸಿದವರು. ಅಂಥವರು ಸಹ ಬಸವಣ್ಣನ ಶ್ರೀಪಾದಕ್ಕೆ ನಮೋ ನಮೋ ಎಂದು ಅತ್ಯಂತ ಕಳಕಳದಿಂದ ನುಡಿಯಬೇಕಾದರೆ ಬಸವನ ಭಕ್ತಿಯು ಸಾಮಾನ್ಯವಾದುದೇ? ಪ್ರಭುದೇವರ ಸ್ತುತಿಪರವಚನಗಳು ಚೇತನಾತ್ಮಕವಾಗಿಯೂ ಸ್ಫೂರ್ತಿದಾಯಕವಾಗಿಯೂ ಇರುತ್ತವೆ. ಈ ಕೆಳಗಿನ ಶ್ಲೋಕವು ಬಸವನ ಭಕ್ತಿಯನ್ನೇ ಕೊಂಡಾಡುತ್ತದೆ.

ಭೋ. ಷ.

ಬಸವನಿಂದ ಭಕ್ತನಿಲ್ಲ
ವಸುಧೆಯಿಂದ ಭಾರವಿಲ್ಲ
ಅಸಮ ಮಹಿಮ ಲಿಂಗದಿಂದ ದೈವವಿಲ್ಲವು ।
ಮಿಸುಪ ಬಸವ ಭಕುತಿ ಭಾವ
ಬಸದಿಯಲ್ಲಿ ತೊಳಗಿ ಬೆಳಗಿ
ಎಸೆಯಲೆಂದು ಸಾಂಬಶಿವನ ಬೇಡಿಕೊಂಬುವೆ ॥



# ....ನ ನೆನಪು.

[ಲೇಖಕ— ರುದ್ರಸುತ]

ಜಗದ ಮಾಟವು ಬಲು ತೊಡಕೇನು ಪೇಳಲಿ ।
ಅಗಮ್ಯವೈ ಲೋಕದ ಮಾಯೆ ॥
ಇಹದಿ ಜನಿಸಿ ಬಂದು ಬೆಳೆದು ರಾಜ್ಯವನಾಳಿ ।
ಗಹಿಸಿ ನಗುತಳುತಲಿ ದಾರಿ ॥೧॥

ಎಲ್ಲಿ ಪೋದೆಯೊ? ಕಾಣೆ ತವ ಶಾಂತಮುಖವನು ।
ಸಲ್ಲದು ಪೇಳದರಗುವದಿದು ॥
ಸುಖ ನೀ ಹಂಬಲಿಸಲು ಸಲೆ ದಯವಿಲ್ಲದ ।
ಸುಖದೇವಿ ದೂರ ಪೋದಳು ॥೨॥

ಮುಂಜಾವು ನಡುವಗಲೊಳು ಕಷ್ಟಜೀವದಿಂ ।
ಸಂಜೆಮಿಣುಕಿನಲಿ ತಾಪ ॥
ಇಂತಪ್ಪ ತಾಪದೊಳು ತುದಿಮೊದಲ್ಗೊಂಡು।
ಚಿಂತೆಯ ಚಿತೆಯಲಿ ಬೆಂದೆಯೊ ಹಾ! ॥ ॥೩॥

ಸೂಸುವ ನಸಿಕು ಪಸರಿಸಿತು ಬೇಗದಿ ।
ನೇಸರೋದಯ - ಸುಖವಿತ್ತು ॥
ಶಿವ ಸೆಳೆದಂ ಕಲಿಜಲಧಿಯೆ ಸಾಕೆನೆ ।
ತವಕದಿ ಸುರಲೋಕಕೆ ನಿನ್ನ ॥ ॥೪॥

ನೆಲಸಿತ್ತನುರಾಗವೇ ಹೃದಯದಿ ಕ- ।
ಕ್ಕುಲತೆಯ ಹಾಲುಕ್ಕಿತು ಸೈ ॥
ಎಳೆಮಕ್ಕಳ ನೀಕ್ಷಿಸಿ ಜನನೀಯೆನೆ ।
ಹುಳುಹುಳು ನೋಡಿಯೆ ತುಷಿತನು ॥ ॥೫॥

ಶರೀರವೊ ನಿನ್ನದುಳಿದ ಮಾನವರೊಲು ।
ಕರುಣೆಯ ರೂಪವೊ ನಾನರಿಯೆ ॥
ಶಾಂತಿಯೆಂತಿಹುದೆಂದು ಕಲಿಯಲು ನಿನ್ನಲಿ ।
ಸಂತಸದಿ ಬರುವುದು ಲೇಸು ॥ ॥೬॥

ನಗದರ ನಗಿಸುತೆ, ಮಾತಾಡದವರನು ।
ಬಗೆ ತಿಳಿದಿ ಮಾತಾಡಿಸುವ॥
ಮರೆದು ಸದಾ ಕಾಲದಿ ತವ ಹಿತವನು ।
ಪರರ ಸುಖವ ನೆನಿಸಿದಿಯೋ ॥೭॥

ನೋಡೆನು ನಿನ್ನ ದಯಾಮೂರುತಿಯನೀಗ ।
ಬಾಡಿದ ಕಡೆ ರೂಪ ನಿಲ್ವುದು ॥
ಕಾಣುವೆನನೇಕರ ಜಗದಲೀಗೆಂತು ।
ನಿನ್ನನು ಕರೆದಂತೆ ಕರಿಯುಲಿ? ॥೮॥

ಬಳಕುತ ಬಾಡುತ ಬಿಕ್ಕುತ ತಿಕ್ಕುತ ।
ಬಳಲುತ ತೇಕುತ ಬೀಳುತಲಿ ॥
ಮರಗುತಲುಬ್ಬಸಬಡುತ ಬಾಂಧವರಿಗೆ ।
ಹೊರಳುರುಳಹಿವೊಲು ಸಲೆ ಸವಿದಿ ॥೯॥

ಇದ್ದಿಲ್ಲದ ತೆರನಾಯ್ತುಹುದಲ್ಲಾಗಿ ।
ಇದ್ದ ನೀರ್ ಮೃಗಜಲವಾಯ್ತು॥
ಕನಸೊ ನಿಜವೊ ನೋಡಿದುದು ನಾನು ನಿನ್ನನು ।
ಕನಗಿಹೆನೀಪರಿ ಚಿಂತೆಯಲಿ ॥೧೦॥



## ೧೯೩೧ ನೆ ಜನಗಣತಿಯಲ್ಲಿ ಮದ್ರಾಸಾಧಿಪತ್ಯದಲ್ಲಿ

# ಲಿಂಗಾಯತರ ಜನಸಂಖ್ಯೆ

[ಲೇಖಕ:— ಜೀರಗೆ ಬಸವಲಿಂಗಪ್ಪ]

ಅಕಸ್ಮಾತ್ತಾಗಿ ಬೆಂಗಳೂರ ಪಬ್ಲಿಕ್ ಲೈಬ್ರರಿಗೆ ಹೋಗಿ ಎಂದಿನಂತೆ ಓದುತ್ತಿರುವಾಗ್ಯೆ ಸೆನ್ಸಸ ಬುಕ್ಕುಗಳು ಕಣ್ಣಿಗೆ ಬಿದ್ದವು. ಅವುಗಳಲ್ಲಿ ಮೈಸೂರು ಸೆನ್ಸಸ ಬುಕ್ಕುಗಳನ್ನು ಓದಿ, ಅನಂತರ ಮದ್ರಾಸ ಸೆನ್ಸಸ ಬುಕ್ಕುಗಳನ್ನು ಓದಿದೆನು. ಅವುಗಳಲ್ಲಿ XIV ನೇ ಸಂಪುಟದ ಭಾಗ ೨ ರಲ್ಲಿ ಮತಗಳ ಪ್ರಕಾರ ಜನಸಂಖ್ಯೆ ಹಾಕಿತ್ತು. ಹೇಗೆಂದರೆ:— ಹಿಂದೂಗಳಲ್ಲಿ, ಆರ್ಯಹಿಂದೂ, ಬ್ರಾಹ್ಮೋಹಿಂದೂ, ರಾಧಾಸ್ವಾಮಿಹಿಂದೂ, ಬ್ರಾಹ್ಮಣಹಿಂದೂ ಎಂತಲೂ, ಆ ಮೇಲೆ ಮುಸಲ್ಮಾನ, ಕ್ರಿಶ್ಚಿಯನ್, ಜೈನ, ಬುದ್ಧಿಷ್ಟ, ಸಿಕ್ ಎಂಬುದಾಗಿ ಶಿರೋಭಾಗ ಮಾಡಿ ಜನಸಂಖ್ಯೆ ಹಾಕಿತ್ತು. ಹಿಂದೂ ಮತದೊಳಗೇನೇ ಲಿಂಗಾಯತ ಅಥವ ವೀರಶೈವ ಹಿಂದೂ ಎಂದು ಮತದ ಕೆಳಗೆ ನಮ್ಮವರು ಸರ್ಕಾರದವರನ್ನು ಕೇಳಿ ಹಾಕಿಸದೇ ಹೋದ್ದರಿಂದ ಅದರಲ್ಲಿ ಲಿಂಗಾಯತರ ಜನಸಂಖ್ಯೆ ತಪ್ಪಿಹೋಯಿತು. ಈ ವಿಚಾರವನ್ನು ಲಿಂಗಾಯತ ಪ್ರಮುಖರು ಮತ್ತು ಮಹಾಸಭೆಯವರು ನಿಷ್ಕಳಂಕ ದೃಷ್ಟಿಯಿಂದ ಚೆನ್ನಾಗಿ ಪರ್ಯಾಲೋಚಿಸಬೇಕು.

ಆ ಮೇಲೆ ಅದೇ ಮದ್ರಾಸಾಧಿಪತ್ಯದ ಸೆನ್ಸಸ ಬುಕ್ಕಿನಲ್ಲಿ ಜಾತಿಗಳ ಪ್ರಕಾರ ಜನಸಂಖ್ಯೆ ಹಾಕಿರುವದನ್ನು ನೋಡಿದೆನು. ಅದರಲ್ಲಿ ಕೆಲವು ಚುನಾಯಿಸಲ್ಪಟ್ಟ ಜಾತಿಗಳ ಸಂಖ್ಯೆ ಎಂಬ ಶಿರೋಭಾಗದ ಕೆಳಗೆ ಬರೆಯಲ್ಪಟ್ಟಿತ್ತು. ಚುನಾಯಿಸಲ್ಪಟ್ಟ ಜಾತಿಗಳು ಯಾವವೆಂದರೆ:— ಬ್ರಾಹ್ಮಣ (ಒರಿಯ), ಬ್ರಾಹ್ಮಣ (ತೆಲಗು), ಬ್ರಾಹ್ಮಣ (ಕನ್ನಡ), ಬ್ರಾಹ್ಮಣ (ತಮಿಳ್), ಬ್ರಹ್ಮಣ (ಮಳಯಾಳ), ಪಂಚಮ, ಗೊಲ್ಲ, ರಾಜು, ಯಾದವ, ವನ್ನಿಯನ್, ವಿಳ್ಳುವನ್, ಲಬ್ಬೆ, ನಾಯರ್, ಆದಿ ಅಂಧ್ರ, ಆದಿ ದ್ರಾವಿಡ, ಆರ್ಯವೈಶ್ಯ, ತೆಲುಗ ಮೊದಲಾದ ಇನ್ನೂ ನಾಲ್ಕೈದು ಜಾತಿಗಳು. ಇದರೊಳಗೆ ಲಿಂಗಾಯತ ಅಥವ ವೀರಶೈವರ ಹೆಸರೇ ಇಲ್ಲ. ಈ ರೀತಿಯಾಗಿ ಮತದ ಕಲಂನಲ್ಲೂ ಲಿಂಗಾಯತರ

ಹೆಸರಿಲ್ಲ, ಜಾತಿಯು ಕಲಂನಲ್ಲೂ ಲಿಂಗಾಯತರ ಹೆಸರಿಲ್ಲ. ಜಾತಿ ಶ್ರೇಷ್ಠತ್ವಕ್ಕೆ ಹೊಡೆದಾಡುವ ಅಣ್ಣಗಳಿರಾ, ಪೀಠಗಳ ಪ್ರಾಮುಖ್ಯತೆಗೆ ಹೊಡೆದಾಡುವ ಪೀಠಾಧಿಕಾರಿಗಳಿರಾ ನಿಮ್ಮ ಒಟ್ಟು ಜನಾಂಗಕ್ಕೆ ಏನಾಗಿದೆ ಎಂಬುದನ್ನು ಕಣ್ಣುಬಿಟ್ಟು ನೋಡಿರಿ. ಮೇಲ್ಕಂಡ ಮದ್ರಾಸಾಧಿಪತ್ಯದ ಸೆನ್ಸಸ ಪ್ರಕಾರ ೧೯೩೧ ನೇ ವರ್ಷಕ್ಕೆ ಮದ್ರಾಸಾಧಿಪತ್ಯದ ಯಾವ ಮೂಲೆಯಲ್ಲೂ ಲಿಂಗಾಯತರ ಒಂದು ಪಿಳ್ಳೆಯೂ ಇಲ್ಲದಂತಾಯಿತು. ಮದ್ರಾಸಾಧಿಪತ್ಯದಲ್ಲಿ ಶ್ರೀಶೈಲದ ಮಠವಿದೆ. ಉಜ್ಜನಿ ಮಠವಿದೆ. ಅನೇಕ ವೀರಶೈವ ಧನವಂತರಿರುತ್ತಾರೆ. ಅನೇಕ ಘನತರವಾದ ಶಾಸ್ತ್ರಿಗಳಿರುತ್ತಾರೆ. ಆದರೂ ಮದ್ರಾಸಾಧಿಪತ್ಯಕ್ಕೆ ಲಿಂಗಾಯತರ ಹೆಸರು ಶೂನ್ಯವು.

ಇದು ಏಕೆ ಹೀಗಾಯಿತೆಂದು ನಾನು ಆಲೋಚನೆ ಮಾಡಿ ೧೯೩೧ ನೆ ವರ್ಷದ ಸೆನ್ಸಸ ಸುಪರಿಂಟೆಂಡೆಂಟರಿಗೆ ವೀರಶೈವ ಅಥವ ಲಿಂಗಾಯತರ ವಿಚಾರ ಕುರಿತು ರಜಿಸ್ಟರ ದ್ವಾರ ಒಂದು ಕಾಗದ ಬರೆದೆನು. ಅದನ್ನು ಇಲ್ಲಿ ಪ್ರಕಟಿಸಿದರೆ ಪತ್ರ ವಿಸ್ತಾರವಾಗುವದೆಂದು ಬಿಟ್ಟಿರುತ್ತೇನೆ. ಸೆನ್ಸಸ ಸುಪರಿಂಟೆಂಡೆಂಟ ಇವರಿಂದ ಬಂದಿರುವ ಉತ್ತರವನ್ನು ಮಾತ್ರ ಈ ಕೆಳಗೆ ಪತ್ರಿಕಾವಾಚಕರ ಅವಗಾಹನೆಗಾಗಿ ಬರೆದಿರುತ್ತೇನೆ.

*Sir,*

Ref. Your letter of 13th March 1933.

As a measure of economy, sorting was in 1931 restricted to a selection of castes and communities. I regret, therefore, that it is not possib e for me to give the information you desire.

*I have the honour to be,*

Sir,

*Your most obedient servant,*

(*Sd*) M. **Yeatts**,

Superintendent of Census Operations,

*Madras.*

ಇದರಲ್ಲಿ ಕೆಲವು ಚುನಾಯಿಸಲ್ಪಟ್ಟ ಜಾತಿಗಳ ಜನಸಂಖ್ಯೆ ಮಾತ್ರ ಈ ಸಾರಿ ಕೆಲಸ ಕಮ್ಮಿ ಮಾಡಿಕೊಳ್ಳುವದಕ್ಕಾಗಿ ಕೊಡಲ್ಪಟ್ಟಿದೆ ಎಂದ-

ಸೆನ್ಸಸ ಸುಪರಿಂಟೆಂಡೆಂಟರವರು ಮೇಲ್ಕಂಡ ಉತ್ತರದಲ್ಲಿ ಬರೆದಿರುತ್ತಾರೆ. ಇದರಲ್ಲಿ ಸರಕಾರದವರ ತಪ್ಪು ಇದೆ ಎಂದು ನಾವು ಎಣಿಸಲಿಕ್ಕಾಗುವದಿಲ್ಲ. ನಮ್ಮ ಲಿಂಗಾಯತರು ಸರಕಾರಕ್ಕೆ ಸರಿಯಾಗಿ ವಿಜ್ಞಾಪಿಸಿಕೊಳ್ಳದಿರುವದು ನಮ್ಮ ತಪ್ಪಾಗಿರುತ್ತದೆ. ಲಿಂಗಾಯತ ಅಥವ ವೀರಶೈವರು ಚರಿತ್ರ ಪ್ರಸಿದ್ಧವಾದ ಮತದವರೆಂಬುದನ್ನು ನಮ್ಮವರು ಸರಕಾರಕ್ಕೆ ಅರುಹಬೇಕಾಗಿತ್ತು. ಆರ್ಯಸಮಾಜದವರು, ಬ್ರಹ್ಮಸಮಾಜದವರು, ರಾಧಾಸ್ವಾಮಿ ಮತದವರು ಹಿಂದೂ ಮತದಲ್ಲೇನೆ ಒಂದು ಪ್ರಭೇದವನ್ನಾಗಿ ಬರೆಸಿ ಜನಸಂಖ್ಯೆಯನ್ನು ಹೊಂದಿರುವಾಗ್ಯೆ, ವೀರಶೈವರು ವೀರಶೈವಹಿಂದೂ ಎಂದು ಬರೆಸಿ ಜನಸಂಖ್ಯೆಯನ್ನು ಪಕೆ ಹೊಂದಬಾರದು ? ಸರಕಾರದವರು ನಮ್ಮ ಕೋರಿಕೆಯನ್ನು ಎಂದಿಗೂ ಸಫಲಗೊಳಿಸದೇ ಇರುವದಿಲ್ಲ. ನಮ್ಮ ನಮ್ಮ ಗುದ್ಯಾಟದಲ್ಲಿ ಚರಿತ್ರ ಪ್ರಸಿದ್ಧವಾದ ನಮ್ಮ ಒಟ್ಟು ಸಮಾಜವನ್ನೇ ನಿರ್ಮೂಲ ಮಾಡುತ್ತಲಿದ್ದೇವೆ.

---

## ಯಾತ್ರಾದಿ ಸಮಾರಂಭಗಳು.

(ಬರೆದವ— ಬಸವಸೇವಕ)

ನಮ್ಮ ಸಮಾಜದಲ್ಲಿ ಮಬ್ಬು ಜನಗಳು ಎಲ್ಲಿಯಾದರೂ ಜಾತ್ರೆ, ಉತ್ಸವ, ಪೂಜಾಸಮಾರಂಭ ಮುಂತಾದ ಪ್ರಸಂಗಗಳು ನಡೆಯುತ್ತವೆಂದು ಗೊತ್ತಾದ ಕೂಡಲೆ ಪೂರ್ವಾಪರ ವಿಚಾರವಿಲ್ಲದೆ ಸುಮ್ಮನೆ ಹಿಂಡುಗಟ್ಟಿ ಅಲ್ಲಿಗೆ ಹೋಗಿ ದುಡ್ಡು ಸೂರೆ ಮಾಡಿ ಉದ್ಧಾರಾವೆವೆಂದು ಭಾವಿಸುತ್ತ ಮರಳಿ ಸ್ವಸ್ಥಳಕ್ಕೆ ಬರುವರು. ಹೀಗೆ ಯಾತ್ರೋತ್ಸವಗಳಿಗಾಗಿ ಹೋಗುವದು ವೀರಶೈವ ಮತಕ್ಕೆ ಸಮ್ಮತವೇ? ಸಮ್ಮತವಿರದಿದ್ದರೆ ಅವು ರೂಢಿಯಲ್ಲಿ ಹೇಗೆ ಬಂದವು? ಅವುಗಳನ್ನು ಈಗ ತೆಗೆದುಹಾಕಲು ಶಕ್ಯವೇ? ಶಕ್ಯವಿರದಿದ್ದರೆ ಆವುಗಳ ದಿಶೆಯನ್ನಾದರೂ ಬದಲಿಸಬಹುವೇ ? ಹಾಗಿದ್ದರೆ ಬದಲಿಸಲು ಯಾವ ಉಪಾಯವನ್ನು ಮಾಡಬೇಕು ? ಇವು ವಿಚಾರಿಸಲು ಅತ್ಯಂತ ಮಹತ್ವದ ಪ್ರಶ್ನೆಗಳಾಗಿವೆ.

ವೀರಶೈವರು ತೀರ್ಥಯಾತ್ರೆಗಳನ್ನು ಮಾಡಬಾರದೆಂದು ವಚನಕಾರರು ಕಂಠೋಕ್ತವಾಗಿ ಹೇಳಿರುವರು. ಉದಾಹರಣಾರ್ಥವಾಗಿ ಅಂಬಿಗರ ಚೌಡಯ್ಯನು ಅಪ್ಪಣೆ ಕೊಡಿಸಿರುವದೇನಂದರೆ—"ಕಾಶೀಯಾತ್ರೆಗೆ ಹೋದೆನೆಂಬ ವೇಶಿಗಳ ಮಾತು ಕೇಳಲಾಗದು. ಕೇದಾರಕ್ಕೆ ಹೋದೆನೆಂಬ ಹೇಸಿಹೀನರ ನುಡಿಯ ಲಾಲಿಸಲಾಗದು. ಸೇತುಬಂಧು ರಾಮೇಶ್ವರಕ್ಕೆ ಹೋದೆನೆಂಬ ಸರ್ವಹೀನರ ಮುಖವ ನೋಡಲಾಗದು. ಪರ್ವತಕ್ಕೆ ಹೋದೆನೆಂಬ ಪಂಚಮಹಾಪಾತಕರ ಮುಖವ ನೋಡಲಾಗದು. ಅದೆಂತೆಂದೊಡೆ, ಕಾಯವೇ ಕಾಶಿ, ಒಡಲೇ ಕೇದಾರ, ಮಾಡಿ ನೀಡುವ ಹಸ್ತವೇ ಸೇತುಬಂಧ ರಾಮೇಶ್ವರ, ಮಹಾಲಿಂಗವ ಹೊತ್ತಿರುವ ಶಿರಸ್ಸೇ ಶ್ರೀಶೈಲಪರ್ವತ ನೋಡಾ. ಇಂತಿವನರಿಯದೆ, ಪರ್ವತಕ್ಕೆ ಹೋಗಿ ಪಾತಾಳಗಂಗೆಯಲ್ಲಿ ಮುಳುಗಿ ಮುಳುಗಿ, ತಲೆಯ ಬೋಳಿಸಿಕೊಂಡು, ಗಂಗೆಯೊಳು ಕೋಣನ ಹಾಗೆ ನೈಗೆಟ್ಟು ಫಕ್ಕನೇ ಮುಳುಗಿ ಅಲ್ಲಿಂದ ಬಂದು ಅನ್ನ ವಸ್ತ್ರ ಕುಸುಮವಂ ಕೊಟ್ಟು ಪಾಪ ಹೋಯಿತೆಂದು ಅಲ್ಲಿಂದ ಬಂದು ಲಿಂಗವಡಿಗಡಿಗೆ ಹೊಯ್ದು, ಬಾರದ ಪಾಪವ ತಾವಾಗಿ ಬರಿಸಿಕೊಂಡು ತಗರ ಜನ್ಮದಲ್ಲಿ ಹುಟ್ಟುವರಯ್ಯಾ. ಕೋಲು ಬುಟ್ಟಿಯಂ ಕೊಟ್ಟು ಅಟ್ಟಿಸಿ ಬಿಟ್ಟ ಬಳಿಕ, ಅಲ್ಲಿಂದ ಬಂದ ವರಿಗೆ ಇಲ್ಲಿದ್ದವರು ಹೋಗಿ ಇದಿರುಗೊಂಡು ಕರೆತರುವುದಕ್ಕೆ ಹೋಗುವ ಮೂಳ ಹೊಲೆಯರಿರಾ, ನೀವು ಕೇಳಿರೋ, ಅದೆಂತೆಂದೊಡೆ, ಶ್ರೀಮಹಾಪರ್ವತಕ್ಕೆ ಹೋದವರು ತಿರುಗಿ ಬಪ್ಪರೇ? ಮೇರು ಪರ್ವತಕ್ಕೆ ಹೋದವರು ಮರಳಿ ಬಪ್ಪರೇ? ಛೀ ಛೀ ಮೂಳದಿಂಡೆಯರಿರಾ, ನೀವು ನೀಳ ಹೊಲೆಯರೆಂದಾತ ನಮ್ಮ ದಿಟ್ಟ ವೀರಾದಿವೀರ ಅಂಬಿಗರ ಚೌಡಯ್ಯನು."

ಶಿವಶರಣರು ಹೀಗೆ ಹೇಳಿರುವ ಉದ್ದೇಶವೇನು? ತೀರ್ಥಯಾತ್ರೆಗಳಿಗೂ ಅವರಿಗೂ ವೈರತ್ವವಿದ್ದಿತೇ? ಛೀ! ಹಾಗೇನೂ ಅಲ್ಲ. ತೀರ್ಥಯಾತ್ರೆಗಳನ್ನು ಮಾಡಬಾರದೆಂಬದಕ್ಕೆ ವಚನಗಳಲ್ಲಿ ಎರಡು ಉದ್ದೇಶಗಳು ವ್ಯಕ್ತವಾಗುತ್ತವೆ. (೧) ಯಾತ್ರೆಗಳು ಪಾಪ ಪ್ರಕ್ಷಾಲನ ಮಾಡಲಾರವು. (೨) ತನ್ನ ದೇಹದ ದುರ್ಗುಣಗಳನ್ನಳಿದರೆ ಅದೇ ತನಗೆ ಕ್ಷೇತ್ರವು. ಕ್ಷೇತ್ರವೆಂಬುದು ಬೇರೊಂದಿಲ್ಲ.

ಮನುಷ್ಯನು ತನ್ನಲ್ಲಿ ಅಸೂಯೆ, ಕಾಪಟ್ಯ, ಪರನಿಂದೆ ಮೊದಲಾದ ದುರ್ಗುಣಗಳನ್ನೊಟ್ಟಿಕೊಂಡು ನದಿಯಲ್ಲಿ ಮುಳುಗಿ ದೇವರ

ದರ್ಶನ ಹೊಂದಿದರೆ ಸರ್ವಪಾಪಗಳೂ ನಾಶವಾಗುತ್ತವೆಂಬ ಮಾತು ಸಂಪೂರ್ಣ ಸುಳ್ಳಾದುದು. ಇಂಥ ಪ್ರಾಯಶ್ಚಿತ್ತಗಳಿಂದ ಬೇಕಾದಂಥ ಪಾಪ ಮಾಡಿದರೂ ಅದು ನಾಶವಾಗುತ್ತದೆಂದ ಬಳಿಕ ಪಾಪಕ್ಕೆ ಪರ್ಯಾಯದಿಂದ ಉತ್ತೇಜನ ಕೊಟ್ಟಂತಾಗುವದಲ್ಲದೆ ಪಾಪವಿಮೋಚನೆಯ ಮಾರ್ಗವನ್ನೇನೂ ಹಚ್ಚಿಕೊಟ್ಟಂತಾಗಲಿಲ್ಲ. ಬಹುದಿನ ಮಾಡಿದ ಪಾಪದ ರಾಶಿಯು ಒಂದೆರಡು ದಿನಗಳಲ್ಲಿ ಗುಡಿಯೊಳಗಿನ ದೇವರ ದರ್ಶನದಿಂದಾಗಲಿ ನದಿಯಲ್ಲಿ ಮುಳುಗುವದರಿಂದಾಗಲಿ ಅಥವಾ ಗಣಂಗಳಿಗೆ ಉಣಿಸುವದರಿಂದಾಗಲಿ ಹೋಗುತ್ತದೆಂದು ತಿಳಿದರೆ ಯಾರಾದರೂ ಬೇಕಾದಂಥ ಪಾಪವನ್ನು ಮಾಡಿ ದಕ್ಕಿಸಿಕೊಳ್ಳಬಹುದು. ಇದರಿಂದೆ ಯಾತ್ರೆಗಳು ಪಾಪವಿಮೋಚನೆಯ ಸ್ಥಾನಗಳಾಗದೆ ಪಾಪೋತ್ತೇಜನದ ಸ್ಥಳಗಳೆಂದು ಸಿದ್ಧವಾದಂತಾಯಿತು. ಆದುದರಿಂದ ಪಾಪವನ್ನು ಹೆಚ್ಚಿಸಲು ಆಸ್ಪದ ಕೊಡುವ ಈ ಪವಿತ್ರ ಸ್ಥಾನಗಳಿಗೇಕೆ ಹೋಗಬೇಕು? ದುರ್ಗುಣಗಳನ್ನು ಕಟ್ಟಿಕೊಂಡು ದೇವರ ಸನ್ನಿಧಿಯಲ್ಲಿ ಬಿಟ್ಟು ಬರುತ್ತೇವೆಂದು ತಿಳಿಯುವದು ಕೇವಲ ಮೂರ್ಖತನವು.

ಹಿಂದಕ್ಕೆ ಪಾಶ್ಚಾತ್ಯ ದೇಶಗಳಲ್ಲಿ ಕ್ರಿಸ್ತಿ ಧರ್ಮದ ಗುರುಗಳಾದ ಪೋಪಸ್ವಾಮಿಗಳು ಇಂತಿಂಥ ಅಪರಾಧ ಮಾಡಿದವರು ಇಂತಿಷ್ಟು ರೂಪಾಯಿಗಳನ್ನು ಕೊಟ್ಟು ಇಂತಿಂಥ 'ಪ್ರಾಯಶ್ಚಿತ್ತ ಪತ್ರಿಕೆ' ಗಳನ್ನು ಕೊಂಡುಕೊಂಡರೆ ಅವರ ಪಾಪಗಳು ಕ್ಷಮಿಸಲ್ಪಡುವವೆಂದು ಜನಸಾಮಾನ್ಯರಲ್ಲಿ ಪ್ರಕಟಿಸಿದ್ದರು. ಮೂಢ ನಂಬಿಗೆಯವರಾದ ಮುಬ್ಬು ಜನಗಳು ತಮ್ಮ ಪಾಪಗಳನ್ನು ಕಳೆದುಕೊಳ್ಳಬೇಕೆಂದು ಗುರುಗಳಾದ ಪೋಪಸ್ವಾಮಿಗಳಿಗೆ 'ಪ್ರಾಯಶ್ಚಿತ್ತ ಪತ್ರಿಕೆ' ಗಳ ಮುಖಾಂತರವಾಗಿ ವಿಗ್ಗಳವಾದ ಹಣವನ್ನು ಸಲ್ಲಿಸುತ್ತಿದ್ದರು. ಆ ಪ್ರಕಾರ ಮುಬ್ಬು ಜನರ ಮನಸ್ಸನ್ನು ಅಭ್ಯಾಸ ಮಾಡಿದ ಪೋಪಸ್ವಾಮಿಗಳವರು 'ಪ್ರಾಯಶ್ಚಿತ್ತ ಪತ್ರಿಕೆ' ಗಳ ವ್ಯಾಪಾರ ಮಾಡಿ ಕುಬೇರ ಪದವಿಯನ್ನು ಸಂಪಾದಿಸಿದ್ದರು. ಆದರೆ ಈ ಮೋಸದ ವ್ಯವಹಾರವು ಎಷ್ಟು ದಿನ ನಡೆಯುವದು? ಕೊನೆಗೆ ಮಾರ್ಟಿನ್ ಲ್ಯೂಥರನೆಂಬ ಎದೆಗಾರನೊಬ್ಬನು ಮುಂದೆ ಬಂದು ಒಂದು ಸಾರ್ವಜನಿಕ ಸಭೆಯಲ್ಲಿ ಮನುಷ್ಯನು ಮಾಡಿದ ಪಾಪಗಳು ತನ್ನಲ್ಲಿ ಹುಟ್ಟಿದ ಪ್ರಾಯಶ್ಚಿತ್ತದ ಮೂಲಕ ಮನಸ್ಸು ಪವಿತ್ರವಾದಾಗ ಮಾತ್ರ ನಾಶವಾಗುವವಲ್ಲದೆ ಕೇವಲ 'ಪ್ರಾಯಶ್ಚಿತ್ತ ಪತ್ರಿಕೆ' ಗಳನ್ನು ಕ್ರಯಕ್ಕೆ ತೆಗೆದುಕೊಳ್ಳುವದರಿಂದ ನಾಶವಾಗುತ್ತವೆಂಬದು ಮೂರ್ಖತನವು ಎಂದು ಸಾರಿ ಆ

ಪ್ರಾಯಶ್ಚಿತ್ತ ಪತ್ರಿಕೆಗಳನ್ನೆಲ್ಲ ತುಳಿದು ಸಭೆಯಲ್ಲಿ ಹೋಳೀ ಮಾಡಿಸಿ ಬಿಟ್ಟನು. ಆ ಮೇಲೆ ಮಬ್ಬು ಜನಗಳಿಗೆ ಮನವರಿಕೆಯಾಗಿ ಅನೇಕರು ಪೋಪನ ಹಾದಿಯನ್ನೇ ಬಿಟ್ಟು ಲ್ಯೂಥರನ ಪಂಥವನ್ನು ಹಿಡಿದರು. ಇದರಂತೆ ಯಾತ್ರಾದಿಗಳೆಲ್ಲ ಮಬ್ಬು ಜನಗಳ ದುಡ್ಡನ್ನು ಸೆಳೆಯುವ ಲಾಟರಿಯ ಮಂದಿರಗಳಾದರೆ ಪಾಪನಾಶವಾಗುವದೆಂಬ ಮಾತು ಕೇವಲ ಅಪಹಾಸ್ಯಕರವಲ್ಲವೇ ?

ಇನ್ನು ಮನುಷ್ಯನಲ್ಲಿ ಸತ್ಯ, ಸನ್ಮಾರ್ಗ, ಶಮೆ, ದಮೆ, ಶಾಂತಿ ಮೊದಲಾದ ಸದ್ಗುಣಗಳಿದ್ದರೆ ಆತನು ಪವಿತ್ರಾತ್ಮನೇ ಅಲ್ಲವೇ? ಅಂಥವನು ತೀರ್ಥಯಾತ್ರೆಗಳಿಗೆ ಹೋಗುವದರಿಂದೇನು ಪ್ರಯೋಜನ? ಶ್ರೀ ಭಗವದ್ಗೀತೆಯಲ್ಲಿ "ಇದಂ ಶರೀರಂ ಕೌಂತೇಯ ಕ್ಷೇತ್ರ ಮಿತ್ಯಭಿಧೀಯತೇ" ಅಂದರೆ ನಮ್ಮ ದೇಹವೇ ಪವಿತ್ರವಾದ ಕ್ಷೇತ್ರವೆಂದು ಹೇಳಿದೆ. ಇಂಥ ಪವಿತ್ರವಾದ ಕ್ಷೇತ್ರಸ್ಥಾನದಲ್ಲಿ ಇಷ್ಟಲಿಂಗವೆಂಬ ಪರವಸ್ತುವು ಇರಲಿಕ್ಕಾಗಿ ಬೇರೆ ಗುಡಿ ಗುಂಡಾರ ಮಠ ಮಾನ್ಯಗಳಲ್ಲಿರುವ ಸ್ಥಾವರ ಜಂಗಮ ದೇವರುಗಳ ಆಶೆಯೇಕೆ? ನಮ್ಮ ಕರಕಮಲದೊಳಗಿದ್ದ ಪರವಸ್ತುವು ಬೇಡಿದಿಷ್ಟಾರ್ಥಗಳನ್ನು ಕೊಡಲು ಸಿದ್ಧವಾಗಿರುವಾಗ ಅನ್ಯ ದೇವರುಗಳಿಗೇಕೆ ಬಾಯ್ಬಿರೆಯಬೇಕು? ತನ್ನ ದೇಹವೇ ಕ್ಷೇತ್ರ; ಆತ್ಮವೇ ಲಿಂಗ. ಈ ಮೇರೆಗೆ ಅಂಗಲಿಂಗದ ಸುಖದ ಅಮಳಾನಂದವನ್ನು ನಾವು ಸೇವಿಸುವದನ್ನು ಬಿಟ್ಟು ಕಂಗಾಲರಂತೆ ಭಂಗಗೆಟ್ಟು ಬೇರೆ ಕಡೆಗೆ ಹೋಗುವದೇಕೆ? ಒಂದೆರಡು ದಿವಸಗಳಲ್ಲಿ ತೀರ್ಥಯಾತ್ರೆ ಮಾಡುವದರಿಂದ ಸದ್ಗುಣಗಳು ಮನುಷ್ಯನಲ್ಲಿಳವಡುತ್ತವೆಂಬ ಮಾತು ಅಸತ್ಯವು. ಸದ್ಗುಣಿಯಾಗಬೇಕೆಂದು ಇಚ್ಛೆ ಮಾಡಿ ಅದರಂತೆ ನಡೆದಾಗ ಸದ್ಗುಣಗಳು ಲಭಿಸುವವಲ್ಲದೆ ತೀರ್ಥಯಾತ್ರೆಗಳನ್ನು ಮಾಡುವದರಿಂದಲ್ಲ. ಆದುದರಿಂದಲೇ ಶ್ರೀ ಸರ್ಪಭೂಷಣ ಶಿವಯೋಗಿಗಳು ಅಪ್ಪಣೆ ಕೊಡಿಸಿರುವದೇನಂದರೆ— "ಯಾಕೆ ಯಾತ್ರೆಯ ಮಾಡುತಿರ್ಪರಲ್ಲೇನಿಹುದು। ಸಾಕು ಬಿಡು ತಮ್ಮೊಳಿಗುಣಗಳಿರುತಿರಲು॥"

ಸದ್ಯದ ಪರಿಸ್ಥಿತಿಯಲ್ಲಿ ತೀರ್ಥಯಾತ್ರೆಗಳನ್ನು ಮಾಡುವದರಿಂದಾಗುವ ಲಾಭಗಳಿಗಿಂತಲೂ ಹಾನಿಗಳೇ ಅಧಿಕವಾಗಿವೆ. ಅವುಗಳಿಂದ ಮನುಷ್ಯನ ದುಡಿತವು ಹಾಳಾಗುತ್ತದೆ. ನಿದ್ರಾಭಂಗವಾಗುತ್ತದೆ. ಕಾಲಕ್ಕೆ ಸರಿಯಾಗಿ ಅನ್ನಪಾನಾದಿಗಳು ನಡೆಯುವದಿಲ್ಲ. ಅನೇಕ ಜನರು ಒತ್ತೆ

ಟ್ಟಿಗೆ ಕೂಡುವದರಿಂದ ಹವೆಯು ಕೆಟ್ಟು ಅನಾರೋಗ್ಯತೆಯುಂಟಾಗು ವದು. ರೇಲ್ವೆ, ತಲೆಪಟ್ಟಿ, ಕಾಯಿಕಪ್ಪುರ, ವಿನೋದಗಳಿಗಾಗಿ ವಿಶೇಷ ಹಣವು ವೆಚ್ಚವಾಗುವದು.

ಈಗ ಕಾಶಿ, ವೆಂಕಟಗಿರಿ, ಕೇದಾರ, ಪಂಢರಪುರ ಮುಂತಾದ ಕ್ಷೇತ್ರಸ್ಥಾನಗಳಿಗಾಗಿ ಲಕ್ಷಾವಧಿ ಜನರು ಹೋಗುತ್ತಿರುತ್ತಾರೆ. ಮತ್ತು ಧರ್ಮಾರ್ಥವಾಗಿ ಲಕ್ಷಾಂತರ ರೂಪಾಯಿಗಳನ್ನು ದೇವರ ಹೆಸರಿನಿಂದ ಧಾರೆಯೆರೆಯುತ್ತಾರೆ. ಆದರೆ ಆ ಹಣವೆಲ್ಲ ಸರಕಾರದ ಬೊಕ್ಕಸಕ್ಕೆ ಸೇರುತ್ತದೆ. ದೇವರಿಗೆಲ್ಲಿ ಮುಟ್ಟಿತು? ದೇವರಿಗೆ ನಾವು ಕೊಟ್ಟ ದುಡ್ಡು ಮುಟ್ಟುತ್ತದೆಂಬದು ಮೂರ್ಖತನವು. ನಮಗೆ ದುಡ್ಡನ್ನು ದಯಪಾಲಿ ಸುವ ದೇವರು ನಮ್ಮಿಂದ ದುಡ್ಡು ಬೇಡಬಹುದೇ? ದೇವರಿಗೆ ನಾವು ದುಡ್ಡು ಕೊಡಲಿಕ್ಕೆ ಆತನೇನು ದರಿದ್ರನೇ? ನಮ್ಮ ಪಾಪಗಳನ್ನು ಕಳೆ ದುಕೊಳ್ಳಲಿಕ್ಕೆ ಆತನಿಗೆ ಲಂಚ ಕೊಟ್ಟರೆ ಆತನು ಲಂಚಬಡಕನೇ? ನಾವು ಕೊಟ್ಟ ದುಡ್ಡು ದೇವರಿಗೆ ಸರ್ವಥಾ ಮುಟ್ಟಲಾರದು. ಆದರೆ ಅದು ಅವರ ಪ್ರತಿನಿಧಿಗಳಾದ ಸರಕಾರ, ಪೂಜಾರಿ, ಸ್ವಾಮಿಗಳು ಮುಂತಾದವರಿಗೆ ಸಲ್ಲುತ್ತದೆ. ಮುಗ್ಧ ಭಕ್ತಿಯಿಂದ ಮಬ್ಬು ಜನಗಳು ದೇವರಿಗೆ ದುಡ್ಡು ಕೊಡುತ್ತೇವೆಂದು ತಿಳಿದು ಅನ್ಯರ ಕಿಸೆಯನ್ನು ತುಂಬಿ ಮೋಸ ಹೋಗುವದು ಅತ್ಯಂತ ಪಾಪದ ಕೆಲಸವಲ್ಲವೇ? ನಮ್ಮೀ ದರಿದ್ರ ದೇಶದಲ್ಲಿ ತಿನ್ನಲಿಕ್ಕೆ ಕೂಳಿಲ್ಲದೆ ಸಾಯುತ್ತಿರುವ ಈ ಪಾಮರರು ಧರ್ಮದ ಹುಚ್ಚಿನಿಂದ ದುಡ್ಡು ಸುರುವುತ್ತಿರುವದನ್ನು ನೋಡುವದ ಕ್ಕಿಂತ ನಮ್ಮ ಮೂಢ ಧರ್ಮವೇ ನಾಶವಾಗಿ ಹೋದರೆ ಒಳಿತಲ್ಲವೆ?

ಮೊದಲು ತೀರ್ಥಯಾತ್ರೆಗಳ ಕಲ್ಪನೆಯಾದರೂ ಹೇಗೆ ಹುಟ್ಟಿತು? ಗಿರಿ ನಿರ್ಝರ ವನ ಕಂದರಗಳಲ್ಲಿ ನಿಸರ್ಗದೇವಿಯ ಸೌಂದರ್ಯವು ವಿರಾ ಜಿಸುತ್ತಿರುತ್ತದೆ. ಸೌಂದರ್ಯವಿದ್ದಲ್ಲಿ ಪರಮಾತ್ಮನ ಅಸ್ತಿತ್ವವಿರುತ್ತದೆ. ಈ ಸೌಂದರ್ಯಮಯವಾದ ನೈಸರ್ಗಿಕ ರೂಪಗಳನ್ನು ಕಣ್ಣಾರೆ ಕಂಡು ಮನವಾರೆ ಆನಂದಬಟ್ಟು ಮನುಷ್ಯನು ತನ್ನನ್ನು ತಾನು ಮರೆದು ಪರ ಮಾತ್ಮನ ಲೀಲೆಯನ್ನು ಸ್ಮರಿಸಿ ಆತನಲ್ಲಿಯೇ ತಲ್ಲೀನನಾಗುತ್ತಾನೆ. ಅಂಥ ಪವಿತ್ರ ಕಲ್ಪನೆಯನ್ನು ಹುಟ್ಟಿಸುವದಕ್ಕಾಗಿಯೇ ಇಂಥ ರಮ್ಯಸ್ಥಳಗಳಲ್ಲಿ ಪವಿತ್ರ ಕ್ಷೇತ್ರಗಳನ್ನು ಹಿಂದಿನವರು ಮಾಡಿದ್ದಾರೆ. ಹಿಂದಕ್ಕೆ ಜನರು

ತಮಗೆ ಇಚ್ಛೆಯಾದಾಗ ಇಂಥ ಸ್ಥಾನಗಳಿಗೆ ಪ್ರವಾಸಮಾಡಿ ತಮ್ಮ ನೇತ್ರ ಸಾಫಲ್ಯವನ್ನೂ ಮನದಾನಂದವನ್ನೂ ಹೆಚ್ಚಿಸಿಕೊಳ್ಳುತ್ತಿದ್ದರು. ಈಗಿನಂತೆ ಪ್ರತಿವರ್ಷ ಇಂತಿಂಥ ಮಿತಿಗೆ ಜಾತ್ರೆಗಳನ್ನು ನೆರೆಯಿಸಬೇಕೆಂಬ ಸಂಕೇತನೇನೂ ಇದ್ದಂತೆ ಕಂಡುಬರುವದಿಲ್ಲ.

ಆದರೆ ಬರಬರುತ್ತ ಬರುವ ಹೋಗುವ ಜನಗಳ ದಟ್ಟಣೆಯು ಹೆಚ್ಚಾದಂತೆ ಯಾತ್ರೆಗಳೆಲ್ಲ ಜಾತ್ರೆಗಳಾದವು. ಇಂತಿಂಥ ಮಿತಿಗೆ ಇಂತಿಂಥ ಜಾತ್ರೆಗಳಾಗಬೇಕೆಂಬ ನಿರ್ಧಾರವಾಯಿತು. ನಿಸರ್ಗಸೌಂದರ್ಯಕ್ಕೆ ಬದಲಾಗಿ ಮಾನವರ ಕೃತ್ರಿಮವಾದ ಸೊಬಗು ಸೌಂದರ್ಯಗಳನ್ನು ನೋಡುವ ಪ್ರಸಂಗ ಬಂದಿತು. ನಾಟಕ ಸಿನೇಮಾ ಕಂಪನಿಗಳೂ ಗೆಳತಿ ಗೆಳೆಯರ ಗುಂಪುಗಳೂ, ಚಹಾ ಮಿಠಾಯಿಯಂಗಡಿಗಳೂ ಕುಸ್ತಿಯ ಕಣಗಳೂ, ಪ್ರದರ್ಶನಗಳೂ ಯಾತ್ರೆಗಳಲ್ಲಿ ಪ್ರವೇಶಿಸಿ ದೈವಲೀಲೆಯ ಬದಲು ಮಾನವೀ ನಾಟಕದ ದೃಶ್ಯವನ್ನು ತೋರ್ಪಡಿಸಲಾರಂಭಿಸಿದವು. ಈ ಮೇರೆಗೆ ಯಾತ್ರೆಗಳು ಸಾಮಾಜಿಕ ಸ್ವರೂಪವನ್ನು ತಾಳಿದ ಬಳಿಕ ಸಮಾಜದ ದುಷ್ಟ ಗುಣಗಳೆಲ್ಲ ಅವುಗಳಲ್ಲಿ ಸೇರಿಕೊಂಡವು. 'ಬಾಂಬೈ ಬಾಜಾರ ನೋಡ, ಲಂಡನ್ ಗಮ್ಮತ ನೋಡ' ಎಂಬ ಮಾಯಾ ಜಾಲವು ಹಿಂದಿನ ಭಕ್ತಿಭಾವನೆಯನ್ನು ಅಣಕಿಸಲಾರಂಭಿಸಿತು. ಸ್ವಾರ್ಥಪರರಾದ ಕೆಲವು ಜನಗಳು ಮುಬ್ಬುಜನಗಳಿಗೆ ಧರ್ಮದ ಹುಚ್ಚು ಹಚ್ಚಿ ಮೆಲ್ಲಮೆಲ್ಲನೆ ದುಡ್ಡು ಸೆಳೆಯಹತ್ತಿದರು. ಮೋಸವನ್ನರಿಯದ ಮೂಢ ಜನರು ಯಾತ್ರೆಮಾಡಿದರೆ ಪುಣ್ಯಬರುತ್ತದೆಂಬ ಹಳೆ ಭಾವನೆಯನ್ನೇ ಮನದಟ್ಟಾಗಿಟ್ಟುಕೊಂಡು ಈಗ್ಯೂ ಹಾಗೆಯೇ ನಡೆಯಹತ್ತಿದ್ದಾರೆ.

ಮುಬ್ಬು ಜನಗಳ ಈ ಮೂಢ ಭಾವನೆಯನ್ನು ತೆಗೆದು ಹಾಕಲು ಸಾಧ್ಯವಿಲ್ಲವೋ? ಇಲ್ಲ. ಪರಂಪರಾಗತವಾದ ರೂಢಿಯ ಬಲೆಗೆ ಅವರು ಬಿದ್ದಿರುವದರಿಂದ ಅವರ ರಕ್ತನಾಳಗಳಲ್ಲಿ ಆ ಭಾವನೆಯೇ ಬೆರೆತು ಹೆಪ್ಪುಗಟ್ಟಿದಂತಾಗಿದೆ. ಆ ಭಾವನೆಯು ಧರ್ಮಗುರುಗಳ ಮಂಕು ಬೋಧೆಯನ್ನು ಕೇಳಿದಾಕ್ಷಣವಾಗಲಿ ಎರಡನೆಯವರು ಮಾಡುವದನ್ನು ನೋಡಿದರಾಗಲಿ ಕರಗಿ ಹರಿಯಲಾರಂಭಿಸುತ್ತದೆ. ಹೊಸ ವಿಚಾರಗಳೆಂದಿಗೂ ಅವರ ಮನಸ್ಸಿನಲ್ಲಿ ನಡಲಾರವು. ಅವರ ಅಜ್ಞಾನವನ್ನಡಗಿಸಲಿಕ್ಕೆ ಅವರಿಗೆ ಆಧುನಿಕ ಪದ್ಧತಿಯ ಶಿಕ್ಷಣವನ್ನು ಕೊಡಬೇಕು. ಧಾರ್ಮಿಕ ಗುರುಗಳೂ ಸ್ವಾಮಿಗಳೂ ತಮ್ಮ ಸ್ವಾರ್ಥವನ್ನು ಸಾಧಿಸಿ

ಕೊಳ್ಳಲಿಕ್ಕೆ ಮುಬ್ಬು ಜನಗಳನ್ನು ಹೇಗೆ ಬಲೆಯಲ್ಲಿ ಕೆಡವಬೇಕೆಂಬದನ್ನು ಚನ್ನಾಗಿ ಬಲ್ಲರು. ಅವರಿಗೆ ಧರ್ಮದ ಹುಚ್ಚು ಹಚ್ಚಿದರೆ ಅವರು ಬೇಕಾದಷ್ಟು ದುಡ್ಡು ಸೂರೆ ಮಾಡುವರೆಂಬದು ಅವರಿಗೆ ಗೊತ್ತು. ಈ ಮೇರೆಗೆ ಅಜ್ಞ ಜನಗಳ ಅಜ್ಞಾನ ಭಾವಿಕತನಗಳ ದುರುಪಯೋಗ ವನ್ನು ಹೊಂದುತ್ತ ಎಷ್ಟೋ ಡಾಂಭಿಕ ಸ್ವಾಮಿಗಳು ತಮ್ಮ ಮೂಗು ಮೇಲು ಮಾಡಿಕೊಂಡು ಮೆರೆಯುತ್ತಲಿದ್ದಾರೆ.

ಮುಬ್ಬು ಜನಗಳಿಂದೆತ್ತಿದ ದುಡ್ಡನ್ನು ಅವರ ಶಿಕ್ಷಣಕ್ಕಾಗಿ ವಿನಿ ಯೋಗಿಸಿದರೆ ಧರ್ಮಗುರುಗಳಿಗೆ ಭೂಷಣವಲ್ಲವೇ ? ಒಂದೆರಡು ದಿನ ಗಳ ಯಥೇಚ್ಛ ಭೋಜನಕ್ಕಾಗಿ ದುಡ್ಡು ಸೂರೆ ಮಾಡಿದರೆ ಈಗಿನ ಸುಧಾರಿಸಿದ ಸಮಾಜವು ಒಪ್ಪಬಹುದೇ ? ತೀರ್ಥಯಾತ್ರೆ ಪೂಜಾ ಮಹೋತ್ಸವಗಳ ನೆವದಿಂದ ಅನ್ಯರಿಗೆ ಕೈಯೊಡ್ಡಿ ಬಿಕ್ಷೆ ಬೇಡುವದು ವೀರಶೈವ ಧರ್ಮಕ್ಕೆ ಸಲ್ಲುವದೇ ? "ತನ್ನ ತನುವ ಕರಗಿಸಿ ಮನವ ಬಳಲಿಸಿ ನಿತ್ಯ ಶುದ್ಧ ಕಾಯಕದಿಂದ" ಬಂದ ದುಡ್ಡಿನಿಂದ ದಾಸೋಹ ಪೂಜಾದಿ ಮಹೋತ್ಸವಗಳನ್ನು ಮಾಡಬೇಕಲ್ಲದೆ ಅದಕ್ಕಾಗಿ ಅನ್ಯರಿಂದ ಹಣವನ್ನು ಬೇಡುವದು ಲಾಂಛನಾಪ್ಪವವೆಂದು ಶರಣರು ಹೇಳಿಲ್ಲವೇ ? ನಮ್ಮ ಶಿವಶರಣರೆಂದಿಗೂ ಹಾಗೆ ಮಾಡಲಿಲ್ಲ. ಸ್ವಾಮಿ ರಾಮತೀರ್ಥ, ಸ್ವಾಮಿ ವಿವೇಕಾನಂದ ಪ್ರಭೃತಿಗಳಾದರೂ ಇಂಥ ಕಾರ್ಯಗಳನ್ನು ಕೈಕೊಳ್ಳಲಿಲ್ಲ.

ಮೊದಲು ಗುಡಿಗಳೂ ಮಠಗಳೂ ವಿದ್ಯೆಯ ಕೇಂದ್ರಗಳಾಗಿದ್ದವು. 'ಮಠಾಶ್ಛಾತ್ರಾದಿ ನಿಲಯಂ' ಎಂದು ಅಮರಕೋಶದಲ್ಲಿದೆ. ಆದುದರಿಂದ ಮಠಗಳಾಗಲಿ ಗುಡಿಗಳಾಗಲಿ ಜನಗಳಿಗೆ ನಿರಂತರವಾಗಿ ವಿದ್ಯೆಯನ್ನು ದಯಪಾಲಿಸುವ ವಿದ್ಯಾಮಂದಿರಗಳಾಗಬೇಕಲ್ಲದೆ ಒಂದೆರಡು ದಿನಗಳ ಯಾತ್ರೆಯ ಸ್ಥಾನಗಳಾಗಿರಬಾರದು. ಬಂದ ದುಡ್ಡು ಸಮಾಜ ಹಿತಕ್ಕೆ ವಿಶೇಷತಃ ವಿದ್ಯೆಗೆ ಸಲ್ಲಬೇಕಲ್ಲದೆ ಸ್ವಾರ್ಥಕ್ಕಲ್ಲ. ಜಾತ್ರೆಯ ತಮಾಷೆ ಗಳು ಅನ್ಯರಿಗೆ; ಪಾರಮಾರ್ಥಜ್ಞರಾದ ವೀರಶೈವರಿಗಲ್ಲ.

---

# ಹೊಲೆಯಲ್ಲಿ ಹುಟ್ಟಿ ಕುಲವನರಸುವರೇ?

(ಲೇಖಕಃ— ಶಿವಕುಲದಾಸ.)

ಈಗ ನಮ್ಮ ಸಮಾಜದವರು ಬ್ರಾಹ್ಮಣಾದಿ ಇತರ ಸಮಾಜದವರಂತೆ ಅಂತ್ಯಜರನ್ನು ಮುಟ್ಟಿಸಿಕೊಳ್ಳುವದಿಲ್ಲ. ಹೀಗೆ ಅಸ್ಪೃಶ್ಯರನ್ನು ಮುಟ್ಟದಿರುವದಕ್ಕೆ ವೀರಶೈವ ಮತದ ಒಪ್ಪಿಗೆಯಿದೆಯೇ? ಇರದಿದ್ದರೆ ನಮ್ಮ ಪೂರ್ವಜರೂ ನಾವೂ ಇದುವರೆಗೆ ಅಂತ್ಯಜರನ್ನು ಯಾಕೆ ಮುಟ್ಟುತ್ತ ಬಂದಿಲ್ಲ? ಈಗ ನಾವು ಅವರನ್ನು ಬರೇ ಮುಟ್ಟಿಬಿಟ್ಟರೆ ತೀರಿತೇ? ಹಾಗಿಲ್ಲದಿದ್ದರೆ ಈಗಿನ ವಾತಾವರಣದಲ್ಲಿ ನಾವು ಹೊಲೆಯರೊಂದಿಗೆ ಹೇಗೆ ವ್ಯವಹರಿಸಬೇಕು? ಈ ಬಗ್ಗೆ ಸ್ವಲ್ಪ ಆಲೋಚಿಸುವಾ.

ನಮ್ಮ ಶಿವಶರಣರ ವಚನಗಳನ್ನು ನಿರೀಕ್ಷಿಸಿದರೆ ಅವರು ಪ್ರಾಮುಖ್ಯವಾಗಿ ಎರಡೇ ಕುಲಗಳನ್ನು ಮಾಡಿದ್ದು ಕಂಡುಬರುತ್ತದೆ. ಅವು ಯಾವವೆಂದರೆ (೧) ಶಿವಕುಲ (೨) ಭವಿಕುಲ. ಸದ್ಗುಣ ಸದಾಚಾರದಿಂದ ಶ್ರೇಷ್ಠವಾದ ಕುಲವೇ ಶಿವಕುಲವು. ದುರ್ಗುಣ ದುರಾಚಾರದಿಂದ ಕೀಳಾದುದೇ ಭವಿಕುಲವು. ಶಿವಕುಲವಾಗಲಿ ಭವಿಕುಲವಾಗಲಿ ಜನ್ಮದಿಂದ ಬಂದಂತಹದಲ್ಲ; ಗುಣಕರ್ಮಗಳಿಂದುಂಟಾಗಿರುತ್ತದೆ. ಊರಲ್ಲಿಯೂ ಭಕ್ತರುಂಟು, ಭವಿಗಳುಂಟು; ಕೇರಿಯಲ್ಲಿಯೂ ಭಕ್ತರುಂಟು, ಭವಿಗಳುಂಟು. ಆದುದರಿಂದ ಮನುಷ್ಯರಲ್ಲಿ ಹೊಲೆ ಹದಿನೆಂಟು ಜಾತಿಕುಲಗಳೆಂಬವಿಲ್ಲ; ಎರಡೇ ಇರುತ್ತವೆ. ಸದ್ಗುಣಿಗಳೆಲ್ಲರೂ ಶ್ರೇಷ್ಠ ಕುಲದವರು. ದುರ್ಗುಣಿಗಳೆಲ್ಲರೂ ನೀಚಕುಲದವರು. ಆದುದರಿಂದಲೇ ಬಸವಣ್ಣನವರು "ವಿಪ್ರ ನೊದಲು ಅಂತ್ಯಜಕಡೆಯಾಗಿ ಶಿವಭಕ್ತರಾದವರೆಲ್ಲರನೊಂದೇ ಎಂಬೆ. ಹಾರುವ ನೊದಲು ಶ್ವಪಚ ಕಡೆಯಾಗಿ ಭವಿಯಾದವರೆಲ್ಲರನೊಂದೇ ಎಂಬೆ" ಎಂದು ವ್ಯಕ್ತಪಡಿಸಿದ್ದಾರೆ.

ನನ್ನ ಕುಲ ಹೆಚ್ಚು ನಿನ್ನಕುಲ ಕಡಿಮೆ ಯೆಂದು ಬೊಗಳುವ ಕುನ್ನಿಗಳೇನೂ ಆಕಾಶದಿಂದಿಳಿದುಬಂದಿಲ್ಲ. ಹೊಲೆಯಲ್ಲಿ ಹುಟ್ಟಿ ಕುಲವನರಸುವದುಂಟೇ? ಕರ್ಣದಲ್ಲಿ ಜನಿಸಿದವರುಂಟೇ ಜಗದಲ್ಲಿ? ಅಂತೆಯೇ ಶರಣರು "ಹೊಲೆಗಂಡಲ್ಲದೆ ಪಿಂಡದ ನೆಲೆಗಾಶ್ರಯವಿಲ್ಲ. ಜಲಬಿಂದು

ವಿನ ವ್ಯವಹಾರವೊಂದೇ. ಆಶೆಯಾಮಿಷರೋಷ ವಿಷಯಾದಿಗಳೆಲ್ಲ ಒಂದೇ. ಎಂದು ಹೇಳಿರುವರು. ಹೊಲೆಯನೆಂದರೆ ಕೀಳುಕುಲದಲ್ಲಿ ಹುಟ್ಟಿದವನಲ್ಲ; ಕೀಳು ಕೆಲಸ ಮಾಡುವವನು. "ಕೊಲ್ಲುವವನೇ ಮಾದಿಗನು ಹೊಲಸು ತಿಂಬುವವ ಹೊಲೆಯ; ಕುಲವೇನೋ ಆವಂದಿರ ಕುಲವೇನೋ? ಸಕಲ ಜೀವಾತ್ಮರಿಗೆ ಲೇಸನೇ ಬಯಸುವ ನಮ್ಮ ಕೂಡಲಸಂಗನ ಶರಣರೇ ಕುಲಜರು. ಎಂದು ಬಸವಣ್ಣನವರು ಅಪ್ಪಣೆಕೊಡಿಸಿದ್ದಾರೆ. "ಆಚಾರವೇ ಕುಲ, ಅನಾಚಾರವೇ ಹೊಲೆ. ಲಿಂಗವ ಪೂಜಿಸಿ ಮಾದಾರ ಚೆನ್ನನ ಕುಲ ಚನ್ನಾಗಿತ್ತು. ದಾಸನ ಕುಲ ದೇಸೆವಡೆದಿತ್ತು." ಎಂದು ಶರಣರು ನುಡಿದಿರುವರು.

ಹೊಲೆಯರಾರೆಂಬ ಬಗ್ಗೆ ಅಂಬಿಗರ ಚೌಡಯ್ಯನು ಹೇಳಿದ ವಚನವು ಅತ್ಯಂತ ಮಹತ್ವವಾದುದು "ಹೊಲೆಯ ಹೊಲೆಯ ಎಂದೊಡೆ ಹೊಲೆಯರೆಂತಪ್ಪರಯ್ಯಾ? ಹೊರಕೇರಿಯಲ್ಲಿರುವವರು ಹೊಲೆಯರೇ? ಊರೊಳಗಿಲ್ಲವೇನಯ್ಯಾ ಹೊಲೆಯರು? ತಾಯಿತಂದೆಗಳಿಗೆ ಬೈದವನೇ ಹೊಲೆಯ. ಪರಸತಿಯ ಬಯಸಿದವನೇ ಹೊಲೆಯ, ಕೊಡುವ ಹಣಕ್ಕೆ ಅಡ್ಡಬಂದವನೇ ಹೊಲೆಯ, ಪರರ ಕುತ್ತಿಗೆ ಕೊಯ್ದವನೇ ಹೊಲೆಯ. ಹೊಲೆಯನು ಮಾಡಿದ ಚರ್ಮ ಹರಗೋಲಾಯಿತ್ತು. ಚಮ್ಮಾವುಗೆಯಾಯಿತ್ತು, ಮಿಣಿಯಾಗಿತ್ತು, ಬಾರಕೋಲಾಯಿತ್ತು, ಮೃದಂಗವಾಯಿತ್ತು, ಎಣ್ಣೆ, ತುಪ್ಪ, ತುಂಬುವ ಸಿದ್ಧಲಿಕೆ ಬುದ್ಧಲಿಕೆಯಾಯಿತ್ತು, ಇಂಥ ಸಿದ್ದಲಿಕೆ ಬುದ್ಧಲಿಕೆಗಳ ಎಣ್ಣೆತುಪ್ಪಗಳನ್ನು ಕೂಡಿಕೊಂಡು ತಿಂದು ನಾ ಶೀಲವಂತ ನೀ ಶೀಲವಂತ, ನನ್ನ ಕುಲ ಹೆಚ್ಚು, ನಿನ್ನ ಕುಲ ಕಡಿಮೆ ಯೆಂದು ಬಡಿದಾಡುವ ಕುನ್ನಿಗಳ ಮೋರೆ ಮೋರೆಯ ಮೇಲೆ ಪಡಿಹಾರಿ ಉತ್ತಣ್ಣಗಳ ವಾಮಪಾದುಕೆಯ ತೆಗೆದುಕೊಂಡು ಇವರ ಅಂಗುಳ ಮೆಟ್ಟಿ ಪಟಪಟನೆ ಹೊಡಿಯೆಂದಾತ ನಮ್ಮ ದಿಟ್ಟಧೀರ ಅಂಬಿಗರ ಚೌಡಯ್ಯನು"

ಶಿವಕುಲದವರೆಲ್ಲರೂ ಕೂಡಿ ಪರಸ್ಪರ ಅನ್ನೋದಕ, ಶರೀರ ಸಂಬಂಧಗಳನ್ನು ಮಾಡಲಿಕ್ಕೆ ಯಾವ ಪ್ರತಿಬಂಧವೂ ಇಲ್ಲವೆಂದು ಶಿವಶರಣರು ಎವೆತಟ್ಟಿ ಹೇಳಿರುವರು. ಶ್ರೀ ಬಸವಣ್ಣನವರು ಡೋಹರ ಕಕ್ಕಯ್ಯನವರ ಮಿಕ್ಕ ಪ್ರಸಾದವನ್ನು ಸೇವಿಸುತ್ತಿರಲಿಲ್ಲವೇ? ಪ್ರಭುದೇವರು ಮಾದರ ಚೆನ್ನಯ್ಯನ ಮನೆಯ ಅಂಬಲಿಯನ್ನು ಸುರಿಯಲಿಲ್ಲವೇ? ಬ್ರಾಹ್ಮಣ

ನಾದರೂ ಶಿವಶರಣರ ಪಾಲಿಕೆಗೆ ಸೇರಿದ ಮಧುವಯ್ಯನು ತನ್ನ ಮಗ ಳನ್ನು ಹೊಲೆಯರ ಹರಳಯ್ಯನ ಮಗನಿಗೆ ಕೊಟ್ಟು ಲಗ್ನ ಮಾಡಲಿ ಲ್ಲವೇ? 'ಭವಿಯಲ್ಲಿ ಭವಿಯ ಹಸ್ತದಲ್ಲಿ ಭವಿಪಾಕವಲ್ಲದೆ ಭಕ್ತರ ಮನೆ ಯಲ್ಲಿ ಭಕ್ತರ ಹಸ್ತದಲ್ಲಿ ಭವಿಪಾಕವುಂಟೆ?' ಎಂದು ಶರಣರು ಹೇಳಿ ರುವರು. "ಉಂಬಲ್ಲಿ ಉಡುವಲ್ಲಿ ಕ್ರಿಯೆ ಅಳಿಯಿತ್ತೆಂಬರು, ಕೊಂಬಲ್ಲಿ ಕೊಡುವಲ್ಲಿ ಕ್ರಿಯೆ ಅಳಿಯಿತ್ತೆಂಬರು. ಎಂತಯ್ಯಾ ಅವರ ಭಕ್ತರೆಂತೆಂಬೆ? ಎಂತಯ್ಯಾ ಅವರ ಯುಕ್ತರೆಂತೆಂಬೆ? ಹೊಲತಿ ಶುದ್ಧ ನೀರ ಮಿಂದಂತಾ ಯಿತಯ್ಯಾ" ಎಂದು ಬಸವಣ್ಣನವರ ವಚನವು ಸಾರುತ್ತದೆ.

ಎಷ್ಟೋ ಋಷಿಗಳು ಕೀಳುಕುಲದಲ್ಲಿ ಹುಟ್ಟಿದವರಾಗಿದ್ದರೂ ಸದ್ಗುಣ ಸದಾಚಾರಗಳ ಮೂಲಕ ಶ್ರೇಷ್ಠ ಕುಲದವರೆಂದು ಎಣಿಸಲ್ಪಡುವದಿ ಲ್ಲವೇ? 'ವ್ಯಾಸಬೋಯಿತಿಯ ಮಗ, ಮಾರ್ಕಂಡೇಯ ಮಾತಂಗಿಯ ಮಗ, ಅಗಸ್ತ್ಯ ಕಬ್ಬಲಿಗ, ದುರ್ವಾಸ ಮುಚ್ಚಿಗ, ಕೌಂಡಿಲ್ಯಋಷಿ ನಾಯಿದ ಕಾಣಿರೋ. ಅಂತ್ಯಜನಾದರೇನು? ಸದಾಚಾರಿಯೇ ಕುಲಜನಯ್ಯಾ ಕೂಡಲಸಂಗಮದೇವಾ" ಎಂಬುದಾಗಿ ಬಸವಣ್ಣನವರು ಹೇಳಿದ್ದಾರೆ.

ಇಂಥ ದಿವ್ಯ ತತ್ವಗಳು ನಮ್ಮ ವೀರಶೈವ ಧರ್ಮದಲ್ಲಿದ್ದರೂ ನಾವು ಈ ವರೆಗೆ ಹೊಲೆಯರನ್ನೇಕೆ ಮುಟ್ಟುತ್ತ ಬಂದಿಲ್ಲ? ಸೂತಕ ಪಂಚ ಮಹಾಸೂತಕಗಳನ್ನು ಮನ್ನಿಸುವ ಬ್ರಾಹ್ಮಣರನ್ನು ನಾವು ಅನುಕರಿಸುತ್ತ ಬಂದಿದ್ದೇವೆ. ಬ್ರಾಹ್ಮಣರಲ್ಲಿ ಮುಟ್ಟು ಮೊದಲಾದ ಸೂತಕಗಳಿದ್ದಂತೆ ವೀರಶೈವರಲ್ಲಿಲ್ಲ. ವೀರಶೈವರ ದೇಹವೇ ದೇಗುಲ. ಆತ್ಮವೇ ಲಿಂಗ. ಸಾಕ್ಷಾತ್ ಪರವಸ್ತುವೇ ದೇಹದ ಮೇಲಿದ್ದ ಬಳಿಕ ಅದಕ್ಕೆ ಅಶುಚಿಯೆಂ ಬದುಂಟೇ? ದೇವರಿಗೆ ಮನೆಯಾದ ದೇಹವನ್ನು ಮನುಷ್ಯನು ಸ್ವಚ್ಛ ವಾಗಿಯೂ ಪವಿತ್ರವಾಗಿಯೂ ಇಟ್ಟುಕೊಳ್ಳಲಾರನೇ? ಆಚಾರ ವಿಚಾ ರಗಳಿಗಿಂತಲೂ ಸಂಸ್ಕೃತ ಪುಸ್ತಕ ಜ್ಞಾನದಲ್ಲಿ ಮುಂದುವರಿದವರಾದ ಬ್ರಾಹ್ಮಣರು ಗೀತೆಯಲ್ಲಿ ಉಕ್ತವಾದ ಗುಣಕರ್ಮ ವಿಶಿಷ್ಟ ಚಾತುರ್ವ ರ್ಣಗಳನ್ನು ಜಾತಿಗೆ ಸಮನ್ವಯಿಸಿ ತಮ್ಮ ಶ್ರೇಷ್ಠತೆ ಗೌರವಗಳನ್ನು ಕಾಯ್ದುಕೊಳ್ಳಲಿಕ್ಕೆ ಕೀಳುಕಸಬುಗಳನ್ನು ಮಾಡುವ ಕೆಲವರನ್ನು ಶೂದ್ರ ರೆಂದು ಮುಟ್ಟಿಸಿಕೊಳ್ಳದೆ ಊರ ಹೊರಗಿಟ್ಟರು. ಈಗ ಇಂಗ್ಲಿಷ್ ಪದ್ಧ ತಿಯನ್ನು ಅನುಕರಣಮಾಡುವ ತರುಣ ಭಾರತೀಯರು ತಮ್ಮ ಹಿಂದಿನ ಹಳೆ ಪದ್ಧತಿಗಳನ್ನು ತುಚ್ಛೀಕರಿಸುವಂತೆ ಸಂಸ್ಕೃತ ಅಭ್ಯಾಸಮಾಡಿದ ನಮ್ಮ

ಕೆಲವು ಅರಣ್ಯಪಂಡಿತರು ವೀರಶೈವ ತತ್ವದ ಮರ್ಮವನ್ನು ಮರೆದು ಬ್ರಾಹ್ಮಣರ ಅನುಕರಣ ಮಾಡಿ ಹೊಲೆಯರನ್ನು ಮುಟ್ಟಕೂಡದೆಂದು ನಮ್ಮ ಜನರಲ್ಲಿ ಪ್ರಚಾರ ಮಾಡಿದರು. ಆ ರೂಢಿಯೇ ಈಗ್ಯೂ ಪ್ರಚಾರದಲ್ಲಿದೆ. ಬ್ರಾಹ್ಮಣರಲ್ಲಿ ಮಡಿಹುಡಿ ಮುಡಿಚಟ್ಟುಗಳಿದ್ದಂತೆ ನಮ್ಮಲ್ಲಿಲ್ಲ. ಇರುತ್ತವೆಂದು ಸಾಧಿಸಿದರೆ ಅವು ಬ್ರಾಹ್ಮಣರ ಅನುಕರಣವಲ್ಲದೆ ಬೇರೆಯಲ್ಲ. ಈಗ ನಮ್ಮ ಧರ್ಮದಲ್ಲಿ ಕೆಲವು ಪಂಡಿತರು ತಮ್ಮ ಧರ್ಮದ ರಹಸ್ಯವನ್ನರಿಯದೆ ಬ್ರಾಹ್ಮಣರಾಗಲಿಚ್ಛಿಸಿ ಬಸವಾದಿ ಪ್ರಮಥರನ್ನು ನಿಂದಿಸಿ ಪಾಪದ ಮೊಟ್ಟೆಯನ್ನು ಮಡಲಲ್ಲಿ ಕಟ್ಟಿಕೊಂಡರು.

ನಾವು ರೂಢಿಯ ದಾಸರಾದುದರಿಂದ ನಾವು ಅದನ್ನು ಕಿತ್ತೊಗೆದು ಹೊಲೆಯರನ್ನು ಮುಟ್ಟಬೇಕೆಂದರೆ ಜೀವದ ಸುತ್ತು ಬಂದಂತಾಗುತ್ತದೆ. ಆದರೆ ಮುಟ್ಟಲಿಕ್ಕೆ ನಮ್ಮ ಧರ್ಮದಲ್ಲಿ ಯಾವ ಆತಂಕವೂ ಇರುವದಿಲ್ಲ. ಶಿವಕುಲದವರು ಪರಸ್ಪರ ಅನ್ನಪಾನ ಶರೀರ ಸಂಬಂಧಗಳನ್ನು ಮಾಡಬೇಕೆಂದು ಶರಣರು ಹೇಳಿರುವಾಗ ಮುಟ್ಟಬೇಕೆಂದು ಹೇಳುವದು ಕಷ್ಟವಾದೀತೇ ?

ಆದರೆ ಈಗಿನ ವಾತಾವರಣದಲ್ಲಿ ನಾವು ಹೊಲೆಯರೊಂದಿಗೆ ಹೇಗೆ ವ್ಯವಹರಿಸಬೇಕೆಂಬದು ಮಹತ್ವದ ಪ್ರಶ್ನೆಯಾಗಿದೆ. ಬರೇ ಮುಟ್ಟಿಬಿಟ್ಟರೆ ನಮ್ಮ ಕೆಲಸ ಪೂರೈಸಿದಂತಾಯಿತೇ ? ಇಲ್ಲ. ಅವರೊಳಗೆ ಬೆರೆದು ಅವರನ್ನುದ್ಧಾರಮಾಡಬೇಕಾಗಿದೆ. ನಾವೆಲ್ಲರೂ ಒಬ್ಬ ಪರಮಾತ್ಮನ ಮಕ್ಕಳಾದುದರಿಂದ ಅವರೂ ನಮ್ಮ ಬಂಧುಗಳೆಂಬದನ್ನು ನಾವು ಕ್ರಿಯೆಯಲ್ಲಿ ತೋರಿಸಬೇಕಾಗಿದೆ. ಮಹಾತ್ಮಾ ಗಾಂಧಿಯವರ ದಿವ್ಯ ಸಂದೇಶವನ್ನು ನಮ್ಮ ಸಮಾಜದಲ್ಲಿ ಬೀರಬೇಕಾಗಿದೆ. ಈಗ ನಮ್ಮ ಸಮಾಜದಲ್ಲಿ ಹೊಲೆಯರನ್ನು ಮುಟ್ಟಿರೆಂದರೆ ಎಷ್ಟೋ ಜನರ ಮೈಗೆ ಮುಳ್ಳು ಬರುತ್ತಿರುವಾಗ ಅವರೊಡನೆ ಕೂಡಿಕೊಂಡು ಅನ್ನಪಾನಾದಿ ಶರೀರ ಸಂಬಂಧಗಳನ್ನು ಮಾಡಬೇಕೆಂದು ಹೇಳುವವರ ಗತಿಯೇನಾದೀತೆಂಬದನ್ನು ಶಿವನೇ ಬಲ್ಲ. ಕಾರಣ ಸಮಾಜವನ್ನು ರೇಗಿಗೆಬ್ಬಿಸುವ ಅಂಥ ಅಸಂಭವ ಕೆಲಸವನ್ನೆಂದಿಗೂ ನಾವು ಕೈಕೊಳ್ಳಲಾಗದು. ನಮ್ಮಲ್ಲಿಯೇ ಶಿವಕುಲದವರೂ ಭವಿಕುಲದವರೂ ತುಂಬಿಕೊಂಡಿರಲು ಅವರನ್ನು ವಿಂಗಡಿಸಿ ತಿಳಿದುಕೊಳ್ಳಲು ನಮಗೆ ಅಶಕ

ವಾಗಿರುವಲ್ಲಿ ಈಗಿನ ಅಸ್ಪೃಶ್ಯರಲ್ಲಿ ಶಿವಭಕ್ತರಾರು ? ಭವಿಗಳಾರು ? ಎಂಬದನ್ನು ಗೊತ್ತುಪಡಿಸುವದು ಅಸಾಧ್ಯವೇ? ಆದರೆ ನಮಗೆ ಶಕ್ಯ ವಿದ್ದುದನ್ನು ಮಾಡಲಿಕ್ಕೆ ನಾವು ಸಮರ್ಥರೇ ಇದ್ದೇವೆ. ಅದನ್ನು ಮೊದಲು ಅಲ್ಪ ಜನಸಮೂಹವು ವಿರೋಧಿಸಿದರೂ ಕೊನೆಗೆ ಅದನ್ನ ನುಸರಿಸಬಹುದು.

ನಾವು ಸದ್ಯಕ್ಕೆ ಕೈಕೊಳ್ಳತಕ್ಕ ಕೆಲಸಗಳೆಂದರೆಃ—

(೧) ನಾವು ಹೊಲೆಯರನ್ನು ಮುಟ್ಟಿದರೆ ಯಾವ ದೋಷವೂ ಬರ ಲಾರದು. ಮುಟ್ಟಿದರೆ ಸೂತಕವಿಲ್ಲ. ಮುಟ್ಟಿ ಸ್ನಾನ ಮಾಡಕೂಡದು.

(೨) ಹೊಲೆಯರಿಗೆ ಕೆರೆ, ಭಾವಿ, ಗುಡಿ, ಶಾಲೆ ಸಾರ್ವಜನಿಕ ಸಭೆ ಮುಂತಾದವುಗಳಿಗೆ ಪ್ರವೇಶ ದೊರೆಯುವಂತೆ ಮಾಡಬೇಕು.

(೩) ಮ್ಯಾಜಿಕ್‌ಲ್ಯಾಂಟರ್ನ, ರಾತ್ರಿ ಶಾಲೆ, ಕೀರ್ತನ, ವ್ಯಾಖ್ಯಾನ ಮುಂತಾದವುಗಳಿಂದ ಅವರಿಗೆ ಸ್ವಚ್ಛತೆ ಸದಾಚಾರ ಮೊದಲಾದವು ಗಳನ್ನು ತಿಳಿಸಿಕೊಡಬೇಕು.

(೪) ಇಚ್ಛೆಯಿದ್ದವರಿಗೆ ಲಿಂಗಧಾರಣ ಮಾಡಿ ಸದ್ವರ್ತನದಿಂದ ನಡೆಯಲು ಅವಕಾಶ ಕೊಡಬೇಕು. ಅರ್ಥಾತ್ ಲಿಂಗಧರಿಸಿ ಮದ್ಯ ಮಾಂಸ ಸೇವನೆಯನ್ನು ಬಿಡಿಸಬೇಕು.

ಸದ್ಯಕ್ಕೆ ನಾವು ಇಷ್ಟು ಕೆಲಸವನ್ನು ಕೈಕೊಂಡರೆ ನಮ್ಮ ಸೂಜ್ಞ ಸಮಾಜವೇನೂ ಅಷ್ಟು ವಕ್ರದೃಷ್ಟಿಯಿಂದ ನಮ್ಮನ್ನು ನೋಡಲಾರದು. ಈಗ ಸರಕಾರವಾದರೂ ಒತ್ತಾಯದಿಂದ ಹೊಲೆಯರನ್ನು ಮೇಲಕ್ಕೆತ್ತಿ ಹಿಡಿಯಹತ್ತಿದೆ. ಹಿಂದೂಧರ್ಮದಲ್ಲಿ ಜನ್ಮವೆತ್ತಿದ ನಮ್ಮ ಹಿಂದುಳಿದ ಬಂಧುಗಳನ್ನು ನಮ್ಮ ಐಕ್ಯಾನುಸಾರವಾಗಿ ಮೇಲಕ್ಕೆ ಒಯ್ಯುವದು ಭೂಷಣವಲ್ಲವೇ ? ಇಂಥ ಕೆಲಸಕ್ಕೆ ನಮ್ಮ ಸಮಾಜದವರು ಕೆಲವು ಪ್ರಚಾರಕರನ್ನು ನೇಮಿಸಿದರೆ ದೇಶ ಕಲ್ಯಾಣವೂ ಸಮಾಜ ಹಿತವೂ ಸಾಧಿಸಿದಂತಾಗುವದಿಲ್ಲವೇ ?

# ಲಗ್ನಾದಿ ವಿಧಿಗಳು.

ವೀರಶೈವರಲ್ಲಿ ಲಗ್ನವಾಗಬೇಕೆಂಬ ನಿರ್ಬಂಧವಿಲ್ಲ. ಅದು ಮಾಡಿಕೊಳ್ಳುವವನ ಇಚ್ಛೆಯ ಮೇಲೆ ಇರುತ್ತದೆ. ಅನೇಕರು ತಾವು ಬಾಲಬ್ರಹ್ಮಚಾರಿಗಳು, ಅವಿವಾಹಿತರು ಎಂದು ಬಗೆದು ತಮ್ಮ ಯೋಗ್ಯತೆಯು ಹೆಚ್ಚಿನದೆಂದು ಭಾವಿಸುವುದುಂಟು. ಆದರೆ ಇದು ತಪ್ಪು ತಿಳುವಳಿಕೆ ಇರುತ್ತದೆ. ಬಸವೇಶ್ವರನು ವಿವಾಹಿತನಾದ್ದರಿಂದ ಅವನ ಯೋಗ್ಯತೆಯು ಕಡಿಮೆ ಇರುವದಿಲ್ಲ. ಅದೇ ಮೇರೆಗೆ ಅವನ ಕಾಲಕ್ಕೆ ಇದ್ದ ಅನೇಕ ಶಿವಶರಣರು ವಿವಾಹಿತರಾಗಿದ್ದರೂ ಸಮಾಜದಲ್ಲಿ ಅತ್ಯಂತ ಪೂಜ್ಯರಾಗಿದ್ದರು. ರೇವಣಸಿದ್ಧೇಶ್ವರ, ಅಲ್ಲಮಪ್ರಭು ಈ ಮಹಾನುಭಾವರು ಬಾಲಬ್ರಹ್ಮಚಾರಿಗಳಿದ್ದಿಲ್ಲವೆಂಬಂದು ಅವರ ಬಗ್ಗೆ ಈಚಿಗೆ ಶೋಧಿತವಾದ ಸಂಗತಿಗಳಿಂದ ತಿಳಿದುಬರುತ್ತದೆ. ಅವರು ವಿವಾಹಿತರಾಗಿದ್ದರು. ಅದರಂತೆಯೇ ಸ್ತ್ರೀಯರು ಲಗ್ನಮಾಡಿಕೊಳ್ಳಲೇಬೇಕೆಂಬ ನಿರ್ಬಂಧವಿಲ್ಲ. ಆಕೆಯು ಲಗ್ನವಾಗುವದು ಅಥವಾ ಬಿಡುವದು ಆಕೆಯ ಇಚ್ಛಾನುಸಾರವಾಗಿರುತ್ತದೆ. ಮಹಾದೇವಿಯಕ್ಕನು ಲಗ್ನಮಾಡಿಕೊಳ್ಳದೆ ಕಡೆತನಕ ಅವಿವಾಹಿತಳಾಗಿಯೇ ಉಳಿದಳು. ಆದರೆ ಲಗ್ನಮಾಡಿಕೊಳ್ಳಲಿಲ್ಲೆಂದು ಅವಳು ತಿರಸ್ಕಾರ ಹೊಂದಲಿಲ್ಲ. ಹ್ಯಾಗೆ ಬ್ರಾಹ್ಮಣರಲ್ಲಿ ಮಕ್ಕಳಿಲ್ಲದೆ ಸದ್ಗತಿ ಇಲ್ಲವೆಂಬ ವಿಚಾರಗಳು ಇವೆಯೋ ಆ ಬಗೆಯ ವಿಚಾರಗಳು ವೀರಶೈವರಲ್ಲಿ ಇಲ್ಲ. ಸ್ತ್ರೀಯಳು ಕೂಡ ತನ್ನ ಸ್ವಂತ ಆಚಾರ ಮತ್ತು ಕ್ರಿಯೆಗಳನ್ನು ಅವಲಂಬಿಸಿಯೇ ಸದ್ಗತಿಯನ್ನು ಹೊಂದತಕ್ಕದ್ದೆಂದು ಷಟ್‌ಸ್ಥಲಶಾಸ್ತ್ರವು ಹೇಳುತ್ತದೆ. ಆದರೆ ಬ್ರಾಹ್ಮಣರಲ್ಲಿ ಪತಿಯೇ ದೈವವೆಂದು ಭಾವಿಸಿ ಅವನ ಸೇವೆ ಮಾಡುತ್ತ ಅವನು ಮಾಡುವ ಪುಣ್ಯಕ್ಕೆ ಭಾಗಿಯಾಗಿ ಸ್ತ್ರೀಯಳು ತನ್ನ ಜನ್ಮವನ್ನು ಸಾರ್ಥಕಮಾಡಬೇಕೆಂಬ ವಿಚಾರಗಳು ಇವೆ. ಆದರೆ ವೀರಶೈವರಲ್ಲಿ ಸ್ತ್ರೀಯಳು ಸ್ವತಂತ್ರಳಿದ್ದಾಳೆ. ಆಕೆಗೆ ಲಿಂಗಧಾರಣವಿದ್ದದರಿಂದ ಲಿಂಗವೇ ಪತಿಯೆಂದು ಭಾವಿಸಿ ಆಚರಿಸತಕ್ಕವಳು. ಇದರಿಂದ ವೀರಶೈವ ಸ್ತ್ರೀಯಳು ಷಟ್‌ಸ್ಥಲಕ್ಕೆ ಅಧಿಕಾರ ಹೊಂದಿದವಳಾಗಿರುವಳು.

ಸಿದ್ಧರಾಮೇಶ್ವರನು ಹೇಳುವದೇನೆಂದರೆ:— "ಭಕ್ತನ ಮನ ಹೆಣ್ಣಿನೊಳಗಾದರೆ ವಿವಾಹವಾಗಿ ಕೂಡುವುದು. ಭಕ್ತನ ಮನ ಮಣ್ಣಿನೊಳ

ಗಾದರೆ ಕೊಂಡು ಆಲಯುವವಮಾಡುವುದು. ಭಕ್ತನ ಮನ ಹೊನ್ನಿನೊಳ
ಗಾದರೆ ಬಳಲಿ ದೊರಕಿಸುವುದು ನೋಡಾ ಕಪಿಲಸಿದ್ಧಮಲ್ಲಿಕಾರ್ಜುನಾ'
ಮನುಷ್ಯನು ತನ್ನ ಇಂದ್ರಿಯಗಳನ್ನು ಕ್ಲೇಶಮಾಡುವದರಿಂದ ಪ್ರಯೋ
ಜನವಿಲ್ಲವೆಂದು ಷಟ್‌ಸ್ಥಲದ ತತ್ವವಿರುತ್ತದೆ. ಆದರೆ ಆ ಇಂದ್ರಿಯಗಳನ್ನು
ಉಪಯೋಗಮಾಡುವಲ್ಲಿ ಅವುಗಳನ್ನು ಲಿಂಗಮುಖಮಾಡಿ ಪರಮಾತ್ಮನ
ಸೇವೆಯಲ್ಲಿ ತೊಡಗಿರುವದು ಅವನ ಕರ್ತವ್ಯವು ಈ ದೃಷ್ಟಿಯಿಂದ ಜಗತ್ತಿನ
ಭೋಗ್ಯ ವಸ್ತುಗಳನ್ನು ಉಪಭೋಗಿಸಿದರೆ ಆವ ದೋಷವೂ ಇರುವದಿಲ್ಲ.
ಬಸವೇಶ್ವರನು ಅನ್ನುವದೇನೆಂದರೆಃ- ಇಂದ್ರಿಯನಿಗ್ರಹ ಮಾಡಿದರೆ, ಹೊಂದು
ವವು ದೋಷಂಗಳು. ಮುಂದೆ ಬಂದು ಕಾಡುವವು ಪಂಚೇಂದ್ರಿಯಂಗಳು.
ಸತಿಪತಿ ರತಿಸುಖವ ಬಿಟ್ಟರೆ ಸಿರಿಯಾಳ ಚಂಗಳೆಯರು? ಸತಿಪತಿ ರತಿಸುಖ
ಬಿಟ್ಟರೆ ಸಿಂಧುಬಲ್ಲಾಳನು? ನಿಮ್ಮ ಮುಟ್ಟಿ ಪರಧನ ಪರಸ್ತ್ರೀಗಳುಪಿದ
ನಿಮ್ಮ ಚರಣಕ್ಕೆ ದೂರ ಕೂಡಲ ಸಂಗಮದೇವಾ." ಎಂದು ಹೇಳಿರುವನು.
ಇದರಿಂದ ಹುಟ್ಟು ಬ್ರಹ್ಮಚಾರಿಯಾಗಿ ವರ್ತಿಸಿದ್ದೇನೆಂದು ಅನ್ನುವದರಲ್ಲಿ
ಯಾವ ಮಹತ್ವವಿಲ್ಲ. ಆದರೆ ತನ್ನ ಮನಸ್ಸಿನ ಒಲವುಗಳನ್ನು ಸರಿ
ಯಾದ ದಿಕ್ಕಿನಿಂದ ಒಯ್ಯುವದರಲ್ಲಿ ಮಹತ್ವವಿರುತ್ತದೆ. ಬಸವೇಶ್ವರನು
ಮತ್ತೊಂದು ವಚನದಲ್ಲಿ ಹೇಳಿರುವದೇನಂದರೆ— "ಒಲ್ಲೆನೆಂಬುದು
ವೈರಾಗ್ಯ, ಒಲಿವೆನೆಂಬುದು ಕಾಯಗುಣ, ಆವ ಪದಾರ್ಥವಾದರೇನು?
ತಾನಿದ್ದೆಡೆಗೆ ಬಂದುದ ಲಿಂಗಾರ್ಪಿತ ಮಾಡಿ ಭೋಗಿಸುವುದೇ ಸದಾ
ಚಾರ- ಕೂಡಲಸಂಗಮದೇವರ ಒಲಿಸ ಬಂದ ಪ್ರಸಾದ ಕಾಯುವ
ಕೆಡಿಸಲಾಗದು" ಎಂದು ಅಂದಿರುವನು. ಎಂದರೆ ಪ್ರತಿಯೊಬ್ಬನು ಪದಾ
ರ್ಥಗಳನ್ನು ಸೇವನೆ ಮಾಡುವಲ್ಲಿ ಅವುಗಳನ್ನು ಲಿಂಗಾರ್ಪಿತ ಮಾಡಿ
ಭೋಗಿಸಬೇಕು, ಆದರೆ ಕಾಯವನ್ನು ಕ್ಲೇಶಪಡಿಸಬಾರದು ಎಂದು
ಹೇಳಿರುವನು.

ಬ್ರಾಹ್ಮಣ ಪದ್ಧತಿಯಲ್ಲಿ ೪ ಆಶ್ರಮಗಳನ್ನು ಹೊಂದಲೇಬೇಕು,
ಮತ್ತು ಅವುಗಳಂತೆ ಆಚರಿಸಬೇಕು ಎಂಬ ಕಟ್ಟಳೆಗಳಿರುತ್ತವೆ. ಈ
ಆಶ್ರಮಗಳಲ್ಲಿ ಗೃಹಸ್ಥಾಶ್ರಮವು ಒಂದಾಗಿರುತ್ತದೆ. ಆದ್ದರಿಂದ ಅವರು
ಲಗ್ನವಾಗಲೇಬೇಕೆಂದು ಭಾವಿಸಿ ಲಗ್ನಕ್ಕೆ ಮಹತ್ವದ ಸ್ಥಾನವನ್ನು ಕೊಟ್ಟಿ
ರುವರು. ಆದರೆ ವೀರಶೈವರು ಹೀಗೆ ಲಗ್ನಕ್ಕೆ ಮಹತ್ವದ ಸ್ಥಾನವನ್ನು ಕೊಟ್ಟಿ
ರುವದಿಲ್ಲ. ಬ್ರಾಹ್ಮಣರಲ್ಲಿ ಈ ಬಗೆಯ ವಿಚಾರಗಳಿರುವದರಿಂದ ಅವರ ಗ್ರಂಥ

ಗಳಲ್ಲಿ ಲಗ್ನವಿಧಿಗಳು ಹ್ಯಾಗೆ ಇರಬೇಕು, ಆ ಕಾಲಕ್ಕೆ ಯಾವ ಯಾವ ಮಂತ್ರಗಳನ್ನು ಉಚ್ಚರಿಸಬೇಕು ಇವೇ ಮೊದಲಾದ ವಿಷಯುಗಳ ಬಗ್ಗೆ ಸವಿಸ್ತಾರವಾಗಿ ವರ್ಣನೆಗಳಿವೆ. ಆದರೆ ವೀರಶೈವರಲ್ಲಿ ಈ ಸ್ಥಿತಿಯು ಇರುವದಿಲ್ಲ. ವಚನ ವಾಙ್ಮಯದಲ್ಲಿ ಅನೇಕ ವಿಷಯುಗಳ ಬಗ್ಗೆ ಬೇಕಾದಷ್ಟು ವಿವರಣೆಗಳು ಇವೆ. ಆದರೆ ಲಗ್ನ ಮೊದಲಾದ ಷೋಡಶ ಕರ್ಮಗಳಿಗೆ ಅವರು ಮಹತ್ವ ಕೊಟ್ಟಿಲ್ಲ. ಇಷ್ಟೇ ಅಲ್ಲ ಅವುಗಳನ್ನು ಅವರು ಉಲ್ಲೇಖಿಸಲು ಸಹ ಪ್ರಯತ್ನಿಸಿಲ್ಲ. ಅವರ ದೃಷ್ಟಿಯಿಂದ ಈ ಕರ್ಮಗಳು ಧರ್ಮದಲ್ಲಿ ಬರುವದಿಲ್ಲ. ಅವು ಕೇವಲ ಬಾಹ್ಯ ಆಚರಣೆಗಳಾಗಿವೆ. ಆದ್ದರಿಂದ ಈ ವಿಷಯುಗಳ ಬಗ್ಗೆ ವೀರಶೈವರು ಸ್ಥಾನಿಕ ರೂಢಿಗಳನ್ನು ಅನುಸರಿಸುತ್ತ ಬಂದಿರುತ್ತಾರೆ. ಈ ಸ್ಥಿತಿಯು ಮೂಲಕ ಅವರ ಆಚರಣೆಗಳಲ್ಲಿ ಭಿನ್ನತೆಗಳು ತೋರಿಬರುತ್ತವೆ. ಆದರೆ ಇದು ಸರಿಯಾದದ್ದೆಂದು ಹೇಳಲಿಕ್ಕೆ ಬರಲಾರದು. ಎಲ್ಲ ಭಾಗಗಳಲ್ಲಿಯ ವೀರಶೈವರು ಕೂಡಿಕೊಂಡು ಇವುಗಳಲ್ಲಿ ಏಕರೂಪತೆಯನ್ನು ಮಾಡಿ ಒಂದೇ ಬಗೆಯ ಆಚರಣೆಗಳನ್ನು ಪ್ರಚಾರದಲ್ಲಿ ತರುವದು ಅವಶ್ಯವಿರುತ್ತದೆ.

---

## ಹಿಂದೂಧರ್ಮವು.

(ಲೇಖಕ — ವೇ. ಮೂ. ವೈ. ನಾಗೇಶಶಾಸ್ತ್ರಿಗಳು ಬಳ್ಳಾರಿ.)

---

ಸಂಘಜೀವನದಲ್ಲಿ ಸುಸಂಸ್ಕೃತಿಯು ಬೆಳೆದಂತೆ ರಾಜ್ಯಾಂಗ ಪದ್ಧತಿಗಳೂ ಮತವಿಚಾರಗಳೂ ತಲೆದೋರಿ ಆ ರಾಜ್ಯಪದ್ಧತಿಗೂ ಮತಪದ್ಧತಿಗೂ ಅನುಕೂಲವಾದ ನೈತಿಕ ಮತ್ತು ತಾತ್ವಿಕ ಸಿದ್ಧಾಂತಗಳು ಸಂಘದಲ್ಲುಂಟಾಗಿರುವವೆಂದು ಮಾನವರ ಇತಿಹಾಸದಿಂದ ತಿಳಿದುಬರುತ್ತಿರುವದು. ಆದರೆ ಹಿಂದೂಗಳ ಧಾರ್ಮಿಕ ವಾಙ್ಮಯ ಪರಿಶೋಧನದಿಂದ ತಿಳಿದುಬರುವುದೇನಂದರೆ— ರಾಜ್ಯ, ಮತ, ನೀತಿ ಮೊದಲಾದವುಗಳಿಗೆ ಧರ್ಮಸ್ವರೂಪವನ್ನು ಕೊಟ್ಟು ಅವೆಲ್ಲವುಗಳನ್ನು ಹಿಂದುಗಳು ಧಾರ್ಮಿಕ ದೃಷ್ಟಿಯಿಂದಲೇ ವಿಚಾರ ಮಾಡಿದಂತೆ ಕಂಡುಬರುವುದು. ಪ್ರಜಾಧರ್ಮ, ರಾಜಧರ್ಮ, ದೇಶಧರ್ಮ, ವರ್ಣಧರ್ಮ, ಆಶ್ರಮ

ಧರ್ಮ, ಮತಧರ್ಮ, ಮೋಕ್ಷಧರ್ಮ ಇತ್ಯಾದಿಯಾಗಿ ಪ್ರತಿಯೊಂದು ವಿಷಯಕ್ಕೂ ಧರ್ಮಶಬ್ದದ ಜೋಡಣೆಯೇ ಹಿಂದೂಗಳ ವಾಙ್ಮಯದಲ್ಲಿ ದೃಗ್ಗೋಚರವಾಗುವದು. ಇದರಿಂದ ಧರ್ಮವೆಂಬ ಶಬ್ದದ ಅರ್ಥವು ಬಹಳ ವ್ಯಾಪಕವಾಗಿರುವುದೆಂದು ಸ್ಫುಟವಾಗುವುದಲ್ಲವೇ? ಧಾರ್ಮಿಕ ವಾಙ್ಮಯದಲ್ಲಿ ಧರ್ಮವೆಂಬ ಶಬ್ದವನ್ನು ಹೇಗೆ ನಿರ್ವಚನ ಮಾಡಿರು ವರೆಂಬದನ್ನು ವಿಚಾರಿಸಿದರೆ ಅದರ ವ್ಯಾಪಕತೆಯು ಎಷ್ಟಿರುವುದೆಂಬದು ಮನವರಿಕೆಯಾಗುವುದು.

ವೇದಃ— ಧರ್ಮ ಶಬ್ದವು ಋಗ್ವೇದದಲ್ಲಿ ಪುಲ್ಲಿಂಗರೂಪದಿಂದ ಕಂಡುಬರುವದಿಲ್ಲ. ಧರ್ಮನ್ ಎಂದರೆ ಧಾರಣ ಮಾಡುವ ಎಂಬ ಶಬ್ದವು ಮಾತ್ರ ಪುಲ್ಲಿಂಗದಲ್ಲಿರುತ್ತದೆ. ಧರ್ಮನ್ ಎಂಬ ನಪುಂಸಕ ಲಿಂಗದ ಅರ್ಥಗಳು ಧಾರಣ, ಸ್ಥೈರ್ಯ, ಆಜ್ಞೆ, ವಿಧಿ, ಯಜ್ಞಯಾ ಗಾದಿ ಕ್ರಿಯೆ, ಅಗ್ನಿ, ಹೋತ್ರ, ಆಚಾರ, ಸೃಷ್ಟಿಯನಿಯಮ ಇತ್ಯಾದಿ ಗಳಿರುತ್ತವೆ. ವಾಜಸನೇಯ ಸಂಹಿತೆಯಲ್ಲಿಯೂ, ಅಥರ್ವ ವೇದದ ಲ್ಲಿಯೂ ಧರ್ಮವೆಂಬ ಅಕಾರಾಂತ ಶಬ್ದವು ಕಂಡುಬರುತ್ತದೆ. ಇಲ್ಲಿ ಧರ್ಮವೆಂದರೆ ಎಲ್ಲ ಕರ್ತವ್ಯಗಳ ಕಲಾಪವೆಂಬರ್ಥದಲ್ಲಿ ಪ್ರಯೋಗವಿ ರುವುದು.

ಛಾಂದೋಗ್ಯೋಪನಿಷತ್ಃ— ತ್ರಯೋ ಧರ್ಮಸ್ಕಂಧಾ ಯಜ್ಞೋ ಧ್ಯಯನಂ ದಾನಮಿತಿ ಪ್ರಥಮಸ್ತಪ ಏವೇತಿ ದ್ವಿತೀಯೋ ಬ್ರಹ್ಮಚರ್ಯಾ ಚಾರ್ಯಕುಲವಾಸೀ ತೃತೀಯೋತ್ಯಂತಂ ಆತ್ಮಾನ ಮಾಚಾರ್ಯ ಕುಲೇವ ಸಾಧಯನ್" ಧರ್ಮದ ಮೂರು ಸ್ಕಂದಗಳಿರುವವು. ಯಜ್ಞ ಅಧ್ಯ ಯನ, ದಾನ ಇವು ಮೊದಲನೆಯ ಸ್ಕಂಧವು. ತಪಶ್ಚರಣವು ಎರಡ ನೆಯದು. ಗುರುಕುಲದಲ್ಲಿಯೇ ಪ್ರಾಣಾಂತದ ವರೆಗೂ ದೇಹವನ್ನು ಸವೆಸುವ ಬ್ರಹ್ಮಚರ್ಯವು ಮೂರನೆಯದು.

ತೈತ್ತರೀಯೋಪನಿಷತ್ಃ— ಸತ್ಯಂ ವದ ಧರ್ಮಂ ಚರ ಸತ್ಯವನ್ನು ಹೇಳು ಧರ್ಮವನ್ನು ಆಚರಿಸು. (ಇಲ್ಲಿ ಧರ್ಮಶಬ್ದದ ಅರ್ಥವು ಹೇಗೆ ಬದಲಾಗಿರುವುದೆಂಬುದು ಲಕ್ಷದಲ್ಲಿಡತಕ್ಕದ್ದು.)

ನಿರುಕ್ತಿಃ— 'ಸಾಕ್ಷಾತ್ಕೃತ ಧರ್ಮಾಣೋ ಋಷಯೋ ಬಭೂವುಃ' ವೇದ ವನ್ನು ಸಾಕ್ಷಾತ್ಕರಿಸಿಕೊಂಡವರು ಋಷಿಗಳು. ಇಲ್ಲಿ ಧರ್ಮ ಶಬ್ದವು ವೇದವೆಂಬರ್ಥದಲ್ಲಿರುವುದು. ಪೂರ್ವಮೀಮಾಂಸಾ ದರ್ಶನದಲ್ಲಿ-'ಚೋದ

ನಾಲಕ್ಷಣೋಽರ್ಥೋ ಧರ್ಮಃ' ವಿಧಿಪ್ರತಿಪಾದ್ಯವಾದ ಅರ್ಥವು (ಅಪೇಕ್ಷಣೀಯವು) ಧರ್ಮವು. ಇಲ್ಲಿ ಚೋದನವೆಂದರೆ ವಿಧಿಯು "ಚೋದನಾಚೋಪದೇಶಶ್ಚ ವಿಧಿಶ್ಚೈಕಾರ್ಥವಾಚಿನಃ" (ಚೋದನವೂ ಉಪದೇಶವೂ ವಿಧಿಯೂ ಏಕಾರ್ಥವಾಚಿಗಳು) ಎಂದು ಕುಮಾರಿಲಭಟ್ಟನು ಹೇಳಿರುವನು. ಯಾವುದನ್ನು ವೇದವು ವಿಧಿಸುತ್ತಿರುವುದೋ ಅದು ಧರ್ಮವೆಂದು ಪೂರ್ವಮೀಮಾಂಸಕರಭಿಪ್ರಾಯವು. ಇವರಲ್ಲಿ ವೇದೋಕ್ತಕರ್ಮಕ್ಕೂ ತಜ್ಜನ್ಯವಾದ ಅಪೂರ್ವನಾಮಕ ಸಂಸ್ಕಾರಕ್ಕೂ ಧರ್ಮವೆಂದು ಹೇಳುವ ರೂಢಿಯು ಕಂಡುಬರುತ್ತದೆ.

ವೈಶೇಷಿಕ ದರ್ಶನಃ— 'ಯತೋಽಭ್ಯುದಯನಿಃಶ್ರೇಯಸ ಸಿದ್ಧಿಃ ಸಧರ್ಮಃ' ಯಾವುದರಿಂದ ಅಭ್ಯುದಯವೂ [ಈ ಲೋಕಸುಖ] ನಿಃಶ್ರೇಯಸೂ [ಮುಕ್ತಿ] ಸಿದ್ಧಿಸುವುದೋ ಅದು ಧರ್ಮವು. ವೈಶೇಷಿಕರೂ ನೈಯಾಯಿಕರೂ ಧರ್ಮಾಧರ್ಮಗಳನ್ನು ಜೀವಾತ್ಮನ ಗುಣಗಳೆಂದು ಹೇಳಿರುವರು. ಧರ್ಮವು ಗಂಗಾ ಸ್ನಾನಾದಿ ಯಾಗಾದಿ ವ್ಯಾಪಾರದಿಂದ ಜನ್ಯವಾಗುವದೆಂತಲೂ ಕರ್ಮನಾಶಾ ಜಲಸ್ಪರ್ಶಾದಿಗಳಿಂದ ನಾಶವಾಗುವುದೆಂತಲೂ ಅಧರ್ಮವು ನಿಂದಿತ ಕರ್ಮದಿಂದ ಜನ್ಯವಾಗುವುದೆಂತಲೂ ಪ್ರಾಯಶ್ಚಿತ್ತಾದಿಗಳಿಂದ ನಾಶವಾಗುವುದೆಂತಲೂ ಹೇಳಿರುವರು. ಮತ್ತು ವಾಸನಾಜನ್ಯಗಳಾದ ಈ ಧರ್ಮಾಧರ್ಮಗಳೆರಡೂ ಜ್ಞಾನದಿಂದ ನಾಶವಾಗುತ್ತಿರುವವೆಂತಲೂ ಹೇಳುವರು.

ಸಾಂಖ್ಯದರ್ಶನ.— 'ಅಧ್ಯವಸಾಯೋ ಬುದ್ಧಿರ್ಧರ್ಮೋಜ್ಞಾನಂ ವಿರಾಗ ಐಶ್ವರ್ಯಂ। ಸಾತ್ವಿಕಮೇತದ್ರೂಪಂ ತಾಮಸ ಮಸ್ಮಾದ್ವಿಪರ್ಯಸ್ತಂ (ಸಾಂಖ್ಯಕಾರಿಕಾ ೨೩) ಇದು ನನ್ನಿಂದ ಮಾಡತಕ್ಕದ್ದೆಂಬ ಅಧ್ಯವಸಾಯರೂಪವ್ಯಾಪಾರವುಳ್ಳ ಬುದ್ಧಿಯ ಸಾತ್ವಿಕ ಗುಣ ಸ್ವರೂಪಗಳೇ ಧರ್ಮ ಜ್ಞಾನ, ವೈರಾಗ್ಯ, ಐಶ್ವರ್ಯ (ಅಣಿಮಾದಿಸಿದ್ಧಿ) ಗಳಾಗಿರುವವು. ಅಧರ್ಮ ಅಜ್ಞಾನಾದಿಗಳೇ ಬುದ್ಧಿಯ ತಾಮಸಗುಣ ಸ್ವರೂಪುಗಳು. ನ್ಯಾಯವೈಶೇಷಿಕ ದರ್ಶನಗಳು ಧರ್ಮವು ಜೀವಾತ್ಮ ಗುಣವೆಂದು ಹೇಳಿದರೆ ಸಾಂಖ್ಯವು ಆ ಧರ್ಮವು ಬುದ್ಧಿಯ ಸಾತ್ವಿಕ ಗುಣ ಸ್ವರೂಪವೆಂದು ಹೇಳುವುದು. ಯೋಗದರ್ಶವಾದರೂ ಸಾಂಖ್ಯ ತತ್ವವನ್ನೇ ಅನುಮೋದಿಸುವುದು. ವೇದಾಂತ ಮತಗಳಲ್ಲಿ ಆತ್ಮನ ಸಗುಣ ನಿರ್ಗುಣವಾದಕ್ಕನುಸರಿಸಿ ಧರ್ಮವು ಕೆಲವರಿಂದ ಆತ್ಮವೃತ್ತಿಗಾಗಿಯೂ, ಕೆಲವರಿಂಧ ಪ್ರಕೃತಿವೃತ್ತಿಯಾಗಿಯೂ ಹೇಳಲ್ಪಡುವದು.

ಮಹಾಭಾರತ— 'ಧಾರಣಾದ್ಧರ್ಮ ಮಿತ್ಯಾಹುಃ ಧರ್ಮೇಣ ವಿಧೃತಾಃ ಪ್ರಜಾಃ । ಯತ್ ಸ್ಯಾದ್ಧಾರಣ ಸಂಯುಕ್ತಂ ಸಧರ್ಮ ಇತಿ ನಿಶ್ಚಯಃ ॥ ಯಾವ ಕಾರ್ಯವು ಜಗತ್ತನ್ನು ಧಾರಣ ಮಾಡಲಿಕ್ಕೆ (ಸುವ್ಯವಸ್ಥಿತವಾಗಿಡಲಿಕ್ಕೆ), ಸಹಾಯ ಮಾಡುವುದೋ ಅದೇ ಧರ್ಮವು. ಮತ್ತು ಭಾರತವು 'ಅಹಿಂಸಾ ಪರಮೋಧರ್ಮಃ ಆನೃಶಂಸ್ಯಂ ಪರಮೋ ಧರ್ಮಃ, 'ಸತ್ಯಾನ್ನಾಸ್ತಿ ಪರೋಧರ್ಮಃ, ಎಂಬ ವಚನಗಳಿಂದ ನೀತಿಯನ್ನೂ ಧರ್ಮವೆಂದು ಬೋಧಿಸಿ, ಆ ನೀತಿಗೆ ಅತ್ಯುಚ್ಚ ಸ್ಥಾನವನ್ನು ಕೊಟ್ಟಿರುವುದು. ಇದರಂತೆಯೇ ಮೋಕ್ಷಧರ್ಮವನ್ನೂ ರಾಜಧರ್ಮವನ್ನೂ ಭಾರತದಲ್ಲಿ ಪ್ರತಿಪಾದಿಸಿರುವುದೂ ಉಂಟು. ಧರ್ಮಕ್ಕೂ ರಾಜ್ಯಕ್ಕೂ ಇರುವ ನಿಕಟ ಸಂಬಂಧವು ಭಾರತದ ರಾಜಧರ್ಮಾನುಶಾಸನದಲ್ಲಿ ವಿಸ್ತಾರವಾಗಿ ಉಕ್ತವಾಗಿದೆ.

ಭಗವದ್ಗೀತೆಯೂ ಧರ್ಮವೂ— ೧೮ ನೆಯ ಅಧ್ಯಾಯದಲ್ಲಿರುವ 'ಯೋಗಂ ಯೋಗೇಶ್ವರಾತ್ ಕೃಷ್ಣಾತ್ ಸಾಕ್ಷಾತ್ಕಥಮತಃ ಸ್ವಯಂ, ಎಂಬ ಶ್ಲೋಕ ಭಾಗದಿಂದ ಯೋಗೀಶ್ವರನಾದ ಕೃಷ್ಣನು ಬೋಧಿಸಿದ ಗೀತೆಯು ಪರಮಯೋಗ ಗ್ರಂಥವೇ ಇರುವುದೆಂದು ವಿದಿತವಾಗುವುದು. ಗೀತೆಯಲ್ಲಿ ಮೋಕ್ಷ, ಮೋಕ್ಷಮಾರ್ಗ, ಸಮಾಧಿಸ್ಥಿತಿ, ಧ್ಯಾನ, ಕರ್ಮ, ಜ್ಞಾನ, ಭಕ್ತಿ, ಸೃಷ್ಟಿಯನ್ನು ಹುಟ್ಟಿಸುವ ಮತ್ತು ನಾಶಿಸುವ ಶಕ್ತಿ, ಮುಕ್ತಿ, ಸಮತೆ ಇತ್ಯಾದಿ ಅರ್ಥಗಳಲ್ಲಿ ಯೋಗ ಶಬ್ದದ ಪ್ರಯೋಗವಿರುವದು. ಗೀತೆಯಲ್ಲಿ ಪ್ರತಿಪಾದಿತವಾದ ಮಾರ್ಗಗಳೆಲ್ಲವೂ ಯೋಗ ಮಾರ್ಗಗಳೇ. ಈ ಯೋಗ ಮಾರ್ಗಗಳೆಲ್ಲವೂ ಧರ್ಮಶಬ್ದವಾಚ್ಯಗಳಾಗುವುವವೆಂಬುದೇ ಗೀತಾಕಾರರ ಅಭಿಪ್ರಾಯವು. 'ಅಧ್ಯೇಷ್ಯತೇ ಚ ಯ ಇಮಂ ಧರ್ಮ್ಯಂ ಸಂವಾದಮಾವಯೋಃ, . . . , (ಅ. ೧೮. ೬೯) 'ಸರ್ವಧರ್ಮಾನ್ ಪರಿತ್ಯಜ್ಯ ಮಾಮೇಕಂ ಶರಣಂ ವ್ರಜ, (ಅ ೧೮-೬೬) ಇತ್ಯಾದಿಯಾದ ಗೀತಾ ವಾಕ್ಯಗಳು ಈ ಅಭಿಪ್ರಾಯವನ್ನೇ ಬಲಪಡಿಸುವವು. 'ಶಾಶ್ವತಸ್ಯ ಚ ಧರ್ಮಸ್ಯ - - - , (ಸನಾತನವಾದ ಧರ್ಮದ) 'ಇಮಂ ವಿವಸ್ವತೇ ಯೋಗಂ ಪ್ರೋಕ್ತವಾನಹಮವ್ಯಯಂ, (ಈ ನಿತ್ಯವಾದ ಯೋಗವನ್ನು ನಾನು ಸೂರ್ಯನಿಗೆ ಹೇಳಿದೆನು) ಇತ್ಯಾದಿ ವಾಕ್ಯಗಳು ಧರ್ಮವು ನಿತ್ಯವಾದುದೆಂಬುದನ್ನೂ, 'ಸ ಕಾಲೇ ನೇಹ ಮಹತಾ ಯೋಗೋ ನಷ್ಟಃ ಪರಂತಪ, (ಪರಂತಪನೆ ಈ ಯೋಗವು ಮಹಾಕಾಲಗತಿಯಿಂದ ಲುಪ್ತವಾಯಿತು.) 'ಯದಾ ಯದಾ ಹಿ ಧರ್ಮಸ್ಯ ಗ್ಲಾನಿರ್ಭವತಿ ಭಾರತ,

(ಅರ್ಜುನನೆ, ಯಾವ ಯಾವ ಕಾಲಗಳಲ್ಲಿ ಧರ್ಮಗ್ಲಾನಿಯಾಗುವುದೋ) ಇತ್ಯಾದಿ ವಾಕ್ಯಗಳು ಕಾಲಾನುಗುಣವಾಗಿ ಧರ್ಮಚ್ಯುತಿಯಾಗುವುದೆಂಬುದನ್ನೂ ಸೂಚಿಸುವವು. ಧರ್ಮವು ನಿತ್ಯವಾದುದು. ಅದನ್ನು ಸರಿಪಡಿಸಲಿಕ್ಕೆ ಮನುಷ್ಯನಿಗೆ ಅಧಿಕಾರವಿಲ್ಲವೆಂಬ ಪಕ್ಷದವರಿಗೂ, ಧರ್ಮವು ಕಾಲಾನುಗುಣವಾಗಿ ನಷ್ಟವಾಗುವುದು ಅದನ್ನು ಸರಿಪಡಿಸಲು ಆಯಾ ಕಾಲದಲ್ಲಿರುವ ಸತ್ಪುರುಷರಿಗೆ ಅಧಿಕಾರವಿರುವುದೆಂಬ ಪಕ್ಷದವರಿಗೂ ಮೇಲಿನ ವಾಕ್ಯಗಳು ಪ್ರಮಾಣ ವಾಕ್ಯಗಳಂತೆ ತೋರುವವು. ಆದರೆ ಗೀತೆಯಲ್ಲಿ ಸನಾತನ ಧರ್ಮವೂ ಕಾಲಧರ್ಮವೂ ಉಕ್ತವಾಗಿರುವವು. ಸನಾತನ ಧರ್ಮವೆಂದರೇನು ? ಕಾಲಧರ್ಮಗಳು ಯಾವವು ? ಎಂಬುದನ್ನು ಮುಂದೆ ವಿಚಾರಿಸುವೆವು. ಪ್ರಕೃತದಲ್ಲಿ ಗೀತೆಯು ಧರ್ಮಶಬ್ದಕ್ಕೆ ಯೋಗವೆಂದು ಅರ್ಥ ಮಾಡಿರುವದೆಂಬದನ್ನು ಹೇಳಬೇಕಾಗಿದೆ. 'ಇಜ್ಯಾಚಾರ ದಮಾ ಹಿಂಸಾದಾನಸ್ವಾಧ್ಯಾಯ ಕರ್ಮಣಾಂ । ಅಯಂತು ಪರಮೋ ಧರ್ಮೋ ಯದ್ಯೋಗೇನಾತ್ಮದರ್ಶನಂ,, (ಯಾಜ್ಞವಲ್ಕ್ಯಸ್ಮೃತಿ) ಯಜ್ಞ, ಆಚಾರ, ಇಂದ್ರಿಯ ನಿಗ್ರಹ, ಅಹಿಂಸಾ, ದಾನ, ವೇದಾಧ್ಯಯನ ಮೊದಲಾದವು ಧರ್ಮಶಬ್ದವಾಚ್ಯಗಳೇ. ಆದರೆ ಯೋಗದಿಂದ ಆತ್ಮದರ್ಶನವನ್ನು ಪಡೆಯುವುದೇ ಪರಮಧರ್ಮವು ಎಂದು ಬೋಧಿಸುವ ಸ್ಮೃತಿವಾಕ್ಯವು ಧರ್ಮಶಬ್ದಕ್ಕೆ ಯೋಗವೆಂದೂ ಅರ್ಥವಿರುವುದೆಂಬದನ್ನು ವಿಶದಪಡಿಸುವದು.

ಶಿವಾಗಮಗಳೂ ಧರ್ಮವೂ:— ಆಗಮಗಳಲ್ಲಿ ಯಾವುದನ್ನು ಧರ್ಮವೆಂದು ಕರೆಯುವರೆಂಬ ಪ್ರಶ್ನೆಗೆ ಕೆಳಗಿನ ವಾಕ್ಯಗಳು ಸಮರ್ಪಕವಾದ ಉತ್ತರವನ್ನು ಹೇಳುವವು. 'ಧರ್ಮಾಧರ್ಮಾತ್ಮಕಂ ಕರ್ಮತಚ್ಚ ತ್ರಿವಿಧಮರ್ಥತಃ । ಜಾತ್ಯಾಯುರ್ಭೋಗದಂ ಯೇನ ನಾವಿಶ್ರಂ ಪಚ್ಯತೇ ಕ್ವಚಿತ್ ॥, (ವಿಶ್ವಸಾರೋತ್ತರ) 'ತತ್ಸತ್ಯಾನೃತ ಯೋನಿತ್ವಾದ್ಧರ್ಮಾಧರ್ಮ ಸ್ವರೂಪಕಂ, (ಮೃಗೇಂದ್ರಾಗಮ) ಈ ಆಗಮ ವಾಕ್ಯಗಳು ಸತ್ಯವಾದ ಕ್ರಿಯೆಯೇ ಧರ್ಮವು. ಅಸತ್ಯವಾದ ಕ್ರಿಯೆಯೇ ಅಧರ್ಮವೆಂದು ಬೋಧಿಸುವವು. (ಯಾವುದಕ್ಕೆ ಸತ್ಯವಾದ ಕ್ರಿಯೆಯೆನ್ನಬೇಕೆಂಬುದು ಮುಂದೆ ಪ್ರತಿಪಾದಿಸಲ್ಪಡುವುದು.)

ಸ್ಮೃತಿಗಳೂ ಧರ್ಮವೂ:— ಸ್ಮೃತಿಗಳಿಗೆ ಧರ್ಮಶಾಸ್ತ್ರವೆಂಬ ವ್ಯವಹಾರವಿರುವುದು. ತಾನು ಜನ್ಮವೆತ್ತಿದ ದೇಶ ಮತ್ತು ವಂಶದೊಳಗೆ

ಯಾವ ಯಾವ ಸಂದರ್ಭದಲ್ಲಿ ಹೇಗೆ ಹೇಗೆ ತನ್ನ ಧರ್ಮಕ್ಕನುಗುಣ ವಾಗಿ ಆಚಾರಾದಿಗಳನ್ನು ನಡೆಸಬೇಕೆಂಬುದನ್ನು ಹೇಳುವುದೇ ಧರ್ಮಶಾಸ್ತ್ರವು. ಧರ್ಮಶಾಸ್ತ್ರಗ್ರಂಥಗಳಲ್ಲಿ ಗೃಹಸ್ಥಿತಿ, ನಿತ್ಯಕರ್ಮ, ತಿನ್ನುಣ್ಣುವ ನಿಯಮ, ಮನಃಸಂಯಮನ- ಲೋಕಶಿಕ್ಷಣ, ಸ್ತ್ರೀವಾತ್ಸಲ್ಯ, ಮಾತಾಪಿತೃಭಕ್ತಿ, ಈಶ್ವರನಿಷ್ಠೆ ನೀತಿಯ ಜಾಣ್ಮೆ, ವ್ಯವಹಾರಚಾತುರ್ಯ ಇವೇ ಮೊದಲಾದವುಗಳ ವಿಚಾರವು ಉಕ್ತವಾಗಿದೆ. ಈ ಧರ್ಮಶಾಸ್ತ್ರದೊಳಗೆ ಶ್ರೌತಸೂತ್ರ, ಗೃಹ್ಯಸೂತ್ರ, ಧರ್ಮಸೂತ್ರ ಎಂಬ ಹೆಸರಿನಿಂದ ಮೂರು ಬಗೆಯ ಗ್ರಂಥಗಳು ಕಂಡುಬರುವವು. ಶ್ರೌತಸೂತ್ರಗಳಲ್ಲಿ ಶೃತಿಯ ಆಧಾರದಿಂದ ಮಾಡುವ ಯಜ್ಞಾದಿ ಕ್ರಿಯೆಗಳ ಮತ್ತು ಅವುಗಳಿಗೆ ಬೇಕಾದ ಮಂತ್ರಗಳ ವಿಚಾರವೇ ಪ್ರಧಾನವಾಗಿರುವುದು. ಗೃಹ್ಯ ಸೂತ್ರಗಳಲ್ಲಿ ಮನೆತನಕ್ಕೆ ಸಂಬಂಧಿಸಿದ ನಿಯಮಗಳೂ, ಗರ್ಭಾದಾನಾದಿ ಸಂಸ್ಕಾರಗಳೂ ಪ್ರಧಾನವಾಗಿ ವಿವರಿಸಲ್ಪಟ್ಟಿವೆ.

ಧರ್ಮಸೂತ್ರಗಳಲ್ಲಿ ಬ್ರಾಹ್ಮಣಾದಿ ವರ್ಣಗಳ ಕರ್ತವ್ಯಗಳೂ, ಆಯಾ ವರ್ಣದವರು ಆಯಾಯ ಆಶ್ರಮದಲ್ಲಿ ಆಚರಿಸತಕ್ಕ ಧಾರ್ಮಿಕ, ಸಾಮಾಜಿಕ, ಪಾರಮಾರ್ಥಿಕ ಕರ್ತವ್ಯಗಳೂ, ರಾಜಕೀಯ, ಔದ್ಯೋಗಿಕ ವಿಚಾರಗಳೂ, ರಾಜನೀತಿಶಾಸ್ತ್ರ, ಅರ್ಥಶಾಸ್ತ್ರ, ಶಿಲ್ಪಶಾಸ್ತ್ರ, ನಗರ ನಿರ್ಮಾಣಶಾಸ್ತ್ರಗಳ ವಿವರಗಳೂ ಉಕ್ತವಾಗಿವೆ. ಈ ಗ್ರಂಥಗಳಲ್ಲಿ ಪ್ರತಿಪಾದಿತವಾಗಿರುವ ಆಚಾರ, ವಿಚಾರ, ವ್ಯವಹಾರಗಳೆಲ್ಲಾ ಧರ್ಮವೆಂಬ ಹೆಸರಿನಿಂದಲೇ ಕರೆಯಲ್ಪಡುವವು. ಸ್ಮೃತಿಯ ಟೀಕಾಕಾರರು, ಧರ್ಮವನ್ನು ವರ್ಣಧರ್ಮ, ಆಶ್ರಮಧರ್ಮ, ವರ್ಣಾಶ್ರಮಧರ್ಮ, ಗುಣಧರ್ಮ, ನಿಮಿತ್ತಧರ್ಮ, ಸಾಮಾನ್ಯಧರ್ಮವೆಂದು ಆರು ಭಾಗ ಮಾಡಿ, ಇವುಗಳಲ್ಲಿ ಮೇಲಿನ ವಿಷಯಗಳನ್ನೆಲ್ಲಾ ಅಂತರ್ಭಾವ ಮಾಡಿರುವರು. ವರ್ಣದ ಧರ್ಮಗಳಲ್ಲೊಂದಾದ ಕ್ಷತ್ರಿಯ ಧರ್ಮವೇ ರಾಜಧರ್ಮವೆಂದು ಸ್ಮೃತಿಗಳ ಅಭಿಪ್ರಾಯವು. ಧರ್ಮವೆಂಬ ಶಬ್ದವನ್ನು ನ್ಯಾಯವೆಂಬ ಅರ್ಥದಲ್ಲಿಯೂ ಕಟ್ಟಳೆಗಳೆಂಬ ಅರ್ಥದಲ್ಲಿಯೂ ಸ್ಮೃತಿಕಾರರು ಉಪಯೋಗಿಸಿರುವರು. ಇದರಿಂದ ಧರ್ಮಕ್ಕೂ ರಾಜ್ಯಕಾರಣಕ್ಕೂ ನಿಕಟ ಸಂಬಂಧವಿರುವುದೆಂಬುದು ಸ್ಮೃತಿಗಳಿಗೆ ಸಂಮತವಿದ್ದಂತೆ ಕಂಡುಬರುವದು. 'ಆಚಾರಃ ಪರಮೋಧರ್ಮಶ್ಶ್ರುತ್ಯುಕ್ತ ಸ್ಮಾರ್ತ ಏವಚ, (ಮನುಸ್ಮೃತಿ) ಇತ್ಯಾದಿ ವಾಕ್ಯಗಳಿಂದ ಮುಖ್ಯವಾಗಿ ಶ್ರುತಿಸ್ಮೃತಿಗಳಲ್ಲಿ

ಉಕ್ತವಾದ ಸದಾಚಾರವೇ ಧರ್ಮವೆಂಬ ಅಭಿಪ್ರಾಯವಾದಲ್ಲಿ ಸರ್ವ ಸ್ಮೃತಿಗಳು ಒಂದುಗೂಡಿರುವಂತೆ ತೋರುವುದು.

ಜೈನ ಬೌದ್ಧಾದಿ ಗ್ರಂಥಗಳು:— ಈ ಗ್ರಂಥಗಳಲ್ಲಿ ನೈತಿಕ ಗುರಿ ಇಲ್ಲವೆ ಮನುಷ್ಯನ ಅಂತಿಮ ಉದ್ದೇಶ ಎಂಬ ಅರ್ಥದಲ್ಲಿಯೂ ನಿರ್ಮಲವಾದ ಅಂತಃಕರಣ ಪ್ರವೃತ್ತಿಯೆಂಬ ಅರ್ಥದಲ್ಲಿಯೂ ಧರ್ಮಶಬ್ದದ ಪ್ರಯೋಗವು ಕಂಡುಬರುವುದು.

ಧರ್ಮಶಬ್ದದ ವ್ಯುತ್ಪತ್ಯರ್ಥ:— ಧರ್ಮವೆಂಬ ರೂಪವು 'ಧೃ' ಧಾತುವಿನಿಂದಾಗಿದೆ. 'ಧ್ರಿಯತೇ ಲೋಕೋ ನೇನ ಧರತಿ ಲೋಕಂ ವಾ ಧರ್ಮಃ ಎಂದು ಧರ್ಮ ಶಬ್ದದ ವ್ಯುತ್ಪತ್ತಿಯನ್ನು ಮಾಡುವರು. ಈ ವ್ಯುತ್ಪತ್ತಿಯಿಂದ ಜಗತ್ತಿನ ಸುಸ್ಥಿತಿಗೆ ಕಾರಣವಾದುದೇ ಧರ್ಮವೆಂಬುದು ಅರ್ಥವಾಗುತ್ತದೆ. ಜಗತ್ತಿನಲ್ಲಿ ಸಾಮಾಜಿಕ, ರಾಜಕೀಯ ಇವೇ ಮೊದಲಾದ ವಿಷಯಗಳ ವ್ಯವಹಾರವು ನ್ಯಾಯಸಮ್ಮತವಾಗಿದ್ದು ಪ್ರತಿಯೊಂದು ವ್ಯಕ್ತಿಯು ಸುಖಸಾಧಕವಾಗಿದ್ದರಲ್ಲವೇ ಜಗತ್ತು ಸುಸ್ಥಿತಿಯಲ್ಲಿರುವುದು? ಇಂತಹ ಸುಸ್ಥಿತಿಗೆ ಕಾರಣವಾದುದೇ ಧರ್ಮವೆಂದರೆ ಸುಖಸಾಧಕವಾದ ಜಗದ್ವ್ಯವಹಾರವೇ ಧರ್ಮರೂಪವೆಂಬುದು ಧರ್ಮ ಶಬ್ದದ ಅರ್ಥದಲ್ಲಿ ಅಡಕವಾಗಿರಬೇಕಲ್ಲವೆ ?

ಮೇಲಿನ ಗ್ರಂಥಗಳಲ್ಲಿ ಉಕ್ತವಾಗಿರುವ ಧರ್ಮಶಬ್ದದ ಅರ್ಥಗಳನ್ನು ವಿಚಾರಮಾಡಲಾಗಿ ಹಿಂದುಗಳಲ್ಲಿ ಧರ್ಮವು ಎಷ್ಟು ವ್ಯಾಪಕಾರ್ಥದಲ್ಲಿರುವುದೆಂಬುದು ಒಡೆದು ತೋರುವುದು ಇದರಿಂದ ಹಿಂದೂ ಧರ್ಮವು ಕೇವಲ ಹಿಂದುಗಳಿಗಲ್ಲ, ಇಡೀ ಮಾನವಕುಟುಂಬದ ಧರ್ಮವಾಗಲು ಯೋಗ್ಯತೆಯುಳ್ಳದಾಗಿರುವುದೆಂದು ಸ್ಫುಟವಾಗುವುದು. ಮಾನವ ಜೀವನವೇ ಧರ್ಮರೂಪವಾಗಿರುವುದೆಂಬುದೇ ಹಿಂದುಗಳ ಧರ್ಮಬೋಧೆಯು. ಅದು ಹೇಗೆಂಬುದು ಕೆಳಗಿನ ವಿಚಾರದಿಂದ ಗೊತ್ತಾಗುವದು.

ಮನುಷ್ಯಜನ್ಮವೆಂದು ಬಂದಿತೋ ಅಂದೇ ಧರ್ಮವು ಗಂಟು ಬಿದ್ದಿತೆಂದೇ ಹಿಂದೂಗಳ ನೈತಿಕ ಸಿದ್ಧಾಂತವು. ಈ ಮಾತು ವಿಚಾರಾರ್ಹವಾಗಿರುವದು. ಮನುಷ್ಯನ ಧ್ಯೇಯವೇನಿರುವದೆಂಬದನ್ನು ವಿಚಾರ ಮಾಡಿದರೆ ಪ್ರತಿಯೊಬ್ಬನ ಧ್ಯೇಯವೂ ಸ್ವಾತಂತ್ರ್ಯವೇ ಎಂದು ನನ್ನ ಅಭಿಪ್ರಾಯವು. ಈ ಸ್ವಾತಂತ್ರ್ಯವನ್ನೇ ಭೌತಿಕ ಶಾಸ್ತ್ರಜ್ಞರು ಜೀವ

ವಿಕಾಸವೆಂದೂ ಆಧ್ಯಾತ್ಮಿಕ ತತ್ವಜ್ಞರು ಮುಕ್ತಿಯೆಂದೂ ಕರೆಯುವರು. ಅತಿ ಸೂಕ್ಷ್ಮವಾದ ಅಣುಗಳು ಮೊದಲ್ಗೊಂಡು ಮನುಷ್ಯನ ವರೆಗೂ ಅಂದರೆ ನಮ್ಮ ಸುತ್ತುಮುತ್ತಲೂ ಕಣ್ಣಿಗೆ ಬೀಳುವ ಚೇತನಾಚೇತನಾತ್ಮಕವಾದ ಪ್ರತಿಯೊಂದು ವಸ್ತುವೂ ಸ್ವಾತಂತ್ರ್ಯಕ್ಕಾಗಿಯೇ ಸಾಹಸಪಡುತ್ತದೆ. ಈ ಸ್ವಾತಂತ್ರ್ಯಸಂಗ್ರಾಮದ ಪರಿಣಾಮವೇ ಜಗತ್ತೆಂದು ಹೇಳಿದರೆ ತಪ್ಪಾಗದು. ಪ್ರತಿಯೊಂದು ಅಣುವು ಉಳಿದ ಅಣುಗಳಿಂದ ದೂರಾಗಲಿಕ್ಕೂ, ಪೃಥ್ವಿಯು ಸೂರ್ಯನಿಂದ ಸಿಡಿದು ಹೋಗಲಿಕ್ಕೂ ಚಂದ್ರನು ಪೃಥ್ವಿಯಿಂದ ಬಿಡುಗಡೆ ಹೊಂದಲಿಕ್ಕೂ ಹೆಣಗಾಡುವದು ಕಂಡುಬರುವದು. ಸಜ್ಜನರು ಈಶ್ವರೋಪಾಸನೆಯನ್ನು ಮಾಡುವುದಾದರೂ ಈ ಸ್ವಾತಂತ್ರ್ಯಕ್ಕಲ್ಲವೇ? ಅಷ್ಟೇಕೆ? ಒಬ್ಬ ಕಳ್ಳನು ತನ್ನಲ್ಲಿ ಕೆಲವು ಪದಾರ್ಥಗಳು ಇಲ್ಲೆಂದು ವ್ಯಥೆಗೊಂಡು ಆ ಪದಾರ್ಥಗಳನ್ನು ಕಳವು ಮಾಡಿ, ಆ ವ್ಯಥೆಯಿಂದ ಬಿಡುಗಡೆ ಹೊಂದಲು ಪ್ರಯತ್ನಿಸುವನಲ್ಲವೇ? ಜಗತ್ತಿನಲ್ಲಿ ತಿಳಿದೋ ತಿಳಿಯದೋ ಪ್ರತಿಯೊಂದು ಪದಾರ್ಥವೂ ಸ್ವಾತಂತ್ರ್ಯವೆಂಬ ಧ್ಯೇಯದೆಡೆಗೇ ಓಡುತ್ತಿರುವದು. ಹೀಗೆ ಸ್ವಾತಂತ್ರ್ಯಕ್ಕಾಗಿ ಒಡಿದಾಡುವದೇ ಸೃಷ್ಟಿಯ ನಿಯಮವಾಗಿರುವದು. ಈ ನಿಯಮವನ್ನು ವಸ್ತುವಿನ ನೈಸರ್ಗಿಕ ಧರ್ಮವೆಂದು ಹೇಳುವರು. ಮನುಷ್ಯನಾದರೂ ತನ್ನ ನೈಸರ್ಗಿಕ ಧರ್ಮಕ್ಕನುಸರಿಸಿ ಸ್ವಾತಂತ್ರ್ಯಕ್ಕಾಗಿ ಹೆಣಗಾಡುವನು. ನಾಗರಿಕ ಸಂಸ್ಕೃತಿಯ ಗಂಧವಿಲ್ಲದ ಒಬ್ಬ ಕಾಡುಮನುಷ್ಯನಾದರೂ ಒಂದಾನೊಂದು ಕಾಲದಲ್ಲಿ ಸ್ವತಂತ್ರನಾಗಿ ಸಂಪೂರ್ಣಾತ್ಮನು (ಪರಮಾತ್ಮ ಸ್ವರೂಪನು) ಆಗಲಿಕ್ಕೇ ಬೇಕು. ಈ ರೀತಿಯಾದ ನೈಸರ್ಗಿಕ ಧರ್ಮ ಮಾರ್ಗಕ್ಕೆ ತತ್ವಜ್ಞಾನಿಗಳು ಪಿಪೀಲಿಕಾ ಮಾರ್ಗವೆಂದು ಹೇಳುವರು. ಈ ಮಾರ್ಗದಲ್ಲಿ ಕಾಲಾವಧಿಯು ಹೆಚ್ಚು. ಅಲ್ಪಕಾಲಾವಧಿಯಲ್ಲಿಯೇ ಪೂರ್ಣಾತ್ಮನಾಗುವ ಮಾರ್ಗವೊಂದಿರುವದು. ಅದನ್ನು ವಿಹಂಗಮ ಮಾರ್ಗವೆಂದು ಹೇಳುವರು. ಇತರ ಪ್ರಾಣಿಗಳು ಪಿಪೀಲಿಕಾ ಮಾರ್ಗದಿಂದ ವಿಕಾಸವನ್ನು ಹೊಂದುತ್ತಿದ್ದರೆ, ಸಂಘಜೀವಿಯಾದ ಮನುಷ್ಯನು ವಿಹಂಗಮ ಮಾರ್ಗದಿಂದ ವಿಕಾಸವನ್ನು ಹೊಂದಲು ಯತ್ನಿಸುವನು. ಇತರ ಪ್ರಾಣಿಗಳಲ್ಲಿರದೆ ಮನುಷ್ಯನಲ್ಲಿ ಮಾತ್ರವಿರುವ ಅಂತಃಪ್ರಜ್ಞೆಯೇ ಈ ವಿಹಂಗಮ ಮಾರ್ಗವನ್ನು ಕಂಡುಹಿಡಿದಿರುವದು. ಈ ವಿಹಂಗಮ ಮಾರ್ಗದ ಧರ್ಮವೇ ಮನುಷ್ಯ ಧರ್ಮವು. "ಧರ್ಮೋ ಹಿ ತೇಷಾಮಧಿಕೋ ವಿಶೇಷಃ" ಎಂಬ

ನೀತಿವಾಕ್ಯವು ಪಶುಪಕ್ಷಿಗಳಿಗಿಂತಲೂ ಮನುಷ್ಯನಿಗೆ ಧರ್ಮವೊಂದು ಹೆಚ್ಚಿಗೆ ಇರುವದೆಂದು ಹೇಳಿರುವದಾದರೂ ಈ ಮನುಷ್ಯ ಧರ್ಮವನ್ನೇ. ಈಗ ಜನ್ಮವೆತ್ತುವ ಪ್ರತಿಯೊಬ್ಬ ಮನುಷ್ಯನು ಈ ಮನುಷ್ಯ ಧರ್ಮದಿಂದ ಬದ್ಧನಾಗಲಿಕ್ಕೇ ಬೇಕು. ಮಾನವ ಜಾತಿಗೆ ಬಾಲ್ಯಾವಸ್ಥೆಯು ಕಳೆದು ಸಂಘಜೀವನವು ಎಂದು ಪ್ರಾರಂಭವಾಯಿತೋ ಅಂದೇ ಈ ಮನುಷ್ಯ ಧರ್ಮದ ಉದಯುವಾಗಿರುವದು. ಮನುಷ್ಯನ ಯಥಾರ್ಥವಾದ ವಿಚಾರ ಶಕ್ತಿಯಿಂದ ಕಾಲಕಾಲಕ್ಕೆ ಅಭಿವೃದ್ಧಿಯನ್ನು ಹೊಂದಿ, ಈಗ ನಮ್ಮಿಂದ ಸನಾತನ ಧರ್ಮವೆಂದು ಕರೆಯಿಸಿಕೊಳ್ಳುವ ಧರ್ಮವಾದರೂ ಹಿಂದಿನ ಆ ಮನುಷ್ಯ ಧರ್ಮದ ಪರಿಣಾಮರೂಪವೆಂಬುದು ಲಕ್ಷ್ಯದಲ್ಲಿಡತಕ್ಕದಾಗಿದೆ. ಮನುಷ್ಯನು ಕಂಡು ಹಿಡಿದ ವಿಹಂಗಮ ಮಾರ್ಗದ ಧರ್ಮವು ನೈಸರ್ಗಿಕ ಧರ್ಮಕ್ಕೆ (ಆತ್ಮ ವಿಕಾಸಕ್ಕೆ) ಹೊಂದಿಕೊಂಡಿರುವ ವರೆಗೂ ಧರ್ಮಗ್ಲಾನಿಯು ಸಂಭವಿಸುವದಿಲ್ಲ. ಮನುಷ್ಯ ಧರ್ಮವು ಕಾಲಾನುಗುಣವಾಗಿ ಸ್ವಾರ್ಥ ಸಾಧಕರ ಪ್ರಕ್ಷಿಪ್ತಾದಿ ದೋಷಗಳಿಂದ ದೂಷಿತವಾಗುವದೇ ಧರ್ಮಗ್ಲಾನಿಯು. ಧರ್ಮದ ಮೂಲತತ್ವಕ್ಕೆ (ಆತ್ಮ ವಿಕಾಸಕ್ಕೆ) ಬಾಧೆ ಬರದಂತೆ ಆ ಧರ್ಮವನ್ನು ಸರಿಪಡಿಸುವದೇ ಧರ್ಮ ಸುಧಾರಣೆಯು. ಇಂತಹ ಧರ್ಮ ಸುಧಾರಣೆಯು ಹಿಂದೂ ಧರ್ಮದಲ್ಲಿ ಆಗಾಗ ನಡೆದಿರುವಂತೆ ಈ ನವಯುಗದಲ್ಲಿಯೂ ನಡೆಯುಬೇಕಾಗಿದೆ.

ಆ ಕೋಟೆ ಪಾಯೆಗಳಲ್ಲು ಸುರಂಗ ತೆಗೆಸುತ್ತ ಇದ್ದರು. ಟೀಪೂ ಸುಲ್ತಾನರು ಪಟ್ಟಣದ ಕೋಟೆ ಮುಂದೆ ಎರಡು ಹೊಳೆ ಮಧ್ಯೆ ಬತ್ತೇರಿಗಳ (ನ್ನು) ತಯಾರು ಮಾಡಿಸಿ, ಆ ಬತ್ತೇರಿಗಳ ಒಳಗೆ ತಮ್ಮ ಪವುಜನ್ನು ನಿಲ್ಲಿಸಿಕೊಂಡು ಇದ್ದರು. ಅಷ್ಟರಲ್ಲಿ ಲಾರ್ಡ್ ಕಾರನ್‌ವಾಲಿಸ್ ಸಾಹೇಬರವರು, ಜನರಲ್ ಮೇಂಡಸ್ ಸಾಹೇಬರವರು ಸಹ ಪವುಜು ಸಮೇತ ಪಟ್ಟಣಕ್ಕೆ ತಲಪಿದರು. ಕೊಡಗಿನ ಕಡೆಯಿಂದ ಗವರ್ನರ್ ಮೇಜರ್ ಜನರಲ್ ರಾಬರ್ಟ್ ಅಬ್ರಕರಂಬಿ ಸಾಹೇಬರವರು, ಕೊಡಗಿನ ರಾಜರು ಸಹ ಕೂಡಿ, ಬೊಂಬಾಯಿ ಪವುಜು ಸಮೇತ ಕೂಚಾಗಿ ಮುತ್ತೂರು ಗ್ರಾಮದ ಸಮೀಪಕ್ಕೆ ತಲಪಿದರು. ಅಷ್ಟರಲ್ಲಿ, ಪಿರಿಯಾಪಟ್ಟಣದ ಕೋಟೆಯಲ್ಲಿ ಸುರಂಗ ತೆಗೆಸುತ್ತ ಇದ್ದ ಟೀಪೂ ಸುಲ್ತಾನರ ಕಡೆಯ ಜನರು, ಇಂಗ್ರೇಜಿಯವರ ಲಷ್ಕರು ಇಲ್ಲಿಗೆ ಬಂದರೆ ಪಿರಿಯಾಪಟ್ಟಣದ ಕೋಟೆಯನ್ನು ತೆಗೆದುಕೊಂಡಾರೆಂದು ತಿಳಿದು ಶೀಘ್ರದಿಂದ ಸುರಂಗಗಳ ಒಳಗೆ ಮದ್ದು ತುಂಬಿ, ಬೆಂಕಿಹಾಕಿ, ಕೋಟೆಯನ್ನು ಕೆಡವಿಬಿಟ್ಟು, ಆ ಸರದಾರನು ತನ್ನ ಮಂದಿ ತೆಗೆದುಕೊಂಡು ಶ್ರೀರಂಗಪಟ್ಟಣಕ್ಕೆ ಹೋದನು. ಆ ಬಳಿಕ ಜನರಲ್ ರಾಬರ್ಟ್ ಅಬ್ರಕರಂಬಿ ಸಾಹೇಬರವರು ಎರಡು ಪಟಾಲಂ ಪಿರಿಯಾಪಟ್ಟಣದ ಕೋಟೆಯೊಳಗೆ ಇಟ್ಟು, ಉಳಿಕೆ ಪವುಜು ಸಮೇತ ಪಿರಿಯಾಪಟ್ಟಣದ ಹಳೇ ಕೋಟೆ ಸಮೀಪದಲ್ಲು ಇಳಕೊಂಡರು.

ಟೀಪೂಸುಲ್ತಾನರು ತಮ್ಮ ಮಂದಿ ತೆಗೆದುಕೊಂಡು ಹೋಗಿ ಇಂಗ್ರೇಜಿ ಬಹದ್ದರರ ಪವುಜಿನ ಸಂಗಡ ಕರೀಘಟ್ಟದ ಬಳಿಯ ಲಡಾಯಿ ಮಾಡಿದಲ್ಲಿ, ಇಂಗ್ರೇಜಿಯವರ ಪವುಜು ಟೀಪೂಸುಲ್ತಾನರ ಪವುಜಿನ ಮೇಲೆ ಬಲಾಢ್ಯರಾಗಿ ಟೀಪೂಸುಲ್ತಾನರ ಪವುಜನ್ನು ನಿಗ್ರಹಿಸಿದರು. ಕಡೆಗೆ ಟೀಪೂಸುಲ್ತಾನರ ಪವುಜು ಓಡಿ ಹೋಗಿ ಕಾವೇರೀ ಎರಡು ಹೊಳೆ ಮಧ್ಯದಲ್ಲಿ ಕೋಟೆ ಬತ್ತೇರಿ ಒಳಗೆ ಬಂದು, ಕೋಟೆಯ ಆಶ್ರಯದ ಒಳಗೆ ಇಳಕೊಂಡರು. ಆ ಬಳಿಕ ಇಂಗ್ರೇಜಿಯವರ ಪವುಜು ಒಂದು ರಾತ್ರೆ ಕರೀಗಟ್ಟದ ಬಳಿಯ ಇಳದು ಇದ್ದು, ಅಲ್ಲಿಂದ ಹೊರಟು ಹಿರೋಡೆ ಬೆಟ್ಟದ ಸಮೀಪದಲ್ಲು ಕೊಡಗಿನ ಕಡೆಯಿಂದ ಕುಮ್ಮಕ್ಕಾಗಿ ಪಿರಿಯಾಪಟ್ಟಣಕ್ಕೆ ಬಂದು ಇರುವ ಬೊಂಬಾಯಿ ಪವುಜಿನ ದಾರಿ ನೋಡುತ್ತ ಮೂರು ದಿವಸ ಅಲ್ಲಿ ಮೊಕ್ಕಾಂ ಮಾಡಿದರು.

ಆ ಬಳಿಕ ಮಳೆಗಾಲ ಸಮೀಪವಾದ್ದರಿಂದ ಲಾರ್ಡ್ ಕಾರನ್‌ವಾಲಿಸ್ ಸಾಹೇಬರವರ ಪವುಜು ಅಲ್ಲಿಂದ ಹೊರಟು ಬೆಂಗಳೂರಿಗೆ ಹೋದರು. ಮೇಜರ್ ಜನರಲ್ ರೋಬರ್ಟ್‌ ಅಬರಕರಂಬಿ ಸಾಹೇಬರವರು ಕೊಡಗಿನ ರಾಜರು ಸಹ ಸಂಗಡ ಇರುವ ಪವುಜು ಸಮೇತ ಪಿರಿಯಾಪಟ್ಟಣದಿಂದ ಹೊರಟು ಬಂದು ಹೆಗ್ಗಳದ ಗಟ್ಟದ ಬಳಿಯಲ್ಲು ಇಳಕೊಂಡು, ಆ ಬಳಿಕ ಆ ಜನರಲ್ ಸಾಹೇಬರು ದೊರೆಗಳ ಸಂಗಡ ಹೇಳಿದ್ದು:— "ನಾವು ಇಲ್ಲಿಂದ ತಲಚೇರಿಗೆ ಹೋಗಿ ಇಂಗ್ರೇಜಿ ಬಹದ್ದರವರ ಸರಕಾರದ ಪವುಜು ಯಾವತ್ತು ಅಲ್ಲಿ ಮಡಗಿ ಬೊಂಬಾಯಿಗೆ ಹೋಗುತ್ತೇವೆ. ಆ ಬಳಿಕ ಅವಲ್ ನೋಸವ್ಮಿಗೆ ಪುನಶ್ಚ ಬೊಂಬಾಯಿಂದ ಈ ಕಡೆಗೆ ಬರುತ್ತೇವೆ. ಈಗ ಕೆಲವು ಜಂಗಿ ಸಾಮಾನು, ಪಿರಂಗಿ, ಗುಂಡು, ಮದ್ದು ತಮ್ಮ ತಾಬೆಗೆ ಕೊಡುತ್ತೇವೆ. ಆರು ತಿಂಗಳು ಪರಿಯಂತರ ತಾವು ನಾಲ್ಕು ಕಡೆಯಿಂದ ರಸ್ತಿನ ಸಾಮಾನು ಮುಂತಾಗಿ ಹೇರಾಳವಾಗಿ ಪ್ರಯತ್ನದಿಂದ ತರಿಸಿ ಜಮಾಯಿಸಬೇಕು. [ಇದಲ್ಲದೆ ಕೆಲವು ರೈತವರ್ತಕರು ರಸ್ತಿನ ಸಾಮಾನು ವಗೈರೆ ಟೀಪೂಸುಲ್ತಾನರ ದಂಡಿಗೆ ಸಾಗಿಸುತ್ತಾರೆ. ಅವರಿಗೆ ತಾವು ತಕರಾರಿನಿಂದ ಈ ಕಡೆಗೆ ತಿರುಗಿಸಿಕೊಂಡು, ಅವರು ಟೀಪೂಸುಲ್ತಾನರ ದಂಡಿನಲ್ಲಿ ದಿನಸು ಮಾರುವ ಕ್ರಯಕ್ಕಿಂತಲು ಹೆಚ್ಚು ಕ್ರಯ ಕೊಡಿಸಿ ರಸ್ತಿನ ಸಾಮಾನು ಜಮಾಯಿಸಬೇಕು.] = ಈ ಬಗ್ಗೆ ಬೇಕಾದಷ್ಟು ದ್ರವ್ಯ ಕುಂಪಣಿ ಸರಕಾರದಿಂದ ಕೊಡಿಸುತ್ತೇವೆ."— ಎಂಬದಾಗಿ ಹೇಳಿದಲ್ಲಿ, ಆ ಮಾತಿಗೆ ರಾಜರು ಹೇಳಿದ್ದು:— "ಈಗ ರಸ್ತಿನ ಸಾಮಾನದ ಕ್ರಯಕ್ಕೆ ತಾವು ಹಣ ಕೊಡ ಕೆಲಸವಿಲ್ಲ. ತಾವು ಹೇಳಿದ ಪ್ರಕಾರ ಟೀಪೂಸುಲ್ತಾನರ ದಂಡಿಗೆ ರಸ್ತು ಸಾಮಾನು ತಲುಪಿಸುವಂತಾ ರೈತವರ್ತಕರನ್ನು ಈ ಕಡೆಗೆ ಮಾಡಿಕೊಂಡು, ಕ್ರಯಮೂಲವಾಗಿ ಸಿಕ್ಕಿದಷ್ಟು ಸಾಮಾನಿಗೆ ಕ್ರಯವನ್ನು ನಮ್ಮ ಕಯ್ಯಿಂದ ಕೊಟ್ಟು, ಆ ಸಾಮಾನು ಜಮಾಯಿಸುತ್ತೇವೆ. ಸಾಮಾನದ ಕ್ರಯಕ್ಕೆ ನಮ್ಮಲ್ಲಿರುವ ಹಣ ಸಾಲದೆ ಹೋದರೆ, ತಮಗೆ ಕಾಗದ ಬರೆದು ಕಳುಹಿಸಿ, ಸಾಮಾನದ ಕ್ರಯದ ಬಗ್ಗೆ ಹಣ ತರಿಸಿಕೊಂಡು, ಸಾಮಾನು ರಸ್ತು ಜಮಾಯಿಸಿ ಮಡಗುವೆವು."— ಎಂತ ಹೇಳಿದರು. ಆ ಬಳಿಕ ಆ ಜನರಲ್ ಸಾಹೇಬರವರು ಕೆಲವು ಪಿರಂಗಿ, ಮದ್ದು, ಗುಂಡು, ದವಸ

---

= ಆವರಣ ಚಿಹ್ನಗಳೊಳಗಣ ಅಂಶವು ಬ. ಪ್ರತಿಯಲ್ಲಿ ಇಲ್ಲ.

ಧಾನ್ಯ ಮುಂತಾದ ಸಾಮಾನವನ್ನು ಜೋಪಾನದಲ್ಲು ಇರಿಸತಕ್ಕ ಬಗ್ಗೆ ವೀರರಾಜೇಂದ್ರ ಒಡೆಯರವರ ವಶಕ್ಕೆ ಕೊಟ್ಟು, ಆ ಜನರಲ್ ಸಾಹೇಬರವರು ಪವುಜು ಸಮೇತ ಕಲಿಸಂದ ೪೮೯೩ ನೇ ವಿರೋಧಿಕೃತು ಸಂವತ್ಸರದ ಜ್ಯೇಷ್ಠಮಾಸದಲ್ಲು ಗಟ್ಟಯಿಳಿದು ತಲಚೇರಿಗೆ ಹೋಗಿ, ಪವುಜು ಯಾವತ್ತೂ ಅಲ್ಲಿ ಬಿಟ್ಟು, ತಾವು ಬೊಂಬಾಯಿಗೆ ಹೋದರು. ರಾಜರು ಆ ಬಗ್ಗೆ ಅನಾಮತ್ತು ಸಾಮಾನು ಯಾವತ್ತೂ ಜೋಪಾನದಲ್ಲಿ ಮಡಗಿಸಿ, ನಾಲ್ಕುನಾಡು ಅರಮನೆಗೆ ಬಂದು, ತಮ್ಮ ಕೊಡಗಿನ ಸೀಮೆಯಲ್ಲು ಸಿಕ್ಕುವಂತಾ ಕೆಲವು ಸಾಮಾನವನ್ನು ಕ್ರಯ ಕೊಟ್ಟು ತರಿಸಿ ಜಮಾಯಿಸುತ್ತ, ಇದಲ್ಲದೆ ಟೀಪೂಸುಲ್ತಾನರ ದಂಡಿಗೆ ರಸ್ತು ತಲಪಿಸುತ್ತಾ ಇದ್ದಂತಾ ರೈತರಿಗೆಲ್ಲ ಭರವಸೆ ಕೊಟ್ಟು ತಮ್ಮ ಕಡೆಗೆ ತಿರುಗಿಸಿಕೊಂಡು, ಅವರು ಹೇಳಿದ ಮೇರೆ ಕ್ರಯ ಕೊಡಿಸಿ, ಆ ಬಗ್ಗೆ ಸಾಮಾನು ಸರಂಜಾಮು ಅವರಿಂದ ತರಿಸಿ ಜಮಾಯಿಸುತ್ತ, ಈ ಕಡೆ ಸಿಕ್ಕಿದಂತಾ ಸಾಮಾನವನ್ನು ಟೀಪೂಸುಲ್ತಾನರ ಸೀಮೆಗೆ ಕೊಡಗು ಮಂದಿಯನ್ನು ಕಳುಹಿಸಿ ಯುದ್ಧಮುಖದಲ್ಲಿ ಪ್ರಾಣಪ್ರಯತ್ನದಲ್ಲಿ ತರಿಸುತ್ತ, ಮಳೆಗಾಲ ಆರು ತಿಂಗಳ ಪರಿಯಂತರ ಈ ಮೂರು ವಿಧದಿಂದ ಸಾಮಾನು ತರಿಸುವ ಬಗ್ಗೆ ಪ್ರಯತ್ನಪಟ್ಟು ಜಮಾಯಿಸುತ್ತ ಇದ್ದರು.

ಆಬಳಿಕ ಮಾರ್ಗಶಿರ ಮಾಸದಲ್ಲಿ ಮೇಜರ್ ಜನರಲ್ ರಾಬರ್ಟ್ಸ್ ಅಬ್ರಕರಂಬಿ ಸಾಹೇಬರವರು ಜಂಗಿ ಸಾಮಾನು ಸರಂಜಾಮು ವಗೈರೆ ಸಾಗಿಸಿಕೊಂಡು ಬೊಂಬಾಯಿಂದ ತಲಚೇರಿಗೆ ಬಂದು, ಅಲ್ಲಿದ್ದ ಲಷ್ಕರ್ ಸಮೇತ ಬಂದು, ಪ್ರಾಕು ಇಳಿದು ಇದ್ದಂಥ ಹೆಗ್ಗಳದ ಗಟ್ಟದ ಮೇಲೆ ಇಳಕೊಂಡು, ಆ ವಿವರವನ್ನು ವೀರರಾಜೇಂದ್ರ ಒಡೆಯರ ಬಳಿಗೆ ಬರೆಸಿ ಕಳುಹಿಸಿದಲ್ಲಿ, ರಾಜರು ಹೋಗಿ ಆ ಜನರಲ್ ಸಾಹೇಬರ(ನ್ನು) ಕಂಡು ಭೇಟಿಯಾಗಿ, ಸಂತೋಷಪಟ್ಟು, ಮೊದಲು ಅನಾಮತ್ತಾಗಿ ದೊರೆಗಳ ವಶದಲ್ಲಿ ಇಟ್ಟು ಇದ್ದಂತಾ ಜಂಗಿ ಸಾಮಾನು, ಪಿರಂಗಿ ಮುಂತಾದ್ದನ್ನು ಪುನಃ ಅವರಿಗೆ ಕೊಟ್ಟಲ್ಲಿ, ಅವರುಃ—"ಎರಡು ತಿಂಗಳ ತನಕ ಮೊಕ್ಕಾಂ ಮಾಡುತ್ತ ಇದ್ದೇವೆ. ಲಷ್ಕರಿನ ಖರ್ಚಿನ ಬಗ್ಗೆ ತಮ್ಮ ಕಡೆಯಿಂದ ಐದು ಲಕ್ಷ ಡಂಗಾಳಿ ಅಕ್ಕಿ ಕೊಡಿಸಬೇಕು"— ಎಂಬದಾಗಿ ಹೇಳಿದಲ್ಲಿ, "ಏನು ಬಗೆಯಿಂದಾದರೂ ನಾಲ್ಕು ಕಡೆಯಿಂದ ತರಿಸಿಕೊಡುತ್ತೇವೆ"— ಎಂಬದಾಗಿ

ಮಹಾರಾಜರು ಹೇಳಿ, ಆದೇ ಮೇರೆ [ನಾನಾ ಕಡೆ]* ಯಿಂದ ಆಡು ಕುರಿ ಮುಂತಾದ ರಾತೀಪಿನ ಸಾಮಾನು ಹೇರಳವಾಗಿ ತರಿಸಿ ಆ ಲಷ್ಕರಿಗೆ ಕೊಡಿಸುತ್ತ, ೫ ಲಕ್ಷ ಡಂಗಾಳಿ ಅಕ್ಕಿಯನ್ನು ಅವರಿಗೆ ಬೇಕಾದ ಹೊತ್ತಿಗೆ ಕೊಡಿಸುವ ಬಗ್ಗೆ ಅಳಿಸಿ ಜೋಪಾನದಲ್ಲು ಮಾಡಗಿಸಿ ಈ ಮೇರೆ ಇರುವಲ್ಲಿ, ಟೀಪುಸುಲ್ತಾನರು ಖಾದರಖಾನ ಕೇಸ [ರಿ] × ಸಂಗಡ ಹೇಳಿದ್ದು:—"ನಿನ್ನ ಮೇಲೆ ಕೊಡಗಿನ ರಾಜರ ಬಹಾಳ ಮೆಹರ್ಬಾನಿ ಇದೆ. ಮೊದಲು ನೀನು ಅವರ ಕೈಗೆ ಸಿಕ್ಕಿದಾಗ್ಗೆ ಪ್ರಾಣವುಳಿಸಿ ನಿನ್ನನ್ನು ಈ ಕಡೆಗೆ ಬಿಟ್ಟು ಕಳುಹಿಸಿ ಇದ್ದರು. ಈಗ ನಿನ್ನ ಮುಖಾಂತರದಿಂದ ಅವರ ಸ್ನೇಹ ಮಾಡಗಬೇಕು. ಈ ಬಗ್ಗೆ ನಿನಗೆ ಹಿತಭಾರಿಯಾಗಿರುವಂತಾ ಮನುಷ್ಯನನ್ನು ಕರಕೊಂಡು ಬಾ" ಎಂದು ಹೇಳಿದಲ್ಲಿ, ಆ ಖಾದರ್ ಖಾನನು ತನಗೆ ಆಪ್ತರಾದಂತಾ ಜನರ(ನ್ನು) ಟೀಪೂ ಸುಲ್ತಾನರ ಬಳಿಗೆ ಕರಕೊಂಡು ಹೋಗಿ ಒಪ್ಪಿಸಿದಲ್ಲಿ, ಆ ಟೀಪೂಸುಲ್ತಾನರು ತಮ್ಮ ಕಡೆಯಿಂದ ಒಂದು ಕಾಗದ, ಮೀರಸಾದಕರವರದು ಒಂದು ಕಾಗದ, ಪೂರ್ಣಯ್ಯನವರ ಕಡೆಯಿಂದ ಒಂದು ಕಾಗದ ಸಹ ದೋಸ್ತಿ ಮಾಡಗುವ ಬಗ್ಗೆ ನಂಬಿಗೆ ಭಾಷೆ ಹಾಕಿ ಬರೆಸಿ ಆ ಕಾಗದ ಖಾದರಖಾನನ ಕಡೆ ಬಲೆ ಅದ್ಮಿ ಹರಿಕಾರ ಡಲಾಯುತ ಸಹ ಆಯಿದು ಜನರ ಸಂಗಡ ವೀರರಾಜೇಂದ್ರ ಒಡೆಯರ ಬಳಿಗೆ ಕಳುಹಿಸಿದ್ದರಿಂದ, ಆ ಜನವು ಕೊಡಗಿನ ಸೀಮೆ ಸರಹದ್ದಿಗೆ ಬಂದಲ್ಲಿ, ಅಲ್ಲಿ ಇದ್ದ ಪಾರಾಡವರು ಆ ಕಾಗದಗಳ ಸಮೇತ ಆ ಜನರನ್ನು ರಾಜರ ಬಳಿಗೆ ಕರತಂದಲ್ಲಿ, ಆ ಖಾದರಖಾನನ ಕಡೆ [ಬಲೆ] = ಅದ್ಮಿಯು ತಾನು ತಂದಂಥ ಕಾಗದಗಳನ್ನು ಒಪ್ಪಿಸಿ:—" ಮಹಾರಾಜರು ನಮ್ಮ ಸ್ನೇಹದಿಂದ ಮುಖ ತಿರುಗಿಸಿ ಇಂಗ್ರೇಜಿಯವರ ಸಂಗಡ ಕೂಡಿ ಇದ್ದೀರಿ. ನಾವು ಸಮೀಪದಲ್ಲಿ ಇರುವಂತಾವರು. ನಮ್ಮನ್ನು ದೂರಮಾಡಿ, ದೂರ ದೇಶದವರ ಸಂಗಡ ದೋಸ್ತಿ ಇಟ್ಟು ಇದ್ದೀರಿ. ಕಷ್ಟ ಕಾಲಕ್ಕೆ ಸಮೀಪದವರು ಹೊರತು ದೂರದೇಶದವರ ಸ್ನೇಹ ಕೆಲಸಕ್ಕೆ ಬಾರದು. ಹೇಗೆಂದರೆ, ಪ್ರಾಕು ಸಂವತ್ಸರದಲ್ಲಿ ಇಂಗ್ರೇಜಿಯವರು ತಮ್ಮನ್ನು ಕರೆದುಕೊಂಡು

---

* ಬ ನಾಲ್ಕು ಕಡೆ ಸೀಮೆ

× ಬ ಗಿ

= ಬ ಮರ್ದೆ

ದಂಡುಸಮೇತ ಪಿರಿಯಾಪಟ್ಟಣಕ್ಕೆ ಬಂದು ಇದ್ದು ಪುನಃ ಹೋಗುವಾಗ್ಗೆ ತಮ್ಮನ್ನು ಕೊಡಗಿನಲ್ಲಿ ಬಿಟ್ಟು ದಂಡು ಸಮೇತ ಅವರು ಗಟ್ಟಯಿಳಿದು ಹೋದರು. ಆ ಸಮಯದಲ್ಲಿ ನಾವು ದಂಡು ತೆಗೆದುಕೊಂಡು ಕೊಡಗಿನ ಸೀಮೆ ನುಗ್ಗಿ ಲೂಟಿ ಮಾಡಿ ಇದ್ದರೆ, ಇಂಗ್ರೇಜಿಯವರ ಸಹಾಯ ಯಾವ ಮೇರೆಗೆ ಆಗುತ್ತಿತ್ತು? ಈಗ ಬಿದ್ದಿರುವ ನ್ಯಾಯ ತೀರಿದ ಬಳಿಕ ಅದೇ ಮೇರೆ ಇಂಗ್ರೇಜಿಯವರು ತಮ್ಮನ್ನು ತಮ್ಮ ಸೀಮೆಯಲ್ಲಿ ಬಿಟ್ಟು, ಅವರು ಅವರ ಸೀಮೆಗೆ ಹೋಗುತ್ತಾರೆ. ಇಷ್ಟು ಸಮೀಪದಲ್ಲಿ ಇದ್ದು ನಮ್ಮ ಸಂಗಡ ವಿರುದ್ಧ ಮಾಡಿಕೊಂಡು ತಾವು ನಿರ್ವಾಹಮಾಡತಕ್ಕದ್ದು ಹೇಗೆ? ಇಂದಿನ ವರೆಗೆ ತಮ್ಮನಮ್ಮೊಳಗೆ ಇದ್ದಂತಾ ಶತ್ರುತ್ವವನ್ನು ಮರೆತು ಬಿಟ್ಟು, ಇನ್ನು ಮುಂದೆ ನಮಗೆ ಬಂದಂತಾ ಕಷ್ಟವೇ ತಮ್ಮದು ಎಂಬದಾಗಿ ಭಾವಿಸಿ, ಉಭಯ ಕಡೆಯಿಂದಲೂ ಭೇದ ಕಾಣದೆ ಏಕೀಕರವಾಗಿ ಸ್ನೇಹ ಸಾರೋದ್ಧಾರವಾಗಿ ನಡೆದು ಬರುವ ಬಗ್ಗೆ ತಾವು ಕೇಳಿದ ನಂಬಿಗೆ ಭಾಷೆ ನಾವು ಬರೆದುಕೊಡುತ್ತ ಇದ್ದೇವೆ. ಅದೇ ಮೇರೆ ನಾವು ಕೇಳಿದ ಹಾಗೆ ತಾವು ಮಾಡಿಕೊಡಬೇಕು. ಆ ಬಳಿಕ ಬೊಂಬಾಯಿಂದ ಬಂದು ಹೆಗ್ಗಳದ ಗಟ್ಟದ ಮೇಲೆ ಇಳಿದು ಇರುವ ಇಂಗ್ರೇಜಿಯವರ ಪವುಜನ್ನು ಘಾತ ಮಾಡುವ ಬಗ್ಗೆ ಒಪ್ಪಿಗೆ ಆದರೆ, ಮೀರ ಕಮರ್ದ್ದೀನನನ್ನು ಭಾರಿ ಪವುಜು ಸಮೇತ ತಮ್ಮ ಬಳಿಗೆ ಕಳುಹಿಸಿಕೊಡುತ್ತ ಇದ್ದೇವೆ. ಆ ಬಳಿಕ ಗಟ್ಟದ ಮಾರ್ಗ, ಚಿಲ್ಲರೆ ಮಾರ್ಗಗಳ (ನ್ನು) ಯಾವತ್ತೂ ಬಂದು ಮಾಡಿ, ಇಂಗ್ರೇಜಿಯವರ ಪವುಜಿನ ಮೇಲೆ ಬಿದ್ದು ಮುಳುಗಿಸಿದರೆ, ತಮ್ಮ ಸೀಮೆ ಸರಹದ್ದಿನ ಸಮೀಪದ ಹೆಗ್ಗಡದೇವನಕೋಟೆ, ಪಿರಿಯಾಪಟ್ಟಣ, ಬೆಟ್ಟದಪುರ, ಕೊಣನೂರು, ಅರಕಲಗೂಡು ಮುಂತಾದ ತಾಲೂಕುಗಳನ್ನು ಕೊಡುತ್ತ ಇದ್ದೇವೆ—" ಎಂಬದಾಗಿ ಬಾಯಿಮಾತಿನಿಂದ ಹೇಳಿದನು. ಕಾಗದದಲ್ಲೂ ಇದೇ ವಿವರವಾಗಿ ಬರೆದು ಇತ್ತು. ಈ ವಿವರವನ್ನು ಮಹಾರಾಜರು ತಿಳಕೊಂಡು, ಹೆಗ್ಗಳಕ್ಕೆ ಹೋಗಿ ಆ ಕಾಗದವನ್ನು ಜನರಲ್ ಸಾಹೇಬರ ಕಯ್ಯಲ್ಲಿ ಕೊಟ್ಟು ಬಾಯಿಮಾತಿನಿಂದ ಕೇಳಿದ ವಿವರವನ್ನ ಹೇಳಿದಲ್ಲಿ,—" ಟೀಪೂಸುಲ್ತಾನರ ಮಾತಿನ ಮೇಲೆ ತಾವು ನಮಗೆ ದಗಾ ಮಾಡಲಿಕ್ಕೆ ಇಲ್ಲ. ತಮಗೆ ನಮಗೆ ಭೇದವಿಲ್ಲ ಎಂದು ನಾವು ಬಹಳ ನಂಬಿಕೊಂಡು ಇಲ್ಲಿಗೆ ಬಂದು ಇದ್ದೇವೆ. ತಮ್ಮ ನಮ್ಮ

ಕಷ್ಟ ಸುಖ ಒಂದೇ ಸರಿ—" ಎಂಬುದಾಗಿ ಜನರಲ್‌ಸಾಹೇಬರವರು ಹೇಳಿದರು. ಆ ಬಳಿಕ ಆ ಜನರಲ್‌ಸಾಹೇಬರ ಸಂಗಡ [ಮಾತಲಾಪು] † ಮಾಡಿ ಟೀಪೂಸುಲ್ತಾನರಿಗೆ ಜವಾಬು ಬರೆದ ವಿವರಃ— "ಪ್ರಾಕು ತಾವು ಇಂಥಾ ನಂಬಿಕೆ ಭಾಷೆಯಿಂದ ನಮ್ಮ ಸೀಮೆ ಒಡವೆ ಸರ್ವಸ್ವವನ್ನೂ ಅಪಹರಿಸಿಕೊಂಡು ಕರಾಬುಮಾಡಿ ಇದ್ದೀರಿ. ಮಹಾದೇವನು ನಮಗೆ ಕೊಟ್ಟು ಇರುವಂತಾ ಒಂದು ನಾಲಿಗೆಯನ್ನು ಇಂಗ್ರೇಜಿಯವರ ಸರ್ಕಾರದ ಸ್ನೇಹ ಮಾಡುವಾಗ್ಗೆ ಅವರಿಗೆ ಕೊಟ್ಟು ಇದ್ದೇವೆ. ಈಗ ನಿಮಗೆ ಕೊಡುವ ಬಗ್ಗೆ ನಿಮ್ಮಂತೆ ಎರಡು ನಾಲಿಗೆ ನಮಗೆ ಇಲ್ಲ"— ಎಂಬದಾಗಿ ಬರೆಸಿ, ಆ ಜನರಲ್‌ಸಾಹೇಬರವರಿಗೆ ತೋರಿಸಿ, ಆ ಕಾಗದಗಳ (ನ್ನು) [ತಮ್ಮ] || ಮನುಷ್ಯರ ಕಯ್ಯಲ್ಲಿ ಕೊಟ್ಟು ಕಳುಹಿಸಿ ಬಿಟ್ಟರು.

ಆಬಳಿಕ ಮಾಘಮಾಸದಲ್ಲಿ ಜನರಲ್ ಸಾಹೇಬರು ಹೆಚ್ಚಿಗೆ ಇರುವ ಪಿರಂಗಿಗಳು, ಮದ್ದು, ಗುಂಡು ಮುಂತಾದ ಹೆಗ್ಗಳದಲ್ಲು ಇಟ್ಟು, ಅದರ ಕಬರುದಾರಿ ಬಗ್ಗೆ ಒಂದು ಪಟಾಲಂ ಕರ್ನಲ್ [ಪೀತಿ] § ಸಾಹೇಬರ ಸಹ ಮಡಗಿ, ಇದಲ್ಲದೆಃ— "ಮತ್ತು ಬೇಕಾದಂತಾ ಸಾಮಾನನ್ನು ದೊರೆಗಳು ಕೊಟ್ಟಾರು. ಅದನ್ನು ತೆಗೆದುಕೊಂಡು ರಸೀತಿ ಬರೆಕೊಟ್ಟು ಇನ್ನೂ ಕಲಚೇರಿ ಕಡೆಯಿಂದ ಬರುವಂತಾ ಸಾಮಾನನ್ನು ಬರಮಾಡಿಕೊಂಡು, ಜೋಪಾನದಲ್ಲು ಮಡಗಿಕೊಂಡು ಇರಬೇಕು. ಲಷ್ಕರಿನ ಸಂಗಡ ಸಾಗಿಸಿಕೊಂಡು ಹೋಗುವ ರಸ್ತು ಸಾಮಾನು ಸಾಲದೆ ಹೋದರೆ ಸಾಮಾನು ಕಳುಹಿಸುವಂತೆ ನಿಮಗೆ ತಿಳಿಸೇವು"— ಎಂದು ಆ ಕರ್ನಲ್ ಸಾಹೇಬರಿಗೆ ತಾಕೀತಿ ಮಾಡಿಸಿ ಆ ಜನರಲ್ ಸಾಹೇಬ ಬಹದ್ದರವರು ಪವುಜು ಸಮೇತ ಬೇಕಾದ ರಸ್ತು ಸಾಮಾನು ಸಾಗಿಸಿಕೊಂಡು ಅಲ್ಲಿಂದ ಹೊರಟು ಬಂದು ಸಿದ್ದಾಪುರದಲ್ಲು ಇಳಕೊಂಡು ಇದ್ದರು. ಅಷ್ಟರಲ್ಲಿ ಬಂಗಾಳದ ಜನರಲ್ ಲಾರ್ಡ್‌ಕಾರ್ನವಾಲಿಸ್ ಸಾಹೇಬ ಬಹದ್ದರವರು ಮದರಾಶಿನ ಜನರಲ್ ಮೇಂಡುಸ್ ಸಾಹೇಬ ಬಹದ್ದರವರು ಭಾರಿ ಪವುಜು ಸಮೇತ, ನಿಜಾಮುಲ್ಲಿ ಖಾನರ ಫವುಜು,

---

† ಬ ಮುಸಲತ್ತು

|| ಬ ತಂದ

§ ಬ ಪಿಂಚ್

ಪೇಷ್ವೇರ ಫವುಜು ಸಹಿತವಾಗಿ, ಬೆಂಗಳೂರಿಂದ ಕೂಚಾಗಿ ಶ್ರೀರಂಗ ಪಟ್ಟಣದ ಬಳಿಯಲ್ಲು ಬಂದು ಇಳಕೊಂಡರು.

ಆ ಬಳಿಕ ಮೇಜರ್ ಜನರಲ್ ರಾಬರ್ಟ್ ಅಬ್ರಕರಂಬಿ ಸಾಹೇಬ ಬಹದ್ದರವರು ವೀರರಾಜೇಂದ್ರ ಒಡೆಯರ ಸಂಗಡ ಹೇಳಿದ ವಿವರಃ— "ಜನರಲ್ ಲಾರ್ಡ್ಸ ಕಾರ್ನವಾಲಿಸ್ ಸಾಹೇಬ ಬಹದ್ದರವರು, ಜನರಲ್ ಮೇಂಡ್ಸ್ಸ ಸಾಹೇಬ ಬಹದ್ದರವರು ಇಂಗ್ರೇಜಿ ಬಹದ್ದರ ಸರಕಾರದ ಫವುಜು ಸಮೇತ ಹೊರಟು ಬಂದು ಶ್ರೀರಂಗಪಟ್ಟಣದ ಸಮೀಪದಲ್ಲಿ ಇಳಿದು ಇದ್ದಾರೆ. ಅದೇ ಮೇರೆ ನವಾಬ ನಿಜಾಮುಲ್ಲಿಖಾನರ ಫವುಜು ಪೇಶ್ವೆಯವರ ಫವುಜು ಸಹ ಪಟ್ಟಣದ ಸಮೀಪಕ್ಕೆ ಬಂದರು. ನಾವು ಫವುಜು ಸಮೇತ ಪಟ್ಟಣಕ್ಕೆ ಕೂಚಾಗಿ ಹೋಗುತ್ತೇವೆ. ರಾತೀಪಿನ ಸಾಮಾನು ಅಕ್ಕಿ ಮುಂತಾಗಿ ಕೂಡಿಸಬೇಕೆಂಬುದಾಗಿ ಮೊದಲು ತಮ್ಮ ಸಂಗಡ ಹೇಳಿ ಇದ್ದವಲ್ಲಾ ? ಅದನ್ನು ಕೊಡಿಸಬೇಕು"—ಎಂಬದಾಗಿ ಹೇಳಿ ದಲ್ಲಿ, " ಮೊದಲು ಹೇಳಿದ ಮೇರೆ(ಗೆ) ಐದು ಲಕ್ಷ ಡಂಗಾಳಿ ಅಕ್ಕಿಯನ್ನು ಕೂಡಿಗೆ ಮಾಡಿಸಿ, ಕಿಗ್ಗಟ್ಟುನಾಡು ಮೋತೀಖಾನೆಯಲ್ಲಿ ಜೋಪಾನದಿಂದ ಮಡಗಿ, ಅದಕ್ಕೆ ಒಬ್ಬರನ್ನು ತೈನಾತಿ ಮಾಡಿ ಇಂಗ್ರೇಜಿ ಬಹದ್ದರವರ ದಂಡಿನಿಂದ ಯಾರಾದರೂ ಒಬ್ಬರು ಬಂದು ಅಕ್ಕಿಕೇಳಿದರೆ ಅಳೆದು ಕೊಡು ವಂತೆ ತಾಕೀತಿ ಮಾಡಿ ಇದ್ದೇವೆ. ಎತ್ತು ಆಳು ಕಳುಹಿಸಿ ಕರಿಸಿಕೊಳ್ಳ ಬೇಕು."— ಎಂಬದಾಗಿ ಹೇಳಿದಲ್ಲಿ, ಆ ಜನರಲ್ ಸಾಹೇಬ ಬಹದ್ದರ ವರು ಒಪ್ಪಿ, ಹೇರಿ ಕೊಂಡು ಬರುವ ಬಗ್ಗೆ ಹಯಾಜನ ಕಡೆ ವೆಂಕಟನಾ ಯಕನ ಸಂಗಡ ಎತ್ತು ಆಳನ್ನು ಕೊಟ್ಟು, ಇದಕ್ಕೆಲ್ಲ ಒಬ್ಬ ಕೇಪ್ತನರನ್ನು ಗೊತ್ತುಮಾಡಿ ಕಳುಹಿಸಿಕೊಟ್ಟಲ್ಲಿ, ಮೋಕೀಖಾನೆ ತೈನಾತಿಯಲ್ಲಿ ಇದ್ದ ಕಿಗ್ಗ ಟ್ಟುನಾಡು ಅಮಿಲ [ಕೇಟ್ಟೋಳಿ] = ಅಚ್ಚುವಣ್ಣನು ಆ ಅಕ್ಕಿಯನ್ನು ಅಳೆಸಿ ಆ ಕೇಪ್ತನ್ ಸಾಹೇಬರ ವಶಕ್ಕೆ ಕೊಟ್ಟಲ್ಲಿ, ಆ ಎತ್ತುಗಳೆಲ್ಲ ತುಂಬುವಾಗ್ಗೆ—'ಐದು ಲಕ್ಷ ಡಂಗಾಳಿ ಅಕ್ಕಿಯಿಂದ ಅರೆವಾಸಿ ಅಕ್ಕಿ ತುಂಬಿ ಆಯಿತು. ಉಳಿಕೆ ಅಕ್ಕಿ ಸಾಗಿಸಿಕೊಂಡು ಹೋಗುವ ಬಗ್ಗೆ ಎರ ಡನೇ ಸರ್ತಿ ಬರುತ್ತೇವೆ'—ಎಂಬದಾಗಿ ಹೇಳಿ, ಆ ಕೇಪ್ತನ್‌ಸಾಹೇಬರ ವರು ಆ ಅಕ್ಕಿಯನ್ನು ಸಾಗಿಸಿಕೊಂಡು ಶಿದ್ದಾಪುರದಲ್ಲಿ ಇಳಿದು ಇದ್ದ ದಂಡಿಗೆ ಕೂಡಿದಲ್ಲಿ, ಬಂಗಾಳದ ಜನರಲ್ ಲಾರ್ಡ್ ಕಾರ್ನವಾಲಿಸ್

= ಬ ಳಿಟುವಳಿ

ಸಾಹೇಬ ಬಹದ್ದರವರು ಮದರಾಶಿನ ಜನರಲ್ ಮೇಡೋಸ್ ಸಾಹೇಬ ಬಹದ್ದರವರು ಫವುಜು ಸಹ ಕೂಡಿ, ಶ್ರೀರಂಗಪಟ್ಟಣ ಸಮೀಪದಲ್ಲು ಇಳಿದು ಇದ್ದಾರೆ. ತಾವು ಬೊಂಬಾಯಿ ಫವುಜು ಸಮೇತ ಬಂದು ಹಾಜರಾಗಬೇಕೆಂತ ದೊಡ್ಡ ದಂಡಿನಿಂದ ಒಬ್ಬರು ಸಾಹೇಬರು ಬರೆದು ಗುಪ್ತಿನಿಂದ ಕಳುಹಿಸಿದ್ದರಿಂದ, ಅದನ್ನು ಜನರಲ್ ರಾಬರ್ಟ್ ಆಬರಕರಂಬಿ ಸಾಹೇಬರು ನೋಡಿಕೊಂಡು ಆ ಕ್ಷಣವೇ ಬೊಂಬಾಯಿ ದಂಡು ಯಾವತ್ತನ್ನೂ ತೆಗೆದುಕೊಂಡು ಹೊರಟು ಗುಂಡಿಪಟ್ಟಣ ಎಂಬಲ್ಲಿ ಇಳಕೊಂಡರು. ಅದೇ ರಾತ್ರಿ ಲಾರ್ಡ್ ಕಾರ್ನವಾಲಿಸ್ ಸಾಹೇಬ ಬಹದ್ದರವರು ಇಂಗ್ರೇಜಿ ಎರಡು ರಿಜಮೀಟನ್ನು ಕಗ್ಗೊಲೆ ಬಗ್ಗೆ ಕಳುಹಿಸಿದಲ್ಲಿ, ಆ ಯೆರಡು ರಿಜಮೀಟು ನಾಲ್ಕುಉಕ್ಕಡದ ಒಳಗೆ ಕಿರಂಗೋರಿಂದ ಚಂದಗಾಲು ಪರಿಯಂತರ, ಪಾಲಹಳ್ಳಿಯಿಂದ ಗಂಜಾಮು ಪರಿಯಂತರ ಟೀಪೂ ಸುಲ್ತಾನರ ಪವುಜಿನ ಮೇಲೆ ಬಿದ್ದು ಹೊಡೆದಲ್ಲಿ, ಅವರ ಪವುಜು ಯಾವತ್ತೂ ಮುರಿದು, ರಾತ್ರಿಕಾಲದಲ್ಲಿ ಟೀಪೂ ಸುಲ್ತಾನರ ದಂಡಿನ ಜನರು ತಮ್ಮವರು ಪರವರು ಎಂಬದಾಗಿ ಕಾಣದೆ ತಮ್ಮ ತಮ್ಮ ಒಳಗೆ ಕಡಿದಾಡುತ್ತ, ಈ ನೇರೆ ಬಗೆ ಬಗೆ ಲಡಾಯು (ನ್ನು) ತಮ್ಮೊಳಗೆ ಮಾಡಿ, ವ್ಯತವಾಗಿ ಇಂಗ್ರೇಜಿಯವರು ಗಂಜಾಮಿನಲ್ಲಿ ಮುಂತಾಗಿ ಇದ್ದ ಬತ್ತೇರಿಗಳ (ನ್ನು) ತೆಗೆದುಕೊಂಡರು. ಉಳಿಕೆ ಟೀಪೂ ಸುಲ್ತಾನರ ದಂಡಿನ ಮಂದಿ [ಛಲಿದು] * ಎರಡು ಮೂರು ದಿವಸದ ಮೇಲೆ ಜಮ ಆಗಿ, ಕೋಟೆ ಆಶ್ರಯ ಹಿಡಿದು ಇಳಕೊಂಡರು. ಅದೇ ದಿವಸ ಶ್ಯಾಕು ಟೀಪೂ ಸುಲ್ತಾನರು ಮೋಸದಿಂದ ಹಿಡಿದುಕೊಂಡು ಹೋಗಿ [ಜೆಲ್ಲಿಃ] = ಮಾಡಿ [ಕೈದಿನಲ್ಲು] † ಇಟ್ಟುಕೊಂಡು ಇದ್ದಂತಾ ಕೊಡಗರಲ್ಲಿ ೫೦೦೦ ಪರಿಯಂತರ ಕೊಡಗರು ಅದೇ ಸಮಯ ಒಳ್ಳೇದು ಎಂದು ತಿಳಕೊಂಡು, ಕುಟುಂಬ ಮಕ್ಕಳು ಸಮೇತವಾಗಿ ೧೨,೦೦೦ ಜನ ಅವರ ಪೂರ್ವದ ಸ್ಥಳವಾದ ಕೊಡಗಿಗೆ ಬಂದರು.

---

* ಬ ಚಲ್ಲವರಿದು

= ಬ ಚೇಲೆಯುರ

† ಬ ಚಾಕರಿಯಲ್ಲು

# ಹರಿಹರನ ರಗಳೆಗಳು.

## ಭಾಗ ೨.

→✱*✱←

## ಪ್ರಭುದೇವರ ರಗಳೆ.

**ಕಂದ॥** ಶ್ರೀವಿವಿಧ ಶರಣ ಹೃತ್ಕಮ । ಳಾವಾಸಂ ಸಕಳದೇವಸೇವ್ಯಂ ಮೆರೆವಂ ॥ ನೀಲಗ್ರೀವಂ ಅಲ್ಲಮ । ದೇವನನೊಲವಿಂದೆ ಹಂಪೆಯ ವಿರೂಪಾಕ್ಷಂ ॥

**ರಗಳೆ.**

ಶ್ರೀಗಣನಿಕಾಯದಿಂದೊಪ್ಪೆ ಕೈಲಾಸದೊಳ್
ಭೋಗನಿಧಿ ಹಂಪೆಯ ವಿರೂಪಾಕ್ಷನೊಪ್ಪದೊಳ್
ಹರುಷದಿಂದೋಲಗಂಗೊಟ್ಟು ಕುಳ್ಳಿರೆ ಬಂದು
ಶರಣರೊಳಗೊಬ್ಬ ನಿರ್ವಾಣಯನೆಂಬಂ ಸಂದು
ಸುರಸತಿಯರೊಳಗೊಬ್ಬಳಂ ನೋಡಲಳುಪಿಂದೆ
ಹರನವರನೀಕ್ಷಿಸುತ್ತಂ ದಯಾಪರದಿಂದೆ
ನೀವಿರ್ವರುಂ ಪೋಗಿ ವಸುಮತಿಯೊಳಗೆ ಪುಟ್ಟಿ
ಕಾವಂಗೆ ವಶವಾಗಿ ಸಕಲಸುಖಮುಂ ಮುಟ್ಟಿ
ಹರುಷದಿಂದಿರ್ಬರುಂ ಬರ್ಪುದೆಂದೊಸೆದಿತ್ತ
ಹರನ ಬೆಸದಿಂದೀರ್ವರುಂ ನಲಿದು ಬರಲಿತ್ತ

ನರಲೋಕದೊಳಗೆ ಭೂಮಿಗೆ ತೊಡವಿದೆಂದೆನಿಪ
ಶರಣಸಂಕುಳಕೆ ತೇಜೋತ್ಸಾಹವೆಂದೆನಿಪ
ಸೂತ್ರಿಸಿದ ನವ ಸೋಮಸೂರ್ಯವೀಧಿಗಳೆಸೆವ
ನೇತ್ರತ್ರಯನ ಚಾರುಭವನಿಕೆಗಳಿಂ ಮೆರೆವ
ಹರನ ಪ್ರಸಾದ ಪಾದೋದಕದೊಳುಂ ಬಾಳ್ವ
ಪುರಹರನ ಶರಣರಿಂದಂ ಸಂಪದವನಾಳ್ವ
ಶಿವನ ಸದ್ಭಕ್ತಿಯಲ್ಲಿಯೇ ಸಂಪದವನಾಳ್ವ
ಭವನ ಕಾರುಣ್ಯದಿಂ ಭಕ್ತಿಯಿಂದೇಯಾಳ್ವ

ಶಿವನ ಸದ್ಭಕ್ತಿಯಲ್ಲಿಯೆ ಸಫಲವೆಂದೆನಿಸಿ
ಭವನೊಲ್ದು ನೆಲಸಿರ್ಪ ಸೆಜ್ಜೆ ತಾನೆಂದೆನಿಸಿ
ಬಳ್ಳಿಗಾವಿಯೆ ನಿಪ್ಪ ಪುರ ವರಂ ರಂಜಿಪುದು
ಪಲ್ಲವಿಪ ಶರಣ ಸಂಕುಳದಿಂ ವಿರಾಜಿಪುದು
ಅಲ್ಲಿರ್ಪ ನಾಗವಾಸಕ್ಕೆ ಯಧಿಪತಿಯುಪ್ಪ
ಸಲ್ಲಲಿತ ನಾಯಕನ ಸತಿಯು ಬಸಿರೋಳ್ಬರ್ಪ
ಸೆವದಿಂದೆ ನಿರ್ಮಾಯನಿರ್ದನಾ ಬಸಿರೊಳಗೆ

ನವ ಯೌವ್ವನೆಯು ಗರ್ಭದೊಳಗುದಿಸಿ ತೊಳತೊಳಗೆ
ಹೊರಗೆ ತೋರಿದುದವಯವಂ ಗರ್ಭ ಚಿಹ್ನವುಂ
ತುರುಗಿದವು ಲಾವಣ್ಯವೊಪ್ಪವಿಡಿದಂಗವುಂ
ನಡೆವೊಳ್ಪಿನೋಳ್ಪಿಗೆಯೆ ತೊಡೆ ಥಾಳದೊಳ್ಪೊಳೆಯೆ
ನಡು ಬಟ್ಟವಾಗಿ ನಿಲೆ ಕುಡಿ ಕಪ್ಪವೊಲೆ ಬೆಳೆಯೆ
ಪೊಕ್ಕುಳುಣ್ಮುತ್ತವಿರೆ ಮಿಕ್ಕು ಕೀಳ್ಪೊಡೆಯಲರೆ
ಅಕ್ಕರದಿ ಕೊರ್ಬಿದ ಜಘನ ಉರ್ಬಿ ಬೀಗುತಿರೆ
ತ್ರಿವಳಿ ಬಸುರಿಂ ಪಾರೆ ಪೊಸಬಾಸೆ ಮೆಯ್ದೋರೆ
ಅವಯವಂ ಚೆಲ್ವಾಗೆ ಬಾಹುಯುಗದಳವೇರೆ
ಮೊಗವಲರ್ದು ಬೆಳ್ಪಾಗೆ ಮಿಗೆ ಮಾತು ತೆಳ್ಪಾಗೆ
ಬೊಗಸೆಗಣ್ಬೆಳುಪಾಗೆ ಕದಪು ಮಿಗೆ ನಯವಾಗೆ
ನವಮಾಸವಾದುದಾಕೆಗೆ ಚೆಲ್ವು ಮಿಗಿಲಾಗೆ
ನವಕುಮಾರಕನುದಯವಾಗಲುದ್ಯುತನಾಗೆ
ಅನುವಾಗೆ ಶುಭದಿನಮುಹೂರ್ತಂಗಳೈತಂದು
ಕಂತುಮದಹರನ ಬೆಸದಿಂ ಪುಟ್ಟಲನುವಾಗೆ
ಜನಿಯಿಸುವ ಸಮಯಮುಂ ಪಾರುತ್ತಮಿರಲಂದು

ವಾಸವ ದಿಶಾಮುಖದೊಳರ್ಕನುದಯಿಸುವಂತೆ
ಭಾಸುರದ ಪಾಲ್ಗಡಲೊಳಿಂದು ಜನಿಯಿಸುವಂತೆ
ವಸುಧೆಯೊಳ್ಸುರಕುಜದ ಸಸಿ ಪುಟ್ಟುವಂದದಿಂ
ಶಿಸುವೆನಿಸಿ ಪುಟ್ಟಿದಂ ನಿರ್ಮಾಯನೊಪ್ಪದಿಂ
ಆಗಳನುರಾಗದಿಂದುಮೆಶಿವರ್ಪರಸುತಿರೆ
ನಾಗವಾಸಾಧಿಪತಿಯಕ್ಕರಿಂ ನಲಿವುತಿರೆ

ಮಂಗಳವೆ ರೂಪುಗೊಂಡಂದದಿಂ ಶಿಶು ಮೆರೆಯೆ
ಲಿಂಗದಂಘ್ರಿಯೊಳೆ ನೋಟಂ ಮಿಕ್ಕು ಕಣ್ದೆರೆಯೆ
ಅಭವರೂಪಿಂದೆಸೆಯೆ ಜಾತಕರ್ಮಂ ಮಾಡೆ
ಶುಭಲಗ್ನವೆಂದು ಮುಹೂರ್ತಕರ್ಕೊಂಡಾಡೆ
ಗೊಗ್ಗೇಶ್ವರ ಪ್ರಸಾದದ ಬೆಣ್ಣೆಯಂ ತಂದು
ಹಿಗ್ಗುತ್ತಲಿಕ್ಕಿದಳು ಜನನಿ ನೇಹದಲಂದು
ನಾಮಕರಣಂ ಜಗಕ್ಕಲ್ಲಯ್ಯನೆಂದಾಗೆ
ಭೂಮಿಯೊಳು ನಿರ್ಮಾಯನೆಂಬ ಪೆಸರಂತಾಗೆ

ತೊಟ್ಟಿಲೊಳ್ಕೈಗಳೊಳ್ಕ್ರಮದಿಂವೆ ಬೆಳೆಬೆಳೆದು
ದಟ್ಟಡಿ ಯಿಡುತ್ತೆ ಪರೆದಾಡುತ್ತೆ ಬೆಳೆಬೆಳೆದು
ಬೆಳೆದನಾತಂ ಶಿವಪದಕ್ಕೆ ಪೊಸತೊಡವೆನಿಸಿ
ಬೆಳೆದನಾತಂ ಭಕ್ತಿವಾರುಧಿಗೆ ವಿಧುವೆನಿಸಿ
ಇಂತು ಬೆಳೆಯಲ್ಬೆಳೆದುದಾತನೊಡನೇ ವಿದ್ಯೆ
ಸಂತತಂ ಸೊಗಯಿಪ ಮೃದಂಗದ ಮಹಾವಿದ್ಯೆ
ಆ ವಿದ್ಯೆಯೊಡನೆ ಜವ್ವನವೆಸೆದು ಬೆಳೆವುತಿರೆ
ಕಾಮಂಗೆ ಸಿಂಗರದ ಪುರುಡು ಪುಟ್ಟುತ್ತುಮಿರೆ
ನನೆಯಂಬು ಬಿಲ್ಲ ಹಂಗಿಲ್ಲದಂಗಜನೆನಿಪ
ವನಿತೆಯರ ಮನವನಿರ್ಕುಳಿಗೊಳ್ವನಿವನೆನಿಪ

ಹರೆಯದೊಳ್ಗಿರಿಜೇಶನಂ ಕೇಳಿಸಲ್ಕೆಂದು
ಹರುಷದಿಂ ಗೊಗ್ಗೇಶ್ವರಾಲಯಕ್ಕೈತಂದು
ಒಡನೆಯಾ ಮೃದಂಗಧರರಿತ್ತರದೊಳ್ನಿಲಿಸಿ
ನಡುವೆ ಸಿಂಗರಿಸಿ ರಂಗಂಬೊಕ್ಕು ಮೇಳೈಸಿ
ಅತಿರಸಾಮೃತಕಾಂತಿಯುತ ಸುಖಾಸ್ಪದವೆಂಬ
ನುತಗತಿ ನವೀನಗತಿ ರಸಗತಿಗಳೆಂದೆಂಬ
ಸುಣ್ಗತಿ ಸುಗಂಭೀರ ಗತಿ ಸಾಂದ್ರ ಗತಿ ಯೆಂಬ
ಜಾಣ್ಗತಿ ಮಧುರಗತಿ ಮನೋಹರಗತಿ ಯೆಂಬ
ಸುಗತಿ ಶರ್ವಂಗೆ ಕರ್ಣಾಭರಣವಾಗುತಿರೆ
ಬಗೆಗೆ ಪರಮಾನಂದರಸದ ತೆರೆಯಾಗುತಿರೆ

ಸಂದಿ ಮಾಕಾಳರಂ ಮರೆವುತಿರೆ ಶಂಕರರ
ಸಂದ ಮುರುಜದ ಗತಿಗೆ ಮೆಚ್ಚುತಿರಲೀಶ್ವರರ

ಇಂತು ಕೇಳಿಸುತಮಿರೆ ಯಲ್ಲಮುಂ ನಲಿದಿತ್ತ
ಕಂತುಹರವರದಿಂದೆ ಸುರಕಾಂತೆ ಯಿರಲತ್ತ
ಆ ಪುರದ ಧನದತ್ತನಬಲೆ ಯುದರದಿ ಪುಟ್ಟಿ
ರೂಪಿನೊಳು ರತಿಗೆ ಸರಸ್ವತಿ ಗುಪ್ಪರಂ ಗಟ್ಟಿ
ವಸುಧೆಯೊಳು ಕಾಮಲತೆ ಯೆಂದೆಂಬ ನಾಮದಿಂ
ಒಸೆದು ಸೌಭಾಗ್ಯಲತೆ ಕುಡಿಯಿಡಿಲ್ಪ್ರೇಮದಿಂ
ಶಶಿಕಿರಣದಂತೆ ಬೆಳೆದಳ್ಬೆಳೆದಳಮ್ಮಮ್ಮ
ಕುಸುಮಶರದಂತೆ ನೆರೆದಳ್ನೆರೆದಳಮ್ಮಮ್ಮ
ರತಿಗಿತಿಯು ರಂಬೆಗಿಂಬೆಯು ಮಾತು ಬೇಡಿಲ್ಲಿ
ಮತಿಗಿತಿಗೆ ಪೊಗಳ್ವಗಿಗಳ್ವಾಸೆಗಳು ಪುಗವಿಲ್ಲಿ
ಈ ತೆರದೊಳೆಸೆವ ಸೊಬಗಿನ ಸೊಂಪನೊಳಕೊಂಡು
ಭೂತೇಶವಂದನೆಗೆ ನೇಮಮಂ ಕೈಕೊಂಡು
ಮದನಶರದಿಕ್ಷುಧನುವಿಂದೆ ಪೊರಮಡುವಂತೆ
ಪದೆದು ಸುವಿಟರ ಮೇಲೆ ದಾಳಿ ಪೊರಮಡುವಂತೆ
ಶಿವನ ಭವನಕ್ಕೆ ಪೊರಮಟ್ಟಳಾ ಕಾಮಲತೆ
ಭವಭಕ್ತಿಯಿಂದೆ ರಾಜಿಸುವಮಳ ಪುಣ್ಯಲತೆ
ಇಕ್ಕೆಲದೊಳಬಲೆಯರ ಮುಸುಕಃ ಮಸಗುತ್ತಲಿರೆ
ಪಕ್ಕದೊಳ್ನಡೆವ ಸತಿಯರು ಸಂದಣಿಸುತಮಿರೆ
ಮುಸುಕಿನೊಳು ಸಿಲ್ಕಿ ನಿಲ್ವ ವಿಟರ್ಗಳಲ್ಲಲ್ಲಿ
ನಸುನೋಟದೊಳ್ಸೊಲ್ವ ನವ ಯುವಕರ್ಕಳಲ್ಲಿ
ನೇವುರದ ಸುಣ್ದನಿಯೊಳೆಳಲುತಿರ್ಪರ್ಕೆಲರು
ಭಾವಕದ ನಡೆಯೊಳಗೆ ಸಿಲ್ಕಿ ನಿಲ್ವರ್ಕೆಲರು
ಇಂತು ವಿಟರಂ ಗೋಳಿಗೊಳಿಸುತುಂ ನಡೆತಂದು
ಸಂತಸಂ ಮಿಗೆ ಶಂಭುವಿನ ನಿಳಯಕೆಯ್ತಂದು
ಒಳಪೊಕ್ಕು ಶಿವಲಿಂಗವಂ ದರುಶನಂ ಮಾಡಿ
ಎಳಸಿ ಕೈಯೆತ್ತಿ ಪೊಡಮಡುತಳ್ಕರಿಂ ನೋಡಿ

ತಿರುಗಿ ಬರುತಿರಲಮಮ ರಂಗಮಂಟಪದಲ್ಲಿ
ಹರವರಿಯ ಮುರಜಗತಿಗಳ್ಪೊಣ್ಮುತಿರಲಲ್ಲಿ
ಪಾದರಿಯ ಪೂದುರುಂಬಿನ ಪೊಸಬನೊಪ್ಪಿದಂ
ಕೇದಗಿಯ ಮಿಸುಪೆಸಳ ಕಿರುಮಿಂಡನೊಪ್ಪಿದಂ
ಕತ್ತುರಿಯ ತಿಲಕದ ಕುಮಾರಾಂಕನೊಪ್ಪಿದಂ
ಮುತ್ತಿನೇಕಾವಳಿಯ ಮುಗ್ಧನಿಂತೊಪ್ಪಿದಂ
ಹೊಳೆವ ಬೆಳತಿಗೆಗಂಗಳೆಳೆಯನೊಪ್ಪುತ್ತಲಿರೆ
ತೊಳಪ ಕರ್ಣಾಭರಣದ ರಸನೊಪ್ಪುತ್ತಲಿರೆ
ಸವಿಗೊಡುವ ಸುಗತಿಗಳ ಸೊಬಗನೊಪ್ಪುತ್ತಲಿರೆ
ಸಪನೆಲೆಯ ಸೊಗಸಿನ ಸುಖಾತ್ಮನೊಪ್ಪುತ್ತಲಿರೆ
ನಿಂದಂತೆ ನಿಂದಳಲ್ಲಮನ ನಿಲವಂ ಕಂಡು
ಸಂದಳಾ ಪೊಸ ರೂಪು ರೇಖೆಗೆ ಮನಂಗೊಂಡು

ನೋಡುತಿರೆ ಬಾಡುತ್ತ ಕೆಲಬಲಕೆ ಸಾರುತ್ತೆ
ನೋಡೆ ಭೋಂಕೆನೆ ಕಂಡನಲ್ಲಮಂ ಕಾಣುತ್ತೆ
ಹರಹರಾ ಮರೆದೆನಾ ಸುಗತಿಯಂ ಮುರಜಮಂ
ಹರಹರಾ ಮರೆದೆನಾ ಶಿವನುಮಂ ತನ್ನುಮಂ
ಕಂಟಕಿತವಾದವೆರಡುಂ ದೃಷ್ಟಿ ಪ್ಯೈದೋರೆ
ಗಂಟಿಕ್ಕಿದವು ನೋಟವೆಯ್ದೆ ಕಾವಂ ಮೀರೆ
ಇಕ್ಕಿದೆರಡುಂ ಕೈಗಳಿಕ್ಕಿದಂದದೊಳಿರಲು
ಪಕ್ಕವಣಿಗರ ಮೇಲೆ ಜೋಲ್ದು ಮೂರ್ಛೆಗೆ ಸಲಲು
ಸಡಿಲಿಸಿದರೊಯ್ಯನೆ ಮೃದಂಗಮುಮನತ್ತಿತ್ತ
ಒಡಗೊಂಡು ಪೋಗಲುದ್ಯೋಗಮನರಾಗುತ್ತ

ಇರೆ ಕಾಮಲತೆಯ ಸತಿಯರ್ಕರಂ ನಡನಡುಗಿ
ಪರಿಬೇರೆ ಕೊಂಡೊಯ್ಯಲಾಗದೆನುತಂ ಕಡಗಿ
ತಿಳಿಯಬಾರದು ಬಾರದೆಲೆಲೆ ಹರಣದ ಹರಿವು
ಇಳೆಗೆ ಕರ ಪೊಸತು ಕೊಳ್ಳದೆಲೆ ವಿಮ್ಮರಿವು
ಕೊಂಡು ನಡೆ ಯಿರ್ಬರುಮನೆಮ್ಮ ಸೆಜ್ಜೆಯ ಮನೆಗೆ
ಕಂಡೆವಿಲ್ಲಿಂತಪ್ಪ ನೇಹಮಂ ಪೊಸತೆಮಗೆ

ಎನುತೆ ಸಜ್ಜವಳಿ ಜಂತ್ರಂಗಳಂ ತರ್ಪಂತೆ
ತನತನಗೆ ಬೆರಗಾಗಿ ಗುಜುಗುಜುಂ ಗೊಳುತಿಂತೆ
ಸಂದಣಿಸಿ ಕಾಮಲತೆಯರಮನೆಯೊಳಂ ಪೊಕ್ಕು
ತಂದು ಸೆಜ್ಜೆಯ ಮನೆಗೆ ಕರ ಕೌತುಕಂ ಮಿಕ್ಕು
ಸಿರಿ ಮಂಚದೊಳಗಿರ್ವರುಮನೊಲಿದು ಕುಳ್ಳಿರಿಸಿ
ಸರಿದರೆಲ್ಲಾ ಸತಿಯರುಂ ಮೆಲ್ಲನೋಸರಿಸಿ
ಅರರೆ ಸುರತದ ಸುಖದ ಕಡೆಬಿಟ್ಟ ತವಕಿಗಳು
ತರತರದ ಹರುಷದಿಂ ಕಂದೆರೆದ ವಿರಹಿಗಳು
ಹೊರೆವ ಪೊಸ ಸುಗ್ಗಿಯಂನದನೇನನೆಂದಪೆಂ
ನೆರೆವ ನೇಹದ ಸುಖದ ಹೆಂಪನೇನೆಂದಪೆಂ
ಪರಿಮಿತದ ಕಡೆಬಿಟ್ಟು ತವಕ ನಿಮಿರುತ್ತಮಿರೆ
ಪರಿಪರಿಯ ಸಮಸುಖದ ಸವಿಗಳರಳುತ್ತಮಿರೆ
ಆಲಿಂಗನದೊಳಿರ್ವರೋರ್ವರಾಗುತ್ತಮಿರೆ
ಸೋಲದ ಸೊಗಸು ಮನವನೋಲಾಡಿಸುತ್ತಮಿರೆ
ಕಣ್ಗಳರೆ ಮುಗಿವುತಿರೆ ಕರಣತತಿ ಕರಗುತಿರೆ
ನುಣ್ಗೊರಲ್ನುಡಿವುತಿರೆ ಮೆಯಿ ಉಕ್ಕುತಂತುಮಿರೆ
ಕದಪು ಬೆಮರುತ್ತಮಿರೆ ಲಲ್ಲೆಗಳ್ಪೊಣ್ಮುತಿರೆ
ತೊದಲು ಮೀರುತ್ತಮಿರೆ ಸುಯ್ನೀಳ್ದು ಸೂಸುತಿರೆ
ಪುಳಕವಿಪ್ಪೈರ್ಗಡರೆ ನಲಿವು ದಳವೇರುತಿರೆ
ನಳನಳಿಸಿ ಬೆಳಪ ಸುಖವಲ್ಲಿ ಪಲ್ಲೈಸುತಿರೆ
ಕಡೆ ಮೊದಲ್ನಡುವಿಲ್ಲದೆತ್ತರದ ಕಾಮಿಗಳು
ತಡವು ತವಕದೊಳದ್ದ ನವನವ ಪ್ರೇಮಿಗಳು
ಪಲವು ಸಂವತ್ಸರಂ ನಿಮಿಷವಾಗುತ್ತಮಿರೆ
ತೊಲಗದಲುಗದ ಸಲುಗೆ ಸವಿಗಳಂ ಸಲಿಸುತಿರೆ
ಇರ್ದರಿರ್ವರುಮೊಲ್ದು ಸಮಕಳೆಗಳೊಡಗೂಡಿ
ಸಾರ್ದ ಹರವರೆಯ ಹರುಷದ ಶರಧಿಯೊಳ್ಮುಳ್ಕಾಡಿ
ಮುಟ್ಟಿದ ಸುಖಕ್ಕೆ ಕುರುಳಂ ಬೆರಳನೀವುತಂ
ಕಟ್ಟಕ್ಕರಿಂದುರಂ ಮುಡುಹುಮುಮನೀವುತಂ
ತನು ಮನಂ ಧನವನಾ ಕಾಮಲತೆಗೀವುತಂ
ನೆನದುದಂ ನೋಡಿದಂ ಕಾಮಲತೆಗೀವುತಂ

ಇಂತು ಪಲವುಂ ಕಾಲ ತೊಲಗದಲುಗದೆ ಇರ್ದು
ಕಂತುಹರನಿತ್ತಾಜ್ಞೆ ಹತ್ತಿರಕೆ ಬಂದಿರ್ದು
ಕಾಮಲತೆಯುಂ ಬಂದು ಹತ್ತಿತ್ತು ಮಹಜ್ವರಂ
ಸೋಮಕಳೆಯುಂ ರಾಹು ತುಡುಕುವಂತಿರೆ ಕರಂ
ಜ್ವರದ ಪರಿತಾಪದಿಂದವಯವಂ ಸೀಳುತಂ
ತರುಣಿ ಸೈರಿಸಲಾರದೇಳುತಂ ಬೀಳುತಂ
ಈ ವಸುಧೆಯೊಳಗಣ ಸುಖಂ ತನಗೆ ಸಾಕೆಂದು
ದೇವಲೋಕಕ್ಕೆ ನಡೆದಳ್ಕಾಮಲತೆ ಯಂದು
ಆಗಳಾ ಜನನಿಜನಕರ್ವೆರ್ಗೊಱಿ ಯಿಡುತ್ತಂದು
ಸಾಗಿಪ ಸಖೀಜನಂ ಹರಣಗಳೆವುತ್ತಂದು
ಸಂದ ಬಾಂಧವಸಂಕುಲಂ ಬಾಯ್ಬಿಡುತ್ತಮಿರೆ
ನಿಂದವರ್ನೆರೆದವರ್ಕಣ್ಣೀರನಿಕ್ಕುತಿರೆ

ಆ ರಣರಣಕದೊಳಲ್ಲಮನನೇನನೆಂದಪೆಂ
ಸಾರ ಸರ್ವಸ್ವವರತನನೇನನೆಂದಪೆಂ
ಅರೆದಂತೆ ಕಂಡರಸಿದಂತೆ ಕರುವಿಟ್ಟಂತೆ
ಮರುಳಂತೆ ಮರೆದಿರ್ದರಂತೆ ಮರವಟ್ಟಂತೆ
ಉರವಣೆಯ ದುಃಖ ಒಳಗೇರೆ ಬಿಸುಸುಯ್ವುತುಂ
ಪರಿಪರಿಯ ಶೋಕಾಗ್ನಿಯುರಿಪೆ ನೆರೆ ಬೇವುತುಂ
ಇರ್ದಲ್ಲಮನನೆಲ್ಲರೆಂತಕ್ಕೆ ಸಂತೈಸಿ
ಸಾರ್ದು ಕೈಗೊಟ್ಟು ಮಿಗೆ ನಲ್ಮೆಯಿಂ ಬೋಳೈಸಿ
ತಂದರಾದರಿಸಿ ನಿಜ ಮಾತೃ ಪಿತೃವಿದ್ದೆಡೆಗೆ
ಕಂದನಿರವಂ ಕಂಡವರ್ಮರುಗಿ ಬೆರಗಾಗೆ
ನಿಂದನಲ್ಲಮದೇವನೊಳಗೊಳಗೆ ನೋವುತುಂ
ಸಂದ ನೇಹದ ಸದ್ಗುಣಂಗಳಂ ನೆನೆವುತುಂ
ಕಾಮಲತೆ ತನ್ನಮನಮಂ ಸುತ್ತಲಲ್ಲಮಂ
ಕಾಮಲತೆ ಹಾ ಕಾಮಲತೆ ಎನುತಲಲ್ಲಮಂ
ಮರುಗಿ ಮನವೆತ್ತಿಕ್ಕಿದಂತಾಗೆ ಪರಿತಂದು
ಪುರದ ಹೊರಗಣ ಕಣಿಗಿಲೆಯ ತೋಟಕೆಯ್ತಂದು

ಕುಳ್ಳಿರ್ದು ಚಿಂತೆಯೊಳಗಾಳುತುಂ ಮುಳುಗುತುಂ
ತಳ್ಳಂಕದಿಂದೆ ನೆಲನಂ ನೋಡಿ ಸುಯ್ಯುತುಂ
ತಲೆವಾಗಿ ಕಣ್ಣನೀರ್ಕರೆಯೆ ಚಿಂತಿಸುತಂದು

ನೆಲನಂ ಬರೆಯೆ ಬರೆದ ಹಜ್ಜೆಯೊಳಗಂತೊಂದು
ಮಿನುಮಿನುಗಿ ಹೊಳೆಹೊಳೆದು ನಸುವೆಳಗುದೋರುತುಂ
ತನಗೆ ಕೌತುಕವೇರೆ ಥಳಥಳಿಸಿ ಬೆಳಗುತುಂ
ಹರಹರ ಶಿವಜ್ಞಾನದಂಕುರಂ ತೋರ್ಪಂತೆ
ಪರಮು ಮುಕ್ತ್ಯಂಗನೆಯ ಕುಚದ ಕುಡಿತೋರ್ಪಂತೆ
ಹೊನ್ನ ಕಲಶಂದೋರಲತಿಕೌತುಕಂ ಬಟ್ಟು
ತನ್ನಲಾರ್ಪನಿತನಿತು ಅಗೆಯಲಾರದೆ ಬಿಟ್ಟು
ಪರಿದು ಬಂದಾ ಪುರದ ನೃಪತಿಗರುಪಲ್ಕೇಳ್ದು
ಚರಿತದಿಂತಿದು ಚಿತ್ರವಿಚಿತ್ರವೆನುತಲೇಳ್ದು
ಪಟ್ಟದಾನೆಯ ಬೆಂಗೆವಾಯ್ದು ನಡೆತರುತಮಿರೆ
ಪಟ್ಟಣದ ಹೊರವೊಳಲನೀಕ್ಷಿಸುತೆ ಬರುತಲಿರೆ
ಕಲಶವಿದಾರ್ಗ ಸೀಮೆಗೆಯ್ದು ಬರುತಿರೆ ಗಜಂ
ಚಲಿಸದಡಿ ಇಡದೆ ನಿಂದಿರೆ ಕಂಡು ಭೂಭುಜಂ
ಇದು ಚೋದ್ಯವೆಂದು ಗಜದಿಂದಿಳಿದು ನಡೆತಂದು
ಪದಮಳನೆನಿಪ್ಪಲ್ಲಮನ ಕೂಡೆ ನಡೆತಂದು
ಕಂಡಿದದ್ಭುತವೆನುತೆ ಪರಿಜನಕೆ ಕೈವೀಸೆ
ಕಂಡುದೆಲ್ಲಗಿಯು ತೊಡಗಿತು ಮಣ್ಣ ಹೊರಸೂಸೆ
ಕೋಟಿಗುದ್ದಲಿಗಳಿಕ್ಕಿದವು ಕೆಲಬಲದಲ್ಲಿ
ನೋಟಕಚ್ಚರಿ ಎನಲ್ ಅಗೆಯ ತೊಡಗಿದುದಲ್ಲಿ
ಕಳಶದಿಂ ಕೆಳಗೆ ಸೂತ್ರಿಕ ಸಿಂಹ ಮಂಟಪದ
ವಳಯ ವಿಕೇಳದ ವೃಷಭಾಂಕಿತ ಶಿವಾಲಯದ
ತುದಿ ಮೊದಲ್ಕಾಣಬರೆ ನಿಮಿಷದಿಂ ಬಿಡಿಸಿದರು
ಮುದದಿಂ ನೃಪಂ ನೋಡುತಿರಲಗೆದು ತೀರ್ಚಿದರು
ಆಗಳರಸಂ ಹರುಷದಿಂದೋಲ್ದು ಬಲವಂದು
ರಾಗದಿಂ ದೇವಾಲಯದ ಬಾಗಿಲೊಳ್ನಿಂದು
ಕದವ ತೆರೆದೊಳಪೊಕ್ಕು ನೋಡಲಾರ್ಪವರುಂಟೆ

ಹೆದರದಿದರೊಳಗಲಾರಯ್ಯಲಾರ್ಪವರುಂಟೆ
ಎನಲೋರ್ವರುಂ ನುಡಿಯದುಸಿರದಿರ್ದುದ ಕಂಡು

ಮನದೊಳಲ್ಲಮನತಿ ವಿರಕ್ತಿಯಂ ಕೈಕೊಂಡು
ಬೆರಲಿಲ್ಲ ಕಿವಿಯಿಲ್ಲ ಮುಡುಹು ಮುಂದಲೆಯಿಲ್ಲ
ಉರವಿಲ್ಲ ಮೂಗಿಲ್ಲ ಸತಿ ಕಾಮಲತೆಯಿಲ್ಲ
ಇನ್ನೇಕೆ ದೇಹದ ದುರಾಸೆ ಇದ ಸುಡುಯೆಂದು
ತನ್ನ ಮನದೊಳಗೆ ನಿಶ್ಚೈಸಿ ಭರದಿಂದಂದು
ಬೆಸಸು ಬೆಸಸಾನೆ ಪೊಕ್ಕಪೆನೆಂದು ನುಡಿವುತಿರೆ
ಪೊಸತು ಪೊಸತೆಂದರಸನಂದು ಬೆರಗಾಗುತಿರೆ
ಪರಿಜನಂ ಪುರಜನಂ ಕರಮರಿದೆನುತ್ತಮಿರೆ
ಪಿರಿಯರೀಕ್ಷಿಸುತಿವಂ ಕಾರಣಿಕನೆನುತಮಿರೆ
ಭಸಿತವಂ ಸರ್ವಾಂಗಕುದ್ಧೂಳನಂ ಗೊಂಡು
ಶಶಿಧರನೆ ಶರಣೆನುತೆ ಕಡುನಿಷ್ಠೆ ಕೈಕೊಂಡು
ನೂಂಕಿ ನಿಮಿರ್ದೊತ್ತುತ್ತೆ ಒಂದು ಕದಹಂ ತೆಗೆದು
ಭೋಂಕನೊಳಪೊಕ್ಕು ಲೋಕವಾರ್ತೆಯಂ ನೆರೆ ಮರೆದು
ಬಗೆ ಬೇರೆ ಪೊಸತಾಗೆ ಗಳಗಳನೆ ನಡೆತಂದು
ಪುಗುತಂ ಮಹಾಲಿಂಗದಂಘ್ರಿಗೆರಗುತ್ತಂದು

ಕೆಲನನೀಕ್ಷಿಸಲನುಮಿಷಯ್ಯಂಗಳೊಪ್ಪಿರಲು
ಚಲಿಸದಲುಗದ ಲಿಂಗ ನಿಜಸಿದ್ಧನೊಪ್ಪಿರಲು
ಬತ್ತಿ ಇಲ್ಲೆಣ್ಣೆ ಇಲ್ಲದ ದೀಪ್ತಿ ಬೆಳಬೆಳಗೆ
ಸುತ್ತಲುಂ ಶಿವಕಳೆಯೆ ಕಣ್ಬೆಳಗು ತೊಳತೊಳಗೆ
ತಿಳಿದ ನಿರ್ಮಳ ತತ್ವದಚ್ಚ ಬೆಳಗಿನೊಳಂದು
ತಳತಳಸಿ ನಳನಳಿಸಿ ಬೆಳೆದ ಬೆಳಗಿನೊಳಂದು
ಕೀಲಿಸಿದ ಪದ್ಮಾಸನಂ ಪುಲಿದೊವಲ್ತನುವ
ನಾಲಿಂಗಿಸಿದ ಭಸಿತವಮಳ ಸೂತ್ರಂ ಮೆರೆವ
ಬೆಳಪ ಕಣ್ಸಲಿಪಲ್ ಹೊಳೆವ ಮುಖಮಂಡಲಂ
ಇಳಿದ ಜಡೆ ರುದ್ರಾಕ್ಷಿಮಾಲೆ ಮಣಿಕುಂಡಲಂ
ಕೆಯ್ಯ ಶಿವಲಿಂಗದೊಳ್ನಟ್ಟ ನೋಟಂ ಮೆರೆಯೆ

ಪೆಯ್ಯ ಕೋಮಲತೆ ನಳನಳಿಸಿ ನಯಮಂ ಕರೆಯೆ
ಮಿಗೆ ಒಳ್ಳಿವರೆದ ಕರಪದನಖಂ ಲತೆಯಾಗೆ
ಸೊಗಯಿಸುವ ಹಸ್ತರಾಗಂ ಸುಪಲ್ಲವವಾಗೆ
ಅರಲ್ದ ನಯನದ್ವಯಂ ವಿಕಸಿತ ಕುಸುಮವಾಗೆ
ಕರತಳದ ಶಿವಲಿಂಗವಮೃತರಸಫಲವಾಗೆ
ಕಲ್ಪತರುವಿನ ತೆರದೊಳಿರ್ದನನುಮಿಷಯೋಗಿ
ಕಲ್ಪನೆಯ ವಶವಲ್ಲದಪ್ರತಿಮ ಶಿವಯೋಗಿ
ಕಣ್ಣಲ್ಲಿ ಜೀವಮಂ ಪಿಡಿದಿರ್ದ ಮಾಳ್ಕೆಯಿಂ
ತಿಣ್ಣವೆನೆ ಲಿಂಗಮಂ ಪಿಡಿದಿರ್ದನೊಲ್ಮೆಯಿಂ
ಇರೆ ಮಹಾ ಗುರುವನಲ್ಲಮದೇವನೀಕ್ಷಿಸುತೆ
ಹರುಷದಿಂ ಸಾತ್ವಿಕ ರಸಂ ಪುಟ್ಟೆ ಕಂಪಿಸುತೆ
ಸನ್ನಿಧಿಯ ಗುಣ ಶಿವಜ್ಞಾನಮಂ ಪುಟ್ಟಿಸಲು
ತನ್ನೊಳಗೆ ಶಿವನ ತತ್ವದ ಘನಂ ಪುಟ್ಟಿರಲು
ಪೊಗಳಲ್ಕೆ ತೊಡಗಿದಂ ಸಿದ್ಧ ಶಿವಯೋಗಿಯಂ
ಮಿಗೆ ಮೋಕ್ಷಲಕ್ಷ್ಮಿಯೊಡಗೂಡಿರ್ದ ಭೋಗಿಯಂ

ದೇವ ನಿರ್ಮಳ ನಿತ್ಯ ನಿರುಪಮ ಮಹಾಯೋಗಿ
ದೇವ ನಿರ್ಮಳ ನಿಜಾನಂದಕರ ಶಿವಯೋಗಿ
ಶಿವನನೊಚ್ಚತವಾಗಿ ಕೈಕೊಂಡ ಶಿವಯೋಗಿ
ಭವನ ಮೂರ್ತಿಗೆ ಸೊಲ್ತು ಕಣ್ಣಿಟ್ಟಚಲಯೋಗಿ
ನೋಟದೊಳು ಲಿಂಗಮಂ ಸೆರೆಗೆಯ್ದ ಶಿವಯೋಗಿ
ಕೂಟದೊಳು ಕಣ್ಣೆ ತನುವಾದ ಬೆಡಗಿನ ಯೋಗಿ
ಮದನನಂ ಮರ್ದಿಸಿಯೆ ಸಂದಿರ್ದ ಭವಯೋಗಿ
ಹೃದಯದೊಳು ಭಕ್ತಿಯಂ ತಳೆದಿರ್ದ ಸ್ಥಿರಯೋಗಿ

ಎಂದು ಪೊಗಳುತ್ತೆ ಕೈಯೆತ್ತಿ ನಿಲಲಲ್ಲಮಂ
ಸಂದ ಶಿವಯೋಗಿ ಹಿಗ್ಗುತ್ತ ಮರೆದೆಲ್ಲಮಂ
ಮನದೊಳಗಿವಂ ಕಾರಣಿಕನೆಂದು ನಿಶ್ಚೈಸಿ
ತನುವಿನ ತೊಡಂಕು ಸಾಕೆಂದು ಕಾಂ ನಿಶ್ಚೈಸಿ
ಘಳಿಲನಲ್ಲಮನು ಕೈಯೊಡ್ಡಲಂತಾಕ್ಷಣವೆ

ಇಳಿಸಿದಂತಾಯ್ತು ಶಿವಲಿಂಗದ ನಿರೀಕ್ಷಣವೆ
ನೋಟದಿಂದಂಗಯ್ಯಲಿಕ್ಕಿದಂ ಲಿಂಗವಂ
ಕೂಟದಚ್ಚಳಿಯುದಸು ವೆರಸಿ ಶಿವಲಿಂಗವಂ
ಲಿಂಗದೊಡನೇ ಕೂಡಿ ಹೋದುದಾತನ ಜೀವ
ಅಂಗ ಮಲಗಿರ್ದುದಾ ಭಕ್ತಿಯಂ ಬರಿಭಾವ
ಆಗಳೆಲ್ಲಮನವಯವಂ ಲಿಂಗ ಸೋಂಕಿಂದೆ
ರಾಗದಿಂದಂಕುರಿಸಿ ನಳನಳಿಸಿ ಚೆಲ್ವಿಂದೆ

ಪೊರಮಟ್ಟನಲ್ಲಮಂ ಗೊಗ್ಗೇಶ್ವರಂ ಮೆಚ್ಚಿ
ಬೆರಗಾಗಿ ನೋಡಲಮ್ಮದೆ ನೃಪಂ ಕಣ್ಮುಚ್ಚಿ
ಪೋಗುತಿರ್ದಂ ಲಿಂಗವೆತ್ತತ್ತಲೊಯ್ದತ್ತ
ಆಗುತಿರ್ದುದು ಪುರಜನಕ್ಕೆ ಕೌತುಕವಿತ್ತ
ನೋಡಿದೆತ್ತಣ ಕಾಮಲತೆ ಯೆತ್ತಣಲ್ಲಮಂ
ಕೂಡಿದುದು ಪುಣ್ಯಫಲವಿಂತಿವಂಗೆಲ್ಲಮಂ
ಎತ್ತಣದು ಕಳಶವೆತ್ತಣ ಶಿವಾಲಯವಿವಂ
ಎತ್ತಣದು ಶಿವನ ಸುಜ್ಞಾನ ಸುಖದನುಭವಂ
ಇರ್ದಿರ್ದು ಬಲ್ಗರಂ ಪೊಡೆದುದಿವನಂ ನೋಡ
ಪೊರ್ದಿದಂತಾಯ್ತು ಸಂಸಾರವಿವನಂ ನೋಡ
ಕಾಮಲತೆಗೊಲ್ದಿರ್ದನೆಂಬುದದು ಪುಸಿ ನೋಡ
ಪ್ರೇಮವದು ಶಿವಲಿಂಗಪೂಜೆ ಇದಿರಂ ನೋಡ
ಅಲ್ಲದಂತಿಂದಿವಂಗೀ ಪದಂ ಸಾರ್ವುದೇ
ಬಲ್ಲಿತೆನಿಸಿದ ಶಿವನ ಭಕ್ತಿ ಪೊಳಸಾರ್ವುದೇ
ಅಂಗೈಯ್ಯೊಳಮೃತಫಳಮಂ ಪಡೆದನಲ್ಲಮಂ
ಬೆರಸಿದ ಗುಣತ್ರಯಕೆ ಬೇರಾದನಲ್ಲಮಂ
ದೇಹಾದಿಗುಣಗಳಂ ಮೀರಿದವನಲ್ಲಮಂ
ಮೋಹವರತುಂ ತಾನೆ ತಾನಾದನಲ್ಲಮಂ
ಪೊರೆಯ ಮಾಯೆಗೆ ಪುಸಿತನಾದನಿಂದಲ್ಲಮಂ
ಲಿಂಗನಿಜಮುಮನೊಚ್ಚತಂಗೊಂಡನಲ್ಲಮಂ
ಸಾಧನ ಚತುಷ್ಟಯದ ಹಂಗ ಹೊದ್ದದಸಿವಂ
ಬೋಧೆಯಕ್ಕರವರಿದು ನಿಜವಾದ ನಿಲವಿವಂ

ಕರತಳಾಮಳಕವಾದುದು ತತ್ತ್ವವೀತಂಗೆ
ಪರಮ ಶಿವಯೋಗ ನಿಜವಾದುದಿಂದೀತಂಗೆ
ಸಸಿರವಿಗಳಂತೆ ಬೆಳಬೆಳಗುತಿರ್ದರಂ ನೋಡೆ
ಉಸಿರಲಿಲ್ಲದ ಪರಬ್ರಹ್ಮವಾದಂ ಕೂಡೆ

ಮುಡಿ ಸಡಿಲಿದುದನರಿಯ ನೊಡನೆ ಬರ್ಪರನರಿಯ
ಅಡವಿ ಯೂರೆಂದರಿಯ ನಾಳಿಗೊಳ್ವರನರಿಯ
ಕೇಳಿ ಹೊಗಳ್ವರನರಿಯ ನಾಡೊಡೆಯನೆಂದರಿಯ
ಏಳು ಜಗಮುಮನರಿಯ ನಾಳೆಂದೆಂಬುದನರಿಯ
ನಾಹಾ ಪರಮಜ್ಞಾನದರಿವಿನೆಚ್ಚರ ಮರವೆ
ಆಹಾ ಹುಸಿ ಜಗದ ಸಟೆ ಬೆರಸದಚ್ಚರಿವೆ
ಎಂದು ಪುರಜನವಿತ್ತ ಕೌತುಕಂಬಡುತಮಿರೆ

ಬಂದನಲ್ಲಮನರಣ್ಯಂ ಹೆಚ್ಚಿ ಹಿಗ್ಗುತಿರೆ
ಎಲೆಲೆ ಶಿವಲಿಂಗ ದೃಢನೀ ಬಂದನೀ ಬಂದ
ಎಲೆಲೆ ನಿರ್ಮಳಸಿದ್ಧನೀ ಬಂದನೀ ಬಂದ
ಎಂಬಂತೆ ಕೋಗಿಲೆಗಳಲ್ಲಲ್ಲಿ ಯುಲಿವುತಿರೆ
ಇಂಬಿನಿಂದರೆಗಿಳಿಗಳಲ್ಲಲ್ಲಿ ನುಡಿವುತಿರೆ
ನಡೆದುದೇ ಬಟ್ಟೆಯಾದುದು ಶಿವನ ಮದಕರಿಗೆ
ನುಡಿದುದೇ ವೇದವಾದುದು ಲಿಂಗವಂತಂಗೆ
ಮುಟ್ಟಿದ ಮರಂ ಮನುಜರಾಗಿ ನಡೆವವು ಕೆಲವು
ಮೆಟ್ಟಿದ ಪ್ರಾಣಿ ಸ್ವರ್ಗಕ್ಕೆ ನಡೆದವು ಕೆಲವು
ಮರನೊಡನೆ ನೆಳಲಾಗಿ ಬರುತಮಿರ್ಪವು ನೋಡ
ಗಿರಿ ಕೆಲಕೆ ಸಾರ್ದು ಸೈವಟ್ಟಿಗೊಡುವವು ನೋಡ
ಹುಲಿ ಹುಲ್ಲೆ ನಕುಲನಹಿ ಸಿಂಹವಾನೆಗಳಲ್ಲಿ
ಕುಲವೈರಮುಂ ಬಿಟ್ಟು ಸಿಂದು ನೋಡುವವಲ್ಲಿ
ಸಂತಸದೊಳೆಲ್ಲಮುಂ ನಲಿದಾಡಿ ಬರುತಮಿರೆ
ಕಂತುಹರನವತಾರದಂತೆ ನಡೆತರುತಮಿರೆ
ಕರತಳದ ಸಿಂಹಾಸನದೊಳಿರ್ಪ ಲಿಂಗಕ್ಕೆ
ಚರಿತದಿಂ ವನದೇವತೆಯರೇಳ್ದು ಮೈಯಿಕ್ಕೆ

ನುತಭೂತವೆಳೆದಳಿರು ಹೀಲಿ ದಳವಿಡಿದು ಬರೆ
ಲತೆ ಪುಷ್ಪ ಮಂಜರಿಯ ಚಾಮರವನಿಕ್ಕುತಿರೆ

ಶಿವಲಿಂಗರಾಜ್ಯಸುಖದೊಳಗಿರ್ದನಲ್ಲಮಂ
ಭವನ ಕರುಣಾಲೋಕನದೊಳಿರ್ದನಲ್ಲಮಂ
ಇರುತೆ ಲಿಂಗಕ್ಕೆ ನೋಟದೊಳೆ ಮಜ್ಜನಕೆರೆದು
ಅರಳ್ದ ನೇತ್ರದ ಪೂವಿನಿಂ ಪೂಜೆಯಂ ಮೆರೆದು
ನರು ಸೂರ್ಯ್ಯ ಕಂಪಿಂದೆ ನವ ಧೂಪವಂ ಕೊಟ್ಟು
ನೆರೆ ಮನದ ಬೆಳಗಿನಾರ ತಿಯೆತ್ತಿ ಪೊಡೆವಟ್ಟು
ನಿಟ್ಟೆಯಿಂ ನೇಹಮುಮನಾರೋಗಿಸಲ್ಕೊಟ್ಟು
ಕಟ್ಟೆಕ್ಕರಚಲನಾನಂದಮುಂ ಮುಂದಿಟ್ಟು
ಸಕಲ ಸುಖಮುಂ ಕಣ್ಗಳಿಂದೆ ಕೈಗೂಡುತುಂ
ಸಕಲ ಭೋಗಂಗಳಂ ನೋಟದಿಂ ದೀವುತುಂ

ತರು ನಿಕಾಯದ ಕೋಟರಂಗಳೊಳಗಲ್ಲಮಂ
ಗಿರಿಕುಳದ ಗಹ್ವರಂಗಳೊಳಿಲ್ಲವಲ್ಲಮಂ
ಪರಿವ ನಿರ್ಜರ ತರ ತರಂಗಿಣಿಯೊಳಲ್ಲಮಂ
ನೆರೆದ ನುಣ್ಮಳಲ ಪುಳಿನಂಗಳೊಳಗಲ್ಲಮಂ
ಚಂದ್ರಕಾಂತದ ಶಿಲೆಯ ತಂಪಿನೊಳಗಲ್ಲಮಂ
ಇಂದ್ರನೀಲದ ಮಣಿಶಿಲಾತಳದೊಳಲ್ಲಮಂ
ಪರಿಮಳದ ಚಂದನದ ತರುಗಳೊಳಗಲ್ಲಮಂ
ಮರುಗ ಸುರ ಹೊನ್ನೆ ಸೇವಂತಿಯೊಳಗಲ್ಲಮಂ
ಸಂಪಗೆಯೊಳಿಡಿದ ಹೂವಿನ ಹಸೆಯೊಳಲ್ಲಮಂ
ಸೊಂಪೆಸೆವ ಕೆಂದಳಿರ ತಾಣದೊಳಗಲ್ಲಮಂ
ಮಾಮರದ ಮಾಧವಿಯ ಮಂಟಪದೊಳಲ್ಲಮಂ
ತಾವರೆಯ ತಣ್ಣೆಳಲ ತಿಳಿಗೊಳದೊಳಲ್ಲಮಂ
ಮಲ್ಲಿಗೆಯ ಮಾಲತಿಯ ಹೊದರಿನೊಳಗಲ್ಲಮಂ
ಮೊಲ್ಲೆ ಇರವಂತಿಗೆಯ ಮೊತ್ತದೊಳಗಲ್ಲಮಂ

ತರುಗಳೊಳನಂತ ದಿನವಿರುತಿರ್ಪನಲ್ಲಮಂ
ಗಿರಿಗಳೊಳನೇಕ ಮಾಸದೊಳಿರ್ಪನಲ್ಲಮಂ

ನದಿಗಳೊಳನೇಕ ವತ್ಸರವಿರ್ಪನಲ್ಲಮಂ
ಹೊದರಿನೊಳು ಸಿಲ್ಕಿ ನಿಂದಿರುತಿರ್ಪನಲ್ಲಮಂ
ಶಿವನನೋಳ್ಪಂತೆಲ್ಲವಂ ನೋಳ್ಪನಲ್ಲಮಂ
ಭವನೊಳಗೆ ಇರುತೆಲ್ಲರೊಳಗಿರ್ಪ ನಲ್ಲಮಂ

ಎಲ್ಲಿರ್ದನಲ್ಲಿಯೇ ಸಂತೋಷಮಯ ನೋಡ
ಎಲ್ಲಿರ್ದನಲ್ಲಿ ದಿವ್ಯಕ್ಷೇತ್ರಮಯ ನೋಡ
ಇಂತು ಶಿವಲಿಂಗವೆಂತಿರಿಸಿದಂದದೊಳಿರುತೆ
ಸಂತತಂ ಶಶಿಧರಂ ಬರಿಸಿದಂದದೆ ಬರುತೆ

ಬರುತೆ ಬಸವಣ್ಣನಂ ಕಂಡು ಮಾತಾಡುತುಂ
ಹರನ ನಿಲವಿನ ಪರಿಯನೊಲ್ಮೆಯಿಂ ತೋರುತುಂ
ನಡೆತಂದು ಚೆನ್ನ ಸೊನ್ನಲಿಗೆ ಪುರಕೈತಂದು
ಮೃಡಮೂರ್ತಿ ಸಿದ್ಧರಾಮನನರಿದು ಸಾರ್ತಂದು
ಕಲಿಯುಗಂ ಪೊಲ್ಲೆಂದು ಬುದ್ಧಿಯಂ ಪೇಳುತುಂ
ಸಲೆ ಸಮಾಧಿಗೆ ಪೋಗೆನುತ್ತಿಚ್ಚೆದೋರುತುಂ
ಶ್ರೀಪರ್ವತಾಭಿಮುಖನಾದನಲ್ಲಮದೇವ
ಆ ಪರ್ವತಂ ಮುಟ್ಟೆ ಬಂದನಲ್ಲಮದೇವ

ಅದರೊಳಗೆ ಕೈಕಾಲ್ಗಳುಳ್ಳ ಸರ್ಪಂಗಳುಂ
ಮುದದಿಂದೆ ಮಾತಾಡುತಿರ್ಪ ವೃಕ್ಷಂಗಳುಂ
ನಡೆವ ಗಿಡುಗಳುಮಷ್ಟವದನದ ಮೃಗಂಗಳುಂ
ಅಡಿಗಡಿಗುರಿವುತಿರ್ಪ ದಿವ್ಯೌಷಧಂಗಳುಂ
ಹಾಡುವ ಲತಾವಳಿಗಳುಂ ಸುಳಿವ ಕಲ್ಗಳುಂ
ನೋಡುವಚಲಂಗಳುಂ ರೆಕ್ಕೆಯ ಗಜಂಗಳುಂ
ಸೊಗಯಿಸುವ ದನಿಯಿಂದಲೆಸೆವ ಪಲಗುಹೆಗಳುಂ
ಬಗೆಗಳಂ ಕೊಡುತಿಪ್ಪ ಚೂತ ವೃಕ್ಷಂಗಳುಂ
ಇವು ಮೊದಲನೇಕದ್ಭುತಂಗಳಂ ನೋಡುತುಂ
ಶಿವನನೋಡುವೆನೆನುತೆ ಕೌತುಕದಳಾಳುತುಂ

ಕದಳೀವನಕ್ಕೆ ನಡೆಗೊಂಡನಲ್ಲಮದೇವ
ಅದಿರದ ಮಹಾ ಮಹಿಮ ಸಿದ್ಧನಲ್ಲಮದೇವ

ಅಲ್ಲಿ ಬರುತಿರೆ ಭೃಂಗವಂ ಕಂಡು ಕೈಮುಗಿದು
ಅಲ್ಲಮಂ ಕಾರಣಿಕನೆಂದು ಮನದೊಳಗರಿದು
ತೋರಿದಂ ಶಿವನಲ್ಲಿಗೊಯ್ವ ಸೈವಟ್ಟೆಯಂ
ಮೀರಿ ಬರಲಲ್ಲಮಂ ಸಂಸೃತಿಯ ಕಟ್ಟೆಯಂ
ಮುರಿದಿರ್ದ ಹಾವುಗಳ ಬಳ್ಳಿಯಂ ದಾಂಟುತುಂ
ಘರಿಘರಿಲನರಿವ ಬಾಳೆಗಳನಲ್ಲಾಡುತುಂ
ನೆರೆದಿರ್ದ ವಿಷಕನ್ನಿಕೆಯರ ನೆರೆ ಸೋಂಕುತುಂ
ಪರಿವ ನಂಜಿನ ಗಾಳಿಗೆಳಸಿ ಮೆಯ್ಯೊಡ್ಡುತುಂ
ಉರಿಯ ಪಳ್ಳಂಗಳಂ ಹರುಷದಿಂ ದಾಂಟುತುಂ
ಉರವಣಿಪ ಭೂತವೇತಾಳರಂ ನಿಲಿಸುತುಂ
ನಿಂದು ತಪಮಿರ್ದ ಹನುಮಂತನಂ ನೋಡುತುಂ
ಬಂದೊಡ್ಡಿದಾಯುಧಂಗಳನೊಡೆದು ಮುರಿವುತುಂ
ಮಾನಿಸರ ಮೋರೆಯಾನೆಯ ದೇಹದವರ್ಗಳಂ
ನಾನಾ ವಿಧದ ಕೆಯ್ಯ ಕಾಲ ಕಣ್ಣವರ್ಗಳಂ
ಗಾವುದಗಲದ ನೀಳಮಿರ್ಪ ಪೇರಿರುಂಪೆಯಂ
ಸಾವಿಲ್ಲದಿರ್ಪ ಸಿದ್ಧರ ಚೆಲ್ವ ಮೂರ್ತಿಯಂ
ನೋಡುತುಂ ಪರಿವ ಕೆಂಡದ ತೊರೆಯನುತ್ತರಿಸಿ
ಕೂಡೆಯುರಳಿರ್ದ ವಿಷದ ಪುಷ್ಪವನು ವಾಸಿಸಿ
ಪೇಳೆ ಪವಣಿಲ್ಲದದ್ಭುತಮುಮಂ ಕಾಣುತುಂ
ಪೇಳಬಾರದ ಭಯಾನಕಮುಮಂ ಕಾಣುತುಂ
ಪೊಸತೆನುತ್ತಲ್ಲಮಪ್ರಭು ನಡೆದು ಬರುತಿರ್ದ
ಅಸಮಾಕ್ಷನಪರಾವತಾರ ನಡೆತರುತಿರ್ದ

ಇಂತು ಬರೆವರೆ ಕಾಣಲಾಯ್ತು ಕೈಲಾಸವದು
ಶಾಂತಾರ್ಕ ಕೋಟಿ ಕಿರಣಂಗಳಂ ಬೆಳಗುತದು
ಶಶಿಯ ತಾಯ್ವನೆಯಂತೆ ಇರ್ದುದಾ ರಜತಗಿರಿ
ಪೆಸರೆಸೆವ ಪುಣ್ಯದಂತಿರ್ದುದಾ ಅಭವಗಿರಿ
ಆ ಗಿರಿಗೆ ಸಾಲ್ಗೊಂಡ ಸುರರ ಸಂದಣಿಯೊಳಗೆ
ನಾಗೇಂದ್ರರಮರೇಂದ್ರರೆಸೆವ ತಿಂಥಿಣಿಯೊಳಗೆ
ಕಿನ್ನರರ ಖೇಚರರ ಸಿದ್ಧರೊತ್ತೊತ್ತೆಯೊಳು

ಪನ್ನಗರ ಗಂಧರ್ವಕುಲದ ನಡುವಳ್ತಿಯೊಳು
ಹರನೋಲಗದ ಪಿರಿಯ ಬಾಗಿಲ್ಗೆ ನಡೆತಂದು
ಹರಿಯಜ ಸುರಾವಳಿಯ ಸಂದಣಿಯೊಳಂ ನಿಂದು

ಬರುತಿರಲ್ದೂರದಿಂದಲ್ಲಯ್ಯನಂ ಕಂಡು
ಹರನಿತ್ತ ಬಾಯಿತ್ತ ಬಾ ಯೆನುತೆ ಕೈಕೊಂಡು
ಕರೆಯೆ ಲಿಂಗದ ನೋಟವಚ್ಚಳಿಯದೆ ಯುಂದು
ಹರುಷದಿಂ ಹರನ ಭವನದ ಮಧ್ಯದೊಳ್ನಿಂದು
ಮೆಯ್ಯಿಕ್ಕಲೆಂದಲ್ಲಮಂ ಕೊಂಕಿ ಬಾಗುತಿರೆ
ಕೆಯ್ಯ ಲಿಂಗಂ ಸಹಿತವಾಗದೆಂದೆನುತಮಿರೆ
ಹರನ ಚರಣಕ್ಕೆರಗಿ ಕುಳ್ಳಿರ್ದನಲ್ಲಮಂ
ಪರಮೇಶ್ವರಂ ಕೌತುಕಂ ಬಡುತ್ತೆಲ್ಲವಂ
ಕೇಳ್ದು ನೆರೆ ಹೋದ ಬಂದಾದ ವೃತ್ತಾಂತವಂ
ತಾಳ್ದು ಮನದೊಳಗಕ್ಕರಿಂದೆ ಸಂತೋಷವಂ
ಮುನ್ನಿನಂದದೊಳೆ ನಿರ್ವಾಯಮೆಸರಂ ಸಲಿಸಿ
ಮನ್ನಿಸುತ್ತಲ್ಲಿ ಗಣಪದವಿಯೊಳು ಸ್ಥೈತಿರಿಸಿ

ಶಿವನ ಸಾರೂಪ್ಯದಿಂದೊಪ್ಪಿರ್ದನಲ್ಲಮಂ
ಭವನ ಸುಪ್ರಭೆಯೊಳಗೆ ಸಂದಿರ್ದನಲ್ಲಮಂ
ನಿರುಪಾಧಿಕ ಜ್ಯೋತಿಯೊಳಗಿರ್ದನಲ್ಲಮಂ
ಪರಮ ತತ್ವಾಕಾರನಾಗಿರ್ದನಲ್ಲಮಂ
ಇಂತು ಭಕ್ತರ ಪುಣ್ಯಲೀಲೆಯಂ ನೊಡುತುಂ
ಸಂತತಂ ನತಜನವನೊಲ್ದು ಕೊಂಡಾಡುತುಂ
ಕಾಮ ಕಾನನ ದವಾನಲ ರೂಪನೊಪ್ಪಿದಂ
ಸೋಮ ಸೂರ್ಯಾಗ್ನಿ ನೇತ್ರತ್ರಯನು ವೊಪ್ಪಿದಂ
ಗಿರಿಜಾ ಮುಖಾಬ್ಜ ಭಾಸ್ಕರ ರೂಪನೊಪ್ಪಿದಂ
ಗುರುಮೂರ್ತಿ ಹಂಪೆಯ ವಿರೂಪಾಕ್ಷನೊಪ್ಪಿದಂ ॥

**ಕಂದ**॥ ಧರೆ ಬೆರಗಾಗಲ್ಸುರಕಲ್ಪ। ವರಿದೆನುತಿರಲಲ್ಲಮಯ್ಯನಂ ಮೆರೆವ ಮಹೇ॥ಶ್ವರ ನೊಲ್ದು ಭಕ್ತಿಯಿಂ ಸಾ। ದರದಿಂದೆನಗೀಗಿಕೇ ಹಂಪೆಯ ವಿರೂಪಾಕ್ಷಂ॥

# ರೇವಣಸಿದ್ಧೇಶ್ವರನ ರಗಳೆ.

**ಕಂದ**॥ ತ್ರಿಣಯನನ ಪ್ರತಿಮನಕಾ । ರಣಿಕಂ ತಾಂನೊಲ್ದಿಪ್ಪ ಹಂಪೆಯ ವಿರೂಪಾಕ್ಷಂ ॥ ಗುಣರಹಿತಂ ಮೆರೆದಂ ರೇ । ವಣಸಿದ್ಧನೆಂಬ ನಿಧಿ ಪರಿತಾವನಿಯೊಳ್ ॥

## ರಗಳೆ

ಶ್ರೀ ರಜತ ಗಿರಿಯ ಸಭೆಯೊಳ್ ಚಂದ್ರಶೇಖರಂ
ಕಾರುಣ್ಯನಿಧಿ ಹಂಪೆಯರಸನೊಪ್ಪಿರೆ ಕರಂ
ನಂದೀಶ ವೀರಭದ್ರಾದಿ ಗಣತತಿಯೊಪ್ಪೆ
ಸಂದಣಿಪ ದಾರುಕಂ ರೇಣುಕಾದಿಗಳೊಪ್ಪೆ
ದೇವ ಗಂಧರ್ವ ಕಿನ್ನರ ಗರುಡಗಣವೆಸೆಯೆ
ಆವಗಂ ಸುರಪತಿ ಸುರಾಸುರರುಗಳುಮೆಸೆಯೆ
ಆ ಸಮಯದೊಳ್ಶಂಭು ಸಂತಸದೊಳೋಲಾಡಿ
ಭಾಸುರಮೆನಿಪ್ಪ ರೇಣುಕನ ಮೊಗಮಂ ನೋಡಿ
ಕರುಣದಿಂ ಬಾಯ ತಂಬುಲವನೀಯಲ್ಕೆಂದು
ಕರೆಯೆ ಭಯಭಕ್ತಿಯಿಂ ದೇವ ಬರ್ದುಕಿದೆನೆಂದು
ಸಡಗರಿಸುತಂ ದಾರುಕನನಲ್ಲಿಂ ದಾಂಟಿ ಬರೆ
ಮೃಡನೀಕ್ಷಿಸುತ್ತಂ ಪ್ರಸಾದಮುಮನಿಕ್ಕುತಿರೆ
ದಾರುಕಂ ದುಮ್ಮನವನೊಳಕೊಂಡು ತಲೆವಾಗಿ
ಮಾರಾರಿ ಬೆಸಸುತಿರ್ದಂ ಸುರರ್ಬೆರಗಾಗೆ
ದಾರುಕನನಿಂತು ದಾಂಟುವರೆ ರೇಣುಕ ನಿನಗೆ
ಧಾರುಣಿಯೊಳೊಗೆವ ಜಡ ಜನ್ಮವಾದುದು ನಿನಗೆ
ಎನೆ ರೇಣುಕಂ ಬೆಚ್ಚಿ ಕೈಗಳಂ ಮುಗಿವುತುಂ
ಮನಸಿಜಹರಂಗೆ ಬಿನ್ನೈಸಿದಂ ನಡುಗುತುಂ
ದೇವ ಜಡಯೋನಿಯೊಳ್ಬರಲಾರ್ಪೆನೇ ತಂದೆ
ಆವಗಂ ಸಂಸೃತಿಯೊಳಿರಲಾರ್ಪೆನೇ ತಂದೆ
ಶಂಭುವೇ ಶಂಕರನೆ ಶಶಿಧರನೆ ಕರುಣಿಪುದು
ಜಂಭಮರ್ದನಮುಕುಟ ಲಸಿತಪದ ಪಾಲಿಪುದು

ಎಂದು ಬಿನ್ನೈಸಲರಿದೀಶ್ವರಂ ನಸುನಗುತೆ
ಎಂದನಾ ರೇಣುಕಂಗಳ್ಕರಿಂ ಕರುಣಿಸುತೆ
ಎನ್ನ ಪ್ರಸಾದಕ್ಕೆ ಬರ್ಪುದಿದು ತಪ್ಪಲ್ಲ
ಮನ್ನಿಸದೆ ದಾರುಕನನಿಂತು ದಾಂಟಿದೆ ಪೊಲ್ಲ
ಇದರಿಂದೆ ಸುಖದುಃಖಮಂ ಧರಣಿಯೊಳ್ಪೊತ್ತು
ಸದಮಳವೆನಿಪ್ಪ ಲಿಂಗದೊಳೆ ಜನನಂಬೆತ್ತು
ಸುಖದುಃಖವಲ್ಲಿ ಸಾಮರ್ಥ್ಯತರವಾಗುತಿರೆ
ಸುಖದೊಳಿರ್ದಲ್ಲಿಗೈತಪ್ಪುದೆಂದೆನುತಮಿರೆ

ರೇಣುಕಂ ಕೈಮುಗಿದು ಬೆಸನಮಂ ಕೈಕೊಂಡು
ವಾಣೀಶ ಮಸ್ತಕ ಕರಾಬ್ಜನಂ ಬೀಳ್ಕೊಂಡು
ಬಂದು ಧರೆಯೊಳಗೆ ಪುಟ್ಟಿದ ಪರಿಯನರಪುವೆಂ
ಇಂದುಜೂಟಂ ಪ್ರೇರಿಸಿದ ತೆರದಿ ತಿಳುಪುವೆಂ
ಎಂತೆಂದೊಡಂಬುಧಿಪರೀತ ವಸುಮತಿಯೊಳಗೆ
ಸಂತತಂ ರಂಜಿಪುದು ಶಿವಭಕ್ತಿ ತೊಳತೊಳಗೆ
ಕೊಲ್ಲಿಪಾಕಿ ಯೆನಿಪ್ಪ ಪೆಸರೆಸೆವ ಶಿವಪುರಂ
ಬಳ್ಳಿವರಿದೀಶ್ವರನ ಭಕ್ತಿ ಪರ್ವಿದ ಪುರಂ
ಅಲ್ಲಿ ಬಂದೊಲಿದು ನೆಲಸಿರ್ಪನಹಿಭೂಷಣಂ
ಎಲ್ಲಾ ಮಹೇಶ್ವರರ ಭವಬಂಧ ಶೋಷಣಂ
ಅಮೃತಮಯನನುಪಮಂ ಸೋಮನಾಥಂ ನೋಡ
ಅಮೃತಕಳಾಕಳಿತ ಚಂದ್ರಚೂಡಂ ನೋಡ

ಆ ಸೋಮನಾಥನ ಶಿವಾಲಯದ ನಡುವೊರ್ಮೆ
ಭಾಸುರದ ಶಿವಭಕ್ತ ಕೋಟಿ ಕುಳ್ಳಿರೆ ಪೆರ್ಮೆ
ವಡೆದ ಕವಿಗಮಕಿವಾಗ್ಮಿಗಳ ತಂಡಂ ಮೆರೆಯೆ
ನಡುವೆಸೆದಮಳ ರಸಾಂತರ ಮೊತ್ತದಿಂದೆಸೆಯೆ
ನೆರೆ ಮುಗ್ಧೆಯರ ವಿದಗ್ಧೆಯರ ತಿಂಥಿಣಿಯೊಪ್ಪೆ
ಮೆರೆವ ಬಹು ವಿಧ ಕಳಾವಿದರ ಪಂಙ್ತಿಗಳೊಪ್ಪೆ
ಓಲೈಸುತಂ ನಲಿದು ಕುಳ್ಳಿರ್ಪ ಸಮಯದೊಳು
ಲೀಲೆ ಕೈಮಿಗೆ ರಂಗಮಂಟಪದ ಮಧ್ಯದೊಳು

ಪಿಡಿದ ಜವನಿಕೆ ಸಿರಿಯೆ ಸಕಲ ವಾದ್ಯಂ ನೆಗಳೆ
ನಡುವೆ ನೃತ್ಯದ ಲಲನೆಯಾಡುತ್ತಮಿರೆ ಪೊಗಳೆ
ಆಗಳೊಗೆದುದು ಮಹಾಲಿಂಗದೊಳ್ಘನರವಂ
ರಾಗದಿಂದಿರ್ದ ಸಭೆ ನಡುಗುತ್ತಮಿರೆ ಕರಂ
ನೆಲ ಮೊಳಗಿದಂದದಿಂ ಮೇಘ ಗರ್ಜನೆಯಂತೆ
ಸಲೆ ಲಿಂಗದೊಳಗಣಿಂ ಪೊಣ್ಮುತ್ತಮಿರಲಿಂತೆ
ಪುಟ್ಟುತಿರ್ದಂ ಸಿದ್ಧರೇಣುಕಯ್ಯಂ ನೋಡ

ನಿಷ್ಠೆ ಮಿಗೆ ಸಿದ್ಧರೇವಣ ನಾಮದಿಂ ನೋಡ
ಅದೆ ಕಂಥೆಯದೆ ವದನವದೆ ವಜ್ರಕುಂಡಲಂ
ಅದೆ ವಕ್ತ್ರವದೆ ಹಸ್ತವದೆ ಪಿಡಿದ ಲಾಕುಳಂ
ಅದೆ ಕೋವಣಂ ನೋಡೆನುತ್ತ ಮಿರಲುದಿಸಿದಂ
ಸದಮಳವೆನಿಪ್ಪ ಶಿವಲಿಂಗದೊಳ್ಪುಟ್ಟಿದಂ
ಲೋಕಮಂ ಪಾವನಂ ಮಾಡುವುದ್ಯೋಗದಿಂ
ಆಕಸ್ಮಿಕಂಗಳಂ ತೋರುವನುರಾಗದಿಂ
ಭಸಿತದಿಂ ನೊಸಲ ಕಣ್ಣಂ ಮುಸುಂಕಿಟ್ಟಲ್ಲಿ
ಎಸೆವೆರಡು ಕಣ್ಗಳಿಂ ಬೆಳಬೆಳಗುತಂತಲ್ಲಿ
ಜ್ಯೋತಿಯಿಂದಂ ಜ್ಯೋತಿಯೊಗೆದೊಂದು ತೆರನಾಗೆ
ಓತು ಪುಟ್ಟಿದನಯ್ಯ ನಿಜವಿಳೆಗೆ ಪೊಸತಾಗೆ
ಕಾರಣಿಕಂ ಸಿದ್ಧನಂ ನೋಡಲಮ್ಮದೆ ಕರಂ
ಓರಂತೆ ವೈಯ್ಯಿಕ್ಕುತಿರ್ದುದಾ ಪರಿಕರಂ
ಕೈಮುಗಿದು ಜನವೆಲ್ಲ ನಡನಡನೆ ನಡುಗುತಿರೆ
ಆ ಮಹಾಸಿದ್ಧನಿರವಿಂಗೆ ಬೆರಗಾಗುತಿರೆ
ಮಿಗೆ ನೋಡೆ ನೋಡೆ ನಡೆತಂದಂ ನಭಸ್ಥಳಕೆ
ಬಗೆಗೊಂಡು ಬಂದನಾ ದಕ್ಷಿಣ ದಿಶಾವರಕೆ
ಬಂದನಗಸ್ತ್ಯನ ಕೂಡೆ ಶಿವಭಕ್ತಿ ಗೋಷ್ಠಿಯೊಳು
ನಿಂದು ಪುಳುಕಿಸುತೆ ಪೊರಮುಟ್ಟಿ ಕಡುನಿಷ್ಠೆಯೊಳು
ಸೇತುವಿನ ರಾಮನಾಥನ ನೊಲ್ಮೆಯಿಂ ಕಂಡು
ಆತುರದೊಳಪ್ಪಿ ಹಾರೈಸಿ ಹರುಷಂಗೊಂಡು
ಆರುವರಿಯದ ತೆರದಿ ನೆರೆ ಕಂಥೆಯಂ ಪೊದೆದು

ಊರೂರ ಹೊರಗೊಳಗೆ ಮರುಳಂದದಿಂ ಸುಳಿದು
ಪಿಣ್ಣಾಂಕನೊಲ್ಮೆಯಿಂ ಮೆಲುತಿರ್ಪ ದೂಸರಿಂ
ಪಿಣ್ಣಾಂಕ ದೇವನೆಂಬುವ ನಾಮವಳ್ಕರಿಂ
ಚೋಳ ದೇಶಮೊಳೆಲ್ಲ ಸಂದಿರೆ ನಿರಂತರಂ
ಶೂಲಿಯಣುಗಂ ಲೋಕವಂ ನಗುತ್ತಿರೆ ಕರಂ
ಲೋಕಕ್ಕೆ ತಾ ಮರುಳು ತನಗೆ ಲೋಕಂ ಮರುಳು
ಲೋಕದೊಳ್ಸುಜನರ್ಗೆ ಶಿವನ ತತ್ವದ ಮರುಳು
ತಾನಾಗಿ ಸುಳಿವುತಿರ್ದಂ ಸಿದ್ಧರೇವಣಂ
ನಾನಾ ವಿಧದ ಮಹಿಮೆಗಳನರಿವ ಕಾರಣಂ
ತಿಲದ ತೈಲದ ತೆರದಿ ಕಾಷ್ಠದಗ್ನಿಯ ತೆರದಿ
ಜಲದ ಜಲಜದ ತೆರದಿ ಕುಸುಮಗಂಧದ ತೆರದಿ
ಧೈರ್ಯದೊಳ್ಧರೆಯಂತೆ ತಂಪಿನೊಳ್ ಶಶಿಯಂತೆ
ಶೌರ್ಯದೋಳ್ ರವಿಯಂತೆ ಉಷ್ಣದೊಳ್ ಶಿಖಿಯಂತೆ
ಭರಿತದೋಳ್ ನಭದಂತೆ ಸೋಂಕಿನೊಳನಿಲನಂತೆ
ಚರಿತದೋಳ್ ಭುವನ ಪಾವನ ದೇವನದಿಯಂತೆ
ಸೊರ್ದಿಯುಂ ಪೊರ್ದನೀ ಜಗದ ಸಂಸಾರಮಂ
ಸಾರ್ದು ಸಾರಂ ನೋಡ ಭವಕುಲದ ಭಾರಮಂ
ಇಂತು ನಿರ್ಲೇಪ ಚಾರಿತ್ರದಿಂ ಸುಳಿವುತುಂ
ಸಂತತಂ ತನ್ನನರಿದವರಘವ ನಿಳಿಪುತುಂ
ದ್ರವಿಡದೇಶದ ಶಿವಪುರಂಗಳಂ ನೋಡುತುಂ
ಶಿವಲಿಂಗಸಂತತಿಗಳಂ ಪೂಜೆಗೈವುತುಂ

ಪೊನ್ನಾಂಬಲವನೈದಿ ನಾಂಟ್ಯರೂಪಂ ಕಂಡು
ಪನ್ನಗಾಭರಣ ನಾಂಟ್ಯಕ್ಕೆ ಹರುಷಂಗೊಂಡು
ನಡೆದು ಕಾಂಚೀ ಪುರದೊಳೇಕಾಂಬ್ರನಾಥನಂ
ಕಡು ನಿಷ್ಠೆಯಿಂ ಕಂಡು ಪಾರ್ವತೀ ಪ್ರಿಯನಂ
ಒಲುಮೆಯಿಂ ಪೂಜಿಸುತೆ ಲೋಕೈಕ ಬಂಧುವಂ
ಅಲ್ಲಿ ಶಿವನಿಳಯದೊಳು ಮರುಳಂತೆ ಸುಳಿವುತುಂ
ಬಲ್ಲ ಶಿವಭಕ್ತರ್ಗೆ ಶಿವನಂತೆ ಪೊಳೆವುತುಂ
ದೇವಲೋಕದ ಕಿರಿಯ ಮಲ್ಲಿಗೆಯ ಪುವ್ವಿಂದೆ

ಆಪಗಂ ನಾಗಲೋಕದ ಕುಸುಮ ಕುಲದಿಂದೆ
ಏಕಾಂಬ್ರನಾಥನಂ ಒಲುಮೆಯಿಂ ಪೂಜಿಸುತ್ತೆ
ಲೋಕೈಕ ಬಂಧುವಂ ಪೂಜಿಸಿ ವಿರಾಜಿಸುತ್ತೆ
ಆ ಪುರಕ್ಕೆ ಪಿಣ್ಣಾಂಕನೆಂಬ ನಾಮಂ ಸಂದು
ಪಾಪಹರನಲ್ಲಿ ಕೆಲವುಂ ದಿವಸಮಿರೆ ಸಂದು

ಅಲ್ಲಿ ವೈಷ್ಣವನೆನಿಪ ನೋರ್ವ ಚೋಳಂ ಬಂದು
ಎಲ್ಲ ತೆರದಿಂದೆ ವಿಷ್ಣು ಪ್ರತಿಮೆಯ ತಂದು
ಇದು ಬಗೆವೊಡೊರ್ಮೆಯುಂ ಬಾಯ್ದೆರೆದು ನುಡಿವಂತೆ
ಸದಮಳಂ ಹರಿಕಳಾಸಾನ್ನಿಧ್ಯವಪ್ಪಂತೆ
ವಿಷ್ಣು ಪ್ರತಿಷ್ಠೆಯಂ ಮಾಡಬಲ್ಲರ್ಗಳಂ
ವೈಷ್ಣವ ಪ್ರತತಿಯೊಳು ಪಿರಿಯರಪ್ಪವರ್ಗಳಂ
ಅರಸು ತಾ ದೇಶದೊಳು ಪಡೆಯದೆ ಮೊಗಂ ಬಾಡಿ
ಅರಿಕೆಯಂ ಮಾಳ್ಪರಿಲ್ಲದೆ ಚಿತ್ತವಲ್ಲಾಡಿ
ಐದೆ ಮಿಕ್ಕನುತಾಪದಿಂದೆ ಚಿತ್ತಂ ಸೆಡೆದು
ಸುಯ್ದು ಸುಮ್ಮಾನ ಉಡುಗುತ್ತೆ ಚೋಳನುಂ ನೆನೆದು
ಮೃಡನ ಮರೆಹೊಕ್ಕಲ್ಲದೀ ಕಾರ್ಯವಾಗದಿದು
ಮೃಡಭಕ್ತರಿಂದಲ್ಲದಾರೊಳುಂ ತೀರದುದು

ಎಂದು ನಡೆದೇಕಾಂಬ್ರನಾಥನಲ್ಲಿಗೆ ಬಂದು
ಇಂದುಧರ ಪಾಪಹರ ಪುಣ್ಯವರ ಶರಣೆಂದು
ಪಂಚಾಮೃತಾಭಿಷೇಕಂಗಳನಲಂಕರಿಸಿ
ಪಂಚವದನಂಗೆ ಪೊಸ ಪೂಜೆಗಳನಳವಡಿಸಿ
ದೇವಾನ್ನ ದಿವ್ಯಾನ್ನದಾರೋಗಣೆಯನಿತ್ತು
ದೇವಂಗೆ ಹೊನ್ನ ರನ್ನದ ತೊಡಿಗೆಗಳನಿತ್ತು
ಮಕರ ತೋರಣ ಸುವರ್ಣ ತೋರಣವನೆತ್ತಿ
ಸುಕರವೆನಿಸುವ ಮೌಕ್ತಿಕದ ತೋರಣವನೆತ್ತಿ
ಶಿವಭಕ್ತ ಸಂಕುಲಕ್ಕಾರಾಧನೆಯನಿತ್ತು
ಶಿವನ ನೆನಹಂ ತನ್ನ ಮನದ ಮೊನೆಯೊಳು ಪೊತ್ತು
ಸರ್ವಜ್ಞನೆನಿಪನಂ ಕರುಣಿಸುವುದೆಲೆ ದೇವ
ಸರ್ವ ಸಾಮರ್ಥ್ಯವುಳ್ಳಧಿಕನಂ ಕೊಡು ದೇವ

ಎನುತಲತಿ ಶುಚಿರ್ಭೂತನಾಗಿ ಮಿಗೆ ಪಟ್ಟಿರೆ
ಮನದೊಳಗೆ ಸಹಜ ಸಾಮರ್ಥ್ಯನಂ ನೆನೆವುತಿರೆ

ಕನಸಿನೊಳಗೇಕಾಂಬ್ರನಾಥನಲ್ಲಿಗೆ ಬಂದು
ನೆನೆವ ಚೋಳನ ಮನದ ಮೊನೆಯ ಕೊನೆಯೊಳು ನಿಂದು
ತಿಣ್ಣವಿಲ್ಲಂ ಕಜ್ಜನಿಂತಿದಕ್ಕೆಸಿತೇಕೆ
ಪಿಣ್ಣಾಂಕದೇವನಂ ತರ್ಪುದುಮ್ಮಳವೇಕೆ
ಎಂದಲ್ಲಿ ಬೆಸಸಿ ಬಿಜಯಂಗೈಯ್ಯೆ ರಾಗದಿಂ
ಮುಂದೆಯರುಣೋದಯಂ ತೋರೆ ಕಡುವೇಗದಿಂ
ನಿದ್ರೆಯಿಂದೆಚ್ಚತ್ತು ಚೋಳ ಮನದೊಳಗರಿದು
ರುದ್ರಂಗೆ ಭಯಭಕ್ತಿಯಿಂದೆರಗಿ ಕೈ ಮುಗಿದು
ತಿರುಗಿ ತನ್ನರಮನೆಯನಾನಂದದಿಂ ಪೊಕ್ಕು
ಹರನ ಕರುಣಕ್ಕೆ ಹಾರೈಸುತಂ ಮನ ಮಿಕ್ಕು
ಕಂಚಿಯೊಳು ಪಿಣ್ಣಾಂಕ ದೇವರೆಂಬವರುಂಟೆ
ಪಂಚಮುಖನರುಪಿದಂ ನೋಡಿ ಪುರದೊಳಗುಂಟೆ
ಎನೆ ದೇವ ಪಿಣ್ಣಾಂಕನೆಂಬನೋರ್ವಂ ಮರುಳ
ತನತನಗೆ ಪುರದ ಗುಂಡುಗಳುರುಳ್ವ ನೆರೆ ಮರುಳ
ಉಂಟೆಂದೊಡಾತನೇ ಪಿರಿಯಂ ಕರೆಯಿಮೆನಲ್
ಟಿಂಟಿಣಿಸುತೆಲ್ಲರುಂ ಪೋಗಿ ಕರೆಯುತ್ತಿರಲ್

ಆನೇಕೆ ಚೋಳನೇಕೆತ್ತಣ ವಿನೋದವಿದು
ಆನೋರ್ವ ಭಿಕ್ಷುಕಂ ನೃಪಸಂಗವೆತ್ತಣದು
ಬಾರೆನೆಂತುಂ ಬಾರೆನೆನೆ ಮರಳಿ ಪರಿತಂದು
ಬಾರನಾವರ್ತದಿಂ ದೇವ ಬೆಸನೇನೆಂದು
ನುಡಿಯೆ ಬಲ್ಪಿಂ ಕೊಂಡು ಬರ್ಪುದೆಂದೆನುತಮಿರೆ
ನಡೆತಂದು ಬಲ್ಲಾಳ್ಗಳೆಲ್ಲರಂ ಕರೆವುತಿರೆ
ಒಲ್ಲೆನೆಂದೆನೆ ಜರಿದು ಕೈವಿಡಿದು ಬರಸೆಳೆಯೆ
ಅಲ್ಲಿ ನಸುನಗುತೆ ಸಿದ್ಧಂ ನೋಡಿದಂ ಕಳಿಯೆ
ನೋಡೆ ಹಸ್ತಸ್ತಂಭ ನೋಡೆ ಜಿಹ್ವಾಸ್ತಂಭ
ಆಡಂಬರಂ ನಿಂದು ಕೂಡೆ ಪಾದಸ್ತಂಭ
ಆಗ ಚೋಳಂ ಕೇಳ್ದು ನಡನಡನೆ ನಡುಗುತುಂ

ರಾಗದಿಂದಲ್ಲಿಂದೆ ವೈಯ್ಯಿಕ್ಕಿ ಪೊಗಳುತುಂ
ಬಂದು ಪದದೊಳು ಬಿದ್ದ ಚೋಳ ನೃಪನಂ ಕಂಡು
ಇಂದುಧರನರುಪಿದನೆ ಏಳೆಂದು ಕೈಕೊಂಡು
ಎತ್ತಿ ವಿಷ್ಣುಗೃಹಕ್ಕಾಗಿ ಬರುತೊಪ್ಪಿದಂ
ಕರ್ತೃ ಚೋಳಂ ಕೈಗೊಡುತ್ತ ಬರಲೊಪ್ಪಿದಂ
ಸೋಮಧರ ಮಹಿಮನಸಮಾನ ಶೈವಾರ್ಚಕಂ
ಸಾಮರ್ಥ್ಯ ಕಂದಾವಲಿಯುಸಿಯು ಪಾಲಕಂ
ಲೋಕುಳದ ಲಾಕ್ಷಣಿಕ ನಮ್ಮಮ್ಮ ಬರುತಿರ್ದ
ನಾಕಸ್ಮಿಕಂ ಮರುಳನಂತೆ ನಡೆತರುತಿರ್ದ
ಇಂತು ವಿಷ್ಣುಗೃಹದ ಕಾಣ್ಕೆಗೊಲವಿಂ ಬಂದು

ಅಂತಲ್ಲಿ ಚೋಳಂ ಸಹಿತ ಮೀರ್ವರುಂ ನಿಂದು
ಎಲೆ ಚೋಳ ಹೇಸದಿರು ನೋಡುತಿರು ನೀನೆನುತೆ
ಎಲೆಲೆ ಹೇಸಿದೊಡೆ ನುಡಿಯಿಲ್ಲ ಪ್ರತಿಮೆಗೆ ಎನುತೆ
ಬಗೆದು ಸಿದ್ಧರ ದೇವನಾ ಪ್ರತಿಮೆಯುಂ ನೋಡಿ
ಮಿಗೆ ತನ್ನ ಪುಲ್ಲಿಂಗದತ್ತ ಕೈಯ್ಯಂ ನೀಡಿ
ತೆಗೆದು ತನ್ನಯ ವೀರ್ಯಮಂ ಮೂರ್ಧ್ನಿಯೊಳಗೊತ್ತೆ
ಬಗೆಯುದಾ ಪ್ರತಿಮೆಯ ಶಿರೋಮಧ್ಯದೊಳಗೊತ್ತೆ
ಚೋಳನ ಮೊಗಂ ನೋಡಿ ಹೇಸಿ ತಲೆಯುಂ ಬಾಗೆ
ಚೋಳ ಹೇಸಿದೆ ನುಡಿಯುದೀ ಪ್ರತಿಮೆ ಸೈತಾಗೆ
ಎಂದೊಮ್ಮೆ ನುಡಿಯಿಸುತೆ ಚೋಳಂಗೆ ಬೀಳ್ಕೊಟ್ಟು
ನಿಂದಿರೆಂದೆನುತೆ ಮರುಳಾಳಂಗೆ ವೈಗೊಟ್ಟು
ಅರುಳಾಳ ಪೆರುಮಾಳೆಯೆಂಬ ನಾಮವನಿತ್ತು
ತಿರುಗಿದಂ ಬಡಗ ದೇಶಕ್ಕೆ ಜಸಮಂ ಪೊತ್ತು
ಇಂತುತ್ತರಾಭಿಮುಖವಾಗಿ ನಡೆತರುತಮಿರೆ
ಸಂತತಂ ಸಿದ್ಧರೇವಣ ತಂದೆ ಬರುತಮಿರೆ

**ಪ್ರಥಮಸ್ಥಲ ಸಮಾಪ್ತ.**

# ದ್ವಿತೀಯಸ್ಥಲ.



**ವೃತ್ತ**:—ಶಿವಲಿಂಗೋದ್ಭವನಾಗಿ ಚೋಳನರಗಕ್ಷೋಣೀತಳಕ್ಕೈದಿಬಂ।
ದವಿಚಾರಂಪುಗದಂತೆ ತಾಳ್ದು ಜಡವೇಷಾಕಾರಮಂ ಕಾಂಚಿಯೊಳ್।
ತಪೆ ವಿಷ್ಣು ಪ್ರತಿಮೆ ಪ್ರತಿಷ್ಠೆಗೆ ಮನಂಗೊಟ್ಟಿಳ್ದರಿಂದಂ ಮರ।
ಳ್ದು ವಿಳಾಸಂ ಮಿಗೆ ಸಿದ್ಧರೇವಣಶಿವಂ ಸಾದುರ್ತ್ತರ ಪ್ರಾಂತಮಂ॥

**ಗದ್ಯ**:— ಇಂತು ದಕ್ಷಿಣ ದೇಶಮಂ ಪೊಕ್ಕು ಚೋಳಂಗೆ ಪ್ರತ್ಯಕ್ಷಮಂ ತೋರಿ ಕಂಥೆಯು ಕಮಣ್ಡಲು ರೂಪಂ ವಜ್ರಕುಂಡಲದ ವಜ್ರಧರ ಲಾಕುಳದ ಲೋಕೈಕ ಬಂಧು ಮೆಟ್ಟಿದ ಪಾವುಗೆಯು ಕಟ್ಟಿಧಿಕಂ ಕೋವಣದ ಭಾವಕಂ ಅಂಗಜರಿಪುವೆನಿಸಿರ್ದ ರೇವಣಸಿದ್ಧಂ ಸಿದ್ಧಕುಲ ಚಕ್ರವರ್ತಿ ತಿರುಗಿ ಬಂದುತ್ತರದಿಶಾಭಾಗದ ಮಾಸನೂರ ಪೊರಗಿರ್ಪ ಶಿವಾಲಯದೊಳಗವತರಿಸಿ ಸಂಧ್ಯಾಸಮಯದೊಳ್ ರಂಗಮಂಟಪದ ನಡುವೆ ಸಾದುರ್ ಕುಳ್ಳಿರ್ಪುದುಂ, ಅಲ್ಲಿಯ ಪೂಜಾರಿ ಕಂಡು ಎಲೆಯಯ್ಯ ಎಲೆ ಸಿದ್ಧ ಇಲ್ಲೇಕಿರ್ದಪೆ? ಈ ಶಿವಾಲಯದ ಮುಂದಣ ವೃಕ್ಷದೊಳಿರ್ಪ ಕಾರಣಿಕಂಗಳಪ್ಪ ತಿಗುಣಿಗಳೆರಡರಿಂದಿಲ್ಲಿ ಪಟ್ಟಿರ್ದ ದೇಶಾಂತ್ರಿಗಳ್ ಪಲಂಬರ್ಮಡಿದರಿಲ್ಲಿರದಿರೆಂದು ಪೇಳೆ, ರೇವಣಂ ನಗುತಂ ದೇಶಾಂತ್ರಿಯಾದವ ತಿಗುಣೆ ಚಿಕ್ಕುಟ ಪಸಿವು ಬಾಯಧಾರಿಕೆಗಂಜಿದರೆಂತಹುದು? ನಾನಿಲ್ಲಿಯೆ ಪಟ್ಟಿರ್ದು ಬಂದುದಂ ಕಾಣ್ಬೆನೆನೆ ಆಗಳಾತಂ ನಿಲಲಮ್ಮದೆ ಪುರಕ್ಕೆ ಪೋದನಿತ್ತಲ್ ನಿರುಪಮ ಸಿದ್ಧಂ ಧೈರ್ಯನಿಧಿ ತ್ರಿಭುವನ ಬಾಂಧವಂ ತ್ರಿಕಾಲಜ್ಞಂ ತನ್ನ ಮನದೊಳ್ ನೆನೆದು ನೋಡಿ ರಾಕ್ಷಸ ಮಿಥುನಂ ಶಾಪಹತರಾಗಿರ್ಪುದನರಿದಿವರು ಮಾಳ್ಪ ಪ್ರಾಣಿವಧೆಯಂ ಮಾಣಿಸುವೆಂ ಜಗದ್ಧಿತಾರ್ಥಮಾಗಿಂತಿದಂ ತೀರ್ಚಿಪಪೆನೆಂದು ವಿಚಾರಿಸುತ್ತಿರೆ ಇರೆ, ನಟ್ಟಿರುಳೊಳೆರಡು ತಿಗುಣೆಗಳುಂ ಮರದಿಂದೆ ಘುಳಘುಳನಿಳಿದು ಬಂದು ಪರಮ ಶಿವಯೋಗಿಯ ಇರವಂ ಕಂಡು ಭಯಂಗೊಂಡು ತಿರುಗಿ ಬಂದು ಮರನೇರುವಾಗಲಪ್ರತಿಮ ರೇವಣಸಿದ್ಧಂ ಭೋಂಕೆನೆ ಕಂಡು ನೊಸಲಗಣ್ಣಿಂಗೆ ಬೆಸನೀಯ್ಯೆ ಬಿಸುಗಣ್ಣ ಬೆಂಕಿಯಿಂ ಮರಂಗಳೆರಡುಂ ಕರಿಮುರಿಯಾಗಿ ಘರಘರಲನುರಿದು ಭಸ್ಮಾವಶೇಷಮಾಗಿ ತಿಗುಣಿಗಳೆರಡುಂ ಮಿಗೆ ಬೆಂದು ಮುಗೂರಿ ಕೆಡೆದು ಕಾಹೇರಿ

ಕರಗಿ ಕುದಿದುಕ್ಕಿ ಕಕ್ಕಳಿಯುದೆರಡುಂ ಉಕ್ಕಿನ ಗುಂಡುಗಳಾಗಿರೆ ರಕ್ಕಸರ ಬಲ್ಪಿಂಗೆ ಬೆಕ್ಕಸಂಬಟ್ಟು ಮುಕ್ಕಣ್ಣ ಸಿದ್ಧನರುಣೋದಯದೊಳೀಳ್ದಿರಡು ಗುಂಡುಗಳಂ ಕರದೊಳ್ಪಿಡಿತಂದು ಮಾಸನೂರ ಕಮ್ಮಾರನ ಕೈಯ್ಯೊಳ್ಕುಡೆ ಕಂಡವಂ ಭೀತಚೇತನನಾಗಿ ತಲೆಯೊಳ್ಕೈಯ್ಯಿಟ್ಟಂಜದಿರೆಂದು ಪೆಣ್ಗುಂಡ ನೊಂದು ಕಠಾರಿಯುಂ ಮಾಡಿಸಿ ಗಂಡು ಗುಂಡಂ ಕಾಸಿದೊಡಂ ಕಡಿದೊಡಂ ಬಡಿದೊಡಂ ನಿಗುರದಿರೆ ಆ ಮನೆಯ ಮುಂದೊರ್ಬಂ ಪಿಡಿದ ಪೊಸ ಮಾಂಸಮುಂ ಕಂಡದಕ್ಕೆ ನಿಲ್ಲದೈದೆ ನಿಗುರುವುದಂ ಕಂಡು ಕಾಲ ಹರನಣುಗನಾ ಪಿಶಿತಮುಂ ತೋರಿಸುತ್ತಲಗಂ ಮಾಡಿಸಿ ಪಿಡಿದು ನೋಡಿದೊಡೆ ತನ್ನ ಕೈಯ್ಯೊಳಿರ್ದುಂ ತನಗೆ ಹಲು ಮೊರೆವ ಸುರಿಗಿಯುಂ ಕಂಡು ಬೆರಗಾಗುತ್ತಿಂತಿದಂ ಕೈವಿಟ್ಟಿನಪ್ಪೊಡೆ ಈಯಲಗು ಜಗಮು ನಂಡಲೆಗುಮೆಂದು ಮಾಸನೂರ ಮುಂದೆ ಪರಿವ ನದಿಯ ನಡುವಣ ಪೇರ್ಮಡುವಿನೊಳಾವಗಂ ತೋರದಂತೆ ಮೊನೆ ಕೆಳಗಾಗಿರಿಸುತಿನ್ನೆಲ್ಲಿಯುಂ ಮಿಸುಕದಾರ್ಗಂ ವಶವಾಗದಿಲ್ಲಿಯೇ ನಿಲ್ಲೆಂದು ನಿಯಾಮಿಸೆ

ಸಾಮರ್ಥ್ಯಭೂಷಣಂ ಮನುಗಳ ಮನೆದೈವಂ ಮುನಿಗಳ ಮೂರ್ತಿ ಜ್ಯೋತಿಸಿದ್ಧರ ಸಿದ್ಧರಸನೆನಿಪ ರೇವಣಸಿದ್ಧಂ ಜಯಂತಿಗೆ ನೆಗೆದು ಪುರಮಂ ಪೊಕ್ಕರಮನೆಯ ಸಭಾನಿಳಯಾಗ್ರದೊಳ್ ನಿಂದಿರೆ ವಿಕ್ರಮಾದಿತ್ಯಂ ಕಂಡಿದಿರೇಳ್ದು ವೈಯ್ಯಿಕ್ಕಿ ಬಂದು ಕೈಗೊಟ್ಟು ತಂದು ಸಿಂಹಾಸನದೊಳ್ಬಿಜಯಂಗೈಸಿ ಶ್ರೀಪಾದಮಂ ತೊಳೆದು ಪಾದೋದಕಮುಂ ತಳೆದು ಕೈಮುಗಿದು ದೇವ ಬಿಜಯಂಗೈದು ಬರ್ದುಂಕಿಸಲ್ಬಂದ ಕಾರಣವೇನೆಂದು ಬಿನ್ನವಿಸೆ, ರೇವಣಸಿದ್ಧಂ ತನ್ನ ಕೈಯ್ಯ ಕಠಾರಿಯುಂ ತೋರಿಸುತ್ತಿಂತೆಂದಂ, ಉಡುವೊಡೆ ದಿವ್ಯವಸ್ತ್ರಂ ತೊಡುವೊಡೆ ದಿವ್ಯಾಭರಣಂ ಉಣ್ಬೊಡಮೃತಾನ್ನಂ ಏರುವೊಡೆ ವಾಹನಂ ಕುಡುವೊಡೆ ದೇವಾಂಗನೆ ಕಾದುವೊಡೆ ನಿಶಿತಾಯುಧಂ ಒಪ್ಪುದಿಂತಿದಂ ಕುಡಲ್ಬಂದೆನೆಂದು ಮತ್ತಾ ಕಠಾರಿಯುಂ ಕರುಣಿಸಿ ಕೊಟ್ಟಲ್ಲಿಂದ ನೆಗೆದು

ಕಲ್ಯಾಣದ ತೆಲ್ಲಿಗನಪ್ಪ ಕಲ್ಲಿಶೆಟ್ಟಿಯ ಗಾಣದ ಕೊಟ್ಟಿಗೆಗೆ ಬಂದು ಮುಗಿಲ ಮರೆಯ ಸೂರ್ಯನಂತೆ ಮಾಸಿದ ಪರುಷದಂತೆ ಗವಸಣಿಕೆ ಇಕ್ಕಿದ ಬೆಳಗಿನಂತೆ ಮುಸುಂಕಿರ್ದ ಸಾಮರ್ಥ್ಯದಂತೆ ಮೈಗರೆದು ಶಿವಜ್ಞಾನದಂತೆ ಅಜ್ಞಾನಿಗಳ ನೋಟಕ್ಕುದಾಸೀನವಪ್ಪ ಹೊರವೇಷದ ಹರಿದ ಕಂಥೆಯ ಅರುವೆ ಕೌಪೀನ ಪ್ರವಾಸಿಕವೇಷಂ ಪ್ರಭೂತಮಾಗಿ ನಿಂದಿರ್ದ ಸಿದ್ಧನನರಿಯದೆ ತನಗಂ ತನ್ನ ಸತಿಗಂ ಗಾಣದೆತ್ತಿಗಂ ಒಂದೊಂದೆ

ಕಣ್ಣಾದ ಕಲಿಸೆಟ್ಟಿಯುರು ಕಂಡೆಲೆಯುಯ್ಯ ಗಾಣದೆತ್ತಂ ಹೊಡೆದೊಡೆ ಹಿಂಡಿಯು ಮೆಲಲಿಕ್ಕುವೆಂ ನಡೆ ಎಂದು ನುಡಿಯಲವನಂ ಕೃತಾರ್ಥನಂ ಮಾಡುವುದ್ಯೋಗದಿಂದೊಡಂಬಟ್ಟು ಗಾಣದ ಕತ್ತರಿಯಂ ಕೇಣದೊಳೇರಿ ಜನದ ಬಳಿವಿಡಿದು ಸಕಲ ಭುವನವನೀ ತೆರದೋಳ್ ತಿರುಗುವುದೆಂಬುದಂ ತೋರುವಂತೆತ್ತಂ ಹೊಡೆದು ಗಾಣಮುಂ ತಿರಿಗಿಸುತ್ತೀ ತೆರದಿಂ ಕೆಲವುಂ ದಿನವಿರೆ ಮಂಗಳ ಸೇವ್ಯನ ಸಂಗದಿಂ ಕಲ್ಲಿಸೆಟ್ಟಿಯು ದರಿದ್ರಂ ಹರಿದು ಹಾರೆ ಸಂಪದವೇರೆ ಸುಖಿಯಾಗಿರ್ದೊಂದು ದಿನಂ ರಾತ್ರಿಯೊಳ್ ನಮಗೀ ಹಿಂಡಿಯ ಮರುಳನ ಬರವಿಂ ಲೇಸುಗಳೊದವಿತ್ತೆಂದು ಕಾರಣಿಕನಾಗದೆ ಮಾಣನೆಂದು ಹೆಂಡತಿಯೊಡನೆ ನುಡಿವುತ್ತಿರೆ ಭೋಂಕನೆ ತನ್ನ ಕೆಟ್ಟ ಕಣ್ಬಂದಿರೆ ಕೌತುಕದಿಂ ಸತಿಯ ಮೊಗಮುಂ ನೋಡಲ್ಕಾಕೆಯ ಕಣ್ಬಂದಿರೆ ಬೆರಗಾಗಿ ಹೊರಗಣೆತ್ತಂ ನೋಳ್ಪೆನೆಂದು ಬರ್ಪಾಗಳೆತ್ತಿನ ಕಣ್ಬಂದಿರೆ ರೇವಣದೇವನೆತ್ತಂ ನೋಯಿಸಲೇಕೆಂದದಂ ಬಿಟ್ಟು ಕೊಟ್ಟಿಗೆಯ ಧವಳಾರದ ಕತ್ತರಿಯ ಸಿರಿ ಮಂಚದ ಮೇಲೆಣ್ಣೆ ಬತ್ತಿಯ ಹಂಗಿಲ್ಲದ ಬೆಳಗಿನೋಳ್ ದಿವ್ಯಾಂಗನೆಯರಿಂ ಪದತಳವನೊತ್ತಿಸಿಕೊಳುತ್ತಿರ್ಪ ನಿತ್ಯಸಿಳಯನಂ ಕಂಡು ಕಲ್ಲಿಶೆಟ್ಟಿ ಕೌತುಕಂಬಟ್ಟು ನೋಡಲಮ್ಮದೆ ಮೆಯ್ಯಿಕ್ಕಿ ಬೀಳ್ದು ದೇವರ ದೇವ ಕರುಣಿಪುದೆಂದು ಚರಣಮುಂ ಪಿಡಿದಿರ್ದ ತಿಲಘಾತಕನನೆತ್ತಿ ಮಸ್ತಕದೊಳು ಹಸ್ತಮನಿಟ್ಟು ತೆಲ್ಲಿಗಂಗೆ ತವನಿಧಿಯುಂ ಕೊಟ್ಟುದರಿಂದಿವ ನರಿದ ಸನ್ನಿರಲಾಗದೆಂದು

ಮಂಗಳವಾಡಕ್ಕೆ ಬಂದು ಪುರದ ರಾಜವೀಧಿಯೋಳ್ನಡೆತರ್ಪಾಗಳ್ ಧನದೋಳ್ಪಡಪೆ ರೂಪು ಗುಣದೊಳ್ಸಿರಿವಂತೆಯುಪ್ಪಳೊಪ್ಪಳ್ಮಾಯಿದೇವಿ ಎಂಬ ಪಣ್ಯಾಂಗನೆಯುಂ ಕಂಡಲ್ಲಿ ನಿಂದವರ ಮನೆಯ ಕೀಳ್ಗಾಡಿಯೊಳ್ ಬಳಲ್ದಂತೆ ಕುಳ್ಳಿರಲಾ ಸೂಳೆ ಕಂಡೆಲೆಯುಯ್ಯ ಅಕ್ಕಟಿಲೆ ಮರುಳ್ಗೆಯ್ಯ ಎಲೆ ಅರಿಮರುಳ ಅನ್ನವನುಣಲ್ಪಡೆಯದೆ ಬನ್ನಬಟ್ಟುದರಿಂದೆಮ್ಮ ಮನೆಗೊಪ್ಪೊಪ್ಪ ಕಂಬಿಯಗ್ಗವಣಿಯುಂ ತಂದೆಮಗುಳ್ಳಂಬಕಳಮನುಂಡು ಸುಖಿಯಾಗಿರ್ಪುದೆನಲಾ ಮಾತಂ ಕೈಕೊಂಡು ಅಂತವರ ಮನೆಯೊಳ್ ಶಿವನ ಬೆಸನಿಂ ಕೆಲವು ದಿನವಿರಲತ್ತಲ್

ಲಂಕೆಯೊಳ್ ರಾವಣಂ ರಾಮನ ಸರಳಿಂದಳಿವಲ್ಲಿ ವಿಭೀಷಣನಂ ಕರೆದೊಂಬತ್ತು ಕೋಟಿ ಶಿವಲಿಂಗ ಪ್ರತಿಷ್ಠೆಯುಂ ಮಾಳ್ಪೆನೆಂದು ಕೈಕೊಂಡ ನೇಮಕ್ಕಿಂದಿಂಗೆ ಆರುಕೋಟಿಯುಳವಟ್ಟುವಿನ್ನು ಮೂರು ಕೋಟಿ ಶಿವಲಿಂಗಮುಂ ಬಿಜಯಂಗೈಸಿ ಎನ್ನ ಮೋಕ್ಷಪಥಕ್ಕೆ ಸಲಿಸುವುದೆಂದು

ಬೇಡಿಕೊಳ್ಳುತ್ತಿರ್ಪ ಸಮಯದೊಳ್ ವಿಭೀಷಣಂ ಪಚ್ಚೆ ಪಸಿಯಚ್ಚೆ ವೈಷ್ಣವನಪ್ಪಂ ಕಾರಣದಿಂ ರಾವಣನಾಗಿಂತೆಂದಂ ಲಿಂಗಪ್ರತಿಷ್ಠೆಯತ್ಯಂತರಿದದರಿಂ ಸುಲಭವಪ್ಪ ನಾರಾಯಣ ಪ್ರತಿಷ್ಠೆಯಸೊಂಬತ್ತು ಕೋಟಿಯಂ ಮಾಡ ಲಕ್ಕುಮೆನೆ ರಾವಣಂ ಮರಣಾವಸ್ಥೆಯಾದೊಡಂ ಮುಗುಳ್ನಗೆ ನಗುತಂ ಕೇಳೆಲೆ ಮರುಳ್ನಿನ್ನ ನೆಚ್ಚಿನ ನಾರಾಯಣಂ ದಶಾವತಾರವಾದ ದೋಷ ಪರಿಹಾರಕ್ಕೆ ಮೊದಲೊಳಿಲ್ಲಿ ಮತ್ಸ್ಯಕೇಶ್ವರ ಲಿಂಗ ಪ್ರತಿಷ್ಠೆಯಂ ಮಾಡಿ ದನದು ಹಿಂದಣ ಮಾತದಂತಿರ್ಕೆ. ಇಂದೀಗಳ್ ಸಹಸ್ರ ವೇದಿಯಪ್ಪೆನ್ನ ಕೊಂದ ಬ್ರಹ್ಮೇತಿಯಂ ಲಂಕೆಯಿಂ ಗಂಧಹಾರನ ಪರ್ವತ ಕಡೆಯಾಗಿ ರಾಮ ಶಿವಲಿಂಗವಂ ಪ್ರತಿಷ್ಠೆಯಂ ಮಾಡಿದನಲ್ಲದೆ ತಾನೆ ಕಳೆದುಕೊಳ ಲಾರದ ನಾರಾಯಣ ಹೆಸರ ರೂಹಿಂದೊಂದು ಗತಿಯುಂಟೆಂದು ನುಡಿವ ನಿನ್ನೊಡನೇನೆಂದಪೆಂ ಮಾತಂ ಬಿಟ್ಟು ಕಳೆದು ಮೂರು ಕೋಟಿ ಶಿವಲಿಂಗ ಪ್ರತಿಷ್ಠೆಯಂ ಮಾಳ್ಪುದೆಂದು ರಾವಣನಂದು ನಾಕಲೋಕಕ್ಕೆ ನೆಗೆವುತಂ

ನಂಬುಗೆಗೊಂಡ ಪುಣ್ಯ ವಚನಮಂ ವಿಭೀಷಣಂ ನೆನೆದು ನೋಡುತುಂ ನೂರಾರಲ್ಲ ಮೂರು ಕೋಟಿ ಶಿವಲಿಂಗ ಪ್ರತಿಷ್ಠೆಯಂ ಮಾಳ್ಪ ವರಿದದಕ್ಕೆಂತು ಮಾಳ್ಪೆನೆಂದು ನಡೆತಂದು ಮತ್ಸ್ಯಕೇಶ್ವರ ಲಿಂಗೋಪಾ ವಸ್ತೆಯಂ ಮಾಡಿದೊಡೆ ದೇವರ್ಕರುಣಿಸಿ ಉತ್ತರ ದಿಶಾಭಾಗದೊಳಗೆನ್ನ ಮಗನಧಿಕತರ ಪಾರಮಾರ್ಥನಪ್ಪ ರೇವಣಸಿದ್ಧನಿರ್ಪನಾತಂಗೆ ಕುಂಡಲಂ ಕಂಥೆ ಲಾಕುಳಂ ಮೆಟ್ಟುದಾವುಗೆಯ ನೆಟ್ಟನೆಯ ಕುರುಪದಲ್ಲಿಪೆಯುಂ ಎವನ್ಮಾತನೆಲ್ಲಿರ್ದೊಡಲ್ಲಿ ಸುವೃಷ್ಟಿ ಸುಫಲ ಸಂಪದಂ ತಪ್ಪದೀ ತೆರದೊಳರಿ ದಾತನನರಸಿ ತರ್ಪುದೆಂದು ವಿಭೀಷಣಂಗೆ ಬೆಸಸಿ ಮಹಾಪ್ರಸಾದವೆಂದು ಲಂಕೆಯಿಂ ಪೊರಮಟ್ಟು ತಾಂ ಕಾಮರೂಪನಪ್ಪುದರಿಂ ದ್ರಾವಿಡ ಚೇರ ಕೇರಳ ತೆಲುಂಗ ಕೊಂಕಣ ಕರ್ಣಾಟ ಕಾಶ್ಮೀರ, ಕಳಿಂಗ ವಂಗ ಬಂಗಾಳ ಲಾಳ ಗೌಳ ದೇಶಂಗಳಾದಿಯಾದ ದೇಶಂಗಳಂ ಪೊಕ್ಕವರ ವರ ವೇಷದಿಂದರಸುತ್ತಂ ಬಂದೆಲ್ಲಿಯುಮಾ ಕುರುಪಂ ಕಾಣಪೆ ಬರೆವರೆ

ಮುಂಪೆ ವಿಪುಳ ಫಲವಾದ ಮಂಗಳವಾಡದ ಭೂಮಿಯ ಸೊಂಪು ಸಂಪದಮಂ ಕಂಡು ಇಲ್ಲಿರವೆ ಮಾಣ. ಆವ ದೇಶದೊಳೀ ಸಿರಿ ಇಲ್ಲೆ ನುತ್ತಂ ಆ ಪಟ್ಟಣದ ಹೊರವೊಳಲ ಕೆರೆಯ ಕಡೆಯಣ ವಟವೃಕ್ಷದ ನೆಳಲೊಳ್ ವಿರೂಪಾಕ್ಷಸಿದ್ಧನೆಂಬ ನಾಮಮಂ ಕೈಕೊಂಡು ಕುಳ್ಳಿರ ಲಲ್ಲಿಗೆ ರೇವಣಸಿದ್ಧಂ ಗುಪ್ತವೇಷಧರಂ ಪುರಮಂ ಪೊರಮಟ್ಟೊಂದೆರಡು ಬ್ರಹ್ಮಾಂಡದ ಭಾರಮಂ ಧರಿಯಿಸುವಡಾನೆ ಸಾಲ್ಪೆನೆಂಬಂತೆ ಕಂಬಿಯುಂ

ತೊಡರ್ಚಿದೆರಡು ಘಟ ಸಹಿತಂ ಬಂದು ಕೆರೆಯೊಳ್ಪೊಕ್ಕು ಬ್ರಹ್ಮಾಂಡದ ಜೀವರಾಶಿಯುಂ ತೀವುವಂತೆ ಕಂಬಿಯ ಕೊಡಂಗಳಂ ತೀವುತ್ತಿರೆ ವಿಭೀಷಣನಹಿ ಭೂಷಣಂ ಬೆಸಸಿದ ಕುರುಪಂ ಕಂಡು ಬರ್ದುಂಕಿದೆನೆನುತ್ತಂ ಹಿಂದೆ ಹಿಂದೆ ಕಾಣ್ಬಳಿಕೆಯೊಳ್ಬಂದು ಮನೆಯನರಿದು ಮಾಯಾದೇವಿಯುಗೋತ್ತೆಯುಂ ಕೊಟ್ಟಂದಿನ ಮಧ್ಯರಾತ್ರಿಯೊಳ್ವಿರೂಪಾಕ್ಷಸಿದ್ಧಂ ರೇವಣತಂದೆಯು ಇರವಂ ನೋಳ್ಪೆನೆಂದು ಕದವಂ ತೆರೆದು ಪೊರಗಂ ನೋಡೆ ಮುಂದಣ ಜಾವದೊಳಗೆ ಧ್ಯಾನಂ ತೊಳಗೆ ನಿರುಪಾಧಿಕ ಜ್ಯೋತಿ ಥಳಥಳಿಸಿ ಬಿಸಿಲ ಬೆಳಗು ಬೆಳ್ದಿಂಗಳ ತಂಪಂ ಕರೆದಪುದೆನಿಸುವ ತಣ್ಪೆಳಗಿನೊಳ್ ಲಕ್ಷ್ಮಿ ಸರಸ್ವತಿ ಶಚಿಯರ ಕೆಯ್ಯಿಂ ಪದತಳಮನೊತ್ತಿಸಿಕೊಳುತಿರ್ಪ ನಿಜ ಸಿದ್ಧನಂ ಕಂಡು ವಿರೂಪಾಕ್ಷಸಿದ್ಧಂ ವ್ಯೆಯಿಕ್ಕಿರೆ ರೇವಣತಂದೆಯರಿದು ಮುನ್ನಿನ ವಿಭೀಷಣ ರೂಪಂ ಬಿಟ್ಟು ಭೀಷಣ ರೂಪಂ ಕೈಕೊಂಡೇಕೆ ಬಂದೆ ಎಂದು ಬೆಸಸೆ ದೇವದೇವ ಲಂಕೆಯೊಳ್ ತ್ರಿಕೋಟಿ ಶಿವಲಿಂಗ. ಪ್ರತಿಷ್ಠೆಗೆ ಸಕಳಾಚಾರ್ಯನಪ್ಪ ನಿನ್ನನರಸಿ ಬಂದೆನೆಂದು ಬಿನ್ನವಿಸುತಿರ್ಪ ಸಮಯದೊಳರುಣೋದಯಮಾಗಲಿದೆಲ್ಲ ಮಾಯಿದೇವಿ ಕಂಡು ಪದದೋಳ್ಬಿದ್ದು ನಿಮ್ಮ ನಿಲವನರಿಯದೆ ಬೆಸಗೆಯ್ಸಿಕೊಂಡ ಕರ್ಮಿ ಜೀವಿಗೆ ಸರ್ವಾಪರಾಧಿಗೆ ಕರುಣಿಪುದೆನೆ ಕೃಪೆಯಿಂ ನೋಡಿ ವಿಭೂತಿಯನೆರಡೆಡೆಯೊಳಿಡಿಸಿ ಒಂದಂ ಮುಟ್ಟೆ ಶಿವಲಿಂಗವಾಗೆ ಮತ್ತೊಂದಂ ಮುಟ್ಟೆ ಹೊನ್ನ ರಾಶಿಯಾಗೆ ಈ ಹೊನ್ನಂ ಕೊಂಡೀ ಶಿವಲಿಂಗವನಾರಾಧಿಸುತ್ತಿರ್ಪುದೆಂದು ಕಲೆಯೊಳ್ಕೈಯ್ಯಿಟ್ಟು ವಿಭೀಷಣ ಸಹಿತಂ ಲಂಕೆಗೆ ನೆಗೆದು ಸಮುದ್ರ ಮಧ್ಯದ ಮತ್ಸ್ಯಕೇಶ್ವರನ ಸಮಕ್ಷದೊಳ್ ಮಾಡಿದ್ದೇ ಮುಹೂರ್ತವಾಗೆ ಮೂರು ಕೋಟಿ ಶಿವಲಿಂಗ ಪ್ರತಿಷ್ಠೆಯುಂ ಮಾಡಿ ಮಜ್ಜನ ಪೂಜೆಯಾರೋಗಣೆ ನಿರಂಜನಾದಿಗಳುಂ ಕುಂದಲಾಗದೆಂದು ವಿಭೀಷಣಂಗೆ ನಿಯಾಮಿಸುತ್ತಾತಂಗೆ ಬೀಳ್ಕೊಂಡು ರೇವಣಸಿದ್ಧಂ ದುರಿತವ್ರಜವಿರುದ್ಧಂ ಶಿವಜ್ಞಾನ ಪ್ರಬುದ್ಧಂ ಲೋಕಪ್ರಸಿದ್ಧಂ ಸಮಗ್ರ ತೇಜೋವಿಲಸಿತಂ ಜಲಧಿಯುಂ ಪೀರ್ದುಂ ತಣಿಯದೆ ನಭದ ನವಿಗೆ ಧೀಂಕಿಡುವ ವಡಬಾನಲನಂತೆ ಸಮುದ್ರ ಮಧ್ಯದ ಲಂಕೆಯಿಂ ಭೋಂಕೆನೆ ಗಗನ ತಳಕ್ಕೆ ನೆಗೆದನಂತುಮಲ್ಲದೆಯುಂ.

ದ್ವಿತೀಯಸ್ಥಲ ಸಂಪೂರ್ಣಂ

---

## ತೃತೀಯಸ್ಥಲ.

→✻*✻←

**ವೃತ್ತಃ**— ಪದೆದು ಮರುನ್ನದೀತಟದ ತಾವರೆ ಪೂಗಳನೆತ್ತಿಪಾರಿಜಾ. ।
ತದ ಕುಸುಮಂಗಳಂ ತಿರಿದು ಕಾಶಿಯೊಳೊಪ್ಪುವ ವಿಶ್ವನಾಥನಂ ॥
ಪದವುಳ ಹೇಮಕೂಟ ಪತಿಯಂ ಶ್ರೀ ಪರ್ವತ ಮಲ್ಲಿನಾಥನಂ ।
ಪದವಿನೊಳಷ್ಟಷಷ್ಟಿ ಶಿವಲಿಂಗವನರ್ಚಿಸುತಿರ್ದನಳ್ಕರಿಂ ॥

**ರಗಳೆ**

ಅಂತಿರ್ದು ಮತ್ತೆ ಮಂಗಳವಾಡದೊಳ್ಪೊಕ್ಕು
ಸಂತತಂ ಬಿಜ್ಜಳನ ಸಭೆಯೋಳ್ಮನಂ ಮಿಕ್ಕು
ಪಾಣಿಪಾತ್ರಿಯನಾಂತು ನಿಂದಿರ್ಪ ಸಮಯದೊಳ್
ಜಾಣನಲ್ಲದ ನೃಪತಿ ಪರಕಿಸುವ ಚಿತ್ತದೊಳ್
ಕುದಿವೋಗರವನಿಕ್ಕಿಸಲ್ಕಾಗುತೆ ಕೈಕೊಂಡು
ಪದವುಳ ಕಂಭದೋಳ್ ಕೈದೊಡೆಯಲುರಿಗೊಂಡು
ಅರಮನೆಯ ಮನೆಗಳೊಳಗುರಿ ಭುಗಿಲ್ಭುಗಿಲಿಡಲು
ತರತರದ ಉಪ್ಪರಿಗೆಯೊಳಗೆಯುರಿ ಭುಗಿಲೆನಲು
ಓಲಗದ ಮನೆಯುರಿಯಲಾನೆ ಸಾಲೆಗಳುರಿಯೆ
ಮೇಲೆನಿಪ್ಪುಪ್ಪರಿಗೆ ತುರಗ ಸಾಲೆಗಳುರಿಯೆ
ಕಂಡು ಬಿಜ್ಜಳನಲ್ಲಿ ನಡುಗಿ ಚರಣಕ್ಕೆರಗೆ
ತಂಡದುರಿ ನಿಂದು ತಣ್ಪಿನ ಸೋನೆ ಮಳೆ ಮಸಗೆ
ಬೆರಗಾಗಿ ಬಿಜ್ಜಳಂ ನೀವೆನಗೆ ಕರುಣಿಪುದು
ಕರೆಗೊರಲನವತಾರ ಸುಖದೊಳಾರೋಗಿಪುದು
ಎಂದೊಡಾ ಪ್ರೊರ್ಬರುಂಬುವರಲ್ಲ ಕೇಳರಸ
ಇಂದು ನಿನ್ನಯ ಕಟಕವೆಲ್ಲಂ ಸಹಿತಲರಸ
ಆರೋಗಿಸುವೆನೆನಲ್ಕೇವ ನಾನಾರ್ಪೆನೇ
ಈ ರಾಜ ಕಟಕಕ್ಕೆ ವೊಗಸಲಾನಾರ್ಪೆನೇ
ಆರೆನೆನೆ ನೀನಂಜಲೇಕೆ ಬಿಜ್ಜಳ ಕೇಳ
ಸಾರೆನುತ್ತಿಲ್ಲರ್ಗೆ ದೇವರಿರ್ದಪ ಕೇಳ
ಎಂದೈದು ಮಾನಕ್ಕಿಯೈದು ಸೊಲ್ಲಗೆ ತುಪ್ಪ

ದಿಂಪೆ ಕಟಕವನೂಡುತಿರ್ದನಿಂತರಿದಪ್ಪ
ಸಿದ್ಧನಾ ಕಟಕವಂ ಕರುಣದಿಂದಂ ತಣಿಪಿ
ಉದ್ಧತನೆನಿಪ್ಪ ಬಿಜ್ಜಳನ ಗರ್ವವನಿಳುಪಿ

ಅಲ್ಲಿಂದ ನೆಗೆದನಾ ಕೊಲ್ಲಾಪುರಕ್ಕಾಗಿ
ಬಲ್ಲಿದಂ ಸಕಳ ಸಾಮರ್ಥ್ಯ ಭೂಷಿತ ಯೋಗಿ
ಬಂದು ದಿವ್ಯಾ ಪುರದ ಬಾಗಿಲೊಳ್ಪುಗುವಲ್ಲಿ
ಸಂದ ನಿರುಪಮಸಿದ್ಧನೆಂದರಿಯದವರಲ್ಲಿ
ಏಕೆ ಪೊಕ್ಕಪೆ ಸಿದ್ಧ ಸಾಮರ್ಥ್ಯಯುತರುಂಟು
ಏಕೆ ಕೆಟ್ಟಪೆ ಬರ್ದುಕಿ ಪೋಗು ಬಲ್ಲಿದರುಂಟು
ಎನುತಂ ಗತಿ ಸ್ತಂಭವಂ ಮಾಡೆ ಮೀರುತುಂ
ತನತನಗೆ ಪೊರ್ದಲಮ್ಮದೆ ತೆರನ ಮಾಡುತುಂ
ನೆರೆ ಗತಿಸ್ತಂಭವಂ ಮಾಡಿದರ್ನಡೆಗೆಡಲ್
ಉರೆ ಜಿಹ್ವೆಯುಂ ಕಟ್ಟಿದವರೆಲ್ಲ ನುಡಿಗೆಡಲ್
ಏನೇನು ಕುಟಿಲಮಂ ಮಾಡಿದುದು ತಮಗಾಗೆ
ನಾನಾ ವಿಧದ ಕ್ಷುದ್ರ ವಿದ್ಯೆ ತಾಗದೆ ಪೋಗೆ
ನಸು ನಗುತೆ ನಡೆದು ಗೋರಕನಾಥನಿಳಯದೊಳು
ಎಸೆವ ದಿವ್ಯಾನಿಕರ ವೋಲಗಿಪ ನಿಳಯದೊಳು
ಬಂದಲ್ಲಿ ಪಾಣಿಪಾತ್ರೆಯನೊಪ್ಪದಿಂ ಬೇಡೆ
ಅಂದು ಗೋರಕನಾಥನಲ್ಲಿ ಕಟಕಿಯನಾಡೆ
ದೇವ ಶಿವಸಿದ್ಧನೀತಂ ಭೀತಿಯಾದಪುದು
ಭಾವಿಸುವೊಡೀ ನಿಲವು ದನುಜಮನುಜರ್ಗರಿದು
ಎನುತಲ್ಲಿ ಹಿರಿಯ ಲಕ್ಕಾದೇವಿ ನುಡಿವುತಿರೆ
ಮನದೊಳಗೆ ಗೋರಕಂ ಲೆಕ್ಕಿಸದೆ ನಗುತಮಿರೆ
ಚಿಕ್ಕ ಲಕ್ಕಾದೇವಿ ಪಾಣಿಪಾತ್ರೆಗೆ ತಂದು
ಇಕ್ಕಿದಳ್ ನಸುನಗುತೆ ಹೊಸ ಕಠಾರಿಯನಂದು
ಇಕ್ಕೆ ರೇವಣಸಿದ್ಧನಲ್ಲಿ ಬಿಸುಗಣ್ಣಿಂದೆ
ಮಿಕ್ಕು ನೋಡಿದೊಡೆ ಲೋಹವ್ವು ಕರಗೆ ಭರದಿಂದೆ
ಒಡನೆ ಕೈಕೊಂಡನಾ ಲೋಹ ರಸ ಭಿಕ್ಷಮಂ
ಮಾಡಿತ್ತು ತಾನೊಡೆದು ಗೋರಕನ ವಕ್ಷಮಂ

ಕುಳ್ಳಿರ್ದನುರದೊಳಗೆ ಮೂಡಿದ ಕಠಾರಿಯುಂ
ತಳ್ಳಂಕದಿಂದೆ ನೋಡುತ್ತೆ ಮಾರಾರಿಯುಂ
ಹಿರಿಯು ಲಕಾಪ್ಪದೇವಿ ಗಳಗಳನೆ ನಡೆತಂದು
ಚರಿತದಿಂ ಮಹಲಕ್ಷ್ಮಿಗರುಪೆ ಭರದಿಂ ಬಂದು
ಉತ್ತುಮಾಂಗ ಸ್ಥಲದ ಶಿವಲಿಂಗ ಸಂಪನ್ನೆ
ಉತ್ತುಮ ಶಿವಾಚಾರನಿಧಿ ಲೋಕದೊಳ್ಚನ್ನೆ
ನಡೆತಂದು ಸಿದ್ಧರೇವಣ ಯತಿಗೆ ಶರಣೆಂದು
ನಡನಡಂ ನಡುಗಿ ಕರುಣಿಪುದು ಕರುಣಿಪುದೆಂದು
ಮುಂದರಿಯದವರ್ಗೆ ಮುನಿವರೆ ಸಿದ್ಧಕುಲಪತಿಯೆ
ಇಂದು ಕರುಣಿಸುವುದೆನಗಾಗಿ ಸಿದ್ಧರ ಗತಿಯೆ
ಎಂದೊಡಾ ಬಾಲ್ಗಡಲ ಮಗಳ ಮಾತಂ ಸಲಿಸಿ
ಅಂದುಗುಳ್ದನಾ ಲೋಹರಸವೆಲ್ಲ ಮೋಕರಿಸಿ
ಉಗುಳ್ದಂ ಕಠಾರಂ ಕಳಲ್ಚಿ ಬಿದ್ದುದು ನೋಡ
ಮಿಗೆ ಕೌತುಕಂ ಬಟ್ಟರಾ ಸೇವ್ಯರುಂ ನೋಡ

ಇಂತು ಕೊಲ್ಲಾಪುರದೊಳತಿ ಮಹಿಮೆಯಂ ತೋರಿ
ಮುಂತೆ ಪುರಜನವೆಲ್ಲ ನೋಡುತ್ತಲಿರೆ ಮೀರಿ
ನೆಗೆದನಾಕಾಶಕ್ಕೆ ಸಿದ್ಧ ರೇವಣನಂದು
ಬಗೆಮಿಗಿಲ್ವಾರಣಾಸಿಯೊಳು ನಿಂದಂ ಬಂದು

ಇರಲಿತ್ತಲತ್ತ ಮಂಗಳವಾಡದೊಳಗಿರ್ಪ
ನರಪ ಬಿಜ್ಜಳರಾಯನೋಲಗದೊಳಿಸೆದಿರ್ಪ
ಸಮಯದೊಳ್ಮಾತು ಮಾತಿಂ ಮಾಸನೂರಲ್ಲಿ
ವಿಮಳ ನದಿಯೊಳಗೆ ತೋರ್ಪುದು ಸುರಿಗೆ ತಾನಲ್ಲಿ
ಅರಿಂಗಸಾಧ್ಯವದು ತೆಗೆಯಬಾರದು ದೇವ
ಆರ ಸಾಮರ್ಥ್ಯಮಂ ಕೊಳ್ಳದಿನ್ನೆಲೆ ದೇವ
ಎಂದೊಡಾ ಸುರಿಗೆಯುಂ ತೆಗೆಯಬಲ್ಲವರುಂಟೆ
ಇಂದೆನ್ನ ಕೈಸಾರ್ದೊಡೆನಗೆ ತೀರದುದುಂಟೆ
ಎನುತಲ್ಲಿ ಪತ್ರಂ ಸಹಸ್ರ ಹೊನ್ನಂ ಕಟ್ಟಿ
ಮನ ಒಲಿದು ನೆರೆ ಕಳಿಸುತಿರ್ದನರ್ಥಂ ಮುಟ್ಟಿ

ಕಳುಪೆ ಬಂದರಸುತ್ತಿ ದೇಶದೇಶದೊಳೆಲ್ಲ
ತೊಳಲುತ್ತಮಿರೆಬಂದನತಿ ಕುಹಕಮಂ ಬಲ್ಲ
ಕಪ್ಪರನೆಸಪ್ಪ ಬಹು ಕುಟಿಲ ಕುಹಕದ ಜೋಗಿ
ಒಪ್ಪುವ ಸಹಸ್ರ ಯೋಗಿಣಿಯರ್ಗೆ ಪತಿಯಾಗಿ
ಬಂದು ಬಿಜ್ಜಳ ಕೇಳು ಸುರಿಗಿಯಂ ತೆಗೆದಪೆಂ
ಒಂದುಂಟು ಮಾಳ್ಪುದು ನಿನಗದಂ ಪೇಳ್ದಪೆಂ
ಕನ್ನಿಕೆಯರಂ ಪನ್ನೆರಡು ಸಾವಿರವನಿಕ್ಕೆ
ಚೆನ್ನ ಸುರಗಿಯುನಿಂತು ತೆಗೆದಪೆಂ ನಿಮಿಷಕ್ಕೆ

ಎನಲೊಡಂಬಟ್ಟು ಬಿಜ್ಜಳನಲ್ಲಿ ಮರುಳಾಗಿ
ಮನವಾರೆ ಕಪ್ಪರನ ಕುಹಕಕ್ಕೆ ವಶವಾಗಿ
ನಾಡೊಳಗೆ ನೋಡಿ ಕನ್ನಿಕೆಯರಂ ನೆರಪಿದಂ
ಬೀಡಿನೊಳಗಣ ಕುಮಾರಿಯರ ನೆಳತರಿಸಿದಂ
ನಾಡೆಲ್ಲ ಕಣ್ಣನೀರಿಂದೆ ಕರ್ರಗೆ ಕರಗೆ
ಬೀಡೆಲ್ಲ ಗೋಳಿಟ್ಟು ಮೊರೆಯಿಟ್ಟು ಸೆರೆ ಕೊರಗೆ
ತಂದೆತಾಯ್ಗಳ್ಮೊರೆಯಿಡುತ್ತಮಿರೆ ತರಿಸಿದಂ
ನಿಂದ ಬಂಧುಗಳೆಲ್ಲ ಮುಯ್ಯಲಿಡೆ ತರಿಸಿದಂ
ಪನ್ನೆರಳ್ಸಾಸಿರಕ್ಕೊಬ್ಬಳೆ ಕೊರತೆಯಾಗೆ
ಮನ್ನಿಸದೆ ಕೂಡಿದಂ ಭೂತಳಂ ಬೆರಗಾಗೆ
ಇನ್ನೊಬ್ಬಳೇ ಕೊರತೆ ಎಂತು ಮಾಡುವೆನೆಂದು
ತನ್ನ ಪುರದೊಳಗೆ ಶೋಧಿಸುತೆ ಬರವರಲಂದು

ಅಲ್ಲಿ ರೇವಣಸಿದ್ಧನಣುಗಿ ತಾನೆಸೆದಿರ್ದ
ಸಲ್ಲಲಿತೆ ಮಾಯಿದೇವಿಯ ಪುತ್ರಿಯಾಗಿರ್ದ
ಚನ್ನ ರೇವಣದೇವಿಯನ್ನರಸಿ ಸೆರೆ ವಿಡಿಯೆ
ಕನ್ನೆ ಬಾಯಂ ಬಿಡುತ್ತಲ್ಲಿ ತಾಯಂ ಕರೆಯೆ
ಜನನಿ ಬಸಿರಂ ಹೊಸೆದುಕೊಂಡಿದೆಲ್ಲಿಯ ಮಾರಿ
ನಿನಗೆ ಬಂದುದೆ ಮಾಸನೂರ ಸುರಿಗಿಯ ಬಾರಿ
ಎಂದೊಟ್ಟೆಯೊರಲುತ್ತಲಿನ್ನಾರ್ಗೆ ಪೇಳ್ದಪೆಂ
ಸಂವ ಭೂಪಂ ತಾನೆ ಪಿಡಿಯಲಾರ್ಗಂದಪೆಂ

## ಅಂಬಿಗರ

# ಚೌಡಯ್ಯನ ವಚನಗಳು.

### ದೇವರ ಸ್ವರೂಪು.

**ವಿವರಣೆಃ**— ದೇವರ ಸಂಬಂಧವಾಗಿ ಇದ್ದ ವಿಚಾರಗಳ ಮೇಲೆ ಧರ್ಮದ ಸ್ವರೂಪು ಅವಲಂಬಿಸಿರುತ್ತದೆ. ಹಿಂದೂಧರ್ಮದಲ್ಲಿ ಕಾಲ ಕಾಲಕ್ಕೆ ಅನೇಕ ಮತಗಳೂ ಸಿದ್ಧಾಂತಗಳೂ ಉಂಟಾಗಿವೆ. ಇವು ಉಂಟಾಗಲಿಕ್ಕೆ ದೇವರ ಸ್ವರೂಪದ ವಿಷಯದಲ್ಲಿ ಇರುವ ಭಿನ್ನಾಭಿಪ್ರಾಯಗಳೇ ಕಾರಣವಾಗಿವೆಂದು ಹೇಳಬಹುದು. ವೇದಕಾಲದಲ್ಲಿ ಆರ್ಯರು ಸೃಷ್ಟಿಯಲ್ಲಿ ಕಂಡುಬರುವ ಚಮತ್ಕಾರಗಳನ್ನು ನೋಡಿ ಅವೇ ದೇವರೆಂದು ಭಾವಿಸಿದರು. ಆದ್ದರಿಂದ ಋಕ್ಕುಗಳಲ್ಲಿ ಪರ್ಜನ್ಯ, ಅಗ್ನಿ, ವಾಯು, ವರುಣ, ಸೂರ್ಯ ಮೊದಲಾದವುಗಳ ಸ್ತೋತ್ರಗಳಿರುತ್ತವೆ. ಆದರೆ ಈ ವಿಚಾರಗಳು ಮುಂದೆ ಬರಬರುತ್ತ ಬದಲಾಗುತ್ತ ಹೋದವು. ಉಪನಿಷತ್ತಿನ ಕಾಲದಲ್ಲಿ ದೇವರು ಒಬ್ಬನೇ ಇದ್ದಾನೆ, ಮತ್ತು ಅವನು ಚರಾಚರ ವಸ್ತುಗಳಲ್ಲಿ ತುಂಬಿಕೊಂಡಿರುತ್ತಾನೆ ಎಂಬ ವಿಚಾರಗಳು ಹೊರಬೀಳಹತ್ತಿದವು. ಆಗ್ಗೆ ಹಿಂದೂ ಧರ್ಮದ ಸ್ವರೂಪದಲ್ಲಿ ಬದಲಾಯಿತು. ಮತ್ತು ಮುಂದೆ ಈ ಸ್ವರೂಪು ಪೌರಾಣಿಕ ಕಾಲದಲ್ಲಿ ಮತ್ತಿಷ್ಟು ಬದಲಾಯಿತು. ಆಗ್ಗೆ ಬ್ರಹ್ಮ, ವಿಷ್ಣು, ಶಿವ, ಪಾರ್ವತಿ, ಲಕ್ಷ್ಮೀ ಎಂಬ ಮೊದಲಾದ ಅನೇಕ ದೇವತೆಗಳು ಪ್ರಾದುರ್ಭಾವ ಹೊಂದಿದವು. ಆಗ ಅವುಗಳ ಬಗ್ಗೆ ಅನೇಕ ಕಟ್ಟುಕಥೆಗಳು ಉತ್ಪನ್ನವಾದವು. ಈ ಕಥೆಗಳಿಗನುಸರಿಸಿ ಆಯಾ ದೇವತೆಗಳ ನಾನಾಬಗೆಯ ಆರಾಧನೆಗಳೂ ಪ್ರಾರಂಭವಾದವು. ಹೀಗೆ ದೇವರ ಸಂಬಂಧದ ವಿಚಾರಗಳಲ್ಲಿ ಹೆಚ್ಚುಕಡಿಮೆಯಾದ ಹಾಗೆ ಮೋಕ್ಷದ ಕಲ್ಪನೆಯೂ ಆಚಾರ ವಿಚಾರಗಳ ಪದ್ಧತಿಯೂ ಬದಲಾಗುವದು ತೋರಿಬರುತ್ತದೆ. ಆದರೆ ವೀರಶೈವರಲ್ಲಿರುವ ದೇವರ ಸಂಬಂಧದ ವಿಚಾರಗಳು ಉಪನಿಷತ್ತಿನ ಕಾಲದ ವಿಚಾರಗಳಿಗೆ ಬಹಳ ಹೋಲುತ್ತವೆ. ಅವರು ಪರಮಾತ್ಮನು ಒಬ್ಬನೇ ಇದ್ದಾನೆ, ಅವನು ವಿಶ್ವದಲ್ಲೆಲ್ಲ ಭರಿತ

ನಾಗಿದ್ದಾನೆ ಎಂದು ಭಾವಿಸಿರುವರು. ಈ ವಿಚಾರಗಳನ್ನೇ ವಚನಕಾರರು ಯಾವಾಗಲೂ ಸಮರ್ಥಿಸುತ್ತ ಬಂದಿದ್ದಾರೆ. ಅಂಬಿಗರ ಚೌಡಯ್ಯನಾದರೂ ಹೀಗೆಯೇ ತನ್ನ ವಚನದಲ್ಲಿ ಹೇಳಿರುವನು. ಅವನು ಅನ್ನುವದೇನೆಂದರೆ,

**ವಚನ:**— ೧. ಗಂಧವ ವಾಯು ಕೊಂಬಾಗ ಅದ ತಂದು ಊದಿದವರಾರು? ಮರಕ್ಕೆ ಸುಗಂಧ ನಿಂದುದಾಗ ಅದ ಬಂಧಿಸಿ ತಂದು ಇರಿಸಿದವರಾರು? ಅವು ತಮ್ಮ ಲಿಂಗದ ಭಾವದಂತೆ ನಿಂದ ನಿಜವೆ ತಾವಾಗಿ ಬೇರೊಂದು ಸಂದಿಸಲಿಲ್ಲೆಂದಾತ ನಮ್ಮ ಅಂಬಿಗರ ಚೌಡಯ್ಯನು

**ಭಾವ:**— ಜಗತ್ತಿನಲ್ಲಿ ಅನೇಕ ಸೃಷ್ಟಿ ಚಮತ್ಕಾರಗಳು ಕಂಡು ಬರುತ್ತವೆ. ಈ ಚಮತ್ಕಾರಗಳಲ್ಲಿ ವಾಡಿಕೆಯಾಗಿ ಕಂಡುಬರುವಂಥ ಕೆಲವುಗಳನ್ನು ಅಂಬಿಗರಚೌಡಯ್ಯನು ಇಲ್ಲಿ ವಿವರಿಸಿ ದೇವರ ಸಂಬಂಧದ ತನ್ನ ವಿಚಾರಗಳನ್ನು ಹೊರಗೆಡವಿರುವನು. ಅವನು ಅನ್ನುವದೇನಂದರೆ- ಸುಗಂಧದಿಂದ ಕೂಡಿಕೊಂಡು ವಾಯುವು ಬೀಸುತ್ತದೆ. ಎಂದರೆ ಈ ಸುಗಂಧವನ್ನು ಒಳಕೊಳ್ಳುವ ಗುಣವು ಆ ವಾಯುವಿನಲ್ಲಿ ಇದೆ. ಹಾಗೆಯೇ ಮರದಲ್ಲಿಯೂ ಈ ಸುಗಂಧವು ಉಂಟು. ಎಂದರೆ ಈ ಗುಣವು ಅದರಲ್ಲಿ ಸ್ವಾಭಾವಿಕವಾಗಿಯೇ ತಲೆದೋರಿರುತ್ತದೆ. ಹೀಗೆ ಜಗತ್ತಿನಲ್ಲಿ ಅನೇಕ ಬಗೆಯ ಗುಣಗಳು ಮತ್ತು ವ್ಯಾಪಾರಗಳು ತೋರಿಬರುತ್ತವೆ. ಇವುಗಳು ಹ್ಯಾಗೆ ಉತ್ಪನ್ನವಾಗುತ್ತವೆಂಬದನ್ನು ಕುರಿತು ಅಂಬಗರ ಚೌಡಯ್ಯನು ಇಲ್ಲಿ ಆಲೋಚಿಸಿ ಅಭಿಪ್ರಾಯಪಡುವದೇನಂದರೆ, "ಅವು ತಮ್ಮ ಲಿಂಗದ ಭಾವದಂತೆ ನಿಂದ ನಿಜ" ವೆಂತಲೂ ಆ "ನಿಜವೇ ತಾವಾಗಿ" ವ್ಯವಹರಿಸುತ್ತವೆಂತಲೂ, ಇದರಲ್ಲಿ "ಬೇರೊಂದು ಸಂದಿಸಲಿಲ್ಲ" ವೆಂತಲೂ ಅನ್ನುತ್ತಾನೆ. ಇದರಿಂದ ವಚನಕಾರನ ಭಾವವು ಕಂಡು ಬರುವದೇನಂದರೆ, ಲಿಂಗವು ಜಗತ್ತಿನಲ್ಲೆಲ್ಲ ತುಂಬಿಕೊಂಡಿದ್ದು ಈ ಕಳೆಯೇ ಆ ಪದಾರ್ಥಗಳ ನಿಜತ್ವವೆಂದು ತಿಳಿಯತಕ್ಕದ್ದು. ಎಂದರೆ ಆ ಪದಾರ್ಥಗಳ ನಿಜವಾದ ಸ್ವರೂಪು ಲಿಂಗವೇ ಎಂದು ಅವನ ಭಾವವು. ಮತ್ತು ಈ ನಿಜವೇ ಆ ಪದಾರ್ಥಗಳ ವ್ಯಾಪಾರಕ್ಕೆ ಕಾರಣವಾಗಿರುತ್ತದೆ. ಆದ್ದರಿಂದ ಈ ನಿಜವೇ ತಾನಾಗಿ ಆ ಪದಾರ್ಥದಲ್ಲಿ ವ್ಯವಹರಿಸುತ್ತದೆಂದು ಹೇಳಿರುವನು. ಈ ಪ್ರಕಾರ ಪದಾರ್ಥಗಳ ಸ್ಥಿತಿಗೆ ಲಿಂಗತತ್ವವೇ

ಕಾರಣವೇ ಹೊರ್ತು ಉಳಿದವು ಯಾವವೂ ಅಲ್ಲವೆಂದು ವಚನಕಾರನ ಮುಖ್ಯ ಭಾವವಾಗಿದೆ.

ಎಂದರೆ ಪರಮಾತ್ಮನು ಜಗತ್ತಿನಲ್ಲೆಲ್ಲ ತುಂಬಿಕೊಂಡಿರುವನು, ಜಗತ್ತಿನಲ್ಲಿ ಕಂಡುಬರುವ ವ್ಯಾಪಾರಗಳಿಗೆ ಅವನೇ ಕಾರಣನು, ಅವನಿಂದಲೇ ಅವು ನಡಿಯುತ್ತವೆ. ಮತ್ತು ಪರಮಾತ್ಮನಾದರೂ ಅವುಗಳಲ್ಲಿ ಬೆರೆದು ವ್ಯವಹರಿಸುತ್ತಾನೆ ಎಂಬ ಭಾವವನ್ನು ವ್ಯಕ್ತಪಡಿಸಿರುವನು.

**ವಚನ**:— ೨. ಅಸುರರ ಮಾಲೆಗಳಿಲ್ಲ, ತ್ರಿಶೂಲ ಡಮರುಗವಿಲ್ಲ, ಬ್ರಹ್ಮಕಪಾಲವಿಲ್ಲ, ಭಸ್ಮಭೂಷಣನಲ್ಲ, ವೃಷಭವಾಹನನಲ್ಲ, ಋಷಿಗಳೊಡನೆ ಇದ್ದಾತನಲ್ಲ. ಎಸಗುವ ಸಂಸಾರದ ಕುರುಹಿಲ್ಲದಾತಂಗೆ ಹೆಸರಾವುದು ಇಲ್ಲವೆಂದನಂಬಿಗಚೌಡಯ್ಯ.

**ಭಾವ**:— ಈ ವಚನದಲ್ಲಿ ಅಂಬಿಗರ ಚೌಡಯ್ಯನು ಶಿವ, ಪಾರ್ವತಿ ಮೊದಲಾದ ದೇವತೆಗಳನ್ನು ನಿರಾಕರಿಸಿರುವನು. ವೀರಶೈವರು ತಾವು ಶಿವನನ್ನು ಮಾತ್ರ ಪೂಜಿಸುವರೆಂದು ತಿಳಿಯುವದುಂಟು. ಮತ್ತು ಶಿವನು ರುಂಡಮಾಲಾಧರನು, ತ್ರಿಶೂಲಧರನು, ಡಮರುಗವುಳ್ಳವನು, ಬ್ರಹ್ಮಕಪಾಲವನ್ನು ಧರಿಸಿದವನು, ಭಸ್ಮಭೂಷಿತನು, ವೃಷಭವಾಹನನು, ಪಾರ್ವತೀಪತಿಯು ಎಂದು ಮೊದಲಾಗಿ ಹೇಳುವದುಂಟು. ಆದರೆ ಈ ವಿಚಾರಗಳನ್ನೆಲ್ಲ ಅಂಬಿಗರ ಚೌಡಯ್ಯನು ಅಲ್ಲಗಳೆದಿರುವನು. ಅಂಬಿಗರ ಚೌಡಯ್ಯನು ಈ ಬಗೆಯ ವಿಚಾರಗಳು ಸಂಸಾರಿಕರಿಗೆ ಮಾತ್ರ ಯೋಗ್ಯವಾದವುಗಳಿದ್ದು, ಸಂಸಾರಕ್ಕೆ ದೂರವಾಗಿರುವ ಪರಮಾತ್ಮನಿಗೆ ಇಂಥ ಸಂಗತಿಗಳನ್ನು ಸಂಬಂಧಿಸುವದು ಯೋಗ್ಯವಲ್ಲವೆಂದು ಅವನ ಅಭಿಪ್ರಾಯವು. ಪರಮಾತ್ಮನಲ್ಲಿ ಸಂಸಾರದ ಕುರುಹು ಏನೂ ಇಲ್ಲ, ಮತ್ತು ಅವನು ನಾಮರೂಪಕ್ಕೆ ಹೊರತಾಗಿರುವನೆಂದು ಅವನು ಈ ವಚನದಲ್ಲಿ ಹೇಳಿರುವನು. ಈ ಬಗೆಯ ವಿಚಾರಗಳನ್ನು ವಚನಕಾರರೆಲ್ಲರೂ ತಮ್ಮ ವಚನಗಳಲ್ಲಿ ಹೇಳಿರುತ್ತಾರೆ.

**ವಚನ**:— ೩. ಅಂಗದೊಳಗಿಪ್ಪದು ಲಿಂಗವಲ್ಲ. ಅಂಗದ ಹೊರಗಿಪ್ಪದು ಲಿಂಗವಲ್ಲ. ಎಲ್ಲ ಅಂಗಂಗಳನೊಳಕೊಂಡಿಪ್ಪ ಲಿಂಗ ಹೋಗುತ್ತ ಬರುತ್ತಿಹುದಲ್ಲ. ಚಲನೆ ಇಲ್ಲದ ಅಚಲವಪ್ಪ ಲಿಂಗಕ್ಕೆ ಬಂದಿತ್ತು ಹೋಯಿತ್ತು ಎಂಬ ಸಂದೇಹವಿಲ್ಲವೆಂದ ನಂಬಿಗಚೌಡಯ್ಯ.

**ಭಾವಃ**— ಅನೇಕರು ಲಿಂಗವು ಎಂದರೆ ಪರಮಾತ್ಮನು ಇಂಥ ಒಂದು ಸ್ಥಳದಲ್ಲಿ ಇರುವನು ಮತ್ತು ಇಂಥ ಒಂದು ಸ್ಥಳದಲ್ಲಿ ಇರುವದಿಲ್ಲ ಎಂದು ಭಾವಿಸುವದುಂಟು. ಇದು ತಪ್ಪೆಂದು ವಚನಕಾರನು ಇದರಲ್ಲಿ ಅಂದಿರುವನು. ಲಿಂಗವು ಅಂಗದಲ್ಲಿ ಇರುತ್ತದೆಂದು ಭಾವಿಸಿದರೆ ಅದು ತಪ್ಪು. ಹಾಗೆಯೇ ಅದು ಅಂಗದ ಹೊರಗಿರುತ್ತದೆಂದು ಭಾವಿಸಿದರೆ ಅದೂ ತಪ್ಪು. ಯಾಕೆಂದರೆ ಲಿಂಗವು ಅಂಗದ ಒಳಗೂ ಹೊರಗೂ ಕೂಡಿಯೇ ವ್ಯಾಪಿಸಿರುತ್ತದೆ. ಆದ್ದರಿಂದ ಲಿಂಗವು ಹೋಗುವದೂ ಇಲ್ಲ, ಬರುವದೂ ಇಲ್ಲ. ಅದಕ್ಕೆ ಚಲನೆ ಇಲ್ಲ, ಅಚಲವಾಗಿದೆ. ಯಾವ ವಸ್ತುವು ಯಾವತ್ತು ಸ್ಥಳದಲ್ಲಿ ನಿಬಿಡವಾಗಿ ತುಂಬಿಕೊಂಡಿರುತ್ತದೋ ಅಂಥ ವಸ್ತುವಿಗೆ ಹೋಗಲಿಕ್ಕೂ ಬರಲಿಕ್ಕೂ ಸ್ಥಳವು ಹ್ಯಾಗೆ ದೊರಕಬಹುದು? ಇದು ಅಶಕ್ಯವೆಂದು ವಚನಕಾರನು ಇಲ್ಲಿ ಅಂದಿರುವನು. ಪರಮಾತ್ಮನು ವಿಶ್ವದಲ್ಲೆಲ್ಲ ಭರಿತನಾಗಿರುತ್ತಾನೆಂದು ಹೇಳುವದೇ ಅವನ ಮುಖ್ಯ ಭಾವವಾಗಿದೆ.

**ವಚನಃ**— ೪. ಅಗ್ನಿ ದಿಟವೆಂದೊಡೆ ತಾ ಹುಸಿ ಕಾಷ್ಟವಿಲ್ಲದೆ. ಕಾಷ್ಠದಲ್ಲಡಗಿ ಸುಡದಿಪ್ಪ ಭೇದವನರಿತಡೆ ಪ್ರಾಣಲಿಂಗಿ ಎಂದೆಂಬೆನೆಂದ ನಂಬಿಗಚೌಡಯ್ಯ.

**ಭಾವಃ**— ವಚನಕಾರನು ಈ ವಚನದಲ್ಲಿ ಪರಮಾತ್ಮನಿಗೂ ಪದಾರ್ಥಗಳಿಗೂ ಇರುವ ಸಂಬಂಧವನ್ನು ನಿರ್ದೇಶಿಸಿರುವನು. ಅವನು ಅನ್ನುವದೇನೆಂದರೆ ಪರಮಾತ್ಮನು ಜಗತ್ತಿನಲ್ಲಿ ತುಂಬಿಕೊಂಡಿರುವದೇನೋ ನಿಜವು. ಆದರೆ ಅವನು ಅದರಲ್ಲಿ ಪ್ರಕಟವಾಗಿರದೆ, ಗುಪ್ತರೀತಿಯಿಂದ ತನ್ನನ್ನು ತೋರಿಸಿಕೊಳ್ಳದೆ ವಾಸಿಸುತ್ತಾನೆಂಬವನ್ನು ಅವನು ಒಂದು ದೃಷ್ಟಾಂತದ ಮೂಲಕ ಹೇಳಿರುವನು. ಜಗತ್ತು ಮತ್ತು ಪರಮಾತ್ಮ ಇವು ಒಂದನ್ನೊಂದು ಬಿಟ್ಟಿರಲಾರವು. ಅಂಗವಿಲ್ಲದೆ ಲಿಂಗವಿಲ್ಲ, ಲಿಂಗವಿಲ್ಲದೆ ಅಂಗವಿಲ್ಲವೆಂಬ ವೀರಶೈವರ ತತ್ವವಿದೆ ಅಗ್ನಿಯ ಅಸ್ತಿತ್ವವು ನಿಃಸಂದೇಹವು. ಆದರೆ ಅದು ಕಾಷ್ಟವಿಲ್ಲದೆ ಪ್ರಕಟವಾಗದು. ಹಾಗೆಯೇ ಪರಮಾತ್ಮನಿರುವದೇನೋ ನಿಜವು. ಆದರೆ ಆತನು ಅಂಗವಿಲ್ಲದೆ ತೋರಿಸಿಕೊಳ್ಳಲಾರನು. ಅವನು ಅದರಲ್ಲಿ ಹ್ಯಾಗೆ ಹುದುಗಿಕೊಂಡು ಗುಪ್ತ

ವಾಗಿ ವಾಸಿಸುತ್ತಾನೋ ಹಾಗೆಯೇ ಪರಮಾತ್ಮನು ಜಗತ್ತಿನಲ್ಲಿ ತನ್ನನ್ನು ಕಾಣಿಸಿಕೊಳ್ಳದೆ ವಾಸಿಸುತ್ತಾನೆಂದು ಈ ವಚನದ ತಾತ್ಪರ್ಯವು.

**ವಚನ:**— ೫. ಅಡವಿಯೊಳಗರಸುವಡೆ ಸಿಡಿಗಂಟಿ ತಾನಲ್ಲ. ಮಡುವಿನೊಳಗರಸುವಡೆ ಮತ್ಸ್ಯಮಂಡುಕನಲ್ಲ. ಒಡಲ ದಂಡಿಸುವಡೆ ಕೊಡುವ ಸಾಲಿಗನಲ್ಲ. ಅಷ್ಟತನುವಿನೊಳಗೆ ಹುದಿಗಿರ್ದ ಲಿಂಗವ ನಿಲುಕಿ ನೋಡಿಯೇ ಕಂಡನಂಬಿಗ ಚೌಡಯ್ಯ,

**ಭಾವ:**— ವಚನಕಾರನು ಲಿಂಗದ ಸ್ಥಿತಿಯನ್ನು ಹಿಂದಿನ ವಚನಗಳಲ್ಲಿ ವಿವರಿಸಿ, ಅವನನ್ನು ಎಲ್ಲಿ ಹುಡುಕಬೇಕೆಂಬದನ್ನು ಮೇಲಿನ ವಚನದಲ್ಲಿ ಹೇಳಿರುವನು. ಅನೇಕರು ಪರಮಾತ್ಮನು ಅಡವಿಯಲ್ಲಿರುತ್ತಾನೆಂದು ಭಾವಿಸಿ ಅಲ್ಲಿಗೆ ಹೋಗುವದುಂಟು. ಆದರೆ ಅಡವಿಯಲ್ಲಿ ಸಿಡಿಗಂಟಿ ಮೊದಲಾದ ವನಸ್ಪತಿಗಳನ್ನು ಮಾತ್ರ ಕಾಣಬಹುದು. ಆದರೆ ಅಲ್ಲಿ ಪರಮಾತ್ಮನು ಕಾಣಲಾರನು. ಅನೇಕರು ಪರಮಾತ್ಮನನ್ನು ಕಾಣಬೇಕೆಂದು ಹಳ್ಳ, ಕೊಳ್ಳ, ಕೆರೆ, ತೊರೆ, ತೀರ್ಥಯಾತ್ರೆಗಳಿಗೆ ಹೋಗುವದುಂಟು. ಆದರೆ ಈ ಕೆರೆತೊರೆಗಳಲ್ಲಿ ಮೀನುಕಪ್ಪೆಗಳು ಕಾಣಬಹುದೇ ಹೊರತು ಪರಮಾತ್ಮನು ಅಲ್ಲಿ ಕಾಣಲಾರನು. ಇನ್ನು ಅನೇಕರು ತಮ್ಮ ದೇಹದ ದಂಡನೆಯನ್ನು ಮಾಡಿದ್ದಾದರೆ ಪರಮಾತ್ಮನು ಕಾಣುವನೆಂದು ತಿಳಿಯುವದುಂಟು. ಇದೂ ತಪ್ಪೆಂದು ವಚನಕಾರನ ಅಭಿಪ್ರಾಯವು. ಸಾಹುಕಾರರು ಸಾಲಿಗರನ್ನು ಹಿಡಿದು ಅವರನ್ನು ಶಿಕ್ಷಿಸಿ ಧನವನ್ನು ವಸೂಲು ಮಾಡಿಕೊಳ್ಳಬಹುದು. ಆದರೆ ಹೀಗೆ ದೇಹದಂಡನೆ ಮಾಡಿದ್ದಾದರೆ ಪರಮಾತ್ಮನು ಸಿಕ್ಕಲಾರನು. ಪರಮಾತ್ಮನು ಬೇರೆ ಇಂಥ ವಿಶಿಷ್ಟ ಸ್ಥಾನದಲ್ಲಿ ಎಲ್ಲಿಯೂ ಇಲ್ಲ. ಆದರೆ ಅವನು ಅಷ್ಟತನುವಿನಲ್ಲಿಯೇ ಇದ್ದಾನೆ. ಅವನು ತನ್ನ ಶರೀರದಲ್ಲಿಯೇ ವಾಸನಾಗಿದ್ದಾನೆ. ಇಲ್ಲಿಯೇ ಲಿಂಗವು ಹುದುಗಿರ್ದ ಆ ಲಿಂಗವನ್ನು ಇದರಲ್ಲಿ ಇಣಿಕಿ ಹಾಕಿ ನೋಡುತ್ತೇನೆಂದು ವಚನಕಾರನು ಚೇಷ್ಟೆಯಿಂದ ಅಂದಿರುವನು.

**ವಚನ:**— ೬. ಮನದಲ್ಲಿ ನೆನೆಯೆ. ವಚನಕ್ಕೆ ತಾರೆ. ಪಾಷಾಣವ ಪೂಜಿಸೆ. ಹೊಡೆಹೊಂಟು ಚೇರುಮಾಡೆ. ತಾಯ ಬಸುರೊಳಗಿರ್ದ ಕಾಲನಿಡುವ ಬುದ್ಧಿ ಕೂಡದು, ಕೂಡದೆಂದನಂಬಿಗರ ಚೌಡಯ್ಯ.

ಭಾವ:— ವಚನಕಾರನು ಪರಮಾತ್ಮನನ್ನು ತನ್ನಲ್ಲಿ ಹ್ಯಾಗೆ ಇಣಿಕಿ ಹಾಕಿ ನೋಡಬೇಕೆಂಬದನ್ನು ಇದರಲ್ಲಿ ಸ್ವಲ್ಪ ನಿರ್ದೇಶಿಸಿರುವನು. ಅನೇಕರು ಪರಮಾತ್ಮನನ್ನು ಧ್ಯಾನಿಸಿ ಧ್ಯಾನಿಸಿ ಅವನನ್ನು ಕಾಣುವೆವೆಂದು ಸದಾ ಸ್ಮರಣೆಮಾಡುವದುಂಟು. ಇದು ತಪ್ಪೆಂದು ವಚನಕಾರನ ಅಭಿಪ್ರಾಯವು. ಆದ್ದರಿಂದ ನಾನು ಪರಮಾತ್ಮನನ್ನು ಧ್ಯಾನಿಸಲಾರೆನೆಂದು ಅವನು ಇದರಲ್ಲಿ ಅಂದಿರುವನು. ಅನೇಕರು ಪರಮಾತ್ಮನನ್ನು ಹೊಗಳಿ ಹೊಗಳಿ ಅವನ ಪ್ರೀತಿಯನ್ನು ಸಂಪಾದಿಸುವೆವೆಂದು ಭಾವಿಸಿರುವರು. ಇದೂ ತಪ್ಪಾದದ್ದು. ಬೇರೆ ಅನೇಕರು ಅವನ ಮೂರ್ತಿಯನ್ನು ಮಾಡಿ ಅನೇಕ ರೀತಿಯಿಂದ ಪೂಜಿಸುವದುಂಟು. ಇದೂ ತಪ್ಪೆಂದು ವಚನಕಾರನ ಅಭಿಪ್ರಾಯವು. ಹೀಗೆ ಪ್ರಯತ್ನಿಸುವದೆಂದರೆ ಪರಮಾತ್ಮನು ತನ್ನಿಂದ ಬೇರೆಯಾದ ಒಂದು ವಸ್ತುವಿದೆ ಎಂದು ತಿಳಿದು ಅವನನ್ನು ಹುಡುಕುವಂತೆಯೇ ಸರಿ. ಈ ರೀತಿಯಿಂದ ಪರಮಾತ್ಮನು ಸಿಕ್ಕಲಾರನೆಂದು ವಚನಕಾರನ ಭಾವವು. ಮನುಷ್ಯನು ಗರ್ಭಿಣೀ ಸ್ತ್ರೀಯಲ್ಲಿದ್ದ ಶಿಶುವಿನಂತೆ ಇದ್ದಾನೆಂದು ಅವನು ಒಂದು ದೃಷ್ಟಾಂತವನ್ನು ಇಲ್ಲಿ ಹೇಳಿರುವನು. ಹ್ಯಾಗೆ ಗರ್ಭಿಣೀ ಸ್ತ್ರೀಯು ತನ್ನ ರಕ್ತ ಮತ್ತು ಸಾಮರ್ಥ್ಯವನ್ನು ಕೊಟ್ಟು ಶಿಶುವನ್ನು ಸಂರಕ್ಷಿಸುತ್ತಾಳೋ ಹಾಗೆಯೇ ಮನುಷ್ಯನು ಪರಮಾತ್ಮನಲ್ಲಿದ್ದು ಅವನಿಂದ ರಕ್ಷಣ್ಯವನ್ನು ಹೊಂದುತ್ತಾನೆ. ಎಂದರೆ ಪರಮಾತ್ಮನ ಅಂಶದಿಂದಲೇ ಅವನು ಪೋಷಣೆಹೊಂದುತ್ತಾನೆ. ಆದ್ದರಿಂದ ನಾನು ಸ್ವತಂತ್ರನು, ನಾನು ಪರಮಾತ್ಮನ ಸಂಬಂಧವನ್ನು ಬಿಟ್ಟುಕೊಟ್ಟು ಸಂಚರಿಸುವೆನು ಎಂದು ಹೇಳಿದ್ದಾದರೆ ಅವನು ಗತಿಗೆ ಮುಟ್ಟಲಾರನು. ಈ ಸಂಗತಿಯನ್ನು ಅಂಬಿಗರಚೌಡಯ್ಯನು ಇದರಲ್ಲಿ ಹೇಳಿ, ಹಾಗೆ ಮಾಡಕೂಡದೆಂದು ಉಪದೇಶಿಸಿರುವನು.

---

## ದೇವರು ಒಬ್ಬನೇ ಇದ್ದಾನೆ.

**ವಿವರಣೆ:**— ವೀರಶೈವರಲ್ಲಿ ಮೇಲೆ ಹೇಳಿದಂತೆ ದೇವರ ಸಂಬಂಧವಾಗಿ ವಿಚಾರಗಳಿರುವದರಿಂದ ಅವರು ದೇವರು ಒಬ್ಬನೇ ಇದ್ದಾನೆ ಎಂಬ ಅಭಿಪ್ರಾಯಗಳಿರುವದು ಸ್ವಾಭಾವಿಕವಾಗಿದೆ.

**ವಚನ:**— ೭. ನಾಲ್ಕು ವೇದವನೋದಿದಂತವರ ಮನೆಯ ಬೋನವ ಶಿವಭಕ್ತರ ಮನೆಯಲ್ಲಿರುವ ನಾಯಿ ಮೂಸಿ ನೋಡಲಾಗದು. ಸಾಮವೇದಿ ಹೋಗುತ್ತಿರಲು ಶ್ವಪಚಯ್ಯಗಳು ತಮ್ಮ ಪಾದುಕದಿಂದೆ ಪಾಕವ ಮುಚ್ಚಿದರು. "ಶ್ವಾನೋ ಶ್ರೇಷ್ಠ" ವೆಂದು ಇಕ್ಕಿದೆನು ಮುಂಡಿಗಿಯ. ಎತ್ತಿರೋ ಜಗದ ಸಂತೆಯ ಸೂಳೆಯ ಮಕ್ಕಳು. ಜಗಕ್ಕೆ ಪಿತನೊಬ್ಬನಲ್ಲದೆ ಇಬ್ಬರೆಂದು ಬೊಗಳುವರ ಮೋರೆಯ ಮೇಲೆ ಹೊಡೆ ಎಂದಾತ ನಮ್ಮ ಅಂಬಿಗರ ಚೌಡಯ್ಯ ನಿಜಶರಣನು.

**ಭಾವ:**— ದೇವರು ಒಬ್ಬನೇ ಇದ್ದವರಿಂದ ಜಗಕ್ಕೆಲ್ಲ ಒಬ್ಬನೇ ಕರ್ತಾರನು. ಇಬ್ಬರಿದ್ದಾರೆಂದು ಭಾವಿಸಕೂಡದೆಂದು ಇಲ್ಲಿ ವಚನಕಾರನು ಹೇಳಿರುವನು. ವೇದಗಳು ಅನೇಕ ದೇವತೆಗಳನ್ನು ಪೂಜಿಸಬೇಕೆಂದು ನುಡಿಯುವವರಿಂದ ಅವುಗಳನ್ನು ಇಲ್ಲಿ ವಚನಕಾರನು ತಿರಸ್ಕರಿಸಿ ನುಡಿದಿರುವನು. ಆದ್ದರಿಂದ ಒಬ್ಬ ಪರಮಾತ್ಮನನ್ನು ನಂಬಿದವರೇ ಶ್ರೇಷ್ಠರೆಂದು ಅವನು ಕೆಲವು ಶಿವಶರಣರ ಚರಿತ್ರೆಗಳನ್ನು ಈ ಬಗ್ಗೆ ಉಲ್ಲೇಖಿಸಿರುವನು.

**ವಚನ:**— ೮. ಕಲ್ಲದೇವರ ಪೂಜೆ ಮಾಡಿ ಕಲಿಯುಗದಿ ಕತ್ತೆಗಳಾಗಿ ಹುಟ್ಟಿದರು. ಮಣ್ಣದೇವರ ಪೂಜಿಸಿ ಮಾನಹೀನರಾದರು. ಮರನು ದೇವರೆಂದು ಪೂಜಿಸಿ ಮಣ್ಣುಕೂಡಿದರು. ದೇವರ ಪೂಜಿಸಿ ಸ್ವರ್ಗಕ್ಕೇರದೆ ಹೋದರು. ಜಗದ್ಭರಿತನಾದ ಪರಶಿವನೊಳಗೆ ಕಿಂಕರನಾದ ಶಿವಭಕ್ತನೇ ಶ್ರೇಷ್ಠನೆಂದಾತ ನಮ್ಮ ಅಂಬಿಗರ ಚೌಡಯ್ಯ ನಿಜ ಶರಣನು.

**ಭಾವ:**— ಪರಮಾತ್ಮನು ಜಗದ್ಭರಿತನಾಗಿದ್ದಾನೆ. ಆದ್ದರಿಂದ ಇಂಥ ಪರಮಾತ್ಮನೊಬ್ಬನನ್ನೇ ನಂಬಬೇಕೇ ಹೊರ್ತು ಕಲ್ಲು, ಮಣ್ಣು, ಗಿಡ ಇವುಗಳಿಂದ ಮೂರ್ತಿಗಳನ್ನು ಮಾಡಿ ಅವುಗಳನ್ನು ಪೂಜಿಸುವದು ಯೋಗ್ಯವಲ್ಲ. ಹೀಗೆ ಪೂಜಿಸುವವರಿಗೆ ಮೋಕ್ಷವಿಲ್ಲೆಂದು ವಚನಕಾರನ ಭಾವವು.

**ವಚನಃ**— ೯. ಅರಳಿಯ ಮರ, ವಿಷ್ಣುಕಾಂತಿ, ಬನ್ನಿ, ಮುತ್ತ, ತೊಳಸಿ ಎಂದು ಹೊಡೆಹೊಮ್ಮುವಿರಿ. ಎಲ್ಲಿ ಭೋ, ಎಲ್ಲಿ ಭೋ, ನಿಮ್ಮ ಹೊಡೆವಡುವ ದೈವಗಳೆಲ್ಲಾ ಗಿಡುಮರನಾಗಿ ಹೋದವಲ್ಲಾ! ನಿಮ್ಮ ನಡೆ ಎಲ್ಲ ಅನಾಚಾರ. ನಿಮ್ಮ ನುಡಿ ಎಲ್ಲ ಶಿವದ್ರೋಹ. ಇವಂದಿರ ಗಡಣ ಬೇಡೆಂದನಂಬಿಗ ಚೌಡಯ್ಯ.

**ಭಾವಃ**— ಅನೇಕರು ಅರಳಿಯ ಮರ, ವಿಷ್ಣುಕಾಂತಿ, ಬನ್ನಿ, ಮುತ್ತುಗ, ತುಲಸಿ ಮುಂತಾದವುಗಳು ದೇವರೆಂದು ಭಾವಿಸಿ ನಮಸ್ಕಾರ ಮಾಡುವದುಂಟು. ಹೀಗೆ ಪೂಜಿಸುವಂಥವರಿಗೆ ದೇವತೆಗಳು ಗಿಡಮರಗಳೇ ಹೇಗೆ ಎಂದು ವಚನಕಾರನು ಹಾಸ್ಯದಿಂದ ನುಡಿದಿರುವನು. ಹೀಗೆ ಭಾವಿಸುವದು ಅನಾಚಾರ, ಪರಮಾತ್ಮನ ದ್ರೋಹವು. ಇಂಥವರ ಸ್ನೇಹ ಬೇಡವೆಂದು ವಚನಕಾರನು ನುಡಿದಿರುವನು.

**ವಚನಃ**— ೧೦. ಬ್ರಹ್ಮ, ವಿಷ್ಣು, ಕುಮಾರ ಲೆಕ್ಕವಿಲ್ಲದ ರುದ್ರರು ನೋಡಾ. ದೇವರ್ಕಳೆಲ್ಲ ಗರ್ವದಲ್ಲೈದಿಹರು. ಅವರೆತ್ತ ಬಲ್ಲರು. ಶಿವನಾದಿಯಂತುವ? ಶಾಶ್ವತ ಪದಕ್ಕೆ ಸಲ್ಲದ ಕಾರಣ ಇವರು ವೇಷಧಾರಿಗಳೆಂದಾತ ಅಂಬಿಗರ ಚೌಡಯ್ಯ.

**ಭಾವಃ**— ವಿಷ್ಣು, ಬ್ರಹ್ಮ, ರುದ್ರಾದಿಗಳು ಕೇವಲ ವೇಷಧಾರಿಗಳೆಂದು ವಚನಕಾರನು ಅವರನ್ನು ಟೀಕಿಸಿದ್ದಾನೆ. ಅವರು ನಿಜವಾದ ದೇವರಲ್ಲ. ಒಂದು ವೇಳೆ ದೇವರಾಗಿದ್ದರೆ ಎಂದೆಂದಿಗೂ ಅಳಿಯದ ಪದದಲ್ಲಿ ಇರುತ್ತಿದ್ದರು. ಇಂಥ ಆ ಸ್ಥಿತಿಯು ಇವರಿಗಿಲ್ಲ. ಅವರು ಬರೇ ಅಹಂಕಾರಿಗಳಾಗಿ ತಾವು ದೇವರೆಂದು ಹೇಳಿಕೊಳ್ಳುತ್ತಾರೇ ಹೊರತು ಪರಮಾತ್ಮನ ಆದಿ ಮತ್ತು ಅಂತ್ಯವನ್ನು ಅರಿಯರು.

**ವಚನಃ**— ೧೧. ಅರುಹಿರಿಯರ ದೈವದ ಪರಿ ನೋಡಾ. ಹೊಲೆಯರ ಬೊಮ್ಮಗ ತೊಗೆ ತುಪ್ಪವ ಬೇಡುವಂತೆ. ಬ್ರಹ್ಮವಿಷ್ಣುಗಳನು ಕಾಣರು. ವೇದಂಗಳು ನಾಚದೆ ಉಲಿವ ಪರಿ ನೋಡಾ! ಗಂಗೆವಾಳುಕಸಮರುದ್ರರೆಲ್ಲರು ಲಿಂಗವ ಕಂಡರೈಸೆ? ಸ್ವಯಂಭುವ ಕಾಣರೆಂದನಂಬಿಗ ಚೌಡಯ್ಯ.

ಭಾವಃ— ಅಜ್ಞಾನಿಗಳಾಗಿರುವಂಥ ಜನರು ಭಾವಿಸುವ ದೇವರ ಪರಿಯನ್ನು ನೋಡಿದರೆ, ಅವು ಹೊಲೆಯರ ದೇವರಾದ ಬ್ರಹ್ಮನು ಬೇಳೆ ತುಪ್ಪವನ್ನು ತಿನ್ನಲಿಕ್ಕೆ ಬೇಡಿದಂತೆಯೇ ಸರಿ. ಎಂದರೆ ಆ ದೇವರು ಇಂಥ ಜನರ ಪರಿಸ್ಥಿತಿಗೆ ಅನುಸರಿಸಿ ಇರುತ್ತವೇ ಹೊರ್ತು ಹೆಚ್ಚಿನದನ್ನು ಕಾಣಲಾರವು. ಬ್ರಹ್ಮವಿಷ್ಣುಗಳು ಸಹ ಪರಮಾತ್ಮನನ್ನು ಅರಿಯರು. ವೇದಂಗಳು ಸಹ ಪರಮಾತ್ಮನನ್ನು ಸ್ತೋತ್ರ ಮಾಡಿ ಮಾಡಿ ಅವನನ್ನು ಕಾಣದೆ ಹೋದವು. ಇಂಥ ಮಹತ್ತರ ದೇವತೆಗಳಿಗೆ ಇಂಥ ಸ್ಥಿತಿಯಾದ ಬಳಿಕ ಗಂಗಾನದಿಯ ಧಡದಲ್ಲಿರುವ ಉಸುಕಿನ ಕಣಗಳಷ್ಟು ಅಸಂಖ್ಯಾತರಾಗಿರುವ ರುದ್ರಗಣಂಗಳು ಲಿಂಗವನ್ನು ಕಾಣುವ ಬಗೆ ಹೇಗೆ? ಇವರಾರಿಗೂ ಸ್ವಯಂಭೂ ಮೂರ್ತಿಯಾದ ಪರಮಾತ್ಮನು ಕಾಣಿಸಿಕೊಳ್ಳಲಾರನೆಂದು ಅಂಬಿಗರ ಚೌಡಯ್ಯನು ನುಡಿದಿರುವನು.

ವಚನಃ— ೧೨. ತಡೆ ನೆಲೆ ಇಲ್ಲದ ಮಹಾ ನದಿಯಲ್ಲಿ ಒಡಲಿಲ್ಲದಂಬಿಗ ಬಂದಿದ್ದೇನೆ. ಹಿಡಿವ ಬಿಡುವ ಮನವ ಬೆಲೆಗೊಟ್ಟಡೆ, ಕಡೆಗಣಿಸಿ ಹಾಯಿಸುವೆ ಮಹಾ ಹೊಳೆಯ. ನುಡಿ ಇಲ್ಲದ ನಿಸ್ಸೀಮ ಗ್ರಾಮದಲ್ಲಿರಿಸುವೆನೆಂದಾತನಂಬಿಗ ಚೌಡಯ್ಯ.

ಭಾವಃ— ಈ ವಚನದಲ್ಲಿ ಅಂಬಿಗರ ಚೌಡಯ್ಯನು ತನ್ನ ಉದ್ಯೋಗವನ್ನು ಉಲ್ಲೇಖಿಸಿ ಅದರ ಉದಾಹರಣೆಯಿಂದ ಮನುಷ್ಯನು ಹ್ಯಾಗೆ ಮೋಕ್ಷಪದವನ್ನು ಹೊಂದಬೇಕೆಂಬುದನ್ನು ಉಲ್ಲೇಖಿಸಿರುವನು. ಅವನು ಅನ್ನುವದೇನೆಂದರೆ, ಸಂಸಾರವೆಂಬುದೊಂದು ಮಹಾ ನದಿಯು ಇರುತ್ತದೆ. ಇದರ ಪ್ರವಾಹವನ್ನು ದಾಟುವದು ದುಸ್ತರವು. ಯಾಕೆಂದರೆ ಇದಕ್ಕೆ ದಂಡೆಯೂ ಇಲ್ಲ ಮತ್ತು ಆಳವೆಷ್ಟಿದೆ ಎಂಬುದೂ ತಿಳಿಯಲು ಶಕ್ಯವಿಲ್ಲ. ಇಂಥ ನದಿಯೊಳಗಿಂದ ನಾನು ನಿಮ್ಮನ್ನು ದಾಟಿಸುವೆನೆಂದು ಇಲ್ಲಿ ಹೇಳಿರುವನು. ಇಂಥ ಮಹಾನದಿಯನ್ನು ದಾಟಿಸಲು ನನಗೆ ಹ್ಯಾಗೆ ಶಕ್ಯವೆಂದರೆ ನನಗೆ ಒಡಲು ಎಂದರೆ ಸಂಸಾರವೆಂಬುದು ಇಲ್ಲ, ಆದ್ದರಿಂದ ನನಗೆ ಶಕ್ಯವೆಂಬ ಭಾವವನ್ನು ತೋರಿಸಿರುವನು. ಎಂದರೆ ಯಾವನು ಸಂಸಾರವನ್ನು ಬಿಟ್ಟಿರುವನೋ ಅವನೇ ಈ ಮಹಾನದಿಯನ್ನು ದಾಟಲಿಕ್ಕೆ ಸಮರ್ಥನೆಂದು ಭಾವವು. ಆದರೆ ತಾನು ಹೀಗಿದ್ದರೂ ಹೆರವರನ್ನು ದಾಟಿಸಬೇಕಾದರೆ ಅದಕ್ಕೊಂದು

ಶರ್ತನ್ನು ಹಾಕಿರುವನು. ಏನೆಂದರೆ ಅತ್ತ ಇತ್ತ ಹರಿದಾಡುವ ನಿಮ್ಮ ಚಂಚಲ ಮನಸ್ಸನ್ನು ನನಗೆ ಕೂಲಿಯಾಗಿ ಕೊಟ್ಟು ನಿಮ್ಮ ದೇಹವನ್ನು ನನ್ನ ಕಡೆಗೆ ಒಪ್ಪಿಸಬೇಕು. ಎಂದರೆ ನಾನು ಈ ಮಹಾಹೊಳೆಯನ್ನು ದಾಟಿಸುವೆನೆಂದು ಹೇಳಿರುವನು. ಅಂದರೆ ದೃಢಮನಸ್ಸಿನವರೇ ಈ ಸಂಸಾರವನ್ನು ದಾಟುವರೆಂದು ಅವನ ಭಾವವು. ಈ ಪ್ರಕಾರ ವರ್ತಿಸಿದರೆ ಮೋಕ್ಷಪದವು ಲಭಿಸುವದು. ಈ ಮೋಕ್ಷಪದವು 'ನುಡಿ ಇಲ್ಲದ ನಿಸ್ಸೀಮ ಗ್ರಾಮ'ವೆಂದು ಅವನು ಇದರಲ್ಲಿ ವರ್ಣಿಸಿರುವನು. ಎಂದರೆ ಈ ಗ್ರಾಮಕ್ಕೆ ಸೀಮೆ ಎಂದರೆ ಮೇರೆಯು ಇಲ್ಲ. ಮತ್ತು ಅದು ವರ್ಣನೆಗೆ ಅಶಕ್ಯವಾಗಿರುವದು ಎಂದು ಹೇಳಿರುವನು. ಈ ಪ್ರಕಾರ ಅಂಬಿಗರ ಚೌಡಯ್ಯನು ಸಂಸಾರವು ಹ್ಯಾಗೆ ಇರುತ್ತದೆ, ಅದನ್ನು ಹ್ಯಾಗೆ ದಾಟಬೇಕು ಮತ್ತು ದಾಟಿ ಯಾವ ಸ್ಥಿತಿಗೆ ಹೋಗಬೇಕು ಎಂಬದನ್ನು ಸ್ವಲ್ಪದರಲ್ಲಿ ವಿವರಿಸಿರುವನು.



## ಪರಮಾತ್ಮನನ್ನು ಕಾಣುವ ರೀತಿ.

**ವಿವರಣೆ:**— ವಚನಕಾರರು ಸ್ವರ್ಗ, ನರಕ, ಕೈಲಾಸ ಇಂಥವುಗಳು ಒಂದು ವಿಶಿಷ್ಟ ಸ್ಥಾನದಲ್ಲಿವೆ ಎಂದು ಭಾವಿಸುವದಿಲ್ಲ. ಇವೆಲ್ಲವೂ ಮನುಷ್ಯನ ದೇಹದಲ್ಲಿಯೇ ಇವೆ ಎಂದು ತಿಳಿಯುತ್ತಾರೆ. ಆದ್ದರಿಂದ ಮೋಕ್ಷವನ್ನು ಹೊಂದಲಿಕ್ಕೆ ಅನೇಕ ದೇಶಗಳಲ್ಲಿ ತೊಳಲಾಡುವ ಪ್ರಯೋಜನವಿಲ್ಲ. ಅದನ್ನು ತನ್ನಲ್ಲಿಯೇ ಸಂಪಾದಿಸಿಕೊಳ್ಳಬಹುದು. ಅಂಬಿಗರ ಚೌಡಯ್ಯನು ಹಿಂದಿನ ವಚನಗಳಲ್ಲಿ ಪರಮಾತ್ಮನು ಎಲ್ಲಿರುವನೆಂಬದನ್ನು ವಿವರಿಸಿರುವನಷ್ಟೇ. ಈ ವಚನಗಳಿಂದ ಪರಮಾತ್ಮನು ತನ್ನಲ್ಲಿಯೇ ಇದ್ದಾನೆಂದು ಗೊತ್ತಾಗುತ್ತದೆ. ಆದ್ದರಿಂದ ತನ್ನನ್ನು ತಾನು ತಿಳಿಯುವದೇ ಮೋಕ್ಷವೆಂದು ಅವನ ಅಭಿಪ್ರಾಯವು. ಇವೇ ವಿಚಾರಗಳನ್ನು ವಚನಕಾರರು ಮೇಲಿಂದ ಮೇಲೆ ಪ್ರತಿಪಾದಿಸುತ್ತಾರೆ. ಆದ್ದರಿಂದ ಮನುಷ್ಯನ ದೇಹವು ಸುಳ್ಳು, ಮಾಯೆಯುಳ್ಳದ್ದು, ತ್ಯಾಜ್ಯವು ಎಂಬ ವಿಚಾರಗಳು ವೀರಶೈವರಲ್ಲಿ ಇಲ್ಲ. ಅದು ಒಂದು ಶ್ರೇಷ್ಠ ವಸ್ತುವೆಂದು ಅವರು ತಿಳಿಯುತ್ತಾರೆ. ವಚನಕಾರರು ಅನ್ನುವದೇನೆಂದರೆ,

ತನ್ನನ್ನು ತಾನು ಅರಿತಾಗಳೇ ಮೋಕ್ಷಪ್ರಾಪ್ತಿಯು. ಯಾವಾಗ್ಗೆ ಈ ಅರಿವೇ ತಾನು ಎಂಬ ಭಾವವು ಉತ್ಪನ್ನವಾಗುತ್ತದೋ ಆಗ್ಗೆಯೇ ಮನುಷ್ಯನು ಪರಮಾವಧಿ ಸ್ಥಿತಿಯನ್ನು ಹೊಂದುತ್ತಾನೆ. ಈ ವಿಚಾರಗಳನ್ನು ಕೆಳಗಿನ ವಚನಗಳಲ್ಲಿ ಕಾಣಬಹುದು.

**ವಚನ:**— ೧೩. ಈಶ್ವರನನ್ನು ಕಾಂಬುವುದೊಂದಾಸೆಯುಳ್ಳೊಡೆ ಪರದೇಶಕ್ಕೆ ಹೋಗಿ ಬಳಲದಿರು. ಕಾಶಿಯಲ್ಲಿ ಕಾಯುವ ವಿನಾಶವ ಮಾಡಲು ಬೇಡ. ನಿನ್ನಲ್ಲಿ ನೀ ತಿಳಿದು ನೋಡಾ. ಜಗವು ನಿನ್ನೊಳಗೆಂದಾತ ನಮ್ಮ ಅಂಬಿಗರ ಚೌಡಯ್ಯನು.

**ಭಾವ:**— ಇದರಲ್ಲಿ ವಚನಕಾರನು ಈಶ್ವರನನ್ನು ಹ್ಯಾಗೆ ಕಾಣಬೇಕೆಂಬುದನ್ನು ವಿವರಿಸಿರುವನು. ಅವನು ಅನ್ನುವದೇನಂದರೆ, ನೀನು ಈಶ್ವರನನ್ನು ಕಾಣಬೇಕಾದರೆ ಅನೇಕ ದೇಶಗಳಿಗೆ ಹೋಗಿ ಕಷ್ಟಪಡಬೇಡ. ಅನೇಕರು ವಾರಣಾಸಿಗೆ ಹೋಗಿ ಗಂಗಾ ನದಿಯಲ್ಲಿ ಮುಳುಗಿ ಸತ್ತು ಹೋದರೆ ಮೋಕ್ಷಪ್ರಾಪ್ತಿಯೆಂದು ಭಾವಿಸುತ್ತಾರೆ. ಹಾಗೆ ನೀನು ನಿನ್ನ

ಶರೀರವನ್ನು ನಾಶಮಾಡಬೇಡೆಂದು ಇಲ್ಲಿ ಹೇಳಿರುವನು. ಆದರೆ ನಿನ್ನಲ್ಲಿರುವ ನಿನ್ನನ್ನು ನೀನು ತಿಳಿದು ನೋಡಿದರೆ ಮೋಕ್ಷವೆಂದು ಅವನು ಕೆಲವು ಶಬ್ದಗಳಲ್ಲಿಯೇ ಹೇಳಿರುವನು. ಮತ್ತು ಇದಕ್ಕೆ ಒಂದು ಕಾರಣವನ್ನೂ ಕೊಟ್ಟಿರುವನು. ಏನೆಂದರೆ ಜಗವೆಲ್ಲವೂ ನಿನ್ನ ಶರೀರದಲ್ಲಿಯೇ ಇದೆ, ಜಗತ್ತು ತನ್ನ ಬಿಟ್ಟು ಬೇರೆ ಇರುವದಿಲ್ಲ. ಆದ್ದರಿಂದ ಅಲ್ಲಿಯೇ ಪರಮಾತ್ಮನನ್ನು ಹುಡುಕಬೇಕೆಂದು ಹೇಳಿರುವನು. ಬೇರೆ ಬೇರೆ ದೇಶಗಳಿಗೆ ಹೋಗಿ ಕಷ್ಟಪಡುವ ಅವಶ್ಯವಿಲ್ಲವೆಂದು ಉಪದೇಶಿಸಿರುವನು.

**ವಚನ**— ೧೪. ತನ್ನ ಮರೆದು ದೇವರ ಕಂಡಿಹೆನೆಂದೆಂಬರು. ತನ್ನವ ಮರೆದು ದೇವರ ಕಂಡಿಹೆನೆಂಬ ಕಾರಣ ಹರಿಸುರ ಬ್ರಹ್ಮಾದಿಗಳೆಲ್ಲರೂ ತಲೆ ಕೆಳಗಾಗಿ ಹೋದರು. ಆ ದೇವರ ಮರೆದು ತನ್ನವನರಿದರೆ ತಾನೇ ನಿಜವೆಂದನಂಬಿಗ ಚೌಡಯ್ಯ.

**ಭಾವಃ**— ಅನೇಕರು ಮೋಕ್ಷಸಂಪಾದನೆಗಾಗಿ ಹಿಂದೆ ಹೇಳಿದಂತೆ ದೇಶಗಳನ್ನೆಲ್ಲ ತಿರುಗುತ್ತಾರೆ. ಇನ್ನು ಕೆಲವರು ಈ ಸಂಸಾರವು ಸಟೆ, ತಮ್ಮದೇಹವು ಸುಳ್ಳು ಎಂದು ಭಾವಿಸಿ ಇವುಗಳೆಲ್ಲವನ್ನು ಮರೆತರೆ ದೇವರು ಕಾಣುವನೆಂದು ಅನ್ನುತ್ತಾರೆ. ಈ ವಿಚಾರಗಳು ತಪ್ಪೆಂದು ವಚನಕಾರನು ಇಲ್ಲಿ ಅಂದಿರುತ್ತಾನೆ. ಈ ಪ್ರಕಾರ ಹರಿ, ಸುರ, ಬ್ರಹ್ಮಾದಿಗಳು ಹಿಂದೆ ಪ್ರಯತ್ನಿಸಿದರು. ಅವರು ಅಸಂಖ್ಯಾತ ವರುಷ ಜಪ ತಪಗಳನ್ನು ಮಾಡಿ ದೇಹವನ್ನು ಕ್ಲೇಶಪಡಿಸಿದರು. ಆದರೆ ಅವರು ಕಟ್ಟಕಡೆಗೆ ತಮ್ಮ ವಾಂಛಿತವನ್ನು ಪಡೆಯಲಾರದೆ ಮಾನಹೀನರಾಗಿ ಹೋಗಬೇಕಾಯಿತು. ಆದರೆ ಈ ತರದ ದೇವರನ್ನು ಬಿಟ್ಟುಕೊಟ್ಟು ತನ್ನನ್ನೇ ಅರಿದಡೆ ತಾನೇ ನಿಜವು, ಎಂದರೆ ನಿರಂತರವಾಗಿರುವ ಸತ್ಯ ವಸ್ತುವು ಎಂದು ವಚನಕಾರನು ಹೇಳಿರುವನು.

**ವಚನಃ**— ೧೫. ತನ್ನ ಹುಸಿ ಮಾಡಿ ಇನ್ನೊಂದ ದಿಟ ಮಾಡುವ ಅಣ್ಣಂಗೆ ನಂಬುಗೆ ಇನ್ನಾವುದೋ? ತನ್ನೊಳಗಣ ಘನವ ತಾ ತಿಳಿಯಲರಿಯದೆ, ಪರಬ್ರಹ್ಮಕ್ಕೆ ತಲೆವಾರನಿಕ್ಕಿ ಸೆಳೆದಿಹೆನೆಂಬಣ್ಣ ಗಾವಿಲನೆಂದಾತನಂಬಿಗಚೌಡಯ್ಯ.

ಭಾವಃ— ಹಿಂದಿನ ವಚನಗಳಲ್ಲಿಯ ವಿಷಯವನ್ನೇ ವಚನಕಾರನು ಇಲ್ಲಿ ಬೇರೊಂದು ರೀತಿಯಿಂದ ಹೇಳಿರುವನು. ತನ್ನ ದೇಹವು ಹುಸಿ ಎಂದು ತಿಳಿದು ಮತ್ತೊಂದು ದಿಟವೆಂದು ಹೇಳುವ ಅಣ್ಣಗಳಿಗೆ ಯಾವುದರಲ್ಲಿಯೂ ನಂಬುಗೆ ಹುಟ್ಟಲಾರದೆಂದು ವಿನೋದದಿಂದ ಅಂದಿರುವನು. ಯಾಕಂದರೆ ತಾನು ಎಂಬುದನ್ನು ಇವರು ಕಣ್ಮುಟ್ಟಿ ನೋಡುತ್ತಾರೆ, ಆದರೊಡನೆ ಅವರು ವ್ಯವಹರಿಸುತ್ತಾರೆ, ಆದರೊಡನೆ ಯಾವಾಗಲೂ ಕೂಡಿ ಇರುತ್ತಾರೆ. ಇಂಥದನ್ನೇ ಅವರು ಸುಳ್ಳು ಎಂದು ಭಾವಿಸಿದ ಬಳಿಕ ಉಳಿದದ್ದು ನಿಜವೆಂದು ಭಾವಿಸುವ ಬಗೆ ಹೇಗೆ ಎಂದು ಇಲ್ಲಿ ಅಂದಿದ್ದಾನೆ. ಶ್ರೇಷ್ಠ ವಸ್ತುವು ತನ್ನಲ್ಲಿಯೇ ಇರುತ್ತದೆ. ಇದನ್ನು ತಿಳಿಯಲಾರದೆ ಬೇರೆ ಕಡೆಗೆ ಇದೆ ಎಂದು ಭಾವಿಸಿ ಅದನ್ನು ಹಠಾತ್ತಾಗಿ ಸೆಳೆದುಕೊಂಡು ಬರುವೆವೆಂದು ಅನ್ನುವವರು ಪೂರ್ಣ ಹುಂಬರು ಎಂದು ವಚನಕಾರನು ಅಂದಿರುವನು.

ವಚನಃ—೧೬. ಓದಿ ಬೋಧಿಸಿ ಇದಿರಿಂಗೆ ಹೇಳುವನ್ನಬರ ಚದುರತೆಯಲ್ಲವೆ? ತಾ ತನ್ನನರಿದಲ್ಲಿ ಅರಿಕೆ ಇದಿರಿಗೆ ತೋರಿದಲ್ಲಿ ಅದೇ ದೇವತ್ವವೆಂದನಂಬಿಗಚೌಡಯ್ಯ.

ಭಾವಃ— ಇದರಲ್ಲಿ ವಚನಕಾರನು ತನ್ನನ್ನು ತಾನು ತಿಳಿಯುವದೆಂದರೇನು ಎಂಬುದನ್ನು ಹೇಳಿರುವನು. ತಿಳಿಯುವದೆಂದರೆ ಬಹಳ ಓದುವದೂ, ಅಭ್ಯಾಸ ಮಾಡುವದೂ ಎಂದು ತಿಳಿಯಬೇಕೋ ಹ್ಯಾಗೆ? ಇದು ತಪ್ಪು ಅಭಿಪ್ರಾಯವು. ವಚನಕಾರನ ಅಭಿಪ್ರಾಯದಂತೆ ಇದು ಚತುರತೆಯನ್ನು ಮಾತ್ರ ಸಂಪಾದಿಸಿದಂತಾಗುವದು. ಆದರೆ ಹೀಗೆ ಜಾಣತನವನ್ನು ಹೆಚ್ಚಿಸಿಕೊಂಡರೆ ಪರಮಾತ್ಮನ ಜ್ಞಾನವನ್ನು ಸಂಪಾದಿಸಿದಂತಾಗಲಿಲ್ಲ. ಆದರೆ ಮನುಷ್ಯನು ತನ್ನನ್ನು ತಾನು ಅರಿಯಬೇಕು ಮತ್ತು ಹೀಗೆ ಅರಿತ ಅರಿಕೆಯು ತನಗೆ ಪ್ರತ್ಯಕ್ಷವಾಗಬೇಕು. ಹೀಗೆ ಆದಲ್ಲಿ ಅದೇ ದೇವತ್ವವೆಂದು ಇಲ್ಲಿ ಹೇಳಿರುವನು. ಅನೇಕರು ಪರಮಾತ್ಮನು ಇಂಥಿಂಥ ಅವಯವವುಳ್ಳವನು, ಇಂಥಿಂಥ ಸ್ವರೂಪುಳ್ಳವನು ಎಂದು ಭಾವಿಸಿ ಅವನನ್ನು ಪ್ರತ್ಯಕ್ಷ ಮಾಡಿಕೊಳ್ಳಲು ಬಯಸುವರು. ಇದು ತೀರ ಭ್ರಮೆಯು. ಇಂಥ ವಿಚಾರಗಳು ವೀರಶೈವರಲ್ಲಿ ಇಲ್ಲ. ಪರಮಾತ್ಮನು ಹೀಗೆ ಎಂದೂ ಕಾಣಿಸಿಕೊಳ್ಳಲಾರನು. ಯಾಕಂದರೆ ಕಾಣಿಸಿಕೊ

ಳೃತಕ್ಕ ವಸ್ತುವು ತನ್ನಲ್ಲಿಯೇ ಇದೆ. ಅದನ್ನು ಪ್ರತ್ಯಕ್ಷವಾಡಿಕೊಳ್ಳು ವದೇ ಪರಮಾತ್ಮನನ್ನು ಕಾಣುವದು ಎಂದು ವಚನಕಾರನ ಭಾವವಿದೆ.

**ವಚನಃ—** ೧೭. ಅಷ್ಟ ಮದಂಗಳ ಘಟ್ಟಿಯನೆ ಕರಗಿಸಿ, ಸತ್ವ ರಜತಮಂಗಳ ಬಿಟ್ಟು ಕಳೆದು, ಸುತ್ತುವ ಮನದ ಸುಳಿಯ ತಪ್ಪಿಸಿ, ಮುಂದೆ ಹುಟ್ಟದೆ ಹೋಗೆಂದನಂಬಿಗ ಚೌಡಯ್ಯ.

**ಭಾವಃ—** ತನ್ನನ್ನು ತಾನು ತಿಳಿಯುವದೆಂದರೇನು ಎಂಬದನ್ನು ವಚನಕಾರನು ಇಲ್ಲಿ ನಿರ್ದೇಶಿಸಿರುವನು. ತನಗೆ ಅರಿವು ಆಯಿತು ಎಂಬದನ್ನು ತಿಳಿಯಲಿಕ್ಕೆ ಒಂದು ಗುರುತು ಇರುವದು. ಇದು ಯಾವ ದೆಂದರೆ ಪುನರ್ಜನ್ಮವನ್ನು ಹೊಂದದೇ ಇರುವದೇ ಇರುತ್ತವೆ. ... ವರೆಗೆ ಜ್ಞಾನವು ಇರುವದಿಲ್ಲವೋ, ಅಲ್ಲಿಯ ವರೆಗೆ ಪುನರ್ಜನ್ಮಗಳು ತಪ್ಪಲಾರವು. ಆದರೆ ಈ ಜ್ಞಾನವು ಉಂಟಾಗಬೇಕಾದರೆ ಅಷ್ಟಮ ದಗಳೆಂಬ ಕಠಿಣ ವಸ್ತುಗಳು ತನ್ನಲ್ಲಿ ಇವೆ. ಅವುಗಳನ್ನು ಮನು ಷ್ಯನು ಕರಗಿಸಿ ಹೋಗಲಾಡಿಸಿಕೊಳ್ಳಬೇಕು ಹಾಗೆಯೇ ಸತ್ವ, ರಜ, ತಮೋಗುಣಗಳೆಂಬವು ತನ್ನನ್ನು ಆವರಿಸಿಕೊಂಡಿರುತ್ತವೆ. ಅವುಗಳ ಸಂಕೊಲೆಯಿಂದ ಪಾರಾಗಬೇಕು. ಅದರಂತೆಯೇ ಚಂಚಲವಾದ ಮನಸ್ಸು ಮನುಷ್ಯನನ್ನು ಕಂಗೆಡಿಸುತ್ತಿರುತ್ತದೆ. ಇದು ಅವನನ್ನು ತಿರುಗುಣಿ ಮಡುವಿನೊಳಗಿದ್ದಂತೆ ಸುತ್ತಿ ಸುತ್ತಿ ತಿರುಗಿಸುತ್ತದೆ. ಈ ಮಡುವಿ ನೊಳಗಿಂದ ಅವನು ಪಾರಾಗಬೇಕು. ಹೀಗೆ ಮನುಷ್ಯನು ವರ್ತಿಸಿ ದ್ದಾದರೆ, ಅದೇ ಪರಮಾತ್ಮನ ಅರಿವು. ಈ ಅರಿವು ಪ್ರಾಪ್ತವಾದ ಬಳಿಕ ಪುನರ್ಜನ್ಮವು ಆಗಲಾರದೆಂದು ವಚನಕಾರನ ಭಾವವು. ಇದೇ ತನ್ನನ್ನು ತಾನು ತಿಳಿಯುವ ರೀತಿಯಾಗಿದೆ.

**ವಚನಃ—** ೧೮. ಅಂದಾದಿ ಬಿಂದುವಿನ ಹೊಂದಿದ ಹುಟ್ಟು, ಆ ಹುಟ್ಟನೆ ಹಿಡಿದು, ಅಂದ ಚಂದದಲ್ಲಿ ತೊಳಲಾಡುತ್ತಿದ್ದಿತು ಜಗವೆಲ್ಲ. ಅಂದಗೇಡಿಗಳೆಲ್ಲ ಬಂದೇರಿಹರು. ಇದನೊಂದೇ ಹುಟ್ಟಿನಲ್ಲಿ ಇಳುಹು ವೆನೆಂದನಂಬಿಗರ ಚೌಡಯ್ಯ.

**ಭಾವಃ—** ಈ ವಚನದಲ್ಲಿ ಅಂಬಿಗರ ಚೌಡಯ್ಯನು ತನ್ನ ಪುನ ರ್ಜನ್ಮವನ್ನು ಒಂದೇ ಜನ್ಮದಲ್ಲಿ ಕಳೆದುಬಿಡುವೆನೆಂದು ಇದರಲ್ಲಿ ಹೇಳಿ

ಸುವನು. ಜಗತ್ತಿನ ಜನರೆಲ್ಲ ಅದರಲ್ಲಿಯ ಅಂದಚಂದಗಳಿಗೆ ಮೋಹಿಸಿ ಅನೇಕ ಕರ್ಮಗಳನ್ನು ಮಾಡುತ್ತ ಅನೇಕ ಜನ್ಮಗಳನ್ನು ತಾಳುತ್ತಿರುವರು. ಅಂದಗೇಡಿ ಜನಗಳು ಇದೇ ರೀತಿಯನ್ನು ಅವಲಂಬಿಸುವದುಂಟು. ಆದರೆ ತಾನು ಅವರಂತೆ ವರ್ತಿಸದೆ ಒಂದೇ ಜನ್ಮದಲ್ಲಿ ಮೋಕ್ಷವನ್ನು ಪಡೆಯುವೆನೆಂದು ವಚನಕಾರನು ಅಂದಿರುವನು.

**ವಚನ:**— ೧೯. ಕಲಿತು ಹೇಳಿಹೆನೆಂತು? ಕಾಣಬೇಕಾದರೆ ಅರಿತಿದ್ದೇ ಅರುಹು. ಹಿರಿಯತನಬೇಡ. ಅರಿದು ಮರೆದೆನೆಂಬ ಸಂದೇಹ ಬೇಡ. ದರ್ಪಣದಲ್ಲಿ ತೋರುವ ತನ್ನ ಒಪ್ಪದ ಪ್ರತಿಬಿಂಬದಂತೆ ಇದ ನಿಶ್ಚಯವಾಗಿ ನಿಶ್ಚೈಸಿದಲ್ಲಿ ಬೇರೊಂದಿಪ್ಪುದಿಲ್ಲ ಎಂದನಂಬಿಗ ಚೌಡಯ್ಯನು.

**ಭಾವ:**— ತನ್ನ ಜ್ಞಾನವು ತನಗೆ ಹೇಳಲಿಕ್ಕೆ ಬರಲಾರದು. ತಿಳಿಯಬೇಕಾದರೆ ತನಗೆ ತಿಳಿದದ್ದೇ ಜ್ಞಾನವು. ಎಂದರೆ ತನ್ನ ಅನುಭವಕ್ಕೆ ಬಾರದೆ ಹೆರರ ಹೇಳಿಕೆಯಿಂದ ಕಲಿತದ್ದು ಜ್ಞಾನವಲ್ಲವೆಂದು ವಚನಕಾರನ ಭಾವವು. ಹಾಗೆಯೇ ಇದರಲ್ಲಿ ನಾನು ಜ್ಞಾನವುಳ್ಳವನೆಂದು ಹಿರಿಯತನದಿಂದ ಸೊಕ್ಕಿನಿಂದ ನಡೆಯುವದು ಬೇಡ. ಜ್ಞಾನದ ರೀತಿ ಏನಂದರೆ, ಅದು ಪಕ್ವ ಸ್ಥಿತಿಗೆ ಬಂದಬಳಿಕ ಅದರ ಅರಿವು ಸಹ ಅವನಿಗೆ ಇರುವದಿಲ್ಲ. ಅದರಲ್ಲಿ ಅವನು ತನ್ಮಯನಾದ ಬಳಿಕ ಅದು ಹೀಗೆ ಹಾಗೆ ಇರುತ್ತದೆಂದು ಹೇಳಲಿಕ್ಕೆ ಬರಲಾರದು. ಈ ಸ್ಥಿತಿಯಾಗುವದು ತಿಳಿದು ಮರೆದಂತೆಯೇ ಸರಿ. ಕನ್ನಡಿಯಲ್ಲಿ ಹ್ಯಾಗೆ ತನ್ನ ಪ್ರತಿಬಿಂಬವು ಕಾಣುತ್ತದೋ ಹಾಗೆ ಜ್ಞಾನವು ಇರುವದು. ಜ್ಞಾನದ ಈ ಪರಿಸ್ಥಿತಿಯನ್ನು ತನ್ನಲ್ಲಿ ದೃಢಪಡಿಸಿದಲ್ಲಿ ಕಡೆಗೆ ಅದರ ಹೊರ್ತು ಏನೂ ಉಳಿಯುವದಿಲ್ಲ. ಹೀಗೆ ಅಂಬಿಗರ ಚೌಡಯ್ಯನು ಜ್ಞಾನದ ಹೊಳವಿಕೆಯ ನಿಜಸ್ಥಿತಿಯನ್ನು ಅರುಹಿರುತ್ತಾನೆ.

**ವಚನ:**— ೨೦. ಆದಿಶಕ್ತಿವಿಡಿದವರೆಲ್ಲರು ಜಂಗಮವಲ್ಲ. ಅನಾದಿಶಕ್ತಿವಿಡಿದವರೆಲ್ಲರು ಜ್ಞಾನಿಗಳಲ್ಲ. ಆದಿ ಅನಾದಿ ಎಂಬೆರಡ ಭೇದಿಸಿ ದಾಂಟಿ ಇಚ್ಛಾಶಕ್ತಿಯ ಇಚ್ಛೆಯ ಮರೆದು ಜ್ಞಾನಶಕ್ತಿಯ ಠಾವನೊಲ್ಲದೆ ಕ್ರಿಯಾಶಕ್ತಿಯ ಭಾವವ ಬಿಟ್ಟು ತಾನು ತಾನಾದವಂಗೇನು ಇದಿರು ಇಲ್ಲ ಎಂದನಂಬಿಗ ಚೌಡಯ್ಯ.

**ಭಾವಃ—** ಇಲ್ಲಿ ಜ್ಞಾನದ ನಿಜಸ್ಥಿತಿಯನ್ನು ವಚನಕಾರನು ವರ್ಣಿಸಿದ್ದಾನೆ. ಇದರಲ್ಲಿ ಅವನು ಮನುಷ್ಯನ ಶಕ್ತಿಗಳಾವವು, ಪರಮಾತ್ಮನ ಜ್ಞಾನವು ಆದ ಹಾಗೆ ಆ ಶಕ್ತಿಗಳ ಸ್ಥಿತಿಯು ಹ್ಯಾಗೆ ಆಗುತ್ತ ಹೋಗುತ್ತದೆ, ಮತ್ತು ಮನುಷ್ಯನಲ್ಲಿ ವಿಕಾಸತೆಯು ಹ್ಯಾಗೆ ಹೆಚ್ಚುತ್ತ ಹೋಗುತ್ತದೆ ಎಂಬದನ್ನು ವಿವರಿಸಿದ್ದಾನೆ. ಮನುಷ್ಯನು ಜಗತ್ತಿನಲ್ಲಿ ವ್ಯವಹರಿಸುವದು ಶಕ್ತಿಯ ಮೂಲಕ. ಈ ಶಕ್ತಿಯಲ್ಲಿ ಆದಿ, ಅನಾದಿ ಎಂದು ಎರಡು ಮೂಲ ಭೇದಗಳಿವೆ. ಇವುಗಳ ತರುವಾಯ ಪುನಃ ಮೂರು ಶಕ್ತಿಗಳಿರುತ್ತವೆ. ಅವು ಯಾವವೆಂದ್ದರೆ ಇಚ್ಛೆ, ಜ್ಞಾನ, ಮತ್ತು ಕ್ರಿಯೆ. ಈ ಯಾವತ್ತು ಶಕ್ತಿಗಳ ವ್ಯವಹಾರಕ್ಕೆ ತಾನು [illegible] ವರ್ತಿಸಬೇಕೆಂದು ವಚನಕಾರನ ಮುಖ್ಯ ಭಾವವು. ಹೀಗೆ ವ[illegible]ಲಿಯ ರಿಂದಲೇ ಅವನು ನಿಜತ್ವವನ್ನು ಹೊಂದುವನು.

ಅನಾದಿಶಕ್ತಿಯು ಅತ್ಯಂತ ವಿರಳವಾಗಿರುವದು. ಅದಕ್ಕೂ ಸ್ಥೂಲವಾದದ್ದು ಆದಿಶಕ್ತಿಯು. ಅನಾದಿ ಶಕ್ತಿಯನ್ನು ಹಿಡಿದು ಆಚರಿಸುವವರು ಜ್ಞಾನಿಗಳು. ಮತ್ತು ಆದಿ ಶಕ್ತಿಯನ್ನು ಹಿಡಿದು ಆಚರಿಸುವವರು ಜಂಗಮರು. ಆದರೆ ಇವರು ತಮ್ಮ ತಮ್ಮ ಶಕ್ತಿಗಳಲ್ಲಿ ಮಾತ್ರ ಆಸಕ್ತರಾದರೆ, ಅವರ ವಿಕಾಸಭಾವಕ್ಕೆ ಅನುಕೂಲವಾಗಲಾರದು. ಆದರೆ ಈ ಶಕ್ತಿಗಳಲ್ಲಿ ಇದ್ದೂ ಇಲ್ಲದವರಂತೆ ಅವರು ವ್ಯವಹರಿಸಬೇಕು. ಇವುಗಳ ತರುವಾಯ ಇಚ್ಛಾ, ಜ್ಞಾನ, ಕ್ರಿಯೆ ಎಂಬವುಗಳು ಕ್ರಮವಾಗಿ ಬರುತ್ತವೆ. ಇವು ಹೆಚ್ಚು ಹೆಚ್ಚು ಸ್ಥೂಲತೆರನಾಗಿರುವವು. ಇವುಗಳ ಮೂಲಕ ಮನುಷ್ಯನ ಸ್ಥೂಲವ್ಯಾಪಾರಗಳು ನಡೆಯುತ್ತವೆ. ಇಚ್ಛಾ ಶಕ್ತಿಯಲ್ಲಿ ಮನುಷ್ಯನು ಆಸಕ್ತನಾಗಿ ಅದಕ್ಕೆ ಅನುಸರಿಸಿ ಅದು ಹರಿದತ್ತ ಹೋಗಕೂಡದು. ಅದನ್ನು ತನ್ನ ಅಂಕಿತದಲ್ಲಿ ಇಟ್ಟುಕೊಳ್ಳಬೇಕು. ಜ್ಞಾನಶಕ್ತಿಯ ಸ್ಥಿತಿಯನ್ನೂ ಕೂಡ ತನ್ನಧೀನದಲ್ಲಿ ಇಟ್ಟುಕೊಳ್ಳಬೇಕು. ಹಾಗೆಯೇ ಕ್ರಿಯಾಶಕ್ತಿಯ ಕಾರ್ಯಗಳ ಎಳಿತಕ್ಕೂ ಒಲೆಯದಿರಬೇಕು. ಮನುಷ್ಯನು ತನ್ನನ್ನು ಹೀಗೆ ಹೊಯ್ದಾಡಿಸುವ ಶಕ್ತಿಗಳಿಗೆ ಮೀರಿ ನಡೆದದ್ದಾದರೆ ಮಾತ್ರ ಅವನು "ತಾನು ತಾನಾಗುವನು." ಎಂದರೆ ಅವನು ಸ್ವತಂತ್ರನಾಗುವನು. ಇಂಥವನಿಗೆ ಇದಿರು ಎಂಬುದು ಇಲ್ಲ. ಅವನು ಪರಮಾತ್ಮನ ಸ್ವರೂಪೇ ಆಗುವನೆಂದು ವಚನಕಾರನ ಭಾವವಿದೆ.